॥ ಶ್ರೀಃ ॥

'ಶ್ರೀಶಸ್ತೇ ಸುಶ್ರಿಯಂ ದದ್ಯಾತ್'

ಶ್ರೀಭಾವಿಸಮೀರವಾದಿರಾಜಭಗವತ್ಪಾದಾಚಾರ್ಯವಿರಚಿತಾ

# ಯುಕ್ತಿಮಲ್ಲಿಕಾ

ಮೂಲಸಹಿತ ಸಮಗ್ರ ಕನ್ನಡಾನುವಾದ

ಶ್ರೀ ಶ್ರೀ ಸುರೋತ್ತಮತೀರ್ಥಶ್ರೀಪಾದವಿರಚಿತಾ

## ಭಾವವಿಲಾಸಿನೀ

ಸಂಸ್ಕೃತ ವ್ಯಾಖ್ಯಾನ ಹಾಗೂ ಸಮಗ್ರ ಕನ್ನಡಾನುವಾದ

## ಶುದ್ಧಿಸೌರಭಮ್ - ೨

## ಸಂಪುಟ - ೩

ಅನುಗ್ರಹ :

ಪರಮಪೂಜ್ಯ ಶ್ರೀ ಶ್ರೀ ವಿಶ್ವವಲ್ಲಭತೀರ್ಥಶ್ರೀಪಾದರು

ಪ್ರಥಮಪರ್ಯಾಯ, ಸೋದೆ ಶ್ರೀವಾದಿರಾಜಮಠ, ಉಡುಪಿ

ಸಂಪಾದಕರು :

ಡಾ॥ ಸಿ.ಎಚ್. ಶ್ರೀನಿವಾಸಮೂರ್ತಿ ಆಚಾರ್ಯ, ಮೈಸೂರು.

ಪ್ರಕಾಶಕರು :

ಶ್ರೀಮದ್ವೃಂದಾವನಾಚಾರ್ಯ ಸಂಶೋಧನ ಹಾಗೂ ಪ್ರಕಾಶನಕೇಂದ್ರ

ಸೋದೆ ಶ್ರೀವಾದಿರಾಜ ಮಠ, ರಥಬೀದಿ, ಉಡುಪಿ.

ಶ್ರೀಭಾವಿಸಮೀರವಾದಿರಾಜಭಗವತ್ಪಾದಾಚಾರ್ಯವಿರಚಿತ ಯುಕ್ತಿಮಲ್ಲಿಕಾ-
ಶ್ರೀ ಸುರೋತ್ತಮತೀರ್ಥವಿರಚಿತ ಭಾವವಿಲಾಸಿನೀ ವ್ಯಾಖ್ಯಾನ ಮತ್ತು ಕನ್ನಡ ಅನುವಾದ ಸಹಿತ
**ಶುದ್ಧಿಸೌರಭ**




ಪುಟಗಳು - LII + 460 = 512

ಸಂಪುಟ - ೩(೧೦)

ಮುದ್ರಿತ ಪ್ರತಿಗಳು - ೧೦೦೦

ಪ್ರಕಾಶಕರು - ಶ್ರೀಮದ್ ವೃಂದಾವನಾಚಾರ್ಯ ಸಂಶೋಧನ
ಹಾಗೂ ಪ್ರಕಾಶನ ಕೇಂದ್ರ,
ಸೋದೆ ಶ್ರೀವಾದಿರಾಜಮಠ, ರಥಬೀದಿ, ಉಡುಪಿ.

ಮುಖಪುಟವಿನ್ಯಾಸ : ಲಕ್ಷ್ಮೀನಾರಾಯಣ ತಂತ್ರಿ

ಪುಟ ಸಂಯೋಜನೆ : ಬದರಿನಾರಾಯಣಾಚಾರ್ಯ ಎಸ್. ಕಡ್ಡಿ

ಅಕ್ಷರ ಜೋಡಣೆ : ಕೆ. ಗಣಪತಿ ಭಟ್
ಶ್ರೀಮತಿ ನಾಗಲತಾ (ಸುಧಾ),
ಎಂ. ಶರತ್ ಚಂದ್ರ

ಮುದ್ರಕರು : ಪವನ್ ಗ್ರಾಫಿಕ್ಸ್ ಮತ್ತು ಪ್ರಿಂಟರ್ಸ್
ಮೈಸೂರು. ✆ : 7899779255

ಗ್ರಂಥಪ್ರಾಪ್ತಿ : ಸೋದೆ ಶ್ರೀವಾದಿರಾಜಮಠ, ಉಡುಪಿ.

# ಉತ್ತರಕಲ್ಪಸಮೀರರ ಪರಾಕು



★ ''ಉದ್ದಂಡೋದ್ದಂಡ, ಪರವಾದಿ ಪ್ರಚಂಡ, ಗಂಡಭೇರುಂಡ, ಮಾಯಿಮತ ವಿಧ್ವಂಸಕ, ಮಧ್ವಮತೋದ್ಧಾರಕ, ಸುಧಾರಸ ಆಸ್ವಾದ, ದಿಗ್ವಿಜಯೀಕೃತ ಆಸೇತುಮರ್ಯಾದ, ಭಾವಿಹನುಮಚ್ಚಕ್ರವರ್ತಿನ್, ಗುರುಸಾರ್ವಭೌಮ ಹಂಸಾರೂಢವಾದಿರಾಜ ಭೋ ಪರಾಕ್!''

★ ''ಮಧ್ವಾಗಮ ಸಿದ್ಧಾಗಮ. ಈ ಮಧ್ವಮತವೆ ಸಕಲಮತಕೆ ಮೇಲೆನಿಸಿದ ಮತ. ಈ ಮಧ್ವಮತವನು ಪಿಡಿದು ಅಬದ್ಧಮತವನು ತ್ಯಜಿಸಿ ನಡೆದರೆ (ಜಯಿಸಿದರೆ) ಮುಕ್ತಿಗೈವುದಾ ಸುಕೃತವು (ಸುಕೃತಂ) ಒಂದು ಕ್ಷಣದಲ್ಲಿ ವಾದಿರಾಜರ ದ್ವಂದ್ವ ಪದವನು ಭಜಿಸಿದವರಿಗೆ ಬೆಂದು ಹೋಗ್ವುದು ಪೂರ್ವಜನ್ಮದ ದುರಿತಕಾನನವು; ಈ ಮಂದಮತಿಗಳು ಬಲ್ಲರೇ ಗೋವಿಂದ ಭಕ್ತಮಹಿಮೆಯನು ಪುರಂದರಾದಿಗಳು ಅರಿವರಲ್ಲದೇ ಮಿಕ್ಕವರರಿಯಬಹುದೇ! ಪಾರಮೇಷ್ಠಿ ಪದಾಧಿಕಾರಿ ಋಜುಗಣಸ್ಥ (ಪದಸ್ಥ) ಗುರುರಾಜ ಪಟ್ಟಭದ್ರವ್ಯಾಖ್ಯಾನಸಿಂಹಾಸನಾಧೀಶ್ವರ ಅಜ್ಞಾನತಿಮಿರಮಾರ್ತಾಂಡ ಸುಜ್ಞಾನ ತೇಜೋಮಯ!''

# ರಾಜರ ಸಂದೇಶ

## ''ಬೃಹಸ್ಪತಿಗಳಿಗೂ ಗುರುಗಳು ಮಧ್ವರು''

ಗುರುಶ್ಚಾರ್ವಾಕವಿದ್ಯಾಯಾ
ಗುರುರ್ಮೇ ನಾಕಿನಾಂ ಗುರುಃ ।
ಅತಸ್ತತ್ಕೃಪಯಾ ಶ್ರೌತ-
ಮತಸ್ಥಿತಿರಪೀರಿತಾ ॥

ಬೃಹಸ್ಪತಿಗಳು ಚಾರ್ವಾಕವಿದ್ಯೆಗೆ ಗುರುಗಳು. ನಮ್ಮ ಗುರುಗಳಾದ ಮಧ್ವರು ಬೃಹಸ್ಪತ್ಯಾದಿದೇವವೃಂದಕ್ಕೇ ಗುರುಗಳು. ಆದ್ದರಿಂದ ಅವರ ಕರುಣೆಯಿಂದ ಶ್ರುತ್ಯುಕ್ತಮತವನ್ನೇ ಅಂಗೀಕರಿಸುತ್ತೇವೆ.

## ''ದುಃಖವಿಲ್ಲದ ಸುಖವನ್ನು ಬಯಸಿ''

ದುಃಖೋಜ್ಝಿತಂ ಸುಖಂ ಪ್ರಾರ್ಥ್ಯಂ
ನ ತು ದುಃಖಾನ್ವಿತಂ ಸುಖಮ್ ।
ದುಃಖೋದರ್ಕಸುಖೇತ್ಯಲ್ಪೇ
ಕೋನೂನ್ಮತ್ತಃ ಪ್ರವರ್ತತೇ ॥

ದುಃಖವಿಲ್ಲದ ಸುಖವನ್ನು ಬಯಸಬೇಕು. ದುಃಖದಿಂದ ಕೂಡಿದ ಸುಖವನ್ನಲ್ಲ. ದುಃಖದಿಂದ ಕೂಡಿದ ಅತ್ಯಲ್ಪ ಸುಖದಲ್ಲಿ ಹುಚ್ಚನೂ ಪ್ರವೃತ್ತಿ ಮಾಡಲಾರ.




## ಪ್ರಕಾಶಕರ ನುಡಿ

ಶುದ್ಧಿಸೌರಭವು ಐದುಸೌರಭಗಳಲ್ಲಿ ಚಿಕ್ಕದಾದ ಸೌರಭವೆನಿಸಿದೆ. ಶುದ್ಧಿಸೌರಭದಲ್ಲಿ ಅನೇಕ ಪಾಠಭೇದಗಳಿದ್ದು ಅದನ್ನು ವಿಮರ್ಶೆಮಾಡಿ ಸೂಚಿಸಲಾಗಿದೆ. ಮೂಲಪ್ರತಿಗಳ ಆಧಾರದಲ್ಲಿ ಪಾಠಶೋಧನೆಯನ್ನು ನಡೆಸಲಾಗಿದೆ. ಇದರ ಪರಿಶೀಲನೆಯ ಜವಾಬ್ದಾರಿಯನ್ನು ಡಾ|| ಸಿ.ಎಚ್. ಶ್ರೀನಿವಾಸಮೂರ್ತಿ ಆಚಾರ್ಯರವರು ಮುತುವರ್ಜಿಯಿಂದ ನಿರ್ವಹಿಸಿದ್ದಾರೆ. ಅನೇಕ ವಿದ್ವಾಂಸರು ಅನುವಾದಗಳನ್ನು ಮಾಡಿದ್ದಾರೆ. ಬೆ.ನಾ. ವಿಜಯೀಂದ್ರಾಚಾರ್ಯರು ಮೂಲಪ್ರತಿಯನ್ನು ಶೋಧಿಸಿದ್ದಾರೆ. ಈ ಎಲ್ಲರಿಗೂ ಕೃತಜ್ಞತೆಗಳು.

ಪ್ರಕಾಶರು
**ಶ್ರೀಮದ್‌ವೃಂದಾವನಾಚಾರ್ಯ ಸಂಶೋಧನ**
**ಹಾಗೂ ಪ್ರಕಾಶನ ಕೇಂದ್ರ,**
ಸೋದೆ ಶ್ರೀವಾದಿರಾಜಮಠ,
ರಥಬೀದಿ, ಉಡುಪಿ.

॥ ಶ್ರೀ ವಾದಿರಾಜಗುರುಭ್ಯೋ ನಮಃ ॥

# ಉಪೋದ್ಘಾತ

'ಗತಿಸಾಮಾನ್ಯಾತ್'- ಈ ಬ್ರಹ್ಮಸೂತ್ರವು (೧.೧.೧೦) ಸಮಗ್ರವೇದ ಪ್ರಪಂಚದಲ್ಲಿ ಪೂರ್ವಾಪರವಿರೋಧವಿಲ್ಲ ಎಂದು ಹೇಳುತ್ತದೆ. ಐತರೇಯ, ಕಠ ಮೊದಲಾದ ಶ್ರುತಿಗಳು ಈ ವಿಷಯವನ್ನು ಮತ್ತು ವಿಷ್ಣುವೇ ಸರ್ವೋತ್ತಮ, ಇತರ ಚೇತನಾಚೇತನಸಮುದಾಯವು ಸದಾ ವಿಷ್ಣುವಿಗೆ ಅಧೀನ ಎಂದೂ ಪ್ರತಿಪಾದಿಸುತ್ತವೆ. ಶ್ರೀವಾದಿರಾಜ ಗುರುಸಾರ್ವಭೌಮರು ತಮ್ಮ ಯುಕ್ತಿಮಲ್ಲಿಕಾಗ್ರಂಥದಲ್ಲಿ ಈ ವಿಷಯಗಳನ್ನು ನಾನಾ ಆಯಾಮಗಳಿಂದ ಹೃದಯಂಗಮವಾಗಿ ವಿವರಿಸಿದ್ದಾರೆ.

ಶುದ್ಧಿಸೌರಭವು 'ಗತಿಸಾಮಾನ್ಯಾತ್' ಸೂತ್ರದ ಅರ್ಥಗೌರವವನ್ನು ತೋರಿಸುತ್ತದೆ. ಉದಾ : ಶ್ರುತಿಯು **'ಸ್ವಗೋತ್ರಕಲಹಾಕ್ಷಮಾ'** - ಶುದ್ಧಿಸೌರಭ ೩.೭೯. **'ಕೇನಾಪಿ ಮಾರ್ಗೇಣನ ವಿವರ್ತಮತಂ ಭವೇತ್'** ಎಂದು ಶ್ರೀಮದಾನಂದತೀರ್ಥ ಭಗವತ್ಪಾದರು ತಮ್ಮ ಅನುವ್ಯಾಖ್ಯಾನದ ಪ್ರಥಮಾಧ್ಯಾಯದ ಉಪಸಂಹಾರದಲ್ಲಿ ಹೇಳಿದ್ದಾರೆ. ಈ ಹೇಳಿಕೆಯ ನಾನಾ ಅರ್ಥಗಳಲ್ಲಿ ಬ್ರಹ್ಮಾವಿದ್ಯಾಪಕ್ಷದ ಅನುಪಪತ್ತಿಯು ಒಂದು. ಇದರ ವಿವರಣೆಯನ್ನು ೨೦೦ಕ್ಕಿಂತ ಹೆಚ್ಚು ಶ್ಲೋಕಗಳಲ್ಲಿ ಶುದ್ಧಿಸೌರಭವು ಮಾಡಿದೆ. ಶುದ್ಧಿಸೌರಭದ ಅಧ್ಯಯನ ಸೌಕರ್ಯಕ್ಕಾಗಿ ಇದರ ಸಾಮಾನ್ಯ ಪರಿಚಯವನ್ನು ಮಾಡಿಸುವ ಪ್ರಯತ್ನವು ಮುಂದಿನ ಪುಟಗಳಲ್ಲಿದೆ.

ಶ್ರೇಷ್ಠಗುಣಗಳನ್ನು ವಿಪುಲವಾಗಿ ಹೊಂದಿರುವ ಮಹಾತ್ಮರಲ್ಲಿ ಅಲ್ಪದೋಷಗಳಿದ್ದರೂ, ಅವುಗಳನ್ನು ಗಮನಿಸುವುದು ವ್ಯರ್ಥ ಮತ್ತು ಅನರ್ಥಕರ. ಶ್ರೀಹರಿಯು ಅನಂತಗುಣಸಮೃದ್ಧಿಯಿಂದ ಹೃದಯಂಗಮ ಮತ್ತು ದೋಷಲೇಶರಹಿತ. ಅವನಲ್ಲಿ ದೋಷವನ್ನು ಕಾಣುವುದು ಮಹಾನರ್ಥಕರ.

## ಶ್ರೀಹರಿಯು ದೋಷದೂರ :

(೧) ಶ್ರೀಹರಿಯು ಜಗತ್ತನ್ನು ಸಂಹರಿಸುತ್ತಾನೆ. ಸಂಹಾರಕರಣವು ದೋಷ? ಇಲ್ಲ. ನಾನಾ ದೋಷಗಳಿಂದ ಮತ್ತು ಗುಣಗಳ ಕೊರತೆಯಿಂದ ಅಲ್ಪರಾದವರು ಮತ್ತು ಅನಧಿಕೃತರು ಮಾಡುವ ಯಾವ ಕೃತ್ಯವು ದೋಷವೋ. ಅದು ಮಹಾತ್ಮರಿಗೆ ದೋಷವಲ್ಲ. ಅಧಿಕೃತರು ಮಾಡುವ ಸಂಹಾರವು ದೋಷವಲ್ಲ. ಶ್ರೀಸುರೋತ್ತಮರು ಹೇಳುತ್ತಾರೆ : ಸಂಪ್ರಜ್ಞಾತಸಮಾಧಿಯಲ್ಲಿರುವ ಯೋಗಿಯು ಸಂಧ್ಯಾವಂದನೆಯನ್ನು ಮಾಡದಿರುವುದು ದೋಷ. ಅಸಂಪ್ರಜ್ಞಾತಸಮಾಧಿ ಯಲ್ಲಿರುವ ಯೋಗಿಗೆ ಸಂಧ್ಯಾವಂದನೆಯ ಲೋಪವು ದೋಷವಲ್ಲ. ಸ್ವತಂತ್ರನಾದ ಶ್ರೀಹರಿಯು ಅಲ್ಪನಲ್ಲ. 'ಅಸಂಗೋಹ್ಯಯಂ ಪುರುಷಃ' – ಈ ಶ್ರುತಿಯು ಇವನಿಗೆ ಯಾವ ಲೇಪವೂ ಇಲ್ಲ ಎಂದು ಹೇಳುತ್ತದೆ. ಇದಲ್ಲದೆ ಶ್ರೀಹರಿಯು ಮಾಡುವ ಜಗತ್ಸಂಹಾರವು ಲೋಕದಲ್ಲಿ ಕಾಣುವಂತಹ ವಿಧ್ವಂಸವಲ್ಲ, ಅದು ವ್ಯವಸ್ಥಿತವಾಗಿ ವಿಕಾಸಹೊಂದಿದ ಮೂಲಪ್ರಕೃತಿಯನ್ನು ವ್ಯವಸ್ಥಿತವಾಗಿ ಅದರ (ಅವಿಕಸಿತ) ಮೂಲರೂಪಕ್ಕೆ ಮರಳಿಸುವ ಕ್ರಿಯೆ. ಈ ಸಂಹಾರವು ವಿಕಸಿತಪ್ರಕೃತಿಯ ಸಂಬಂಧದಿಂದ ಸುದೀರ್ಘಕಾಲ ಬಳಲಿದ ಜೀವಸಮುದಾಯದ ಶ್ರಮಪರಿಹಾರಕ. ಆದ್ದರಿಂದ ಈ ಸಂಹಾರವು ಗುಣ. ಆದ್ದರಿಂದಲೇ ಶಾಸ್ತ್ರಗಳು ಈ ಸಂಹಾರಕರ್ತೃವನ್ನು ಸ್ತುತಿಸುತ್ತವೆ. 'ಸೃಜತ್ಯವತ್ಯತ್ತಿ ನ ತತ್ರ ಸಜ್ಜತೇ...' (ಭಾಗವತ ೧.೩.೩೬)

(೨) ಮಹಾಪ್ರಲಯಕಾಲದಲ್ಲಿ ಶ್ರೀಹರಿಯು ವಟಪತ್ರದ ಮೇಲೆ ಮಲಗಿರುತ್ತಾನೆ ಎಂದು ಪುರಾಣವಚನವಿದೆ. ಆಗ ವಟವೃಕ್ಷವಿರುವ ಬಗ್ಗೆ ಪುರಾಣವಚನವಿಲ್ಲ. ಇದರಿಂದ ವಟಪತ್ರಕ್ಕೆ ಉತ್ಪತ್ತಿಯಿಲ್ಲ, ನಾಶವೂ ಇಲ್ಲ ಎಂದು ತಿಳಿಯುತ್ತದೆ. ಶ್ರೀಹರಿಯ ಶಯನವಾದ ವಟಪತ್ರಕ್ಕೇ ಉತ್ಪತ್ತಿ-ನಾಶಗಳಿಲ್ಲದಿರುವಾಗ ಶ್ರೀಹರಿಗೆ ಅವೆರಡೂ ಇಲ್ಲ ಎಂದು ಹೇಳಬೇಕೇ?

(೩) ಪದಾರ್ಥವು ಇಲ್ಲದಿದ್ದರೆ (ಪದಾರ್ಥದ ಪ್ರಾಗಭಾವವು ಇದ್ದರೆ) ಅದರ ನಿರ್ಮಾಣಕ್ಕೆ ಬೇಕಾದ ಸಾಮಗ್ರಿಯನ್ನು ಸಂಪಾದಿಸಿ ಅದನ್ನು ನಿರ್ಮಿಸಬಹುದು. ಶ್ರೀಹರಿಯು ಪ್ರಲಯಕಾಲದಲ್ಲೂ ಇರುತ್ತಾನೆ. ಆದ್ದರಿಂದ ಅವನ ಪ್ರಾಗಭಾವವು ಇಲ್ಲವೇ ಇಲ್ಲ. ಆದ್ದರಿಂದ ಅವನಿಗೆ ಜನ್ಮವೇ ಇಲ್ಲ. ಅವನ ಜನ್ಮವು ಅಷ್ಟಮರಸದಂತೆ.

(೪) ಚತುರ್ಮುಖಬ್ರಹ್ಮನು ಹರಿಯ ನಾಭಿಯಿಂದ ಹುಟ್ಟಿದನು. ಅವನ ಕ್ರೋಧದಿಂದ ಮುಕ್ಕಣ್ಣನ ಜನ್ಮವಾಯಿತು. ಶ್ರೀಹರಿಯು ಮೂಲರೂಪ ನಾರಾಯಣನು ಯಾರಿಂದ ಹುಟ್ಟಿದನು? ದಶರಥನಿಂದ ರಾಮನ, ವಸುದೇವನಿಂದ ಶ್ರೀಕೃಷ್ಣನ ಜನ್ಮ ಎಂದು ರಾಮಾಯಣ-ಭಾಗವತ ಮೊದಲಾದ ಗ್ರಂಥಗಳು ಹೇಳುತ್ತವೆ. ಮೂಲರೂಪೀ ನಾರಾಯಣನ ಜನಕನನ್ನು ಯಾವ ಗ್ರಂಥವೂ ಹೇಳುವುದಿಲ್ಲ. ಆದ್ದರಿಂದ ನಾರಾಯಣನಿಗೆ ಜನ್ಮವಿಲ್ಲ.

(೫) ಪ್ರಲಯಕಾಲದಲ್ಲಿ ಶ್ರೀಹರಿಯು ಇರುತ್ತಾನೆ ಎಂದು ಶಾಸ್ತ್ರಗಳು ಹೇಳುತ್ತವೆ. ಪ್ರಯದಲ್ಲಿನ ಅಸ್ತಿತ್ವವು ಅವನಿಗೆ ಸಾವು ಇಲ್ಲ, ಹುಟ್ಟೂ ಇಲ್ಲ ಎಂದು ತಿಳಿಸುತ್ತದೆ.

(೬) ಶ್ರೀಹರಿಯು ಆಪ್ತಕಾಮ. ಆದ್ದರಿಂದ ಅವನು ತನಗಾಗಿ ಏನನ್ನೂ ಮಾಡುವುದಿಲ್ಲ. ತುಂಬಿ ಹರಿಯುವ ಕೆರೆಯ ನೀರಿನಿಂದ ಕೆರೆಯೇ ತುಂಬುವುದಿಲ್ಲ.

(೭) ಸುಖ-ದುಃಖಗಳು, ಯಥಾರ್ಥಜ್ಞಾನ-ಭ್ರಾಂತಿಗಳು ಒಬ್ಬ ವ್ಯಕ್ತಿಯಲ್ಲಿ ಏಕಕಾಲದಲ್ಲಿ ಇರುವುದಿಲ್ಲ. ಶ್ರೀಹರಿಯ ಸುಖವು ಪೂರ್ಣ, ಜ್ಞಾನವೂ ಪೂರ್ಣ. ಅವನಲ್ಲಿ ಸುಖ ಮತ್ತು ಯಥಾರ್ಥಜ್ಞಾನಗಳಿಲ್ಲದ ಕ್ಷಣವೇ ಇಲ್ಲ. ಆದ್ದರಿಂದ ಅವನಲ್ಲಿ ದುಃಖ ಮತ್ತು ಭ್ರಾಂತಿಗೆ ಅವಕಾಶವೇ ಇಲ್ಲ.

(೮) ಮನುಷ್ಯರ ದುಃಖಕ್ಕೆ ಅವರು ಪೂರ್ವಜನ್ಮದಲ್ಲಿ ಸಂಪಾದಿಸಿದ ದುಷ್ಕರ್ಮವೇ ಕಾರಣ. ಪರಿಪೂರ್ಣನು ಇಂತಹ ಕರ್ಮಗಳನ್ನೇ ಮಾಡುವುದಿಲ್ಲ. 'ನ ಕರ್ಮಣಾವರ್ಧತೇ ನೋ ಕನೀಯಾನ್' - ಈ ಶ್ರುತಿಯು ಇದನ್ನು ಹೇಳುತ್ತದೆ. ಆದ್ದರಿಂದ ಶ್ರೀಹರಿಗೆ ದುಃಖವಿಲ್ಲ.

(೯) ಹಸಿವು ಬಾಯಾರಿಕೆಗಳು ಮುಕ್ತಿಯಾಗುವವರೆಗೆ ಮಾತ್ರ ಮುಕ್ತರಾದ ಬಳಿಕ ಇವು ಇಲ್ಲ. ನಿತ್ಯಮುಕ್ತನಾದ ಶ್ರೀಹರಿಗೆ ಇವು ಇರುತ್ತವೆಯೇ? ಆದ್ದರಿಂದ ಶ್ರೀಕೃಷ್ಣನ ಕ್ಷೀರಪಾನ, ನವನೀತಭಕ್ಷಣ ಮೊದಲಾದವುಗಳು ಕೇವಲ ವಿಡಂಬನೆ.

ನಾರಾಯಣನ ರೋಮಗಳಲ್ಲಿ ಬ್ರಹ್ಮಾಂಡವಿದೆ. ಶ್ರೀಕೃಷ್ಣನು ತನ್ನ ಬಾಯಲ್ಲಿ ಬ್ರಹ್ಮಾಂಡವನ್ನು ತೋರಿಸಿದ್ದಾನೆ. ಇವನ ಶರೀರ ಎಷ್ಟು ದೊಡ್ಡದು! ಈ ಶರೀರಕ್ಕೆ ತೃಪ್ತಿನೀಡಬಲ್ಲ ಆಹಾರವಾದರೂ ಯಾವುದು? ಆದ್ದರಿಂದ ಅವನ ಶರೀರಕ್ಕೆ ಆಹಾರದ ಅವಶ್ಯಕತೆಯೇ ಇಲ್ಲ.

ಸುರೋತ್ತಮರು ಹೇಳುತ್ತಾರೆ : ಬ್ರಹ್ಮಾಂಡವನ್ನು ಒಳಗೆ ಇಟ್ಟುಕೊಳ್ಳುವಷ್ಟು ದೊಡ್ಡ ಶರೀರವು ಶ್ರೀಹರಿಗೆ ಇದೆ ಎನ್ನಲು ಏನು ಪ್ರಮಾಣ? ಶ್ರುತಿ. **'ಬ್ರಹ್ಮಚ್ಛರೀರೋ ವಿಮಿಮಾನ ಋಕ್ವಭಿರ್ಯುವಾ ಕುಮಾರಃ ಪ್ರತ್ಯೇತ್ಯಾಹವಮ್'** - ಋಗ್ವೇದ ೧.೧೫೫. ೬. ಈ ಶ್ರುತಿಯನ್ನು ತೋರಿಸುವುದಕ್ಕಾಗಿಯೇ ರಾಜರು ಶ್ಲೋಕದಲ್ಲಿ 'ಬೃಹಚ್ಛರೀರಃ' ಎಂದು ಹೇಳಿದ್ದಾರೆ.

ಈ ಶರೀರಕ್ಕೆ ಸಾಕಾಗುವಷ್ಟು ಆಹಾರವು ದುರ್ಲಭ; ಆದ್ದರಿಂದ ಈ ಶರೀರಧಾರಿಯು ನಿರಂತರ ಹಸಿವು-ಬಾಯಾರಿಕೆಗಳಿಂದ ನರಳುತ್ತಾನೆ? ಇಲ್ಲ. ಹೀಗಾಗಿದ್ದರೆ ಶರೀರವು ಬೃಹತ್ತಾಗಿ ಉಳಿಯುತ್ತಿರಲಿಲ್ಲ, ಶ್ರುತಿಯು 'ವಿಮಿಮಾನ' ಪದದಿಂದ ಹೇಳುವ ವಿಶೇಷಜ್ಞಾನ, 'ಯುವಾ' ಪದದಿಂದ ಹೇಳುವ ಯೌವನ, 'ಆಹವಂ ಪ್ರತ್ಯೇತಿ' ಪದಗಳಿಂದ ಹೇಳುವ ರಣರಂಗಧೀರತ್ವ-ಇವುಗಳು ಉಪಪನ್ನವಾಗುವುದಿಲ್ಲ.

ಇದೇ ಶ್ರುತಿಯ ಪೂರ್ವಾರ್ಧವು ಈ ದೇವನನ್ನು ತೊಂಭತ್ತು ಪ್ರಧಾನ ದೇವತೆಗಳ ನಿಯಾಮಕ ಎಂದು ಹೇಳುತ್ತಿದೆ.

**'ಯ ಉ ತ್ರಿಧಾತು ಪೃಥಿವೀಮುತ ದ್ಯಾಮೇಕೋ ದಾಧಾರ ಭವನಾನಿ ವಿಶ್ವಾ'**
**- ಋಗ್ವೇದ ೧.೧೫೪.೪**

ಈ ಶ್ರುತಿಯು ದೇವನನ್ನು ಸಕಲ ಭುವನಧಾರಕ ಎಂದು ಹೇಳುತ್ತಿದೆ. ಹಸಿವು ಬಾಯಾರಿಕೆಗಳಿಂದ ನರಳುವವನಲ್ಲಿ ಇವೆಲ್ಲವೂ ಅಸಂಭಾವಿತ.

ಮೂಲರೂಪಮಾತ್ರ ಬೃಹಚ್ಛರೀರವುಳ್ಳದ್ದಲ್ಲ. ಅವತಾರರೂಪಗಳು ಹೀಗೆಯೇ. ಶ್ರೀಕೃಷ್ಣನು ಯಶೋದೆಗೆ ತನ್ನ ಉದರದಲ್ಲಿ ಇಡೀ ವಿಶ್ವವನ್ನು ತೋರಿಸಿದ ಘಟನೆಯು ಒಂದು ನಿದರ್ಶನ.

(೧೦) ದೊಡ್ಡವರು ಸಣ್ಣವರಿಗೆ ರಕ್ಷಕರಾಗುತ್ತಾರೆ. ಸಮರ್ಥರು ಅಸಮರ್ಥರಿಗೆ ರಕ್ಷಕರಾಗುತ್ತಾರೆ. ಸಣ್ಣವರು ದೊಡ್ಡವರಿಗೆ, ಅಸಮರ್ಥರು ಸಮರ್ಥರಿಗೆ ರಕ್ಷಕರಾಗುವುದಿಲ್ಲ. ಪರಮಾತ್ಮನ ವರಾಹರೂಪವು ನೀರಿನಲ್ಲಿ ಮುಳುಗಿದ ಭೂಮಿಯನ್ನು ಮೇಲೆ ಎತ್ತಿತು. ಆ ವರಾಹನನ್ನು ಯಾರು ಎತ್ತಿದರು? ಸುರೋತ್ತಮರು ಹೇಳುತ್ತಾರೆ : ಶ್ರೀಹರಿಯು ಅನಂತಬ್ರಹ್ಮಾಂಡಧಾರಕ. ಅವನ ಧಾರಕ ಯಾರು?

## ರಾಮಾವತಾರದಲ್ಲಿ ದೋಷವಿಲ್ಲ :

(೧೧) ಶ್ರೀರಾಮಚಂದ್ರನು ಲೋಕಬೋಧನೆಗಾಗಿ ಸೀತಾಪಹರಣವಾಗುವಂತೆ ನಡೆದುಕೊಂಡು, ಅನಂತರ ದುಃಖಿಯಂತೆ ನಡೆದುಕೊಂಡನು. ಇದೇ ಶ್ರೀರಾಮಚಂದ್ರನು ತನ್ನ ಕೃಷ್ಣಾವತಾರದಲ್ಲಿ ಅನಂತಾಸನದಿಂದ ಬ್ರಾಹ್ಮಣಪುತ್ರನನ್ನು ತಂದುಕೊಟ್ಟಿದ್ದಾನೆ. ಸುರೋತ್ತಮರು ಹೇಳುತ್ತಾರೆ : ಇಪ್ಪತ್ತೈದುಕೋಟಿಯೋಜನ ದೂರದ ಅನಂತಾಸನದಿಂದ ಒಂದು ಘಳಿಗೆಯ ಅವಧಿಯಲ್ಲಿ ಬ್ರಾಹ್ಮಣಪುತ್ರನನ್ನು ಶ್ರೀಕೃಷ್ಣನು ಒಬ್ಬನೇ ತಂದಿದ್ದಾನೆ; ಇದಕ್ಕಾಗಿ ಸಪ್ತಸಮುದ್ರಗಳನ್ನೂ, ಸಪ್ತದ್ವೀಪಗಳನ್ನೂ, ಘನೋದಕ ಎಂಬ ಮಹಾಸಮುದ್ರವನ್ನು ದಾಟಿದ್ದಾನೆ. ಇಷ್ಟು ಸಾಮರ್ಥ್ಯದ ಶ್ರೀರಾಮಚಂದ್ರನು ಕೇವಲ ನೂರುಯೋಜನ ದೂರದ ಲಂಕೆಯಿಂದ ಸೀತೆಯನ್ನು ತರಲಾಗದೆ ದುಃಖಿಸಿ, ಕಪಿಸೈನ್ಯವನ್ನು ಅವಲಂಬಿಸುವ ಮತ್ತು ಸೇತುವನ್ನು ನಿರ್ಮಿಸುವ ಸ್ಥಿತಿಗೆ ಒಳಗಾಗುವುದು ಹೇಗೆ ಸಂಭಾವಿತ! ಇಷ್ಟುಸಾಮರ್ಥ್ಯದ ಶ್ರೀರಾಮನ ಪತ್ನಿಯ ಅಪಹಾರ ಸಹಜವಲ್ಲ (ಕೃತಕ). ಅಪಹಾರದ ಮಾತು ಹಾಸ್ಯಾಸ್ಪದ.

(೧೨) ಒಂದು ಮರದ ಹುಟ್ಟು ಬೆಳವಣಿಗೆಗಳು ಹೇಗೆ ಆಗುತ್ತವೆ ಎಂದು ತಿಳಿದವನಿಗೆ ಆ ಮರದ ಎಲೆಯ ಪರಿಚಯವನ್ನು ಮಾಡಿಕೊಡಲು ಯಾರೂ ಪ್ರವೃತ್ತಿಯನ್ನು ಮಾಡುವುದಿಲ್ಲ. ಶ್ರೀರಾಮಚಂದ್ರ ಸರ್ವತ್ರವ್ಯಾಪ್ತ. ಅವನಿಗೆ ಸೀತಾವಿಯೋಗವು ಆಗುವುದೇ ಇಲ್ಲ. ಸೀತಾವಿಯೋಗದಿಂದ ಅವನಿಗೆ ದುಃಖವಾಯಿತು ಎಂಬ ಕಥೆಯೇ ಶ್ರೀರಾಮಚಂದ್ರನ ಸ್ವರೂಪವಿರೋಧಿ. ಶ್ರೀರಾಮಚಂದ್ರನ ಸ್ವರೂಪವನ್ನು ಬಲ್ಲವರು ಅವನಿಗೆ ಸೀತಾವಿಯೋಗ ಮತ್ತು ದುಃಖಗಳು ಸಂಭವಿಸಿದವು ಎಂದು ಹೇಳಲಾರರು. ಭಗವಾನ್ ವೇದವ್ಯಾಸರು ಭಾಗವತ ಪಂಚಮಸ್ಕಂಧದ ಹತ್ತೊಂಭನೆಯ ಅಧ್ಯಾಯದ ೫,೬ನೇ ಶ್ಲೋಕಗಳಲ್ಲಿ ಈ ವಿಷಯಗಳನ್ನು ಹೇಳಿದ್ದಾರೆ.

(೧೩) ಚತುರ್ಮುಖಬ್ರಹ್ಮನ ಐದನೆಯ ತಲೆಯನ್ನು ಕತ್ತರಿಸಿದ ರುದ್ರದೇವರು ತೊಂದರೆಗೆ ಒಳಗಾದರು. ಆ ಚತುರ್ಮುಖಬ್ರಹ್ಮನನ್ನೇ ಶ್ರೀಹರಿಯು ಪ್ರಲಯಕಾಲದಲ್ಲಿ ಸಂಹರಿಸುತ್ತಾನೆ. ಇದರಿಂದ ಶ್ರೀಹರಿಗೆ ಯಾವ ಪಾಪಲೇಪವೂ ಇಲ್ಲ. ಇಂತಹ ಶ್ರೀರಾಮನಿಗೆ ರಾವಣವಧೆಯಿಂದ ಪಾಪಲೇಪವೇ?

**ಯತ್ ಪಂಚಮಶಿರಶ್ಛೇದೋ ಬಭಾಧೇಽಪಿ ಕಪಾಲಿನಮ್ ।**
**ತದ್ವಧೇಽಪ್ಯನಘೋ ಯೋಽಂತೇ ಸ ಕಿಂ ರಕ್ಷೋವಧೇಽಘವಾನ್ ॥**

**- ಶುದ್ಧಿಸೌರಭ ೧೫**

ಯುಕ್ತಿಮಲ್ಲಿಕಾಕಾರರ ಈ ನಿರ್ಣಯವನ್ನು ಸುರೋತ್ತಮರು ಮತ್ತಷ್ಟು ವಿವರಿಸಿದ್ದಾರೆ. ಶ್ರೀರಾಮಚಂದ್ರನು ರಾವಣವಧೆಯಿಂದ ಉಂಟಾದ ಬ್ರಹ್ಮತ್ಯಾದೋಷವನ್ನು ಪರಿಹರಿಸಿಕೊಳ್ಳಲು ಶಿವಲಿಂಗದ ಪ್ರತಿಷ್ಠೆಯನ್ನು ಮಾಡಿದನು ಎಂಬ ಕಥೆಯು ಅಪ್ರಾಮಾಣಿಕ. ತನಗೆ ಒದಗಿದ ಬ್ರಹ್ಮಹತ್ಯಾದೋಷವನ್ನು ಪರಿಹರಿಸಿಕೊಳ್ಳಲಾಗದ ಶಿವನು ಶ್ರೀರಾಮನಿಗೆ ಒದಗಿದ ಬ್ರಹ್ಮಹತ್ಯಾದೋಷವನ್ನು ಪರಿಹರಿಸಲು ಸಮರ್ಥನೇ? 'ಸೇತುಂ ದೃಷ್ಟ್ವಾ ಸಮುದ್ರಸ್ಯ ಬ್ರಹ್ಮಹತ್ಯಾಂ ವ್ಯಪೋಹತಿ' - ಈ ಸ್ಮೃತಿಯು ಶ್ರೀರಾಮನು ನಿರ್ಮಿಸಿದ ಸಮುದ್ರಸೇತುವೆಯ ದರ್ಶನದಿಂದ ಬ್ರಹ್ಮಹತ್ಯಾದೋಷದ ಪರಿಹಾರವಾಗುತ್ತದೆ ಎಂದು ಹೇಳಿದೆ; 'ನನಗೆ ಒದಗಿರುವ ಬ್ರಹ್ಮಹತ್ಯಾದೋಷದ ಪರಿಹಾರಕ್ಕಾಗಿ ಈ ಸೇತುವೆಯಲ್ಲಿ ಸದಾ ಇರಲು ಅನುಗ್ರಹಿಸು' ಎಂದು ಶಿವನು ಶ್ರೀರಾಮನನ್ನು ಪ್ರಾರ್ಥಿಸಿದನು. ಶಿವನನ್ನು ಉದ್ಧರಿಸುವುದಕ್ಕಾಗಿ ಶ್ರೀರಾಮನು ಸೇತುವೆಯಲ್ಲಿ ಶಿವಲಿಂಗದ ಪ್ರತಿಷ್ಠಾಪನೆಯನ್ನು ಮಾಡಿದನು.

ಕತ್ತೆ, ಮೊದಲಾದವುಗಳನ್ನು ಮೋಕ್ಷಕ್ಕೆ ಕರೆದೊಯ್ದ ಶ್ರೀರಾಮನಿಗೆ ಲಂಕೆಗೆ ಹೋಗಲು ಅಶಕ್ತಿಯೇ?

ಉಗುರಿನಿಂದ ಬ್ರಹ್ಮಾಂಡವನ್ನು ಭೇದಿಸಿದವನಿಗೆ ರಾವಣನ ಬಗ್ಗೆ ಭಯವೇ?

## ಕೃಷ್ಣಾವತಾರದಲ್ಲಿ ದೋಷವಿಲ್ಲ :

ಶ್ರೀಕೃಷ್ಣನ ಉದರದಲ್ಲಿ ಯಶೋದೆಯು ಬ್ರಹ್ಮಾಂಡವನ್ನು ನೋಡಿದಳು ಎಂದು ಭಾಗವತವು ಹೇಳಿದೆ. ಯಶೋದೆ-ದೇವಕಿಯರಿಗಿಂತ ಮೊದಲೇ ಇದ್ದ ಬ್ರಹ್ಮಾಂಡಕ್ಕೆ ಆಶ್ರಯನಾದ ಕೃಷ್ಣನು ಅವರಿಂದ ಹುಟ್ಟಬಹುದೇ? ಆಶ್ರಿತ ಬ್ರಹ್ಮಾಂಡವು ಇರುವಾಗ ಆಶ್ರಯನಾದ ಕೃಷ್ಣನಿಗೆ ಮರಣವು ಸಂಭವಿಸಬಹುದೇ? ಶ್ರೀಕೃಷ್ಣನ ಸ್ವರ್ಗಾರೋಹಣಸಮಯವು ಚತುರ್ಮುಖಬ್ರಹ್ಮನ ನೂರುವರ್ಷದ ಅವಸಾನಕಾಲವಲ್ಲ. ಅವನ ಜನ್ಮಕಾಲವು ಬ್ರಹ್ಮಕಲ್ಪದ ಆರಂಭಕಾಲವಲ್ಲ.

ವೈಕುಂಠಲೋಕದಲ್ಲಿದ್ದ ಶ್ರೀಹರಿಯ ಎದೆಗೆ ಭೃಗುಮಹರ್ಷಿಗಳ ಪಾದದಿಂದ ಉಂಟಾದ ಗುರುತೇ ಶ್ರೀವತ್ಸ. ಇದೇ ಶ್ರೀವತ್ಸವು ದೇವಕೀ ಸಂಜಾತನಾದ ಶ್ರೀಕೃಷ್ಣನ ಎದೆಯಲ್ಲೂ ಗೋಚರಿಸಿದೆ. ಆದ್ದರಿಂದ ವೈಕುಂಠದಲ್ಲಿರುವ ಭಗವನ್ಮೂರ್ತಿಯೇ

ಶ್ರೀಕೃಷ್ಣ. ಬೇರೆ ಅಲ್ಲ. ಇಲ್ಲದಿದ್ದರೆ ಯುದ್ಧದಲ್ಲಿ ಆದ ಗಾಯವು ವಾಸಿಯಾದನಂತರ ಉಳಿದ ಕಲೆಗೆ ಅನುಗುಣವಾಗಿ ಯೋಧರನ್ನು ಗುರುತಿಸುವ ವ್ಯವಸ್ಥೆಯೇ ತಪ್ಪಾದೀತು. ಶ್ರೀಕೃಷ್ಣನು ದೇಹವನ್ನು ತ್ಯಜಿಸಲಿಲ್ಲ ಎಂದು ಭಾಗವತವೂ (೩.೨.೧೧) ಹೇಳಿದೆ. ಕೃಷ್ಣನ ಹಲ್ಲಿನ ತುದಿಗಳಲ್ಲಿ ಭೀಷ್ಮ ಮೊದಲಾದವರೆಲ್ಲರೂ ಸಿಕ್ಕಿ ಪುಡಿಯಾಗಿದ್ದನ್ನು ಯುದ್ಧಕ್ಕಿಂತ ಮೊದಲೇ ತೋರಿಸಲ್ಪಟ್ಟ ವಿಶ್ವರೂಪದಲ್ಲೇ ಅರ್ಜುನನು ನೋಡಿದ್ದನು. ಇಂತಹ ಭೀಷ್ಮಾದಿಗಳ ಬಾಣಗಳಿಂದ ಶ್ರೀಕೃಷ್ಣನಿಗೆ ಛೇದವೇ?

ಸುರೋತ್ತಮರು ಹೇಳುತ್ತಾರೆ : (೧) ವಿಶ್ವರೂಪದ ಮತ್ತು ಅದರಲ್ಲಿ ಭೀಷ್ಮಾದಿಗಳ ಪರಾಭವ ಮತ್ತು ವಿನಾಶಗಳ ಪ್ರತ್ಯಕ್ಷಗಳು ದಿವ್ಯದೃಷ್ಟಿ. ಇದು ಪ್ರಬಲಪ್ರತ್ಯಕ್ಷ. ಇದಕ್ಕೆ ವಿರೋಧಿಯೇ ಇಲ್ಲ. ಭೀಷ್ಮಾದಿಗಳ ಬಾಣದಿಂದ ಶ್ರೀಕೃಷ್ಣನ ಛೇದದ ದರ್ಶನವು ದಿವ್ಯದೃಷ್ಟಿ ಅಲ್ಲ. ಆದ್ದರಿಂದ ಈ ದರ್ಶನಕ್ಕೆ ಪ್ರಬಲವಾದ ದಿವ್ಯದರ್ಶನದಿಂದ ಬಾಧವಿದೆ.

(೨) ಶ್ರೀಕೃಷ್ಣನ ಛೇದ ಮೊದಲಾದವುಗಳ ಪ್ರತ್ಯಕ್ಷಕ್ಕೆ 'ನಿರನಿಷ್ಟೋನಿರವದ್ಯಃ' ಎಂಬ ಶ್ರುತಿಯಿಂದ ಮಾತ್ರ ಬಾಧವಲ್ಲ. ಪ್ರಬಲವಾದ ದಿವ್ಯದೃಷ್ಟಿಯಿಂದಲೂ ಬಾಧ.

ಅಲ್ಪಜ್ಞರಾದ ಮನುಷ್ಯರಿಗೇ (ಕೆಲವರಿಗೆ) ಸ್ತಂಭನಮಂತ್ರಗಳ ಜ್ಞಾನವಿರುತ್ತದೆ. ಈ ಮಂತ್ರಗಳಿಂದ ಶತ್ರುಗಳು ಪ್ರಯೋಗಿಸುವ ಆಯುಧಗಳನ್ನು ತಡೆಯುತ್ತಾರೆ. ಸರ್ವಜ್ಞನಾದ ಶ್ರೀಕೃಷ್ಣನು ಪರರ ಆಯುಧಗಳನ್ನು ತಡೆಯಲಾರನೇ? ತಡೆಯಲಾರನಾದರೆ ಅವನಿಗೆ ಸರ್ವಜ್ಞತ್ವವಿಲ್ಲ ಎಂದೇ ಅರ್ಥ. ಕೃಷ್ಣನಿಗೆ ಛೇದವೆಂದರೆ ಶ್ರುತಿಸಿದ್ಧವಾದ ಅವನ ಸರ್ವಜ್ಞತ್ವದ ಛೇದವೇ.

ಬ್ರಹ್ಮಾಂಡಖರ್ಪರವನ್ನು ಛೇದಿಸಿದ ಪರಮಾತ್ಮನ ಕಾಲಿನ ಉಗುರಿನ ತುದಿಗೆ ಏನೂ ಹಾನಿಯಾಗಿಲ್ಲ. ಇದನ್ನು ತಿಳಿದ ಯಾರೂ ಕೂಡ ಶ್ರೀಕೃಷ್ಣನಿಗೆ ಬಾಣ-ಖಡ್ಗಗಳಿಂದ ಛೇದವನ್ನು ಚಿಂತಿಸಲಾರರು.

ಪರಮಾತ್ಮನ ರೋಮದಲ್ಲಿ ಇಡೀ ಜಗತ್ತು ಇದೆ. ಇವನ ರೋಮಕ್ಕೆ ಛೇದವಾದರೆ ಜಗತ್ತಿಗೇ ಛೇದವಾಗಬೇಕಾಗುತ್ತದೆ. ಹೀಗೆ ಆಗಿಲ್ಲ, ಆದ್ದರಿಂದ ಅವನಿಗೆ ಛೇದವಿಲ್ಲ. ಶ್ರೀಹರಿಯು ಸಕಲ ಛೇದಕಾರಿಗಳಿಗೆ ನಿಯಾಮಕ. ಇವನನ್ನು ಯಾರು ಛೇದಿಸಿಯಾರು?

ದಕ್ಷಪ್ರಜಾಪತಿಯ ತಲೆಯನ್ನು ಛೇದಿಸಲು ಪ್ರಯತ್ನಿಸಿದ ಶಿವನು, ಪರಮಾತ್ಮನ ಸಂಕಲ್ಪದಿಂದಾಗಿ ಛೇದಿಸಲು ಅಸಮರ್ಥನಾದನು. ಇಂತಹ ಪರಮಾತ್ಮನಿಗೆ ಯಾರಿಂದ ಛೇದವಾಗುತ್ತದೆ? (ಭಾಗವತ ೪.೬. ೨೨-೨೪).

ಪರಮಾತ್ಮನ ಕೃಪಾಲೇಶದಿಂದ ರಕ್ಷಿತನಾದ ಪ್ರಹ್ಲಾದನನ್ನು ಯಾವ ವಿಧಾನದಿಂದಲೂ ಛೇದಿಸಲಾಗಲಿಲ್ಲ. ಪರಮಾತ್ಮನಿಗೆ ಛೇದವೇ? ಸಂಧಾನಕ್ಕಾಗಿ ಹಸ್ತಿನಾವತಿಗೆ ಹೋಗಿದ್ದ ಕೃಷ್ಣನನ್ನು ಬಂಧಿಸಲು ದುರ್ಯೋಧನಾದಿಗಳು ಪ್ರಯತ್ನಿಸಿ ವಿಫಲರಾದರು. ಇಂತಹ ಕೃಷ್ಣನಿಗೆ ಛೇದವೇ?

ಆದ್ದರಿಂದ ರಾಮ, ಕೃಷ್ಣ ಮೊದಲಾದವರು ತೋರಿಸಿದ ಶೋಕ, ಛೇದ ಮೊದಲಾದವುಗಳು ಕೇವಲ ನಟನೆ. ಅಭಿನಯಕ್ಕಾಗಿ ಸ್ತ್ರೀವೇಷವನ್ನು ಹಾಕಿದ ಪುರುಷನು ವಾಸ್ತವಿಕಸ್ತ್ರೀ ಅಲ್ಲ.

ಮೊದಲು ಶ್ರುತಿಗಳಿಂದ ಮಾತ್ರ ತಿಳಿಯಲ್ಪಡುವ ತತ್ವಗಳನ್ನು ಅನಂತರ ತಿಳಿಸುವ ಬೇರೆ ಪ್ರಮಾಣಗಳಿಗೆ ಶ್ರುತಿಯು ಉಪಜೀವ್ಯ. ಆದ್ದರಿಂದ ಇಂತಹ ತತ್ವಗಳ ವಿಷಯದಲ್ಲಿ ಶ್ರುತಿಯು ಬಲಿಷ್ಠಪ್ರಮಾಣ. ಈ ಶ್ರುತಿಗೆ ವಿರುದ್ಧವಾದ ವಿಷಯಗಳನ್ನು ತಿಳಿಸುವ ಪ್ರತ್ಯಕ್ಷಾದಿಗಳು ಆ ವಿಷಯಗಳಲ್ಲಿ ಪ್ರಮಾಣವಲ್ಲ. ಆದ್ದರಿಂದ ಪರಮಾತ್ಮನಲ್ಲಿ, ಅವನ ಅವತಾರಗಳಲ್ಲಿ ದೋಷಗಳನ್ನು ವಿಷಯೀಕರಿಸುವ ಅಜ್ಞಪ್ರತ್ಯಕ್ಷವು ಪ್ರಮಾಣವಲ್ಲ.

ರತ್ನದ ಅಮೂಲ್ಯತೆಯು ಮಂದದೃಷ್ಟಿಯ ಜನಗಳಿಗೆ ತಿಳಿಯುವುದಿಲ್ಲ. ಈ ಕಾರಣದಿಂದ ರತ್ನದ ಅಮೂಲ್ಯತೆಗೆ ಹಾನಿಯಿಲ್ಲ. ರತ್ನಪರೀಕ್ಷಾಶಾಸ್ತ್ರಕ್ಕನುಗುಣವಾಗಿ ಮಂದರದೃಷ್ಟಿಯು ಅಪ್ರಮಾಣ.

**'ನಿರನಿಷ್ಟೋ ನಿರವದ್ಯಃ'** ಈ ಶ್ರುತಿಯು ಪರಮಾತ್ಮನನ್ನು ದೋಷರಹಿತ ಎಂದು ಸ್ಪಷ್ಟವಾಗಿ ಹೇಳಿದೆ. **'ನ ಕರ್ಮಣಾ ವರ್ಧತೇ ನೋ ಕನೀಯಾನ್'** - ಈ ಶ್ರುತಿಯು ಪರಮಾತ್ಮನಿಗೆ ತನ್ನ ಕರ್ಮಗಳಿಂದ ವೃದ್ಧಿಹ್ರಾಸಗಳು ಇಲ್ಲ ಎಂದು ಹೇಳುತ್ತದೆ. ಆದ್ದರಿಂದ ಕೃಷ್ಣನ ಕೈಲಾಸಯಾತ್ರೆಯು ಯಾವುದೇ ಸ್ವಪ್ರಯೋಜನಕ್ಕಾಗಿ ಅಲ್ಲ. ಶ್ರೀರಾಮನ ಶಿವಾರ್ಚನೆಯು ಬ್ರಹ್ಮಹತ್ಯಾಪಾಪದ ಪರಿಹಾರಕ್ಕಾಗಿ ಅಲ್ಲ.

**'ನಮೇ ಪಾರ್ಥಾಸ್ತಿಕರ್ತವ್ಯಂ.... ।**
**.................. ನ ಮೇ ಕರ್ಮಫಲೇ ಸ್ಪೃಹಾ ॥**

- ಈ ಗೀತಾವಚನವೂ ಇದನ್ನೇ ತಿಳಿಸುತ್ತದೆ.

ಪರಶುರಾಮದೇವರೇ ತಾವು ನಡೆಸಿದ ಕ್ಷತ್ರಿಯರಾಜರ ಸಂಹಾರದ ಅನಂತರ ಸ್ವಮಂತಪಂಚಕ ಕ್ಷೇತ್ರದಲ್ಲಿ ಯಜ್ಞವನ್ನು ಮಾಡಿದರು. ಲೋಕದಜನರು ಪಾಪಗಳ ಪರಿಹಾರಕ್ಕಾಗಿ ಯಜ್ಞವನ್ನು ಮಾಡಬೇಕು ಎಂದು ಬೋಧನೆಗಾಗಿ ಈ ಯಜ್ಞವನ್ನು ಮಾಡಿದರು, ಕ್ಷತ್ರಿಯರಾಜರಸಂಹಾರದಿಂದ ಸಂಭವಿಸಿದ ಪಾಪದ ಪರಿಹಾರಕ್ಕಾಗಿ ಅಲ್ಲ ಎಂದು ಭಾಗವತವು (೧೦.೮೨.೪) ಹೇಳಿದೆ.



ಅದ್ವೈತದರ್ಶನವು ಬ್ರಹ್ಮನಲ್ಲಿ ಅಜ್ಞಾನವು (ಅಜ್ಞಾನಾರೋಪವು) ಇದೆ ಎಂದು ಅಂಗೀಕರಿಸಿದೆ. ಶ್ರೀಮಧ್ವಾಚಾರ್ಯರು, ಶ್ರೀಜಯತೀರ್ಥರು ಮತ್ತು ಶ್ರೀವ್ಯಾಸರಾಜರು ಬ್ರಹ್ಮನಲ್ಲಿ ಅಜ್ಞಾನವಿಲ್ಲ ಎಂದು ಸಮರ್ಥಿಸಿದ್ದಾರೆ. ಶ್ರೀವಾದಿರಾಜರೂ ಶುದ್ಧಿಸೌರಭದಲ್ಲಿ ಬ್ರಹ್ಮಾಜ್ಞಾನವಾದವನ್ನು ಸುದೀರ್ಘವಾಗಿ ವಿಮರ್ಶಿಸಿದ್ದಾರೆ.

ಭ್ರಮೆಯು ಎರಡು ವಿಧ. (೧) ತಾದಾತ್ಮ್ಯರೋಪ. ಉದಾ : ಇದು (ಕಪ್ಪೆಚಿಪ್ಪು) ರಜತ ಎಂದು ಜ್ಞಾನ (೨) ಸಂಸರ್ಗಾರೋಪ. ಉದಾ : ಇದರಲ್ಲಿ (ಕಪ್ಪೆಚಿಪ್ಪಿನಲ್ಲಿ) ರಜತತ್ವವು ಇದೆ ಎಂದು ಜ್ಞಾನ. ಶಂಕರಾಚಾರ್ಯರು ತಮ್ಮ ಬ್ರಹ್ಮಸೂತ್ರ ಭಾಷ್ಯದಲ್ಲಿ ಇದನ್ನು ಹೇಳಿದ್ದಾರೆ. **'ಅನ್ಯೋಽನ್ಯಸ್ಮಿನ್ ಅನ್ಯೋನ್ಯಾತ್ಮಕತಾಮ್ ಅನ್ಯೋನ್ಯಧರ್ಮಾಂಶ್ಚ ಆಧ್ಯಸ್ಯ'** ಬ್ರಹ್ಮನಲ್ಲಿ **'ಅಜ್ಞಾನಮಹಮ್'** (ನಾನು ಅಜ್ಞಾನ) ಎಂದು ಭ್ರಮೆಯು ಇಲ್ಲ. ಅಂದರೆ, ಅವನಲ್ಲಿ ಅಜ್ಞಾನತಾದಾತ್ಮ್ಯಾರೋಪವು ಇಲ್ಲ. (ನನ್ನಲ್ಲಿ ಅಜ್ಞಾನತ್ವವು ಇದೆ) 'ಮಯಿ ಅಜ್ಞಾನತ್ವಮ್' ಎಂದು ಭ್ರಮೆಯೂ ಇಲ್ಲ. ಅಂದರೆ, ಅಜ್ಞಾನತ್ವಸಂಸರ್ಗದ ಆರೋಪವೂ ಇಲ್ಲ. ಆದ್ದರಿಂದ ಬ್ರಹ್ಮನಲ್ಲಿ ಅಜ್ಞಾನಾರೋಪವು ಇಲ್ಲ. (ಯು.ಮ.೫೦)

ಅ) 'ಅಹಮಜ್ಞಃ' (ನಾನು ಅಜ್ಞಾನಿ) ಎಂದು ಜ್ಞಾನವಿದೆ; ಈ ಜ್ಞಾನವು ಆತ್ಮನಲ್ಲಿರುವ ಅಜ್ಞಾನವನ್ನು ವಿಷಯೀಕರಿಸುತ್ತದೆ; ಆದ್ದರಿಂದ ಈ ಜ್ಞಾನವೇ ಬ್ರಹ್ಮನಲ್ಲಿ ಅಜ್ಞಾನವಿದೆ ಎನ್ನಲು ಪ್ರಮಾಣ? ಇಲ್ಲ. (೧) ಈ ಜ್ಞಾನವು ಮೇಲೆ ಹೇಳಿದ ಅಜ್ಞಾನ ತಾದಾತ್ಮ್ಯಾರೋಪವೂ ಅಲ್ಲ, ಅಜ್ಞಾನತ್ವಸಂಸರ್ಗಾರೋಪವೂ ಅಲ್ಲ. (೨) ಈ ಜ್ಞಾನವು ಅಜ್ಞಾನವನ್ನು ವಿಷಯೀಕರಿಸುತ್ತದೆ; ವಿಷಯೀಕರಿಸಲ್ಪಡುವ ಈ ಅಜ್ಞಾನವು 'ಅಹಮಜ್ಞಃ' – ಈ ಜ್ಞಾನವು

ಹುಟ್ಟುವುದಕ್ಕಿಂತ ಮೊದಲೇ ಇದ್ದು, ಪರಿಚಿತವಾಗಿರಬೇಕು. ಮೊದಲ ಪರಿಚಯವು ಭ್ರಮೆ ಅಲ್ಲ; ತಾದಾತ್ಮ್ಯಾರೋಪ ಅಥವಾ ಸಂಸರ್ಗಾರೋಪವಲ್ಲವಾದ್ದರಿಂದ. (ಯು.ಮ. ೫೧, ೫೨)

**ಪ್ರಶ್ನೆ :** 'ಅಹಮಜ್ಞಃ' – ಈ ಪ್ರತೀತಿಯು ಹುಟ್ಟುವುದಕ್ಕಿಂತ ಮೊದಲೇ ಅಜ್ಞಾನವು ಸಿದ್ಧವಾಗಿದೆ; ಬ್ರಹ್ಮನಲ್ಲಿ ಈ ಅಜ್ಞಾನದ ಸಂಸರ್ಗವನ್ನು 'ಅಹಮಜ್ಞಃ' ಎಂಬ ಪ್ರತೀತಿಯು ವಿಷಯೀಕರಿಸುತ್ತದೆ?

**ಉತ್ತರ :** ಇಲ್ಲ. (೧) ಅಜ್ಞಾನವು ಮೊದಲೇ ಸಿದ್ಧವಾಗಿದ್ದರೆ, ಅದು ಯಾರಲ್ಲಿ ಇತ್ತು? ಯಾರಲ್ಲೂ ಇಲ್ಲ. ಬ್ರಹ್ಮನೊಬ್ಬನೇ ಅಜ್ಞಾನಕ್ಕೆ ಆಶ್ರಯ ಎಂದು ಅದ್ವೈತ ಮತ.

(೨) ಮೊದಲು ಸಿದ್ಧವಾದ ಅಜ್ಞಾನಕ್ಕೆ ಬ್ರಹ್ಮನು ಆಶ್ರಯನಲ್ಲದಿದ್ದರೆ, 'ಅಹಮಜ್ಞಃ' ಎಂಬ ಜ್ಞಾನವು ಅಜ್ಞಾನರಹಿತನಾದ ಬ್ರಹ್ಮನಲ್ಲಿ ಅಜ್ಞಾನವನ್ನು ವಿಷಯೀಕರಿಸುತ್ತದೆ ಎಂದು ತಿಳಿಯಬಹುದು; ಹೀಗಾದಾಗ ಈ 'ಅಹಮಜ್ಞಃ' ಎಂಬ ಜ್ಞಾನವು ಭ್ರಮೆಯಾಗಬಹುದು; ಆದರೆ ಅದ್ವೈತದರ್ಶನದ ಪ್ರಕಾರ ಬ್ರಹ್ಮನೇ ಆಶ್ರಯ. ಅಜ್ಞಾನಸಹಿತನಲ್ಲಿ ಅಜ್ಞಾನವಿದೆ ಎಂಬ ಜ್ಞಾನವು ಭ್ರಮೆಯೇ? (೫೩, ೫೪)

(ಅ) ಇದಲ್ಲದೆ, ಆತ್ಮನಲ್ಲಿ ಅಜ್ಞಾನಸಂಸರ್ಗದ ಆರೋಪವು ಆದರೆ 'ಅಹಮಜ್ಞಃ' ಎಂದು ಪ್ರತೀತಿಯು ಹುಟ್ಟಬಹುದು. ಆದರೆ ಅದ್ವೈತದರ್ಶನವು ಬ್ರಹ್ಮನಲ್ಲಿ (ಆತ್ಮನಲ್ಲಿ) ಧರ್ಮಿಯ ಸಂಸರ್ಗಾರೋಪವನ್ನು ಅಂಗೀಕರಿಸುವುದಿಲ್ಲ. ಆದ್ದರಿಂದ 'ಅಹಮಜ್ಞಃ' ಎಂಬ ಪ್ರತೀತಿಯು ಬ್ರಹ್ಮನ ಅಜ್ಞಾನವನ್ನು ವಿಷಯೀಕರಿಸುವ ಪ್ರತೀತಿಯಲ್ಲ. (ಯು.ಮ. ೫೬)

(ಇ) ಭ್ರಮೆಯು ಹುಟ್ಟಲು ವಸ್ತುವಿನ ಅಥವಾ ಜ್ಞಾನಸಾಧನದ ದೋಷವು ಕಾರಣ. ಬ್ರಹ್ಮನಿಗೆ ತನ್ನಲ್ಲಿ ಅಜ್ಞಾನವಿದೆ ಎಂದು ಭ್ರಮೆಯು ಹುಟ್ಟಲು ಕಾರಣವಾದ ಯಾವ ದೋಷವೂ ಇಲ್ಲ. ಆದ್ದರಿಂದ 'ಅಹಮಜ್ಞಃ' ಎಂಬ ಜ್ಞಾನವು ಬ್ರಹ್ಮನ ಭ್ರಾಂತಿಯಲ್ಲ. ಭ್ರಮಾಧಿಷ್ಠಾನದ ಅಜ್ಞಾನವು ಭ್ರಮೆಯನ್ನು ಹುಟ್ಟಿಸುವ ಒಂದು ದೋಷ. ಈ ಅಜ್ಞಾನವು ತಾನು ಇದ್ದು, ಬೇರೆ ಭ್ರಮೆಗೆ ಕಾರಣವಾಗಬೇಕು. ಅಜ್ಞಾನವು ಇರುವುದಾದರೆ, ಅದನ್ನು ವಿಷಯೀಕರಿಸುವ 'ಅಹಮಜ್ಞಃ' ಎಂಬ ಜ್ಞಾನವು ಭ್ರಾಂತಿಯಾಗಲಾರದು. (ಯು.ಮ. ೫೮)

(ಉ) **ಪ್ರಶ್ನೆ** : ಅನೇಕ ಅಜ್ಞಾನಗಳು ಇರಬಹುದು; ಒಂದನೆಯ ಅಜ್ಞಾನವು ದೋಷ. ಈ ದೋಷದಿಂದ ಬ್ರಹ್ಮನಲ್ಲಿ ಅಜ್ಞಾನಭ್ರಾಂತಿಯು ಹುಟ್ಟಬಹುದು?

**ಉತ್ತರ** : ಇಲ್ಲ. ಒಂದು ಅಂಧಕಾರಕ್ಕೆ ಇನ್ನೊಂದು ಅಂಧಕಾರವು ಸೇರಿದರೆ, ಮೊದಲನೆ ಅಂಧಕಾರದ ಯಥಾರ್ಥಜ್ಞಾನವೇ ಆಗುತ್ತದೆ. ಹೀಗೆಯೇ ಅಜ್ಞಾನವು ಅಜ್ಞಾನದ ಯಥಾರ್ಥಜ್ಞಾನವನ್ನೇ ಹುಟ್ಟಿಸುತ್ತದೆ. ಭ್ರಾಂತಿಯನ್ನು ಹುಟ್ಟಿಸುವುದಿಲ್ಲ.

ವಸ್ತುತಃ, ಅದ್ವೈತದರ್ಶನದ ಪ್ರಕಾರ ಅಜ್ಞಾನಭ್ರಾಂತಿಯು ಅನಾದಿ. ಆದ್ದರಿಂದ ಅಜ್ಞಾನಭ್ರಾಂತಿಗೆ ಕಾರಣವಾದ ಇನ್ನೊಂದು ಅಜ್ಞಾನವು ಇಲ್ಲವೇ ಇಲ್ಲ. ಅಜ್ಞಾನಭ್ರಾಂತಿಯು ಅನಾದಿಯಾದ್ದರಿಂದ ಅದು ಜನ್ಯವೇ ಅಲ್ಲ. ಆದ್ದರಿಂದ ಅದು ದೋಷಜನ್ಯವೂ ಅಲ್ಲ. ಬ್ರಹ್ಮನ ಅಜ್ಞಾನಭ್ರಾಂತಿಯು ದೋಷಜನ್ಯವಲ್ಲದಿದ್ದರೆ, ಭ್ರಾಂತಿಯು ಅಪ್ರಮಾಣವಾದ್ದರಿಂದ, ಈ ಅಪ್ರಾಮಾಣ್ಯಕ್ಕೆ ಕಾರಣವಿಲ್ಲವಾದ್ದರಿಂದ 'ಅಪ್ರಾಮಾಣ್ಯಂ ಸ್ವತಃ' ಆಗಬೇಕಾದೀತು. ವಸ್ತುತಃ 'ಅಪ್ರಾಮಾಣ್ಯವು ಸ್ವತಃ' ಅಲ್ಲ. ಆದ್ದರಿಂದ ಬ್ರಹ್ಮನಲ್ಲಿ ಅಜ್ಞಾನಭ್ರಾಂತಿಯನ್ನು ಸಮರ್ಥಿಸಲು ಆಗುವುದಿಲ್ಲ. ಬ್ರಹ್ಮನಿಗೆ ಅಜ್ಞಾನಭ್ರಾಂತಿಯು ಇದೆ ಎಂದು ಹೇಳುವವನೇ ಅಜ್ಞಾನಿ. (೬೧, ೬೫)

**ಪ್ರಶ್ನೆ** : ಮಧ್ವಾಚಾರ್ಯರ ದರ್ಶನದಲ್ಲಿ ಅಯೋಗ್ಯಜೀವರ ಸ್ವರೂಪಜ್ಞಾನವು ನಿತ್ಯ ಮತ್ತು ಅಯಥಾರ್ಥ. ದೋಷಜನ್ಯವಲ್ಲದ ಈ ಜ್ಞಾನವು ಹೇಗೆ ಅಯಥಾರ್ಥ?

**ಉತ್ತರ** : ಅಸುರರ ಸ್ವರೂಪದಲ್ಲಿ 'ತತ್ತ್ವಜ್ಞಾನಾಯೋಗ್ಯತಾ' ಎಂಬ ದೋಷವಿದೆ. ಅವರ ಅಯಥಾರ್ಥಜ್ಞಾನಕ್ಕೆ ಈ ದೋಷವು ಮೂಲ. ಅಯೋಗ್ಯತಾ ಮತ್ತು ಅಯಥಾರ್ಥಜ್ಞಾನ - ಇವೆರಡು ಅಸುರಚೇತನದ ಸ್ವರೂಪವೇ. ಆದ್ದರಿಂದ ಇವೆರಡರ ಅಭೇದವು ಪ್ರಮಿತ. ಈ ಅಯೋಗ್ಯತೆಗೆ ಅಯಥಾರ್ಥಜ್ಞಾನ ಮೂಲ. ಆದ್ದರಿಂದಲೇ ಅಯಥಾರ್ಥಜ್ಞಾನವು ಈ ಅಧೀನ. ಈ ಮೂಲತ್ವ ಅಯೋಗ್ಯತಾ ಮತ್ತು ಅಧೀನತ್ವಗಳು ಭೇದಕಾರ್ಯ. ಅಭೇದವು ಪ್ರಮಿತವಾಗಿರುವ ನಿದರ್ಶನಗಳಲ್ಲಿ ಇರುವ ಭೇದಕಾರ್ಯಕ್ಕೆ ಭೇದಪ್ರತಿನಿಧಿ 'ವಿಶೇಷ'ವು ಕಾರಣ. ಈ ವಿಶೇಷದಿಂದ ಅಯೋಗ್ಯತೆ ಮತ್ತು ಅಯಥಾರ್ಥಜ್ಞಾನಗಳ ಮೂಲ-ಮೂಲಿಭಾವವು ಉಪಪನ್ನವಾಗುತ್ತದೆ.

ಅದ್ವೈತದರ್ಶನದಲ್ಲಿ ಬ್ರಹ್ಮವು ನಿರ್ವಿಶೇಷ. ಆದ್ದರಿಂದ ಅವನಲ್ಲಿ ಅಜ್ಞಾನವಿದೆ ಎಂದು ಸಮರ್ಥಿಸಲು ಯಾವ ಅವಕಾಶವೂ ಇಲ್ಲ. (೬೬)

ಅದ್ವೈತಶಾಸ್ತ್ರವೆಂಬ ವಿಶಾಲವಾದ ಮರಕ್ಕೆ ಬ್ರಹ್ಮನಲ್ಲಿ ಅಜ್ಞಾನಾರೋಪವೇ ಮೂಲ. ಇದೇ ಅನುಪಪನ್ನ, ಮೂಲವಿಲ್ಲದ ಮರಕ್ಕೆ ಗಾಳಿಯು ಬಡಿದಾಗ ಅದು ಬಿದ್ದುಹೋಗುವಂತೆ ಮುಖ್ಯವಾಯುವಿನ ಅವತಾರರಾದ ಮಧ್ವಾಚಾರ್ಯರ ಯುಕ್ತಿಗಳ ಸ್ಪರ್ಶದಿಂದ ಅದ್ವೈತದರ್ಶನವು ಬಿದ್ದುಹೋಗುತ್ತದೆ. (೬೭)

(೧) ಮೇಲೆ ಹೇಳಿದಂತೆ ಅಜ್ಞಾನವು ಆರೋಪಿತವಲ್ಲ. ಆದ್ದರಿಂದ ಬ್ರಹ್ಮನಲ್ಲಿ ಅಜ್ಞಾನವು ಇರುವುದಾದರೆ ಅದು ಸತ್ಯವೇ ಆಗಬೇಕು. ಸತ್ಯ ಅಜ್ಞಾನದಿಂದ ಜಗತ್ತಿನ ಜನ್ಮವಾಗುವುದಾದರೆ ಜಗತ್ತು ಸತ್ಯವೇ ಆಗಬೇಕು. ಮಾವಿನ ಬೀಜದಿಂದ ವಿಷವೃಕ್ಷವು ಹುಟ್ಟುವುದೇ?

(೨) ಸತ್ಯ ಅಜ್ಞಾನದಿಂದ ಹುಟ್ಟುವ ಭೇದವು ಸತ್ಯವೇ ಆಗಬೇಕು. ಸತ್ಯಪದಾರ್ಥಕ್ಕೆ ಬಾಧವಿಲ್ಲ ಎಂದು ಅದ್ವೈತದರ್ಶನವು ಅಂಗೀಕರಿಸಿದೆ. ಆದ್ದರಿಂದ ಭೇದಕ್ಕೆ ಬ್ರಹ್ಮಜ್ಞಾನದಿಂದ ಬಾಧವೂ ಉಪಪನ್ನನಲ್ಲ.

(೩) ಸತ್ಯಪದಾರ್ಥಕ್ಕೆ ಬಾಧವಿಲ್ಲದಿರುವುದರಿಂದಲೇ, ಸತ್ಯ ಅಜ್ಞಾನದ ನಿವೃತ್ತಿಯು ಆಗುವಂತಿಲ್ಲ. ಅಜ್ಞಾನನಿವೃತ್ತಿಯೇ ಮೋಕ್ಷ. ಆದ್ದರಿಂದ ಅದ್ವೈತ ದರ್ಶನವು ಹೇಳುವ ಮೋಕ್ಷವೂ ಆಗುವುದಿಲ್ಲ.

(೪) ಅದ್ವೈತದರ್ಶನದ ಪ್ರಕಾರ ಬ್ರಹ್ಮವೊಂದೇ ಸತ್ಯ. ಇದರಲ್ಲಿ ಇಡೀ ಜಗತ್ತು ಆರೋಪಿತ. ಲೋಕದಲ್ಲಿರುವ ಎಲ್ಲರೂ ಬ್ರಹ್ಮರೇ ಆದ್ದರಿಂದ ಎಲ್ಲರಿಗೂ ಎಲ್ಲ ವಸ್ತುಗಳೂ ಯಾವಾಗಲೂ ಕಾಣಿಸಬೇಕಾದೀತು. ಕಾಣಿಸುತ್ತಿಲ್ಲ. ಏಕೆ? ಅದ್ವೈತದರ್ಶನವು ಹೀಗೆ ಹೇಳುತ್ತದೆ : ಸಕಲ ವಸ್ತುಗಳ ಆರೋಪಕ್ಕೆ ಬ್ರಹ್ಮನು ಅಧಿಷ್ಠಾನ. ಈ ಬ್ರಹ್ಮನಿಗೆ ತಾನು ಬ್ರಹ್ಮ ಎಂದು ಜ್ಞಾನವಿಲ್ಲ. ಇದೇ ಅಧಿಷ್ಠಾನಾಜ್ಞಾನ. ಈ ಅಜ್ಞಾನದಿಂದ ತನ್ನನ್ನೇ ಘಟ, ಪಟ ಇತ್ಯಾದಿ ಎಂದು ಭ್ರಮಿಸುತ್ತಾನೆ. ಈ ಭ್ರಮೆಯೇ ಆರೋಪ. ಬ್ರಹ್ಮನು ಘಟಾರೋಪಕ್ಕೆ ಅಧಿಷ್ಠಾನವಾದ್ದರಿಂದ ಇವನು ಘಟಾರೋಪಾಧಿಷ್ಠಾನಚೈತನ್ಯ ಅಥವಾ ಘಟಾವಚ್ಛಿನ್ನಚೈತನ್ಯ. ಹೀಗೆಯೇ ಪಟಾದಿಗಳ ಆರೋಪಾಧಿಷ್ಠಾನಚೈತನ್ಯ ಅಥವಾ ಪಟಾದ್ಯವಚ್ಛಿನ್ನ ಚೈತನ್ಯ.

ಚೈತ್ರನ ಅಂತಃಕರಣವು ಅವನ ಚಕ್ಷುರಿಂದ್ರಿಯದ ಮೂಲಕ ಹೊರಗೆ ಹೋಗಿ ಘಟವನ್ನು ತಲುಪಿ ಘಟಾಕಾರವನ್ನು ಪಡೆಯುತ್ತದೆ. ಇದು ಚೈತ್ರನ

ಘಟಾಪರೋಕ್ಷವೃತ್ತಿ. ಈ ವೃತ್ತಿಯಿಂದ ಘಟಾವಚ್ಛಿನ್ನ ಬ್ರಹ್ಮಚೈತನ್ಯದ ಅಜ್ಞಾನದ ನಿವೃತ್ತಿಯಾಗುತ್ತದೆ. ಆದ್ದರಿಂದ ಘಟವು ಚೈತ್ರವೃತ್ತಿಗೆ ವಿಷಯ. ದೇವದತ್ತನ ವೃತ್ತಿಯಿಂದ ಘಟಾವಚ್ಛಿನ್ನಚೈತನ್ಯದ ಅಜ್ಞಾನವು ನಿವೃತ್ತಿಯಾದಾಗ ಘಟವು ದೇವದತ್ತನ ವೃತ್ತಿಗೆ ವಿಷಯ.

ಯಾರ ಅಂತಃಕರಣವೃತ್ತಿಯಿಂದ ಯಾವ ವಿಷಯಾವಚ್ಛಿನ್ನ ಚೈತನ್ಯದ ಅಜ್ಞಾನವು ನಿವೃತ್ತವಾಗುವುದೋ ಆ ವಿಷಯವು (ಘಟ ಇತ್ಯಾದಿಗಳು) ಆ ವೃತ್ತಿಗೆ ವಿಷಯ. ಈ ವ್ಯವಸ್ಥೆಗೆ ಪ್ರತಿಕರ್ಮವ್ಯವಸ್ಥೆ ಎಂದು ಹೆಸರು. ಈ ವ್ಯವಸ್ಥೆಯು ಇರುವುದರಿಂದ ಎಲ್ಲರಿಗೂ ಎಲ್ಲ ವಸ್ತುಗಳೂ ಯಾವಾಗಲೂ ಕಾಣಿಸಬೇಕಾದ ಪ್ರಸಂಗವಿಲ್ಲ.

ಇದು ಸರಿಯಲ್ಲ. ಅದ್ವೈತ ದರ್ಶನದಲ್ಲಿ ಸತ್ಯಪದಾರ್ಥಕ್ಕೆ ನಾಶವಿಲ್ಲ. ಮೇಲೆ ವಿವರಿಸಿರುವಂತೆ ಅಜ್ಞಾನವು ಸತ್ಯವಾಗಬೇಕು. ಆದ್ದರಿಂದ ಅದು ನಾಶವಾಗುವಂತಿಲ್ಲ. ಆದ್ದರಿಂದ ಅಜ್ಞಾನನಾಶವನ್ನು ಅವಲಂಬಿಸಿರುವ ಪ್ರತಿಕರ್ಮ ವ್ಯವಸ್ಥೆಯೂ ಉಪಪನ್ನವಲ್ಲ.

**ಅಜ್ಞಾನದ ಅಸಂಭವದಿಂದ.....**

(೧) ಇದಲ್ಲದೆ ಅದ್ವೈತದರ್ಶನದಲ್ಲಿ ಬ್ರಹ್ಮಾಜ್ಞಾನವೇ ಉಪಪನ್ನವಲ್ಲ. ಆದ್ದರಿಂದ ಅದು ಇಲ್ಲವೇ ಇಲ್ಲ. ಆದ್ದರಿಂದ ಅವನ್ನು ಅವಲಂಬಿಸಿರುವ ಪ್ರತಿಕರ್ಮ ವ್ಯವಸ್ಥೆಯೂ ಉಪಪನ್ನವಲ್ಲ.

(೨) ಅದ್ವೈತದರ್ಶನವು ಅಂಗೀಕರಿಸುವ ಐಕ್ಯವು ಬ್ರಹ್ಮಸ್ವರೂಪವೇ. ಅಲ್ಲದಿದ್ದರೆ, ಬ್ರಹ್ಮ ಮತ್ತು ಐಕ್ಯ - ಈ ಎರಡು ಸತ್ಯಗಳು ಇರುವಂತಾಗಿ ಅದ್ವೈತಭಂಗವಾಗುತ್ತದೆ. ಬ್ರಹ್ಮದ ಜ್ಞಾನವು ಯಾವಾಗಲೂ ಇದೆ. ಆದ್ದರಿಂದ ಐಕ್ಯದ ಜ್ಞಾನವೂ ಯಾವಾಗಲೂ ಇದೆ; ಐಕ್ಯದ ಜ್ಞಾನಕ್ಕಾಗಿ ವೇದಾಂತಾಧ್ಯಯನವನ್ನು ಏಕೆ ಮಾಡಬೇಕು? 'ಐಕ್ಯದ ಜ್ಞಾನಕ್ಕೆ ತಡೆಯಾಗಿ ಅಜ್ಞಾನವಿದೆ, ಆದ್ದರಿಂದ ಐಕ್ಯದ ಜ್ಞಾನವಿಲ್ಲ; ವೇದಾಂತಾಧ್ಯಯನದಿಂದ ಈ ತಡೆಯು ನಿವೃತ್ತವಾಗುತ್ತದೆ' ಎಂದು ಉತ್ತರವನ್ನು ಹೇಳಬೇಕು. ಇದು ಸರಿಯಲ್ಲ. ಆವರಣವಾಗುವ ಅಜ್ಞಾನವು ಸತ್ಯವಾದರೆ ಎರಡು ಸತ್ಯಗಳು ಇರುವಂತಾಗಿ

ಅದ್ವೈತಭಂಗವಾಗುತ್ತದೆ. ಆದ್ದರಿಂದ ಆರೋಪಿತ ಅಜ್ಞಾನವು ಆವರಣ ಎಂದು ಹೇಳಬೇಕು. ಆರೋಪವು ಉಪಪನ್ನವಲ್ಲ ಎಂದು ವಿವರಿಸಲಾಗಿದೆ. ಆದ್ದರಿಂದ ಐಕ್ಯದ ಜ್ಞಾನವು ಯಾವಾಗಲೂ ಇರುವ ಪ್ರಸಂಗವು ಅನಿವಾರ್ಯ. ಈ ಸ್ಥಿತಿಯಲ್ಲಿ ವೇದಾಂತವು ಅಜ್ಞಾತವಾದ ಏನನ್ನೂ ತಿಳಿಸಲಾರದು. ಆದ್ದರಿಂದ ಅದರ ಅಧ್ಯಯನವೇ ವ್ಯರ್ಥ.

(೩) ಬ್ರಹ್ಮನಲ್ಲಿ ಅಜ್ಞಾನವು ಅನುಪಪನ್ನವಾದ್ದರಿಂದ, ಬ್ರಹ್ಮನ ಭ್ರಾಂತಿಯಿಂದ ಜಗತ್ತು ಕಲ್ಪಿತ ಎಂಬ ವಿಚಾರವೂ ಸರಿಯಲ್ಲ. ಇದರಿಂದ ಜಗತ್ತು ಬ್ರಹ್ಮನ ಪ್ರಮಾ (ಯಥಾರ್ಥಜ್ಞಾನ)ಕ್ಕೆ ವಿಷಯ ಎಂದು ಸಿದ್ಧವಾಗುತ್ತದೆ. ಪ್ರಮಾವಿಷಯವು ಸತ್ಯ. ಆದ್ದರಿಂದ ಜಗತ್ತು ಸತ್ಯವೇ.

(೪) ಬ್ರಹ್ಮಾಜ್ಞಾನಿಯು ವೇದಾಂತಾಧ್ಯಯನಕ್ಕೆ ಅಧಿಕಾರಿ; ಅಜ್ಞಾತವು ವಿಷಯ, ಅಜ್ಞಾನ ನಿವೃತ್ತಿಯು ಪ್ರಯೋಜನ. ವ್ಯಾವಹಾರಿಕಭೇದವೂ ಅಜ್ಞಾನಾಧಿನ. ಸಗುಣಬ್ರಹ್ಮನ ಗುಣ, ದೇಹಗಳು ಅವಿದ್ಯಾಕಲ್ಪಿತ. ಪ್ರಪಂಚವೂ ಅವಿದ್ಯಾಕಲ್ಪಿತ. ಅಜ್ಞಾನವೇ ಅನುಪಪನ್ನವಾದ್ದರಿಂದ ಅದು ಇಲ್ಲ. ಆದ್ದರಿಂದ ಅದ್ವೈತಶಾಸ್ತ್ರವು ಹೇಳುವ ಎಲ್ಲಾ ವಿಷಯಗಳೂ ಅಸಂಗತವೇ.

## ಬ್ರಹ್ಮನಲ್ಲಿ ಅಜ್ಞಾನವಿಲ್ಲ :

(೧) ಅಜ್ಞಾನವು ಎಲ್ಲಿ ಇದೆ? ಬ್ರಹ್ಮನಲ್ಲಿ? ಅಥವಾ ಜೀವನಲ್ಲಿ? ಬ್ರಹ್ಮನಲ್ಲಿ ಅಜ್ಞಾನವಿದೆ ಎನ್ನಲು ಏನೂ ಪ್ರಮಾಣವಿಲ್ಲ. 'ಅಹಮಜ್ಞಃ' ಎಂಬ ಅಜ್ಞಾನದ ಜ್ಞಾನವು ಜೀವಾತ್ಮನಿಗೇ ಇದೆ. 'ಅಹಮಜ್ಞಃ' ಎಂದು ಲೌಕಿಕ ಪುರುಷರು ಮಾತ್ರ ಹೇಳುತ್ತಾರೆ. ಅಲೌಕಿಕನಾದ ಸರ್ವಜ್ಞನಾದ ಬ್ರಹ್ಮನು ಹೀಗೆ ಹೇಳುವುದಿಲ್ಲ.

**ಅಹಮಿತ್ಯೇವ ಯೋ ವೇದ್ಯಃ ಸ ಜೀವ ಇತಿ ಕೀರ್ತಿತಃ ।**
**ಸ ದುಃಖೀ ಸ ಸುಖೀ ಚೈವ ಸ ಪಾತ್ರಂ ಬಂಧಮೋಕ್ಷಯೋಃ ॥**

ಎಂದು ಪರಮಶ್ರುತಿಯು ಹೇಳುತ್ತದೆ. ಈ ಶ್ರುತಿಯನ್ನು ಶ್ರೀಮಧ್ವಾಚಾರ್ಯರು ತಮ್ಮ ವಿಷ್ಣುತತ್ವವಿನಿರ್ಣಯದಲ್ಲಿ ಉದಾಹರಿಸಿದ್ದಾರೆ.

ಪ್ರಶ್ನೆ : ಜೀವನೇ ಬ್ರಹ್ಮ. ಆದ್ದರಿಂದ 'ಅಹಮಜ್ಞಃ' ಎಂಬ ಪ್ರತ್ಯಕ್ಷ ಮತ್ತು ಪರಮ ಶ್ರುತಿಗಳು ಬ್ರಹ್ಮನಿಗೂ ಅನ್ವಯಿಸುತ್ತವೆ. ಈ ಶ್ರುತಿಯೇ ಬ್ರಹ್ಮನಲ್ಲಿ ಅಜ್ಞಾನವಿದೆ ಎನ್ನಲು ಪ್ರಮಾಣ?

**ಉತ್ತರ** : ಇಲ್ಲ. ಜೀವ-ಬ್ರಹ್ಮರ ಐಕ್ಯವು ಪ್ರಮಾಣದಿಂದ ಸಿದ್ಧವಾದನಂತರ, ಮೇಲೆ ಹೇಳಿದಂತೆ ಬ್ರಹ್ಮನಲ್ಲಿ ಅಜ್ಞಾನವು ಪ್ರಮಾಣಿಕವಾಗಬಹುದು; ಬ್ರಹ್ಮನಲ್ಲಿ ಅಜ್ಞಾನವು ಪ್ರಾಮಾಣಿಕವಾದನಂತರವೇ ಅಜ್ಞಾನದಿಂದ ಬ್ರಹ್ಮನೇ ಜೀವನಾಗಿದ್ದಾನೆ ಎಂದು ಸಿದ್ಧವಾಗಿ ಜೀವಬ್ರಹ್ಮೈಕ್ಯವು ಸಿದ್ಧವಾಗಬಹುದು. ಹೀಗೆ ಜೀವಬ್ರಹ್ಮೈಕ್ಯ ಸಿದ್ಧಿ ಮತ್ತು ಬ್ರಹ್ಮಾಜ್ಞಾನಸಿದ್ಧಿಗಳಿಗೆ ಪರಸ್ಪರ ಅವಲಂಬನೆಯು ಇರುವುದರಿಂದ ಯಾವುದೂ ಸಿದ್ಧವಾಗುವುದಿಲ್ಲ.

(೨) **ತಾನ್ಯಹಂ ವೇದ ಸರ್ವಾಣಿ ನ ತ್ವಂ ವೇತ್ಥ ಪರಂತಪ ।** - (ಭಗವದ್ಗೀತೆ ೪.೫) ಎಂದು ಶ್ರೀಕೃಷ್ಣನು ಹೇಳಿದ್ದಾನೆ. ಆದ್ದರಿಂದ ಅವನಿಗೆ ತನ್ನ ಸರ್ವಜ್ಞತ್ವದ ಪ್ರತ್ಯಕ್ಷಜ್ಞಾನವಿದೆ.

(೩) '**ಅಹಮಜ್ಞಃ**' - ಈ ಜೀವಾತ್ಮನ ಅಜ್ಞಾನಪ್ರತ್ಯಕ್ಷ ಮತ್ತು ಪರಮಾತ್ಮನ '**ಅಹಂ ಸರ್ವಂವೇದ**' ಎಂಬ ಸರ್ವಜ್ಞತ್ವದ ಪ್ರತ್ಯಕ್ಷ- ಇವೆರಡರ ಪರಸ್ಪರ ವಿರೋಧದಿಂದ ಜೀವ-ಪರಮಾತ್ಮರ ಭೇದವೇ ಸಿದ್ಧವಾಗುತ್ತದೆ; ಐಕ್ಯವು ಸತ್ತುಹೋಗುತ್ತದೆ. ಕಾದಾಡುತ್ತಿರುವ ಎರಡು ಟಗರುಗಳ ಮಧ್ಯೆ ರಕ್ತದ ಆಸೆಯಿಂದ ನುಗ್ಗುವ ನರಿಯಂತೆ. ಸುರೋತ್ತಮರು ಹೇಳುತ್ತಾರೆ : 'ಜೀವಬ್ರಹ್ಮೈಕ್ಯದ ಸಮರ್ಥನೆಗಾಗಿ ಪ್ರಯತ್ನಿಸುತ್ತಾ ಆಯುಷ್ಯಮುಗಿದು ಮರಣವು ಸಂಭವಿಸಬಹುದು; ಐಕ್ಯದ ಸಮರ್ಥನೆಯು ಆಗುವುದೇ ಇಲ್ಲ' (ಶ್ಲೋಕ ೭೮).

(೪) 'ಬ್ರಹ್ಮನಲ್ಲಿ ಅಜ್ಞಾನವು ಇದೆ. ಇದನ್ನು ಸಮರ್ಥಿಸಲು ಆಗುವುದಿಲ್ಲ; ಅಂದರೆ ಇದು ದುರ್ಘಟ' ಎಂದು ಅದ್ವೈತದರ್ಶನವು ಹೇಳುತ್ತದೆ. ಇದು ಸರಿಯಲ್ಲ. ಪ್ರತ್ಯಕ್ಷಪ್ರಮಾಣದಿಂದ ಬ್ರಹ್ಮನಿಗೆ ಅಜ್ಞಾನವು ಇದೆ ಎಂದು ಸಿದ್ಧವಾದರೆ, 'ಜ್ಞಾನರೂಪನಾದ ಬ್ರಹ್ಮನಲ್ಲಿ ಅಜ್ಞಾನವು ಹೇಗೆ ಇರುತ್ತದೆ?' ಎಂಬ ಪ್ರಶ್ನೆಯು ಉದ್ಭವಿಸುತ್ತದೆ. ಆಗ ಬ್ರಹ್ಮನಲ್ಲಿ ಅಜ್ಞಾನವು ದುರ್ಘಟ ಎಂದು ಹೇಳಬಹುದು. ಆದರೆ ಪ್ರತ್ಯಕ್ಷದಿಂದ ಅಜ್ಞಾನವು ಸಿದ್ಧವಾಗಿಲ್ಲ, ಶ್ರುತಿಯು ಅವನನ್ನು ಸರ್ವಜ್ಞ (**ಯಃ ಸರ್ವಜ್ಞಃ ಸರ್ವವಿತ್- ಆಥರ್ವಣೋಪನಿಷತ್**) ಎಂದು ಹೇಳುತ್ತದೆ. ಆದ್ದರಿಂದ ಅವನಿಗೆ ಸರ್ವಜ್ಞತ್ವದ ಅನುಭವವಿದೆ ಎಂದು ಸಿದ್ಧವಾಗುತ್ತದೆ. ಆದ್ದರಿಂದ ಬ್ರಹ್ಮನಲ್ಲಿ ಅಜ್ಞಾನವು ಇಲ್ಲವೇ ಇಲ್ಲ. ಅವಿದ್ಯೆಯು ಕುಮಾರಿ. ಅವಳನ್ನು ಮದುವೆಯಾಗುವವನೇ ಇಲ್ಲ. ಅವಳಿಗೆ ದುರ್ಘಟತ್ವ ಎಂಬ ಆಭರಣವನ್ನು ತೊಡಿಸುವುದು ವ್ಯರ್ಥ (ಶ್ಲೋಕ ೮೦).

೫. 'ಬ್ರಹ್ಮನ ಸ್ವರೂಪಜ್ಞಾನವು ಅಜ್ಞಾನವಿರೋಧಿಯಲ್ಲ, ಆದ್ದರಿಂದ ಜ್ಞಾನರೂಪನಾದ ಬ್ರಹ್ಮನಲ್ಲಿ ಅಜ್ಞಾನವು ಇರಬಹುದು' ಎಂದು ಅದ್ವೈತದರ್ಶನವು ಹೇಳುತ್ತದೆ.

ಇದು ಸರಿಯಲ್ಲ. **'ಮಾಯಾಂ ವ್ಯುದಸ್ಯ ಚಿಚ್ಛಕ್ತ್ಯಾ ಕೈವಲ್ಯೇ ಸ್ಥಿತ ಆತ್ಮನಿ'** ಎಂದು ಭಾಗವತ ವಚನವಿದೆ (೧.೭.೨೩) ಈ ವಚನವು ಸ್ವರೂಪಜ್ಞಾನವು ಅಜ್ಞಾನ-ವಿರೋಧಿ ಎಂದೇ ಹೇಳಿದೆ.

## ಜೀವನಲ್ಲೂ ಅಜ್ಞಾನವಿಲ್ಲ :

(೧) ಅದ್ವೈತದರ್ಶನದಲ್ಲಿ ಜೀವನು ಅಜ್ಞಾನಕಲ್ಪಿತ. ಜೀವಕಲ್ಪಕವಾದ ಅಜ್ಞಾನವು ಜೀವನಿಗಿಂತ ಮೊದಲು ಇರಬೇಕು. ಆದ್ದರಿಂದ ಜೀವನು ಅಜ್ಞಾನಕ್ಕೆ ಆಶ್ರಯ ಅಲ್ಲ. ಜೀವನು ಅಜ್ಞಾನಕ್ಕೆ ಆಶ್ರಯನಾಗುವುದಾದರೆ ಅವನೇ ಮೊದಲು ಇರಬೇಕು. ಅವನಲ್ಲಿ ಅಜ್ಞಾನವು ಪ್ರವೇಶಿಸಬೇಕು. ಇದು ನಿಜವಾದರೆ ಜೀವನು ಅಜ್ಞಾನಕಲ್ಪಿತನಲ್ಲ. ಪತ್ನಿಯೇ ಪತಿಯ ಜನನಿಯಲ್ಲ. (ಶ್ಲೋಕ ೮೩).

**ಪ್ರಶ್ನೆ :** ಜೀವನು ಸ್ವಭಾವತಃ ಅನಾದಿ; ಅಜ್ಞಾನಕಲ್ಪಿತನಲ್ಲ?

**ಉತ್ತರ :** ಬ್ರಹ್ಮ ಮತ್ತು ಜೀವ - ಇವರಿಬ್ಬರೂ ಅಕಲ್ಪಿತ- ಅರ್ಥಾತ್ ಸತ್ಯ ಮತ್ತು ಅನಾದಿಯಾಗುವುದರಿಂದ ಇವರ ಭೇದವೂ ಸತ್ಯವೇ ಆಗುವುದು. ಅದ್ವೈತದರ್ಶನದ ಮೂಲತತ್ವಕ್ಕೇ ಭಂಗವಾಗುವುದು.

## ಅವ್ಯವಸ್ಥೆ ಅಥವಾ ಐಕ್ಯಭಂಗ :

ಜೀವಬ್ರಹ್ಮರ ಭೇದವು ಸತ್ಯವಲ್ಲದಿದ್ದರೆ, ಒಬ್ಬನಿಗೆ ಅಜ್ಞಾನವಿದ್ದರೆ ಸರ್ವರೂ ಅಜ್ಞಾನಿಗಳಾಗಬೇಕಾಗುತ್ತದೆ. ಒಬ್ಬನು ದುಃಖಿಯಾದರೆ ಸರ್ವರೂ ದುಃಖಿಯಾಗಬೇಕಾಗುತ್ತದೆ. ಒಬ್ಬನ ಅನುಭವವೇ ಸರ್ವರ ಅನುಭವವಾಗಬೇಕಾಗುತ್ತದೆ. ಇಂತಹ ಅವ್ಯವಸ್ಥೆಯು ಲೋಕದಲ್ಲಿ ಇಲ್ಲ.

ಪ್ರಶ್ನೆ : ಜೀವ-ಬ್ರಹ್ಮರಿಗೆ ಮತ್ತು ಜೀವಾತ್ಮರಿಗೇ ಪರಸ್ಪರ ವ್ಯಾವಹಾರಿಕ ಭೇದವಿದೆ; ಆದ್ದರಿಂದ ಅವ್ಯವಸ್ಥೆಗೆ ಅವಕಾಶವಿಲ್ಲ?

ಉತ್ತರ : ಈ ಪಕ್ಷದಲ್ಲಿ 'ಅಹಮಜ್ಞಃ' - ಇದು ಜೀವನಿಗೆ ಇರುವ ಅಜ್ಞಾನದ ಜ್ಞಾನ. ಆದುದರಿಂದ ಈ ಪ್ರತೀತಿಯು ಬ್ರಹ್ಮನಿಗೆ ಅಜ್ಞಾನವನ್ನು ಸಾಧಿಸುವ

ಪ್ರಮಾಣವಾಗಲಾರದು. ಇದಲ್ಲದೆ ಈ ಪಕ್ಷದಲ್ಲಿ ಜೀವ-ಬ್ರಹ್ಮರ ಐಕ್ಯಸಿದ್ಧಾಂತಕ್ಕೆ ಭಂಗವಾಗಿದೆ.

### ಶ್ರುತಿವಿರೋಧ :

**ಅನಾದಿಮಾಯಯಾ ಸುಪ್ತೋ ಯದಾ ಜೀವಃ ಪ್ರಬುಧ್ಯತೇ ।**
**ಅಜಮನಿದ್ರಮಸ್ವಪ್ನಮದ್ವೈತಂ ಬುಧ್ಯತೇ ಸದಾ ॥**

- ಮಾಂಡೂಕೋಪನಿಷತ್ ೨.೮

ಈ ಉಪನಿಷತ್ ಜೀವನನ್ನು ಅಜ್ಞಾನಿ ಎಂದು, ಬ್ರಹ್ಮನನ್ನು ಅಜ್ಞಾನರಹಿತ ಎಂದು ಹೇಳಿದೆ.

### ಬ್ರಹ್ಮನಲ್ಲಿ ಅಜ್ಞಾನವು ಇರಲಾರದು :

ಬ್ರಹ್ಮವು ಚಿದ್‌ರೂಪ. ಈ ಚಿತ್ ಅಜ್ಞಾನವಿರೋಧಿಯಲ್ಲ; ಆದ್ದರಿಂದ ಚಿದ್‌ರೂಪಬ್ರಹ್ಮನಲ್ಲಿ ಅಜ್ಞಾನವಿದೆ; ಈ ಅಜ್ಞಾನವು ಮನೋವೃತ್ತಿ (ಜ್ಞಾನ)ಯಿಂದ ನಾಶವಾಗುತ್ತದೆ ಎಂದು ಅದ್ವೈತದರ್ಶನವು ಅಂಗೀಕರಿಸಿದೆ. ಇದು ಸರಿಯಲ್ಲ. ಪರಬ್ರಹ್ಮ ಶುದ್ಧಚಿತ್. ಈ ಚಿತ್‌ನ ಶಕ್ತಿ ಹೆಚ್ಚು. ಮನಸ್ಸು ಅವಿದ್ಯಾಕಲ್ಪಿತ. ಆದ್ದರಿಂದ ಇದು ದುರ್ಬಲ. ಆದ್ದರಿಂದಲೇ ಮನೋವೃತ್ತಿಜ್ಞಾನವೂ ದುರ್ಬಲ. ಹೆಚ್ಚು ಶಕ್ತಿಯ ಶುದ್ಧಚಿತ್‌ನಿಂದ ನಾಶವಾಗದ ಅಜ್ಞಾನವು ದುರ್ಬಲಮನೋವೃತ್ತಿಯಿಂದ ನಾಶವಾಗುವುದೇ? ಬಹಳ ಹರಿತವಾದ ಖಡ್ಗದಿಂದ ಛಿನ್ನವಾಗದ ದೇಹವು ಮೊಂಡು ಖಡ್ಗದಿಂದ ನಾಶವಾಗುವುದೇ?

ಮನಸ್‌ಗೆ ಶುದ್ಧಚಿತ್‌ಸಂಬಂಧದಿಂದ ಅರ್ಥಗಳನ್ನು ಪ್ರಕಟಪಡಿಸುವ ಅಪರೋಕ್ಷಜ್ಞಾನಶಕ್ತಿಯು ಉಂಟಾಗುತ್ತದೆ ಎಂದು ಅದ್ವೈತದರ್ಶನವು ಅಂಗೀಕರಿಸಿದೆ. ಆದ್ದರಿಂದ ಚಿತ್‌ಸಂಬಂಧದಿಂದಲೇ ಮನಸ್‌ಗೆ ಅಜ್ಞಾನವನ್ನು ನಾಶಮಾಡುವ ಶಕ್ತಿಯೂ ಇರಬೇಕಾಗುತ್ತದೆ. ಕೇವಲ ಮನಸ್‌ಗೆ ಅಲ್ಲ.

ಚಿತ್ ಸಂಬಂಧವಿಲ್ಲದ ಮನಸ್ಸು ಜಡ. ಅದಕ್ಕೆ ಅರ್ಥಗಳನ್ನು ಪ್ರಕಟಪಡಿಸುವ ಜ್ಞಾನಶಕ್ತಿಯು ಇಲ್ಲ. ಅಜ್ಞಾನವನ್ನು ನಾಶಮಾಡುವ ಶಕ್ತಿಯೂ ಇಲ್ಲ. ಚಿತ್-ಸಂಬಂಧದಿಂದ ಹುಟ್ಟುವ ಮನೋವೃತ್ತಿಗೆ ಅಜ್ಞಾನವನ್ನು ನಾಶಮಾಡುವ ಶಕ್ತಿಯು ಇದ್ದರೆ ಚಿತ್‌ಗೆ ಈ ಶಕ್ತಿಯು ಇರುವುದಿಲ್ಲವೇ? ಭೂತದ ಆವೇಶಕ್ಕೊಳಗಾದವನನ್ನು ಕಂಡರೆ ಹೆದರುವವರಿಗೆ ಭೂತವನ್ನು ಕಂಡರೆ ಹೆದರಿಕೆಯಾಗುವುದಿಲ್ಲವೇ?

ಬ್ರಹ್ಮನು ತನ್ನ ಭ್ರಾಂತಿಗಿಂತ ಮೊದಲೇ ಇರುವ ಜಗತ್ತನ್ನು ನೋಡುತ್ತಾನೆ? ಅಥವಾ ತನ್ನ ಭ್ರಾಂತಿಯಿಂದ ಕಲ್ಪಿತವಾದ ಜಗತ್ತನ್ನು ನೋಡುತ್ತಾನೆ? ಮೊದಲೇ ಇರುವ ಜಗತ್ತನ್ನು ನೋಡುವುದಾದರೆ ಜಗತ್ತು ಅವನ ಭ್ರಾಂತಿಯಿಂದ ಕಲ್ಪಿತವಲ್ಲ. ತನ್ನ ಭ್ರಾಂತಿಯಿಂದ ಕಲ್ಪಿತವಾದ ಜಗತ್ತನ್ನು ನೋಡುವುದಾದರೆ, ಭ್ರಾಂತಿ ಮತ್ತು ಜಗತ್ತು ಬ್ರಹ್ಮನ ಮುಕ್ತಿಯವರೆಗೆ ಇರುವುದರಿಂದ ಇಡೀ ಜಗತ್ತು ಸರ್ವಕಾಲದಲ್ಲೂ ಇರಬೇಕಾಗುತ್ತದೆ. ಚತುರ್ಮುಖಬ್ರಹ್ಮನ ದಿನದ ಕೊನೆಯಲ್ಲಿ ಆಗುತ್ತದೆ ಎಂದು ಶಾಸ್ತ್ರಗಳು ಹೇಳುವ ಪ್ರಲಯವು ಮತ್ತು ಅವನ ನೂರುವರ್ಷದ ಕೊನೆಯಲ್ಲಿ ಆಗುತ್ತದೆ ಎಂದು ಶಾಸ್ತ್ರಗಳು ಹೇಳುವ ಮಹಾಪ್ರಲಯವೂ ಅನುಪಪನ್ನವಾಗಬೇಕಾಗಾದೀತು.

**ಪ್ರಶ್ನೆ : 'ಮಾಯಿನಂ ತು ಮಹೇಶ್ವರಮ್'** - ಈ ಶ್ರುತಿಯು (ಶ್ವೇತಾಶ್ವತರ ೪.೧೦) ಬ್ರಹ್ಮನನ್ನು 'ಮಾಯೀ' - ಮಾಯೆವುಳ್ಳವನು ಎಂದು ಹೇಳುತ್ತದೆ. ಈ ಮಾಯೆಯು ಅಜ್ಞಾನ. ಆದ್ದರಿಂದ ಬ್ರಹ್ಮಾಜ್ಞಾನದಿಂದ ಪ್ರಪಂಚವು ಕಲ್ಪಿತ ಎಂದೇ ಅರ್ಥವಾಗುತ್ತದೆ?

**ಉತ್ತರ :** ಇಲ್ಲ. **'ಮಾಯಾಂ ತು ಪ್ರಕೃತಿಂ ವಿದ್ಯಾತ್...'** ಇದು ಮೇಲೆ ಉದಾಹರಿಸಿದ ಶ್ರುತಿಯ ಪೂರ್ವಭಾಗ. ಇದರಿಂದ ಮಾಯೆ ಎಂದರೆ ಪ್ರಕೃತಿ ಎಂದು ತಿಳಿಯುತ್ತದೆ. ಆದ್ದರಿಂದ ಮಹೇಶ್ವರನು ಮಾಯೀ ಎಂದರೆ ಪ್ರಕೃತಿಯ ಒಡೆಯ ಎಂದು ಅರ್ಥ. ಅಜ್ಞಾನವುಳ್ಳವನು ಎಂದು ಅರ್ಥವಲ್ಲ.

ಈ ವಿಷಯವನ್ನು ಶ್ರೀರಾಜರು ಕಾವ್ಯಮಯವಾಗಿ ಹೇಳಿದ್ದಾರೆ. ಉದಾಹೃತ ಶ್ರುತಿಯು ಹಸು, ನಾಯಿ ಅಲ್ಲ. ಶ್ರುತಿಯ ಬಾಲ (ಪೂರ್ವಭಾಗ)ವನ್ನು ನೋಡಿದರೆ ಇದು ತಿಳಿಯುತ್ತದೆ. ಪೂರ್ವಭಾಗವು ಪರಮಾತ್ಮನಿಗೆ ಅವಿದ್ಯಾ ಎಂಬ ದೋಷವಿದೆ ಎಂಬ ಅರ್ಥಕ್ಕೆ ಆಸ್ಪದವನ್ನು ಕೊಡದೆ, ಪ್ರಕೃತಿಯ ಒಡೆಯ ಎಂಬ ಅರ್ಥಕ್ಕೆ ಆಸ್ಪದವನ್ನು ಕೊಡುತ್ತದೆ. 'ನಿರನಿಷ್ಟೋ, ನಿರವದ್ಯ' ಮೊದಲಾದ ಶ್ರುತಿಗಳ ಅಭಿಪ್ರಾಯಕ್ಕೆ ಅನುಗುಣವಾದ ಈ ಪೂರ್ವಭಾಗವು ಋಜು. ಹಸುವಿನ ಬಾಲದಂತೆ. ಈ ಶ್ರುತಿಗಳ ಅಭಿಪ್ರಾಯಕ್ಕೆ ವಿರುದ್ಧವಾಗಿದ್ದಿದ್ದರೆ ವಕ್ರವಾಗಿ ನಾಯಿಯ ಬಾಲದಂತೆ ಆಗುತ್ತಿತ್ತು. ಹಾಗಿಲ್ಲ. ಆದ್ದರಿಂದ ಸಮಗ್ರವಾಕ್ಯವು ಹಸು. ನಾಯಿ ಅಲ್ಲ. (ಶ್ಲೋಕ ೧೨೨).

ಚಕ್ರವನ್ನು ಉಪಯೋಗಿಸಿ ಮಡಕೆಯನ್ನು ನಿರ್ಮಿಸುವ ಕುಂಬಾರನನ್ನು ಚಕ್ರೀ (ಚಕ್ರವುಳ್ಳವನು) ಎಂದು ಕರೆಯುತ್ತಾರೆ. ಹೀಗೆಯೇ ಸೃಷ್ಟಿಗಾಗಿ (ಮಾಯ) ಪ್ರಕೃತಿಯನ್ನು ಉಪಯೋಗಿಸುವ ಪರಮಾತ್ಮನು 'ಮಾಯೀ'.

ರಾಜನು ಧನದ ಒಡೆಯನಾದುದರಿಂದ, ಧನದ ಚೀಲವನ್ನು ಹೊತ್ತು ಒಯ್ಯದೆ ಕಾಡಿನಲ್ಲಿ ಸಂಚರಿಸುತ್ತಿದ್ದರೂ, ಧನಿಯೇ. ಮಾಯೆಯ ಒಡೆಯನಾದುದರಿಂದ ಪರಮಾತ್ಮನು ಮಾಯೀ. ಮಾಯೆಯು ಅವನಿಗೆ ಅಂಟಿಲ್ಲ.

## ಬ್ರಹ್ಮನ ಅಸಂಗತ್ವ :

**ಪ್ರಶ್ನೆ** : ಬ್ರಹ್ಮನು ಅಸಂಗ ಎಂದು **'ಅಸಂಗೋಹ್ಯಯಂ ಪುರುಷಃ'** - ಈ ಬೃಹದಾರಣ್ಯಕ ಶ್ರುತಿಯು ಹೇಳುತ್ತದೆ. ಅವನು ಸರ್ವಜ್ಞ ಎಂದು 'ಯಃ ಸರ್ವಜ್ಞಃ....' 'ವಿಜ್ಞಾನಮಾನಂದಂ ಬ್ರಹ್ಮ' ಇತ್ಯಾದಿ ಶ್ರುತಿಗಳು ಹೇಳುತ್ತವೆ. ಸರ್ವದ ಜ್ಞಾನವಿದೆಯೆಂದರೆ ಸರ್ವವಿಷಯಗಳ ಸಂಬಂಧವಿದೆ ಎಂದು ಅರ್ಥ. ಅಸಂಗನಿಗೆ ಸಂಗವು ಹೇಗೆ? ಸಂಗವು ಆರೋಪಿತವಾಗಿರಬೇಕು. ಆರೋಪವಾಗಲು ಅಜ್ಞಾನವು ಬೇಕೇಬೇಕು. ಆದ್ದರಿಂದ ಸರ್ವಜ್ಞನಾದುದರಿಂದಲೇ ಬ್ರಹ್ಮನಿಗೆ ಅಜ್ಞಾನವಿದೆ ಎಂದು ಸಿದ್ಧವಾಗುತ್ತದೆ?

**ಉತ್ತರ** : ಇಲ್ಲ. ಬ್ರಹ್ಮ ಸರ್ವತ್ರ ವ್ಯಾಪ್ತ. ಅವನು ಜ್ಞಾನರೂಪ. ಆದ್ದರಿಂದ ಅವನ ಜ್ಞಾನವೂ ಸರ್ವತ್ರವ್ಯಾಪ್ತ. ಆದ್ದರಿಂದ ಅದಕ್ಕೆ ಸ್ವಾಭಾವಿಕವಾಗಿ ಸಕಲ ವಸ್ತುಗಳ ಸಂಗವಿದೆ.

ಸ್ವಾಭಾವಿಕವಾಗಿ ಸಂಗವಿದ್ದರೆ ಅಸಂಗಶ್ರುತಿಗೆ ಏನು ಅರ್ಥ? ಸಂಗವು ಉಪಾಧಿಯಿಂದ ಉಂಟಾಗಿಲ್ಲ ಎಂದು ಅರ್ಥ. ಇದಲ್ಲದೆ, ಅಜ್ಞಾನಸಂಗವನ್ನು ಅಂಗೀಕರಿಸಿದರೂ 'ಅಸಂಗ...' ಶ್ರುತಿಯ ವಿರೋಧವಿದೆ. ಅಜ್ಞಾನಸಂಗವಿದೆ; ಬೇರೆ ಸಂಗವು ಇಲ್ಲ ಎಂದು ಶ್ರುತಿಯ ಅರ್ಥ? ಇಲ್ಲ. 'ನಿರನಿಷ್ಟೋ ನಿರವದ್ಯಃ' - ಈ ಶ್ರುತಿಯು ಬ್ರಹ್ಮನನ್ನು ದೋಷದೂರ ಎಂದಿದೆ. ಅಜ್ಞಾನವು ಮಹಾದೋಷ ಇದು ಇದ್ದರೆ ಶ್ರುತಿಯೇ ತಪ್ಪಾದೀತು. ಆದ್ದರಿಂದ ಅಸಂಗಶ್ರುತಿಯು ಬ್ರಹ್ಮನ ಸರ್ವೇಶ್ವರತ್ವ, ಸರ್ವಕರ್ತೃತ್ವ, ಸರ್ವವ್ಯಾಪಿತ್ವ ಮೊದಲಾದ ಗುಣಗಳಿಗೆ ಪೋಷಕವಾಗುವ ಜಗತ್ ಸಂಬಂಧವನ್ನು ನಿರಾಕರಿಸದೆ, ಅಜ್ಞಾನಾನಾದಿದೋಷ ಸಂಗವನ್ನೇ ನಿರಾಕರಿಸುತ್ತದೆ ಎಂದು ವ್ಯಾಖ್ಯಾನಿಸಬೇಕು.

ಇದಲ್ಲದೆ 'ಅಸಂಗ' ಶ್ರುತಿಯು ಬ್ರಹ್ಮನನ್ನು ಅಸಂಗ ಎಂದು ಪ್ರತಿಪಾದಿಸಬೇಕು. ಆದ್ದರಿಂದ ಈ ಶ್ರುತಿಯು ಪ್ರತಿಪಾದಕ, ಬ್ರಹ್ಮನು ಪ್ರತಿಪಾದ್ಯ. ಅಸಂಗ ಶ್ರುತಿಗೆ ಬ್ರಹ್ಮನೊಂದಿಗೆ ಪ್ರತಿಪಾದಕ-ಪ್ರತಿಪಾದ್ಯ ಸಂಗವು ಅನಿವಾರ್ಯ. ಅಸಂಗ ಶ್ರುತಿಯು ಈ ಸಂಗವನ್ನು ಅಂಗೀಕರಿಸಲೇಬೇಕು. ಇದರಂತೆ ಬ್ರಹ್ಮನಲ್ಲಿ ಗುಣಗಳ ಸಂಬಂಧವನ್ನೂ ಅಂಗೀಕರಿಸಬೇಕು. ಇದರಿಂದ ಶ್ರುತಿಗೇ ಮಂಗಲ, ಎಂದರೆ, ಅದರ ಪ್ರಾಮಾಣ್ಯದ ರಕ್ಷಣೆಯಾಗುವುದು. ಆದ್ದರಿಂದ ಅಸಂಗಶ್ರುತಿಯು ಮಂಗಲಸಂಗಗಳನ್ನು ಅಂಗೀಕರಿಸಿ, ಅಜ್ಞಾನ, ದುಃಖ, ಕರ್ಮಲೇಪ ಮೊದಲಾದ ಅಮಂಗಲಸಂಗಗಳನ್ನು ನಿರಾಕರಿಸುತ್ತದೆ ಎಂದೇ ವ್ಯಾಖ್ಯಾನಿಸಬೇಕು.

ಅಥವಾ ದುರ್ಜನರ ಜೊತೆ ಸ್ನೇಹವನ್ನು ಅಸಂಗಶ್ರುತಿಯು ನಿಷೇಧಿಸುತ್ತದೆ. ದುರ್ಜನರು ಪರಮಾತ್ಮನ ಪ್ರಮಾತೃಗಳಲ್ಲ, ಪರಮಾತ್ಮನು ಅವರಿಗೆ ಪ್ರಮೇಯ ಅಲ್ಲ. ಹೀಗೆ ದುರ್ಜನ ಮತ್ತು ಪರಮಾತ್ಮರಿಗೆ ಪ್ರಮಾತೃ-ಪ್ರಮೇಯ ಸಂಬಂಧವನ್ನು ನಿಷೇಧಿಸುತ್ತದೆ. ಅಸಂಗಶ್ರುತಿಯಿಂದ ಬ್ರಹ್ಮನಿಗೆ ಅಜ್ಞಾನವನ್ನು ಸಾಧಿಸಲು ಹೊರಟವನು ಪ್ರಯೋಗಿಸಿದ ಈ ಶ್ರುತಿಬಾಣವು ಪ್ರಯೋಗಿಸಿದವನ ಎದೆಗೇ ಬಡಿದಿದೆ; ಎಂದರೆ ಉದ್ದೇಶವು ಈಡೇರದೆ ಹೃದಯಾಘಾತವಾಗಿದೆ.

—o—

'ಬ್ರಹ್ಮನಲ್ಲಿ ಸರ್ವಜ್ಞತ್ವವೂ ಇದೆ, ಅಜ್ಞಾನವೂ ಇದೆ' - ಈ ಮಾತು 'ನಾನು ಮೂಕ' ಎಂಬ ಮಾತು ಎಷ್ಟು ವ್ಯಾಹತವೋ ಅಷ್ಟು ವ್ಯಾಹತ. **'ಮಾಯಾಂ ವ್ಯುದಸ್ಯ ಚಿಚ್ಛಕ್ತ್ಯಾ ಕೈವಲ್ಯೇ ಸ್ಥಿತ ಆತ್ಮನಿ'** (೧.೭.೨೩) - ಈ ಭಾಗವತಶ್ಲೋಕವು ಬ್ರಹ್ಮನ ಸ್ವರೂಪವೇ ಆದ ಚಿತ್ ಅಜ್ಞಾನವಿರೋಧಿ ಎಂದು ಹೇಳಿದೆ. ಆದ್ದರಿಂದ ಬ್ರಹ್ಮನಲ್ಲಿ ಅಜ್ಞಾನವಿರಲು ಅವಕಾಶವೇ ಇಲ್ಲ.

'ಸ್ವರೂಪಜ್ಞಾನವು ಅಜ್ಞಾನವಿರೋಧಿ' ಎಂದು ಅದ್ವೈತದರ್ಶನದ 'ತತ್ವಪ್ರದೀಪ' ಎಂಬ ಗ್ರಂಥವು ಹೇಳುತ್ತದೆ.

ಶ್ರೀಮಧ್ವಾಚಾರ್ಯರೂ 'ಅಜ್ಞತಾಖಿಲಸಂವೇತ್ತುಃ ಘಟತ ನ ಕುತಶ್ಚನ' ಎಂದು ತಮ್ಮ ಉಪಾಧಿಖಂಡನ ಎಂಬ ಗ್ರಂಥದಲ್ಲಿ ಹೇಳಿದ್ದಾರೆ.

—o—

ಬ್ರಹ್ಮನು ದೋಷರಹಿತ, ಅಸಂಗ ಎಂದು ಶ್ರುತಿಗಳು ಹೇಳುತ್ತವೆ. ಜೀವಾತ್ಮನಿಗೆ ದೋಷಗಳಿವೆ. ಸಂಗವಿದೆ. ಆದ್ದರಿಂದ ಬ್ರಹ್ಮನೇ ಜೀವ ಎಂಬ ಅದ್ವೈತದರ್ಶನದ ಸಿದ್ಧಾಂತವು ಸರಿಯಲ್ಲ.

ಬ್ರಹ್ಮನಲ್ಲಿ ಅಜ್ಞಾನವು ಇಲ್ಲ ಎಂದು ಪ್ರತಿಪಾದಿಸಲಾಗಿದೆ. ಅಜ್ಞಾನವು ಇಲ್ಲದಿರುವುದರಿಂದ ಅವನಲ್ಲಿ ಜಗತ್ತಿನ ಆರೋಪವೂ ಉಪಪನ್ನವಲ್ಲ. ಅಂಟಿಸಿಕೊಳ್ಳುವ ಸ್ವಭಾವವೇ ಇಲ್ಲದ ಆಕಾಶಕ್ಕೆ ಯಾವ ಕೊಳೆ ಅಂಟುತ್ತದೆ?

—o—

ಭ್ರಾಂತಿಯು ಇರುವ ಕಾಲದಲ್ಲಿ 'ಅಹಂ ನ ಜಾನಾಮಿ' 'ಅಹಮಜ್ಞಃ' ಎಂದು ಜ್ಞಾನವು ಹುಟ್ಟುವುದಿಲ್ಲ. ಬ್ರಹ್ಮನಿಗೆ ಹೀಗೆ ಜ್ಞಾನವು ಇದೆ ಎಂದು ಅದ್ವೈತದರ್ಶನವು ಹೇಳಿದರೆ, ಬ್ರಹ್ಮನಿಗೆ ಭ್ರಾಂತಿಯಿದೆ ಎಂದು ಉಪಪಾದಿಸಲು ಆಗುವುದಿಲ್ಲ.

—o—

## ಅಜ್ಞಾನವು ಜೀವಾತ್ಮನಲ್ಲಿದೆ :

ಬ್ರಹ್ಮನಲ್ಲಿ ಅಜ್ಞಾನವಿಲ್ಲವಾದರೆ ಅದು ಎಲ್ಲಿದೆ? ಅಜ್ಞಾತವಾದ ವಸ್ತುಗಳಲ್ಲಿ ಇದೆಯೇ? ಇಲ್ಲ. ಇದ್ದರೆ, ಯಾವ ವ್ಯಕ್ತಿಗೆ ವಸ್ತುವಿನ ಜ್ಞಾನವು ಆಗುತ್ತದೋ, ಅವನ ಮನೋವೃತ್ತಿಜ್ಞಾನದಿಂದ ವಸ್ತುವಿನಲ್ಲಿದ್ದ ಅಜ್ಞಾನವು ನಾಶವಾಗುವುದರಿಂದ ಆ ವಸ್ತುವು ಎಲ್ಲರಿಗೂ ಕಾಣಬೇಕಾದೀತು. ವಸ್ತುವನ್ನು ಆವರಿಸಿದ ಕತ್ತಲು ದೀಪದಿಂದ ನಾಶವಾದಾಗ ವಸ್ತುವು ಎಲ್ಲರಿಗೂ ಕಾಣಿಸುತ್ತದೆ.

**ಪ್ರಶ್ನೆ :** ಇನ್ನೊಂದು ಅಜ್ಞಾನವು ವಸ್ತುವನ್ನು ಆವರಿಸುತ್ತದೆ, ಆದ್ದರಿಂದ ಎಲ್ಲರಿಗೂ ಕಾಣಿಸುವುದಿಲ್ಲ?

**ಉತ್ತರ :** ಇಲ್ಲ. ಹೀಗೆ ಆದರೆ ವಸ್ತುವು ಯಾರಿಗೂ ಕಾಣಿಸದಿರಬೇಕಾಗುತ್ತದೆ.

ಆದ್ದರಿಂದ ಅಜ್ಞಾನವು ಜೀವಾತ್ಮನಲ್ಲಿ ಇದೆ. ಬೇರೆ ಬೇರೆ ಜೀವಾತ್ಮರಲ್ಲಿ ಅವರವರಲ್ಲಿ ಇರುವ ದೋಷಕ್ಕೆ ಅನುಗುಣವಾಗಿ ಅಜ್ಞಾನವು ಇರುತ್ತದೆ. ಅಜ್ಞಾನದ ಪರಿಹಾರವಾದಾಗ ಪದಾರ್ಥಗಳ ಜ್ಞಾನವೂ ಜೀವಾತ್ಮನಿಗೇ ಆಗುತ್ತದೆ.

'ಅಹಮಜ್ಞಃ' – ಇದು ತನ್ನ ಅಜ್ಞಾನದ ಜ್ಞಾನವಿರುವವನ ಹೇಳಿಕೆ. ಇದನ್ನು ಜೀವಾತ್ಮನು ಹೇಳುತ್ತಾನೆ. ಆದ್ದರಿಂದ ಈ ಪ್ರತ್ಯಕ್ಷವು ಅಜ್ಞಾನವು ಜೀವನಲ್ಲಿದೆ ಎನ್ನಲು ಪ್ರಮಾಣ.

**'ಅನಾದಿ ಮಾಯಯಾ ಸುಪ್ತೋ ಯದಾ ಜೀವಃ ಪ್ರಬುಧ್ಯತೇ' –**

ಮಾಂಡೂಕೋಪನಿಷತ್

ಈ ಶ್ರುತಿಯೂ ಅಜ್ಞಾನವು ಜೀವನಲ್ಲಿದೆ ಎಂದು ಹೇಳುತ್ತದೆ.

'ಅಜ್ಞಾನವು ಜ್ಞಾತೃ ಜೀವನಲ್ಲಿ ಇದೆ, (ಪ್ರತಿಜ್ಞೆ) ಜ್ಞಾನ-ಅಜ್ಞಾನಗಳು ಒಂದೇ ಕಡೆ ಇರುವ ಪದಾರ್ಥಗಳಾದ್ದರಿಂದ, (ಹೇತು) ಸುಖ-ದುಃಖಗಳಂತೆ' (ದೃಷ್ಟಾಂತ) ಈ ಅನುಮಾನ ಪ್ರಮಾಣದಿಂದಲೂ ಅಜ್ಞಾನವು ಜೀವನಲ್ಲಿದೆ ಎಂದು ಸಿದ್ಧವಾಗುತ್ತದೆ.

ಮೇಲೆ ಉದಾಹರಿಸಲ್ಪಟ್ಟಿರುವ ಮಾಂಡೂಕವಾಕ್ಯವು ಹೇಳುವ ಜೀವಾಜ್ಞಾನವು ಸತ್ಯ. ಜೀವಾತ್ಮನ ಸ್ವರೂಪವೇ ಆದ ಜ್ಞಾನ, ಆನಂದ, ಪಾರತಂತ್ರ್ಯಗಳ ಅನುಭವಕ್ಕೆ ಇದು ಪ್ರತಿಬಂಧಕ. 'ನಾನು' - ಎಂದು ಹೇಳಲ್ಪಡುವ ಜೀವಾತ್ಮನ ಜ್ಞಾನಕ್ಕೆ ಪ್ರತಿಬಂಧಕವಲ್ಲ. ಈ ಅಜ್ಞಾನವು ಜೀವಾತ್ಮನ ಸ್ವರೂಪಧರ್ಮಗಳ ಪ್ರಕಾಶಕ್ಕೆ ಪ್ರತಿಬಂಧಕವಾದುದರಿಂದ ಇದಕ್ಕೆ ಜೀವಾಚ್ಛಾದಿಕಾ ಎಂದು ಹೆಸರು. ಇದು ಪ್ರಕೃತಿಯ ಅಂಶ. ಪರಮಾತ್ಮನ ಅನುಗ್ರಹದಿಂದ ಇದರ ನಾಶವಾಗುತ್ತದೆ. ಕಣ್ಣಿನ ಮಲವು ನಾಶವಾಗುವಂತೆ.

ಜೀವಾತ್ಮನಿಗೆ ಪರಮಾತ್ಮನ ಸ್ವರೂಪಧರ್ಮಗಳ ಜ್ಞಾನವು ಆಗದಂತೆ ತಡೆಯುವ ಇನ್ನೊಂದು ಅಜ್ಞಾನವೂ ಜೀವನಲ್ಲಿ ಇದೆ. ಇದು ಪರಮಾಚ್ಛಾದಿಕಾ. ಇದೂ ಪ್ರಕೃತಿಯ ಅಂಶವೇ. ಪರಮಾತ್ಮನ ಅನುಗ್ರಹದಿಂದ ಇದು ಪಕ್ಕಕ್ಕೆ ಸರಿಯುತ್ತದೆ. ಪರದೆಯು ಸರಿಯುವಂತೆ. ಜೀವಾತ್ಮನಲ್ಲಿರುವ ಇವುಗಳನ್ನು ಪರಿಹರಿಸುವ ಪರಮಾತ್ಮನಲ್ಲಿ ಇವುಗಳು ಇಲ್ಲ. ಬಂಧನದಲ್ಲಿಲ್ಲದ ರಾಜನು ಮಾತ್ರ ಬದ್ಧರನ್ನು ಬಿಡುಗಡೆ ಮಾಡಬಲ್ಲನಷ್ಟೇ.

ಅಲ್ಪರು ತಮ್ಮ ದೋಷವನ್ನು ಮರೆಮಾಡಲು ದೋಷವಿಲ್ಲದವರಲ್ಲೂ ದೋಷವಿದೆ ಎಂದು ಹೇಳುತ್ತಾರೆ. (೧೯೬)

—o—

## ಜ್ಞಾನಕರ್ತೃವೇ ಜ್ಞಾನಕರ್ಮ :

(೧) 'ದೇವದತ್ತನು ಗ್ರಾಮಕ್ಕೆ ಹೋಗುತ್ತಾನೆ' - ಈ ವಾಕ್ಯವು ಗಮನಕ್ರಿಯೆ, ಅದರ ಕರ್ತೃ ಮತ್ತು ಕರ್ಮಗಳನ್ನು ಪ್ರಸ್ತಾವಿಸಿದೆ. ದೇವದತ್ತನು ಕರ್ತೃ. ಗ್ರಾಮವು ಕರ್ಮ. ಈ ನಿದರ್ಶನದಿಂದ ಕ್ರಿಯೆಯ ಕರ್ತೃವೇ ಕರ್ಮವಲ್ಲ ಎಂದು ತಿಳಿಯುತ್ತದೆ. ಇದಕ್ಕೆ ಅನುಗುಣವಾಗಿ 'ಪರಸಮವೇತಾ ಯಾ ಕ್ರಿಯಾ ತತ್ಫಲಶಾಲಿ

ಯತ್ ತತ್ ಕರ್ಮ' ಎಂದು ಭಾಟ್ಟರು ಕರ್ಮಲಕ್ಷಣವನ್ನು ಹೇಳಿದ್ದಾರೆ. ಮೇಲೆ ಹೇಳಿದ ಉದಾಹರಣೆಯಲ್ಲಿ ದೇವದತ್ತ ಮತ್ತು ಗ್ರಾಮಗಳ ಸಂಯೋಗವು ಗಮನಕ್ರಿಯೆಯ ಫಲ. ಈ ಸಂಯೋಗವು ದೇವದತ್ತ ಮತ್ತು ಗ್ರಾಮ-ಇವೆರಡರಲ್ಲೂ ಇದೆ. ದೇವದತ್ತನಲ್ಲಿರುವ ಈ ಸಂಯೋಗವು ಪರನಲ್ಲಿರುವ ಗಮನಕ್ರಿಯೆಯ ಫಲವಲ್ಲ. ಗ್ರಾಮದಲ್ಲಿರುವ ಈ ಸಂಯೋಗವು ಪರನಲ್ಲಿರುವ (ದೇವದತ್ತನಲ್ಲಿರುವ) ಗಮನಕ್ರಿಯೆಯ ಫಲ.

ಈ ಲಕ್ಷಣದ ಪ್ರಕಾರ ಬ್ರಹ್ಮನಲ್ಲಿರುವ ಜ್ಞಾನ ಎಂಬ ಕ್ರಿಯೆಗೆ ಬ್ರಹ್ಮನು ಕರ್ಮವಲ್ಲ, ಕರ್ತೃ.

ಈ ಚಿಂತನೆಯನ್ನು ಆಧರಿಸಿ ಅದ್ವೈತದರ್ಶನವು ಬ್ರಹ್ಮಕರ್ತೃಕಜ್ಞಾನಕ್ಕೆ ಬ್ರಹ್ಮನು ವಿಷಯ ಅಲ್ಲ, ಅರ್ಥಾತ್ ಬ್ರಹ್ಮನಿಗೆ ತನ್ನ ಜ್ಞಾನವಿಲ್ಲ ಎಂದು ಹೇಳಿದೆ.

ಇದನ್ನು ಯುಕ್ತಿಮಲ್ಲಿಕಾಕಾರರು ಹೀಗೆ ವಿಮರ್ಶಿಸಿದ್ದಾರೆ (ಶ್ಲೋಕ ೨೦೧, ೨೦೨, ೨೦೩) : 'ಮಾಮ್ ಅಹಂ ನ ಜಾನಾಮಿ', 'ಮಾಮ್ ಅಹಂ ಜಾನಾಮಿ' ಎಂದು ಎಲ್ಲರ ಅನುಭವವಿದೆ. ಈ ಅನುಭವದಿಂದ ಆತ್ಮನೇ ಜ್ಞಾನಕ್ರಿಯೆಯ ಕರ್ತೃ ಮತ್ತು ಕರ್ಮ ಎಂದು ಸಿದ್ಧವಾಗಿದೆ. ಈ ಆತ್ಮನಲ್ಲಿ ಭಾಟ್ಟರು ಹೇಳುವ ಕರ್ಮಲಕ್ಷಣವು ಇಲ್ಲ. ಈ ಕಾರಣದಿಂದ ಅನುಭವಸಿದ್ಧವಾದ ಪ್ರಮೇಯವನ್ನು ತ್ಯಜಿಸುವುದು ಯುಕ್ತವೇ? ಅಬಾಧಿತ ಅನುಭವಕ್ಕಿಂತ ಹೆಚ್ಚು ಬಲಶಾಲಿಯಾದ ಪ್ರಮಾಣವಿಲ್ಲ. ಅನುಭವಸಿದ್ಧ ಪ್ರಮೇಯಕ್ಕೆ ಅನುಗುಣವಾಗಿ ಬೇರೆ ಕರ್ಮಲಕ್ಷಣವನ್ನು ಹೇಳಬೇಕು. ನರಲಕ್ಷಣವನ್ನು ಹೊಂದಿಲ್ಲದ ಕಿಂಪುರುಷರಿಲ್ಲವೇ? ಕಿನ್ನರರಿಲ್ಲವೇ? ಕುದುರೆಯ ಮುಖವನ್ನು ಹೋಲುವ ಮುಖವುಳ್ಳ ಪುರುಷನು ಕಿಂಪುರುಷ. ಪಕ್ಷಿಯ ಆಕಾರದ ದೇಹ ಮತ್ತು ಮನುಷ್ಯರ ಮುಖದಂತೆ ಮುಖವುಳ್ಳವನು ಕಿನ್ನರ. ಇವರಲ್ಲಿ ಮನುಷ್ಯ ಲಕ್ಷಣಗಳಿಲ್ಲ ಎಂಬ ಕಾರಣದಿಂದ ಈ ಪ್ರಾಣಿವರ್ಗವೇ ಇಲ್ಲ ಎಂದು ಹೇಳುವುದೇ?

(೨) ಯಾವ ವಸ್ತುವಿನ ಜ್ಞಾನವು ಹುಟ್ಟುತ್ತದೋ ಅದು ಆ ಜ್ಞಾನಕ್ಕೆ ವಿಷಯ ಎಂದು ಲೋಕವು ತಿಳಿದಿದೆ. ಜ್ಞಾನವಿಷಯಕ್ಕೆ ಜ್ಞಾನಕರ್ಮ ಎಂದೂ, ಜ್ಞೇಯ ಎಂದೂ ಹೆಸರು. ವಸ್ತುವು ಜ್ಞಾನಕ್ಕೆ ವಿಷಯವಾದರೆ ಜ್ಞಾನ ಮತ್ತು ವಸ್ತುಗಳಿಗೆ ಸಂಬಂಧವಿರಬೇಕು. ಏನು ಸಂಬಂಧ? ಸಂಯೋಗ ಅಲ್ಲ. ಜ್ಞಾನದಿಂದ ದೂರ ಇರುವ ವಸ್ತುಗಳು ಅದಕ್ಕೆ ವಿಷಯವಾಗುವುದರಿಂದ. ನ್ಯಾಯ-ವೈಶೇಷಕ

ದರ್ಶನವು ಅಂಗೀಕರಿಸಿರುವ ಸಮವಾಯವೂ ಅಲ್ಲ. ಯುತಸಿದ್ಧವಾದುದರಿಂದ, ಅಂದರೆ, ಪರಸ್ಪರ ದೂರ ಇರುವುದರಿಂದ. ಆದ್ದರಿಂದ ಜ್ಞಾನ ಮತ್ತು ಜ್ಞೇಯಗಳಿಗೆ ಸಂಬಂಧವೇ ಇಲ್ಲ. ಆದ್ದರಿಂದ ವಸ್ತುಗಳು ಜ್ಞಾನಕ್ಕೆ ಕರ್ಮವಾಗಲು ಅವಕಾಶವೇ ಇಲ್ಲ. 'ಕರ್ಮಕ್ಕೆ' ಲಕ್ಷಣವನ್ನು ಹೇಳಲು ಶಕ್ಯವಿಲ್ಲ. ಆದ್ದರಿಂದ ವಸ್ತುಗಳು ಜ್ಞಾನದಲ್ಲಿ ಆರೋಪಿತ ಎಂದೇ ಪರಿಗಣಿಸಬೇಕು. ಬೇರೆ ಮಾರ್ಗವೇ ಇಲ್ಲ. - ಹೀಗೆ ಅದ್ವೈತದರ್ಶನವು ಪ್ರತಿಪಾದಿಸಿದೆ. ಹೀಗೆ 'ಕರ್ಮ'ಕ್ಕೆ ಲಕ್ಷಣವೇ ಇಲ್ಲ ಎಂದು ಹೇಳುವ ದರ್ಶನವು ಭಾಟ್ಟರ ಕರ್ಮಲಕ್ಷಣಕ್ಕೆ ಅನುಗುಣವಾಗಿ ಜ್ಞಾತೃ ಆತ್ಮನು ಜ್ಞಾನದ ಕರ್ಮವಲ್ಲ ಎಂದು ಹೇಳುವುದು ಸರ್ವಥಾ ಅಸಮಂಜಸ (ಶ್ಲೋಕ ೨೦೪).

(೩) ಭಾಟ್ಟದರ್ಶನವು ಹೇಳಿರುವ ಕರ್ಮಲಕ್ಷಣದಲ್ಲೂ ಅನುಪಪತ್ತಿಗಳು ಇವೆ ಎಂದು ೨೦೫-೨೦೮ ಪದ್ಯಗಳಲ್ಲಿ ವಿವರಿಸಿದ್ದಾರೆ.

(೪) ಜ್ಞಾನ ಮತ್ತು ಜ್ಞೇಯಗಳಿಗೆ ವಿಷಯ-ವಿಷಯಿಭಾವವೇ ಸಂಬಂಧ. ಜ್ಞೇಯವು ವಿಷಯ. ಜ್ಞಾನವು ವಿಷಯಿ. ಅವುಗಳಲ್ಲಿ ವಿಷಯತ್ವ ಮತ್ತು ವಿಷಯಿತ್ವಗಳು ಇವೆ. ಜ್ಞಾನನಿರೂಪಿತ ವಿಷಯತ್ವ ಮತ್ತು ಜ್ಞೇಯ ನಿರೂಪಿತ ವಿಷಯಿತ್ವಗಳು ಈ ವಿಷಯ-ವಿಷಯಿಭಾವ (೨೦೮-೨೦೯).

(೫) 'ಮಾಮ್ ಅಹಂ ಜಾನಾಮಿ' ಈ ಉಕ್ತಿಯ ಮೂಲವಾದ ಅನುಭವವು ಜ್ಞಾತೃ ಆತ್ಮನೇ ಜ್ಞಾನದ ಕರ್ಮ ಎಂದು ತಿಳಿಸುತ್ತಿದೆ. ಈ ಅನುಭವಸಿದ್ಧವಾದ ಕರ್ತೃನಿಷ್ಠ ಕರ್ಮತ್ವವನ್ನು ಲಕ್ಷಣದ ಅನುಪಪತ್ತಿಯಿಂದ ಬಿಡುವುದು ಸರಿಯಲ್ಲ. ಉಪಯುಕ್ತವಾದ ಹಸು ಲಭಿಸಿದಾಗ ಕಟ್ಟಲು ಹಗ್ಗವಿಲ್ಲ ಎಂಬ ಕಾರಣದಿಂದ ಅದನ್ನು ಯಾರು ತ್ಯಜಿಸುತ್ತಾರೆ?

(೬) ನಹಿ ತೇ ಭಗವನ್ ವ್ಯಕ್ತಿಂ ವಿದುರ್ದೇವಾ ನ ಮಾನವಾಃ ।
ಸ್ವಯಮೇವಾತ್ಮನಾತ್ಮಾನಂ ವೇತ್ಥ ತ್ವಂ ಪುರುಷೋತ್ತಮ ॥

- ಭ.ಗೀ. ೧೦.೧೪

ಈ ಗೀತಾವಚನವು ಪರಮಾತ್ಮನೇ ಪರಮಾತ್ಮನನ್ನು ತಿಳಿದಿದ್ದಾನೆ ಎಂದು ಹೇಳಿದೆ. ಜ್ಞಾತೃವು ಜ್ಞಾನಕರ್ಮವಲ್ಲ ಎಂಬ ಅಭಿಪ್ರಾಯವು ಈ ಗೀತಾವಚನ ವಿರೋಧಿ.

(೭) ಅದ್ವೈತದರ್ಶನವು 'ಸ್ವಪ್ರಕಾಶ' ಶಬ್ದಕ್ಕೆ 'ಸ್ವಾವೇದ್ಯ' ಎಂದು ಅರ್ಥವನ್ನು ಹೇಳುತ್ತದೆ. ತನ್ನನ್ನು ತಾನು ತಿಳಿಯುವುದಿಲ್ಲ ಎಂದು ಇದರ ಅರ್ಥ. ಇದು 'ಸ್ವಪ್ರಕಾಶ' ಶಬ್ದದ ಅರ್ಥವಲ್ಲ. ವಿರುದ್ಧವಾದ ಅರ್ಥ. ಸ್ವಪ್ರಕಾಶಶಬ್ದಕ್ಕೆ ಅದರ ಅರ್ಥವನ್ನು ತ್ಯಜಿಸಿ 'ತನ್ನಿಂದ ತಾನು ವೇದ್ಯನಲ್ಲ' ಎಂಬ ಅರ್ಥವನ್ನು ಹೇಳಿದರೆ ಶಬ್ದ ಮತ್ತು ಅರ್ಥಗಳಿಗೆ ವಿಯೋಗವನ್ನುಂಟು ಮಾಡಿದಂತೆ. ಈ ವಿಯೋಗಕಾರಿಯು, ವಾಕ್ ಮತ್ತು ಅರ್ಥಗಳು ದಂಪತಿಗಳಾದ್ದರಿಂದ, ದಂಪತಿಗಳ ವಿಯೋಗಕಾರಿ (೨೩೫). ಆದ್ದರಿಂದ ತನ್ನನ್ನೇ ವಿಷಯೀಕರಿಸುವ ಪ್ರಕಾಶವು ಯಾರಿಗೆ ಯಾವಾಗಲೂ ಇದೆಯೋ ಅವನಿಗೆ ಸ್ವಪ್ರಕಾಶ ಎಂದು ಹೆಸರು.

ಕರ್ತೃ-ಕರ್ಮಗಳು ಒಂದೇ ಆಗಿರುವಂತೆ ಕ್ರಿಯಾ-ಕರ್ತೃಗಳೂ ಒಂದೇ ಆಗಿರುವ ನಿದರ್ಶನವೂ ಇದೆ. 'ಸುಖಮಹಂ ಜಾನಾಮಿ' ಎಂದು ಅನುಭವದ ಕಥನ. ಈ ಅನುಭವದಲ್ಲಿ ಸುಖಾನುಭವವೂ ಮತ್ತು ಇದರ ಜ್ಞಾತೃವೂ ಆತ್ಮವೇ. ಸುಖಾನುಭವವು ಕ್ರಿಯೆ, ಹೀಗೆಯೇ ಕ್ರಿಯಾ-ಕರ್ಮಗಳೂ ಒಂದೇ ಆಗಬಹುದು. ಆತ್ಮನು ಜ್ಞಾನರೂಪ. ಜ್ಞಾನವು ಕ್ರಿಯೆ. ಆತ್ಮನು ಜ್ಞಾನಕರ್ಮ.

(೮) ಅದ್ವೈತದರ್ಶನದ ಪ್ರಕಾರ ಮುಕ್ತನು ತಿಳಿಯಬಹುದಾದ ಪರವಸ್ತುಗಳು ಇಲ್ಲವೇ ಇಲ್ಲ. ತನ್ನ ಜ್ಞಾನವೂ ಅವನಿಗೆ ಇಲ್ಲದಿದ್ದರೆ ಸ್ವಜ್ಞಾನ-ಪರಜ್ಞಾನಗಳಿಲ್ಲದ ಅವನು ಜಡ ಆಗಬೇಕಾಗುತ್ತದೆ. (೨೩೯).

## ತತ್ತ್ವವಾದಿಗಳ ಬ್ರಹ್ಮ ಮತ್ತು ಅದ್ವೈತವಾದಿಗಳ ಬ್ರಹ್ಮ :

ಯಾವ ಬ್ರಹ್ಮವು ನಿತ್ಯಶುದ್ಧವೋ ಅದೇ ಪರಬ್ರಹ್ಮ. ತತ್ತ್ವವಾದಿಗಳ ಬ್ರಹ್ಮನು ನಿತ್ಯಮುಕ್ತ, ಆದ್ದರಿಂದ ಅವನು ನಿತ್ಯಶುದ್ಧ. ಬಂಧವೇ ದೋಷಗಳ ಮೂಲ. ಬಂಧವಿಲ್ಲದವನಲ್ಲಿ (ನಿತ್ಯಮುಕ್ತನಲ್ಲಿ) ದೋಷಕ್ಕೆ ಅವಕಾಶವೇ ಇಲ್ಲ.

ಅದ್ವೈತದರ್ಶನದ ಬ್ರಹ್ಮನಿಗೆ ಅವಿದ್ಯೆ ಎಂಬ ದೊಡ್ಡ ದೋಷವಿದೆ. ಯಾವಾಗಲೂ ದೇಹದಿಂದ ದೇಹಕ್ಕೆ ಹೋಗುತ್ತಿದ್ದಾನೆ. ಈ ಗಮನವೇ ಸಂಸಾರ. ಸಂಸಾರದ ಕೆಸರಿನಿಂದ ಮಲಿನನಾದ ಬ್ರಹ್ಮನು ಶುದ್ಧನೇ? ಸಂಸಾರಿಚೇತನನು ಜೀವಚೈತನ್ಯವೇ. ಬ್ರಹ್ಮ ಅಲ್ಲವೇ ಅಲ್ಲ.

ಪ್ರಶ್ನೆ : ಬಂಧವು ಮಿಥ್ಯಾ. ಆದ್ದರಿಂದ ಜೀವನೇ ಬ್ರಹ್ಮ. ಅದು ಶುದ್ಧ?

**ಉತ್ತರ :** ಇಲ್ಲ. **'ದ್ವಾಸುಪರ್ಣಾ ಸಯುಜಾ ಸಖಾಯಾ....'** ಈ ಆಥರ್ವಣ ಶ್ರುತಿಯು ಎಲ್ಲರ ದೇಹದಲ್ಲಿ ಉಣ್ಣುವ (ಅಪೂರ್ಣ) ಮತ್ತು ಉಣ್ಣದ (ಪೂರ್ಣ), ಚೇತನಗಳು ವಾಸಿಸಿವೆ ಎಂದು ಹೇಳಿದೆ. ಆದ್ದರಿಂದ ಜೀವನೇ ಬ್ರಹ್ಮ ಅಲ್ಲ. ಬಂಧವು ಮಿಥ್ಯಾ ಆದರೆ ಸಂಸಾರವೇ ಇಲ್ಲ. ಪ್ರಪಂಚವೂ ಇಲ್ಲ.

**ಪ್ರಶ್ನೆ :** ಬಂಧ, ಪ್ರಪಂಚ- ಇವುಗಳು ವ್ಯಾವಹಾರಿಕ; ಬ್ರಹ್ಮಜ್ಞಾನದಿಂದ ಇವುಗಳು ಬಾಧ್ಯವಾಗುತ್ತವೆ?

**ಉತ್ತರ :** ಇರುವ ವಸ್ತುಗಳಿಗೆ ಬಾಧವು ಉಪಪನ್ನವಲ್ಲ. ಪ್ರಪಂಚಕ್ಕೆ ಬ್ರಹ್ಮಜ್ಞಾನದಿಂದ ಬಾಧ ಎಂದರೆ ಅದು ಅವಿದ್ಯಾಕಲ್ಪಿತ ಎಂದೇ ಅರ್ಥ. ಅಂತತಃ ಇಲ್ಲ ಎಂದೇ ಅರ್ಥ.

ಆದ್ದರಿಂದ ಶಾಸ್ತ್ರಗಳು ಹೇಳುವ ಬದ್ಧ-ಮುಕ್ತವ್ಯವಸ್ಥೆಯು ಉಪಪನ್ನವಾಗಲು ಬದ್ಧಚೇತನನಿಂದ ಭಿನ್ನನಾದ ನಿತ್ಯಮುಕ್ತನು ಇರಲೇಬೇಕು.

'ಸ್ಥಿತ್ಯದನಾಭ್ಯಾಂ ಚ' (೧.೩.೭) ಮತ್ತು 'ಗುಹಾಂ ಪ್ರವಿಷ್ಟಾವಾತ್ಮನೌ ಹಿ ತದ್ದರ್ಶನಾತ್' (೧.೨.೧೧) ಈ ಎರಡು ಬ್ರಹ್ಮಸೂತ್ರಗಳು ಜೀವ ಮತ್ತು ಪರಮಾತ್ಮ ಎಂಬ ಎರಡು ಭಿನ್ನಚೇತನಗಳನ್ನೇ ಹೇಳುತ್ತವೆ. ಹೃದಯಗುಹೆಯಲ್ಲಿ ಜೀವ ಮತ್ತು ಪರಮಾತ್ಮಾ ಎಂಬ ಎರಡು ಚೇತನಗಳಿವೆ ಎಂದು ಅದ್ವೈತಭಾಷ್ಯವೂ ವ್ಯಾಖ್ಯಾನಿಸಿದೆ. (ಶ್ಲೋಕ ೨೫೧-೨೬೦).

—o—

(೧) ಭಾಗವತಪುರಾಣದ ಹನ್ನೊಂದನೆಯ ಸ್ಕಂಧದಲ್ಲಿ (೧೧.೧೧.೧,೪/ ಯು.ಮ ೨೬೧-೨೬೬) 'ಸತ್ವ-ರಜಸ್-ತಮೋಗುಣಗಳು ಜೀವನಿಗೆ ಮಾತ್ರ ಇವೆ, ನನಗೆ ಇಲ್ಲ' ಎಂದು ಶ್ರೀಕೃಷ್ಣನು ಉದ್ಧವನಿಗೆ ಹೇಳಿ, ಈ ಕಾರಣದಿಂದ ಜೀವನು ಬದ್ಧನೂ ಆಗಿರುತ್ತಾನೆ, ಮುಕ್ತನೂ ಆಗುತ್ತಾನೆ, ತನಗೆ ತ್ರಿಗುಣಗಳು ಇಲ್ಲದಿರುವುದರಿಂದ ಬಂಧವೂ ಇಲ್ಲ, ಮುಕ್ತಿಯೂ ಇಲ್ಲ ಎಂದು ಹೇಳಿದ್ದಾನೆ. ಈ ವೈಲಕ್ಷಣ್ಯದ ಕಾರಣದಿಂದ ಜೀವನೇ ಬ್ರಹ್ಮನಲ್ಲ. (೨೬೧-೨೬೯).

(೨) **'ನಿತ್ಯಬದ್ಧೋ ನಿತ್ಯಮುಕ್ತ ಏಕ ಏವೇತಿ ಮೇ ಮತಿಃ'** (ಭಾಗವತ ೧೧.೧೦.೩೭) ಎಂದು ಉದ್ಧವನು ತನ್ನ ಶಂಕೆಯನ್ನು ವ್ಯಕ್ತಪಡಿಸಿದ್ದಾನೆ. ಉತ್ತರವನ್ನು ಹೇಳುವ ಶ್ರೀಕೃಷ್ಣನು ಬದ್ಧ ಮತ್ತು ಮುಕ್ತರ ಏಕತ್ವವನ್ನೇ ಹೇಳುವನೇ? (೨೭೩-೨೭೪).

(೩) ಭಾಗವತ ೧೧.೧೧.೭ರಲ್ಲಿ ಪರಮಾತ್ಮನ ಪೂರ್ಣಜ್ಞಾನವಿಲ್ಲದವನು ಮತ್ತು ಅವನಿಗೆ ಅಧೀನನಾದವನು ನಿತ್ಯಬದ್ಧ, ಪೂರ್ಣಜ್ಞಾನಸ್ವರೂಪನಾದವನು ನಿತ್ಯಮುಕ್ತ ಎಂದು ಹೇಳಲಾಗಿದೆ. ೧೧.೧೧.೧ರಲ್ಲಿ ಶ್ರೀಕೃಷ್ಣನು '**ನ ಮೇ ಮೋಕ್ಷೋ ನ ಬಂಧನಮ್**' ಎಂದು ಹೇಳಿದ್ದಾನೆ. ಬಂಧನದಿಂದ ಬಿಡುಗಡೆಯನ್ನು ಹೊಂದಿದವನು ಮುಕ್ತ. ಇಂತಹ ಜೀವಾತ್ಮರು ಮುಕ್ತರು. ಇವರು ನಿತ್ಯಮುಕ್ತರಲ್ಲ. ಪರಮಾತ್ಮನಿಗೆ ಯಾವ ಕಾಲದಲ್ಲೂ ಬಂಧನವಿರಲಿಲ್ಲ. ಆದ್ದರಿಂದ ಅವನಿಗೆ ಬಿಡುಗಡೆ ಎಂಬ ವಿಚಾರವೇ ಅಸಮಂಜಸ. ಆದ್ದರಿಂದ ಅವನು ನಿತ್ಯಮುಕ್ತ. ಮುಕ್ತಜೀವಾತ್ಮರಿಗೂ ಪರಮಾತ್ಮನ ಪೂರ್ಣಜ್ಞಾನವು ಇರುವುದಿಲ್ಲ ಮತ್ತು ಇವರು ಮುಕ್ತಿಯಲ್ಲೂ ಪರಮಾತ್ಮನಿಗೆ ಅಧೀನರಾಗಿರುತ್ತಾರೆ. ಆದ್ದರಿಂದ ಸಕಲಜೀವರೂ – ಮುಕ್ತ, ಅಮುಕ್ತ-ನಿತ್ಯಬದ್ಧರು, ಪರಮಾತ್ಮನೊಬ್ಬನೇ ನಿತ್ಯಮುಕ್ತ. ಬಂಧವು ಮಿಥ್ಯಾ ಆದರೆ ಶ್ರೀಕೃಷ್ಣನು ಉದ್ಧವನಿಗೆ ಹೇಳಿದ ಈ ವಿಷಯಗಳೆಲ್ಲವೂ ಅಸಮಂಜಸವಾಗುತ್ತದೆ. ಆದ್ದರಿಂದ ಬಂಧವು ಮಿಥ್ಯಾ ಅಲ್ಲ. ನಿತ್ಯಮುಕ್ತನೇ ನಿತ್ಯಬದ್ಧನಲ್ಲ. (೨೭೫-೨೮೩).

(೪) '**ಬದ್ಧೋ ಮುಕ್ತ ಇತಿ ಹ್ಯಾಖ್ಯಾ ಗುಣತೋ ಮೇ ನ ವಸ್ತುತಃ**' ಎಂದು (ಭಾಗವತ ೧೧.೧೧.೧) ಶ್ರೀಕೃಷ್ಣನು ಹೇಳಿದ್ದಾನೆ. 'ಮೇ ಗುಣತಃ ಮೇ ಬದ್ಧ ಇತಿ ಆಖ್ಯಾ' ಎಂದು ಶ್ರೀವಾದಿರಾಜರು ಅರ್ಥವನ್ನು ಗ್ರಹಿಸಿದ್ದಾರೆ. 'ನನ್ನ ಸ್ವಾತಂತ್ರ್ಯ (ಗುಣ)ದಿಂದ ನನಗೆ ಬದ್ಧ ಎಂದು ಹೆಸರಿದೆ ಎಂದು ಬುಧರು ಹೇಳುತ್ತಾರೆ' ಎಂದು ವಿವರಿಸಿದ್ದಾರೆ (೨೮೪). ಎಲ್ಲವೂ ಪರಮಾತ್ಮನಿಗೆ ಅಧೀನ ಎಂದು ವೇದಾಂತಶಾಸ್ತ್ರದ ನಿರ್ಣಯ. ಆದ್ದರಿಂದ ಜೀವಾತ್ಮರ ಬಂಧನವೂ ಪರಮಾತ್ಮನಿಗೆ ಅಧೀನ. ಧನವು ಎಲ್ಲೇ ಇದ್ದರೂ ಅದರ ಸ್ವಾಮಿಯನ್ನು ಧನೀ ಎಂದು ಹೇಳುತ್ತಾರೆ. ಪರಮಾತ್ಮನು ಜೀವಾತ್ಮನಲ್ಲಿರುವ ಬಂಧನದ ಸ್ವಾಮಿ. ಆದ್ದರಿಂದ ಅವನು ಬದ್ಧ. ಈ ಅರ್ಥದ ಬೆಳಕಿನಲ್ಲಿ ಯಾರು ನಿತ್ಯಬದ್ಧನೋ ಅವನೇ ನಿತ್ಯಮುಕ್ತನೂ ಆಗಬಹುದು. ಈ ಎರಡು ಪದಗಳ ಅರ್ಥಗಳು ಪರಮಾತ್ಮನ ಸ್ವಾತಂತ್ರ್ಯವನ್ನು ಮನವರಿಕೆ ಮಾಡಿಕೊಡುತ್ತವೆ. ಸ್ವಾತಂತ್ರ್ಯವು ಅವನ ಪೂರ್ಣತೆಯನ್ನು ಮನವರಿಕೆ ಮಾಡಿಕೊಡುತ್ತದೆ. ಅದ್ವೈತದರ್ಶನದ ಬ್ರಹ್ಮನಲ್ಲಿ ಈ ಮಹಿಮೆಗೆ ಅವಕಾಶವೇ ಇಲ್ಲ.

(೫) ಭಾಗವತ ೧೧.೧೧.೧ ರಲ್ಲಿ ಇರುವ 'ವಸ್ತುತಃ' ಪದದಲ್ಲಿರುವ ವಸ್ತುಶಬ್ದಕ್ಕೆ, ಪ್ರಕೃತ, ಬಂಧನ ಎಂಬ ವಸ್ತು ಎಂದು ಅರ್ಥ. ಈ ಬಂಧನವು ಜೀವಾತ್ಮನಿಗೆ ಇದೆ.

ಆದ್ದರಿಂದ ಇವನು ವಸ್ತುತಃ ಬದ್ಧ. ಪರಮಾತ್ಮನಲ್ಲಿ ಬಂಧನವು ಇಲ್ಲದಿರುವುದರಿಂದ ಅವನು ವಸ್ತುತಃ ಬದ್ಧನಲ್ಲ. ಆದ್ದರಿಂದ ಶ್ರೀರಾಜರು 'ಮೇ ವಸ್ತುತಃ ಬದ್ಧ ಇತಿ ಆಖ್ಯಾ ನ್' ಎಂದು ಗ್ರಹಿಸಿದ್ದಾರೆ. ಆದ್ದರಿಂದ ೧೧.೧೧.೧ನೇ ಪದ್ಯದ ಪೂರ್ವಾರ್ಧವು ಜೀವಬ್ರಹ್ಮರ ಭೇದವನ್ನೇ ತಿಳಿಸುತ್ತದೆ.

ತತ್ವವಾದಿಗಳ ಬ್ರಹ್ಮ ಶ್ರೀಕೃಷ್ಣನ ಉಪದೇಶಕ್ಕೆ ಅನುಗುಣ. ಅದ್ವೈತದರ್ಶನದ ಬ್ರಹ್ಮ ಅನನುಗುಣ. (೨೮೪-೨೮೬).

೨೯೨ನೇ ಶ್ಲೋಕದ ಭಾವವಿಲಾಸಿನೀಯಲ್ಲಿ ಶ್ರೀಸುರೋತ್ತಮತೀರ್ಥರು ಭಾಗವತ ೧೧.೧೧.೧ನೇ ಶ್ಲೋಕಕ್ಕೆ ೧೨ ಅರ್ಥಗಳನ್ನು ಹೇಳಿದ್ದಾರೆ.

(೬) ಚತುರ್ಮುಖಬ್ರಹ್ಮದೇವರು ತ್ರಿಗುಣಬದ್ಧರು. ಅವರು ಗುಣಬದ್ಧನಲ್ಲದ ಶ್ರೀಕೃಷ್ಣನನ್ನು ಪೂರ್ಣವಾಗಿ ತಿಳಿದಿಲ್ಲ. ಹೀಗೆ ಅಕ್ರೂರನು ಶ್ರೀಕೃಷ್ಣನನ್ನು ಸ್ತುತಿಸಿದ್ದಾನೆ. ಹೀಗೆಯೇ ತ್ರಿಗುಣಬದ್ಧರಾದ ಜೀವಸಮುದಾಯವು ಕರ್ಮದ ದಾರಿಯಲ್ಲಿ ಅಲೆಯುತ್ತಾರೆ ಎಂದೂ ಸ್ತುತಿಸಿದ್ದಾನೆ (ಭಾಗವತ ೧೦.೩೮.೪, ೧೨, ೨೪).

ಹೀಗೆಯೇ ಇಂದ್ರನೂ ಸ್ತುತಿಸಿದ್ದಾನೆ (ಭಾಗವತ ೧೦.೨೫.೪) ಭಾಗವತದಲ್ಲಿ ಶ್ರೀಕೃಷ್ಣನು ಉದ್ಧವನಿಗೆ ಹೀಗೆಯೇ ಉಪದೇಶಿದ್ದಾನೆ (೧೧.೧೧.೬,೭).

ಜೀವಸಮುದಾಯಕ್ಕೆ ತ್ರಿಗುಣಬಂಧನವಿದೆ, ಆದ್ದರಿಂದಲೇ ಕರ್ಮಬಂಧನವಿದೆ; ತನಗೆ ಇಲ್ಲ ಎಂದು ಶ್ರೀಕೃಷ್ಣನು ಅರ್ಜುನನಿಗೆ ಉಪದೇಶಿಸಿದ್ದಾನೆ. (ಭಗವದ್ಗೀತೆ ೯.೯ ಮತ್ತು ೧೪.೫). ಈ ಸ್ತುತಿ ಮತ್ತು ಉಪದೇಶಗಳು ಪರಬ್ರಹ್ಮನು ನಿತ್ಯಮುಕ್ತ ಮತ್ತು ಜೀವಸಮುದಾಯವು ಬದ್ಧ ಎಂದು ಸುಸ್ಪಷ್ಟವಾಗಿ ತಿಳಿಸುತ್ತಿವೆ. (೨೯೩-೩೦೧).

(೭) ಮುಕ್ತಜೀವರೂ ಪರಮಾತ್ಮನಿಗೆ ಅಧೀನರೇ. ಈ ಅಧೀನತ್ವವೇ ಬಂಧ. ಮುಕ್ತಜೀವರಿಗೆ ಪರಮಾತ್ಮನ ಮೇಲೆ ಭಕ್ತಿಯಿದೆ. ಇದು ಭಕ್ತಿಬಂಧ. ಈ ಕಾರಣಗಳಿಂದ ಮುಕ್ತರೂ ಬದ್ಧರೇ. ಇವರು ಸಂಸಾರಸ್ಥಿತಿಯಲ್ಲಿ ಪ್ರಕೃತಿ ಬದ್ಧರು. ಮುಕ್ತಿಯಲ್ಲಿ ಅಸ್ವಾತಂತ್ರ್ಯ ಮತ್ತು ಭಕ್ತಿಬದ್ಧರು. ಆದ್ದರಿಂದ ನಿತ್ಯಬದ್ಧರು. ಪರಮಾತ್ಮನು ನಿತ್ಯಮುಕ್ತ. ಆದ್ದರಿಂದ ಜೀವಾತ್ಮ-ಪರಮಾತ್ಮರ ಭೇದವೇ ಶಾಶ್ವತ.

ಬ್ರಹ್ಮವು ನಿತ್ಯ, ಆದ್ದರಿಂದ ಅದು ಮಿಥ್ಯಾ ಅಲ್ಲ ಎಂದು ಅದ್ವೈತದರ್ಶನದ ಅಭಿಪ್ರಾಯವಿದೆ. ಜೀವಾತ್ಮ-ಪರಮಾತ್ಮರ ಭೇದವೂ ನಿತ್ಯವೇ. ಆದ್ದರಿಂದ ಈ ಭೇದವೂ ಮಿಥ್ಯಾ ಅಲ್ಲ (೩೦೫-೩೦೮).

## ಪರಬ್ರಹ್ಮನು ದೋಷಶಬಲ ಅಲ್ಲ :

ಅದ್ವೈತಚಿಂತಕರು ಪರಬ್ರಹ್ಮನನ್ನು ಮಾಯಾಶಬಲ ಎಂದು ಹೇಳುತ್ತಾರೆ. ಮಾಯಾ ಎಂದರೆ ಏನು? (೧) ಅಜ್ಞಾನ? **'ಮಾಯಾಂ ವ್ಯುದಸ್ಯ ಚಿಚ್ಛಕ್ತ್ಯಾ ಕೈವಲ್ಯೇ ಸ್ಥಿತ ಆತ್ಮನಿ'** - ಈ ಭಾಗವತ (೧.೭.೨೩) ವಾಕ್ಯವು ಬ್ರಹ್ಮನಲ್ಲಿ ಅಜ್ಞಾನವಿಲ್ಲ ಎಂದು ಹೇಳಿದೆ. ಅಜ್ಞಾನವು ಜೀವನಲ್ಲಿದೆ ಎಂದು ಅದ್ವೈತದರ್ಶನವು ಹೇಳಿದೆ.

(೨) ತ್ರಿಗುಣಾತ್ಮಕ ಪ್ರಕೃತಿ? **'ಸತ್ವಂ ರಜಸ್ತಮ ಇತಿ ಗುಣಾ ಜೀವಸ್ಯ ನೈವ ಮೇ'** - ಈ ಭಾಗವತವಾಕ್ಯವು ಬ್ರಹ್ಮನಲ್ಲಿ ತ್ರಿಗುಣವಿಲ್ಲ ಎಂದು ಹೇಳಿದೆ.

ಆದ್ದರಿಂದ ದೋಷ ಎಂದು ಪರಿಗಣಿಸಲ್ಪಡುವ ಮಾಯೆಯು ಬ್ರಹ್ಮನಲ್ಲಿ ಇಲ್ಲ.

—o—

ಶ್ರೀಹರಿಯ ಇಚ್ಛಾ, ಶಕ್ತಿ, ತೇಜಸ್- ಇವುಗಳನ್ನು ಮಾಯಾ ಎಂದು ಪುರಾಣಗಳು ಹೇಳಿವೆ.

(೧) **ಮಹಾಮಾಯೇತ್ಯವಿದ್ಯೇತಿ ನಿಯತಿರ್ಮೋಹಿನೀತಿ ಚ ।**
**ಪ್ರಕೃತಿರ್ವಾಸನೇತ್ಯೇವಂ ತವೇಚ್ಛಾನಂತ ಕಥ್ಯತೇ ॥**

ಈ ಪುರಾಣವಚನದಿಂದ ಪರಮಾತ್ಮನ ಇಚ್ಛೆಗೆ 'ಮಾಯಾ' ಎಂದು ಹೆಸರು ಇದೆ ಎಂದು ತಿಳಿಯುತ್ತದೆ.

'ಏಕಸ್ತ್ವಮೇವ ಭಗವನ್ನಿದಮಾತ್ಮಶಕ್ತ್ಯಾ ಮಾಯಾಖ್ಯಯೋರುಗುಣಯಾ..'

- ಭಾಗವತ ೪.೧೦.೭

**'ವೈಷ್ಣವಂ ತೇಜ ಆಸಾದ್ಯ ಸಮಶಾಮ್ಯದ್‌ಭೃಗೂದ್ವಹ ।'**

- ಭಾಗವತ ೧.೮.೧೮'

ಈ ವಚನದಿಂದ ಪರಮಾತ್ಮನ 'ತೇಜಸ್'ಗೆ 'ಮಾಯಾ' ಎಂಬ ಹೆಸರಿದೆ ಎಂದು ತಿಳಿಯುತ್ತದೆ.

ಈ ಮಾಯೆಯು ಪರಮಾತ್ಮನಲ್ಲಿ ಇದೆ. ಅಂದರೆ, ತನ್ನ ಇಚ್ಛೆಯಂತೆ ವರ್ತನೆ, ಸರ್ವಶಕ್ತಿ ಮತ್ತು ಅಪರಿಮಿತ ತೇಜಸ್‌ಗಳು ಅವನಲ್ಲಿ ಇವೆ ಎಂದು ತಿಳಿಯುತ್ತದೆ. ಮಾಯಾಮಯ ಎಂದರೆ ಈ ಮೂರು ಪೂರ್ಣವಾಗಿವೆ ಎಂದು ಅರ್ಥ. ಈ ಪೂರ್ಣತೆಯು ಅವನ ಮಹಿಮೆ, ದೋಷವಲ್ಲ.

—o—

**ಮಾಯಾಂ ತು ಪ್ರಕೃತಿಂ ವಿದ್ಯಾತ್ ಮಾಯಿನಂ ತು ಮಹೇಶ್ವರಮ್ ॥**

-ಶ್ವೇತಾಶ್ವರ ಉಪನಿಷತ್ ೪.೧೦ (ಯು.ಮ. ೩೩೦)

ಈ ಶ್ರುತಿಯು ಜಡಪ್ರಕೃತಿಯನ್ನು 'ಮಾಯಾ' ಎಂದು ಹೇಳಿದೆ.ಸೃಷ್ಟಿಯ ಆರಂಭದಲ್ಲಿ ಪರಬ್ರಹ್ಮನು ಈ ಮಾಯೆಯನ್ನು ನಾನಾ ಪರಿಣಾಮಗಳಿಗೆ ಒಳಪಡಿಸಿ ವಿಶ್ವಸೃಷ್ಟಿಯನ್ನು ಮಾಡುತ್ತಾನೆ. ಇದು ಜಗತ್ತಿನ ಉಪಾದಾನಕಾರಣ. ಮುಕ್ತಪ್ರದೇಶದಲ್ಲೂ ಇದೆ. ಅಮುಕ್ತಪ್ರದೇಶದಲ್ಲೂ ಇದೆ. ಇದು ಭ್ರಾಂತಿಜನಕವಲ್ಲ. ಆದ್ದರಿಂದ ಇದು, ಶುದ್ಧ, ಶುಭ ಎಂದು ಪರಿಗಣಿಸಲ್ಪಟ್ಟಿದೆ. ಇದು ಅತಿಸೂಕ್ಷ್ಮವಾದ ಕಣಗಳ ರೂಪದಲ್ಲಿದೆ. ಇದು ಶ್ರೀಹರಿಗೆ ಅಧೀನ. ಆದ್ದರಿಂದ ಇದು ಹರಿಯ ದೋಷವಲ್ಲ. ಚಿನ್ನದ ಆಭರಣಗಳನ್ನು ತಯಾರಿಸುವವನ ಕೈ ಚಿನ್ನದ ಕೈ ಅಲ್ಲ. ಅವನ ಕೈಗೆ ಚಿನ್ನದ ಲೇಪವೂ ಆಗುವುದಿಲ್ಲ. ನೇಕಾರನ ಶರೀರವು ತಂತುಮಯ ಅಲ್ಲ. ಶ್ರೀಹರಿಗೆ ಅಪಾಕೃತವಾದ ಮಹಾಕಾಯವಿದೆ. ಈ ಮಹಾಕಾಯದ ಒಂದು ರೋಮಕೂಪದಲ್ಲಿ ಇಡೀ ಪ್ರಾಕೃತಬ್ರಹ್ಮಾಂಡವು ಹಿಡಿಸುತ್ತದೆ. (ಯು.ಮ. ೩೩೦-೩೩೫)

ಶ್ರೀಕೃಷ್ಣನು ಭಗವದ್ಗೀತೆಯಲ್ಲಿ ತಾನು ಪ್ರಕೃತಿಯ ಅಧ್ಯಕ್ಷ (೭.೪, ೯.೧೦) ಎಂದು ಹೇಳಿದ್ದಾನೆ. ಪ್ರಕೃತಿಯ ನಿಯಾಮಕ ಎಂದು ಈ ಮಾತಿನ ಅಭಿಪ್ರಾಯ ಎಂದು ಶ್ರೀಸುರೋತ್ತಮರು ವ್ಯಾಖ್ಯಾನಿಸಿದ್ದಾರೆ. ಆದ್ದರಿಂದ ಪ್ರಕೃತಿಯ ಲೇಪ ಅಥವಾ ಪ್ರಭಾವ ಶ್ರೀಕೃಷ್ಣನ ಮೇಲೆ ಇಲ್ಲವೇ ಇಲ್ಲ.

**'ಆದಿತ್ಯವರ್ಣಂ ತಮಸಃ ಪರಸ್ತಾತ್'** (ಯಜುರ್ವೇದೀಯ ಪುರುಷಸೂಕ್ತ) - ಈ ಶ್ರುತಿಯು ಪರಮಾತ್ಮನಿಗೆ ಪ್ರಕೃತಿಸ್ಪರ್ಶವಿಲ್ಲ ಎಂದು ಹೇಳಿದೆ. ಕೃಷ್ಣಾವತಾರದ ಕ್ಷಣಗಳಲ್ಲಿ ತಾನು ನೋಡಿದ ರೂಪವನ್ನು ಸ್ತುತಿಸಿದ ವಸುದೇವನು

**ವಿದಿತೋಽಸಿ ಭವಾನ್ ಸಾಕ್ಷಾತ್ ಪುರುಷಃ ಪ್ರಕೃತೇಃ ಪರಃ ।**
**ಕೇವಲಾನುಭವಾನಂದಸ್ವರೂಪಸ್ಸರ್ವಬುದ್ಧಿದೃಕ್ ॥**

ಎಂದು ಹೇಳಿದ್ದಾನೆ. ಪರಮಾತ್ಮನು ಅಪ್ರಾಕೃತ, ಶುದ್ಧಜ್ಞಾನಾನಂದಸ್ವರೂಪ ಎಂದು ವಸುದೇವನಿಗೆ ಕಾಣಿಸಿದೆ.

ಪರಮಾತ್ಮನು ಜಗತ್ತಿನ ಉಪಾದಾನಕಾರಣವಾದ ಮಾಯೆಯ ಸ್ಪರ್ಶ-ವುಳ್ಳವನಲ್ಲ ಎಂದು ಮೇಲಿನ ವಿವರಣೆಗಳಿಂದ ತಿಳಿಯುತ್ತದೆ.

—o—

ಭ್ರಾಂತಿಜನಕವಾದ ಮಾಯೆಯು ಪರಮಾತ್ಮನಿಗೆ ಇಲ್ಲ ಎಂದು ಹೇಳುವ ಅವಶ್ಯಕತೆಯೇ ಇಲ್ಲ; ಇಲ್ಲ ಎಂದು ಭಾಗವತದಲ್ಲಿರುವ ಚತುರ್ಮುಖಬ್ರಹ್ಮಕೃತ ಸ್ತುತಿಯೂ ಹೇಳುತ್ತದೆ.

ಪರಮಾತ್ಮನ ವಾಸುದೇವರೂಪದ ಪತ್ನಿ ಮಾಯಾ. ದುರ್ಗಾದೇವಿಗೂ ಮಾಯಾ ಎಂದು ಹೆಸರು. (ಭಾಗವತ ೧೦.೩.೧೧.೧೩/೧೦.೫.೧೩) ಈ ಮಾಯೆಯು ಪರಮಾತ್ಮನ ಸೇವಕಳು. ಅವಳ ಮೂಲಕವೇ ಪರಮಾತ್ಮನು ಪ್ರಪಂಚವನ್ನು ಸೃಷ್ಟಿಸುತ್ತಾನೆ. ಸೇವಕಳಾದ ಮಾಯೆಯ ಪ್ರಭು ಆದ್ದರಿಂದ ಪರಮಾತ್ಮನು ಮಾಯೀ, ಧನದ ಪ್ರಭುವು ಧನೀ.

**ಪ್ರಶ್ನೆ :** ಪರಬ್ರಹ್ಮನು ಸೃಷ್ಟ್ಯಾದಿಕರ್ತೃ ಎಂದು 'ಯತೋ ವಾ ಇಮಾನಿ ಭೂತಾನಿ ಜಾಯಂತೇ, ಯೇನ ಜಾತಾನಿ ಜೀವಂತಿ, ಯತ್ ಪ್ರಯಂತಿ ಅಭಿಸಂವಿಶಂತಿ' (ತೈತ್ತಿರೀಯ ಉಪನಿಷದ್ ಬ್ರಹ್ಮವಲ್ಲಿ) ಮೊದಲಾದ ಶ್ರುತಿಗಳು ಹೇಳುತ್ತವೆ.

ಕರ್ತೃ ಎಂದರೆ ಕ್ರಿಯಾಶೀಲ. ಬ್ರಹ್ಮನು ಕರ್ತೃ ಆದರೆ ಅವನಲ್ಲಿ ಕ್ರಿಯಾವೇಶವು ಇರಬೇಕಾಗುತ್ತದೆ. 'ನಿಷ್ಕಲಂ ನಿಷ್ಕ್ರಿಯಂ....' (ಬೃಹದಾರಣ್ಯಕ..) ಈ ಶ್ರುತಿಯು ಬ್ರಹ್ಮನಲ್ಲಿ ಕ್ರಿಯಾ ಇಲ್ಲ ಎಂದು ಹೇಳಿದೆ. ಆದ್ದರಿಂದ ಅವನಲ್ಲಿ ದೋಷವೇ ಇಲ್ಲ (ಕ್ವ ಅಸ್ಯದೋಷಿತಾ-೩೭೬) ಎಂಬ ವಿಚಾರವು ಸರಿಯಲ್ಲ?

**ಉತ್ತರ :** ಬ್ರಹ್ಮನಲ್ಲಿ ಕ್ರಿಯಾವೇಶವು ದೋಷ ಎನ್ನುವವರ ಪ್ರಕಾರ ಅವನ ಜ್ಞಾನರೂಪನೂ ಆಗಬಾರದು. ಜ್ಞಾನ (ಜ್ಞಪ್ತಿ)ವೂ ಕ್ರಿಯೆಯೇ. 'ನಿಷ್ಕಲಂ ನಿಷ್ಕ್ರಿಯಂ...' ಶ್ರುತಿಯು ಇದನ್ನೂ ನಿಷೇಧಿಸುತ್ತದೆ. ಈ ಶ್ರುತಿಯು ಪಕ್ಷಪಾತಿಯಲ್ಲ.

'ನಿಷ್ಕ್ರಿಯಂ ತ್ವಿತಿ ವೇದಸ್ಯ ಪಕ್ಷಪಾತೋ ನ ವಿದ್ಯತೇ ।
ಕ್ರಿಯಾಮಾತ್ರನಿಷೇಧಿತ್ವಾದ್ ದ್ವಯಂ ಚ ಪ್ರತಿಷೇಧತಿ ॥' ಯು.ಮ.೩೭೮

**ಪ್ರಶ್ನೆ :** 'ಸತ್ಯಂ ಜ್ಞಾನಮನಂತಂ ಬ್ರಹ್ಮ' – ಈ ಶ್ರುತಿಯು ಬ್ರಹ್ಮನು ಜ್ಞಾನಸ್ವರೂಪ ಎಂದು ಹೇಳಿದೆ. ಆದ್ದರಿಂದ 'ನಿಷ್ಕಲಂ ನಿಷ್ಕ್ರಿಯಂ....' – ಈ ಶ್ರುತಿಯು ಜ್ಞಾನಕ್ರಿಯೆಯಯನ್ನು ನಿಷೇಧಿಸುವುದಿಲ್ಲ?

**ಉತ್ತರ : ಪರಾಸ್ಯ ಶಕ್ತಿರ್ವಿವಿಧೈವ ಶ್ರೂಯತೇ ಸ್ವಾಭಾವಿಕೀ ಜ್ಞಾನಬಲಕ್ರಿಯಾ ಚ'** – ಈ ಶ್ರುತಿಯು ಬ್ರಹ್ಮನಲ್ಲಿ ಜ್ಞಾನ-ಬಲ-ಕ್ರಿಯೆಗಳು ಇವೆ ಎಂದು ಹೇಳಿದೆ. 'ನಿಷ್ಕಲ-ನಿಷ್ಕ್ರಿಯಂ...' – ಈ ಶ್ರುತಿಯು 'ಪರಾಸ್ಯ...' ಈ ಶ್ರುತಿಗೆ ವಿರುದ್ಧವಾದುದನ್ನು ಹೇಳುವುದಿಲ್ಲ. ಶ್ರುತಿಯು ತನ್ನ ಕುಲದವರೊಂದಿಗೆ ಕಲಹ ಮಾಡುವುದಿಲ್ಲ (ಸ್ವಗೋತ್ರಕಲಹಾಕ್ಷಮಾ ಶ್ರುತಿಃ-೩೭೯). ಆದ್ದರಿಂದ 'ನಿಷ್ಕಲಂ..' ಶ್ರುತಿಯು ಪರಮಾತ್ಮನಲ್ಲಿ ಪುಣ್ಯ, ಪಾಪ- ಈ ಎರಡು ಕ್ರಿಯೆಗಳನ್ನು ಮಾತ್ರ ನಿಷೇಧಿಸುತ್ತದೆ. ಸರ್ವಕ್ರಿಯೆಗಳನ್ನು ನಿಷೇಧಿಸುವುದಿಲ್ಲ. ಆದ್ದರಿಂದ ಪರಮಾತ್ಮನ ಜಗತ್ಕರ್ತೃತ್ವಕ್ಕೆ ಏನೂ ಬಾಧಕವಿಲ್ಲ.

**'ಅಶಬ್ದಮಸ್ಪರ್ಶರೂಪಮವ್ಯಯಂ ತಥಾ ರಸಂ ನಿತ್ಯಮಗಂಧವಚ್ಚ ಯತ್'** (ಕಾಠಕ....) ಈ ಶ್ರುತಿಯು ಪ್ರಾಕೃತಶಬ್ದ, ಸ್ಪರ್ಶ, ರೂಪ ಮೊದಲಾದವುಗಳು ಬ್ರಹ್ಮನಲ್ಲಿ ಇಲ್ಲ ಎಂದು ಹೇಳುತ್ತವೆ ಎಂದು ತಿಳಿಯಬೇಕು. ಇಲ್ಲದಿದ್ದರೆ ಅಪ್ರಾಕೃತ ರೂಪ ಮೊದಲಾದವುಗಳನ್ನು ಹೇಳುವ 'ಯದಾ ಪಶ್ಯಃ ಪಶ್ಯತೇ ರುಗ್ಮವರ್ಣಂ ಕರ್ತಾರಮೀಶಂ ಪುರುಷಂ ಬ್ರಹ್ಮಯೋನಿಮ್' (ಆಥರ್ವಣ...) 'ಆದಿತ್ಯವರ್ಣಂ ತಮಸಃ ಪರಸ್ತಾತ್' (ಯಜುರ್ವೇದೀಯ ಪುರುಷಸೂಕ್ತ) ಈ ಶ್ರುತಿಗಳ ವಿರೋಧವುಂಟಾಗುತ್ತದೆ. ರೂಪವಿರುವ ಚೇತನ-ಅಚೇತನಗಳಲ್ಲಿ ಸ್ಪರ್ಶವೂ ಇರುತ್ತದೆ. ಆಕೃತಿಯೂ ಇರುತ್ತದೆ. ಆದ್ದರಿಂದ ಪರಮಾತ್ಮನು **'ವಿಶ್ವತಶ್ಚಕ್ಷುರ್ವಿಶ್ವತೋ ಮುಖ ಏವಚ । ವಿಶ್ವತೋ ಬಾಹುರೀಶೋಽಸೌ ವಿಶ್ವತಃ ಪಾತ್ ಪರಃ ಪ್ರಭುಃ ॥'** (ಯು.ಮ. ೩೯೫)

ಶರೀರವಿರುವ ಚೇತನಗಳಿಗೆ ದುಃಖವಿದೆ; ಆದ್ದರಿಂದ ಶರೀರವಿರುವ ಪರಮಾತ್ಮನಿಗೂ ದುಃಖವು ಇರಬೇಕಾಗುತ್ತದೆ? ಇಲ್ಲ. ಅವನ ಶರೀರ ಅಪ್ರಾಕೃತ. ಪ್ರಾಕೃತಶರೀರವಿದ್ದವರಿಗೆ ಮಾತ್ರ ದುಃಖವಿರುತ್ತದೆ. ಮನುಷ್ಯಾನ್ನವನ್ನು ಉಣ್ಣುವವರಿಗೆ ಅಗ್ನಿಯು ಮಂದವಾಗುತ್ತದೆ. ದೇವಾನ್ನ (ಅಮೃತ)ವನ್ನು ಉಣ್ಣವವರು ಅಮರರಾಗುತ್ತಾರೆ.

ವಿಲಕ್ಷಣಶರೀರತ್ವಾನ್ನ ತದ್ದುಃಖಾದಿಕಾರಣಮ್ ।
ಅಜೀರ್ಣತಾ ಮನುಷ್ಯಾನ್ನಾದ್ದೇವಾನ್ನಾದಜರೋಽಮರಃ ॥ (ಯು.ಮ.೪೯೨)

'ಅಶಬ್ದಮಸ್ಪರ್ಶಮರೂಪಮ್...' ಈ ಶ್ರುತಿಯಲ್ಲಿರುವ 'ಅಶಬ್ದ' ಶಬ್ದಕ್ಕೆ ಬ್ರಹ್ಮನು ಶಬ್ದಪ್ರತಿಪಾದ್ಯನೇ ಅಲ್ಲ ಎಂದು ಅರ್ಥವಲ್ಲ. ಹೀಗಾದರೆ ಈ ಶ್ರುತಿಯಿಂದಲೂ ಪ್ರತಿಪಾದ್ಯನಲ್ಲ; ಆದ್ದರಿಂದ ಶಬ್ದಪ್ರತಿಪಾದ್ಯನಲ್ಲ ಎಂಬ ಪ್ರಮೇಯವೇ ಸಿದ್ಧವಾಗುವುದಿಲ್ಲ. ಆದ್ದರಿಂದ ಅಶಬ್ದ ಎಂದರೆ ದುರಾಗಮಗಳಿಂದ ಪ್ರತಿಪಾದ್ಯನಲ್ಲ ಎಂದು ಅರ್ಥ.

## ಮುಕ್ತಜೀವನ ದೇಹ :

ಮುಕ್ತಜೀವನಿಗೆ ತನ್ನ ಸ್ವರೂಪದ ಅಭಿವ್ಯಕ್ತಿಯಾಗುತ್ತದೆ ಎಂದು ಛಾಂದೋಗ್ಯೋಪನಿಷತ್ತು (೮.೩.೪) ಮತ್ತು ಭಾಗವತವು (೨.೧೦.೬) ಹೇಳಿವೆ. ಈ ರೂಪದಿಂದ ಮುಕ್ತನು ನಾನಾವಿಹಾರಗಳನ್ನು ಮಾಡುತ್ತಾನೆ ಎಂದು ಛಾಂದೋಗ್ಯವು ಹೇಳಿದೆ. ವಿಹಾರಸಾಧನವಾದ ಈ ರೂಪವೇ ದೇಹ.

**'ಯತ್ರತ್ವಸ್ಯ ಸರ್ವಮಾತ್ಮೈವಾಭೂತ್ ತತ್ ಕೇನ ಕಂ ಪಶ್ಯೇತ್...'** ಈ ಬೃಹದಾರಣ್ಯಕವಾಕ್ಯವು ಮುಕ್ತಾತ್ಮನಿಗೆ ದೇಹ, ಇಂದ್ರಿಯಗಳು ಇಲ್ಲ ಎಂದು ಹೇಳುವಂತೆ ಕಾಣುತ್ತದೆ. ಶ್ರುತಿಯು ಸ್ವಗೋತ್ರಕಲಹವನ್ನು ಮಾಡುವುದಿಲ್ಲ ಎಂದು ಯುಕ್ತಿಮಲ್ಲಿಕಾರರು ಹೇಳಿದ್ದಾರೆ (೩೭೯). ಛಾಂದೋಗ್ಯವಾಕ್ಯವು ಹೇಳುವ ವಿಹಾರವು ದೇಹವಿಲ್ಲದೆ ಆಗುವುದಿಲ್ಲವಾದ್ದರಿಂದ ಬೃಹದಾರಣ್ಯಕವಾಕ್ಯವನ್ನು ಛಾಂದೋಗ್ಯವಾಕ್ಯಕ್ಕೆ ವಿರೋಧವಾಗದಂತೆ ವ್ಯಾಖ್ಯಾನಿಸಬೇಕು. ಹೀಗೆ ವ್ಯಾಖ್ಯಾನಿಸಿದರೆ ದೇಹವಿಲ್ಲದೆ ಆತ್ಮನು ಏನನ್ನೂ ನೋಡಲಾರ, ಆಘ್ರಾಣಿಸಲಾರ; ಅವನು ದರ್ಶನ ಇತ್ಯಾದಿಗಳನ್ನು ಮಾಡುತ್ತಾನೆ, ಆದ್ದರಿಂದ ಅವನಿಗೆ ದೇಹವಿದೆ ಎಂದು ಅರ್ಥವು ತಿಳಿಯುತ್ತದೆ. ಹೀಗೆ ಅವಿರುದ್ಧ ಅರ್ಥವನ್ನು ಕಾಣದಿದ್ದರೆ ಮುಕ್ತರ ಕಾಮಭೋಗವನ್ನು, ಕಾಮರೂಪಗಳನ್ನು, ಸಾಮಗಾನವನ್ನು ಹೇಳುವ ಶ್ರುತಿವಾಕ್ಯಗಳು ಅರ್ಥಹೀನವವಾಗುತ್ತವೆ. ಅದ್ವೈತದರ್ಶನವು ಹೇಳುವ ಅರ್ಥಗಳು ಮುಕ್ತಿಯನ್ನು ಶೂನ್ಯವಾಗಿಸುತ್ತವೆ.

ಮೇಷಗಳು ಹೊಡೆದಾಡಲಿ ಎಂದು ನರಿಯು ಬಯಸುತ್ತದೆ. ನರಿಗೆ ಅವುಗಳ ಶರೀರದಿಂದ ಹರಿಯುವ ರಕ್ತವನ್ನು ಕುಡಿಯುವ ಆಸೆ. ಮೇಷಗಳು

ಬೆಳೆಯಲಿ, ಅವುಗಳ ಸಂತತಿಯೂ ಬೆಳೆಯಲಿ ಎಂದು ಅವುಗಳನ್ನು ಸಾಕುವವರ ಆಸೆ.

ಶ್ರುತಿಗಳಿಗೆ ಪರಸ್ಪರವಿರೋಧವು ಅದ್ವೈತದರ್ಶನಕ್ಕೆ ಅನುಕೂಲ. ಆದ್ದರಿಂದ ವಿರೋಧವನ್ನೇ ಆ ದರ್ಶನವು ಬಯಸುತ್ತದೆ. ಶ್ರುತಿಗಳ ಅವಿರೋಧದಿಂದ ಪರಮಾತ್ಮನ ಮಹಾಮಹಿಮೆಯ ಜ್ಞಾನವು, ಅದಕ್ಕೆ ಅನುಗುಣವಾದ ಬೇರೆ ಪ್ರಮೇಯಗಳ ಜ್ಞಾನವು ಆಗುತ್ತದೆ, ಆದ್ದರಿಂದ ಅವುಗಳಿಗೆ ಅವಿರೋಧವನ್ನು ಶ್ರೀಮಧ್ವಾಚಾರ್ಯರು ನೋಡಿ, ಪ್ರತಿಪಾದಿಸಿದ್ದಾರೆ. ತತ್ವವಾದವು ಶ್ರುತಿಪೋಷಕ. ಅದ್ವೈತದರ್ಶನವು ಶ್ರುತಿಭಂಜಕ.

ಮುಕ್ತರಿಗೆ ಚಿದಾನಂದಮಯದೇಹವು ಇರುವುದರಿಂದಲೇ, ಚೇತನವನ್ನು ಆವರಿಸಿರುವ ಈ ಅಪ್ರಾಕೃತ ದೇಹವನ್ನು ಹೋಲುವ, ಜಡಲಿಂಗ (ದೇಹ)ವನ್ನು ದೇಹ ಎಂದು ಕರೆಯಲಾಗಿದೆ.

'ಯಮೇವೈಷ ವೃಣುತೇ ತೇನ ಲಭ್ಯಸ್ತಸ್ಯೈಷ ಆತ್ಮಾ ವಿವೃಣುತೇ ತನೂಂಸ್ವಾಮ್'

– ಕಠೋಪನಿಷತ್

ಪರಮಾತ್ಮನು ಯಾವ ಸಾಧಕನ ಮೇಲೆ ಪ್ರಸನ್ನನಾಗುತ್ತಾನೋ ಆ ಸಾಧಕನಿಗೆ ತನ್ನ ತನುವನ್ನು ತೋರಿಸುತ್ತಾನೆ ಮತ್ತು ಅವನ ತನುವನ್ನೂ ತೋರಿಸುತ್ತಾನೆ ಎಂದು ಈ ಶ್ರುತಿಯು ಅರ್ಥ.

ಈ ಶ್ರುತಿಯು ಹೇಳುವ 'ತನು' ಶರೀರವೇ, ಬರೀ ಸ್ವರೂಪವಲ್ಲ. ಘಟಮೊದಲಾದವುಗಳ ಸ್ವರೂಪವನ್ನು ದೇಹ (ತನು) ಎಂದು ಪ್ರಾಜ್ಞರು ಹೇಳುವುದಿಲ್ಲ.

'ಸ್ವಾಮ್ ತನೂಮ್' ಎಂದು ಶ್ರುತಿಯು ಹೇಳಿದೆ. 'ಸ್ವರೂಪವೇ ಆದ ಶರೀರವನ್ನು' ಎಂದು ಅರ್ಥ. ಪ್ರಸನ್ನನಾದ ಪರಮಾತ್ಮನು ಜಡದೇಹವನ್ನು ತೋರಿಸುವನೇ? ಜಡದೇಹದ ಪ್ರದರ್ಶನವು ಮಹಾಕರುಣೆಯ ಫಲವೇ? ಆದ್ದರಿಂದ ಸ್ವರೂಪಶರೀರವನ್ನು ತೋರಿಸುತ್ತಾನೆ ಎಂದು ಅರ್ಥ.

ಈ ಶ್ರುತಿಯಿಂದ ಪರಮಾತ್ಮ ಮತ್ತು ಜೀವಾತ್ಮರಿಗೆ ಸ್ವರೂಪಶರೀರವಿದೆ ಎಂದು ಸಿದ್ಧವಾಗುತ್ತದೆ.

ಈ ಸ್ವರೂಪಶರೀರವು ಜನ್ಮ, ಜರಾ, ರೋಗ ಮೊದಲಾದ ಕ್ಲೇಶಗಳನ್ನು ಉಂಟುಮಾಡುವುದಿಲ್ಲ. ಛಾಂದೋಗ್ಯೋಪನಿಷತ್ತು, ಭಾಗವತಪುರಾಣಗಳು ಹೇಳುವಂತಹ ವಿವಿಧ ಭೋಗಗಳನ್ನು ಉಂಟುಮಾಡಿ ಮಹೋತ್ಸಾಹವನ್ನೇ ಉಂಟುಮಾಡುತ್ತವೆ. ಆದ್ದರಿಂದ ಪರಮಾತ್ಮ ಮತ್ತು ಜೀವಾತ್ಮರಿಗೆ ಸ್ವರೂಪಶರೀರವು ದೋಷವಲ್ಲ.

ಪರಮಾತ್ಮನ ಶರೀರಕ್ಕೆ ಆಕಾರವಿದೆ, ಅದು ಸತ್ಯ. ಅದು ಸರ್ವವ್ಯಾಪಿ. ಅರ್ಜುನನು ದಿವ್ಯದೃಷ್ಟಿಯಿಂದ ಆಕಾರವನ್ನು, ಸರ್ವತ್ರವ್ಯಾಪ್ತಿಯನ್ನು ನೋಡಿದ್ದಾನೆ. ದಿವ್ಯದೃಷ್ಟಿಗೋಚರವಾದದ್ದು ಅಸತ್ಯವಲ್ಲ, ಅವಿದ್ಯಾಕಲ್ಪಿತವಲ್ಲ.

—o—

## ನಾರಾಯಣನೇ ಪುರುಷಸೂಕ್ತ ಪ್ರತಿಪಾದ್ಯ :

ಪುರುಷಸೂಕ್ತವು ಒಬ್ಬ ಪುರುಷನನ್ನು 'ಸಹಸ್ರಶೀರ್ಷಾ' 'ಸಹಸ್ರಾಕ್ಷ', 'ಸಹಸ್ರಪಾತ್' ಎಂದು ವರ್ಣಿಸಿದೆ. ಈ ಪುರುಷನು ಚಿತ್-ಅಚಿತ್ ಪ್ರಕೃತಿಗಳಿಗಿಂತ ಹತ್ತಾರುಪಟ್ಟು ಉತ್ಕೃಷ್ಟ ಎಂದು ವರ್ಣಿಸಿದೆ. ಈ ಪುರುಷ ಯಾರು? ಯಜುರ್ವೇದೀಯ ನಾರಾಯಣೋಪನಿಷತ್ತು ನಾರಾಯಣನನ್ನು.

**ಸಹಸ್ರಶೀರ್ಷಂ ದೇವಂ ವಿಶ್ವಾಕ್ಷಂ ವಿಶ್ವಶಂಭುವಮ್ ।**
**ವಿಶ್ವನಾರಾಯಣಂ ದೇವಮಕ್ಷರಂ ಪರಮಂ ಪದಮ್ ॥**

ಎಂದು ವರ್ಣಿಸಿದೆ. ಆದ್ದರಿಂದ ಪುರುಷಸೂಕ್ತದ ಪುರುಷನು ನಾರಾಯಣನೇ.

ಭಾಗವತದಶಮಸ್ಕಂಧದಲ್ಲಿ ಅಕ್ರೂರನು ಮಾಡಿದ ಕೃಷ್ಣಸ್ತುತಿಯು ಇದೆ. ಈ ಸ್ತುತಿಯಲ್ಲಿ -

**ಅಗ್ನಿರ್ಮುಖಂ ತೇऽವನಿರಂಘ್ರಿರೀಕ್ಷಣಂ**
**ಸೂರ್ಯೋ ನಭೋ ನಾಭಿರಥೋ ದಿಶಃ ಶ್ರುತಿಃ ।**
**ದ್ಯೌಃ ಕಂ ಸುರೇಂದ್ರಾಸ್ತವ ಬಾಹವೋರ್ಣವಾಃ**
**ಕುಕ್ಷಿರ್ಮರುತ್ ಪ್ರಾಣಬಲಂ ಪ್ರಕಲ್ಪಿತಮ್ ॥** - ೧೦.೩೮.೧೪

ಪುರುಷಸೂಕ್ತದಲ್ಲಿ ಪುರುಷನು ಹೀಗೆಯೇ ವರ್ಣಿಸಲ್ಪಟ್ಟಿದ್ದಾನೆ.

**'ಮುಖಾದಿಂದ್ರಶ್ಚಾಗ್ನಿಶ್ಚ । ಪದ್ಭ್ಯಾಂಭೂಮಿಃ । ನಾಭ್ಯಾ ಆಸೀದಂತರಿಕ್ಷಮ್ । ದಿಶಃ ಶ್ರೋತ್ರಾದ್'** - ಪುರುಷಸೂಕ್ತದ ಪುರುಷ ಶ್ರೀಕೃಷ್ಣ ಎಂದು ಇದರಿಂದ ತಿಳಿಯುತ್ತದೆ.

**'ತತ್ರಗತ್ವಾ ಜಗನ್ನಾಥಂ ದೇವದೇವಂ ವೃಷಾಕಪಿಮ್ ।**
**ಪುರುಷಂ ಪುರುಷಸೂಕ್ತೇನ ಉಪತಸ್ಥೇ ಸಮಾಹಿತಃ ॥'**

-ಭಾಗವತ ೧೦.೧.೨೦

ಈ ಶ್ಲೋಕವು ಚತುರ್ಮುಖಬ್ರಹ್ಮದೇವರು ವಿಷ್ಣುವನ್ನು ಪುರುಷಸೂಕ್ತದಿಂದ ಸ್ತುತಿಸಿದರು ಎಂದು ಹೇಳುತ್ತದೆ. ಆದ್ದರಿಂದ ಪುರುಷಸೂಕ್ತದ ಪುರುಷ ನಾರಾಯಣನೇ.

ಸಾವಿರಾರು ತಲೆ, ಕಣ್ಣು, ಕಾಲುಗಳನ್ನು ಹೊಂದಿರುವ ಈ ಪುರುಷನ ಜ್ಞಾನವನ್ನು ಸಾಧಿಸಿದವನು ಮುಕ್ತನಾಗುತ್ತಾನೆ ಎಂದು ಯಜುರ್ವೇದೀಯ ಪುರುಷಸೂಕ್ತವು ಹೇಳಿದೆ.

**'ತಮೇವಂ ವಿದ್ವಾನಮೃತ ಇಹ ಭವತಿ ನಾನ್ಯಃ ಪಂಥಾಃ ವಿದ್ಯತೇಽಯನಾಯ'** ಮುಕ್ತಿಯಲ್ಲಿ ಪ್ರಕೃತಿಸಂಬಂಧವಿಲ್ಲ. ಪ್ರಕೃತಿದೂರವಾದ ಉತ್ಕರ್ಷವನ್ನು ಯಾರ ಜ್ಞಾನವು ಉಂಟುಮಾಡುತ್ತದೋ ಅವನು ಪ್ರಾಕೃತ ಆಗಿರುವುದಿಲ್ಲ. ಆದ್ದರಿಂದ ಪುರುಷಸೂಕ್ತವು ವರ್ಣಿಸಿರುವ ಪುರುಷನ ಆಕೃತಿಯು ಅಪ್ರಾಕೃತ.

—o—

'ಪುರುಷ ಏವೇದಂ ಸರ್ವಂ....' ಇದು ಪುರುಷನೊಬ್ಬನೇ ಸತ್ಯ ಎಂದು ಹೇಳುವುದಿಲ್ಲ.

**ಪ್ರಶ್ನೆ :** ಪುರುಷಸೂಕ್ತದ ಎರಡನೆಯ ಮಂತ್ರವು **'ಪುರುಷ ಏವೇದಂ ಸರ್ವಂ ಯದ್ಭೂತಂ ಯಚ್ಚಭವ್ಯಮ್'** ಎಂದಿದೆ. ಹಿಂದೆ ಇದ್ದ, ಮುಂದೆ ಆಗಲಿರುವ ಮತ್ತು ಈಗ ಇರುವ ಇಡೀ ಜಗತ್ತು ಪುರುಷನೇ- ಎಂದು ಇದರ ಅರ್ಥ. ವಾಸ್ತವ ಜಗತ್ತು ಪುರುಷನಾಗಿರಲು ಅವಕಾಶವಿಲ್ಲ; ಆದ್ದರಿಂದ ಜಗತ್ತು ಅವಾಸ್ತವ=ಕಲ್ಪಿತ ಆಗಿರಬೇಕು; ಆದ್ದರಿಂದ ಪುರುಷನೊಬ್ಬನೇ ಸತ್ಯ ?

**ಉತ್ತರ :** ಇಲ್ಲ. ಪುರುಷಸೂಕ್ತದ ಮೊದಲನೆಯ ಮಂತ್ರವು ಪುರುಷನ ವಿಲಕ್ಷಣ ಆಕೃತಿಯನ್ನು, ಅವನ ವಿಶ್ವವ್ಯಾಪ್ತಿಯನ್ನು ಹೇಳುತ್ತದೆ. ಎರಡನೆಯ ಮಂತ್ರದ ಉತ್ತರಾರ್ಧವು ಪುರುಷನು ಮುಕ್ತ-ಅಮುಕ್ತರ ನಿಯಾಮಕ, ಆದ್ದರಿಂದ ಸರ್ವೋತ್ತಮ ಎಂದು ಹೇಳುತ್ತದೆ. ಜಗತ್ತು ಅವಾಸ್ತವ ಆದರೆ ಪುರುಷನಿಗೆ ಸಾವಿರಾರು ಇಂದ್ರಿಯಗಳು, ತಲೆಗಳು ಏಕೆ? ಇಲ್ಲದ ವಿಶ್ವದಲ್ಲಿ ವ್ಯಾಪ್ತಿ ಹೇಗೆ?

ಇಲ್ಲದ ಮುಕ್ತಾಮುಕ್ತರ ನಿಯಾಮಕತ್ವವು ಹೇಗೆ? ಸರ್ವೋತ್ತಮತ್ವವು ಹೇಗೆ? ಪ್ರಥಮಮಂತ್ರದ ಮತ್ತು ದ್ವಿತೀಯಮಂತ್ರದ ಉತ್ತರಾರ್ಧದ ಮಧ್ಯ ಇರುವ **'ಪುರುಷ ಏವೇದಂ ಸರ್ವಂ...'** – ಈ ವಾಕ್ಯವು ಪೂರ್ವಾಪರವಿರುದ್ಧ ಅರ್ಥವನ್ನು ಹೇಳಿದರೆ ಅಪ್ರಮಾಣವಾಗಬೇಕಾಗುತ್ತದೆ. ಶ್ರುತಿಗಳು ಹೀಗೆ ಇರುವುದಿಲ್ಲ. ಆದ್ದರಿಂದ ಪುರುಷನೊಬ್ಬನೇ ಸತ್ಯ ಎಂದು ಈ ವಾಕ್ಯದ ಅಭಿಪ್ರಾಯವಲ್ಲ.

ಯಾವುದರ ಅಸ್ತಿತ್ವವು ಯಾರಿಗೆ ಅಧೀನವೋ ಅದನ್ನು ಅದೇ ಎಂದು ಹೇಳುವ ರೂಢಿಯು ಇದೆ. ರಾಷ್ಟ್ರವು ರಾಜನಿಗೆ ಅಧೀನವಾಗಿದ್ದಾಗ 'ರಾಜಾ ರಾಷ್ಟ್ರಂ' ಎಂದು ಹೇಳುತ್ತಿದ್ದರು. ಜೀವನವು ನೀರನ್ನು ಅವಲಂಬಿಸಿದೆಯಾದ್ದರಿಂದ 'ನೀರೇ ಜೀವನ' ಎಂದು ಹೇಳುವ ರೂಢಿ ಈಗಲೂ ಇದೆ. ಹೀಗೆಯೇ ಇಡೀ ಜಗತ್ತು ಪುರುಷನಿಗೆ ಅಧೀನ ಎಂದು **'ಪುರುಷ ಏವ ಇದಂ ಸರ್ವಂ...'** ಎಂಬ ಮಾತಿನ ಅರ್ಥ. ಇದು ಪೂರ್ವೋತ್ತರವಾಕ್ಯಗಳ ಅರ್ಥಕ್ಕೆ ಅನುಗುಣವಾದ ಅರ್ಥ. ಸ್ವತಂತ್ರನಲ್ಲದ ಪುರುಷನಿಗೆ ಜಗತ್ತು ಅಧೀನವಾಗಲಾರದು. ಆದ್ದರಿಂದ **'ಪುರುಷ ಏವ ಇದಂ ಸರ್ವಂ...'** ಈ ವಾಕ್ಯವು ಪುರುಷನ ಸ್ವಾತಂತ್ರ್ಯವನ್ನು ತಿಳಿಸುತ್ತದೆ. ಸ್ವಾತಂತ್ರ್ಯವು ಬೇರೆ ಮಹಿಮೆಗಳಿಗೆ ಮೂಲ.

ಪುರುಷಸೂಕ್ತದ ಪ್ರಥಮ ಮತ್ತು ದ್ವಿತೀಯ ಮಂತ್ರಗಳು ಪುರುಷನ ಮಹಿಮೆಗಳನ್ನು ಹೇಳಿವೆ. ಇವುಗಳು ಪರಮಾತ್ಮನ ಗುಣರತ್ನಗಳ ಮಾಲೆ. ರತ್ನಗಳ ಮಾಲೆಯನ್ನು ತಯಾರಿಸುವ ಕುಶಲರು ಮಧ್ಯದಲ್ಲಿ ಮಹಾಮಣಿಯನ್ನು ಇಟ್ಟು ಪಾರ್ಶ್ವಗಳಲ್ಲಿ ಇತರ ರತ್ನಗಳನ್ನು ಜೋಡಿಸುತ್ತಾರೆ. ಪುರುಷಸೂಕ್ತವು ಸ್ವಾತಂತ್ರ್ಯ ಎಂಬ ಮೂಲಮಣಿಯನ್ನು ಮಧ್ಯದಲ್ಲಿಟ್ಟು ಪಾರ್ಶ್ವಗಳಲ್ಲಿ ಇತರ ಗುಣರತ್ನಗಳನ್ನು ಜೋಡಿಸಿದೆ. ಅದ್ವೈತದರ್ಶನವು ಹೇಳುವ ಐಕ್ಯವು ಇತರ ಮಹಿಮೆಗಳನ್ನು ನಾಶಪಡಿಸುವ ಕಾಚಮಣಿ. ಕುಶಲರು ಬೇರೆ ರತ್ನಗಳನ್ನು ಮಂಕಾಗಿಸುವ ಕಾಚಮಣಿಯನ್ನು ಮಧ್ಯದಲ್ಲಿ ಜೋಡಿಸುವುದಿಲ್ಲ. ಪ್ರಮಾಣತಮವಾದ ಪುರುಷಸೂಕ್ತವು ಪುರುಷನ ಮಹಿಮೆಯನ್ನು ನಾಶಮಾಡುವ ಐಕ್ಯವನ್ನು ಹೇಳುವುದಿಲ್ಲ.

**ಪೂರ್ವೋತ್ತರೋಕ್ತಗುಣರತ್ನಮಾಲಾ ಮಹಾಮಣಿಮ್ ।**
**ಮಧ್ಯೇ ಬಿಭರ್ತಿ ನ ಪುನಃ ಕಾಚಂ ವಾಚಾಮಗೋಚರಮ್ ॥ – ೪೬೬**

## ಪುರುಷೈಕ್ಯವು ಸೂಕ್ತಪ್ರತಿಪಾದ್ಯವಲ್ಲ :

(೧) ಅದ್ವೈತದರ್ಶನದ ಪ್ರಕಾರ ಐಕ್ಯವು ಆತ್ಮಸ್ವರೂಪವೇ; ಆತ್ಮ (ಬ್ರಹ್ಮ)ವು ಸ್ವಪ್ರಕಾಶ, ಅಂದರೆ, ಶಾಸ್ತ್ರವು ಅದನ್ನು ತಿಳಿಸುವುದಿಲ್ಲ. ಪುರುಷಸೂಕ್ತವು ಶಾಸ್ತ್ರ. ಆದ್ದರಿಂದ **'ಪುರುಷ ಏವೇದಂ ಸರ್ವಂ...'** ಈ ಮಂತ್ರವು ಐಕ್ಯವನ್ನು ಪ್ರತಿಪಾದಿಸಲಾರದು.

(೨) ಜಗತ್ತಿಗೆ ಪರಿಮಿತಿ, ನಿಯಮ್ಯತ್ವ, ಅಲ್ಪತ್ವಗಳು ಇವೆ. ಪುರುಷನಿಗೆ ವ್ಯಾಪ್ತಿ. ನಿಯಾಮಕತ್ವ ಮತ್ತು ಸರ್ವೋತ್ತಮತ್ವಗಳು ಇವೆ. ಪುರುಷಸೂಕ್ತವು ಹೇಳುವ ಪುರುಷನ ಮಹಿಮೆಯ ಜ್ಞಾನದಿಂದ ಮುಕ್ತಿಯಾಗುತ್ತದೆ ಎಂದು ಸೂಕ್ತವು ಹೇಳುತ್ತದೆ. ಮೋಕ್ಷೋಪಯೋಗಿಯಾದ ಈ ಧರ್ಮಗಳು ನಿತ್ಯ ಮತ್ತು ಸತ್ಯ. ವಿರುದ್ಧ ಧರ್ಮಗಳನ್ನು ಹೊಂದಿರುವ ಜಗತ್ತು ಮತ್ತು ಪುರುಷರ ಐಕ್ಯಕ್ಕೆ ಅವಕಾಶವೇ ಇಲ್ಲ.

(೩) ದೇಹವು ಆತ್ಮವಲ್ಲ. ಅದ್ವೈತದರ್ಶನವೂ ಇದನ್ನು ಅಂಗೀಕರಿಸುತ್ತದೆ. ದೇಹವೇ ಆತ್ಮವಲ್ಲದಿರುವಾಗ ಇಡೀ ಅಚೇತನಜಗತ್ತು ಪುರುಷ ಆಗುವುದು ಹೇಗೆ?

(೪) **'ತಮೇವಂ ವಿದ್ವಾನಮೃತ ಇಹ ಭವತಿ...'** ಈ ಪುರುಷಸೂಕ್ತವಾಕ್ಯಕ್ಕೆ ಪುರುಷನನ್ನು ಹೀಗೆ ತಿಳಿದವನು ಮುಕ್ತನಾಗುತ್ತಾನೆ ಎಂದು ಅರ್ಥ. 'ಹೀಗೆ' ಅಂದರೆ ಮೊದಲನೆಯ ಮಂತ್ರದಿಂದ ಕೊನೆಯವರೆಗೆ ಹೇಳಲ್ಪಟ್ಟ ಮಹಿಮೆವುಳ್ಳವನು ಎಂದು ಅರ್ಥ. ಎರಡನೆಯ ಮಂತ್ರದ ಪೂರ್ವಾರ್ಧವು ಅದ್ವೈತ ವ್ಯಾಖ್ಯಾನದ ಪ್ರಕಾರ ಐಕ್ಯವನ್ನು ಹೇಳುತ್ತದೆ. ಉಳಿದ ವಾಕ್ಯಗಳು ಇತರರಲ್ಲಿ ಇಲ್ಲದ ಮಹಿಮೆಯನ್ನು ಹೇಳುವ ಮೂಲಕ ಭೇದವನ್ನು ಹೇಳುತ್ತವೆ. ಭೇದ-ಅಭೇದಗಳು ವಿರುದ್ಧ. ಇವುಗಳ ಜ್ಞಾನವು ಮುಕ್ತಿಸಾಧನವಾಗುವುದು ಹೇಗೆ? ಆದ್ದರಿಂದ ಮಂತ್ರಗಳು ಭೇದ-ಅಭೇದಗಳನ್ನು ಹೇಳುತ್ತಿಲ್ಲ.

(೫) ಐಕ್ಯವನ್ನು ಹೇಳುವಂತೆ ಕಾಣುವ ಒಂದು ವಾಕ್ಯವನ್ನು ಮಾತ್ರ ಸ್ವೀಕರಿಸಿ, ಇತರ ವಾಕ್ಯಗಳ ಪರಿತ್ಯಾಗವು ಮೀಮಾಂಸೆ ಅಲ್ಲ. ವೇದದ ಯಾವ ವಾಕ್ಯವನ್ನು ತ್ಯಜಿಸದೆ ಅವಿರುದ್ಧವಾದ ಅರ್ಥವನ್ನು ಕಾಣುವವರು ಮೀಮಾಂಸಕರು. ಸಮಗ್ರ ಪುರುಷಸೂಕ್ತವು ನಾರಾಯಣನ ಮಹಿಮೆಯನ್ನು ಹೇಳಿ ಮುಕ್ತಿಯು ಈ ಮಹಿಮೆಯ ಜ್ಞಾನದ ಫಲ ಎಂದು ಹೇಳಿದೆ. (೪೬೭-೫೪೩)

## ವಿಭಕ್ತಿವ್ಯತ್ಯಾಸದಿಂದ ವ್ಯಾಖ್ಯಾನ :

(೧) 'ಯದನ್ನೇನಾತಿರೋಹತಿ' ಎಂದು ಸೂಕ್ತದಲ್ಲಿದೆ. ಭಾಗವತ ಪುರಾಣದಲ್ಲಿ **'ಸೋऽಮೃತಸ್ಯಾಭಯಸ್ಯೇಶೋ ಮರ್ತ್ಯಮನ್ನಂ ಯದತ್ಯಗಾತ್'** (೨.೬.೧೭) ಎಂದು ಭಗವಾನ್ ವೇದವ್ಯಾಸರು ಹೇಳಿದ್ದಾರೆ. ಸೂಕ್ತದಲ್ಲಿರುವ 'ಅನ್ನೇನ' – ಈ ತೃತೀಯಾವಿಭಕ್ತ್ಯಂತಪದವನ್ನು **'ಅನ್ನಂ'** ಎಂದು ದ್ವಿತೀಯಾವಿಭಕ್ತ್ಯಂತವಾಗಿ ವ್ಯಾಖ್ಯಾನಿಸಿದ್ದಾರೆ. ಈ ವ್ಯಾಖ್ಯಾನದಿಂದ ವೇದಮಂತ್ರಗಳ ವಿಭಕ್ತಿಗಳನ್ನು ಬದಲಾಯಿಸಿ ವ್ಯಾಖ್ಯಾನಿಸಲು ವೇದವ್ಯಾಸರ ಒಪ್ಪಿಗೆಯಿದೆ ಎಂದು ತಿಳಿಯುತ್ತದೆ.

ಈ ಮಾರ್ಗವನ್ನು ಅನುಸರಿಸಿ **'ಪುರುಷ ಏವೇದಂ ಸರ್ವಮ್'** ಇಲ್ಲಿರುವ ಪ್ರಥಮಾವಿಭಕ್ತಿಯನ್ನು ಪಂಚಮಿಯಾಗಿ ಬದಲಾಯಿಸಬೇಕು. 'ಪುರುಷಾದೇವ ಇದಂ ಸರ್ವಮ್' ಎಂದು ವ್ಯಾಖ್ಯಾನಿಸಬೇಕು. ಇಡೀ ಜಗತ್ತಿಗೆ ಪುರುಷನಿಂದ ಜನ್ಮ-ಸ್ಥಿತಿ-ಸಂಹಾರಾದಿಗಳು ಆಗುತ್ತವೆ ಎಂದು ಅರ್ಥವು ಲಭಿಸುತ್ತದೆ.

(೨) ಸಪ್ತಮಿಯಾಗಿ ಬದಲಾಯಿಸಿ ಇಡೀ ಜಗತ್ತು ಪುರುಷನಿಗೆ ಅಧೀನ ಎಂದು ಅರ್ಥವನ್ನು ಕಾಣಬೇಕು. ಹೀಗೆ ಮಾಡಿದಾಗ ಇಡೀ ಸೂಕ್ತದಲ್ಲಿ ಅವಿರುದ್ಧವಾದ ಅರ್ಥವನ್ನು ಕಾಣಬಹುದು.

ಸೂಕ್ತದ ಏಕಕಂಠತೆಗಾಗಿ ಬೇರೆ ವಿಭಕ್ತಿಗಳ ಅವಲಂಬನೆಯು ಭಿಕ್ಷಾಟನೆ. ಈ ಭಿಕ್ಷಾಟನೆಯಿಂದ **'ಪುರುಷ ಏವೇದಂ ಸರ್ವಮ್'** – ಈ ವಾಕ್ಯದ ಪೂರ್ವ ಮತ್ತು ಉತ್ತರ ವಾಕ್ಯಗಳು ಹೇಳುವ ಅರ್ಥಗಳ ರಕ್ಷಣೆಯಾಗುತ್ತದೆ.

ಭಾರತೀದೇವಿಯು ವೇದಾಭಿಮಾನಿನೀ. ಭೀಮಸೇನನ ಪತ್ನಿ. ಭೀಮಸೇನನು ಭಿಕ್ಷಾಟನೆಯನ್ನು ಮಾಡಿ ತನ್ನ ಸೋದರರನ್ನೂ-ತಾಯಿಯನ್ನೂ ರಕ್ಷಿಸಿದ್ದನು. ತನ್ನ ಪತಿಯ ದಾರಿಯಲ್ಲೇ ನಡೆಯುವ ಭಾರತೀದೇವಿಯು ವಿಭಕ್ತಿಗಳ ಭಿಕ್ಷೆಯನ್ನು ತಂದು ವೇದವನ್ನು ರಕ್ಷಿಸುತ್ತಾಳೆ ಎಂದು ಶ್ರೀವಾದಿರಾಜರು ಈ ಸಂದರ್ಭದಲ್ಲಿ ಹೇಳಿದ್ದಾರೆ. ತಾವು ಹೇಳುವ ಅರ್ಥಗಳು ವೇದಾಭಿಮಾನಿನೀ ಭಾರತೀದೇವಿಗೆ ಸಮ್ಮತ ಎಂದು ಶ್ರೀವಾದಿರಾಜಗುರುರಾಜರ ಅಭಿಪ್ರಾಯ.

**ಅಪಿಭಿಕ್ಷಾಟನಂ ಕೃತ್ವಾ ಜ್ಞಾತೀನ್ ರಕ್ಷಿತುಮಿಚ್ಛತಿ ।**
**ಯದಿಯಂ ಭಾರತೀ ಭೀಮಸೇನದರ್ಶಿತಪದ್ಧತಿಃ ॥ (೪೮೮)**

ಅದ್ವೈತದರ್ಶನ ಸಮ್ಮತವಾದ ಐಕ್ಯಕ್ಕೆ ಮತ್ತಷ್ಟು ಅನುಪಪತ್ತಿಗಳನ್ನು ೪೯೯–೫೦೨ ಶ್ಲೋಕಗಳು ಹೇಳಿವೆ.

**'ಅತ್ಯತಿಷ್ಠದ್ ದಶಾಂಗುಲಮ್'** - ಈ ವಾಕ್ಯವು ಎಲ್ಲಾ ಚೇತನಗಳ ದೇಹಗಳಲ್ಲಿ ಪರಮಾತ್ಮನು ನಾನಾರೂಪಗಳಿಂದ ಇದ್ದಾನೆ, ದೇಹಗಳ ದೋಷಗಳ ಲೇಪವಿಲ್ಲದೆ ಪೂರ್ಣವಾಗಿಯೇ ಇದ್ದಾನೆ ಎಂದು ಹೇಳಿದೆ. ಈ ರೂಪಗಳಿಗೆ 'ಪ್ರಾದೇಶ' ಎಂದು ಪ್ರಸಿದ್ಧವಾದ ಮಧ್ಯಮ ಅಳತೆಯಿದೆ ಎಂದು ಭಾಗವತ (೨.೨.೯) ಸೂಚಿತವಾದ ಶ್ರುತಿಯಿಂದ ತಿಳಿಯುತ್ತದೆ. ಮನುಷ್ಯದೇಹದಲ್ಲಿರುವ ಭಗವದ್ರೂಪವು ಮನುಷ್ಯನ ಹೆಬ್ಬೆರಳಿನ ಅಳತೆಯುಳ್ಳದ್ದು, ದೇವತೆಗಳ ದೇಹದಲ್ಲಿರುವ ಭಗವದ್ರೂಪವು ಅವರ ಹೆಬ್ಬೆರಳಿನ ಅಳತೆಯುಳ್ಳದ್ದು ಎಂದು ಬೇರೆ ಪ್ರಮಾಣಗಳಿಂದ ತಿಳಿಯುತ್ತದೆ. ಬೇರೆ ಬೇರೆ ಸ್ಥಾನಗಳಲ್ಲಿರುವ ಮತ್ತು ಬೇರೆ ಬೇರೆ ಅಳತೆಗಳನ್ನು ಹೊಂದಿರುವ ಭಗವದ್ರೂಪಗಳಿಗೆ ಭೇದವಿದೆ ಎಂದು ಓದುಗರು ತಿಳಿದಾರು ಎಂದು ಶಂಕಿಸಿದ ಶ್ರುತಿಯು ಭಗವದ್ರೂಪಗಳಿಗೆ, ಅವುಗಳು ಬೇರೆ ಬೇರೆ ಸ್ಥಾನಗಳಲ್ಲಿ ಇದ್ದರೂ, ಬೇರೆ ಬೇರೆ ಅಳತೆಗಳನ್ನು ಹೊಂದಿದ್ದರೂ, ಭೇದವಿಲ್ಲ ಎಂದು **ಪುರುಷ ಏವೇದಂ ಸರ್ವಮ್** (ಈ ಎಲ್ಲ ರೂಪಗಳೂ ಪುರುಷನೇ ಅಂದರೆ ನಾರಾಯಣನೇ) ಎಂದು ಹೇಳಿದೆ.

ಭಗವದ್ರೂಪಗಳ ಐಕ್ಯವು ಸೂಕ್ತದ ಏಕಕಂಠತೆಗೆ ಅನುಕೂಲ. ಈ ಐಕ್ಯವನ್ನು ಕಠ, ತೈತ್ತಿರೀಯ ಮೊದಲಾದ ಶ್ರುತಿಗಳೂ ಹೇಳುತ್ತವೆ. (೫೦೩-೫೦೯)

—o—

ಯಜುರ್ವೇದೀಯ ಪುರುಷಸೂಕ್ತದ ಕೊನೆಯಲ್ಲಿ ಶ್ರೀ ಮತ್ತು ಲಕ್ಷ್ಮೀಯರು ಪುರುಷನ ಪತ್ನಿಯರು ಎಂದಿದೆ. ಆದ್ದರಿಂದ ಪುರುಷಸೂಕ್ತದಲ್ಲಿ ವರ್ಣಿಸಲ್ಪಟ್ಟಿರುವ ಪುರುಷನು ನಾರಾಯಣನೇ. ಭಾಗವತಪುರಾಣವೂ (೧೦.೧.೨೦) ಪುರುಷಸೂಕ್ತವನ್ನು ವಿಷ್ಣುಸೂಕ್ತ ಎಂದು ಹೇಳಿದೆ.

**"ತಮೇವಂ ವಿದ್ವಾನಮೃತ ಇಹ ಭವತಿ**
**ನಾನ್ಯಃ ಪಂಥಾ ಅಯನಾಯ ವಿದ್ಯತೇ"**

ಪುರುಷಸೂಕ್ತದ ಈ ಮಂತ್ರವು ಸಾಕಾರನೂ, ಗುಣಪೂರ್ಣನೂ ಲಕ್ಷ್ಮೀಪತಿಯೂ ಆದ ಪುರುಷನ ಜ್ಞಾನವೇ ಮುಕ್ತಿಯ ದಾರಿ, ಬೇರೆ ದಾರಿ ಇಲ್ಲ ಎಂದು ಹೇಳಿದೆ.

**"ಸಾಕಾರಸಗುಣಶ್ರೀಶಸೇವೈಕಾಮೃತಪದ್ಧತಿಃ ।**
**ನಾನ್ಯಸ್ಯ ಸೇವಾ ಮೋಕ್ಷಸ್ಯ ಪಂಥಾ ಇತ್ಯಾಹ ಹಿ ಶ್ರುತಿಃ ॥" - ೫೩೦**

**ಉಪಸಂಹಾರ :**

ಶುದ್ಧಿಸೌರಭದಲ್ಲಿ ಶ್ರೀವಾದಿರಾಜಗುರುಗಳು (೧) ಪರಬ್ರಹ್ಮನಾರಾಯಣನ ಮೂಲರೂಪ ಮತ್ತು ಅವತಾರಗಳಲ್ಲಿ ಚಿಂತಕರು ಬೇರೆ ಬೇರೆ ಕಾಲಗಳಲ್ಲಿ ಹೇಳಿರುವ ಮತ್ತು ಹೇಳಬಹುದಾದ ದೋಷಗಳನ್ನು ಪ್ರಸ್ತಾವಿಸಿ, ಅವು ಪರಮಾತ್ಮನಲ್ಲಿ ದೋಷಗಳಲ್ಲ ಎಂದು ಯುಕ್ತಿಗಳಿಂದ ಪ್ರತಿಪಾದಿಸಿ, (೨) ನಿರ್ಗುಣಬ್ರಹ್ಮಚೇತನವೊಂದೇ ಸತ್ಯ, ಇತರಚೇತನಾಚೇತನಪ್ರಪಂಚವು ಚಿದ್ರೂಪ-ಬ್ರಹ್ಮನ ಭ್ರಾಂತಿಯಿಂದ ಕಲ್ಪಿತ ಎಂಬ ಅದ್ವೈತದರ್ಶನದ ವಿಚಾರವನ್ನು ಬಹುಮುಖಗಳಿಂದ ವಿಮರ್ಶಿಸಿ, ಅದರ ಅಯುಕ್ತತೆಯನ್ನು ತೋರಿಸಿ ಅದ್ವೈತಚಿಂತನೆಗೆ ಅನುಗುಣವಾಗಿರುವಂತೆ ಕಾಣುವ ಭಾಗವತಪದ್ಯಗಳು ಮತ್ತು ಪುರುಷಸೂಕ್ತವು ಅದ್ವೈತಚಿಂತನೆಗೆ ಅನುಗುಣವಾಗಿಲ್ಲ ಎಂದು ಪ್ರತಿಪಾದಿಸಿ, ಅವುಗಳಿಗೆ ಸಮಂಜಸವಾದ ಅರ್ಥವನ್ನು ಹೇಳಿ, ಕೊನೆಯಲ್ಲಿ ತಮ್ಮ ವಿಮರ್ಶೆಯಿಂದ ಲಭಿಸುವ ನಿರ್ಣಯವನ್ನು ಹೇಳಿದ್ದಾರೆ.

**ಅತೋ ಮುಕುಂದಾದಿತರದ್ ಬ್ರಹ್ಮ ವೇದವಿನಿಂದಿತಮ್ ।**
**ಮೋಕ್ಷೇಂತರಂಗಹೇತುತ್ವಾನ್ಮುಖ್ಯಂ ಬ್ರಹ್ಮ ಸ ಏವ ಹಿ ॥ - ೫೩೧**

—o—

ಶುದ್ಧಿಸೌರಭದ ಕನ್ನಡಾನುವಾದಗಳ ಪರಿವೀಕ್ಷಣೆಯ ಮೂಲಕ ಶ್ರೀಕೃಷ್ಣ-ಮುಖ್ಯಪ್ರಾಣ ಮತ್ತು ಶ್ರೀವಾದಿರಾಜಗುರುಸಾರ್ವಭೌಮರ ಸೇವೆಯನ್ನು ನನ್ನಿಂದ ಮಾಡಿಸಿದ ಪರಮಪೂಜ್ಯ ಶ್ರೀಸೋದೆಮಠಾಧೀಶರಿಗೆ ಕೃತಜ್ಞತಾಪೂರ್ವಕ ಪ್ರಣಾಮಗಳು.

ಈ ಸೇವೆಯ ಅವಕಾಶವು ಲಭಿಸಲು ಪೂರ್ಣಪ್ರಜ್ಞವಿದ್ಯಾಪೀಠ ಮತ್ತು ಅದರ ಕುಲಪತಿಗಳೂ, ನನ್ನ ಗುರುಗಳೂ ಆದ ಪರಮಪೂಜ್ಯ ಪೇಜಾವರ ಮಠಾಧೀಶರು (ಹಿರಿಯರು) ಮೂಲಕಾರಣ. ಪರಮಪೂಜ್ಯಗುರುಗಳಿಗೆಸಾಷ್ಟಾಂಗ ಪ್ರಣಾಮಗಳು.

ಪರಮಪೂಜ್ಯ ಸೋದೆ ಮಠಾಧೀಶರಿಗೆ ನನ್ನನ್ನು ಪರಿಚಯಿಸಿ ಈ ಸೇವೆಯ ಅವಕಾಶವನ್ನು ಕೊಡಿಸಿದ ಪಂಡಿತ ಬೆ.ನಾ. ವಿಜಯೀಂದ್ರಾಚಾರ್ಯರು ನನ್ನ ಕೃತಜ್ಞತೆಗೆ ಪಾತ್ರರು.

- ಸಿ.ಎಚ್. ಶ್ರೀನಿವಾಸಮೂರ್ತಿ ಆಚಾರ್ಯ

# ಶುದ್ಧಿಸೌರಭಮ್ - ಸಂಪುಟ ೩

## ವಿಷಯಾನುಕ್ರಮಣಿಕೆ

**ಉಪಸಂಹಾರ :**

ಶುದ್ಧಿಸೌರಭದಲ್ಲಿ ಶ್ರೀವಾದಿರಾಜಗುರುಗಳು (೧) ಪರಬ್ರಹ್ಮನಾರಾಯಣನ ಮೂಲರೂಪ ಮತ್ತು ಅವತಾರಗಳಲ್ಲಿ ಚಿಂತಕರು ಬೇರೆ ಬೇರೆ ಕಾಲಗಳಲ್ಲಿ ಹೇಳಿರುವ ಮತ್ತು ಹೇಳಬಹುದಾದ ದೋಷಗಳನ್ನು ಪ್ರಸ್ತಾವಿಸಿ, ಅವು ಪರಮಾತ್ಮನಲ್ಲಿ ದೋಷಗಳಲ್ಲ ಎಂದು ಯುಕ್ತಿಗಳಿಂದ ಪ್ರತಿಪಾದಿಸಿ, (೨) ನಿರ್ಗುಣಬ್ರಹ್ಮಚೇತನವೊಂದೇ ಸತ್ಯ, ಇತರಚೇತನಾಚೇತನಪ್ರಪಂಚವು ಚಿದ್ರೂಪ-ಬ್ರಹ್ಮನ ಭ್ರಾಂತಿಯಿಂದ ಕಲ್ಪಿತ ಎಂಬ ಅದ್ವೈತದರ್ಶನದ ವಿಚಾರವನ್ನು ಬಹುಮುಖಗಳಿಂದ ವಿಮರ್ಶಿಸಿ, ಅದರ ಅಯುಕ್ತತೆಯನ್ನು ತೋರಿಸಿ ಅದ್ವೈತಚಿಂತನೆಗೆ ಅನುಗುಣವಾಗಿರುವಂತೆ ಕಾಣುವ ಭಾಗವತಪದ್ಯಗಳು ಮತ್ತು ಪುರುಷಸೂಕ್ತವು ಅದ್ವೈತಚಿಂತನೆಗೆ ಅನುಗುಣವಾಗಿಲ್ಲ ಎಂದು ಪ್ರತಿಪಾದಿಸಿ, ಅವುಗಳಿಗೆ ಸಮಂಜಸವಾದ ಅರ್ಥವನ್ನು ಹೇಳಿ, ಕೊನೆಯಲ್ಲಿ ತಮ್ಮ ವಿಮರ್ಶೆಯಿಂದ ಲಭಿಸುವ ನಿರ್ಣಯವನ್ನು ಹೇಳಿದ್ದಾರೆ.

**ಅತೋ ಮುಕುಂದಾದಿತರದ್ ಬ್ರಹ್ಮ ವೇದವಿನಿಂದಿತಮ್ ।**
**ಮೋಕ್ಷೇಂತರಂಗಹೇತುತ್ವಾನ್ಮುಖ್ಯಂ ಬ್ರಹ್ಮ ಸ ಏವ ಹಿ ॥ - ೫೩೧**

—o—

ಶುದ್ಧಿಸೌರಭದ ಕನ್ನಡಾನುವಾದಗಳ ಪರಿವೀಕ್ಷಣೆಯ ಮೂಲಕ ಶ್ರೀಕೃಷ್ಣ-ಮುಖ್ಯಪ್ರಾಣ ಮತ್ತು ಶ್ರೀವಾದಿರಾಜಗುರುಸಾರ್ವಭೌಮರ ಸೇವೆಯನ್ನು ನನ್ನಿಂದ ಮಾಡಿಸಿದ ಪರಮಪೂಜ್ಯ ಶ್ರೀಸೋದೆಮಠಾಧೀಶರಿಗೆ ಕೃತಜ್ಞತಾಪೂರ್ವಕ ಪ್ರಣಾಮಗಳು.

ಈ ಸೇವೆಯ ಅವಕಾಶವು ಲಭಿಸಲು ಪೂರ್ಣಪ್ರಜ್ಞವಿದ್ಯಾಪೀಠ ಮತ್ತು ಅದರ ಕುಲಪತಿಗಳೂ, ನನ್ನ ಗುರುಗಳೂ ಆದ ಪರಮಪೂಜ್ಯ ಪೇಜಾವರ ಮಠಾಧೀಶರು (ಹಿರಿಯರು) ಮೂಲಕಾರಣ. ಪರಮಪೂಜ್ಯಗುರುಗಳಿಗೆಸಾಷ್ಟಾಂಗ ಪ್ರಣಾಮಗಳು.

ಪರಮಪೂಜ್ಯ ಸೋದೆ ಮಠಾಧೀಶರಿಗೆ ನನ್ನನ್ನು ಪರಿಚಯಿಸಿ ಈ ಸೇವೆಯ ಅವಕಾಶವನ್ನು ಕೊಡಿಸಿದ ಪಂಡಿತ ಬೆ.ನಾ. ವಿಜಯೀಂದ್ರಾಚಾರ್ಯರು ನನ್ನ ಕೃತಜ್ಞತೆಗೆ ಪಾತ್ರರು.

- ಸಿ.ಎಚ್. ಶ್ರೀನಿವಾಸಮೂರ್ತಿ ಆಚಾರ್ಯ

# ಶುದ್ಧಿಸೌರಭಮ್ - ಸಂಪುಟ ೩

## ವಿಷಯಾನುಕ್ರಮಣಿಕೆ

—o—

## ಶುದ್ಧಿಸೌರಭ ಲೇಖನಯಜ್ಞದಲ್ಲಿ ಭಾಗವಹಿಸಿದ ವಿದ್ವಾಂಸರುಗಳು

★ ವಿದ್ವಾನ್ ಯು. ಕೇಶವಬಾಯರಿ, ಬೆಂಗಳೂರು
★ ಡಾ|| ರಂಗನಾಥ ಕಟ್ಟಿ, ಬೆಂಗಳೂರು
★ ಡಾ|| ಶಂಕರನಾರಾಯಣ ಅಡಿಗ, ಬೆಂಗಳೂರು
★ ಡಾ|| ಮಾಧವಾಚಾರ್ಯ ಪಾಂಡುರಂಗಿ, ಬೆಂಗಳೂರು
★ ವಿದ್ವಾನ್ ಖೇಡ ವೇದವ್ಯಾಸಾಚಾರ್ಯ, ಬೆಂಗಳೂರು
★ ವಿದ್ವಾನ್ ಸಿ.ಎಚ್. ಬದರೀನಾಥಾಚಾರ್ಯ, ಬೆಂಗಳೂರು
★ ವಿದ್ವಾನ್ ಮಾಳಗಿ ರಾಮಾಚಾರ್ಯ, ಬೆಂಗಳೂರು
★ ವಿದ್ವಾನ್ ಕೆ. ಗಣಪತಿ ಭಟ್, ಉಡುಪಿ

ಮೂಲಪ್ರತಿಶೋಧಕರು :-

★ ವಿದ್ವಾನ್ ಬೆ.ನಾ. ವಿಜಯೀಂದ್ರಾಚಾರ್ಯ, ಮೈಸೂರು

★ ಶುದ್ಧಿಸೌರಭದ ಅನೇಕ ಭಾಗಗಳನ್ನು ಡಾ|| ಸಿ.ಎಚ್. ಶ್ರೀನಿವಾಸಮೂರ್ತಿ ಆಚಾರ್ಯರು ಅನುವಾದ ಮಾಡಿರುತ್ತಾರೆ.

॥ ಶ್ರೀಮದ್ಹನುಮದ್ಭೀಮಮಧ್ವಾಂತರ್ಗತರಾಮಕೃಷ್ಣವೇದವ್ಯಾಸಾತ್ಮಕ-
ಲಕ್ಷ್ಮೀಹಯಗ್ರೀವಾಯನಮಃ ॥

ಶ್ರೀವಾದಿರಾಜಗುರುಸಾರ್ವಭೌಮರು ಗುಣಸೌರಭದಲ್ಲಿ ಬ್ರಹ್ಮಸೂತ್ರದ ಮೊದಲನೇ ಅಧ್ಯಾಯದಲ್ಲಿ ಹೇಳಿದ ಗುಣಪೂರ್ಣತ್ವವನ್ನು ಸಮರ್ಥಿಸಿ, ಶುದ್ಧಿಸೌರಭದಲ್ಲಿ ಬ್ರಹ್ಮಸೂತ್ರದ ಎರಡನೇ ಅಧ್ಯಾಯದಲ್ಲಿ ಹೇಳಿದ ದೋಷದೂರತ್ವವನ್ನು ಸಮರ್ಥಿಸುತ್ತಿದ್ದಾರೆ.

ಮಹತ್ಸು ಗುಣಸಾರೇಷು ದೋಷಾನ್ವೇಷಣಧೀರ್ಮುಧಾ ।
ಅನಂತಗುಣಹೃದ್ಯೋಽಪಿ ನಿರವದ್ಯೋ ನ ಕಿಂ ಹರಿಃ ॥ ೧ ॥

**ಅರ್ಥ**-ಗುಣಸಾರೇಷು = ಗುಣಗಳಿಂದ ಶ್ರೇಷ್ಠರಾದ, ಮಹತ್ಸು = ಮಹಾತ್ಮರಲ್ಲಿ, ದೋಷಾನ್ವೇಷಣಧೀಃ = ದೋಷವನ್ನು ಹುಡುಕುವ ಬುದ್ಧಿಯು, ಮುಧಾ = ವ್ಯರ್ಥ. (ನರಕಾದ್ಯನರ್ಥಕ್ಕೂ ಕಾರಣ). ಹರಿಃ = ಪರಮಾತ್ಮನು, ಅನಂತಗುಣಹೃದ್ಯಃ= ಅನಂತಗುಣಗಳಿಂದ ಸುಂದರನೂ, ಅಪಿ= ಮತ್ತು, ನಿರವದ್ಯಃ = ದೋಷರಹಿತನು, ನ ಕಿಮ್= ಅಲ್ಲವೇ?

**ಅನುವಾದ**- ಗುಣಸಂಪನ್ನರಾದ ಮಹಾತ್ಮರಲ್ಲಿ ದೋಷವನ್ನು ಕಾಣುವ ಬುದ್ಧಿಯಿಂದ ಏನೂ ಪ್ರಯೋಜನವಿಲ್ಲ. ಅಷ್ಟೇ ಅಲ್ಲ, ಈ ಬುದ್ಧಿಯಿಂದ ನರಕ ಮೊದಲಾದ ಅನರ್ಥಗಳು ಸಂಭವಿಸುತ್ತವೆ. ಹರಿಯು ಅನಂತ ಗುಣಗಳಿಂದ ಮನೋಹರನೂ ಮತ್ತು ದೋಷರಹಿತನೂ ಅಲ್ಲವೆ?

**ಭಾವವಿಲಾಸಿನೀ**– ಅಧುನಾ ಗ್ರಂಥಕಾರಃ ಭಗವತೋ ನಿರ್ದೋಷತ್ವಸಮರ್ಥನಾಯ ಶುದ್ಧಿಸೌರಭಸರ್ವಸ್ವಮಾರಭತೇ । ತತ್ರಾದೌ ಲೋಕನೀತ್ಯಾ ನಿರ್ದೋಷತ್ವಂ ಸಮರ್ಥಯತೇ ಮಹತ್ಸ್ವಿತಿ ॥ ಗುಣಸಾರೇಷು ಗುಣಶ್ರೇಷ್ಠೇಷು ಮಹತ್ಸುಮಹಾಪುರುಷೇಷು ದೋಷಾನ್ವೇಷಣಧೀರ್ಮುಧಾ ವ್ಯರ್ಥಾ । ಮುಧೇತ್ಯುಪಲಕ್ಷಣಮ್ । ನರಕಹೇತುತಯಾಽನರ್ಥದಾ ಚ । ಯದಾ ಸತ್ಸು ವಿದ್ಯಮಾನಸ್ಯಾಪೀಷದ್ದೋಷಸ್ಯ ದರ್ಶನಂ ನರಕಾದ್ಯನರ್ಥಹೇತುಃ । ತದಾ ಕಿಮು ವಾಚ್ಯಮವದ್ಯಗಂಧವಿಧುರೇ ಹರೌ ದೋಷಾನುದರ್ಶನಂ ಮಹತೋಽನರ್ಥಸ್ಯ ಹೇತುರಿತಿ ಭಾವಃ । ತರ್ಹಿ ಯತ್ರ ಗುಣಾಸ್ತತ್ರ ದೋಷಾ ಇತಿ ನ್ಯಾಯಸ್ಯ ಕಾ ಗತಿಃ? ಇತಿ ಚೇದ್ ಭಗವತಿ ಭಗ್ನ ವ್ಯಾಪ್ತಿಕತ್ವಾದ್ ದುರ್ನ್ಯಾಯತ್ವೈವ ಗತಿರಿತ್ಯಾಹ ಅನಂತಗುಣಹೃದ್ಯೋಽಪೀತಿ ॥ ಹರಿಃ

ಅನಂತಗುಣಹೃದ್ಯೋऽಪಿ ನಿರವದ್ಯಃ ಕಿನ್ನ ಭವತ್ಯೇವೇತ್ಯರ್ಥಃ । ಹರಿರಿತ್ಯನೇನ ಭಗವತೋ ನಿರ್ದೋಷತ್ವೇ ಸಕಲದೋಷನಿರ್ಹರಣಸಮರ್ಥತ್ವರೂಪಯುಕ್ತಿಂ ಸೂಚಯತಿ ॥ ೧ ॥

**ವಿವರಣೆ–** ಗುಣ ಸಂಪನ್ನರಾದ ಮಹಾತ್ಮರಲ್ಲಿ ದೋಷವಿದ್ದರೂ ಅದನ್ನು ಅನ್ವೇಷಿಸಬಾರದು ಮತ್ತು ಪರಿಗಣಿಸಬಾರದು. ಹೀಗಿರುವಾಗ ದೋಷರಹಿತನಾದ ಶ್ರೀಹರಿಯಲ್ಲಿ ದೋಷಾನ್ವೇಷಣವು ಸರಿಯಲ್ಲ ಎಂದು ಹೇಳಬೇಕೆ?

ಎಲ್ಲಿಗುಣವಿದೆಯೋ ಅಲ್ಲಿದೋಷವಿದೆ ಎಂಬ ನಿಯಮಕ್ಕೆ ಏನು ಗತಿ? ಈ ನಿಯಮವು ಶ್ರೀಹರಿಗೆ ಅನ್ವಯವಾಗುವುದಿಲ್ಲ. ಹರಿ ಎಂಬ ಶಬ್ದದಿಂದ ಸಕಲದೋಷವನ್ನು ಪರಿಹರಿಸುವವವನಾದ್ದರಿಂದ ಅವನು ನಿರ್ದೋಷ ಎಂದು ಸೂಚಿಸುತ್ತಿದ್ದಾರೆ.

'ಯದ್ಧಿ ಯುಕ್ತ್ಯಾ ವಿರುದ್ಧ್ಯೇತ ತದೀಶಕೃತಮೇವ ಹಿ' ಎಂದು,

ಕೃತ್ಸ್ನಪ್ರಸಕ್ತಿರ್ನಿರವಯವತ್ವಶಬ್ದಕೋಪೋ ವಾ (೨.೧.೨೭)

ಎಂಬ ಬ್ರಹ್ಮಸೂತ್ರದ ಭಾಷ್ಯದಲ್ಲಿ ಆಚಾರ್ಯಮಧ್ವರು ಹೇಳಿದ್ದಾರೆ. ಯಾವುದು ಲೌಕಿಕಯುಕ್ತಿಗೆ ವಿರುದ್ಧವೋ ಅದು ಭಗವಂತನ ಅಚಿಂತ್ಯಶಕ್ತಿಯಿಂದ ಯುಕ್ತವಾಗುವುದು ಎಂದು ಈ ಮಾತಿನ ಅರ್ಥ. ಆದ್ದರಿಂದ ಎಲ್ಲಿ ಗುಣಗಳಿವೆಯೋ ಅಲ್ಲಿ ದೋಷವಿದೆ ಎಂಬ ಲೋಕಯುಕ್ತಿಯು ಭಗವಂತನಿಗೆ ಅನ್ವಯಿಸುವುದಿಲ್ಲ.

ಸಕಲಜಗತ್ಸಂಹಾರವನ್ನು ಮಾಡಿದರೂ ಶ್ರೀಹರಿಯು ದೋಷಲೇಪವಿಲ್ಲದವನು ಎಂದು ಲೋಕನೀತಿಯಿಂದ ಸಾಧಿಸುತ್ತಾರೆ -

**ಯೋऽಸೌ ಲಘೀಯಸೋ ದೋಷೋ ನಾಸೌ ದೋಷೋ ಗರೀಯಸಃ ।**
**ಅಪಿ ಸಂಹೃತ್ಯ ನಿಖಿಲಮಪವಾದೀ ಕಿಮಚ್ಯುತಃ ॥ ೨ ॥**

**ಅರ್ಥ-** ಲಘೀಯಸಃ = ಅಲ್ಪನಿಗೆ, ಯಃ= ಯಾವುದು, ಅಸೌದೋಷಃ= ಲೋಕ ಪ್ರಸಿದ್ಧವಾದ ದೋಷವೋ, ಅಸೌ = ಇದು, ಗರೀಯಸಃ = ದೊಡ್ಡವರಿಗೆ, ದೋಷಃ ನ = ದೋಷವಲ್ಲ, ಅಚ್ಯುತಃ = ಕರ್ಮಲೇಪರಹಿತನಾದ ಶ್ರೀಹರಿಯು, ನಿಖಿಲಂ ಜಗತ್ = ಎಲ್ಲ ಜಗತ್ತನ್ನು, ಸಂಹೃತ್ಯ ಅಪಿ = ಸಂಹರಿಸಿಯೂ, ಅಪವಾದೀ ಕಿಮ್? = (ಎಲ್ಲವನ್ನೂ ನಾಶಮಾಡುವವನು ಎಂಬ) ನಿಂದೆಗೆ ಗುರಿಯಾಗಿರುವನೇ?

**ಅನುವಾದ-** ಅಲ್ಪರಿಗೆ ಯಾವುದು ದೋಷವೋ ಅದು ಮಹಾತ್ಮರಿಗೆ ದೋಷವಲ್ಲ. ಉದಾ: ಅಸಂಪ್ರಜ್ಞಾತ ಸಮಾಧಿಯಲ್ಲಿಲ್ಲದವರು ಸಂಧ್ಯಾವಂದನೆ ಮೊದಲಾದ ಸತ್ಕರ್ಮಾನುಷ್ಠಾನಗಳನ್ನು ಮಾಡಲೇಬೇಕು. ಮಾಡದಿರುವುದು ಅವರಿಗೆ ದೋಷ. ಅಸಂಪ್ರಜ್ಞಾತ ಸಮಾಧಿಯಲ್ಲಿ ಇರುವವರಿಗೆ ಸಂಧ್ಯಾವಂದನೆ ಮೊದಲಾದ ಸತ್ಕರ್ಮಾನುಷ್ಠಾನಗಳನ್ನು ಮಾಡದಿರುವುದು ದೋಷವಲ್ಲ. ಇದು ಲೋಕ-

ದಲ್ಲಿರುವ ವ್ಯವಸ್ಥೆ. ಪರಮಾತ್ಮನು ಎಲ್ಲ ಮಹಾತ್ಮರನ್ನು ಮೀರಿಸಿದ ಮಹಾತ್ಮಾ. ಆದ್ದರಿಂದ ಅವನ ಯಾವ ಕೆಲಸವೂ ಅವನಿಗೆ ದೋಷವಲ್ಲ. ಆದ್ದರಿಂದಲೇ ಇಡೀ ಜಗತ್ತನ್ನು ಸಂಹರಿಸುವ ಅವನಿಗೆ ಶಾಸ್ತ್ರವಾಗಲಿ, ಲೋಕವಾಗಲಿ ಈ ಕಾರಣದಿಂದ ದೋಷವನ್ನು ಹೇಳಿಲ್ಲ.

**ಭಾವವಿಲಾಸಿನೀ–** ಪುನರಪಿ ಲೋಕನೀತ್ಯೈವ ಸಕಲಜಗತ್ಸಂಹಾರೇಽಪಿ ಹರೇರ್ನಿರ್ಲೇಪತ್ವ-ಮೇವೇತಿ ಸಾಧಯತಿ– **ಯೋಽಸಾವಿತಿ** ॥ ಲಘೀಯಸಸ್ಸಂಪ್ರಜ್ಞಾತಸಮಾಧಿಸ್ಥಯೋಗಿನಃ ಯೋಽಸೌ ದೋಷಃ ಸಂಧ್ಯಾಪರಿತ್ಯಾಗಾದಿಃ । ಅಸೌ ಗರೀಯಸಃ ಅಸಂಪ್ರಜ್ಞಾತಸಮಾಧಿಸ್ಥ-ಯೋಗಿನಃ ದೋಷೋ ನ । ಅಲ್ಪಸ್ಯ ಯೋ ದೋಷಸ್ಸಮಹತೋ ದೋಷೋ ನೇತಿ ಯಾವತ್ । ಲೋಕೇಽಪ್ಯೇವಂ ಚೇದ್ ಅಲೌಕಿಕೋಽಚ್ಯುತಃ ನ ಕರ್ಮಣಾ ಲಿಪ್ಯತೇ ಪಾಪಕೇನ" ಇತ್ಯಾದಿಶ್ರುತೇಃ ಕ್ರೂರಕರ್ಮಕರಣೇಽಪಿ ಪಾಪಲೇಪಾಖ್ಯಚ್ಯುತಿರಹಿತಃ ನಿಖಿಲಂ ಸಂಹೃತ್ಯಾಪವಾದೀ ಕಿಮ್? ನೈವೇತ್ಯರ್ಥಃ। ಪ್ರತ್ಯುತ 'ಸೃಜತ್ಯವತ್ಯತ್ತಿ ನ ತತ್ರ ಸಜ್ಜತೇ' - (ಭಾಗವತ ೧.೩.೩೬) ಇತ್ಯಾದಿನಾ ಸ್ತುತ್ಯ ಏವೇತಿ ಭಾವಃ । ಇದಮಪಿ ಪೂರ್ವಾರ್ಧೋಕ್ತ-ಲೋಕನೀತೇರುದಾಹರಣಮ್ । ಏತೇನೈವ ರಾವಣಹನನೇನ ರಾಮಸ್ಯ ಬ್ರಹ್ಮಹತ್ಯಾದಿಕಮಪಿ ಗರ್ಭಸ್ರಾವೇಣೈವ ನಿರಸ್ತಂ ವೇದಿತವ್ಯಮ್ ॥ ೨ ॥

**ವಿವರಣೆ–** ಅಲ್ಪರಿಗೆ ಯಾವುದು ದೋಷವೋ ಅದು ಮಹಾತ್ಮರಿಗೆ ದೋಷವಲ್ಲ. ಆದ್ದರಿಂದಲೇ ಸಂಪ್ರಜ್ಞಾತಸಮಾಧಿಯಲ್ಲಿರುವವನು ನಿತ್ಯಕರ್ಮವನ್ನು ಮಾಡದಿದ್ದರೆ ದೋಷ. ಆದರೆ ಅಸಂಪ್ರಜ್ಞಾತಸಮಾಧಿಯಲ್ಲಿರುವವನು ನಿತ್ಯಕರ್ಮವನ್ನು ಮಾಡದಿದ್ದರೆ ದೋಷವಿಲ್ಲ. ಆಸಕ್ತಿಯೇ ದೋಷದ ಮೂಲ. 'ಸೃಜತ್ಯವತ್ಯತ್ತಿ ನ ಸಜ್ಜತೇಽಸ್ಮಿನ್' (ಭಾಗವತ 1.3.36) ಈ ವಾಕ್ಯವು ಭಗವಂತನನ್ನು 'ಸೃಷ್ಟಿಸುತ್ತಾನೆ, ರಕ್ಷಿಸುತ್ತಾನೆ, ಸಂಹರಿಸುತ್ತಾನೆ, ಈ ಜಗತ್ತಿಗೆ ಅಂಟಿಕೊಂಡಿಲ್ಲ ಎಂದು ಹೊಗಳುತ್ತಿದೆ. ಆದ್ದರಿಂದ ಅವನು ಸಕಲ ಸಂಹಾರ ಮಾಡಿದರೂ ತೆಗಳಿಕೆಗೆ ಗುರಿಯಾಗದೆ ಸ್ತುತ್ಯನೇ ಆಗಿದ್ದಾನೆ.

ಶ್ರೀಹರಿಯಲ್ಲಿ ಉತ್ಪತ್ತಿನಾಶವೆಂಬ ದೋಷವಿಲ್ಲವೆಂಬುದನ್ನು ಕೈಮುತ್ಯನ್ಯಾಯದಿಂದ ಸಮರ್ಥಿ-ಸುತ್ತಾರೆ:-

ಯದ್ ಭಾವಿ ತದ್ಭವತ್ಯೇವ ಯದಭಾವಿ ನ ತದ್ ಭವೇತ್ ।
ಕಲ್ಪಾಂತೇ ತಲ್ಪಕಲ್ಪಂ ಯತ್ ಪತ್ರಮಾಸೀನ್ನ ಪಾದಪಃ ॥ ೩ ॥

**ಅರ್ಥ**-ಯತ್ = ಯಾವುದು, ಭಾವಿ = ಆಗಬೇಕೋ, ತತ್ = ಅದು, ಭವತಿ ಏವ = ತಪ್ಪದೇ ಆಗುವುದು. ಯತ್ = ಯಾವುದು, ಅಭಾವಿ = ಆಗಬಾರದೋ, ತತ್ = ಅದು, ನ ಭವೇತ್ = ಆಗಲಾರದು. ಯತ್= ಏಕೆಂದರೆ, ಕಲ್ಪಾಂತೇ = ಬ್ರಹ್ಮಕಲ್ಪದ ಕೊನೆಯಲ್ಲಿ, ತಲ್ಪಕಲ್ಪಂ = ಪರಮಾತ್ಮನಿಗೆ ಹಾಸಿಗೆಯಂತೆ, ಪತ್ರಂ = ಆಲದ ಎಲೆಯು, ಆಸೀತ್ = ಇತ್ತು, ಪಾದಪಃ = ಆಲದ ಮರವು, ನಾಸೀತ್ = ಇರಲಿಲ್ಲ.

**ಅನುವಾದ-** ಯಾವುದು ಆಗಬೇಕೆಂದು ಭಗವದಿಚ್ಛೆಯೋ ಅದು ಕಾರಣವಿಲ್ಲದಿದ್ದರೂ ಆಗಿಯೇ ತೀರುವುದು. ಯಾವುದು ಆಗಬಾರದೆಂದು ಭಗವತ್ಸಂಕಲ್ಪವೋ ಅದು ಸರ್ವಥಾ ಆಗಲಾರದು. ಈ ಎರಡು ನೀತಿಯನ್ನು ಸಮರ್ಥಿಸಲು ಎರಡು ದೃಷ್ಟಾಂತಗಳು - ಪ್ರಲಯಕಾಲದಲ್ಲಿ ಭಗವಂತನಿಗೆ ಹಾಸಿಗೆಯಾದ ಎಲೆಯು ಇತ್ತು, ಆದರೆ ಎಲೆಗೆ ಕಾರಣವಾದ ವೃಕ್ಷವು ಇಲ್ಲ.

**ಭಾವವಿಲಾಸಿನೀ–** ನಾರಾಯಣಸ್ಯಾವಿನಾಶಿತ್ವಂ ಅನುತ್ಪನ್ನತ್ವಂ ಚ ಕೈಮುತ್ಯೇನ ಸಾಧಯಿತುಂ ನೀತ್ಯಂತರಮಾಹ– **ಯದ್ ಭಾವೀತಿ** ॥ ಯದ್ಭಾವೀತ್ಯಾದಿನಾ ಪೂರ್ವಾರ್ಧೋಕ್ತನೀತಿದ್ವಯ-ಸ್ಯಾಪ್ಯುದಾಹರಣಮಾಹ– **ಕಲ್ಪಾಂತ ಇತಿ** ॥ ಕಲ್ಪಾಂತೇ ಬ್ರಹ್ಮಕಲ್ಪಾಂತೇ ಬ್ರಹ್ಮಪ್ರಲಯ ಇತಿ ಯಾವತ್ । ಯದ್ ಯಸ್ಮಾತ್ ತಲ್ಪಕಲ್ಪಂ ಹರೇಃ ಶಯ್ಯಾಸಮಾನಂ ಪತ್ರಂ ವಟಪತ್ರಮಾಸೀತ್ । ಇದಂ ಯದ್ ಭಾವೀತ್ಯಸ್ಯೋದಾಹರಣಮ್ । ಪಾದಪಃ ವಟವೃಕ್ಷಃ ನಾಸೀದಿತಿ ಸಂಬಂಧಃ । ಯದಭಾವೀತ್ಯಸ್ಯೇದಮುದಾಹರಣಮ್ । ಏವಂಚಾಸ್ಯ ಪತ್ರಸ್ಯ ಪಾದಪಾನಪೇಕ್ಷತ್ವಾದನುತ್ಪನ್ನತ್ವಂ ಪ್ರಲಯೇ ಸತ್ತ್ವಾದವಿನಾಶಿತ್ವಂ ಚ ಸೂಚಿತಮ್ । ಯದಾ ಪತ್ರಸ್ಯಾವಿನಾಶಿತ್ವಾದಿಕಮ್, ತದಾ ಕಿಮು ವಾಚ್ಯಂ ಪತ್ರಶಾಯಿನೋ ಹರೇರಿತಿ ಭಾವಃ ॥ ೩ ॥

**ವಿವರಣೆ–** ಯದ್ ಭಾವಿ ತದ್ ಭವತ್ಯೇವ ಎಂಬ ವಿಷಯದಲ್ಲಿ ಪತ್ರಮಾಸೀತ್ ಎಂದು ದೃಷ್ಟಾಂತ. ಯದಭಾವಿ ನ ತದ್ ಭವೇತ್ ಎಂಬುದಕ್ಕೆ ನ ಪಾದಪಃ ಎಂದು ದೃಷ್ಟಾಂತ. ಪ್ರಲಯಕಾಲದಲ್ಲಿ ಎಲೆಯು ವೃಕ್ಷವಿಲ್ಲದೆ ಇತ್ತು ಎಂದರೆ ಎಲೆಗೆ ಉತ್ಪತ್ತಿಯಿಲ್ಲ ಎಂದು ಸಿದ್ಧವಾಗುತ್ತದೆ. ಪ್ರಲಯದಲ್ಲಿಯೂ ಇರುವುದರಿಂದ ಅದಕ್ಕೆ ನಾಶವೂ ಇಲ್ಲ. ಪತ್ರಕ್ಕೇ ಉತ್ಪತ್ತಿ ಮತ್ತು ನಾಶಗಳು ಇಲ್ಲದಿರುವಾಗ ಪತ್ರಶಾಯಿಯಾದ ಶ್ರೀಹರಿಗೆ ಉತ್ಪತ್ತಿ ಮತ್ತು ನಾಶಗಳು ಇಲ್ಲ ಎಂದು ಹೇಳಬೇಕೇ?

ಪರಮಾತ್ಮನು ವಿಚಿತ್ರಶಕ್ತಿವುಳ್ಳವನು ಎಂದು 'ವಿಚಿತ್ರಶಕ್ತಿಃ ಪುರುಷಃ ಪುರಾಣಃ' - ಈ ಶ್ವೇತಾಶ್ವತರ ಶ್ರುತಿಯು ಹೇಳುತ್ತದೆ. ಇಷ್ಟೇ ಅಲ್ಲ, ಅವನು 'ಸರ್ವಶಕ್ತ. ಕರ್ತುಮ್, ಅಕರ್ತುಮ್, ಅನ್ಯಥಾಕರ್ತುಂ ಶಕ್ತಃ' ಎಂಬ ಶಾಸ್ತ್ರವಚನದಿಂದಲೂ ಇದು ತಿಳಿಯುತ್ತದೆ.

ಶ್ರೀಹರಿಗೆ ಅನುತ್ಪತ್ತಿಯನ್ನು ಇನ್ನೊಂದು ರೀತಿಯಿಂದ ವಿವರಿಸುತ್ತಾರೆ :-

**ಕೃತಿರ್ನ ಕಾರಣೇ ಯಸ್ಯ ತಸ್ಯ ಕಾರ್ಯಂ ಕುತೋ ಭವೇತ್ ।**
**ಲಯೇ ಸತಃ ಪ್ರಾಗಭಾವಾಭಾವಾನ್ನಹಿ ಹರೇರ್ಭವಃ ॥ ೪ ॥**

**ಅರ್ಥ-** ಯಸ್ಯ= ಯಾವ ಪದಾರ್ಥದ, ಕಾರಣೇ= ಕಾರಣಕ್ಕಾಗಿ, ಕೃತಿಃ= ಪ್ರಯತ್ನವು, ನ (ಸಂಭವತಿ)= ಉಪಪನ್ನವಾಗುವುದಿಲ್ಲವೋ, ತಸ್ಯ= ಆ ಪದಾರ್ಥದ, ಕಾರ್ಯಂ= ಉತ್ಪತ್ತಿಯು, ಕುತಃ= ಹೇಗೆ, ಭವೇತ್= ಆದೀತು? ಲಯೇ= ಪ್ರಲಯಕಾಲದಲ್ಲಿ, ಸತಃ

ಹರೇಃ= ಇರುವ ಶ್ರೀಹರಿಗೆ, ಪ್ರಾಗಭಾವಾಭಾವಾತ್= ಪ್ರಾಗಭಾವವು ಇಲ್ಲದಿರುವುದರಿಂದ, ನ ಭವಃ= ಉತ್ಪತ್ತಿಯು ಇಲ್ಲ.

**ಅನುವಾದ-** ಯಾವ ವಸ್ತುವಿನ ನಿರ್ಮಾಣಕ್ಕಾಗಿ ಅದರ ಕಾರಣಗಳ ಸಂಪಾದನೆಗೆ ಪ್ರಯತ್ನವು ಅಶಕ್ಯವೋ ಆ ವಸ್ತುವಿನ ಉತ್ಪತ್ತಿಯು ಹೇಗೆ ಆದೀತು? ಶ್ರೀ ಹರಿಯು ಪ್ರಲಯಕಾಲದಲ್ಲಿ ಇದ್ದಾನೆ; ಅಂದರೆ; ಅವನ ಪ್ರಾಗಭಾವವು ಇಲ್ಲ; ಅದನ್ನು ಸಂಪಾದಿಸಲು ಆಗುವುದಿಲ್ಲ. ಆದ್ದರಿಂದ ಶ್ರೀಹರಿಗೆ ಜನ್ಮವು ಇಲ್ಲ.

**ಭಾವವಿಲಾಸಿನೀ–** ಪ್ರಕಾರಾಂತರೇಣ ಹರೇರನುತ್ಪನ್ನತ್ವಂ ಸಾಧಯಿತುಂ ನೀತಿಮಾಹ–ಕೃತಿರಿತಿ ॥ ಯಸ್ಯ ಕಾರಣೇ ವಿಷಯೇ ಕೃತಿಃ ಪ್ರಯತ್ನೋ ನ । ತಸ್ಯ ಕಾರ್ಯಂ ಕುತೋ ಭವೇತ್? ನ ಕುತೋಽಪಿ । ಕಾರಣವಿಷಯಕಪ್ರಯತ್ನಮಕುರ್ವತಃ ಕಾರ್ಯಂ ಚ ನೇತಿ ಲೋಕನೀತಿಃ । ಹಿ ಯಸ್ಮಾದೇವಮ್, ತಸ್ಮಾಲ್ಲಯೇ ಪ್ರಲಯೇ ಸತಃ ವಿದ್ಯಮಾನಸ್ಯ ನಾರಾಯಣಸ್ಯ ಪ್ರಾಗ-ಭಾವಾಭಾವಾತ್ ಪ್ರಾಗಭಾವಾಖ್ಯಕಾರಣಾಭಾವಾದ್ ಭವಃ ಉತ್ಪತ್ತಿರ್ನ । ಹರೇರುತ್ಪನ್ನತ್ವಂ ವದತಾ ತದುತ್ಪತ್ತಿಕಾರಣೀಭೂತತತ್ಪ್ರಾಗಭಾವೇಽಪಿ ಕೃತಿಃ ಕರ್ತವ್ಯಾ । ಸಾ ಚೋಕ್ತರೀತ್ಯಾ ಶಕ್ಯತ್ವೇನ ನಾಸ್ತಿ ಚೇದ್ ಉತ್ಪತ್ತಿಕಥನಂ ವ್ಯಾಹತಮಿತಿ ಭಾವಃ ॥ ೪ ॥

**ವಿವರಣೆ–** ಯಾವುದೇ ಪದಾರ್ಥದ ಉತ್ಪತ್ತಿಗೆ ಆ ಪದಾರ್ಥದ ಪ್ರಾಗಭಾವವು ಒಂದು ನಿಮಿತ್ತಕಾರಣ. ಶ್ರೀಹರಿಯು ಲಯಕಾಲದಲ್ಲೂ ಇರುವುದರಿಂದ ಅವನ ಪ್ರಾಗಭಾವವು ಇಲ್ಲ. ಅದನ್ನು ಸಂಪಾದಿಸಲು ಆಗುವುದಿಲ್ಲ. ಪ್ರಾಗಭಾವವು ಇಲ್ಲದಿರುವುದರಿಂದ ಉತ್ಪತ್ತಿಗೆ ಬೇಕಾದ ಬೇರೆ ಕಾರಣಗಳ ಸಂಪಾದನೆಗಾಗಿ ಪ್ರವೃತ್ತಿಯೂ ಉಪಪನ್ನವಲ್ಲ. ಆದ್ದರಿಂದ ಶ್ರೀಹರಿಗೆ ಜನ್ಮವಿಲ್ಲ.

ಶ್ರೀಹರಿಗೆ ಉತ್ಪತ್ತಿಯಿಲ್ಲ ಎಂಬ ವಿಷಯದಲ್ಲಿ ಸರ್ವಸಮ್ಮತವಾದ ಇನ್ನೊಂದು ಯುಕ್ತಿಯನ್ನು ಹೇಳುತ್ತಾರೆ-

**ನಾಭಿಜನ್ಮಾ ವಿಧಿಸ್ತಸ್ಯ ಕ್ರೋಧಾಜ್ಜಾತಸ್ತ್ರಿಲೋಚನಃ ।**
**ನಾರಾಯಣೋ ಮೂಲರೂಪೀ ಜಾತಃ ಕಸ್ಮಾದ್ ವಿಚಾರ್ಯತಾಮ್ ॥೫॥**

**ಅರ್ಥ-**ವಿಧಿಃ= ಚತುರ್ಮುಖ ಬ್ರಹ್ಮದೇವರು, ತಸ್ಯ = ಶ್ರೀಹರಿಯ, ನಾಭಿಜನ್ಮಾ = ನಾಭಿಯಿಂದ ಹುಟ್ಟಿದರು, ತ್ರಿಲೋಚನಃ = ರುದ್ರದೇವರು, ತಸ್ಯ = ಶ್ರೀಹರಿಯ, ಕ್ರೋಧಾತ್ = ಸಿಟ್ಟಿನಿಂದ, ಜಾತಃ = ಹುಟ್ಟಿದರು. ಮೂಲರೂಪೀ = ಮೂಲರೂಪನಾದ, ನಾರಾಯಣಃ = ನಾರಾಯಣನು, ಕಸ್ಮಾತ್ = ಯಾರಿಂದ, ಜಾತಃ? = ಹುಟ್ಟಿದನು? ವಿಚಾರ್ಯತಾಂ = ವಿಮರ್ಶಿಸಲ್ಪಡಲಿ.

**ಅನುವಾದ-** ಚತುರ್ಮುಖಬ್ರಹ್ಮದೇವರು ಶ್ರೀಹರಿಯ ನಾಭಿಯಿಂದ ಹುಟ್ಟಿದರು. ರುದ್ರದೇವರು ಶ್ರೀಹರಿಯ ಕ್ರೋಧದಿಂದ ಹುಟ್ಟಿದರು 'ಯಸ್ಯ ಪ್ರಸಾದಜೋ

ಬ್ರಹ್ಮಾ ರುದ್ರಶ್ಚ ಕ್ರೋಧಸಂಭವಃ' ಎಂಬ ಮಹಾಭಾರತವಚನದಿಂದ ಈ ವಿಷಯವು ತಿಳಿಯುತ್ತದೆ. ಆದರೆ ನಾರಾಯಣನ ಜನ್ಮವು ಯಾರಿಂದ ಆಯಿತು ಎಂದು ಯಾವ ಗ್ರಂಥವೂ ಹೇಳಿಲ್ಲ. ಆದ್ದರಿಂದ ಅವನಿಗೆ ಜನ್ಮವು ಇಲ್ಲ.

**ಭಾವವಿಲಾಸಿನೀ–** ಹರೇರ್ಜನ್ಮಾಭಾವೇ ಸರ್ವಜನಸಂಪ್ರತಿಪನ್ನಂ ಯುಕ್ತ್ಯಂತರಂ ಚಾಹ–**ನಾಭಿಜನ್ಮೇತಿ।** ತಸ್ಯ ಹರೇರ್ನಾಭಿಜನ್ಮಾ ವಿಧಿಃ ತ್ರಿಲೋಚನಃ ಕ್ರೋಧಜನ್ಮೇತಿ। **ಯಸ್ಯ ಪ್ರಸಾದಜೋ ಬ್ರಹ್ಮಾ ರುದ್ರಶ್ಚ ಕ್ರೋಧಸಂಭವಃ'** ಇತಿ ಭಾರತೇ ಪ್ರಸಿದ್ಧಃ। ಮೂಲರೂಪೀ ನಾರಾಯಣಃ ಕಸ್ಮಾತ್ ಪುರುಷಾಜ್ಜಾತ ಉತ್ಪನ್ನಃ? ವಿಚಾರ್ಯತಾಂ ಲೋಕೇ ವೇದೇ ಚ । ಕೃಷ್ಣರಾಮಾದೀನಾಂ ವಸುದೇವಾದಿಭ್ಯೋ ಜನಿಂ ವದನ್ನಪ್ಯಜ್ಞೋ ಲೋಕಃ ಮೂಲರೂಪಿಣೋ ನಾರಾಯಣಸ್ಯ ನ ಕಸ್ಯಚಿತ್ ಸಕಾಶಾಜ್ಜನಿಂ ವದತೀತ್ಯತೋ ಮೂಲರೂಪೀತ್ಯುಕ್ತಮ್ । ತಸ್ಯಾಪಿ ಜನಕೋಽಸ್ತಿ ಚೇದ್ ಬ್ರಹ್ಮಾದೀನಾಮಿವ ಲೋಕೇ ವೇದೇ ಚ ಪ್ರಸಿದ್ಧಃ ಸ್ಯಾತ್ । ಸರ್ವತ್ರಾಪ್ಯಪ್ರಸಿದ್ಧಸ್ಯ ಚ ಶಶವಿಷಾಣವದಭಾವ ಏವ । ಜನಕಾಭಾವಾಜ್ಜನೇರಪ್ಯಭಾವ ಇತಿ ಭಾವಃ ॥ ೫ ॥

**ವಿವರಣೆ–** ಪಾಮರಜನರು ಕೃಷ್ಣ-ರಾಮ ಮೊದಲಾದವರಿಗೆ ವಸುದೇವ, ದಶರಥ ಮೊದಲಾದವರಿಂದ ಜನ್ಮವಾಯಿತು ಎಂದು ಹೇಳುತ್ತಾರೆ; ಆದರೆ ಮೂಲರೂಪಿ ನಾರಾಯಣನಿಗೆ ಯಾರಿಂದಲೂ ಜನ್ಮವನ್ನು ಹೇಳುವುದಿಲ್ಲ. ಅವನಿಗೂ ಜನಕನು ಇದ್ದಿದ್ದರೆ ಪೌರುಷೇಯ ಮತ್ತು ಅಪೌರುಷೇಯ ಗ್ರಂಥಗಳಲ್ಲಿ ಇದು ಪ್ರಸಿದ್ಧವಾಗಬೇಕಿತ್ತು. ಪ್ರಸಿದ್ಧವಾಗಿಲ್ಲ. ಎಲ್ಲೂ ಪ್ರಸಿದ್ಧವಾಗದ ನಾರಾಯಣಜನಕನು, ಮೊಲದ ಕೊಂಬಿನಂತೆ, ಇಲ್ಲವೇ ಇಲ್ಲ. ಜನಕನು ಇಲ್ಲದಿರುವುದರಿಂದ ನಾರಾಯಣನಿಗೆ ಜನ್ಮವೂ ಇಲ್ಲ.

ಪ್ರಲಯದಲ್ಲಿ ಶ್ರೀಹರಿಯು ಇರುವುದರಿಂದ ಅವನಿಗೆ ಉತ್ಪತ್ತಿಯಿಲ್ಲ ಎಂದು ಹೇಳಿ ಇದೇ ಕಾರಣದಿಂದ ನಾಶವೂ ಇಲ್ಲವೆಂದು ಸಿದ್ಧವಾಗುವುದು ಎಂದು ಹೇಳುತ್ತಾರೆ -

**ಅತೋಽಭೂದ್ದೇಹಲೀದೀಪಃ ಪ್ರಲಯೇ ಸತ್ತ್ವಮೀಶಿತುಃ ।**
**ಕಲ್ಪಾಂತೇ ಯಲ್ಲಯಂ ರುಂಧೇ ಕಲ್ಪಾದೌ ಜನ್ಮ ಚ ಪ್ರಭೋಃ ॥ ೬ ॥**

**ಅರ್ಥ**-ಯದ್ = ಯಾವ ಕಾರಣದಿಂದ, ಈಶಿತುಃ = ಸ್ವಾಮಿಯಾದ ನಾರಾಯಣನ, ಪ್ರಲಯೇ ಸತ್ವಂ = ಪ್ರಲಯದಲ್ಲಿ ಇರುವಿಕೆಯು, ಪ್ರಭೋಃ = ಸ್ವಾಮಿಯಾದ ಶ್ರೀಹರಿಗೆ, ಕಲ್ಪಾಂತೇ = ಬ್ರಹ್ಮಕಲ್ಪದ ಅಂತ್ಯದಲ್ಲಿ, ಲಯಂ = ನಾಶವನ್ನು, ಕಲ್ಪಾದೌ = ಕಲ್ಪದ ಆದಿಯಲ್ಲಿ, ಜನ್ಮ ಚ = ಹುಟ್ಟುವಿಕೆಯನ್ನೂ, ರುಂಧೇ = ತಡೆಯುತ್ತದೆಯೋ, ಅತಃ = ಆದ್ದರಿಂದ, ದೇಹಲೀದೀಪಃ = ಹೊಸ್ತಿಲಮಧ್ಯದಲ್ಲಿ ಇಟ್ಟ ದೀಪವು, ಅಭೂತ್ = ಆಯಿತು.

**ಅನುವಾದ-** ಪ್ರಲಯಕಾಲದಲ್ಲಿ ಸರ್ವಶಾಸಕನಾದ ಪರಮಾತ್ಮನ ಸ್ಥಿತಿಯು ಕಲ್ಪದ ಕೊನೆಯಲ್ಲಿ ಅವನ ಲಯವನ್ನು, ಕಲ್ಪದ ಆದಿಯಲ್ಲಿ ಜನ್ಮವನ್ನೂ ತಡೆಯುತ್ತದೆ.

(ನಾಶ- ಜನ್ಮಗಳು ಇಲ್ಲ ಎಂದು ತಿಳಿಸುತ್ತದೆ). ಆದ್ದರಿಂದ ಈಶನ ಪ್ರಲಯಕಾಲದಲ್ಲಿ ಸ್ಥಿತಿಯು ಹೊಸ್ತಿಲ ಮೇಲಿನ ದೀಪ.

**ಭಾವವಿಲಾಸಿನೀ–** ಪ್ರಲಯೇ ಸತಃ ಪ್ರಾಗಭಾವಾಭಾವಾತ್ ನ ಜನಿರಿತ್ಯುಕ್ತಮ್ । ಅಧುನಾ ಪ್ರಲಯೇ ಸತ್ತ್ವೇನ ಜನ್ಮಮರಣಯೋರುಭಯೋರಪ್ಯಭಾವಃ ಸಿದ್ಧ್ಯತೀತ್ಯಾಹ– **ಅತ ಇತಿ** ॥ ಯದ್ ಯಸ್ಮಾದೀಶಿತುರ್ನಾರಾಯಣಸ್ಯ ಪ್ರಲಯೇ ಸತ್ತ್ವಂ ಕಲ್ಪಾಂತೇ ಬ್ರಹ್ಮಕಲ್ಪಾಂತೇ ಕಲ್ಪಾದೌ ಬ್ರಹ್ಮಕಲ್ಪಾದೌ ಪ್ರಭೋರ್ಜನ್ಮ ಚೇತಿ ಸಂಬಂಧಃ । ಅತಃ ದೇಹಲೀದೀಪಃ ಗೃಹಸ್ಯಾಂತರ್ಬಹಿಃಪ್ರಕಾಶಕದೇಹಲೀದೀಪೋಪಮೋಽಭೂತ್ ದೇಹಲೀದೀಪವದುಭಯಸಾಧಕೋಽಭೂದಿತಿ ಭಾವಃ । ಸರ್ವಸ್ಯ ಲಯೇಽಪ್ಯಲೀನತ್ವಾತ್ ಸರ್ವೋತ್ಪತ್ತೇಃ ಪೂರ್ವಂ ವಿದ್ಯಮಾನತ್ವಾಚ್ಚ ಹರೇರ್ಜನ್ಮಮರಣಾಭಾವ ಇತಿ ಫಲಿತೋಽರ್ಥಃ ॥ ೬ ॥

**ವಿವರಣೆ–** ಹೊಸ್ತಿಲ ಮೇಲಿನ ದೀಪವು ಎರಡು ಕಡೆ ಬೆಳಕನ್ನು ಚಲ್ಲುವಂತೆ ಪ್ರಲಯ ಕಾಲದಲ್ಲಿ ಶ್ರೀಹರಿಯ ಸ್ಥಿತಿಯು ಪೂರ್ವಕಲ್ಪದ ಕೊನೆಯಲ್ಲಿ ಅವನ ನಾಶವು ಆಗಿಲ್ಲ ಎಂದು, ಮುಂದಿನ ಕಲ್ಪದ ಆದಿಯಲ್ಲಿ ಜನ್ಮವು ಆಗುವುದಿಲ್ಲ ಎಂದೂ ದೃಢಪಡಿಸುತ್ತದೆ.

ಶ್ರೀಹರಿಯು ಜಗತ್ತಿನ ಸೃಷ್ಟಿ ಮೊದಲಾದವುಗಳನ್ನು ಫಲಾಪೇಕ್ಷೆಯಿಂದ ಮಾಡುತ್ತಾನೆ, ಆದ್ದರಿಂದ ಅವನು ಅಪೂರ್ಣ? ಈ ಪ್ರಶ್ನೆಗೆ ಉತ್ತರವನ್ನು ಹೇಳುತ್ತಾರೆ-

**ಪೂರ್ಣಪ್ರವೃತ್ತಿರನ್ಯಾರ್ಥಾ ನವೈ ಪೂರ್ತ್ಯರ್ಥಮಾತ್ಮನಃ ।**
**ತಟಾಕೋತ್ಸಿಕ್ತತೋಯೈಃ ಕಿಂ ತಟಾಕಸ್ಯೈವ ಪೂರಣಮ್ ॥ ೭ ॥**

**ಅರ್ಥ**-ಪೂರ್ಣಪ್ರವೃತ್ತಿಃ = ಪೂರ್ಣರಾದವರ ಪ್ರವೃತ್ತಿಯು, ಅನ್ಯಾರ್ಥಾ = ಇನ್ನೊಬ್ಬರ ಉಪಕಾರಕ್ಕೋಸ್ಕರ, ಆತ್ಮನಃ = ತನ್ನ ಪೂರ್ತ್ಯರ್ಥಂ = ಪೂರ್ತಿಗಾಗಿ, ನವೈ = ಅಲ್ಲವೇ ಅಲ್ಲ, ತಟಾಕೋತ್ಸಿಕ್ತತೋಯೈಃ = ಕೆರೆಯಿಂದ ಹೊರಗೆ ಹರಿದ ನೀರಿನಿಂದ, ತಟಾಕಸ್ಯೈವ ಪೂರಣಂ ಕಿಮ್? = ಕೆರೆಯ ಭರ್ತಿಯೇ ಆಗುವುದೇ?

**ಅನುವಾದ-** ಪೂರ್ಣರಾದವರ ಪ್ರವೃತ್ತಿಯು ಪರರ ಪ್ರಯೋಜನಕ್ಕಾಗಿ, ತಮ್ಮ ಅವಶ್ಯಕತೆಗಳನ್ನು ಪೂರೈಸಲು ಅಲ್ಲ. ಕೆರೆಯು ತುಂಬಿ ಹೊರಗೆ ಹರಿದ ನೀರಿನಿಂದ ಕೆರೆಯೇ ತುಂಬುವುದೇ?

**ಭಾವವಿಲಾಸಿನೀ–** ಜಗತ್ ಸೃಷ್ಟ್ಯಾದೌ ಪ್ರವರ್ತಮಾನಸ್ಯಾಪೂರ್ಣತಾ ಸ್ಯಾದಿತ್ಯಾಶಂಕ್ಯ ಪರಾರ್ಥಂ ಪ್ರವರ್ತಮಾನಸ್ಯ ನಾಪೂರ್ತಿರಿತ್ಯತ್ರ ಯುಕ್ತಿಮಾಹ– **ಪೂರ್ಣೇತಿ** ॥ ಪೂರ್ಣಸ್ಯ ಸದಾ ಪರಿಪೂರ್ಣಸ್ಯ । ಅನ್ಯಾರ್ಥಾ ಲೋಕೋಪಕಾರಾರ್ಥಾ । ತತ್ರ ದೃಷ್ಟಾಂತಃ– **ತಟಾಕೇತಿ** ॥ ತಟಾಕೋತ್ಸಿಕ್ತೈಃ ತಟಾಕಮಾಪೂರ್ಯೋಪರಿನಿಸ್ಸೃತೈಃ । ಪೂರಣಂ ಕಿಮ್? ನೈವೇತಿ ಸಂಬಂಧಃ ।

**ಯಥಾ ಪರಿಪೂರ್ಣತಟಾಕೋತ್ಸಿಕ್ತತೋಯೇನ ಕೇದಾರಾದೀನಾಮೇವೋಪಜೀವನಂ ತಥಾಸ್ಯ ಹರೇಃ ಪ್ರವೃತ್ತಿರನ್ಯೇಷಾಂ ಸ್ವರ್ಗನರಕಮೋಕ್ಷತಮೋರೂಪಫಲದಾನಾಯೇತಿ ಭಾವಃ ॥ ೭॥**

**ವಿವರಣೆ–** (1) ಪೂರ್ಣರಾದವರು ತಮಗಾಗಿ ಪ್ರವೃತ್ತಿಯನ್ನು ಮಾಡುವುದಿಲ್ಲ (ಉದಾ: ಆಹಾರ- ಆರೋಗ್ಯ- ವಸತಿ ಇತ್ಯಾದಿಗಳಲ್ಲಿ ಪೂರ್ಣತೆಯನ್ನು ಹೊಂದಿದವರು ಪರೋಪಕಾರಕ್ಕಾಗಿ ಅಥವಾ ಸಂಗೀತ ಮೊದಲಾದ ಕಲೆಗಳ ಆರಾಧನೆಗಾಗಿ ಪ್ರವೃತ್ತಿಯನ್ನು ಮಾಡುತ್ತಾರೆ).

ಶ್ರೀಹರಿಯು ಎಲ್ಲ ವಿಧಗಳಿಂದಲೂ ಪೂರ್ಣ. ಆದ್ದರಿಂದ ಅವನ ಯಾವ ಪ್ರವೃತ್ತಿಯೂ ಅವನ ಲಾಭಕ್ಕಾಗಿ ಅಲ್ಲ. ಕೆರೆಯ ತುಂಬಿ ಹೊರಗೆ ಹರಿದ ನೀರಿನಿಂದ ಕೆರೆಯೇ ತುಂಬುವುದಿಲ್ಲ. ಜ್ಞಾನ-ಆನಂದ ಮೊದಲಾದವುಗಳಿಂದ ಪೂರ್ಣನಾದ ಶ್ರೀಹರಿಯು ಪ್ರವೃತ್ತಿಗಳು ಅವನಲ್ಲಿ ಏನನ್ನೂ ತುಂಬುವುದಿಲ್ಲ. ಅವನ ಜಗತ್ ಸೃಷ್ಟ್ಯಾದಿವ್ಯಾಪಾರಗಳು ಅನಂತಜೀವರ ವಿಭಿನ್ನ ಯೋಗ್ಯತಾತಾರತಮ್ಯಾನುಗುಣವಾದ ವಿಭಿನ್ನಜ್ಞಾನಕರ್ಮಾದಿ-ವ್ಯಾಪಾರತಾರತಮ್ಯಾನುಸಾರವಾಗಿ ಸ್ವರ್ಗನರಕಮೋಕ್ಷತಮೋರೂಪಫಲಪ್ರದಾನಕ್ಕಾಗಿಯೇ ಹೊರತು ಸುತರಾಂ ಸ್ವಪ್ರಯೋಜನಕ್ಕಾಗಿ ಅಲ್ಲ.

(2) 'ನ ಪ್ರಯೋಜನವತ್ತ್ವಾತ್' (2.1.33)- ಈ ಬ್ರಹ್ಮಸೂತ್ರದ ಭಾಷ್ಯದಲ್ಲಿ ಶ್ರೀಮಧ್ವಾಚಾರ್ಯರು 'ಕೃತಕೃತ್ಯತ್ವಾತ್ ನ ಪ್ರಯೋಜನಾಯ ಸೃಷ್ಟಿಃ' ಎಂದು ಹೇಳಿ ಇದಕ್ಕೆ ಆಧಾರವಾಗಿ 'ಅಥ ಏಷ ಏವ ಪರಮ ಆನಂದಃ' ಎಂಬ ಶ್ರುತಿಯನ್ನು ಉದಾಹರಿಸಿದ್ದಾರೆ. ಪರಮಾನಂದಸ್ವರೂಪನು ಯಾವ ಕೆಲಸದಿಂದ ಏನನ್ನು ಪಡೆಯಬೇಕು? ಆದ್ದರಿಂದ ಅವನು ಮಾಡುವ ಸೃಷ್ಟಿಯು ಅವನ ಪ್ರಯೋಜನಕ್ಕಾಗಿ ಅಲ್ಲ.

ಶ್ರೀಹರಿಯ ನಿರ್ದುಃಖತ್ವವನ್ನು ಮತ್ತು ಭ್ರಾಂತಿರಾಹಿತ್ಯವನ್ನು ಯುಕ್ತಿಯಿಂದ ಸಾಧಿಸುತ್ತಾರೆ -

**ಸುಖಸ್ಯಾನಂತರಂ ದುಃಖಂ ಭ್ರಮೋ ನ ಪ್ರಮಯಾ ಸಹ ।**
**ನಹಿ ಪೂರ್ಣಸುಖಜ್ಞಾನೋ ದುಃಖಭ್ರಾಂತ್ಯವಕಾಶವಾನ್ ॥ ೮ ॥**

**ಅರ್ಥ**-ಸುಖಸ್ಯ = ಸುಖದ, ಅನಂತರಂ = ಅನಂತರವೇ, ದುಃಖಂ= ದುಃಖವು, (ಭವೇದ್ ಅಪಿ= ಸಂಭವಿಸೀತು, ಸುಖ ಕಾಲದಲ್ಲೇ ಅಲ್ಲ ), ಪ್ರಮಯಾ = ಯಥಾರ್ಥಜ್ಞಾನದ ಜತೆಗೇ, ಭ್ರಮಃ = ಭ್ರಾಂತಿಯು, ನ = ಇಲ್ಲ, ತಸ್ಮಾತ್ = ಆದ್ದರಿಂದ, ಪೂರ್ಣಸುಖಜ್ಞಾನಃ = ಪರಿಪೂರ್ಣಸುಖ ಮತ್ತು ಪರಿಪೂರ್ಣಜ್ಞಾನವುಳ್ಳ ಶ್ರೀಹರಿಯು, ದುಃಖಭ್ರಾಂತ್ಯವಕಾಶವಾನ್ ನ= ದುಃಖ ಮತ್ತು ಭ್ರಾಂತಿಗೆ ಅವಕಾಶವುಳ್ಳವನು ಅಲ್ಲ.

**ಅನುವಾದ-** ಸುಖದ ಅನಂತರವೇ ದುಃಖ (ಏಕಕಾಲದಲ್ಲಿ ಅಲ್ಲ) ಯಥಾರ್ಥ ಜ್ಞಾನದ ಜತೆಗೇ ಭ್ರಮೆಯು ಇರುವುದಿಲ್ಲ. ಪೂರ್ಣಸುಖ ಮತ್ತು ಪೂರ್ಣಜ್ಞಾನವುಳ್ಳ ಶ್ರೀಹರಿಯಲ್ಲಿ ದುಃಖ ಮತ್ತು ಭ್ರಾಂತಿಗೆ ಅವಕಾಶವಿಲ್ಲ.

**ಭಾವವಿಲಾಸಿನೀ–** ಹರೇರ್ನಿರ್ದುಃಖತ್ವಂ ಭ್ರಮರಹಿತತ್ವಂ ಚ ಯುಕ್ತ್ಯಾ ಸಾಧಯಿತುಮಾಹ– **ಸುಖಸ್ಯೇತಿ** ।। ಹಿ ಯಸ್ಮಾದ್ ದುಃಖಂ 'ಸುಖಸ್ಯಾನಂತರಮ್, ನತು ಸುಖೇನ ಸಹ । ಸುಖಸ್ಯಾನಂತರಂ ದುಃಖಂ ದುಃಖಸ್ಯಾನಂತರಂ ಸುಖಮ್' ಇತಿ ವಚನಾತ್ । ಯದ್ಯಪಿ ಪಾದೇ ಮೇ ವೇದನಾ, ಶಿರಸಿ ಸುಖಮಿತ್ಯಸ್ತಿ, ತಥಾಪಿ ಯದವಚ್ಛೇದೇನ ಯದಾ ಸುಖಮ್, ತದವಚ್ಛೇದೇನ ತದಾ ನ ದುಃಖಮಿತಿ ನಿಯಮಸ್ಯ ನ ಭಂಗಃ । ಪ್ರಮಯಾ ಸಹ ನೇತಿ ಸಂಬಂಧಃ । ಅತ್ರಾಪಿ ಯದಂಶೇ ಪ್ರಮಾ, ತದಂಶೇ ನ ಭ್ರಮ ಇತಿ ನಿಯಮೋ ವಿವೇಕ್ತವ್ಯಃ । ತಸ್ಮಾತ್ ಪೂರ್ಣಸುಖಜ್ಞಾನಃ ಪೂರ್ಣೇ ಸುಖಜ್ಞಾನೇ ಯಸ್ಯೇತಿ ವಿಗ್ರಹಃ । ಜ್ಞಾನಪದೇನ ಸಮ್ಯಜ್ಞಾನಮುಚ್ಯತೇ । ಸರ್ವತ್ರ ಸರ್ವದಾ ಪೂರ್ಣಸುಖಜ್ಞಾನವಾನಿತ್ಯರ್ಥಃ । ದುಃಖಭ್ರಾನ್ತ್ಯವಕಾಶವಾನ್ ದುಃಖಭ್ರಾಂತ್ಯೋರವಕಾಶವಾನ್ನೇತಿ ಸಂಬಂಧಃ । ಭಗವತಿ ಸುಖಸಮ್ಯಜ್ಞಾನಯೋಃ ಕದಾಪ್ಯನಪಗಮಾತ್ ಸುಖಾದೌ ಚ ಶ್ರುತ್ಯುಕ್ತನ್ಯಾಯೇನ ದುಃಖಭ್ರಮಯೋರಸಂಭವಾನ್ನ ತಯೋರವಕಾಶಃ । 'ವಿಜ್ಞಾನಮಾನಂದಂ ಬ್ರಹ್ಮ' ಇತ್ಯಾದಿಶ್ರುತೇರಿತಿ ಭಾವಃ ।। ೮ ।।

**ವಿವರಣೆ–** ಸುಖಸ್ಯ ಅನಂತರಂ ದುಃಖಂ, ದುಃಖಸ್ಯಾನಂತರಂ ಸುಖಂ ಎಂದು ನಿಯಮವಿದೆ ಹೌದು. ಸುಖವಿರುವಾಗಲೇ ದುಃಖವಿದೆ ಎಂದು ಇದರ ಅರ್ಥವಲ್ಲ. ಸುಖದ ಸಮಯವು ಮುಗಿದು ದುಃಖದ ಸಮಯವೂ ಬರುತ್ತದೆ; ಹೀಗೆಯೇ ದುಃಖದ ಕಾಲವು ಮುಗಿದು ಸುಖವೂ ಲಭಿಸುತ್ತದೆ ಎಂದು ಅರ್ಥ. ಶ್ರೀಹರಿಯು ನಿತ್ಯಸುಖವುಳ್ಳವನಾದ್ದರಿಂದ ಅವನ ಸುಖಕ್ಕೆ ಅವಸಾನವೇ ಇಲ್ಲ; ಆದ್ದರಿಂದ ಅವನಲ್ಲಿ ದುಃಖಕ್ಕೆ ಅವಕಾಶವಿಲ್ಲ. ಯದ್ಯಪಿ ಒಂದೇ ಸಮಯದಲ್ಲಿ ಪಾದದಲ್ಲಿ ನೋವಿನ, ತಲೆಯಲ್ಲಿ ಸುಖದ ಅನುಭವವು ಆಗುವುದು ಕಂಡುಬಂದಿದೆ. ಆದರೂ ಯಾವ ಭಾಗದಲ್ಲಿ ಸುಖವಿದೆಯೋ ಅಲ್ಲಿ ದುಃಖವಿಲ್ಲ. ಶ್ರೀಹರಿಗೆ ಯಾವಾಗಲೂ ಎಲ್ಲ ಭಾಗದಲ್ಲಿಯೂ ಸುಖವೇ ಇದೆಯಾದ್ದರಿಂದ ದುಃಖಕ್ಕೆ ಅವಕಾಶವಿಲ್ಲ. ಹಾಗೆಯೇ ಯಥಾರ್ಥಜ್ಞಾನವು (ಪ್ರಮಾ) ಇರುವಾಗಲೇ ಭ್ರಾಂತಿಯು ಉಂಟಾಗುವುದಿಲ್ಲ. ಶ್ರೀಹರಿಯು ಎಲ್ಲಾ ಕಾಲದಲ್ಲೂ ಪ್ರಮಾವುಳ್ಳವನು. ಆದ್ದರಿಂದ ಅವನಿಗೆ ಭ್ರಾಂತಿಯಿಲ್ಲ. ಲೋಕದಲ್ಲಿ ಕಪ್ಪೆಚಿಪ್ಪನ್ನು ನೋಡಿ ಇದು ಬೆಳ್ಳಿ ಎಂದು ಭ್ರಾಂತಿ ಇದೆ. ಇಲ್ಲಿ **ಇದು** ಎಂಬ ಜ್ಞಾನ ಪ್ರಮೆಯೇ ಆಗಿದೆ. ಆದ್ದರಿಂದ ಪ್ರಮಾ ಇರುವಾಗಲೇ ಭ್ರಾಂತಿಯೂ ಕಂಡಿದೆ, ನಿಜ. ಆದರೆ ಯಾವ ಅಂಶದಲ್ಲಿ ಪ್ರಮೆಯೋ ಆ ಅಂಶದಲ್ಲಿ ಭ್ರಾಂತಿಯಿಲ್ಲ. ಭಗವಂತನು ಸರ್ವವಸ್ತುವಿನ ಸರ್ವಾಂಶದಲ್ಲಿ ಪ್ರಮೆಯುಳ್ಳವನು. ಆದ್ದರಿಂದ ಅವನಿಗೆ ಯಾವ ಅಂಶದಲ್ಲೂ ಭ್ರಾಂತಿ ಇಲ್ಲ. ಅವನು ಪೂರ್ಣಸುಖಜ್ಞಾನ - ಅಂದರೆ ಸದಾ ಸರ್ವಾವಯದಲ್ಲಿ ಸಂಪೂರ್ಣಸುಖವುಳ್ಳವನು, ಸದಾ ಎಲ್ಲಾ ಅಂಶದಲ್ಲೂ ಪ್ರಮೆಯುಳ್ಳವನು ಎಂದು **ವಿಜ್ಞಾನಮಾನಂದಂ ಬ್ರಹ್ಮ** ಎಂಬ ಶ್ರುತಿಯು ಹೇಳುತ್ತಿದೆ. ಆದ್ದರಿಂದ ಲೋಕವಿಲಕ್ಷಣನಾದ ಅವನಲ್ಲಿ ದುಃಖ ಮತ್ತು ಭ್ರಾಂತಿಗೆ ಅವಕಾಶವಿಲ್ಲ. ಅವನು ದೋಷರಹಿತ.

ಶ್ರೀಹರಿಗೆ ದುಃಖವಿಲ್ಲವೆನ್ನುವುದಕ್ಕೆ ಬೇರೊಂದು ಯುಕ್ತಿಯನ್ನು ಹೇಳುತ್ತಿದ್ದಾರೆ -

**ಪ್ರಾಗ್ಜನ್ಮಾರ್ಜಿತದುಷ್ಕರ್ಮ ದುಃಖಮೂಲಂ ಧ್ರುವಂ ನೃಣಾಮ್ ।**
**ನ ಕರ್ಮಣಾ ವರ್ಧತೇ ಯೋ ನೋ ಕನೀಯಾನ್ ಕುತೋಽಸ್ಯ ತತ್ ॥ ೯ ॥**

**ಅರ್ಥ**-ನೃಣಾಂ = ಮನುಷ್ಯರಿಗೆ, ಪ್ರಾಗ್ಜನ್ಮಾರ್ಜಿತದುಷ್ಕರ್ಮ = ಹಿಂದಿನ ಜನ್ಮದಲ್ಲಿ ಸಂಪಾದಿಸಲ್ಪಟ್ಟ ದುಷ್ಕರ್ಮವು, ದುಃಖಮೂಲಂ = ದುಃಖಕ್ಕೆ ಕಾರಣ, ಧ್ರುವಂ = ಇದು ನಿಶ್ಚಿತ. ಯಃ= ಯಾವ ಪರಮಾತ್ಮನು, ಕರ್ಮಣಾ= ಪುಣ್ಯಕರ್ಮದಿಂದ, ನ ವರ್ಧತೇ= ಉತ್ಕೃಷ್ಟನಾಗುವುದಿಲ್ಲ, ಕರ್ಮಣಾ= ಪಾಪಕರ್ಮದಿಂದ, ಕನೀಯಾನ್= ನೀಚನೂ, ನ= ಆಗುವುದಿಲ್ಲವೋ, ಅಸ್ಯ = ಇಂತಹ ಶ್ರೀಹರಿಗೆ, ತತ್= ಆ ದುಃಖಭ್ರಾಂತ್ಯಾದಿಗಳು, ಕುತಃ?= ಹೇಗೆ ಉಂಟಾದೀತು?

**ಅನುವಾದ**- ಪೂರ್ವಜನ್ಮದಲ್ಲಿ ಸಂಪಾದಿಸಲ್ಪಟ್ಟ ಕರ್ಮವು ಮನುಷ್ಯರ ದುಃಖದ ಮೂಲ. ಇದು ಶಾಸ್ತ್ರಸಿದ್ಧ ವಿಷಯ. ಕರ್ಮಗಳಿಂದ ಸಂಭವಿಸುವ ವೃದ್ಧಿ-ಹ್ರಾಸಗಳಿಗೆ ಒಳಗಾಗದ ಶ್ರೀಹರಿಗೆ ಅದು= ದುಃಖ-ಭ್ರಾಂತಿಗಳು, ಹೇಗೆ ತಾನೇ ಉಂಟಾಗುತ್ತದೆ.

**ಭಾವವಿಲಾಸಿನೀ**– ಹರೇರ್ದುಃಖಾದ್ಯಭಾವೇ ಯುಕ್ತ್ಯಂತರಂ ಚಾಹ– **ಪ್ರಾಗ್ಜನ್ಮೇತಿ** ॥ ನೃಣಾಂ ಪ್ರಾಗ್ಜನ್ಮಾರ್ಜಿತದುಷ್ಕರ್ಮ ದುಃಖಮೂಲಂ ದುಃಖಸ್ಯ ಮೂಲಂ ಕಾರಣಮ್ । ಧ್ರುವಮಿತ್ಯನೇನ ಪುಣ್ಯೇನ 'ಪುಣ್ಯಂ ಲೋಕಂ ನಯತಿ ಪಾಪೇನ ಪಾಪಮ್' ಇತ್ಯಾದಿಶ್ರುತಿ-ಸಿದ್ಧತಾಂ ಸೂಚಯತಿ । ದುಃಖಪದೇನ ಭ್ರಮೋಽಪ್ಯುಪಲಕ್ಷ್ಯತೇ । ಯಃ ಪರಮಾತ್ಮಾ ಕರ್ಮಣಾ ಪುಣ್ಯಕರ್ಮಣಾ ನ ವರ್ಧತೇ ಕರ್ಮಣಾ ಪಾಪಕರ್ಮಣಾ ಚ ಕನೀಯಾನ್ ನೀಚಃ ದುಃಖ-ಭ್ರಾಂತ್ಯಾದಿನಾ ನೀಚತಾಂ ಪ್ರಾಪ್ತ ಇತ್ಯರ್ಥಃ । ನೋ ನ ಭವತಿ । ಅಸ್ಯ 'ನ ಕರ್ಮಣಾ ವರ್ಧತೇ ನೋ ಕನೀಯಾನ್' ಇತಿ ಶ್ರುತೇಃ ಪಾಪಲೇಪರಹಿತಸ್ಯ ನಾರಾಯಣಸ್ಯ ತದ್ದುಃಖಭ್ರಾನ್ತ್ಯಾದಿಕಂ ಕುತಃ? ನ ಕುತೋಽಪಿ । ಕಾರಣಾಭಾವೇ ಕಾರ್ಯಸ್ಯಾಪ್ಯಭಾವಾದಿತಿ ಭಾವಃ ॥ ೯ ॥

**ವಿವರಣೆ**– (1) ಮನುಷ್ಯರಿಗೆ ಹಿಂದಿನ ಜನ್ಮದ ಪಾಪದಿಂದಲೇ ಈ ಜನ್ಮದಲ್ಲಿ ದುಃಖಭ್ರಾಂತ್ಯಾದಿಗಳು ಸಂಭವಿಸುತ್ತವೆ ಎಂದು, 'ಪುಣ್ಯೇನ ಪುಣ್ಯಂ ಲೋಕಂ ನಯತಿ ಪಾಪೇನ ಪಾಪಂ' - 'ಪುಣ್ಯದಿಂದ ಪುಣ್ಯಲೋಕವನ್ನು ಹೊಂದಿಸುತ್ತಾನೆ, ಪಾಪದಿಂದ ಪಾಪಲೋಕವನ್ನು ಹೊಂದಿಸುತ್ತಾನೆ' ಎಂಬ ಶ್ರುತಿಯಿಂದ ಸಿದ್ಧವಾಗಿದೆ. ಶ್ರೀಹರಿಯಾದರೂ 'ನ ಕರ್ಮಣಾ ವರ್ಧತೇ ನೋ ಕನೀಯನ್' ಎಂಬ ಶ್ರುತಿಯಿಂದ ಕರ್ಮಲೇಪರಹಿತನೆಂದು ಸಿದ್ಧನಾಗಿದ್ದಾನೆ. ಆದ್ದರಿಂದ ಅವನಿಗೆ ದುಃಖ, ಭ್ರಾಂತಿಮೊದಲಾದವುಗಳು ಉಂಟಾಗುವ ಸ್ಥಿತಿಯು ಇಲ್ಲ.

(2) ಕಾರ್ಯವಿರಬೇಕಾದರೆ ಕಾರಣವಿರಬೇಕು. ದುಃಖ, ಭ್ರಾಂತಿ ಮೊದಲಾದವುಗಳಿಗೆ ಪಾಪಕರ್ಮಗಳು ಕಾರಣ. ಪಾಪಕರ್ಮಲೇಪವಿಲ್ಲದ ಹರಿಯಲ್ಲಿ ಇವುಗಳಿಗೆ ಅವಕಾಶವೇ ಇಲ್ಲ.

**ಶ್ರೀಕೃಷ್ಣ ಬೆಣ್ಣೆ ಮೊದಲಾದುದವನ್ನು ತಿಂದದ್ದರಿಂದ, ಹಾಲು ಕುಡಿದಿದ್ದರಿಂದ, ಅವನಿಗೆ ಹಸಿವು ನೀರಡಿಕೆ ಮೊದಲಾದ ದೋಷವಿದೆ ಎಂಬ ಶಂಕೆಯನ್ನು ಪರಿಹರಿಸುತ್ತಾರೆ-**

**ಕ್ಷುತ್ಪಿಪಾಸಾದಿ ಮರ್ತ್ಯಾನಾಮಾಮುಕ್ತೇರ್ನಹಿ ಸರ್ವದಾ ।**
**ಬೃಹಚ್ಛರೀರಃ ಕಿಂ ಭುಂಕ್ತೇ ಬ್ರಹ್ಮಾಂಡಂ ಯಸ್ಯ ರೋಮಸು ॥ ೧೦ ॥**

**ಅರ್ಥ**-ಮರ್ತ್ಯಾನಾಮ್= ಮನುಷ್ಯರಿಗೆ, ಕ್ಷುತ್ಪಿಪಾಸಾದಿ = ಹಸಿವು ಬಾಯಾರಿಕೆಗಳು, ಆಮುಕ್ತೇಃ = ಮುಕ್ತಿಯು ಆಗುವವರೆಗೆ ಮಾತ್ರ, ಸರ್ವದಾ = ಯಾವಾಗಲೂ, ನಹಿ = ಇಲ್ಲವಷ್ಟೇ! ಯಸ್ಯ = ಯಾವ ಭಗವಂತನ, ರೋಮಸು = ರೋಮಗಳಲ್ಲಿ, ಬ್ರಹ್ಮಾಂಡಂ = ಬ್ರಹ್ಮಾಂಡವೇ ಇದೆಯೋ, ಸಃ = ಅಂತಹ, ಬ್ರಹಚ್ಛರೀರಃ = ದೊಡ್ಡ ಶರೀರವುಳ್ಳವನು (ಹಸಿವು ಬಾಯಾರಿಕೆ ಪರಹಾರಕ್ಕಾಗಿ) ಕಿಂ ಭುಂಕ್ತೇ? = ಏನನ್ನು ತಿನ್ನುತ್ತಾನೆ?

**ಅನುವಾದ**- ಮನುಷ್ಯರಿಗೂ ಹಸಿವು ಬಾಯಾರಿಕೆಗಳು ಮೋಕ್ಷಪ್ರಾಪ್ತಿಯರೆಗೆ ಮಾತ್ರ, ಯಾವಾಗಲೂ ಇಲ್ಲ. ಹೀಗಿರುವಾಗ ನಿತ್ಯಮುಕ್ತನಾದ ಶ್ರೀಹರಿಗೆ ಹಸಿವು ಬಾಯಾರಿಕೆಗಳನ್ನು ಹೇಗೆ ಕಲ್ಪಿಸಲಾದೀತು? ಅವನ ರೋಮಕೂಪಗಳಲ್ಲಿ ಬ್ರಹ್ಮಾಂಡವೇ ಅಡಗಿದೆ. ಅಂತಹ ಬೃಹಚ್ಛರೀರನಾದ ಕೃಷ್ಣನಿಗೆ ಹಸಿವಿರುವುದಾದರೆ ಅವನು ಏನನ್ನು ತಿನ್ನಬೇಕು? ಅವನ ಹಸಿವೆಯ ಪರಿಹಾರಕ್ಕೆ ಬೇಕಾದ ಪದಾರ್ಥಗಳೇ ಜಗತ್ತಿನಲ್ಲಿಲ್ಲ.

**ಭಾವವಿಲಾಸಿನೀ**– ಇದಾನೀಂ ನವನೀತಭಕ್ಷಣಾದಿನಾ ಹರೇಃ ಕ್ಷುತ್ಪಿಪಾಸಾದಿಶಂಕಾ ಮಾಭೂದಿತ್ಯತ್ರ ಯುಕ್ತಿಮಾಹ– **ಕ್ಷುತ್ಪಿಪಾಸಾದೀತಿ** ॥ ಆಮುಕ್ತೇರ್ಮುಕ್ತಿಪರ್ಯಂತಮ್ । ಮುಕ್ತ್ಯನಂತರಂ ಮರ್ತ್ಯಾನಾಮಪಿ ನೇತ್ಯರ್ಥಃ । ನಿತ್ಯಮುಕ್ತಸ್ಯ ನಾರಾಯಣಸ್ಯ ನೇತಿ ಕಿಮು ವಕ್ತವ್ಯಮಿತಿ ಭಾವಃ। ಯುಕ್ತ್ಯಂತರಂ ಚಾಹ– **ಬೃಹಚ್ಛರೀರ ಇತಿ** ॥ ಯಸ್ಯ ರೋಮಸು ಬ್ರಹ್ಮಾಂಡಂ ತಿಷ್ಠತಿ, ಸಃ ಬೃಹಚ್ಛರೀರಃ ವ್ಯಾಪ್ತಮಹಾಮೂರ್ತಿರ್ನಾರಾಯಣಃ ಕಿಂ ಭುಂಕ್ತೇ? ನ ಕಿಮಪಿ । ತದುದರಪೂರಕಪದಾರ್ಥಸ್ಯ ಕುತ್ರಾಪ್ಯಭಾವಾತ್ । ಬ್ರಹ್ಮಾಂಡಾಧಾರವ್ಯಾಪ್ತಶರೀರತ್ವಸ್ಯ ಅಸಿದ್ಧಿಶಂಕಾಪರಿಹಾರಾಯ 'ಬೃಹಚ್ಛರೀರೋ ವಿಮಿಮಾನ ಋಕ್ವಭಿರ್ಯುವಾ ಕುಮಾರಃ ಪ್ರತ್ಯೇತ್ಯಾಹವಮ್' ಇತಿ ಶ್ರುತೌ ಪ್ರಸಿದ್ಧಬೃಹಚ್ಛರೀರಪದಗ್ರಹಣಮಿತಿ ಜ್ಞಾತವ್ಯಮ್ । ನನು ತರ್ಹಿ ತತ ಏವ ಸ್ವಯೋಗ್ಯಾನ್ನಪಾನಾದ್ಯಭಾವಾತ್ ಸರ್ವದಾ ಕ್ಷುತ್ಪಿಪಾಸಾದೀತಿ ಚೇನ್ನ। ತಥಾ ಸತಿ ಶರೀರಕಾರ್ಶ್ಯಾದೇರಪ್ಯಾವಶ್ಯಕತ್ವೇನ ಶ್ರುತ್ಯುಕ್ತಬೃಹಚ್ಛರೀರಸ್ಯ ವಿಶೇಷೇಣ ಮಿಮಾನ ಇತಿ ವಿಮಿಮಾನಪದೋಕ್ತಜ್ಞಾನಾತಿಶಯಸ್ಯ ಯುವೇತ್ಯುಕ್ತಯೌವನಸ್ಯ ಆಹವಂ ಪ್ರತ್ಯೇತೀತ್ಯುಕ್ತರಣ-

ರಂಗಧೀರತ್ವಸ್ಯ ಪೂರ್ವಾರ್ಧರ್ಚೋಕ್ತನವತಿಪದೋಕ್ತಪ್ರಧಾನದೇವತಾಪ್ರವರ್ತಕತ್ವಸ್ಯ ಏಕೋ ದಾಧಾರ ಭುವನಾನಿ ವಿಶ್ವಾ ಕೋಟಿಬ್ರಹ್ಮಾಂಡ, ವಿಗ್ರಹಃ' ಇತ್ಯಾದಿಶ್ರುತಿಸ್ಮೃತ್ಯುಕ್ತ ಬ್ರಹ್ಮಾಂಡಾವನಶಕ್ತೇಶ್ಚಾಯೋಗಾತ್ । ಅಸ್ತು ತರ್ಹಿ ಮೂಲರೂಪಸ್ಯ ಹರೇಃ ಕ್ಷುತ್ಪಿಪಾಸಾದ್ಯಭಾವಃ ಸೂಕ್ಷ್ಮರೂಪಸ್ಯ ಕೃಷ್ಣಸ್ಯ ಕಥಂ ತದಭಾವಃ? ಇತಿ ಚೇತ್, ನ । ವಿಜೃಂಭಿತವದನಸ್ಯ ತಸ್ಯಾಪ್ಯುದರೇ ಯಶೋದಯಾ ಮಹೀಮಹೀಧರಾದಿಸಕಲಜಗತೋ ದೃಷ್ಟತ್ವೇನ ಬೃಹಚ್ಛರೀರತ್ವಾಪರಿಹಾರಾತ್ । ಅತೋ ಯತ್ಕಿಂಚಿದೇತತ್ ॥ ೧೦ ॥

**ವಿವರಣೆ—** ಹಸಿವು ಬಾಯಾರಿಕೆಗಳು ಮನುಷ್ಯರಿಗೂ ಮುಕ್ತಿಯಾಗುವವರೆಗೆ ಮಾತ್ರ. ಅನಂತರ ಇಲ್ಲ. ನಿತ್ಯಮುಕ್ತನಾದ ನಾರಾಯಣನಿಗೆ ಹಸಿವು ಬಾಯಾರಿಕೆಗಳಿಲ್ಲವೆಂದು ಹೇಳಬೇಕೆ? ನಾರಾಯಣನಿಗೆ ಹಸಿವು ಇಲ್ಲ ಎನ್ನುವ ವಿಷಯದಲ್ಲಿ ಉತ್ತರಾರ್ಧದಿಂದ ಬೇರೆ ಯುಕ್ತಿಯನ್ನು ಹೇಳುತ್ತಾರೆ ಬೃಹಚ್ಛರೀರ ಎಂದು.

ಚತುರ್ಭಿಃ ಸಾಕಂ ನವತಿಂ ಚ ನಾಮಭಿಶ್ಚಕ್ರಂ ನ ವೃತ್ತಂ ವ್ಯತೀಂರವೀವಿಪತ್ ।
ಬೃಹಚ್ಛರೀರೋ ವಿಮಿಮಾನ ಋಕ್ವಭಿರ್ಯುವಾ ಕುಮಾರಃ ಪ್ರತ್ಯೇತ್ಯಾಹವಮ್ ॥
- ಋಗ್ವೇದ - 2-2-24

ಯಾರ ರೋಮಗಳಲ್ಲಿ ಬ್ರಹ್ಮಾಂಡವೇ ಅಡಗಿದೆಯೋ ಅಂತಹ ಮಹಾಮೂರ್ತಿಯಾದ ನಾರಾಯಣನು ಕಿಂ ಭುಂಕ್ತೇ? = ಏನನ್ನು ತಿಂದಾನು? ಹಸಿವುಪರಿಹಾರಕ್ಕಾಗಿ ಏನನ್ನೂ ತಿನ್ನಲಾರ. ಅವನ ಹೊಟ್ಟೆಯನ್ನು ತುಂಬಿಸಲು ಆಹಾರವೇ ಎಲ್ಲೂ ಇಲ್ಲ. ನಾರಾಯಣನು ವ್ಯಾಪ್ತಶರೀರವುಳ್ಳವನು ಎಂದು ಋಗ್ವೇದ 2.2.24 ರಿಂದ ತಿಳಿಯುತ್ತದೆ. ಹಾಗಾದರೆ ಅವನ ಹಸಿವನ್ನೂ ಪರಿಹರಿಸುವ ಆಹಾರವೇ ಜಗತ್ತಿನಲ್ಲಿ ಇಲ್ಲವಾದ್ದರಿಂದ ಅವನು ಯಾವಾಗಲೂ ಹಸಿವು ಬಾಯಾರಿಕೆಯುಳ್ಳವನೇ ಎಂಬ ಶಂಕೆಗೆ ಉತ್ತರವಾಗಿ ಶ್ರುತಿಯು ಬೃಹಚ್ಛರೀರಃ ಎಂದಿದೆ. ಯಾವಾಗಲೂ ಹಸಿವು ಬಾಯಾರಿಕೆಯುಳ್ಳವನೇ ಆಗಿದ್ದಿದ್ದರೆ ಅವನು ಕೃಶನಾಗಿರಬೇಕಿತ್ತು. ಅವನು ಪುಷ್ಟವಾದ ಶರೀರವುಳ್ಳವನಾಗಿದ್ದಾನೆ. ಶ್ರುತಿಯಲ್ಲಿ **ವಿಮಿಮಾನಃ** - ಅತಿಶಯವಾದ ಜ್ಞಾನವುಳ್ಳವಾಗಿದ್ದಾನೆ ಎಂದು, **ಯುವಾ** - ನಿತ್ಯಯೌವನವುಳ್ಳವನಾಗಿದ್ದಾನೆ ಎಂದು ಆಹವಂ ಪ್ರತ್ಯೇತಿ - ರಣರಂಗದ ಧೀರನಾಗಿದ್ದಾನೆ ಎಂದು, ಪೂರ್ವಾರ್ಧದಲ್ಲಿ **'ಚತುರ್ಭಿಃ ಸಾಕಂ ನವತಿಂ ಚ ನಾಮಭಿಃ ಚಕ್ರಂ ನ ವೃತ್ತಂ ವ್ಯತೀಂರವೀವಿಪತ್'** - ಪ್ರಧಾನದೇವತೆಗಳ್ನು ನಿಯಂತ್ರಿಸುತ್ತಿದ್ದಾನೆ ಎಂದೂ, **ಯ ಉ ತ್ರಿಧಾತು ಪೃಥಿವೀಮುತ ದ್ಯಾಮೇಕೋ ದಾಧಾರ ಭುವನಾನಿ ವಿಶ್ವಾ** - (ಋಗ್ವೇದ 2.2.24) ಎಲ್ಲ ಜಗತ್ತನ್ನೂ ಧರಿಸಿದ್ದಾನೆ ಎಂದೂ, ವರ್ಣಿಸಲಾಗಿದೆ. 'ಕೋಟಿಬ್ರಹ್ಮಾಂಡವಿಗ್ರಹಃ' - ಶರೀರದಲ್ಲಿ ಕೋಟಿ ಬ್ರಹ್ಮಾಂಡಗಳನ್ನು ಧರಿಸಿದ್ದಾನೆ ಎಂದು ವಾಸುದೇವ ಸಹಸ್ರನಾಮವು ವರ್ಣಿಸಿದೆ. ಇದೆಲ್ಲವನ್ನೂ ಮಾಡಬೇಕಾದರೆ ಹಸಿವು ಬಾಯಾರಿಕೆಯುಳ್ಳವನಾಗಬಾರದು. ಆದ್ದರಿಂದ ಕೃಷ್ಣನಿಗೆ ಹಸಿವು ಬಾಯಾರಿಕೆಗಳಿಲ್ಲ. ಅದರ ಪರಿಹಾರಕ್ಕಾಗಿ ಬೆಣ್ಣೆ ಮೊಸರು ಮೊದಲಾದವುಗಳನ್ನು ತಿನ್ನಲಿಲ್ಲ.

**ಬೃಹಚ್ಛರೀರ** ಎಂಬ ಶ್ರುತಿಯಲ್ಲಿ ಮೂಲರೂಪಕ್ಕೆ ಹಸಿವು ಬಾಯಾರಿಕೆ ಇಲ್ಲ ಎನ್ನಲಾಗಿದೆ. ಕೃಷ್ಣಾದಿ ಅವತಾರರೂಪಗಳಿಗೆ ಇರಬಹುದು? ಇಲ್ಲ. ಕೃಷ್ಣನ ದೇಹದಲ್ಲಿ ಬ್ರಹ್ಮಾಂಡವೇ ಅಡಗಿದೆ. ಆಕಳಿಸುವಾಗ ದೇವಕಿಯು ಬ್ರಹ್ಮಾಂಡವನ್ನು ನೋಡಿದ್ದಾಳೆ.

**ಯ ಉ ತ್ರಿಧಾತು ಪೃಥಿವೀಮುತ ದ್ಯಾಮೇಕೋ ದಾಧಾರ ಭುವನಾನಿ ವಿಶ್ವಾ** ಎಂಬ ಮಂತ್ರದ ಅರ್ಥ.

ಯಃ = ಯಾವ ವಿಷ್ಣುವು, ಏಕ ಉ = ಒಬ್ಬನೇ, ತ್ರಿಧಾತು = ಪ್ರಕೃತಿಪುರುಷಕಾಲಧಾರಕನಾಗಿದ್ದಾನೆ. ಪೃಥಿವೀಂ = ಭೂಮಿಯನ್ನು, ದ್ಯಾಂ = ಲಕ್ಷ್ಮೀಯನ್ನು, ವಿಶ್ವಾ ಭುವನಾನಿ = ಎಲ್ಲ ಲೋಕಗಳನ್ನು, ದಾಧಾರ = ಧರಿಸಿದ್ದಾನೆ.

ಚತುರ್ಭಿಃ ಸಾಕಂ ನವತಿಂ ಚ ನಾಮಭಿಶ್ಚಕ್ರಂನ ವೃತ್ತಂ ವ್ಯತೀಂ ರವೀವಿಪತ್ ।
ಬೃಹಚ್ಛರೀರೋ ವಿಮಿಮಾನ ಋಕ್ವಭಿರ್ಯುವಾ ಕುಮಾರಃ ಪ್ರತ್ಯೇತ್ಯಾಹವಮ್ ॥

**ಮಂತ್ರದ ಅರ್ಥ :** ಬೃಹಚ್ಛರೀರಃ = ದೊಡ್ಡಶರೀರವುಳ್ಳ ಮೂಲರೂಪಿಯಾದ ವಿಷ್ಣುವು, ನಾಮಭಿಃ ಚತುರ್ಭಿಃ ಸಾಕಂ = ನಾಮಭೇದಮಾತ್ರವುಳ್ಳ ಸ್ವರೂಪಭೇದವಿಲ್ಲದ ವಾಸುದೇವಸಂಕರ್ಷಣಪ್ರದ್ಯುಮ್ನಾನಿರುದ್ಧರೂಪಗಳಿಂದ, ನವತಿಂ = ತೊಂಬತ್ತು ವ್ಯತೀನ್ = ವಿಶೇಷತಃ ಅಧಿಕರಾದ, ದೇವಾನ್ = ದೇವತೆಗಳನ್ನು ವೃತ್ತಂ = ವರ್ತುಲವಾದ, ಚಕ್ರಂ ನ = ಚಕ್ರದಂತೆ, ಅವೀವಿಪತ್ = ತಿರುಗಿಸಿದನು. ಸಃ = ಅವನು, ವಿಮಿಮಾನಃ = ಜ್ಞಾನಾತಿಶಯವುಳ್ಳವನು, ಯುವಾ = ಯಾವಾಗಲೂ ಯುವಕನಾಗಿದ್ದಾನೆ, ಕುಮಾರಃ = ಯಾವಾಗಲೂ ಕುಮಾರನಾಗಿದ್ದಾನೆ.ಆಹವಂ ಪ್ರತ್ಯೇತಿ = ರಣರಂಗಧೀರನಾಗಿದ್ದಾನೆ.

ಮಹಾನ್ ಹಿ ರಕ್ಷಕೋಽಲ್ಪಸ್ಯ ಮಹಾಂತಂ ಸ ನ ರಕ್ಷತಿ ।
ಉದ್ದಧಾರ ಮಹೀಮಾದೌ ವರಾಹಸ್ತಂ ದಧಾರ ಕಃ ॥ ೧೧ ॥

**ಅರ್ಥ-**ಮಹಾನ್ = ದೊಡ್ಡವನು, ಅಲ್ಪಸ್ಯ = ಅಲ್ಪನಿಗೆ, ರಕ್ಷಕಃ = ರಕ್ಷಕನು. ಸಃ = ಅಲ್ಪನು, ಮಹಾಂತಂ = ದೊಡ್ಡವನನ್ನು, ನ ರಕ್ಷತಿ = ರಕ್ಷಿಸುವುದಿಲ್ಲ. ವರಾಹಃ = ವರಾಹನು, ಆದೌ = ಆದಿಕಾಲದಲ್ಲಿ, ಮಹೀಂ = ಭೂಮಿಯನ್ನು ಉದ್ದಧಾರ = ನೀರಿನಿಂದ ಎತ್ತಿದನು. ತಂ = ಆ ವರಾಹನನ್ನು, ಕಃ ದಧಾರ? = ಯಾರು ಧರಿಸಿದನು?

**ಅನುವಾದ-** ಮಹಾತ್ಮರು ಅಲ್ಪರನ್ನು ರಕ್ಷಿಸುತ್ತಾರೆ, ಅಲ್ಪರು ಮಹಾತ್ಮರನ್ನು ರಕ್ಷಿಸುವುದಿಲ್ಲ. ವರಾಹನು ಪ್ರಲಯಜಲದಲ್ಲಿ ಮುಳುಗಿದ ಭೂಮಿಯನ್ನು ಮೇಲೆತ್ತಿದನು. ಅವನನ್ನು ಯಾರು ಧರಿಸಿದರು? ಯಾರೂ ಇಲ್ಲ.

**ಭಾವವಿಲಾಸಿನೀ–** ಅಧುನಾ ಗರುಡಗಮನಾದ್ದರೇರನ್ಯಾಧೀನತ್ವಶಂಕಾಂ ನಿವಾರಯಿತುಂ **ಯುಕ್ತಿಮಾಹ– ಮಹಾನ್ ಹೀತಿ** ॥ ಮಹಾನ್ ಕೃಷ್ಣಃ ಅಲ್ಪಸ್ಯ ಗರುಡಾದೇಃ ರಕ್ಷಕಃ। ಸೋಽಲ್ಪಕೋ

ಗರುಡಾದಿರ್ಮಹಾಂತಂ ಕೃಷ್ಣಂ ನ ರಕ್ಷತಿ ಹಿ । ಹೀತ್ಯನೇನ ಲೋಕೇಽಪ್ಯಲ್ಪಕಸ್ಯೈವ ಮಹದಧೀನತ್ವಂ ಪ್ರಸಿದ್ಧಮಿತಿ ಸೂಚಯತಿ । ಸ್ಪಷ್ಟಮಂತರಂಗಂ ದೃಷ್ಟಾಂತಮಾಹ– ಉದ್ದಧಾರೇತಿ ॥ ವರಾಹಃ ಏತಾಂ ಮಹೀಂ ಉದ್ದಧಾರ ಜಲಮಧ್ಯನಿಮಗ್ನಾಂ ಉದ್ಧೃತವಾನ್ । ತಂ ವರಾಹಂ ಕೋ ದಧಾರ? ನ ಕೋಽಪಿ । ಮಹತ್ತರಮಹ್ಯುದ್ಧರಣೇಽನ್ಯಾನಪೇಕ್ಷಸ್ಯ ಕುತೋಽನ್ಯತ್ರ ತದಪೇಕ್ಷಾ? ಕಿಂತು ಗರುಡಾದಿಷು ಕೃಪಯೈವ ತಾನಾರುಹ್ಯ ಗಚ್ಛತೀತಿ ಭಾವಃ । ಉಪಲಕ್ಷಣಮೇತತ್ । ಅನಂತಬ್ರಹ್ಮಾಂಡಧಾರಕಸ್ಯ ಚ ಹರೇಃ ಕೋ ಧಾರಕ ಇತ್ಯಪಿ ದ್ರಷ್ಟವ್ಯಮ್ ॥ ೧೧ ॥

**ವಿವರಣೆ–** ಮಹತ್ತರವಾದ ಭೂಮಿಯನ್ನು ಎತ್ತುವಾಗಲೇ ಇನ್ನೊಬ್ಬರ ಅವಲಂಬನೆಯು ಭಗವಂತನಿಗೆ ಇಲ್ಲ. ಹೀಗಿರುವಾಗ ಒಂದೆಡೆಯಿಂದ ಇನ್ನೊಂದೆಡೆಗೆ ಹೋಗಬೇಕಾದರೆ ಅವನಿಗೆ ಇನ್ನೊಬ್ಬರ ಸಹಾಯವು ಬೇಕೇ? ಗರುಡಾದಿಗಳಲ್ಲಿ ದಯೆಯಿಂದಲೇ ಅವನನ್ನು ಏರಿ ಹೋಗುತ್ತಾನಷ್ಟೇ. ತನ್ನ ಅಸಾಮರ್ಥ್ಯದಿಂದಲ್ಲ. ಬ್ರಹ್ಮಾಂಡವನ್ನೇ ಧರಿಸಿದ ಭಗವಂತನನ್ನು ಧರಿಸುವ ಸಾಮರ್ಥ್ಯವುಳ್ಳವರು ಯಾರಿದ್ದಾರೆ?

ಮೂಲರೂಪದಲ್ಲಿ ದುಃಖಾಭಾವವನ್ನು ಸಾಧಿಸಿ ಅವತಾರರೂಪಗಳಲ್ಲೂ ದುಃಖವಿಲ್ಲವೆಂದು ಯುಕ್ತಿಯಿಂದ ಸಾಧಿಸಲು ಹೇಳುತ್ತಾರೆ -

**ಮಹಾಂತೋ ಹಿ ಕಥಾಂ ಕರ್ತುಂ ಸಂಚರಂತಿ ತಥಾತಥಾ ।**
**ಅನಂತಾಸನತಃ ಪುತ್ರಾऽऽನೇತಾ ನೀತಾಬಲಃ ಕಿಲ ॥ ೧೨ ॥**

**ಅರ್ಥ-** ಮಹಾಂತಃ = ಮಹಾತ್ಮರು, ಕಥಾಂ = ತಮ್ಮ ಕಥೆಯನ್ನು, ಕರ್ತುಂ = ಬೆಳೆಸಲು, ತಥಾ ತಥಾ = ಹಾಗೆಹಾಗೆ, ಸಂಚರಂತಿ = ನಡೆದುಕೊಳ್ಳುತ್ತಾರೆ. ಅನಂತಾಸನತಃ = ಅನಂತಾಸನದಿಂದ, ಪುತ್ರಾನೇತಾ = ಬ್ರಾಹ್ಮಣಪುತ್ರನನ್ನು ತಂದ ಕೃಷ್ಣನು (ರಾಮಾವತಾರದಲ್ಲಿ), ನೀತಾಬಲಃ ಕಿಲ = (ರಾವಣನಿಂದ) ಅಪಹರಿಸಲ್ಪಟ್ಟ ಪತ್ನಿಯುಳ್ಳವನೇ?! ಅನೀತಾಽಬಲಃ ಕಿಲ= ತನ್ನಿಂದಲೇ ತರಲ್ಪಡದ ಪತ್ನಿಯುಳ್ಳವನೇ?

**ಅನುವಾದ-** ಮಹಾತ್ಮರು ತಮ್ಮ ಚರಿತ್ರೆಯನ್ನು ಬೆಳೆಸಲು ಹಾಗೆಹಾಗೆ (ಇತಿಹಾಸ-ಪುರಾಣಗಳಲ್ಲಿ ವರ್ಣಿಸಿದಂತೆ) ನಡೆಯುತ್ತಾರೆ. ಅನಂತಾಸನದಿಂದ ಬ್ರಾಹ್ಮಣ ಪುತ್ರನನ್ನು ತಂದವನು, ತನ್ನ ಪತ್ನಿಯು ಅಪಹರಣಕ್ಕೆ ಒಳಗಾಗುವಂತೆ ನಡೆದುಕೊಳ್ಳುವಷ್ಟು ಅಸಮರ್ಥನೇ? ಅಪಹೃತಳನ್ನು ಕರೆತರಲು ಆಗದಷ್ಟು ಅಸಮರ್ಥನೇ?

**ಭಾವವಿಲಾಸಿನೀ–** ಮೂಲರೂಪೇ ದುಃಖಾದ್ಯಭಾವಂ ಪ್ರಸಾಧ್ಯಾವತಾರರೂಪೇಷ್ವಪಿ ತಂ ಯುಕ್ತ್ಯಾ ಸಾಧಯಿತುಮಾಹ– ಮಹಾಂತ ಇತಿ ॥ ಕಥಾಂ ಲೋಕೇ ಸ್ವಚರಿತ್ರವರ್ಣನ-ರೂಪಕಥಾಂ ಕರ್ತುಂ ವಿಸ್ತೃತಾಂ ಕರ್ತುಮ್ । ಯದಾಯದಾ ಯಥಾ ಚರಿತವ್ಯಮ್, ತಥಾತಥಾ ಸಂಚರಂತೀತ್ಯನ್ವಯಃ । ಯಥಾ ಪುರುಷಃ ದುಃಖಾಭಾವೇಽಪಿ ದುಃಖಿವತ್, ಪರನಿರಪೇಕ್ಷತ್ವೇಽಪಿ

ಸಾಪೇಕ್ಷವಚ್ಚ ಜನಸಂಗ್ರಹಾಯ ಸ್ವಾತ್ಮಾನಂ ಪ್ರದರ್ಶಯತಿ । ತಥಾ ರಾಮೋಽಪಿ ಸೀತಾಕೃತೇ ದುಃಖಾದಿಕಂ ಪ್ರದರ್ಶಿತವಾನ್ । ನತು ವಸ್ತುತೋ ದುಃಖೀತಿ ಭಾವಃ । ತತ್ರ ಹೇತುಃ ಕೃಷ್ಣರೂಪೇಣಾನಂತಾಸನತಃ ಬ್ರಾಹ್ಮಣಪುತ್ರಾಽಽನೇತಾ ರಾಮಃ ನೀತಾಬಲಃ ಕಿಲ ನೀತಾ= ರಾವಣೇನ ನೀತಾ ಅಬಲಾ ಸೀತಾ ಯಸ್ಯ ಸಃ ನೀತಾಬಲಃ ಕಿಲ। ಕಿಲೇತ್ಯಸ್ವರಸೇ । ಪಂಚ-ವಿಂಶತಿಕೋಟಿಯೋಜನಾಂತರಿತಾನಂತಾಸನತಃ ಘಟಿಕಾಮಾತ್ರೇಣ ಏಕಾಕಿತಯಾ ವಿಪ್ರ-ಪುತ್ರಾನಯನಸಮರ್ಥಸ್ಯ ಲೀಲಯಾ ತೀರ್ಣಸಪ್ತ ಸಮುದ್ರ ಸಪ್ತದ್ವೀಪಘನೋದಕಾಖ್ಯ ಮಹಾಸಮುದ್ರಸ್ಯ ಚ ಶತಯೋಜನಾಭ್ಯಂತರಿತಲಂಕಾಪ್ರದೇಶತಃ ಸೀತಾನಯನಾದೇ-ರಶಕ್ಯತಯಾ ದುಃಖಕರಣಕಪಿಸಂಗ್ರಹಣಸೇತುಬಂಧನಾದಿನಿರ್ಬಂಧಃ ಕಥಂ ಸಂಭಾವಿತಃ ಇತಿ ಭಾವಃ ॥ ೧೨ ॥

**ವಿವರಣೆ–** ಲೋಕದಲ್ಲಿ ಸಮರ್ಥರೂ, ಒಮ್ಮೊಮ್ಮೆ ವಿನೋದಕ್ಕಾಗಿ ಅಸಮರ್ಥರಂತೆ ನಟಿಸುತ್ತಾರೆ. ಭಗವಂತನ ಗರುಡಗಮನವೂ ಹೀಗೆಯೇ. ಶ್ರೀರಾಮಚಂದ್ರನು ಸೀತೆಯನ್ನು ಕಳೆದುಕೊಂಡ ಘಟನೆ, ಅವನ ದುಃಖ, ಸೀತಾನ್ವೇಷಣೆ ಇತ್ಯಾದಿಗಳು ಬರೀ ನಟನೆ. ವಾಸ್ತವ ಅಲ್ಲ. ಶ್ರೀರಾಮಚಂದ್ರ ದುಃಖಿಯಲ್ಲ. ಶ್ರೀಕೃಷ್ಣನು ಯಾರ ನೆರವೂ ಇಲ್ಲದೆ ಇಪ್ಪತ್ತೈದು ಕೋಟಿಯೋಜನ ದೂರದ ಅನಂತಾಸನದಿಂದ ಬ್ರಾಹ್ಮಣನೊಬ್ಬನ ಮಗನನ್ನು ತಂದುಕೊಟ್ಟಿದ್ದಾನೆ. ಸಪ್ತ ದ್ವೀಪ, ಸಪ್ತಸಾಗರ, ಘನೋದಕವನ್ನು ದಾಟಿದ ಶ್ರೀಕೃಷ್ಣನೇ ಶ್ರೀರಾಮ. ಅವನಿಗೆ ನೂರುಯೋಜನಸಮುದ್ರದಾಟುವ ಸಾಮರ್ಥ್ಯವಿಲ್ಲವೇ? ಸಾಮರ್ಥ್ಯವಿಲ್ಲದೇ ಕಪಿಸಂಗ್ರಹ, ಸೇತುಬಂಧನಾದಿಗಳನ್ನು ಮಾಡಿದ್ದಲ್ಲ. ಭಕ್ತರ ಅನುಗ್ರಹಕ್ಕೋಸ್ಕರವೇ ಇದೆಲ್ಲವನ್ನು ಮಾಡಿದ್ದಾನೆ. ತನ್ನ ಕಥೆಯನ್ನು ಭಕ್ತರು ಹಾಡಲು ಇದೆಲ್ಲವನ್ನೂ ಮಾಡಿದ್ದಾನಷ್ಟೇ!.

ಇನ್ನೊಂದು ರೀತಿಯಿಂದಲೂ ಶ್ರೀಹರಿಗೆ ದುಃಖವಿಲ್ಲವೆಂದು ಸಮರ್ಥಿಸುತ್ತಿದ್ದಾರೆ -

**ಮೂಲಂ ಯೋ ವೇತ್ತಿ ಕಸ್ತಸ್ಯ ಪತ್ರಂ ಸಂದರ್ಶಯೇತ್ ತರೋಃ ।**
**ಯಃ ಸರ್ವಗೋ ನ ಸೋಽಯೋಗೀ ತಸ್ಯ ದುಃಖಪ್ರಥಾ ವೃಥಾ ॥ ೧೩ ॥**

**ಅರ್ಥ-**ಯಃ = ಯಾರು, ತರೋಃ ಮೂಲಂ = ವೃಕ್ಷದಹುಟ್ಟಿನ ಮೂಲವನ್ನು, ವೇತ್ತಿ = ತಿಳಿದಿದ್ದಾನೋ, ತಸ್ಯ = ಅವನಿಗೆ, ಕಃ = ಯಾರು, ಪತ್ರಂ = ಎಲೆಯನ್ನು, ಸಂದರ್ಶಯೇತ್? = ತೋರಿಸಿಯಾನು? ಯಃ = ಯಾರು, ಸರ್ವಗಃ = ಎಲ್ಲಕಡೆ ವ್ಯಾಪ್ತನೋ, ಸಃ = ಅವನು, ನ ಅಯೋಗೀ= ಸೀತಾ ವಿಯೋಗವುಳ್ಳವನು ಅಲ್ಲ, ತಸ್ಯ = ಅವನಿಗೆ, ದುಃಖಪ್ರಥಾ = ದುಃಖವಿದೆ ಎಂಬ ಪ್ರಸಿದ್ಧಿಯು, ವೃಥಾ = ವ್ಯರ್ಥ.

**ಅನುವಾದ-** ವೃಕ್ಷದ ಹುಟ್ಟಿದ ಮೂಲವನ್ನು ತಿಳಿದವನಿಗೆ ಅದರ ಎಲೆಯನ್ನು ಯಾರು ತೋರಿಸುತ್ತಾರೆ? ಎಂಬ ನಾಣ್ಣುಡಿಯಿದೆ. ಯಾರು ಸರ್ವತ್ರ ವ್ಯಾಪ್ತನೋ ಅವನಿಗೆ ವಿಯೋಗವಿಲ್ಲ. ಅವನಿಗೆ ದುಃಖವಿದೆ ಎಂಬ ಪ್ರಸಿದ್ಧಿಯು ಅರ್ಥಹೀನ.

**ಭಾವವಿಲಾಸಿನೀ–** ರೀತ್ಯಂತರೇಣಾಪಿ ಹರೇರ್ದುಃಖಾಭಾವಮುಪಪಾದಯತಿ– ಮೂಲಮಿತಿ ॥ ಯಸ್ತರೋರ್ವೃಕ್ಷಸ್ಯ ಮೂಲಂ ವೇತ್ತಿ ತಸ್ಯ ಪತ್ರಂ ಕಸ್ಸಂದರ್ಶಯೇದಿತಿ ಲೌಕಿಕಾಭಾಣಕಮ್ । ತದ್ವದೇವ ರಾಮೇಽಪೀತಿ ಭಾವೇನೋಕ್ತಮ್– ಯ ಇತಿ ॥ ಯಃ ರಾಮಃ ಸರ್ವಗಃ ಸರ್ವವ್ಯಾಪ್ತಃ, ಸ ಕಥಮಯೋಗೀ ಸೀತಾವಿಯೋಗವಾನ್ । ಸರ್ವಗತ್ವಮೂಲಂ ಜಾನತಃ ಸೀತಾವಿಯೋಗಾಖ್ಯತದ್ವಿಪರೀತಪತ್ರಪ್ರದರ್ಶನಂ ಕಥಂ ಶೋಭತೇ? ಇತಿ ಭಾವಃ । ತಸ್ಯಾಯೋಗರಹಿತಸ್ಯ ಯಾ ದುಃಖಪ್ರಥಾ, ಸಾಪಿ ವೃಥಾ ಅವಿಯೋಗಾಖ್ಯಸುಖಮೂಲವಿರುದ್ಧದುಃಖಾಖ್ಯಪತ್ರಮಪಿ ನಿರ್ಮೂಲಮೇವೇತಿ ಭಾವಃ । ಅನೇನ ವಿಯೋಗಾಭಾವಸಮರ್ಥನೇನ ಪರಿಚ್ಛಿನ್ನತ್ವದೋಷೋಽಪಿ ಪರಿಹೃತ ಇತಿ ದ್ರಷ್ಟವ್ಯಮ್ ॥ ೧೩ ॥

**ವಿವರಣೆ–** ವೃಕ್ಷದ ಮೂಲವನ್ನು ತಿಳಿದವನಿಗೆ ಅದರ ಎಲೆಯನ್ನು ಯಾರು ತೋರಿಸುತ್ತಾರೆ? ಸರ್ವತ್ರವ್ಯಾಪ್ತಿ ಶ್ರೀರಾಮನ ಮೂಲ. ಇದನ್ನು ತಿಳಿದವರಿಗೆ ಸೀತಾವಿಯೋಗವನ್ನು ಯಾರು ಸಾಧಿಸಲು ಶಕ್ಯ? ಮೂಲವಿರುದ್ಧವಾದ ವಿಯೋಗಪತ್ರದ ಪ್ರದರ್ಶನವು ಶೋಭಿಸುವುದಿಲ್ಲ. ಸೀತಾವಿಯೋಗವಿಲ್ಲದ ರಾಮನಿಗೆ ದುಃಖವಾರ್ತೆಯು ಸುಳ್ಳು. ಅವಿಯೋಗವೆಂಬ ಸುಖವು ಮೂಲ. ಇದಕ್ಕೆ ವಿರುದ್ಧವಾದ ದುಃಖವೆಂಬ ಎಲೆಯು ನಿರ್ಮೂಲವಾಗಿದೆ. ಈ ರೀತಿಯಾಗಿ ವಿಯೋಗವಿಲ್ಲವೆಂದು ಸಮರ್ಥಿಸಿದ್ದರಿಂದ ಅವನು ಪರಿಚ್ಛಿನ್ನ=ಅಲ್ಪ ಎಂಬ ದೋಷವು ಪರಿಹೃತವಾಯಿತು.

**ಹಿಂದೆ ಹೇಳಿದ ಅರ್ಥದಲ್ಲಿ ಪ್ರಮಾಣವಾಗಿ ಭಾಗವತದ ಎರಡು ಶ್ಲೋಕಗಳನ್ನು ಅರ್ಥತಃ ಸಂಗ್ರಹಿಸುತ್ತಿದ್ದಾರೆ-**

**ಸೀತಾಕೃತಾನಿ ವ್ಯಸನಾನೀಶ್ವರಸ್ಯ ಕುತೋಽಸ್ಯ ಹಿ ।**
**ಸ್ತ್ರೀಕೃತಂ ಕಶ್ಮಲಂ ರಾಮೋ ನಾಶ್ನುವೀತೇತಿ ಚ ಸ್ಫುಟಮ್ ।**
**ಶ್ರೀಮದ್ಭಾಗವತೇ ಪ್ರೋಕ್ತಂ ನಿರವದ್ಯಸ್ತತಃ ಪ್ರಭುಃ ॥ ೧೪ ॥**

**ಅರ್ಥ-**ಈಶ್ವರಸ್ಯ = ಸರ್ವಸಮರ್ಥನಾದ, ಅಸ್ಯ = ಶ್ರೀರಾಮನಿಗೆ, ಸೀತಾಕೃತಾನಿ= ಸೀತೆಯಿಂದ ಉಂಟಾದ, ವ್ಯಸನಾನಿ = ದುಃಖಗಳು, ಕುತಃ? = ಹೇಗೆ ಸಾಧ್ಯ? ರಾಮಃ = ಶ್ರೀರಾಮನು, ಸ್ತ್ರೀಕೃತಂ = ಸ್ತ್ರೀನಿಮಿತ್ತವಾದ, ಕಶ್ಮಲಂ = ಕೊಳೆಯನ್ನು ನ ಅಶ್ನುವೀತ = ಅನುಭವಿಸುವುದಿಲ್ಲ, ಇತಿ = ಎಂದು, ಭಾಗವತೇ = ಭಾಗವತದಲ್ಲಿ, ಸ್ಫುಟಂ = ಸ್ಪಷ್ಟವಾಗಿ, ಪ್ರೋಕ್ತಂ = ಹೇಳಲ್ಪಟ್ಟಿದೆ. ತತಃ = ಆದ್ದರಿಂದ, ಪ್ರಭುಃ = ಸರ್ವಸಮರ್ಥನಾದ ರಾಮನು, ನಿರವದ್ಯಃ = ದೋಷರಹಿತನು.

**ಅನುವಾದ-** ಸರ್ವಸಮರ್ಥನಾದ ಈ ರಾಮಚಂದ್ರನಿಗೆ ಸೀತಾ ನಿಮಿತ್ತ ದುಃಖಗಳು ಹೇಗೆ? ಶ್ರೀರಾಮಚಂದ್ರನು ಸ್ತ್ರೀನಿಮಿತ್ತವಾದ ಕಶ್ಮಲವನ್ನು ಅನುಭವಿಸುವುದಿಲ್ಲ ಎಂದು ಭಾಗವತವು ಹೇಳಿದೆ. ಆದ್ದರಿಂದ ಪ್ರಭುವು ದೋಷರಹಿತ.

**ಭಾವವಿಲಾಸಿನೀ–** ಅಸ್ಮಿನ್ನರ್ಥೇ ಮೂಲಭೂತಂ 'ಮರ್ತ್ಯಾವತಾರಸ್ತ್ವಿಹ ಮರ್ತ್ಯಶಿಕ್ಷಣಂ ರಕ್ಷೋವಧಾಯೈವ ನ ಕೇವಲಂ ಪ್ರಭೋಃ । ಕುತೋಽನ್ಯಥಾ ಸ್ಯೂ ರಮತಃ ಸ್ವ ಆತ್ಮನ್ ಸೀತಾಕೃತಾನಿ ವ್ಯಸನಾನೀಶ್ವರಸ್ಯ ॥' ಇತಿ ವಾಕ್ಯಂ ಪೂರ್ವಾರ್ಧೇನ, ಉತ್ತರಾರ್ಧೇನ 'ನ ವೈ ಸ ಆತ್ಮಾತ್ಮವತಾಮಧೀಶ್ವರೋ ಭುಙ್ಕ್ತೇ ಹಿ ದುಃಖಂ ಭಗವಾನ್ ವಾಸುದೇವಃ । ನ ಸ್ತ್ರೀಕೃತಂ ಕಶ್ಮಲಮಶ್ನುವೀತ ನ ಲಕ್ಷ್ಮಣಂ ಚಾಪಿ ಜಹಾತಿ ಕರ್ಹಿಚಿತ್ ॥' ಇತಿ ವಾಕ್ಯಂ ಚಾರ್ಥತಸ್ಸಂಗೃಹ್ಣಾತಿ– ಸೀತೇತಿ ॥ ಮರ್ತ್ಯೇಷ್ವವತಾರೋ ಮರ್ತ್ಯಾವತಾರಃ । ಸ್ವೇ ಸ್ವತಂತ್ರೇ । ಆತ್ಮನ್ ಆತ್ಮನಿ ವ್ಯಾಪ್ತೇ ಸ್ವಸ್ವರೂಪೇ ರಮತ ಇತಿ ಸಂಬಂಧಃ । ಸೀತಾಕೃತಾನಿ ವ್ಯಸನಾನಿ ವಿಯೋಗಾದೀನಿ ಕುತಸ್ಸ್ಯುಃ? ನ ಕುತಶ್ಚಿದಿತ್ಯರ್ಥಃ। ಆತ್ಮವತಾಂ ಮನೋಜಯವತಾಂ ಅಧೀಶ್ವರಃ ಸ ಆತ್ಮಾ ಪರಮಾತ್ಮಾ ದುಃಖಂ ನ ಭುಙ್ಕ್ತೇ ವೈ ಇತ್ಯನೇನ ನಿರನಿಷ್ಟೋ ನಿರವದ್ಯಃ' ಇತಿ ಶ್ರುತಿಪ್ರಸಿದ್ಧಿಂ ಸೂಚಯತಿ । ಸ್ತ್ರೀಕೃತಂ ಕಶ್ಮಲಂ ನಾಶ್ನುವೀತ ಸೀತಾನಿಮಿತ್ತಂ ಕಶ್ಮಲಂ ವಿಲಾಪಾದಿಕಮಿತ್ಯಾಪಾತಾರ್ಥಃ ಸ್ತ್ರೀಕೃತಂ ಸ್ತ್ರೀಸಂಗಾಜ್ಜಾತಂ ಕಶ್ಮಲಂ ರೇತಃಸ್ಖಲನಾದಿರೂಪಜುಗುಪ್ಸಾಮಿತಿ ತತ್ತ್ವಾರ್ಥೋಽಪಿ ಕಶ್ಮಲಪದಪ್ರಯೋಗಾತ್, ಸ್ತ್ರೀ ಇತಿ ಸಾಮಾನ್ಯಪದಪ್ರಯೋಗಾಚ್ಚ ಲಭ್ಯತೇ । ಯಸ್ಮಾದಿತಿ ಭಾಗವತೇ ಪ್ರೋಕ್ತಂ ತತ ಇತಿ ಸಂಬಂಧಃ ॥ ೧೪ ॥

**ವಿವರಣೆ–** ರಾಮನಿಗೆ ದುಃಖವಿಲ್ಲವೆಂದು ಭಾಗವತದಲ್ಲಿ 'ಮರ್ತ್ಯಾವತಾರಸ್ತ್ವಿಹ ಮರ್ತ್ಯಶಿಕ್ಷಣಂ, ರಕ್ಷೋವಧಾಯೈವ ನ ಕೇವಲಂ ವಿಭೋಃ ಕ್ರತೋಽನ್ಯಥಾ ಸ್ಯೂ ರಮತಃ ಸ್ವ ಆತ್ಮನ್ ಸೀತಾಕೃತಾನಿ ವ್ಯಸನಾನೀಶ್ವರಸ್ಯ' (5.19.5) ಎಂದು ಹೇಳಿದ್ದನ್ನು ರಾಜರು ಈ ಶ್ಲೋಕದಲ್ಲಿ ಪೂರ್ವಾರ್ಧದಲ್ಲಿ ಸಂಗ್ರಹಿಸಿದ್ದಾರೆ. ಹಾಗೆಯೇ ಭಾಗವತದಲ್ಲಿ 'ನ ವೈ ಸ ಆತ್ಮಾ ಅತ್ಮವತಾಮಧೀಶ್ವರೋ ಭುಂಕ್ತೇ ಹಿ ದುಃಖಂ ಭಗವಾನ್ ವಾಸುದೇವಃ, ನ ಸ್ತ್ರೀಕೃತಂ ಕಶ್ಮಲಮಶ್ನುವೀತ ನ ಲಕ್ಷ್ಮಣಂ ಚಾಪಿ ಜಹಾತಿ ಕರ್ಹಿಚಿತ್' (5.19.6) ಎಂಬ ಶ್ಲೋಕದ ತಾತ್ಪರ್ಯವನ್ನು ಉತ್ತರಾರ್ಧದಲ್ಲಿ ಸಂಗ್ರಹಿಸಿದ್ದಾರೆ.

ಪ್ರಭುವಾದ ಭಗವಂತನು ಮನುಷ್ಯರಲ್ಲಿ ಅವತಾರ ಮಾಡುವುದು ಕೇವಲ ರಾಕ್ಷಸರ ವಧೆಗಾಗಿ ಅಲ್ಲ. ಮನುಷ್ಯರ ಶಿಕ್ಷಣಕ್ಕಾಗಿ. ಸ್ವತಂತ್ರವಾದ ತನ್ನ ವ್ಯಾಪ್ತಸ್ವರೂಪದಲ್ಲೇ ಸುಖಿಸುವ ಭಗವಂತನಿಗೆ ಸೀತಾನಿಮಿತ್ತವಾದ ವಿಯೋಗದುಃಖವು ಹೇಗೆ ಬರಲು ಸಾಧ್ಯ? ಇಂದ್ರಿಯನಿಗ್ರಹವುಳ್ಳವರಿಗೆಲ್ಲ ಸ್ವಾಮಿಯಾದ ಆ ಪರಮಾತ್ಮನು ದುಃಖವನ್ನು ಅನುಭವಿಸುವುದಿಲ್ಲ. ಸೀತಾವಿಯೋಗದ ದುಃಖವನ್ನೂ ಅನುಭವಿಸುವುದಿಲ್ಲ. ಅವನು ದುಃಖವನ್ನು ಅನುಭವಿಸುವುದಿಲ್ಲ ಎನ್ನುವುದು ಪ್ರಸಿದ್ಧ ಎಂದು ವೈ ಎಂಬ ಪದದಿಂದ ತಿಳಿಸುವುದರ ಮೂಲಕ 'ನಿರನಿಷ್ಟೋ ನಿರವದ್ಯಃ' ಎಂಬ ಶ್ರುತಿಪ್ರಸಿದ್ಧಿಯನ್ನು ತಿಳಿಸಿದಂತಾಯಿತು.

ಬ್ರಾಹ್ಮಣಜಾತಿಯಲ್ಲಿ ಹುಟ್ಟಿದ ರಾವಣನನ್ನು ಕೊಂದಿದ್ದರಿಂದ ರಾಮನಿಗೆ ಬ್ರಹ್ಮಹತ್ಯಾದೋಷವು ಉಂಟಾಯಿತು ಎಂಬ ಶಂಕೆಯನ್ನು ಪರಿಹರಿಸುತ್ತಾರೆ -

**ಯತ್ಪಂಚಮಶಿರಶ್ಛೇದೋ ಬಬಾಧೇಽಪಿ ಕಪಾಲಿನಮ್ ।**
**ತದ್ವಧೇಽಪ್ಯನಘೋ ಯೋಽಂತೇ ಸ ಕಿಂ ರಕ್ಷೋವಧೇಽಘವಾನ್ ॥ ೧೫ ॥**

**ಅರ್ಥ**-ಯತ್‌ಪಂಚಮಶಿರಶ್ಛೇದಃ = ಯಾರ ಐದನೆಯ ಶಿರಶ್ಛೇದವು, ಕಪಾಲಿನಮ್ ಅಪಿ= ರುದ್ರದೇವರನ್ನೂ ಕೂಡ, ಬಬಾಧೇ = ಬಾಧಿಸಿತೋ, ಅಂತೇ= ಪ್ರಳಯದಲ್ಲಿ ತದ್ವಧೇ ಅಪಿ= ಅವರ ವಧೆಯನ್ನು ಮಾಡಿದರೂ, ಯಃ = ಯಾರು (ರಾಮದೇವರು), ಅನಘಃ= ಪಾಪರಹಿತರೋ, ಸಃ = ಆ ರಾಮರೂಪಿ ನಾರಾಯಣನು, ರಕ್ಷೋವಧೇ= ರಾಕ್ಷಸ ವಧೆಯಿಂದ, ಅಘವಾನ್, ಕಿಮ್? = ಪಾಪವುಳ್ಳವನೇ?

**ಅನುವಾದ**- ರುದ್ರದೇವರು ಬ್ರಹ್ಮದೇವರ ಐದನೇ ಶಿರಸ್ಸನ್ನು ತುಂಡರಿಸಿ ಬ್ರಹ್ಮಹತ್ಯಾರೂಪದೋಷವುಳ್ಳವರಾದರು. ಬ್ರಹ್ಮಕಪಾಲವು ರುದ್ರದೇವರ ಕೈಗೆ ಅಂಟಿಕೊಂಡಿತು. ಆದ್ದರಿಂದ ರುದ್ರದೇವರು ಕಪಾಲಿ ಎಂದೆನಿಸಿದರು. ಅಂತಹ ಬ್ರಹ್ಮದೇವರನ್ನು ಪ್ರಲಯಕಾಲದಲ್ಲಿ ಇದೇ ರಾಮನು ಮೂಲನಾರಾಯಣ-ರೂಪದಿಂದ ಸಂಹರಿಸುತ್ತಾನೆ. ಆದರೆ ನಾರಾಯಣನಿಗೆ ಬ್ರಹ್ಮಹತ್ಯಾದೋಷವಿಲ್ಲ. ಹೀಗಿರುವಾಗ ಈ ರಾಕ್ಷಸ ರಾವಣನ ಸಂಹಾರದಿಂದ ರಾಮನಿಗೆ ಬ್ರಹ್ಮಹತ್ಯಾದೋಷವು ಹೇಗೆ ಬರಲು ಸಾಧ್ಯ?

**ಭಾವವಿಲಾಸಿನೀ**– ವಿಪ್ರಜಾತ್ಯುತ್ಪನ್ನರಾವಣವಧಾದ್ ರಾಮಸ್ಯ ಬ್ರಹ್ಮಹತ್ಯಾದೋಷೋಽಭೂದಿತಿ ಶಂಕಾಂ ದೂರೀಕರ್ತುಮಾಹ– **ಯತ್ಪಂಚಮೇತಿ** ॥ ಯಸ್ಯ ಚತುರ್ಮುಖಸ್ಯ ಪಂಚಮಶಿರಶ್ಛೇದಃ ಕಪಾಲಿನಮಪಿ ಶ್ರೀಮಹಾದೇವಮಪಿ ಬ್ರಹ್ಮಹತ್ಯಾರೂಪೇಣ ಬಬಾಧೇ ಪೀಡಯಾಮಾಸ । ತಾಮೇವ ಪೀಡಾಂ ಪ್ರದರ್ಶಯಿತುಂ ಕಪಾಲೀತ್ಯುಕ್ತಮ್ । ಕರಸ್ಥಬ್ರಹ್ಮಕಪಾಲಮೇವ ಪೀಡಾ-ಸೂಚಕಮಿತಿ ಭಾವಃ। ಯಃ ರಾಮರೂಪೀ ನಾರಾಯಣಃ ಅಂತೇ ಬ್ರಹ್ಮಪ್ರಲಯೇ। ತದ್ವಧೇಽಪಿ ತಸ್ಯ ಬ್ರಹ್ಮಣೋ ವಧೇಽಪಿ ಅನಘಃ ಬ್ರಹ್ಮಹತ್ಯಾಖ್ಯದೋಷರಹಿತಃ । ಸಃ ರಕ್ಷೋವಧೇ ರಕ್ಷೋರೂಪಬ್ರಾಹ್ಮಣಾಭಾಸವಧೇ ಅಘವಾನ್ ಕಿಮ್? ನೇತಿ ಸಂಬಂಧಃ। ಏತೇನೈವ ಬ್ರಹ್ಮಹತ್ಯಾಪರಿಹಾರಾಯ ಲಿಂಗಪ್ರತಿಷ್ಠಾ ಕೃತೇತ್ಯೇತದಪಿ ಪರಿಹೃತಮ್ । ಸ್ವಬ್ರಹ್ಮಹತ್ಯಾ-ಪರಿಹಾರಾಸಮರ್ಥಸ್ಯ ಶಿವಸ್ಯ ಪರಬ್ರಹ್ಮಹತ್ಯಾಪರಿಹರ್ತೃತ್ವಸ್ಯ ಸುತರಾಮಯೋಗಾತ್ । ಕಿಂತು ಸೇತುಂ ದೃಷ್ಟ್ವಾ ಸಮುದ್ರಸ್ಯ ಬ್ರಹ್ಮಹತ್ಯಾಂ ವ್ಯಪೋಹತಿ' ಇತಿ ಸ್ಮೃತ್ಯಾ ನಿರೀಕ್ಷಣಮಾತ್ರೇಣ ಬ್ರಹ್ಮಹತ್ಯಾನಿರಸನಸಮರ್ಥೇ ತವ ಸೇತೌ ಮಮ ಪಿತೃವಧನಿಮಿತ್ತಮಹಾಬ್ರಹ್ಮಹತ್ಯಾ-ಪರಿಹಾರಾಯ ನಿತ್ಯಂ ವಸಾಮೀತಿ ಶಿವೇನ ಪ್ರಾರ್ಥಿತಸ್ತತ್ರ ಪ್ರತಿಷ್ಠಾಪಿತವಾನಿತ್ಯೇವ ಯುಕ್ತಮಿತಿ ಭಾವಃ ॥ ೧೫ ॥

**ವಿವರಣೆ–** ರುದ್ರದೇವರ ಕೈಯಲ್ಲಿ ಬ್ರಹ್ಮಕಪಾಲವಿರುವುದೇ ರುದ್ರದೇವರು ಬ್ರಹ್ಮಹತ್ಯಾದೋಷವುಳ್ಳವರು ಎಂಬುದಕ್ಕೆ ಸಾಕ್ಷಿಯಾಗಿದೆ. ಆದ್ದರಿಂದ ಶ್ರೀರಾಮದೇವರು ತಮ್ಮ ಬ್ರಹ್ಮಹತ್ಯಾದೋಷಪರಿಹಾರಕ್ಕಾಗಿ ರಾಮೇಶ್ವರದಲ್ಲಿ ರುದ್ರಲಿಂಗವನ್ನು ಪ್ರತಿಷ್ಠೆ ಮಾಡಿದರು ಎನ್ನುವುದು ಸರಿಯಲ್ಲ. ತನ್ನ ಬ್ರಹ್ಮಹತ್ಯಾದೋಷವನ್ನು ಪರಿಹರಿಸಿಕೊಳ್ಳಲು ಅಸಮರ್ಥರಾದ ರುದ್ರದೇವರ ಲಿಂಗಪ್ರತಿಷ್ಠೆಯಿಂದ ರಾಮದೇವರ ಬ್ರಹ್ಮಹತ್ಯಾದೋಷ ಹೇಗೆ ಪರಿಹಾರವಾಗಲು ಸಾಧ್ಯ? ಹಾಗಾದರೆ ರಾಮದೇವರು ರಾಮೇಶ್ವರದಲ್ಲಿ ರುದ್ರಲಿಂಗವನ್ನು ಏಕೆ ಪ್ರತಿಷ್ಠಾಪಿಸಿದರು? ಬ್ರಹ್ಮಹತ್ಯಾದೋಷವುಳ್ಳ ರುದ್ರದೇವರು ತನ್ನ ತಂದೆಯಾದ ಬ್ರಹ್ಮದೇವರ ಐದನೆಯ ತಲೆಯನ್ನು ತುಂಡರಿಸಿದ್ದರಿಂದ ಬಂದ ಬ್ರಹ್ಮಹತ್ಯೆಯನ್ನು ಹೇಗೆ ಪರಿಹರಿಸಿಕೊಳ್ಳಲಿ ಎಂದು ಆಲೋಚಿಸಿದರು. ಆಗ ಅವರಿಗೆ 'ಸೇತುಂ ದೃಷ್ಟ್ವಾ ಸಮುದ್ರಸ್ಯ ಬ್ರಹ್ಮಹತ್ಯಾಂ ವ್ಯಪೋಹತಿ' - ರಾಮಸೇತುವನ್ನು ನೋಡಿದರೆ ಬ್ರಹ್ಮಹತ್ಯಾದೋಷವು ಪರಿಹಾರವಾಗುತ್ತದೆ ಎಂಬ ವಚನವು ನೆನಪಾಯಿತು. ತಾನು ಯಾವಾಗಲೂ ರಾಮಸೇತುವನ್ನು ನೋಡುತ್ತಾ ಇರಬೇಕು, ಅದಕ್ಕೋಸ್ಕರ ತನ್ನ ಲಿಂಗವು ಅಲ್ಲಿ ಯಾವಾಗಲೂ ಇರಬೇಕು, ಅದಕ್ಕಾಗಿ ತನ್ನ ಲಿಂಗವನ್ನು ಪ್ರತಿಷ್ಠಾಪಿಸುವಂತೆ ರಾಮನನ್ನು ಕೇಳಿಕೊಂಡರು. ಅದಕ್ಕಾಗಿ ರಾಮದೇವರು ಲಿಂಗಪ್ರತಿಷ್ಠೆ ಮಾಡಿದರು ಎನ್ನುವುದೇ ಯುಕ್ತ

ರುದ್ರದೇವರಿಗಿಂತಲೂ ಉತ್ತಮರಾದ ಬ್ರಹ್ಮದೇವರನ್ನು ಸಂಹರಿಸಿದರೂ ನಾರಾಯಣನಿಗೆ ಬ್ರಹ್ಮಹತ್ಯಾದೋಷವು ಬಾರದಿರುವಾಗ ಬ್ರಹ್ಮದೇವರಿಗಿಂತ ಕೆಳಗಿನವರಾದ ರಾವಣನನ್ನು ಸಂಹರಿಸಿದ ನಾರಾಯಣನೇ ಆದ ರಾಮನಿಗೆ ಬ್ರಹ್ಮಹತ್ಯಾದೋಷವು ಬರಲು ಸಾಧ್ಯವಿಲ್ಲ

**ರಾಮನು ಸರ್ವಸಮರ್ಥನೇ ಆಗಿದ್ದರೆ ಲಂಕೆಗೆ ಹೋಗಲು ಸೇತುನಿರ್ಮಾಣವನ್ನು ಏಕೆ ಮಾಡಿಸಿದ ಎಂಬ ಶಂಕೆಯನ್ನು ಲೋಕನೀತಿಯಿಂದ ನಿರಾಕರಿಸುತ್ತಾರೆ -**

**ಶಕ್ತೋಽಪಿ ರಾಜಾ ಭೃತ್ಯಸ್ಯ ಹಸ್ತಂ ಸಂಗೃಹ್ಯ ಗಚ್ಛತಿ ।**
**ಸ್ವರ್ನೀತಗರ್ದಭಶ್ವಾದೇಃ ಲಂಕಾ ಶಂಕಾಸ್ಪದಂ ಕಿಲ ॥ ೧೬ ॥**

**ಅರ್ಥ-** ರಾಜಾ= ರಾಜನು, ಶಕ್ತಃ ಅಪಿ= ಸಮರ್ಥನಾಗಿದ್ದರೂ, ಭೃತ್ಯಸ್ಯ= ಸೇವಕನ, ಹಸ್ತಂ= ಕೈಯನ್ನು, ಸಂಗೃಹ್ಯ= ಹಿಡಿದುಕೊಂಡು, ಗಚ್ಛತಿ= ಹೋಗುತ್ತಾನೆ. ಸ್ವರ್ನೀತ-ಗರ್ದಭಶ್ವಾದೇಃ= ಕತ್ತೆ ನಾಯಿಮೊದಲಾದವನ್ನು ಮೋಕ್ಷಕ್ಕೆ ಕರೆದುಕೊಂಡು ಹೋದ ಶ್ರೀರಾಮನಿಗೆ, ಲಂಕಾ= ಲಂಕೆಯು, ಶಂಕಾಸ್ಪದಂ ಕಿಲ= ಸಂಶಯಾಸ್ಪದವಾಗುವುದಂತೆ!

**ಅನುವಾದ- ರಾಜನು ತಾನೇ ನಡೆಯಲು ಸಮರ್ಥನಾದರೂ ಸೇವಕನ ಕೈ ಹಿಡಿದುಕೊಂಡು ನಡೆಯುತ್ತಾನೆ. ಕತ್ತೆ, ನಾಯಿ ಮೊದಲಾದವುಗಳನ್ನು ಮೋಕ್ಷಕ್ಕೆ ಕರೆದುಕೊಂಡು ಹೋದ ಶ್ರೀರಾಮಚಂದ್ರನಿಗೆ ಲಂಕೆಯು ಸಂಶಯಾಸ್ಪದವಂತೆ! (ಲಂಕೆಯನ್ನು ತಲುಪಲು ಕಷ್ಟವೇ?)**

**ಭಾವವಿಲಾಸಿನೀ–** ನನೂಕ್ತರೀತ್ಯಾ ರಾಮಃ ಸಮರ್ಥಶ್ಚೇತ್, ಕುತಸ್ತರ್ಹಿ ಸೇತುಮಕರೋದ್? ಇತಿ ಶಂಕಾಂ ಲೋಕನೀತ್ಯಾ ನಿವಾರಯತಿ– **ಶಕ್ತೋಽಪೀತಿ** ॥ ತಥಾ ರಾಮೋಽಪಿ ಲೀಲಯಾ ಸೇತುಂ ಕೃತ್ವಾ ತೇನ ಗತವಾನಿತಿ ಭಾವಃ । ಉತ್ತರಾರ್ಧಂ ತು ತದನಂಗೀಕಾರೇ ಬಾಧಕತ್ವೇನ ಯೋಜ್ಯಮ್ । ಗರ್ದಭಶ್ಚ ಶ್ವಾ ಚ ಆದಿರ್ಯೇಷಾಂ ತೇ ಗರ್ದಭಶ್ವಾದಯಃ । ತೇ ಸ್ವಃ ಸ್ವರ್ಗಂ ನೀತಾ ಯೇನ ಸ ತಥೋಕ್ತಃ । ಬ್ರಹ್ಮಲೋಕಪರ್ಯಂತಮನನ್ಯಾಪೇಕ್ಷಯಾ ಸರ್ವಪ್ರಾಣ್ಯುನ್ನಯನಸಮರ್ಥಸ್ಯ ಕಥಮತ್ರಾನ್ಯಾಪೇಕ್ಷಾ? ಇತಿ ಭಾವಃ ॥ ೧೬ ॥

**ವಿವರಣೆ–** ಶ್ರೀರಾಮಚಂದ್ರನು ಸೇತುವೆ ಇಲ್ಲದೆ ಲಂಕೆಗೆ ತಲುಪಲು ಸಮರ್ಥನಾಗಿದ್ದನು. ತಾನೊಬ್ಬನೇ ಸೇತುವೆಯನ್ನು ನಿರ್ಮಿಸಲು ಸಮರ್ಥನಾಗಿದ್ದನು. ಆದರೂ ಕಪಿಗಳ ಸಹಾಯದಿಂದ ಸೇತುವೆಯನ್ನು ನಿರ್ಮಿಸಿದನು. ಇದು ಕೇವಲ ಭಕ್ತಾನುಗ್ರಹರೂಪದ ಲೀಲೆ. ಹೀಗಲ್ಲದಿದ್ದರೆ ಕತ್ತೆ, ನಾಯಿ ಮೊದಲಾದವುಗಳನ್ನು ಯಾರ ಸಹಾಯವೂ ಇಲ್ಲದೆ ಮೋಕ್ಷಕ್ಕೆ ಕರೆದುಕೊಂಡು ಹೋಗಲು ಶ್ರೀರಾಮಚಂದ್ರನಿಗೆ ಹೇಗೆ ಸಾಧ್ಯವಾಯಿತು?

ರಾವಣನನ್ನು ಕೊಲ್ಲಲು ಸುಗ್ರೀವನ ಸಖ್ಯವನ್ನು ಮಾಡಿದ್ದರಿಂದ ರಾಮನಿಗೆ ರಾವಣನ ಭಯವಿತ್ತು ಎಂಬ ಲೋಕವಾರ್ತೆಯನ್ನು ಪರಿಹರಿಸುತ್ತಾರೆ -

**ಸ್ವಯಂ ಭೀರುರ್ಗಭೀರಸ್ಯ ಸ್ವಭಾವಂ ಭಾವಯೇತ ಸ್ವವತ್ ।**
**ನಖಭಿನ್ನಾಬ್ಜಜಾಂಡಸ್ಯ ಚಿಂತಾ ಹಂತಾಸುರಾತ್ ಕಿಲ ॥ ೧೭ ॥**

**ಅರ್ಥ-** ಸ್ವಯಂ ಭೀರುಃ = ಸ್ವಯಂ ಭಯವುಳ್ಳ ಮನುಷ್ಯನು, ಗಭೀರಸ್ಯ = ಗಂಭೀರನಾದ (ಭಯವಿಲ್ಲದ) ಪುರುಷನಿಗೆ, ಸ್ವವತ್ = ತನಗೆ ಹೇಗೆ ಹಾಗೆ, ಭಾವಂ = ಭಯಸ್ವಭಾವವನ್ನು, ಭಾವಯೇತ್ = ತಿಳಿಯುತ್ತಾನೆ. ನಖನಿರ್ಭಿನ್ನಾಬ್ಜಜಾಂಡಸ್ಯ = (ತ್ರಿವಿಕ್ರಮಾವತಾರದಲ್ಲಿ) ಉಗುರಿನಿಂದ ಬ್ರಹ್ಮಾಂಡವನ್ನೇ ಭೇದಿಸಿದ ಶ್ರೀರಾಮನಿಗೆ, ಅಸುರಾತ್ = ರಾವಣನಿಂದ, ಚಿಂತಾ ಕಿಲ = ಚಿಂತೆಯಂತೆ, ಹಂತ! = ಆಹಾ!

**ಅನುವಾದ-** ಸ್ವಯಂ ಅಂಜಿಕೆಯ ಸ್ವಭಾವದವನು ತನ್ನಂತೆ ಬೇರೆಯವರಲ್ಲೂ ಅಂಜಿಕೆಯ ಸ್ವಭಾವವನ್ನು ಕಲ್ಪಿಸುವನು. ತನ್ನ ಉಗುರಿನಿಂದ ಬ್ರಹ್ಮಾಂಡವನ್ನೇ ಭೇದಿಸದ ಪರಮಾತ್ಮನಿಗೆ ಅಸುರನಿಂದ ಭಯವಂತೆ! ಆಹಾ!

**ಭಾವವಿಲಾಸಿನೀ–** ಸುಗ್ರೀವಸಖ್ಯಾಪೇಕ್ಷಣಾದ್ ರಾಮಸ್ಯ ರಾವಣಾದ್ ಭೀರಿತಿ ಲೋಕ-ವಾರ್ತಾಂ ನೀತ್ವಾ ಪರಿಹರತಿ– **ಸ್ವಯಂ ಭೀರುರಿತಿ** ॥ ಭೀರುರ್ಭಯಶೀಲಃ । ಗಮ್ಭೀರಸ್ಯ= ಸ್ವಾಭೀತೇರ್ನಿಗೂಹನಾಯ ಭೀರುನಟನಾಂ ಕುರ್ವತಃ ಪುಂಸಃ ಸ್ವಭಾವಂ ಸ್ವವತ್ ಸ್ವಸ್ವಭಾವವದ್ ಭಾವಯತೇ । ಭೀರುರಿತ್ಯೇವ ಮನ್ಯತ ಇತ್ಯರ್ಥಃ । ತತ್ ಕುತ್ರ ದೃಷ್ಟಮಿತ್ಯುಕ್ತಮ್– **ನಖಭಿನ್ನಾಬ್ಜಜಾಂಡಸ್ಯೇತಿ** ॥ ನಖೇನ ಭಿನ್ನಮ್ ಅಬ್ಜಜಾಂಡಂ ಬ್ರಹ್ಮಾಂಡಂ ಯೇನ ಸಃ। ಭೂಲೋಕೇ ಸ್ಥಿತ್ವಾ ನಖಮಾತ್ರೇಣ ಶತಕೋಟಿಯೋಜನಪ್ರಮಾಣಸೌವರ್ಣಬ್ರಹ್ಮಾಂಡ-

ಖರ್ಪರಭೇದನಸಮರ್ಥಸ್ಯೇತ್ಯರ್ಥಃ । ಅಸುರಾತ್ ಶತಯೋಜನಾಂತರಿತಲಂಕಾಸ್ಥರಾವಣಾತ್ ಚಿಂತಾ ಕಿವ್? ಹಂತಾಶ್ಚರ್ಯವಮ್ । ಅತಃ ಪೂರ್ವಾರ್ಧೋಕ್ತನೀತೇರಿದಮೇವೋದಾಹರಣಮಿತಿ ಭಾವಃ ॥ ೧೭ ॥

**ವಿವರಣೆ-** ಸುಗ್ರೀವಸಖ್ಯವನ್ನು ಮಾಡಿದ್ದರಿಂದ ರಾಮನಿಗೆ ರಾವಣನ ಭಯವೆಂದು ಆಲೋಚಿಸಬಾರದು. ವಾಲಿಯ ಭಯವುಳ್ಳ ಸುಗ್ರೀವನು ತನಗೆ ಹೇಗೆ ಹಾಗೆ ರಾಮನಿಗೂ ರಾವಣನ ಭಯವಿದೆಯೆಂದು ತಿಳಿದನು ಅಷ್ಟೇ. ರಾಮನಿಗೆ ಭಯವಿಲ್ಲ, ಏಕೆಂದರೆ ಇದೇ ರಾಮ ತ್ರಿವಿಕ್ರಮಾವತಾರದಲ್ಲಿ ತನ್ನ ಪಾದದ ಉಗುರಿನಿಂದ ಬ್ರಹ್ಮಾಂಡಖರ್ಪರವನ್ನೇ ಸೀಳಿದ್ದಾನೆ. ಅಂತಹ ಬಲಿಷ್ಠನಾದ ರಾಮನಿಗೆ ಯಾವನೋ ಒಬ್ಬ ಸಾಮಾನ್ಯ ರಾವಣನಿಂದ ಭಯವಿರಲು ಸಾಧ್ಯವೇ?

**ಕುಕ್ಷೌ ಯಸ್ಯಾಖಿಲಾ ಲೋಕಾ ಲಕ್ಷ್ಯಂತೇ ಸ್ಮ ಶಿಶೋಃ ಕಿಲ ।**
**ಜನನಂ ಮರಣಂ ಚಾಸ್ಯ ನ ಯುಕ್ತಂ ಯುಕ್ತಿವಿನ್ಮತೇ ॥ ೧೮ ॥**

**ನಹಿ ಕಲ್ಪಾಂತಸಮಯಃ ಯಃ ಸ್ವರ್ಗಾರೋಹಣಕ್ಷಣಃ ।**
**ನಚ ಕಲ್ಪಾದಿಕಾಲೋಽಸೌ ಯತ್ರಾವಾತರದಚ್ಯುತಃ ॥ ೧೯ ॥**

**ಅರ್ಥ-**ಯಸ್ಯ ಶಿಶೋಃ = ಯಾವ ಮಗುವಿನ, ಕುಕ್ಷೌ = ಹೊಟ್ಟೆಯಲ್ಲಿ, ಅಖಿಲಾ ಲೋಕಾಃ = ಎಲ್ಲಾ ಲೋಕಗಳೂ, ಲಕ್ಷ್ಯಂತೇ ಸ್ಮ = ನೋಡಲ್ಪಟ್ಟವೋ, ಅಸ್ಯ = ಈ ಕೃಷ್ಣನಿಗೆ, ಜನನಂ ಮರಣಂ ಚ = ಹುಟ್ಟು ಮತ್ತು ಸಾವುಗಳು, ಯುಕ್ತಿವಿನ್ಮತೇ = ಯುಕ್ತಿಯನ್ನು ತಿಳಿದವರ ಅಭಿಪ್ರಾಯದಂತೆ, ನ ಯುಕ್ತಂ = ಯುಕ್ತವಲ್ಲ. ಯಃ ಸ್ವರ್ಗಾರೋಹಣಕ್ಷಣಃ = ಯಾವುದು ಕೃಷ್ಣನ ಸ್ವರ್ಗಾರೋಹಣಸಮಯವೋ, ಸಃ = ಅದು, ಕಲ್ಪಾಂತಸಮಯಃ = ಬ್ರಹ್ಮಕಲ್ಪದ ಕೊನೆಯ ಸಮಯವು, ನಹಿ = ಅಲ್ಲವಷ್ಟೇ. ಯತ್ರ = ಯಾವ ಸಮಯದಲ್ಲಿ, ಅಚ್ಯುತಃ = ಜನನ ಮರಣಾದಿ ದೋಷರಹಿತನಾದ ಕೃಷ್ಣನು, ಅವಾತರತ್ = ಅವತರಿಸಿದನೋ, ಸಃ = ಅದು, ಕಲ್ಪಾದಿಕಾಲಃ = ಬ್ರಹ್ಮಸೃಷ್ಟಿಯ ಮೊದಲಸಮಯವೂ, ನಚ = ಅಲ್ಲವಷ್ಟೇ.

**ಅನುವಾದ-** ಕೃಷ್ಣನ ತಾಯಿಯು ಅವನ ಹೊಟ್ಟೆಯಲ್ಲಿ ಎಲ್ಲ ಲೋಕಗಳನ್ನೂ ನೋಡಿದಳು. ಅಂತಹ ಕೃಷ್ಣನಿಗೆ ಜನನಮರಣವು ಯುಕ್ತವಲ್ಲ. ಕೃಷ್ಣನು ಸ್ವರ್ಗಕ್ಕೆ ಹೋದದ್ದನ್ನು ಅವನ ಮರಣವೆನ್ನುವುದಾದರೆ ಆಗ ಅವನ ಹೊಟ್ಟೆಯಲ್ಲಿರುವ ಎಲ್ಲ ಲೋಕಗಳೂ ನಾಶವಾಗಿ ಅದು ಬ್ರಹ್ಮಕಲ್ಪನಾಶದ ಸಮಯವಾಗಬೇಕಾದೀತು. ಹಾಗೆಯೇ ಕೃಷ್ಣನ ಅವತಾರವನ್ನೇ ಅವನ ಹುಟ್ಟು ಎನ್ನುವುದಾದರೆ, ಹೊಟ್ಟೆಯೊಳಗಿರುವ ಬ್ರಹ್ಮಾಂಡವೂ ಆಗಲೇ ಹುಟ್ಟಿತು ಎನ್ನಬೇಕಾಗುವುದು. ಕೃಷ್ಣನ

ಅವತಾರಕಾಲವು ಬ್ರಹ್ಮಸೃಷ್ಟಿಕಾಲವಾಗಿ, ಅವತಾರದ ಮೊದಲು ಏನೂ ಇಲ್ಲವಾಗಬೇಕಾದೀತು. ಇವೆರಡೂ ಅಲ್ಲ.

**ಭಾವವಿಲಾಸಿನೀ–** ಇದಾನೀಂ ಕೃಷ್ಣಾವತಾರಸ್ಯ ನಿರ್ದೋಷತಾಂ ಸಮರ್ಥಯತೇ– **ಕುಕ್ಷಾವಿತಿ** ॥ ಯಸ್ಯ ಶಿಶೋಃ ಲಕ್ಷ್ಯಂತೇ ಸ್ಮ ಅಲಕ್ಷ್ಯಂತ । ಮಾತ್ರಾ ಜೃಂಭಮಾಣೇ ಮುಖದ್ವಾರಾ ಅದೃಶ್ಯಂತ । ಕಿಲೇತಿ ಪುರಾಣಪ್ರಸಿದ್ಧಿಂ ದ್ಯೋತಯತಿ । ಅಸ್ಯ ಕೃಷ್ಣಸ್ಯ ಯುಕ್ತಿವಿನ್ಮತೇ ಜನನಂ ಮರಣಂ ಚ ನ ಯುಕ್ತಮಿತಿ ಯೋಜನಾ । ಉದರಸ್ಥಬ್ರಹ್ಮಾಂಡಸ್ಯೋತ್ಪತ್ತಿಂ ವಿನೋತ್ಪತ್ತೇರ್ವಿನಾಶಂ ವಿನಾ ನಾಶಸ್ಯ ಯುಕ್ತಿಬಾಧಿತತ್ವಾತ್ । ಬ್ರಹ್ಮಾಂಡೋದರಸ್ಯ ತಸ್ಯ ಸೂಕ್ಷ್ಮತರಮಾತೃಗರ್ಭ-ಪ್ರವೇಶಾಯೋಗಾಚ್ಚ । ಸಾಮರ್ಥ್ಯವಿಶೇಷಾದ್ ಘಟತ ಇತಿ ಚೇತ್ ತರ್ಹ್ಯೇತಾದೃಶಮಹಾಸಮರ್ಥಸ್ಯ ಕಥಂ ಜನನಮರಣಾದಿದೋಷೋ ಘಟತೇ? ಇತಿ ಭಾವಃ ॥ ೧೮ ॥

ಏತದೇವ ವಿವೇಚಯತಿ– **ನಹೀತಿ** ॥ ಕೃಷ್ಣಸ್ಯ ಯಸ್ಸ್ವರ್ಗಾರೋಹಣಕ್ಷಣಃ ಸಃ ಕಲ್ಪಾಂತಸಮಯಃ ಬ್ರಹ್ಮಣಃ ಶತವರ್ಷಾವಸಾನಕಾಲಃ । ಬ್ರಹ್ಮಪ್ರಲಯ ಇತಿ ಯಾವತ್ । ನಹೀತಿ ಸಂಬಂಧಃ । ಯದ್ಯುದರಸ್ಥಬ್ರಹ್ಮಾಂಡಸ್ಯ ಕೃಷ್ಣದೇಹಸ್ಯ ಸ್ವರ್ಗಾರೋಹಣಕಾಲೇ ನಾಶಃ ಸ್ಯಾತ್, ತರ್ಹ್ಯಯಮೇವ ಬ್ರಹ್ಮಪ್ರಲಯಕಾಲಃ ಸ್ಯಾದಿತಿ ಭಾವಃ । ಯತ್ರ ಕಾಲೇಽಚ್ಯುತಃ ಅವಾತರದ್ ಅವತತಾರ । ಅಸೌ ಕಾಲಃ ಕಲ್ಪಾದಿಕಾಲಃ ಬ್ರಹ್ಮಸೃಷ್ಟೇರಾದಿಕಾಲೋ ನೇತಿ ಸಂಬಂಧಃ । ಯದಿ ಕೃಷ್ಣಾವತಾರಕಾಲೇ ಕೃಷ್ಣಸ್ಯೋತ್ಪತ್ತಿಃ ಸ್ಯಾತ್, ತದೋದರಸ್ಥಬ್ರಹ್ಮಾಂಡಸ್ಯಾಪ್ಯುತ್ಪತ್ತ್ಯವಶ್ಯಂಭಾವೇನಾಽಯಮೇವ ಕಲ್ಪಾದಿಕಾಲಃ ಸ್ಯಾತ್ । ಅತೋ ಜನನಮರಣೇ ನಾಸ್ಯ ಶಂಕಿತುಮಪಿ ಶಕ್ಯೇ ಇತಿ ಭಾವಃ ॥೧೯॥

**ವಿವರಣೆ–** ಜಗದುದರನಾದ ಕೃಷ್ಣನಿಗೆ ಹುಟ್ಟು ಇದ್ದಿದ್ದರೆ ಕೃಷ್ಣ ಹುಟ್ಟಿದಾಗಲೇ ಜಗತ್ತಿನ ಸೃಷ್ಟಿಯಾಗಬೇಕಾಗಿತ್ತು. ಕೃಷ್ಣನು ಅವತಾರಸಮಾಪ್ತಿಯನ್ನು ಮಾಡಿದಾಗ ಜಗತ್ತೂ ಇಲ್ಲವಾಗಬೇಕಾಗಿತ್ತು. ಇದು ಅನುಭವವಿರುದ್ಧ.

ಬೇರೆ ಯುಕ್ತಿಯಿಂದಲೂ ಕೃಷ್ಣನಿಗೆ ಉತ್ಪತ್ತಿಯನ್ನು ನಿರಾಕರಿಸುತ್ತಾರೆ -

ಯದ್ವಿಪ್ರಾಂಘ್ರ್ಯಂಕನಂ ವೈಕುಂಠಸ್ಥಮೂರ್ತೇರ್ಹಿ ವಕ್ಷಸಿ ।
ತದೇವ ದೇವಕೀಗರ್ಭಜಾತಸ್ಯ ಕಿಲ ವಕ್ಷಸಿ ॥ ೨೦ ॥

ಅತಸ್ತದೇವ ಹಿ ಭವೇದಿದಂ ರೂಪಂ ನಚಾಪರಮ್ ।
ನ ಚೇತ್ ಕುಪ್ಯಂತಿ ಯೋಧಾನಾಂ ಕಲಾಕುಶಲಮಂತ್ರಿಣಃ ॥ ೨೧ ॥

**ಅರ್ಥ**-ಯತ್ = ಯಾವ, ವಿಪ್ರಾಂಘ್ರ್ಯಂಕನಂ = ವಿಪ್ರಪಾದದ ಚಿಹ್ನೆಯು (ಶ್ರೀವತ್ಸಚಿಹ್ನೆಯು) , ವೈಕುಂಠಮೂರ್ತೇಃ = ವೈಕುಂಠದಲ್ಲಿರುವ ನಾರಾಯಣನ, ವಕ್ಷಸಿ ಹಿ = ಎದೆಯಲ್ಲಿ ಇದೆ ಎಂದು ಪುರಾಣಪ್ರಸಿದ್ಧಿಯು ಇದೆಯೋ, ತದೇವ = ಆ

ಶ್ರೀವತ್ಸಚಿಹ್ನೆಯೇ, ದೇವಕೀಗರ್ಭಜಾತಸ್ಯ = ದೇವಕಿಯ ಗರ್ಭದಲ್ಲಿ ಹುಟ್ಟಿದ ಶ್ರೀಕೃಷ್ಣನ, ವಕ್ಷಸಿ ಕಿಲ = ಎದೆಯಲ್ಲಿ ಇದೆಯಷ್ಟೇ. ಅತಃ = ಆದ್ದರಿಂದ, ಇದಂ ರೂಪಂ = ಈ ಕೃಷ್ಣರೂಪವು, ತದೇವ = ಆ ಮೂಲರೂಪವೇ. ನಚ ಅಪರಂ = ಬೇರೆಯಲ್ಲ. ನ ಚೇತ್ = ಹಾಗಲ್ಲದಿದ್ದರೆ (ಈರೂಪವು ಬೇರೆಯಾದರೆ) ಯೋಧಾನಾಂ = ಭಟರ, ಕಲಾಕುಶಲಮಂತ್ರಿಣಃ = ದೇಹದಲ್ಲಿ ಆಗಿದ್ದ ಗಾಯ ಮೊದಲಾದ ಕಲೆಗಳನ್ನು ತಿಳಿಯುವ ಕೌಶಲವಿರುವ ಚಿಂತಕರು, ಕುಪ್ಯಂತಿ = ಸಿಟ್ಟಾಗುತ್ತಾರೆ.

**ಅನುವಾದ- ಭೃಗುಮುನಿಗಳು ವಿಷ್ಣುವಿನ ಎದೆಗೆ ಒದ್ದಾಗ ಉಂಟಾದ ಗುರುತೇ ಶ್ರೀವತ್ಸಚಿಹ್ನೆ ಎಂದು ಪುರಾಣಪ್ರಸಿದ್ಧಿಯು ಇದೆ. ಶ್ರೀಕೃಷ್ಣನ ಅವತಾರವು ಆದಾಗ ಎದೆಯಲ್ಲಿ ಅದೇ ಶ್ರೀವತ್ಸಚಿಹ್ನೆಯು ಇತ್ತು. ಆದ್ದರಿಂದ ಈ ಕೃಷ್ಣರೂಪ ಮತ್ತು ಮೂಲರೂಪಗಳು ಬೇರೆ ಅಲ್ಲ. ವೈಕುಂಠಮೂರ್ತಿಯಲ್ಲಿರುವ ಚಿಹ್ನೆಯೇ ಶ್ರೀಕೃಷ್ಣನಲ್ಲಿದ್ದರೂ ಕೃಷ್ಣನು ನಾರಾಯಣನಲ್ಲವೆಂದರೆ ಸೈನಿಕರ ಶರೀರದಲ್ಲಿರುವ ಗಾಯದ ಕಲೆಗಳಿಂದ ಅವರನ್ನು ಗುರುತಿಸುವ ಕೌಶಲವು ಸುಳ್ಳಾಗಬೇಕಾದೀತು.**

**ಭಾವವಿಲಾಸಿನೀ–** ಯುಕ್ತ್ಯಂತರೇಣ ಕೃಷ್ಣಸ್ಯೋತ್ಪತ್ತಿಂ ದೂರೀಕರೋತಿ– **ಯದಿತಿ** ॥ ಯತ್ ವಿಪ್ರಾಂಘ್ರೇಃ ಭೃಗುಚರಣಸ್ಯಂಕನಂ ಶ್ರೀವತ್ಸ ಇತಿ ಯಾವತ್ । ವೈಕುಂಠಸ್ಯ ಮೂರ್ತೇರ್ವಕ್ಷಸಿ ತಿಷ್ಠತಿ ಹಿ । ಹೀತ್ಯನೇನ ಪುರಾಣಪ್ರಸಿದ್ಧಿಂ ದ್ಯೋತಯತಿ । ತದೇವ ತಚ್ಛ್ರೀವತ್ಸಾಂಕನಮೇವ ದೇವಕೀಗರ್ಭಜಾತಸ್ಯ ವಕ್ಷಸಿ ಕಿಲ । ಕಿಲೇತ್ಯನೇನ **'ಶ್ರೀವತ್ಸಲಕ್ಷ್ಮಂ ಗಲಶೋಭಿಕೌಸ್ತುಭಮ್'** ಇತಿ ವಾಕ್ಯಂ ಸ್ಮಾರಯತಿ ॥ ೨೦ ॥

ಅತಸ್ತದ್ದೇಹಸ್ಥಿತಪಾದಚಿಹ್ನಸ್ಯೈತದ್ದೇಹೇಽಪಿ ವಿದ್ಯಮಾನತ್ವಾತ್ । ಮಧ್ಯೇ ದೇವಕೀದೇಹಂ ಪ್ರವಿಶ್ಯ ಗರ್ಭಸ್ಥಿತಶಿಶೋರ್ವಕ್ಷಸಿ ವಿಪ್ರೇಣಾಕೃತತ್ವಾದಿತಿ ಭಾವಃ । ಹೀತ್ಯನೇನ ತದಾನೀಂತನ ಚಿಹ್ನಸ್ಯೇ-ದಾನೀಮಪಿ ವಿದ್ಯಮಾನತ್ವೇ ಸ ಏವಾಯಂ ಭವೇದ್ ಇತಿ ಲೌಕಿಕಪ್ರಸಿದ್ಧಿಂ ಸೂಚಯತಿ । ತದೇವ ದರ್ಶಯತಿ– **ನ ಚೇದಿತಿ** ॥ ಯೋಧಾನಾಂ ಭಟಾನಾಂ ಕಲಾಕುಶಲಮನ್ತ್ರಿಣಃ ಕಲಾನಾಮ ಯೋಧಾನಾಮಂಗೇ ವಿದ್ಯಮಾನವ್ರಣಾದ್ಯುಪಶಮೇ ಸತಿ ಜಾತಚಿಹ್ನಂ ನೀಲಿಮಾದಿಕಂ ಚ, ತಸ್ಯಾಂ ಕುಶಲಾಃ, ತಸ್ಯಾಂ ಕಲಾಯಾಂ ಸತ್ಯಾಂ ಸ ಏವಾಯಮ್, ನೋ ಚೇದನ್ಯೋಽಯಮಿತಿ ವಿವೇಚನೇ ಸಮರ್ಥಾ ಇತ್ಯರ್ಥಃ ॥ ೨೧ ॥

**ವಿವರಣೆ–** ಮೂಲರೂಪದಲ್ಲಿರುವ ಶ್ರೀವತ್ಸಚಿಹ್ನೆ ಕೃಷ್ಣನಲ್ಲಿರುವುದರಿಂದ, ಆ ಮೂಲರೂಪವೇ ಈ ಕೃಷ್ಣರೂಪ. ಈ ರೂಪ ಈಗ ಹುಟ್ಟಿದ್ದಲ್ಲ.

ಗಾಯಗಳು ವಾಸಿಯಾದನಂತರ ಉಳಿದಿರುವ ಗುರುತುಗಳನ್ನು ನೋಡಿ ಅಥವಾ ಅವುಗಳ ಬಗ್ಗೆ ಕೇಳಿ ಕೌಶಲವುಳ್ಳ ಪರಿತರು ಸೈನಿಕರನ್ನು ಸರಿಯಾಗಿ ಗುರುತಿಸುತ್ತಾರೆ.

ಹಿಂದೆ ಹೇಳಿದ ಯುಕ್ತಿಗೆ ಮೂಲಸ್ಮೃತಿಯನ್ನು ಹೇಳುತ್ತಾರೆ -

ಪ್ರದರ್ಶ್ಯಾತಪ್ತತಪಸಾಮವಿತೃಪ್ತದೃಶಾಂ ನೃಣಾಮ್ ।
ಆದಾಯಾಂತರಧಾದ್ ಯಸ್ತು ಸ್ವಬಿಂಬಂ ಲೋಕಲೋಚನಮ್॥ ೨೨ ॥

ಇತಿ ಭಾಗವತೇ ಪ್ರೋಕ್ತಾಮುದ್ಧವೋಕ್ತಿಂ ನ ವಿಸ್ಮರ ।
ವಿಸ್ತರೋಽಸ್ಯ ಪ್ರಮೇಯಸ್ಯ ಕೃಷ್ಣಕಾವ್ಯೇ ಪ್ರದೃಶ್ಯತಾಂ ॥ ೨೩ ॥

**ಅರ್ಥ-**'ಪ್ರದರ್ಶ್ಯಾತಪ್ತತಪಸಾಮ್...... ಲೋಕಲೋಚನಮ್' ಇತಿ = ಪ್ರದರ್ಶ್ಯ.... ಲೋಚನಮ್ ಎಂದು, ಭಾಗವತೇ = ಭಾಗವತದಲ್ಲಿ, ಪ್ರೋಕ್ತಾಂ = ಹೇಳಲ್ಪಟ್ಟ ಉದ್ಧವೋಕ್ತಿಂ = ಉದ್ಧವನ ಮಾತನ್ನು, ನ ವಿಸ್ಮರ = ಮರೆಯಬೇಡ. ಅಸ್ಯ ಪ್ರಮೇಯಸ್ಯ = ಈ ಪ್ರಮೇಯದ, ವಿಸ್ತರಃ = ವಿವರಣೆಯು, ಕೃಷ್ಣಕಾವ್ಯೇ = ರುಗ್ಮಿಣೀಶವಿಜಯಕಾವ್ಯದಲ್ಲಿ, ಪ್ರದೃಶ್ಯತಾಂ = ನೋಡಲ್ಪಡಲಿ.

**ವಿವರಣೆ-** (1) ಶ್ರೀಕೃಷ್ಣನ ಶರೀರ ಅತ್ಯಂತ ಸುಂದರವಾಗಿತ್ತು. ಎಷ್ಟುನೋಡಿದರೂ ಸಾಕೆಂಬ ಭಾವನೆ ಜನರಲ್ಲಿ ಬರುತ್ತಿರಲಿಲ್ಲ. ಈ ದೇಹವನ್ನು ನೋಡಲು ಜನರು ಎಷ್ಟು ಪುಣ್ಯಮಾಡಿದ್ದಾರೋ ಅಲ್ಲಿಯವರೆಗೆ ತೋರಿಸಿ ಶ್ರೀಕೃಷ್ಣನು ಆ ದೇಹವನ್ನು ಭೂಮಿಯಲ್ಲಿ ಬಿಡದೆ, ಪರಂಧಾಮಕ್ಕೆ ತೆಗೆದುಕೊಂಡುಹೋದನು ಎಂದು ಭಾಗವತದಲ್ಲಿ (3.2.11) ಉದ್ಧವನ ಮಾತು ಇದೆ. ಇದರಿಂದ ವೈಕುಂಠದಲ್ಲಿರುವ ದೇಹ ಮತ್ತು ಕೃಷ್ಣರೂಪಗಳು ಬೇರೆ ಅಲ್ಲ, ಶ್ರೀಕೃಷ್ಣರೂಪಕ್ಕೆ ಹುಟ್ಟು ಸಾವುಗಳು ಇಲ್ಲ ಎಂದು ಸ್ಪಷ್ಟವಾಗುತ್ತದೆ. ಇದರ ಬಗ್ಗೆ ಇನ್ನೂ ಹೆಚ್ಚಿನ ವಿವರಣೆಯು ರಾಜರೇ ರಚಿಸಿರುವ ರುಗ್ಮಿಣೀಶವಿಜಯಕಾವ್ಯದಲ್ಲಿ ಇದೆ.

(2) ಭಾಗವತ 3.2.11 ರ ಅರ್ಥ, ಯಃ= ಯಾವ ಕೃಷ್ಣನು, ಲೋಕಲೋಚನಂ= ಜನರಿಂದ ಎವೆಯಿಕ್ಕದೆ ನೋಡಲ್ಪಡುತ್ತಿದ್ದ, ಸ್ವಬಿಂಬಂ= ತನ್ನ ದೇಹವನ್ನು, ಅತಪ್ತತಪಸಾಂ= ತಪಸ್ಸನ್ನು ಮಾಡದಿರುವ, ಅವಿತೃಪ್ತದೃಶಾಂ= ತೃಪ್ತವಾಗದ ಕಣ್ಣುಗಳುಳ್ಳ, ನೃಣಾಂ= ಮನುಷ್ಯರಿಗೆ, ಪ್ರದರ್ಶ್ಯ= ತೋರಿಸಿ, ಆದಾಯ= ತೆಗೆದುಕೊಂಡು, ಅಂತರಧಾತ್= ಅದೃಶ್ಯನಾದನು.

(3) ಅತಪ್ತತಪಸಾಮ್= ಪುನಃಪುನಃ ನೋಡಲು ಅನುಕೂಲವಾದ ತಪಸ್ಸನ್ನು ಮಾಡದಿರುವ (ಭಾ.ವಿ.) ಪ್ರದರ್ಶ್ಯ= ಸ್ವರ್ಗಾರೋಹಣದವರೆಗೆ ತೋರಿಸಿ (ಭಾ.ವಿ).

**ಭಾವವಿಲಾಸಿನೀ–** ಕೃಷ್ಣದೇಹಸ್ಯ ನಾಶಾಭಾವೇ ಯುಕ್ತಿಮೂಲೀಭೂತಾಂ ಸ್ಮೃತಿಂ ಚಾಹ– ಪ್ರದರ್ಶ್ಯೇತಿ ॥ ಲೋಕಾನಾಂ ಲೋಚನಾನಿ ಯಸ್ಮಿನ್ ತತ್ । ಸ್ವಬಿಂಬಂ ಸ್ವದೇಹಮ್ । ಅತಪ್ತತಪಸಾಂ ಪುನಃಪುನರ್ದ್ರಷ್ಟುಂ ತಪ್ತತಪೋರಹಿತಾನಾಂ ಅವಿತೃಪ್ತದೃಶಾಮ್

ಅನಂತಲಾವಣ್ಯ ಪೂರ್ಣತ್ವೇನಾಲಮ್ಬುದ್ಧಿರಹಿತನಯನಾನಾಂ ಪ್ರದರ್ಶ್ಯ ಸ್ವರ್ಗಾರೋಹಣ-ಪರ್ಯಂತಂ ದರ್ಶಯಿತ್ವಾ। ಸ್ವರ್ಗಾರೋಹಣಸಮಯೇ ತದೇವ ಬಿಂಬಮಾದಾಯ ಅವಿಮುಚ್ಯೇತಿ ಯಾವತ್। ಅಂತರಧಾದ್ ಅದೃಶ್ಯೋಽಭೂದಿತಿ ಶ್ಲೋಕಾರ್ಥಃ। ಉದ್ದವೋಕ್ತಿಂ ಸಾಕ್ಷಾತ್ ಕೃಷ್ಣಾದೇವ ಶ್ರುತತತ್ತ್ವಸ್ಯೋದ್ಧವಸ್ಯ ವಚನಮ್। ಅಸ್ಯ ಜನನಾಭಾವಸ್ಯ ವಿಸ್ತರಃ। ತೇನೈವ ವಪುಷಾಽದ್ಯ ವಾಮಿತಿ ಅಮುನಾ ವಪುಷಾಽನಘೇತಿ ಉಭಯವಿಧಪ್ರತ್ಯಭಿಜ್ಞಾದಿಯುಕ್ತೀನಾಂ ಬಾಹುಲ್ಯಮ್। ಕೃಷ್ಣಕಾವ್ಯೇ ರುಗ್ಮಿಣೀಶವಿಜಯೇ ॥ ೨೨–೨೩ ॥

ಕೃಷ್ಣನ ಶರೀರಕ್ಕೆ ಛೇದಭೇದಾದಿಗಳೂ ಇಲ್ಲ-

> ಯೇ ಪಾರ್ಥರಥಸೂತಸ್ಯ ವಿಶ್ವರೂಪೇ ರಣಾತ್ ಪುರಾ ।
> ವಿಲಗ್ನಾ ದಶನಾಗ್ರೇಷು ಚೂರ್ಣೀಭೂತಾಶ್ಚ ಸರ್ವಶಃ ।
> ದೃಷ್ಟಾಸ್ತಚ್ಛರವೇಗೇನ ಛೇದೋ ವೇಧಃ ಕಥಂ ಪ್ರಭೋಃ ॥ ೨೪ ॥

**ಅರ್ಥ**-ರಣಾತ್ ಪುರಾ= ಯುದ್ಧಕ್ಕಿಂತ ಮೊದಲೇ (ದೃಶ್ಯಮಾನೆ= ನೋಡಲ್ಪಡುತ್ತಿದ್ದ) ಪಾರ್ಥರಥಸೂತ್ರಸ್ಯ= ಅರ್ಜುನನ ರಥದ ಸಾರಥಿಯ, ವಿಶ್ವರೂಪೇ= ವಿಶ್ವರೂಪದಲ್ಲಿ, ಯೇ ಸರ್ವಶಃ= ಯಾವ ಎಲ್ಲರೂ (ಭೀಷ್ಮ ಮೊದಲಾದವರು), ದಶನಾಗ್ರೇಷುಃ= ಹಲ್ಲಿನ ತುದಿಗಳಲ್ಲಿ, ವಿಲಗ್ನಾಃ= ಸಿಕ್ಕಿಕೊಂಡವರಾಗಿ, ಚ= ಮತ್ತು, ಚೂರ್ಣೀಕೃತಾಃ= ಪುಡಿಗಟ್ಟಲ್ಪಟ್ಟವರಾಗಿ, ದೃಷ್ಟಾಃ= ನೋಡಲ್ಪಟ್ಟರೋ, ತಚ್ಛರವೇಗೇನ= ಆ ಭೀಷ್ಮಾದಿಗಳ ಬಾಣಗಳ ವೇಗದಿಂದ, ಪ್ರಭೋಃ= ಸಮರ್ಥನಾದ ಶ್ರೀಕೃಷ್ಣನಿಗೆ, ಛೇದಃ= ಛೇದವು, ವೇಧಃ= ಹೊಡೆತವು, ಕಥಮ್= ಹೇಗೆ?

**ಅನುವಾದ**- ಯುದ್ಧಕ್ಕಿಂತ ಮೊದಲೇ ಕೃಷ್ಣನು ಅರ್ಜುನನಿಗೆ ವಿಶ್ವರೂಪವನ್ನು ತೋರಿಸಿದ್ದ. ಆ ವಿಶ್ವರೂಪದಲ್ಲಿ ಭೀಷ್ಮಾದಿಗಳೆಲ್ಲರೂ ಹಲ್ಲಿನ ತುದಿಯಲ್ಲಿ ಸಿಕ್ಕಿಹಾಕಿಕೊಂಡಿದ್ದಾರೆ. ಇನ್ನು ಕೆಲವರು ಪುಡಿಪುಡಿಯಾಗಿದ್ದಾರೆ. ಯುದ್ಧಕ್ಕಿಂತ ಮೊದಲೇ ಈ ಅವಸ್ಥೆಯನ್ನು ಹೊಂದಿದ ಭೀಷ್ಮಾದಿಗಳನ್ನು ಅರ್ಜನನು ನೋಡಿದ್ದಾನೆ. ಅಂತಹ ಸತ್ವವೇ ಇಲ್ಲದ ಭೀಷ್ಮಾದಿಗಳ ಬಾಣದಿಂದ ಸರ್ವಸಮರ್ಥನಾದ ಶ್ರೀಕೃಷ್ಣನಿಗೆ ಛೇದ-ವೇಧಗಳು ಹೇಗೆ?

**ಭಾವವಿಲಾಸಿನೀ**– ಇದಾನೀಂ ಹರೇಶ್ಛೇದಭೇದಾಭಾವೇ ಯುಕ್ತಿಮಾಹ– ಯೇ ಪಾರ್ಥೇತಿ ॥ ಯೇ ಭಟಾ ಭೀಷ್ಮಾದಯಃ ಸರ್ವಶಃ ಸರ್ವೇ। ಪಾರ್ಥರಥಸಾರಥೇಃ ಕೃಷ್ಣಸ್ಯ ವಿಶ್ವರೂಪೇ ದೃಶ್ಯಮಾನೇ ಸತೀತಿ ಯಾವತ್। ರಣಾತ್ ಪುರಾ ಯುದ್ಧಾರಂಭಾತ್ ಪೂರ್ವಮೇವ ದಶನಾಗ್ರೇಷು ವಿಶ್ವರೂಪಸ್ಯ ಹರೇರ್ದಂತಾಗ್ರೇಷು ವಿಲಗ್ನಾಃ ಸಂಹಾರಾಯ ದಂಶನಸಮಯೇ ಸಂಲಗ್ನಾಃ, ಕೇಚನ ಚೂರ್ಣೀಭೂತಮಸ್ತಕಾದಯಶ್ಚ ದೃಷ್ಟಾಃ ಪಾರ್ಥೇನ। **'ಕೇಚಿದ್ ವಿಲಗ್ನಾ ದಶನಾಂತರೇಷು ಸಂದೃಶ್ಯಂತೇ ಚೂರ್ಣಿತೈರುತ್ತಮಾಂಗೈಃ'** ಇತ್ಯಾದಿಗೀತಾವಚನಾತ್

ಸಿದ್ಧೋಽಯಮರ್ಥಃ । ತಚ್ಛರವೇಗೇನ ತೇಷಾಂ ಚೂರ್ಣಿತಾನಾಂ ದಶನಾಗ್ರೇಣ ದಷ್ಟಾನಾಂ ಶರವೇಗೇನ ಪ್ರಭೋಃ ಕೃಷ್ಣಸ್ಯ ಛೇದೋ ವೇಧಃ ಕಥಮ್? ನ ಕಥಂಚಿತ್ । ಸ್ವಯಂ ಪ್ರಾಗೇವ ತದ್ವದನಗ್ರಾಸತಾಂ ಪ್ರಾಪ್ತಾಃ ಕಥಂ ತಮೇವ ಹರಿಂ ತಾಡಯೇಯುಃ? **'ದಿವ್ಯಂ ದದಾಮಿ ತೇ ಚಕ್ಷುಃ ಪಶ್ಯ ಮೇ ಯೋಗಮೈಶ್ವರಮ್'** ಇತಿ ವಚನೇನಾಸ್ಯ ಪ್ರತ್ಯಕ್ಷಸ್ಯ ದಿವ್ಯದೃಷ್ಟಿರೂಪತಯಾ ಬಾಧಿತುಮಶಕ್ಯತ್ವೇನಾತಾದೃಶದ್ವಿತೀಯಪ್ರತ್ಯಕ್ಷಮೇವಾಜ್ಞದೃಷ್ಟಿತಯಾ ಬಾಧ್ಯಮಿತಿ ಭಾವಃ । ಏತೇನ ಪ್ರತ್ಯಕ್ಷದೃಷ್ಟವೇಧಾದೇಃ 'ವಿದ್ಧವನ್ಮುಗ್ಧವಚ್ಚೈವ' ಇತಿ ವಚನಮಾತ್ರೇಣ ಕಥಂ ಬಾಧ್ಯತ್ವಮ್? ಇತಿ ಶಂಕಾ ಪರಿಹೃತಾ । ಉಕ್ತರೀತ್ಯಾ ವೇಧಾದ್ಯಭಾವಸ್ಯ ತತೋಽಪಿ ಪ್ರಬಲಪಾರ್ಥಪ್ರತ್ಯಕ್ಷ-ಸಿದ್ಧತ್ವಾತ್ । ಅತ ಏವ **ಶಿತವಿಶಿಖಹತೋ ವಿಶೀರ್ಣದಂಶಕ್ಷತಜಪರಿಪ್ಲುತ ಆತತಾಯಿನೋ ಮೇ'** ಇತ್ಯಾದಿವಾಕ್ಯಾನಿ ಮೋಹಕವಾಕ್ಯತಯೋಪೇಕ್ಷಣೀಯಾನಿ । **ಶಿತವಿಶಿಖಾ ಹತಾ ಯೇನ ಸಃ । 'ವಿ ನಿಷೇಧೇ ಪೃಥಗ್ಭಾವೇ' ಇತಿ ವಚನಾದ್ ವಿಶೀರ್ಣಃ ಅಶೀರ್ಣಃ ದಂಶಃ ಕವಚೋ ಯಸ್ಯ ಸಃ । ಏತೇನ 'ವಿಭಿದ್ಯಮಾನತ್ವಚಿ'** ಇತ್ಯೇತದ್ ವ್ಯಾಖ್ಯಾತಪ್ರಾಯಮ್ । ಕ್ಷತಜಪರಿಪ್ಲುತಃ ಉಭಯಪಾರ್ಶ್ವೇ ಶರತಾಡಿತಭಟಾಂಗಸ್ರವತ್‌ಕ್ಷತಜಬಿಂದುಭಿಃ ಪರಿಪ್ಲುತ ಇತ್ಯನುಕೂಲಾರ್ಥತಯಾ ಸಂಗ್ರಾಹ್ಯಾಣಿ । **'ವಿಭಿದ್ಯಮಾನತ್ವಚಿ' 'ವಿಲಸತ್ಕವಚಃ'** ಇತ್ಯನಯೋರ್ವಿರೋಧಾಚ್ಚಾಷ್ಟದುಕ್ತ ಏವಾರ್ಥಃ ॥ ೨೪ ॥

**ವಿವರಣೆ–** ಭೀಷ್ಮರು ಕೃಷ್ಣನ ಶರೀರದಲ್ಲಿ ಗಾಯಗಳಾಗಿರುವುದನ್ನು 'ಶಿತವಿಶಿಖಹತಃ' = ನನ್ನ ತೀಕ್ಷ್ಣವಾದ ಬಾಣಗಳಿಂದ ನಿನ್ನ ದೇಹದಲ್ಲಿ ಗಾಯಗಳಾಗಿವೆ, 'ವಿಶೀರ್ಣದಂಶಃ' = ನಿನ್ನ ಕವಚವು ಪುಡಿಯಾಗಿದೆ. 'ಕ್ಷತಜಪರಿಪ್ಲುತಃ' = ನಿನ್ನ ದೇಹವು ನೆತ್ತರಿನಿಂದ ಒದ್ದೆಯಾಗಿದೆ, ಎಂದು ತಾವೂ ನೋಡಿದ ಸ್ಥಿತಿಯನ್ನು ಹೇಳಿದರು ಎಂದು ಭಾಗವತವು ಹೇಳಿದೆ. ಆದರೂ 'ವಿದ್ಧವನ್ಮುಗ್ಧವಚ್ಚೈವ' ಇತ್ಯಾದಿವಾಕ್ಯಗಳಿಂದ ಭಾಗವತವು ಅಜ್ಞಜನರ ಮೋಹಕ್ಕಾಗಿ ಹಾಗೆ ಹೇಳಿದೆ ಎಂದು ತಿಳಿಯಬೇಕು. ಭೀಷ್ಮರು ಪ್ರತ್ಯಕ್ಷವಾಗಿ ನೋಡಿ ಹೇಳುತ್ತಿರುವಾಗ ಇದನ್ನು ಮೋಹಕ್ಕಾಗಿ ಹೇಳಿದ ವಾಕ್ಯ ಎಂದು ಹೇಗೆ ನಂಬಬೇಕು? ಶ್ರೀಕೃಷ್ಣನು ಅರ್ಜುನನಿಗೆ ದಿವ್ಯದೃಷ್ಟಿಯನ್ನು ಕೊಟ್ಟು ವಿಶ್ವರೂಪವನ್ನು ತೋರಿಸಿದ್ದಾನೆ. ಆದ್ದರಿಂದ ಅರ್ಜುನನ ಪ್ರತ್ಯಕ್ಷವು ಅತ್ಯಂತಬಲಿಷ್ಠವಾದ ಪ್ರತ್ಯಕ್ಷ. ಆ ಪ್ರತ್ಯಕ್ಷದಿಂದ ಭೀಷ್ಮರ ವಾಕ್ಯವು ಬಾಧಿತವಾಗುತ್ತದೆ. ಆದ್ದರಿಂದ ಅದನ್ನು ಮೋಹಕ್ಕಾಗಿ ಹೇಳಿದ್ದು ಎಂದು ತಿಳಿಯಬೇಕು. ಆದ್ದರಿಂದ 'ಶಿತವಿಶಿಖಹತಃ' ಎಂದರೆ ಚೂಪಾದ ಬಾಣಗಳೇ ಕೃಷ್ಣದೇಹಕ್ಕೆ ತಾಗಿ ಪುಡಿಯಾದವು ಎಂದು ಅರ್ಥ. ಹಾಗೆಯೇ 'ವಿಶೀರ್ಣದಂಶಃ' ಪದಕ್ಕೆ ಪುಡಿಯಾಗದ ಕವಚವುಳ್ಳವನು ಎಂದರ್ಥ. 'ವಿ' ಶಬ್ದವು 'ವಿ-ನಿಷೇಧೇ ಪೃಥಗ್ಭಾವೇ' ಎಂಬ ಕೋಶದ ಪ್ರಕಾರ ನಿಷೇಧಾರ್ಥಕವಾಗಿದೆ. ಹಾಗೆಯೇ 'ವಿಭಿದ್ಯಮಾನತ್ವಚಿ' (ಭಾ.1.9.41) ಎಂದರೆ ಹರಿದ ಚರ್ಮವುಳ್ಳವನು ಎಂದರ್ಥವಲ್ಲ. ವಿ ಶಬ್ದವು ನಿಷೇಧಾರ್ಥವಾಗಿ ಹರಿಯದ ಚರ್ಮವುಳ್ಳವನು ಎಂದು ಅರ್ಥ. 'ಕ್ಷತಜಪರಿಪ್ಲುತಃ' ಎಂದರೆ ಕೃಷ್ಣನ ಎರಡು ಪಾರ್ಶ್ವದಲ್ಲಿರುವ ಬಾಣಗಳಿಂದ ಗಾಯವಾದ ಭಟರ ದೇಹದ ರಕ್ತವು ಕೃಷ್ಣನ ದೇಹಕ್ಕೆ ಪುಟಿದು ಕೃಷ್ಣನ ದೇಹವು ರಕ್ತದಿಂದ ತೊಯ್ದಿದೆ ಎಂದೇ ಅರ್ಥ.

ಕೃಷ್ಣನ ದೇಹದಲ್ಲಿ ಛೇದ-ಭೇದಾದಿಗಳು ಇಲ್ಲ-

ಪಿಶಾಚಾವಿಷ್ಟದೇಹೇಽಪಿ ಪ್ರಾಯಶ್ಛೇದೋ ನ ದೃಶ್ಯತೇ ।
ಮನ್ತ್ರೇಣ ಕುಂಠಿತಾ ಧಾರಾ ನ ಭಿನತ್ತಿ ನರಾನ್ ಹಿ ಯತ್ ।
ಹರೇಶ್ಛೇದಃ ಶ್ರುತಿಪ್ರೋಕ್ತಸಾರ್ವಜ್ಞಚ್ಛೇದ ಏವ ತತ್ ॥ ೨೫ ॥

**ಅರ್ಥ**-ಪಿಶಾಚಾವಿಷ್ಟದೇಹೇ ಅಪಿ= ಪಿಶಾಚಿಯ ಆವೇಶಕ್ಕೆ ಒಳಗಾದ ದೇಹದಲ್ಲೂ, ಪ್ರಾಯಃ= ಬಹುಶಃ, ಛೇದಃ= ಛೇದವು, ನ ದೃಶ್ಯತೇ= ಕಾಣಲ್ಪಡುವುದಿಲ್ಲ, ಮಂತ್ರೇಣ= ಸ್ತಂಭನ ಮಂತ್ರದಿಂದ, ಕುಂಠಿತಾ= ತಡೆಯಲ್ಪಟ್ಟ (ಮೊಂಡಾಗಿಸಲ್ಪಟ್ಟ), ಧಾರಾ= ಖಡ್ಗದ ಅಲಗು, ಮನುಷ್ಯಾನ್= ಮನುಷ್ಯರನ್ನು, ನ ಭಿನತ್ತಿ= ಕತ್ತರಿಸುವುದಿಲ್ಲ, ತತ್= ಆದ್ದರಿಂದ, ಹರೇಃ= ಶ್ರೀಕೃಷ್ಣನ, ಛೇದಃ= ಛೇದ ಎಂದರೆ, ಶ್ರುತಿ ಪ್ರೋಕ್ತ ಸಾರ್ವಜ್ಞಚ್ಛೇದ ಏವ= ಶ್ರುತಿಯಲ್ಲಿ ಹೇಳಲ್ಪಟ್ಟಿರುವ ಸರ್ವಜ್ಞತ್ವದ ಛೇದವೇ.

**ಅನುವಾದ**- ಪಿಶಾಚಿಯ ಆವೇಶಕ್ಕೆ ಒಳಗಾದ ದೇಹವನ್ನು ಕತ್ತರಿಸಲು ಪ್ರಾಯಶಃ ಆಗುವುದಿಲ್ಲ, ಸ್ತಂಭನಮಂತ್ರದಿಂದ ಕುಂಠಿತವಾದ ಖಡ್ಗದ ಅಲಗು ದೇಹವನ್ನು ಕತ್ತರಿಸುವುದಿಲ್ಲ. ಇದು ಪ್ರಸಿದ್ಧ. ಅಲ್ಪಜ್ಞರಾದ ಪಿಶಾಚಿಗಳಿಗೆ ಅಥವಾ ಸ್ತಂಭನಮಂತ್ರವನ್ನು ಪ್ರಯೋಗಿಸುವವರಿಗೆ ಇಂತಹ ಶಕ್ತಿಯು ಇರುವಾಗ ಸರ್ವಜ್ಞನಾದ ಶ್ರೀಹರಿಗೆ ತನ್ನ ಛೇದವನ್ನು ತಡೆಯುವ ಜ್ಞಾನ-ಶಕ್ತಿಗಳು ಇಲ್ಲವೇ? ಇದ್ದೇ ಇದೆ. ಹೀಗಿದ್ದರೂ, ಶ್ರೀಕೃಷ್ಣನಿಗೆ ಛೇದವಾಗಿತ್ತು ಎಂದು ಹೇಳುವವರು ಅವನಿಗೆ ಸರ್ವಜ್ಞತ್ವ-ಸರ್ವಶಕ್ತಿಗಳು ಇಲ್ಲ ಎಂದೇ ಹೇಳಿದಂತೆ. ಈ ಹೇಳಿಕೆಯು ಶ್ರುತಿವಿರುದ್ಧ; ಶ್ರುತಿಗಳು ಶ್ರೀಹರಿಯನ್ನು ಸರ್ವಜ್ಞ-ಸರ್ವಶಕ್ತ ಎಂದು ಹೇಳುವುದರಿಂದ. ಆದ್ದರಿಂದ ಶ್ರೀಕೃಷ್ಣನಿಗೆ ಛೇದವಾಗಿತ್ತು ಎಂದು ಹೇಳುವವರು ಶ್ರುತಿಯು ಹೇಳುವ ಅವನ ಸರ್ವಜ್ಞತ್ವ-ಸರ್ವಶಕ್ತಿಗಳನ್ನು ಛೇದಿಸುತ್ತಿದ್ದಾರೆ ಎಂದು ಅರ್ಥ.

**ಭಾವವಿಲಾಸಿನೀ**— ಛೇದಭೇದಾದ್ಯಭಾವೇ ಯುಕ್ತ್ಯಂತರಮಪ್ಯಾಹ— **ಪಿಶಾಚೇತಿ** ॥ ಯದ್ ಯಸ್ಮಾನ್ಮನ್ತ್ರೇಣ ಸ್ತಂಭನಮನ್ತ್ರೇಣ । ಧಾರಾ ಅಸಿಧಾರಾ ನರಾನ್ ನ ಛಿನತ್ತಿ ಹಿ । ಹೀತ್ಯನೇನ ಲೋಕಪ್ರಸಿದ್ಧಿಂ ಸೂಚಯತಿ । ತತ್ ತಸ್ಮಾತ್ ಕಾರಣಾದ್ಧರೇಶ್ಛೇದಃ ಶಸ್ತ್ರಾದಿನಾ । ಶ್ರುತಿಪ್ರೋಕ್ತಂ ಯತ್ ಸರ್ವಜ್ಞಮ್, ತಸ್ಯ ಛೇದ ಏವ । ಅಲ್ಪಜ್ಞೋಽಪಿ ಪಿಶಾಚಾದಿಃ ಶಕ್ತಿವಿಶೇಷಾಭಿಜ್ಞತಯಾ ಮಂತ್ರವಿಶೇಷಾ- ಭಿಜ್ಞತಯಾ ವಾ ಪರಾಂಗಮಪಿ ಛೇತ್ತುಂ ನ ಮುಂಚತಿ । ಹರೇಸ್ತ್ವಾಂಗಸ್ಯೈವ ಛೇದೇ ಪಿಶಾಚಾದಿತೋಽಪ್ಯಕುಶಲತ್ವಪ್ರಸಂಗೇನ ಕಥಂ ನ ಸಾರ್ವಜ್ಞಚ್ಛೇದಃ ಇತಿ ಭಾವಃ ॥೨೫॥

ಬ್ರಹ್ಮಾಂಡಖರ್ಪರಚ್ಛೇದೇ ಯನ್ನಖಾಗ್ರಚ್ಛಿದಾಪಿ ನ ।
ಕೋ ಯುಕ್ತಿಮಾಂಸ್ತಸ್ಯ ವಿಷ್ಣೋಶ್ಛೇದಂ ಸಂಭಾವಯೇಚ್ಛರೈಃ ॥ ೨೬ ॥

**ಅರ್ಥ**-ಬ್ರಹ್ಮಾಂಡಖರ್ಪರಚ್ಛೇದೇ = ಬ್ರಹ್ಮಾಂಡಖರ್ಪರವನ್ನು ತುಂಡರಿಸಿದರೂ, ಯನ್ನಖಾಗ್ರಚ್ಛಿದಾ ಅಪಿ= ಯಾವ ಪರಮಾತ್ಮನ ಉಗುರಿನ ಛೇದವೂ, ನ = ಆಗಲಿಲ್ಲವೋ, ತಸ್ಯ ವಿಷ್ಣೋಃ = ಅಂತಹ ವಿಷ್ಣುವಿಗೆ. ಶರೈಃ = ಬಾಣಗಳಿಂದ, ಛೇದಂ = ಛೇದವನ್ನು ಯುಕ್ತಿಮಾನ್= ಯುಕ್ತಿಯನ್ನು ಬಲ್ಲ, ಕಃ= ಯಾರು ತಾನೇ, ಸಂಭಾವಯೇತ್? = ಊಹಿಸಿಯಾನು?

**ಭಾವವಿಲಾಸಿನೀ– ಯುಕ್ತ್ಯಂತರಂ ಚಾಹ– ಬ್ರಹ್ಮಾಂಡೇತಿ ।। ಯಸ್ಯ ಪರಮಾತ್ಮನಃ ನಖಾಗ್ರಸ್ಯ ಘನತರಬ್ರಹ್ಮಾಂಡೇ ಛಿದ್ರಂ ಕುರ್ವತೋ ನಖಾಗ್ರಸ್ಯ । ಗಚ್ಛತೋ ಹಿ ನರಸ್ಯ ಚ್ಛೇದಯೋಗ್ಯಸ್ಯ ಕ್ಷುದ್ರಶಿಲಾತಾಡನಾದಿನಾ ನಖಚ್ಛೇದೋ ದೃಶ್ಯತೇ । ಯಸ್ಯ ಹರೇರ್ನಖಾಗ್ರಂ ಬ್ರಹ್ಮಾಂಡಕಟಾಹಚ್ಛೇದನೇಽಪಿ ನಾಚ್ಛಿದ್ಯತ । ತಸ್ಯ ಹರೇರಂಗೇ ಛೇದಾದಿಕಮಸಂಭಾವಿತಮಿತಿ ಭಾವಃ ।। ೨೬ ।।**

**ವಿವರಣೆ-** ಸಾಮಾನ್ಯಮನುಷ್ಯನು ನಡೆಯುವಾಗ ಚಿಕ್ಕ ಕಲ್ಲು ಬಡಿದರೂ ಉಗುರು ತುಂಡಾಗುತ್ತದೆ. ಆದರೆ ತ್ರಿವಿಕ್ರಮಾವತಾರದಲ್ಲಿ ತ್ರಿವಿಕ್ರಮನ ಪಾದದ ಉಗುರು ಅತ್ಯಂತ ದೃಢವಾದ ಬ್ರಹ್ಮಾಂಡಖರ್ಪರವನ್ನೇ ತುಂಡರಿಸಿತು. ಉಗುರಿಗೆ ಏನೂ ಆಗಲಿಲ್ಲ. ಹೀಗಿರುವಾಗ ಅವನ ದೇಹ ಎಷ್ಟು ದೃಢವಾಗಿರಬೇಕು! ಆದ್ದರಿಂದ ಯಾವ ವಿಚಾರವಂತನೂ ಕೃಷ್ಣನ ದೇಹದ ಛೇದವನ್ನು ಊಹಿಸಲಾರ.

**ಪುನಃ ಎರಡು ಯುಕ್ತಿಯನ್ನು ಹೇಳುತ್ತಾರೆ -**

**ರೋಮಚ್ಛೇದೋ ಜಗಚ್ಛೇದೋ ಯದ್ರೋಮ್ಣಿ ನಿಖಿಲಂ ಜಗತ್ ।**
**ನಿಯಂತಾ ಯೋಽಖಿಲಚ್ಛೇತ್ತುಃ ಸ ಛೇದ್ಯಃ ಕೇನ ವಾ ವದ ।। ೨೭ ।।**

**ಅರ್ಥ**-ಯತಃ = ಯಾವ ಕಾರಣದಿಂದ, ರೋಮ್ಣಿ = ಭಗವಂತನ ರೋಮದಲ್ಲಿ ನಿಖಿಲಂ ಜಗತ್ = ಎಲ್ಲಾ ಜಗತ್ತು ಇದೆಯೋ, (ತತಃ = ಆದ್ದರಿಂದ) ರೋಮಚ್ಛೇದಃ = ಭಗವಂತನ ರೋಮಚ್ಛೇದವು, ಜಗಚ್ಛೇದಃ = ಜಗತ್ತಿನ ನಾಶವೇ, ಯಃ = ಯಾವ ಭಗವಂತನು, ಅಖಿಲಚ್ಛೇತ್ತುಃ = ಎಲ್ಲರನ್ನೂ ಸಂಹರಿಸುವ ರುದ್ರದೇವರಿಗೂ, ನಿಯಂತಾ = ನಿಯಾಮಕನೋ, ಸಃ = ಅವನು, ಕೇನ ವಾ = ಯಾರಿಂದ ತಾನೇ ಛೇದ್ಯಃ? = ಛೇದಿಸಲ್ಪಟ್ಟಾನು? ವದ = ಹೇಳು.

**ಅನುವಾದ-** ಭಗವಂತನ ರೋಮದಲ್ಲಿ ಎಲ್ಲ ಜಗತ್ತು ಅಡಗಿದೆ. ಆದ್ದರಿಂದ ಭಗವಂತನ ರೋಮಚ್ಛೇದವಾದರೆ ಜಗಚ್ಛೇದವೇ ಆಗುವುದು. ಜಗತ್ಸಂಹಾರಕರಾದ ರುದ್ರದೇವರಿಗೂ ಕೃಷ್ಣನು ನಿಯಾಮಕನಾಗಿರುವಾಗ ಆ ಕೃಷ್ಣನನ್ನು ಯಾರು ಛೇದಿಸಿಯಾರು?

**ಭಾವವಿಲಾಸಿನೀ**– ಪುನರಪಿ ಯುಕ್ತಿದ್ವಯಮಾಹ– **ರೋಮಚ್ಛೇದ ಇತಿ** ॥ ಯದ್ ಯಸ್ಮಾದ್ ರೋಮ್ಣಿ ಭಗವತೋ ರೋಮ್ಣಿ ನಿಖಿಲಂ ಜಗದಸ್ತಿ, ತತ್ ತಸ್ಮಾದ್ರೋಮಚ್ಛೇದಃ ಕೃಷ್ಣಸ್ಯ ರೋಮಚ್ಛೇದೋ ಜಗಚ್ಛೇದ ಏವ । ಏವಂಚ ರೋಮ್ಣಾಂ ಛೇದೋಽಪಿ ನ ಘಟತೇ, ಕಿಮು ಅಂಗಸ್ಯೇತಿ ಭಾವಃ। ಯಃ ಕೃಷ್ಣಃ ಅಖಿಲಸ್ಯ ಸಮಸ್ತಸ್ಯ ಛೇತ್ತುಃ ಛೇದನಕರ್ತುಃ ಪುರುಷಸ್ಯ ನಿಯಂತಾ ನಿಯಾಮಕಃ । ಯಂ ನಿಯಾಮಕಂ ವಿನಾ '**ನ ಋತೇ ತ್ವತ್** ಕ್ರಿಯತೇ ಕಿಂಚನಾರೇ' ಇತಿ ಶ್ರುತ್ಯಾ ಕೋಽಪಿ ಕಿಮಪಿ ಕರ್ತುಂ ನ ಶಕ್ನೋತೀತಿ ಯಾವತ್ । ಸ ಕೃಷ್ಣಃ ಕೇನ ಪುರುಷೇಣ ಚ್ಛೇದ್ಯಃ? ನಹಿ ಕೋಽಪಿ ಪ್ರೇಕ್ಷಾವಾನ್ ಸ್ವಾಂಗಂ ಭಿನ್ದೀತಿ ಪರಂ ಪ್ರೇರಯೇದಿತಿ ಭಾವಃ ॥ ೨೭ ॥

**ವಿವರಣೆ– ನ ಋತೇ ತ್ವತ್ ಕ್ರಿಯತೇ** ಎಂಬ ಮಂತ್ರದಂತೆ ಶ್ರೀಕೃಷ್ಣನ ಪ್ರೇರಣೆಯಿಲ್ಲದೇ ಯಾರು ಏನೂ ಮಾಡಲಾರರು. ಆದ್ದರಿಂದ ಅವನ ಅಂಗವನ್ನು ಯಾರಾದರೂ ಛೇದಿಸಬೇಕೆಂದರೆ ಅದಕ್ಕೆ ಅವನ ಪ್ರೇರಣೆಯು ಬೇಕು. ವಿವೇಕಿಯಾದ ಪರಮಾತ್ಮನು ತನ್ನ ಅಂಗವನ್ನು ಛೇದಿಸಲು ತಾನೇ ಪ್ರೇರಿಸುವನೇ? ಇಲ್ಲ. ಆದ್ದರಿಂದ ಭಗವಂತನ ಅಂಗದ ಛೇದವೂ ಯಾರಿಂದಲೂ ಸಾಧ್ಯವಿಲ್ಲ.

ಸರ್ವಸಂಹಾರಕನಾದ ರುದ್ರನಿಗೂ ಸಂಹಾರಕನಾದ ಕೃಷ್ಣನನ್ನು ಸಂಹರಿಸಲು ಯಾರಿಗೂ ಸಾಧ್ಯವಿಲ್ಲ.

ಇನ್ನೊಂದು ಯುಕ್ತಿಯನ್ನು ಹೇಳುತ್ತಾರೆ -

ಸ್ವಾಹಾರಸ್ಯ ಹಿ ವಿಚ್ಛೇದೇ ದಕ್ಷಂ ಪಶುಪತೇರಪಿ ।
ಅಚ್ಛೇದ್ಯಮಕರೋದ್ ಯಸ್ತು ತಸ್ಯ ಛೇದಂ ಕರೋತಿ ಕಃ ॥ ೨೮ ॥

**ಅರ್ಥ**- ಹಿ = ಯಾವಕಾರಣದಿಂದ, ಸ್ವಾಹಾರಸ್ಯ = ಯಜ್ಞದಲ್ಲಿ ಆಹುತಿರೂಪವಾದ ತನ್ನ ಆಹಾರಕ್ಕೆ, ವಿಚ್ಛೇದೇ = ವಿಘ್ನವು ಬಂದಾಗ, ದಕ್ಷಂ = ದಕ್ಷನನ್ನು, ಪಶುಪತೇರಪಿ = ರುದ್ರದೇವರಿಗೂ, ಅಚ್ಛೇದ್ಯಂ = ಛೇದಿಸಲಾಗದಂತೆ, ಅಕರೋತ್ = ಮಾಡಿದನೋ, ಸಃ = ಅಂತಹ ಭಗವಂತನು, ಕೇನ = ಯಾರಿಂದ, ಛೇದ್ಯಃ? = ಛೇದಿಸಲ್ಪಟ್ಟಾನು? ವದ = ಹೇಳು.

**ಅನುವಾದ**- ದಕ್ಷಯಜ್ಞಪ್ರಸಂಗದಲ್ಲಿ ರುದ್ರದೇವರು ದಕ್ಷನನ್ನು ಸಂಹರಿಸಲು ಪ್ರಯತ್ನಿಸಿದರು. ದಕ್ಷನು ಭಗವಂತನನ್ನು ಕುರಿತು ಮಾಡುವ ಯಾಗದಲ್ಲಿ ಯಜಮಾನನಾಗಿದ್ದನು. ಅವನ ಸಂಹಾರವೇ ಆದರೆ ತನಗೆ ಯಜ್ಞದಲ್ಲಿ ಆಹುತಿಯು ಸಿಗುವುದಿಲ್ಲವೆಂದು ಆಲೋಚಿಸಿ ಭಗವಂತನು ದಕ್ಷನ ಸಂಹಾರವಾಗದಿರಲಿ ಎಂದು ಸಂಕಲ್ಪಿಸಿದನು. ಆದ್ದರಿಂದ, ಜಗತ್ಸಂಹಾರಕರಾದ ರುದ್ರದೇವರಿಗೂ ದಕ್ಷನನ್ನು ಸಂಹರಿಸಲು ಸಾಧ್ಯವಾಗಲಿಲ್ಲ. ಇಂತಹ ಭಗವಂತನ ಛೇದವನ್ನು ಯಾರು ಮಾಡಿಯಾರು?

**ಭಾವವಿಲಾಸಿನೀ–** ಯುಕ್ತ್ಯಂತರಂ ಚಾಹ– **ಸ್ವಾಹಾರಸ್ಯೇತಿ** ॥ ಹಿ ಯಸ್ಮಾತ್ ಸ್ವಾಹಾರಸ್ಯ ಯಾಜ್ಞೀಯಪಶ್ವಂಗಸ್ಥವಪಾದ್ಯಾಹಾರಸ್ಯ ವಿಚ್ಛೇದೇ ವಿಘ್ನ ಇತಿ ಯಾವತ್ । ಯಃ ಪರಮಾತ್ಮಾ ದಕ್ಷಪ್ರಜಾಪತಿಂ ಪಶುಪತೇರ್ಮಹಾದೇವಸ್ಯಾಪಿ ಅಚ್ಛೇದ್ಯಂ ಭೇದಾಯೋಗ್ಯಮ್ । ತಸ್ಯ ಪರಮಾತ್ಮನಃ । ಪಶುಸಂಜ್ಞಪನಾತ್ಪೂರ್ವಂ ರುದ್ರೇಣ ದಕ್ಷಶಿರಶ್ಛೇದೇ ಕೃತೇ ಮಮಾಹುತೇರೇವ ಚ್ಛೇದೋ ಭವಿಷ್ಯತೀತಿ ಧಿಯಾ ಏನಂ ಮಾ ಭಿನ್ಧೀತಿ ಭಗವತ್ಸಂಕಲ್ಪಮಾತ್ರೇಣೈವ ಶಿವೋಽಪಿ ತಂ ಭೇತ್ತುಮಶಕ್ತೋಽಭೂತ್ ಕಿಲ । ಏವಂ ಚಾಪ್ರಯತ್ನೇನೈವ ರುದ್ರಸ್ಯಾಪಿ ಶಕ್ತಿಸ್ತಂಭಕಂ ತಂ ಕಶ್ಛೇತ್ತುಂ ಶಕ್ತ ಇತಿ ಭಾವಃ ॥ ೨೮॥

ಈ ವಿಷಯದಲ್ಲಿ ಭಾಗವತದ ಮೂರು ಶ್ಲೋಕಗಳನ್ನು ಉದಾಹರಿಸುತ್ತಾರೆ -

ಆಕ್ರಮ್ಯೋರಸಿ ದಕ್ಷಸ್ಯ ಶಿತಧಾರೇಣ ಹೇತಿನಾ ।
ಛಿಂದನ್ನಪಿ ತದುದ್ಧರ್ತುಂ ನಾಶಕ್ನೋತ್ ತ್ರ್ಯಂಬಕಸ್ತದಾ ॥ ೨೯ ॥

ಶಸ್ತ್ರೈರಸ್ತ್ರಾನ್ವಿತೈರೇನಮನಿರ್ಭಿನ್ನತ್ವಚಂ ಹರಃ ।
ವಿಸ್ಮಯಂ ಪರಮಾಪನ್ನೋ ದಧ್ಯೌ ಪಶುಪತಿಶ್ಚಿರಮ್ ॥ ೩೦ ॥

ದೃಷ್ಟ್ವಾ ಸಂಜ್ಞಪನೇ ಯೋಗಂ ಪಶೂನಾಂ ಸ ಪತಿರ್ಮಖೇ ।
ಯಜಮಾನಪಶೋಸ್ತಸ್ಯ ಕಾಯಾತ್ತೇನಾಹರಚ್ಛಿರಃ ॥ ೩೧ ॥

ಇತಿ ಭಾಗವತೇ ಪ್ರೋಕ್ತಮತಶ್ಚಿತ್ರಂ ಕಿಮಚ್ಯುತೇ ॥ ೩೨ ॥

**ಅರ್ಥ-**(ಯದಾ = ಯಾವಾಗ) ತ್ರ್ಯಂಬಕಃ = ಮೂರುಕಣ್ಣುಳ್ಳ ರುದ್ರದೇವರು, ದಕ್ಷಸ್ಯ = ದಕ್ಷನ, ಉರಸಿ = ಎದೆಯಲ್ಲಿ, ಆಕ್ರಮ್ಯ = ಆಕ್ರಮಿಸಿ, ಶಿತಧಾರೇಣ = ಹರಿತವಾದ ಅಲಗುಳ್ಳ, ಹೇತಿನಾ = ಖಡ್ಗದಿಂದ, ಛಿಂದನ್ ಅಪಿ = ಛೇದಿಸಿದರೂ, ತತ್ = ದಕ್ಷನ ತಲೆಯನ್ನು, ಉದ್ಧರ್ತುಂ = ಕತ್ತರಿಸಲು, ನ ಅಶಕ್ನೋತ್ = ಸಮರ್ಥನಾಗಲಿಲ್ಲವೋ, ತದಾ = ಆಗ, ಅಸ್ತ್ರಾನ್ವಿತೈಃ = ಮಂತ್ರಗಳಿಂದ ಅಭಿಮಂತ್ರಿತವಾದ, ಶಸ್ತ್ರೈಃ= ಆಯುಧಗಳಿಂದ, ಏನಂ = ದಕ್ಷನನ್ನು, ಅನಿರ್ಭಿನ್ನತ್ವಚಂ = ಸೀಳದ ಚರ್ಮವುಳ್ಳವನನ್ನಾಗಿ, ದೃಷ್ಟ್ವಾ = ನೋಡಿ, ಪರಂ = ಬಹಳವಾದ, ವಿಸ್ಮಯಂ = ಆಶ್ಚರ್ಯವನ್ನು, ಆಪನ್ನಃ = ಹೊಂದಿದವರಾಗಿ, ಪಶುಪತಿಃ = ರುದ್ರದೇವರು, ಚಿರಂ = ಬಹಳಕಾಲದವರೆಗೆ, ದಧ್ಯೌ = ಧ್ಯಾನಿಸಿದರು. ಪಶೂನಾಂ ಪತಿಃ = ಪಶುಗಳಿಗೆ ಪತಿಯಾದ, ಸಃ = ರುದ್ರದೇವರು, ಸಂಜ್ಞಪನೇ = ಯಜ್ಞಪಶುವಿನ ಬಲಿವಿಧಿಯಲ್ಲಿ(ದಕ್ಷಸಂಹಾರದ), ಯೋಗಂ = ಉಪಾಯವನ್ನು ದೃಷ್ಟ್ವಾ = ಆಲೋಚಿಸಿ, ಮಖೇ = ಯಜ್ಞದಲ್ಲಿ, ಯಜಮಾನಪಶೋಃ= ಯಜಮಾನನಾದ ದಕ್ಷನೆಂಬ ಪಶುವಿನ, ಶಿರಃ = ಶಿರಸ್ಸನ್ನು ಕಾಯಾತ್ = ದೇಹದಿಂದ, ತೇನ = ಆ ಆಯುಧದಿಂದ, ಆಹರತ್ = ತುಂಡರಿಸಿದನು. ಇತಿ = ಈ ರೀತಿಯಲ್ಲಿ, ಭಾಗವತೇ = ಭಾಗವತದಲ್ಲಿ(೪.೬.೨೨, ೨೩,

೨೪) ಪ್ರೋಕ್ತಂ = ಹೇಳಲ್ಪಟ್ಟಿದೆ. ಅತಃ = ಆದ್ದರಿಂದ, ಅಚ್ಯುತೇ = ಯಾವವಿಧದಚ್ಯುತಿಯೂ ಇಲ್ಲದ ಭಗವಂತನ ವಿಷಯದಲ್ಲಿ ಆಶ್ಚರ್ಯಂ ಕಿಮ್? = ಯಾವುದು ಆಶ್ಚರ್ಯ?

**ಅನುವಾದ-** ಹಿಂದೆ ಹೇಳಿದ ವಿಷಯದಲ್ಲಿ ಭಾಗವತದಲ್ಲಿ ಒಂದು ಕಥೆ ಹೀಗಿದೆ. 'ರುದ್ರದೇವರು ದಕ್ಷನನ್ನು ಸಂಹರಿಸಲು ದಕ್ಷನ ಎದೆಯನ್ನು ಆಕ್ರಮಿಸಿ ಕುಳಿತು ಚೂಪಾದ ಅಲಗುಳ್ಳ ಆಯುಧದಿಂದ ಎಷ್ಟು ಪ್ರಯತ್ನಪಟ್ಟರೂ ಸಾಧ್ಯವಾಗಲಿಲ್ಲ. ಮಂತ್ರಿತವಾದ ಶಸ್ತ್ರಗಳನ್ನು ಪ್ರಯೋಗಿಸಿದರೂ ದಕ್ಷನ ಚರ್ಮವನ್ನು ಸೀಳಲು ಸಾಧ್ಯವಾಗಲಿಲ್ಲ. ರುದ್ರದೇವರಿಗೆ ಪರಮಾಶ್ಚರ್ಯವಾಯಿತು. ಬಹಳ ಕಾಲ ಭಗವಂತನನ್ನು ಧ್ಯಾನಿಸಿದರು. ಕೊನೆಗೆ ತಾನು ಮಾಡುವ ಯಾಗದಲ್ಲಿ ದಕ್ಷನನ್ನೇ ಆಹುತಿಯನ್ನಾಗಿ ಕೊಟ್ಟರೆ ದಕ್ಷಸಂಹಾರವು ಸಾಧ್ಯವಾದೀತು ಎಂಬ ಉಪಾಯವನ್ನು ಕಂಡುಕೊಂಡರು. ಆಗ ರುದ್ರದೇವರು ದಕ್ಷನನ್ನು ಸಂಹರಿಸಲು ಸಾಧ್ಯವಾಯಿತು.' ಹೀಗೆ ಜಗತ್ಸಂಹಾರಕರಾದ ಪಶುಗಳಿಗೆ ಅಧಿಪತಿಗಳಾದ ರುದ್ರದೇವರಿಗೇ ಭಗವಂತನ ಸಹಾಯವಿಲ್ಲದೆ ದಕ್ಷನನ್ನು ಸಂಹರಿಸಲು ಸಾಧ್ಯವಾಗಲಿಲ್ಲವೆಂದ ಮೇಲೆ ಭಗವಂತನನ್ನೇ ಭಿನ್ನ-ಭಿನ್ನನನ್ನಾಗಿ ಮಾಡಲು ಯಾರಿಗೆ ಸಾಧ್ಯವಾದೀತು? ಭಗವಂತನು ಅಚ್ಯುತ. ಅಂದರೆ ಯಾವ ಚ್ಯುತಿಯೂ ಇಲ್ಲದವನು. ಅವನ ವಿಷಯದಲ್ಲಿ ಏನೂ ಆಶ್ಚರ್ಯವಲ್ಲ. ಅವನು ಸಂಕಲ್ಪಿಸಿದಂತೆಯೇ ಆಗುತ್ತದೆ. ಅದಕ್ಕೆ ವಿರುದ್ಧವಾಗಿ ಏನೂ ನಡೆಯಲಾರದು.

**ಭಾವವಿಲಾಸಿನೀ–** ಅಸ್ಮಿನ್ನರ್ಥೇ ಪ್ರಮಾಣತಯಾ ಭಾಗವತಸ್ಥಶ್ಲೋಕತ್ರಯಮುದಾಹರತಿ– **ಆಕ್ರಮ್ಯೇತ್ಯಾದಿನಾ** ॥ ತಚ್ಛಿರಃ ಉದ್ಧರ್ತುಂ ಕಾಯಾದಪಹರ್ತುಂ ತದಾ ತಸ್ಮಿನ್ ಸಮಯೇ । ಏನಂ ದಕ್ಷಮ್ । ಪರಂ ವಿಸ್ಮಯಮಿತಿ ಸಂಬಂಧಃ । ಮಖೇ ಸಂಜ್ಞಪನೇ ಯಾಜ್ಞೀಯಪಶುತ್ವೇನ ಹಿಂಸಾಯಾಂ ಯೋಗಮುಪಾಯಂ ದೃಷ್ಟ್ವಾ ದಕ್ಷಮೇವ ಯಜ್ಞಪಶುಂ ಕೃತ್ವಾ ಹನ್ಮಿ ತಚ್ಛಿರಸಾ ಹರೇರಾಹುತಿಂ ಚ ದಾಸ್ಯಾಮಿ ತದಾ ಸುತುಷ್ಟೋ ಮಚ್ಛಕ್ತಿಂ ನ ಸ್ತಂಭಯೇದಿತ್ಯುಪಾಯಂ ದೃಷ್ಟ್ವೇತಿ ಯಾವತ್ । ತೇನ ಯೋಗೇನ । ಅತಃ ಏತಾದೃಶಶಕ್ತಿಮತ್ತ್ವಾದಚ್ಯುತೇ ಕಿಂ ಚಿತ್ರಮ್? ನ ಕಿಂಚಿದಾಶ್ಚರ್ಯಮಿತಿ ಭಾವಃ ॥ ೨೯–೩೨ ॥

**ವಿವರಣೆ–** ಈ ಯಜ್ಞದಲ್ಲಿ 'ದಕ್ಷನನ್ನೇ ಆಹುತಿಯಾಗಿ ಶ್ರೀಹರಿಗೆ ಅರ್ಪಿಸುತ್ತೇನೆ. ಇದರಿಂದ ಸಂತುಷ್ಟನಾದ ಶ್ರೀಹರಿಯು ನನ್ನ ಶಕ್ತಿಗೆ ತಡೆಯನ್ನು ಉಂಟುಮಾಡುವುದಿಲ್ಲ'. ಹೀಗೆ ಆಲೋಚಿಸಿದ ರುದ್ರದೇವರು ದಕ್ಷನನ್ನು ಆಹುತಿಯಾಗಿ ಅರ್ಪಿಸಿದರು.

ಭಗವಂತನಿಗೆ ಭೇದ-ಭೇದಾದಿಗಳಿಲ್ಲ ಎಂಬ ವಿಷಯದಲ್ಲಿ ಬೇರೆ ಯುಕ್ತಿಯನ್ನು ಹೇಳುತ್ತಾರೆ -

**ಯತ್ಕೃಪಾಲೇಶತಸ್ತ್ರಾತ್ರಂ ಪ್ರಹ್ಲಾದಂ ಕಿಲ ರಕ್ಷಸಾಮ್ ।**
**ಚಿಚ್ಛಿದುರ್ನಾಸ್ತ್ರಶಸ್ತ್ರಾಣಿ ಕಶ್ಛಿಂದ್ಯಾತ್ ತಂ ಮಹಾಪ್ರಭುಮ್ ॥ ೩೩ ॥**

**ಸಂಧ್ಯರ್ಥಂ ಹಸ್ತಿನಪುರಂ ಪ್ರವಿಷ್ಟಂ ಕಿಲ ಕೌರವಾಃ ।**
**ನ ಬದ್ಧುಮಪಿ ಯಂ ಶೇಕುಃ ಕಶ್ಛಿಂದ್ಯಾತ್ ತಂ ಮಹಾಪ್ರಭುಮ್ ॥ ೩೪ ॥**

**ಅರ್ಥ-**ಯತ್ಕೃಪಾಲೇಶತಃ = ಯಾವ ಭಗವಂತನ ಅಲ್ಪಕೃಪೆಯಿಂದ, ತ್ರಾತಂ = ರಕ್ಷಿಸಲ್ಪಟ್ಟ ಪ್ರಹ್ಲಾದಂ = ಪ್ರಹ್ಲಾದನನ್ನು, ರಕ್ಷಸಾಂ = ರಾಕ್ಷಸರ, ಅಸ್ತ್ರಶಸ್ತ್ರಾಣಿ = ಅಸ್ತ್ರಶಸ್ತ್ರಗಳು, ನ ಚಿಚ್ಛಿದುಃ = ತುಂಡರಿಸಲಿಲ್ಲವೋ, ಕಿಲ = ಇದು ಲೋಕಪ್ರಸಿದ್ಧ, ತಂ = ಅಂತಹ, ಮಹಾಪ್ರಭುಂ = ಮಹಾಸಮರ್ಥನಾದ ಶ್ರೀಕೃಷ್ಣನನ್ನು, ಕಃ = ಯಾರು, ಛಿಂದ್ಯಾತ್? = ಛೇದಿಸಿಯಾನು? ಸಂಧ್ಯರ್ಥಂ = ಕೌರವ-ಪಾಂಡವರ ಸಂಧಿಗೋಸ್ಕರ, ಹಸ್ತಿನಪುರಂ = ಹಸ್ತಿನಾವತಿಯನ್ನು, ಪ್ರವಿಷ್ಟಂ = ಪ್ರವೇಶಿಸಿದ ಶ್ರೀಕೃಷ್ಣನನ್ನು, ಕೌರವಾಃ = ಕೌರವರು, ಬದ್ಧುಮ್ ಅಪಿ = ಬಂಧಿಸಲೂ ಕೂಡ, ನ ಶೇಕುಃ = ಸಮರ್ಥರಾಗಲಿಲ್ಲ, ಕಿಲ = ಇದೂ ಲೋಕಪ್ರಸಿದ್ಧ, ತಂ ಮಹಾಪ್ರಭುಂ = ಅಂತಹ ಮಹಾಸಮರ್ಥನಾದ ಆ ಶ್ರೀಕೃಷ್ಣನನ್ನು, ಕಃ ಛಿಂದ್ಯಾತ್? = ಯಾರು ಛೇದಿಸಿಯಾರು?

**ಅನುವಾದ-** ಬ್ರಹ್ಮಾದಿಗಳ ಮೇಲೆ ಭಗವಂತನಿಗೆ ಇರುವ ಕೃಪೆಗಿಂತ ಪ್ರಹ್ಲಾದನ ಮೇಲೆ ಅವನ ಕೃಪೆ ಅತ್ಯಲ್ಪ. ಆದರೂ ಅವನನ್ನು ಹಿರಣ್ಯಕಶಿಪುವಿನ ಭಟರಾದ ರಾಕ್ಷಸರ ಶಸ್ತ್ರಗಳು ಏನೂ ಮಾಡಲೂ ಸಮರ್ಥವಾಗಲಿಲ್ಲ. ಇದು ಸರ್ವಜನ ಪ್ರಸಿದ್ಧವಾದ ವಿಷಯ. ಅಂತಹ ಶ್ರೀಕೃಷ್ಣನನ್ನು ಭೀಷ್ಮಾದಿಗಳ ಶಸ್ತ್ರಾಸ್ತ್ರಗಳು ಏನು ಮಾಡಿಯಾವು?

ಕೃಷ್ಣನು ಸಂಧಿಗಾಗಿ ಹಸ್ತಿನಾವತಿಗೆ ಹೋದನು. ಅವನನ್ನು ಬಂಧಿಸಲು ಆಲೋಚಿಸಿದ್ದ ದುರ್ಯೋಧನಾದಿಗಳಿಗೆ ಅವನನ್ನು ಬಂಧಿಸಲು ಸಾಧ್ಯವಾಗಲಿಲ್ಲ. ಇದೂ ಕೂಡ ಸರ್ವಜನಪ್ರಸಿದ್ಧವಾದ ವಿಷಯ. ಅಂತಹ ಕೃಷ್ಣನನ್ನು ಯಾರು ಛೇದಿಸಿಯಾರು?

**ಭಾವವಿಲಾಸಿನೀ–**ಯುಕ್ತ್ಯಂತರಂ ಚಾಹ–ಯತ್ಕೃಪೇತಿ ॥ ರಕ್ಷಸಾಮಸ್ತ್ರಶಸ್ತ್ರಾಣೀತಿ ಸಂಬಂಧಃ । ಕಿಲೇತ್ಯನೇನ ಸರ್ವಜನಪ್ರಸಿದ್ಧಿಂ ದ್ಯೋತಯತಿ ॥ ೩೩ ॥

ಪುನರಪಿ ಯುಕ್ತ್ಯಂತರಮಾಹ– **ಸಂಧ್ಯರ್ಥಮಿತಿ** ॥ ಯಂ ವಿಶ್ವರೂಪಿಣಂ ಪರಮಾತ್ಮಾನಂ ಬದ್ಧುಮಪಿ ನ ಶೇಕುಃ। ಪುರಸ್ತಾತ್ ಪಾರ್ಶ್ವತಃ ಪೃಷ್ಠತಃ ಅಂತರ್ಬಹಿಶ್ಚ ತತ್ರಸರ್ವತ್ರ ಪರಿಪೂರ್ಣತ್ವೇನ ಶಸ್ತ್ರಾಂತರಪಿ ವಿದ್ಯಮಾನತ್ವಾದಿತಿ ಭಾವಃ ॥ ೩೪ ॥

ಹಿಂದೆ ಹೇಳಿದ ಅರ್ಥದಲ್ಲಿ ಬೇರೊಂದು ಯುಕ್ತಿಯನ್ನು ಹೇಳುತ್ತಿದ್ದಾರೆ -

**ಅತೋಽಜ್ಞಜನಮೋಹಾಯ ನಟವದ್ದರ್ಶಯೇತ್ ಪರಮ್ ।**
**ಸುಧಾದೃಷ್ಟ್ಯಾ ಮೃತಾಶೇಷಪ್ಲವಸ್ಯೈನ್ಯೋಜ್ಜೀವನೈಕದಃ ॥ ೩೫ ॥**

**ನಟೋ ನಾಟ್ಯಕೃತೇ ನಾರೀ ನಾರ್ಯೇವಾಜ್ಞಸ್ಯ ಕಿಂ ದೃಶಾ ॥ ೩೬ ॥**

**ಅರ್ಥ**-ಅತಃ= ಆದ್ದರಿಂದ= ಶ್ರೀಹರಿಗೆ ಜನನ ಮರಣಗಳು ಪ್ರಮಾಣಬಾಧಿತವಾದುದರಿಂದ, ಸುಧಾದೃಷ್ಟ್ಯಾ= ಅಮೃತಮಯವಾದ ನೋಟದಿಂದ, ಮೃತ= ಸತ್ತುಹೋಗಿದ್ದ, ಅಶೇಷ ಸ್ವಸೈನ್ಯ= ಸಮಗ್ರ ತನ್ನ ಸೈನ್ಯಕ್ಕೆ, ಉಜ್ಜೀವನೈಕದಃ= ಮುಖ್ಯವಾದ ಜೀವನವನ್ನು ಕೊಟ್ಟ(ಶ್ರೀಹರಿಯು), ಅಜ್ಞಜನಮೋಹಾಯ= ಪಾಮರರಿಗೆ ಮೋಹವುಂಟು ಮಾಡುವುದಕ್ಕಾಗಿ, ನಟವತ್= ನಟನಂತೆ, ಪರಂ= ತನ್ನದಲ್ಲದ ದೋಷಗಳನ್ನು, ದರ್ಶಯೇತ್= ತೋರಿಸುವನು, ನಾಟ್ಯಕೃತೇ= ನಟನೆಗಾಗಿ, ನಾರೀ= ಮಹಿಳೆಯಾದ, ನಟಃ= ನಟನು, ಅಜ್ಞಸ್ಯ= ಪಾಮರನ ದೃಷ್ಟಿಯಿಂದ, ನಾರೀ ಏವ ಕಿಮ್= ನಿಜವಾಗಿಯೂ ಮಹಿಳೆಯೇ?

**ಅನುವಾದ**- ವಾಸುದೇವಸಹಸ್ರನಾಮದಲ್ಲಿ ಶ್ರೀರಾಮನನ್ನು 'ಸುಧಾದೃಷ್ಟ್ಯಾ ಮೃತಾಶೇಷಸ್ವಸೈನ್ಯೋಜ್ಜೀವನೈಕದಃ' ಎಂದು ಒಂದು ನಾಮವು ಇದೆ. ಶ್ರೀರಾಮನು ತನ್ನ ಅಮೃತಮಯವಾದ ದರ್ಶನಮಾತ್ರದಿಂದ ಮೃತರಾದ ಕಪಿಗಳನ್ನು ಬದುಕಿಸಿದನು ಎಂದು ಅದರ ಅರ್ಥ. ಇಂತಹ ಸಮರ್ಥನಾದವನಿಗೆ ಜನನಮರಣಗಳು ಹೇಗೆ ಯುಕ್ತವಾಗುವವು? ಆದ್ದರಿಂದ ಅಜ್ಞಜನಮೋಹಕ್ಕಾಗಿ ಹಾಗೆ ಕೇವಲ ತೋರಿಸುತ್ತಾನಷ್ಟೇ ಅವು ಸತ್ಯವಲ್ಲ. ನಾಟಕದಲ್ಲಿ ಸ್ತ್ರೀವೇಷಧಾರಿಯಾದ ಪುರುಷನನ್ನು ಪಾಮರರು ಸ್ತ್ರೀ ಎಂದು ತಿಳಿದ ಮಾತ್ರಕ್ಕೆ ಅವನು ಸ್ತ್ರೀಯೇ ಆಗಿಬಿಡುತ್ತಾನೆಯೇ?

**ಭಾವವಿಲಾಸಿನೀ**– ಉಕ್ತಾರ್ಥೇ ಯುಕ್ತ್ಯಂತರಂ ಪ್ರಮಾಣವಚನೇನ ಸೂಚಯನ್ನುಪಸಂಹರತಿ– **ಅತ ಇತಿ** ॥ ಅತಃ ಪೂರ್ವೋಕ್ತರೀತ್ಯಾ ಯುಕ್ತಿಬಾಧಿತತ್ವಾತ್ । ನಟವದ್ಯೆಂದ್ರಜಾಲಿಕವತ್ । ದರ್ಶಯೇಚ್ಛೇದಭೇದಾದಿಕಮ್ । ಸುಧಾದೃಷ್ಟ್ಯಾ ಮೃತಾನಿ ಅಶೇಷಸ್ವಸೈನ್ಯಾನಿ ಕಪಿಕಟಕಾನಿ ತೇಷಾಮುಜ್ಜೀವನೈಕದಃ ಕೇವಲೋಜ್ಜೀವನಪ್ರದಃ । ಇದಂ ವಾಸುದೇವಸಹಸ್ರನಾಮ್ನಿ ರಾಮಾವತಾರಪ್ರಸ್ತಾವೇ ವಿದ್ಯಮಾನಮ್ । ರಾಮದೃಷ್ಟಿಮಾತ್ರೇಣ ಮೃತಸಂಜೀವನಸಮರ್ಥಸ್ಯ ಕಥಂ ಛೇದಭೇದಾದಿಕಂ ಘಟೇತ? ಇತಿ ಯುಕ್ತಿಂ ಸೂಚಯಿತುಮೇತೇನೈವ ನಾಮ್ನಾ ವಿಶಿಷ್ಯ ನಿರ್ದೇಶಃ ಕೃತ ಇತಿ ॥ ೩೫ ॥

ನಟವದಿತ್ಯುಕ್ತಂ ವಿವೇಚಯತಿ– **ನಟ ಇತಿ** ॥ ನಾಟ್ಯಕೃತೇ ನರ್ತನಾರ್ಥಂ ಸ್ತ್ರೀವೇಷಧಾರೀ ಅಜ್ಞಸ್ಯ ದೃಶಾ ನಾರ್ಯೇವ ಕಿಮ್? ನೇತಿ ಸಂಬಂಧಃ । ತಥಾ ಹರಿರಪೀತಿ ಭಾವಃ ॥ ೩೬ ॥

**ವಿವರಣೆ**– ತನ್ನ ಅಮೃತಮಯವಾದ ನೋಟಮಾತ್ರದಿಂದ ಸತ್ತವರನ್ನು ಬದುಕಿಸುವ ಭಗವಂತನಿಗೆ ಜನನಮರಣಗಳು ಸರ್ವಥಾ ಯುಕ್ತವಲ್ಲ.

ಇಷ್ಟರವರೆಗೆ ಪ್ರಬಲಪ್ರತ್ಯಕ್ಷವಿರೋಧದಿಂದ ಕೃಷ್ಣನಿಗೆ ಹೊಡೆತ ಗಾಯ ಮೊದಲಾದವುಗಳ ದರ್ಶನವು ಭ್ರಾಂತಿಯೆಂದು ಹೇಳಲಾಯಿತು. ಇದನ್ನೇ ಉಪಜೀವ್ಯದ ವಿರೋಧವನ್ನು ದೃಷ್ಟಾಂತಪೂರ್ವಕವಾಗಿ ತೋರಿಸಿ ಪ್ರತಿಪಾದಿಸುತ್ತಾರೆ-

ಗಂಧಸ್ಯ ಜ್ಞಾಪನೇ ಚಕ್ಷುರ್ಘ್ರಾಣಾನುಸರಣಂ ಚರೇತ್ ।
ಉಪನೀತೋ ಯತೋ ಗಂಧಶ್ಚಕ್ಷುಷಾಪಿ ಪ್ರಕಾಶ್ಯತೇ ॥ ೩೭ ॥

ಶ್ರೌತಾರ್ಥಜ್ಞಾಪನೇ ಮಾನಾನ್ಯುಪಜೀವಂತಿ ಯಚ್ಛ್ರುತಿಮ್ ।
ಅತಃ ಶ್ರುತ್ಯೇಕಗಮ್ಯೇಽರ್ಥೇ ಶ್ರುತಿರೇವ ಬಲೀಯಸೀ ॥ ೩೮ ॥

**ಅರ್ಥ-** ಚಕ್ಷುಃ = ಕಣ್ಣು ಗಂಧಸ್ಯ, ಜ್ಞಾಪನೇ = ಗಂಧವನ್ನು ತಿಳಿಸಲು, ಘ್ರಾಣಾನುಸರಣಂ = ಘ್ರಾಣೇಂದ್ರಿಯದ ಅನುಸರಣೆಯನ್ನು, ಚರೇತ್ = ಮಾಡುತ್ತದೆ. ಯತಃ = ಏಕೆಂದರೆ (ಘ್ರಾಣೇಂದ್ರಿಯದಿಂದ), ಉಪನೀತಃ = ತರಲ್ಪಟ್ಟ, ಗಂಧಃ = ಗಂಧವು, ಚಕ್ಷುಷಾ ಅಪಿ = ಕಣ್ಣಿನಿಂದಲೂ, ಪ್ರಕಾಶ್ಯತೇ = ತೋರಿಸಲ್ಪಡುತ್ತದೆ. ಮಾನಾನಿ = ಪ್ರತ್ಯಕ್ಷ ,ಅನುಮಾನ, ಸ್ಮೃತಿಗಳೆಂಬ ಪ್ರಮಾಣಗಳು,ಶ್ರೌತಾರ್ಥಜ್ಞಾಪನೇ= ಶ್ರುತಿಮೂಲವಾದ ವಿಷಯಗಳನ್ನು ತಿಳಿಸಲು, ಶ್ರುತಿಂ= ವೇದವನ್ನು, ಉಪಜೀವಂತಿ ಯತ್= ಅವಲಂಬಿಸುವುದರಿಂದ, ಶ್ರುತ್ಯೇಕಗಮ್ಯೇ= ವೇದಗಳಿಂದ ಮಾತ್ರ ತಿಳಿಯಲ್ಪಡುವ, ಅರ್ಥೇ= ವಿಷಯದಲ್ಲಿ ಶ್ರುತಿರೇವ= ಶ್ರುತಿಯೇ, ಬಲೀಯಸೀ= ಹೆಚ್ಚು ಬಲಶಾಲಿ.

**ಅನುವಾದ-** ಚಕ್ಷುರಿಂದ್ರಿಯವು (ಪದಾರ್ಥಗಳ) ಗಂಧವನ್ನು ತಿಳಿಸಲು ಘ್ರಾಣೇಂದ್ರಿಯವನ್ನು ಅವಲಂಬಿಸುತ್ತದೆ. ಏಕೆಂದರೆ ಘ್ರಾಣೇಂದ್ರಿಯದಿಂದ ತರಲ್ಪಟ್ಟ= ತಿಳಿಯಲ್ಪಟ್ಟ ಗಂಧವನ್ನು ಚಕ್ಷುರಿಂದ್ರಿಯವು ತೋರಿಸುತ್ತದೆ.

ಪ್ರತ್ಯಕ್ಷ-ಅನುಮಾನ-ಸ್ಮೃತಿಗಳು ಶ್ರುತಿಮೂಲವಾದ ವಿಷಯಗಳನ್ನು ತಿಳಿಸಲು ಶ್ರುತಿಯನ್ನು ಅವಲಂಬಿಸುತ್ತವೆ. ಆದ್ದರಿಂದ ಶ್ರುತಿಗಳಿಂದ ಮಾತ್ರ ತಿಳಿಯಲ್ಪಡಬೇಕಾದ ವಿಷಯಗಳ ಬಗ್ಗೆ ಪ್ರತ್ಯಕ್ಷ-ಅನುಮಾನ-ಸ್ಮೃತಿಗಳಿಗಿಂತ ಶ್ರುತಿಯು ಹೆಚ್ಚು ಬಲಶಾಲಿ.

**ಭಾವವಿಲಾಸಿನೀ–** ಪ್ರಾಕ್ ಪ್ರಬಲಪ್ರತ್ಯಕ್ಷವಿರೋಧೇನ ವೇಧಾದಿಪ್ರತ್ಯಕ್ಷಸ್ಯ ಭ್ರಮತ್ವಮುಕ್ತಮ್ । ಇದಾನೀಮುಪಜೀವ್ಯವಿರೋಧೇನಾಪಿ ಭ್ರಮತ್ವಂ ಸದೃಷ್ಟಾಂತಮುಪಪಾದಯತಿ–**ಗಂಧಸ್ಯೇತಿ** ॥ ಆದ್ಯಪದ್ಯಂ ದೃಷ್ಟಾಂತಾರ್ಥಮ್ । ಯಥಾ ಸ್ವಾಯೋಗ್ಯಗಂಧಜ್ಞಾಪನಾಯ ಚಕ್ಷುಷೋಽಪಿ ಘ್ರಾಣಮುಪಜೀವ್ಯಮ್, ತಥಾ ಶ್ರೌತಾರ್ಥಸ್ಯ ಶ್ರುತ್ಯೇಕಸಮಧಿಗಮ್ಯಾರ್ಥಸ್ಯ ಜ್ಞಾಪನೇ ಯದ್ಯಸ್ಮಾನ್ಮಾನಾನಿ ಶ್ರುತೀತರಪ್ರತ್ಯಕ್ಷಾದಿಪ್ರಮಾಣಾನಿ ಶ್ರುತಿಮುಪಜೀವಂತೀತಿ ಸಂಬಂಧಃ । ಅತಃ ಉಪಜೀವ್ಯತ್ವಾತ್ ॥ ೩೭–೩೮ ॥

**ವಿವರಣೆ–** ಗಂಧದ ಕೊರಡಿಗೆ ಕಣ್ಣಿನ ಸಂಪರ್ಕವಾದಾಗ 'ಇದು ಸುಗಂಧಮಯವಾದ ಕೊರಡು' ಎಂದು ಜ್ಞಾನವು ಆಗುತ್ತದೆ. ಕಣ್ಣಿಗೆ ಸುಗಂಧದ ಜ್ಞಾನವನ್ನು ಉಂಟುಮಾಡುವ ಸಾಮರ್ಥ್ಯವು ಇಲ್ಲ. ಘ್ರಾಣೇಂದ್ರಿಯಕ್ಕೆ ಇದೆ. ಈ ಜ್ಞಾನವು ಹುಟ್ಟುವ ಮೊದಲು ಏಕಕಾಲದಲ್ಲಿ ಚಕ್ಷುಷ್-ಮತ್ತು ಘ್ರಾಣ-ಇವೆರಡರ ಸಂಪರ್ಕದಿಂದ 'ಇದು ಸುಗಂಧಮಯವಾದ ಕೊರಡು' ಎಂಬ ಜ್ಞಾನವು ಹುಟ್ಟಿರುತ್ತದೆ. ಈ ಪ್ರಕ್ರಿಯೆಯಲ್ಲಿ ಘ್ರಾಣದಿಂದ ಗಂಧವು ಮನಸ್ಸಿಗೆ ತರಲ್ಪಟ್ಟಿದೆ. ಘ್ರಾಣದ ಮೂಲಕ ಮನಸ್ಸಿನ ಸಂಪರ್ಕವನ್ನು ಹೊಂದಿದ್ದ ಗಂಧವೇ ಇನ್ನೊಂದು ಸಂದರ್ಭದಲ್ಲಿ ಗಂಧದ ಕೊರಡಿಗೆ ಕೇವಲ ಚಕ್ಷುರಿಂದ್ರಿಯದ ಸಂಪರ್ಕವಾಗಿ, ಇದರ ಮೂಲಕ ಮನಸ್ಸಿಗೆ ಸಂಪರ್ಕವಾದಾಗ 'ಸುಗಂಧಮಯವಾದ ಗಂಧದಕೊರಡು' ಎಂಬ ವೃತ್ತಿಯು ಹುಟ್ಟಲು ಕಾರಣವಾಗುತ್ತದೆ.

**ಈ ವೃತ್ತಿಯ ಉತ್ಪತ್ತಿ ಪ್ರಕ್ರಿಯೆಯಲ್ಲಿ ಚಕ್ಷುರಿಂದ್ರಿಯಕ್ಕೆ ಘ್ರಾಣವು ಉಪಜೀವ್ಯವಾಗಿದೆ-**

**ತದ್ವಿರುದ್ಧಂ ತು ಯನ್ಮಾನಮುಪಜೀವ್ಯವಿರೋಧತಃ ।**
**ನ ಸ್ವಾರ್ಥಸಾಧಕಂ ತಸ್ಮಾದಜ್ಞದೃಜ್ ನೇಶದೋಷದೃಕ್ ॥ ೩೯ ॥**

**ಅರ್ಥ-** ತದ್ವಿರುದ್ಧಂ = ಶ್ರುತಿಗೆ ವಿರುದ್ಧವಾದ, ಮಾನಂ = ಪ್ರತ್ಯಕ್ಷಾದಿಪ್ರಮಾಣವು, ಯತ್= ಯಾವ ಕಾರಣದಿಂದ, ಉಪಜೀವ್ಯವಿರೋಧತಃ = ಉಪಜೀವ್ಯವಿರೋಧದಿಂದಾಗಿ, ಸ್ವಾರ್ಥಸಾಧಕಂ ನ ಭವೇತ್ = ತನ್ನ ಅರ್ಥದ ಸಾಧಕವಾಗುವುದಿಲ್ಲವೋ, ತಸ್ಮಾತ್=ಆ ಕಾರಣದಿಂದ, ಅಜ್ಞದೃಕ್ = ಅಜ್ಞಾನಿಗಳ ಪ್ರತ್ಯಕ್ಷವು, ಈಶದೋಷದೃಕ್ ನ= ಪರಮಾತ್ಮನಲ್ಲಿ ದೋಷವನ್ನು ವಿಷಯೀಕರಿಸುವ ಪ್ರತ್ಯಕ್ಷವಲ್ಲ.

**ಅನುವಾದ-** ಶ್ರುತಿವಿರುದ್ಧವಾದ ಪ್ರಮಾಣಗಳು ಉಪಜೀವ್ಯಪ್ರಮಾಣಕ್ಕೆ ವಿರುದ್ಧವಾದ್ದರಿಂದ ಅವು ತಮ್ಮ ಅರ್ಥವನ್ನು ಸಾಧಿಸುವುದಿಲ್ಲ. ಆದ್ದರಿಂದ ಅಜ್ಞದೃಷ್ಟಿಯು ಈಶನಲ್ಲಿ ದೋಷವನ್ನು ಸಾಧಿಸುವ ಪ್ರತ್ಯಕ್ಷವಲ್ಲ.

**ಭಾವವಿಲಾಸಿನೀ–** ತದ್ವಿರುದ್ಧಂ 'ನಿರನಿಷ್ಟೋ ನಿರವದ್ಯಃ' ಇತ್ಯಾದಿಶ್ರುತಿವಿರುದ್ಧಂ ಮಾನಂ ಭೇದಭೇದಾದಿಪ್ರತ್ಯಕ್ಷಮ್ । ಯದ್ ಯಸ್ಮಾದುಪಜೀವ್ಯಶ್ರುತಿವಿರೋಧತಃ ಸ್ವಾರ್ಥಸಾಧಕಂ ನೇತಿ ಸಂಬಂಧಃ । ತಸ್ಮಾದ್ ಅಜ್ಞದೃಕ್ ಅಜ್ಞಾನಿನಾಂ ವೇಧಾದಿಪ್ರತ್ಯಕ್ಷಮ್ ಈಶದೋಷದೃಕ್ ಈಶ್ವರಸ್ಯ ದೋಷಸಾಧಕದರ್ಶನಂ ನೇತಿ ಸಂಬಂಧಃ ॥ ೩೯ ॥

**ವಿವರಣೆ-** 'ನಿರನಿಷ್ಟೋ ನಿರವದ್ಯಃ' ಮೊದಲಾದ ವೇದವಾಕ್ಯಗಳು ಪರಮಾತ್ಮನಲ್ಲಿ ಯಾವ ದೋಷವೂ ಇಲ್ಲವೆಂದು ಸಾರುತ್ತವೆ. ವೇದೈಕಗಮ್ಯವಾದ ವಿಷಯಗಳಲ್ಲಿ ವೇದಗಳು ಇತರ ಪ್ರಮಾಣಗಳಿಗೆ ಉಪಜೀವ್ಯವಾಗಿವೆ. ಉಪಜೀವ್ಯಪ್ರಮಾಣವಿರುದ್ಧವಾದ ವಿಷಯಗಳನ್ನು ತಿಳಿಸುವ ಉಪಜೀವಕಗಳು ಪ್ರಮಾಣವಲ್ಲ. ಅಜ್ಞರ ಪ್ರತ್ಯಕ್ಷ-ಅನುಮಾನ- ಆಗಮಗಳು

ಪರಮಾತ್ಮನಲ್ಲಿ ದೋಷವಿದೆ ಎಂದು ಗ್ರಹಿಸಿದರೆ ಅವು ಉಪಜೀವ್ಯಶ್ರುತಿಗೆ ವಿರುದ್ಧವಾಗುವುದರಿಂದ ಪ್ರಮಾಣವಾಗಲಾರವು.

**ಹಿಂದೆ ಹೇಳಿದ ವಿಷಯದಲ್ಲಿ ದೃಷ್ಟಾಂತವನ್ನು ತೋರಿಸುತ್ತಾರೆ -**

**ನಹಿ ಮಂದದೃಶಾಂ ದೃಷ್ಟ್ಯಾ ರತ್ನಸ್ಯಾನರ್ಘತಾ ಗತಾ ।**
**ಕಿಂತು ಮಂದ್ಯೈವ ದೃಗ್ರತ್ನಪರೀಕ್ಷಾಶಾಸ್ತ್ರತೋ ಭವೇತ್ ॥ ೪೦ ॥**

**ಅರ್ಥ-**ಮಂದದೃಶಾಂ = ಅಜ್ಞಾನಿಗಳ, ದೃಷ್ಟ್ಯಾ= ದೃಷ್ಟಿಯಿಂದ, ರತ್ನಸ್ಯ= ರತ್ನದ, ಅನರ್ಘತಾ= ಅಮೂಲ್ಯತೆಯು, ನ ಗತಾ ಹಿ = ಹೋಗವುದಿಲ್ಲವಷ್ಟೇ! ಕಿಂತು= ಆದರೆ, ರತ್ನಪರೀಕ್ಷಾ= ರತ್ನದ ಪರೀಕ್ಷೆಯ, ಶಾಸ್ತ್ರತಃ= ಶಾಸ್ತ್ರಕ್ಕೆ ಅನುಗುಣವಾಗಿ, ದೃಕ್ ಏವ= (ಪಾಮರರ) ದೃಷ್ಟಿಯೇ, ಮಂದಾ ಭವೇತ್= ಮಂದವಾಗುತ್ತದೆ.

**ಭಾವವಿಲಾಸಿನೀ– ಉಕ್ತಾರ್ಥೇಽಂತರಂಗದೃಷ್ಟಾಂತಮಾಹ– ನಹೀತಿ ॥ ಮಂದದೃಶಾಂ ರತ್ನಪರೀಕ್ಷಾಶಾಸ್ತ್ರಮಜಾನತಾಂ ದೃಶಾ ಶಿಲಾಮಾತ್ರಮಿತಿ ದೃಶಾ ಅನರ್ಘತಾ ಮೂಲ್ಯತಾ ಗತಾ ನಹೀತಿ ಸಂಬಂಧಃ । ಕಿಂತು ರತ್ನಪರೀಕ್ಷಾಶಾಸ್ತ್ರತಃ ದೃಗ್ ಅಜ್ಞದರ್ಶನಮೇವ ಮಂದಾ ಭವೇದಿತಿ ಯೋಜನಾ । ಅತ್ರ ಶಾಸ್ತ್ರೇಣೈವ ಪ್ರತ್ಯಕ್ಷಬಾಧದರ್ಶನಾದಯಮಂತರಂಗದೃಷ್ಟಾಂತ ಇತಿ ಜ್ಞಾತವ್ಯಮ್ ॥ ೪೦ ॥**

**ವಿವರಣೆ-** (1) ರತ್ನಪರೀಕ್ಷೆಯನ್ನು ತಿಳಿಯದ ಅಜ್ಞಾನಿಗಳು ಅಮೂಲ್ಯವಾದ ರತ್ನವನ್ನು ಇದು ಸಾಮಾನ್ಯವಾದ ಕಲ್ಲು ಎಂದು ತಿಳಿದರೆ ಅದರಿಂದ ರತ್ನದ ಅಮೂಲ್ಯತೆಯೇನೂ ಹೋಗುವುದಿಲ್ಲ. ರತ್ನಪರೀಕ್ಷೆಯ ಶಾಸ್ತ್ರಕ್ಕೆ ಅನುಗುಣವಾಗಿ ಅಜ್ಞಾನಿಗಳ ದೃಷ್ಟಿಯೇ ಮಂದ ಎಂದು ಸಿದ್ಧವಾಗುತ್ತದೆ.

(2) ಇದು ಶಾಸ್ತ್ರದಿಂದ ಪ್ರತ್ಯಕ್ಷಕ್ಕೆ ಬಾಧವನ್ನು ತೋರಿಸುವ ದೃಷ್ಟಾಂತ. ಆದ್ದರಿಂದ ಇದು ಅಂತರಂಗದೃಷ್ಟಾಂತ.

**ಶ್ರುತಿಸ್ತು ನಿರನಿಷ್ಟೋಽಸೌ ನಿರವದ್ಯ ಇತಿ ಪ್ರಭುಮ್ ।**
**ಸ್ಪಷ್ಟಮಾಚಷ್ಟ ತತ್ಕಷ್ಟಂ ದ್ರಷ್ಟುಮೀಷ್ಟೇ ಕ ಈಶಿತುಃ ॥ ೪೧ ॥**

**ಅರ್ಥ-** ಅಸೌ ಶ್ರುತಿಸ್ತು= ಈ ಶ್ರುತಿಯಾದರೂ, ಪ್ರಭುಃ= ಪರಮಾತ್ಮನನ್ನು, ನಿರನಿಷ್ಟಃ= ಅನಿಷ್ಟರಹಿತನು, ನಿರವದ್ಯಃ= ದೋಷರಹಿತನು, ಇತಿ= ಎಂದು, ಸ್ಪಷ್ಟಂ= ಸ್ಪಷ್ಟವಾಗಿ, ಆಚಷ್ಟ= ವರ್ಣಿಸಿದೆ, ತತ್= ಆದ್ದರಿಂದ, ಈಶಿತುಃ= ಪರಮಾತ್ಮನಿಗೆ, ಕಷ್ಟಂ= ದೋಷವನ್ನು, ದ್ರಷ್ಟುಂ= ನೋಡಲು, ಕಃ= ಯಾರು, ಈಷ್ಟೇ= ಸಮರ್ಥನಾಗುತ್ತಾನೆ?

**ಅನುವಾದ-** 'ನಿರನಿಷ್ಟೋ ನಿರವದ್ಯಃ' ಎಂಬ ವೇದವಾಕ್ಯವು ಸ್ಪಷ್ಟವಾಗಿ ಭಗವಂತನಿಗೆ ದುಃಖಾದಿದೋಷಗಳಿಲ್ಲ ಎಂದು ಹೇಳುತ್ತಿರುವುದರಿಂದ ಅದಕ್ಕೆ ವಿರುದ್ಧವಾಗಿ

ಪ್ರತ್ಯಕ್ಷವು ಅವನಲ್ಲಿ ದೋಷವನ್ನು ಕಾಣಲಾಗದು. ಈ ದೋಷದರ್ಶನವು ಉಪಜೀವ್ಯಪ್ರಮಾಣಕ್ಕೆ ವಿರುದ್ಧವಾಗಿ ಅಪ್ರಮಾಣವಾಗುವುದು.

**ಭಾವವಿಲಾಸಿನೀ–** ಉಪಜೀವ್ಯಶ್ರುತಿಂ ಸ್ಪಷ್ಟಮಾಹ– **ಶ್ರುತಿಸ್ತ್ವಿತಿ** ॥ ಅನೇನ ನಿರನಿಷ್ಟೋ ನಿರವದ್ಯ ಇತಿ ಶ್ರುತಿರರ್ಥತೋ ಗೃಹೀತೇತಿ ದ್ರಷ್ಟವ್ಯಮ್ । ಸ್ಪಷ್ಟಮಾಚಷ್ಟೇತಿ ಪೂರ್ವೇಣಾನ್ವಯಃ । ಕಃ ಪುರುಷ ಈಶಿತುಃ ಕಷ್ಟಂ ವೇಧಾದಿರೂಪಾನಿಷ್ಟಂ ದ್ರಷ್ಟುಮೀಷ್ಟೇ ಸಮರ್ಥೋ ಭವತಿ ನ ಕೋಽಪೀತ್ಯರ್ಥಃ ॥ ೪೧ ॥

ಈಗ ಕೈಲಾಸಯಾತ್ರೆಮಾಡಿದ್ದರಿಂದ ಕೃಷ್ಣನಿಗೆ, ರಾಮೇಶ್ವರದಲ್ಲಿ ಲಿಂಗಪ್ರತಿಷ್ಠೆಮಾಡಿದ್ದರಿಂದ ರಾಮನಿಗೆ, ಅಜ್ಞರು ಹೇಳುವ ನೀಚತ್ವವನ್ನು ಪರಿಹರಿಸುತ್ತಾರೆ-

ನ ಕರ್ಮಣಾ ವರ್ಧತೇ ಯೋ ನೋ ಕನೀಯಾನ್ ಪರಃ ಪ್ರಭುಃ ।
ನ ಭೂತ್ಯೈ ನಾಂಹಸೋ ಹತ್ಯೈ ತಸ್ಯ ಯಾತ್ರಾ ಶಿವಾರ್ಚನಮ್ ॥ ೪೨ ॥

**ಅರ್ಥ**-ಯಃ = ಯಾವ, ಪರಃ ಪ್ರಭುಃ = ಸರ್ವೋತ್ತಮನಾದ ಸರ್ವಸಮರ್ಥನಾದ ಭಗವಂತನು, ಕರ್ಮಣಾ = ಸತ್ಕರ್ಮದಿಂದ, ನ ವರ್ಧತೇ= ಬೆಳೆಯುವುದಿಲ್ಲವೋ, ಕರ್ಮಣಾ = ಪಾಪಕರ್ಮದಿಂದ, ನೋ ಕನೀಯಾನ್= ಸಣ್ಣವನೂ ಆಗುವುದಿಲ್ಲವೋ, ತಸ್ಯ= ಅಂತಹ ಕೃಷ್ಣರೂಪಿಯಾದ ಹರಿಯ, ಯಾತ್ರಾ = ಕೈಲಾಸಯಾತ್ರೆಯು, ಭೂತ್ಯೈ= ಪುತ್ರಾದಿ ಐಶ್ವರ್ಯಪ್ರಾಪ್ತಿಗಾಗಿ, ನ= ಅಲ್ಲ, ತಸ್ಯ= ರಾಮರೂಪಿಯಾದ ಶ್ರೀ ಹರಿಯ, ಶಿವಾರ್ಚನಂ = ಶಿವಲಿಂಗಪೂಜೆಯು, ಅಂಹಸಃ = ಬ್ರಹ್ಮಹತ್ಯಾರೂಪಪಾಪದ, ಹತ್ಯೈ = ಪರಿಹಾರಕ್ಕಾಗಿಯೂ, ನ = ಅಲ್ಲ

**ಅನುವಾದ-** ಶ್ರೀಕೃಷ್ಣನು ಮಕ್ಕಳಾಗದಿರುವ ಪಾಪವನ್ನು ಮಾಡಿದ್ದ. ಆ ಪಾಪಪರಿಹಾರಕ್ಕಾಗಿ ಕೈಲಾಸಯಾತ್ರೆಯನ್ನು ಮಾಡಿ ಪಾಪವನ್ನು ಪರಿಹರಿಸಿಕೊಂಡು ಮಕ್ಕಳನ್ನು ಪಡೆದನು. ಹಾಗೆಯೇ ರಾಮನಿಗೆ ರಾವಣನೆಂಬ ಬ್ರಾಹ್ಮಣನನ್ನು ಕೊಂದದ್ದರಿಂದ ಬ್ರಹ್ಮಹತ್ಯಾದೋಷವು ಬಂದಿತ್ತು. ಅದರ ಪರಿಹಾರಕ್ಕಾಗಿ ರಾಮೇಶ್ವರದಲ್ಲಿ ಲಿಂಗಪ್ರತಿಷ್ಠೆಯನ್ನು ಮಾಡಿ ರುದ್ರದೇವರ ಪೂಜೆಯನ್ನು ಮಾಡಿ ಪಾಪವನ್ನು ಪರಿಹರಿಸಿಕೊಂಡನು ಎಂದು ಕೆಲವರು ಹೇಳುತ್ತಾರೆ. ಅದು ಸರಿಯಲ್ಲ. ಶ್ರುತಿಯು ಭಗವಂತನ ಬಗ್ಗೆ 'ನ ಕರ್ಮಣಾ ವರ್ಧತೇ ನೋ ಕನೀಯಾನ್' ಎಂದು ಅವನಿಗೆ ಸತ್ಕರ್ಮ ಮತ್ತು ದುಷ್ಕರ್ಮಗಳಿಂದ ಪುಣ್ಯಪಾಪಗಳ ಲೇಪವೇ ಇಲ್ಲ ಎಂದು ಹೇಳುತ್ತಿದೆ. ಆದ್ದರಿಂದ ಪುಣ್ಯಪ್ರಾಪ್ತಿಗಾಗಿ, ಪಾಪಪರಿಹಾರಕ್ಕಾಗಿ ಸತ್ಕರ್ಮವನ್ನು ಆಚರಿಸಿದನೆಂಬುದು ಶ್ರುತಿವಿರುದ್ಧವಾಗಿದೆ.

**ಭಾವವಿಲಾಸಿನೀ–** ಅಧುನಾ ಕೈಲಾಸಯಾತ್ರಯಾ ಕೃಷ್ಣಸ್ಯ ಲಿಂಗಪ್ರತಿಷ್ಠಯಾ ರಾಮಸ್ಯ ಚ ಅಜ್ಞೈರುಚ್ಯಮಾನನ್ನೈಚ್ಯಂ ಪರಿಹರ್ತುಮಾಹ - **ನ ಕರ್ಮಣೇತಿ** । ಯಃ ಪರಃ ಪ್ರಭುಃ ಕರ್ಮಣಾ

ಪುಣ್ಯಕರ್ಮಣಾ ನ ವರ್ಧತೇ । ನ ಕರ್ಮಣಾ ವರ್ಧತ ಇತಿ ಶ್ರುತ್ಯಂಶ ಗ್ರಹಣಮಿದಂ । ನೋಕನೀಯಾನ್ ಕರ್ಮಣಾಪಾಪಕರ್ಮಣಾ ಕನೀಯಾಂಶ್ಚ ನ । ಉಭಯತ್ರಾಪ್ಯನ್ವಯ-ದರ್ಶನಾಯ ಕರ್ಮಣೇತಿ ಪುಣ್ಯಪಾಪ ಸಾಧಾರಣವಚನಮ್ । ತಸ್ಯ ಕೃಷ್ಣರಾಮರೂಪಿಣೋ ಹರೇಃ ಯಾತ್ರಾ ಕೈಲಾಸಯಾತ್ರಾ ಭೂತ್ಯೈಃ ಪುತ್ರಾದ್ಯೈಶ್ವರ್ಯಪ್ರಾಪ್ತಯೇ ನ । ಉಕ್ತಶ್ರುತ್ಯಾ ಪುಣ್ಯೇನ ವೃಧ್ಯೆಭಾವೋಕ್ತೇಃ । ಶಿವಾರ್ಚನಮಂಹಸಃ ಬ್ರಹ್ಮಹತ್ಯಾರೂಪಪಾಪಸ್ಯ ಹತ್ಯೈ ಹನನಾಯನೇತಿ ಸಂಬಂಧಃ । ಪಾಪೇನ ಕನೀಯಸ್ತ್ವಾಭಾವಸಾಧಕ ಶ್ರುತಿವಿರೋಧಾದೇವ । ತಸ್ಮಾನ್ಮನುಷ್ಯಾವತಾರೇ ಮನುಷ್ಯವನ್ನಟನಮೇವೇತಿ ಭಾವಃ ॥ ೪೨ ॥

**ವಿವರಣೆ-** ಶ್ರೀಕೃಷ್ಣನ ಕೈಲಾಸಯಾತ್ರೆ ಮತ್ತು ಶ್ರೀರಾಮನ ಶಿವಾರ್ಚನೆಗಳು ಮನುಷ್ಯಾವತಾರದಲ್ಲಿ ಮನುಷ್ಯನಂತೆ ನಟನೆ ಮಾತ್ರ. ಇದು ಶ್ರುತ್ಯನುಗುಣವಾದ ನಿರ್ಣಯ.

ನ ಮೇ ಪಾರ್ಥಾಸ್ತಿ ಕರ್ತವ್ಯಂ ತ್ರಿಷು ಲೋಕೇಷು ಕಿಂಚನ ।
ನಾನವಾಪ್ತಮವಾಪ್ತವ್ಯಂ ವರ್ತ ಏವ ಚ ಕರ್ಮಣಿ ॥ ೪೩ ॥
(ಭ.ಗೀ.೩.೨೨)

**ಅರ್ಥ-**ಪಾರ್ಥ = ಅರ್ಜುನನೇ, ಮೇ = ನನಗೆ (ಕೃಷ್ಣನಿಗೆ), ಕಿಂಚನ ಕರ್ತವ್ಯಂ = ಮಾಡಬೇಕಾದ ಯಾವ ಕೆಲಸವೂ, ನ = ಇಲ್ಲ, ತ್ರಿಷು ಲೋಕೇಷು = ಮೂರು ಲೋಕಗಳಲ್ಲಿ, ಅನವಾಪ್ತಂ = ಇಲ್ಲಿಯವರೆಗೂ ಪಡೆಯದ, ಅವಾಪ್ತವ್ಯಂ = ಇನ್ನು ಮುಂದೆ ಪಡೆಯಬೇಕಾದ ಪ್ರಯೋಜನವೇನೂ, ನ = ಇಲ್ಲ (ಹಾಗಿದ್ದರೂ) ಕರ್ಮಣಿ ವರ್ತ ಏವ = ಕರ್ಮದಲ್ಲೇ ಇದ್ದೇನೆ. (ಕರ್ಮವನ್ನು ಮಾಡುತ್ತಲೇ ಇದ್ದೇನೆ)

**ಅನುವಾದ-** ಕೈಲಾಸಯಾತ್ರೆಯನ್ನು ಮಾಡಿದ ಕೃಷ್ಣನೇ ಗೀತೆಯಲ್ಲಿ ಹೀಗೆ ಹೇಳುತ್ತಾನೆ - 'ನಾನು ಇಷ್ಟರವರೆಗೆ ಹೊಂದದಿರುವ, ಇನ್ನು ಮುಂದೆ ಹೊಂದಬೇಕಾಗಿರುವ ಪ್ರಯೋಜನವೇನೂ ಇಲ್ಲ. ಹೊಂದಬೇಕಾದ ಎಲ್ಲವನ್ನೂ ಹೊಂದಿದ್ದೇನೆ. ಹಾಗಿದ್ದರೂ ಲೋಕಸಂಗ್ರಹಕ್ಕಾಗಿ ಕರ್ಮವನ್ನು ಮಾಡುತ್ತೇನೆ'.

**ಭಾವವಿಲಾಸಿನೀ–** ಗೀತಾವಾಕ್ಯೇನಾಪ್ಯುಕ್ತಮರ್ಥಂ ಸಮರ್ಥಯತೇ– **ನ ಮೇ ಪಾರ್ಥೇತಿ** ॥ ಮೇ ಕರ್ತವ್ಯಂ ನಾಸ್ತೀತಿ ಕೈಲಾಸಯಾತ್ರಾಕಾರಿಣಃ ಕೃಷ್ಣಸ್ಯೈವ ವಚನಮ್ । ಅನವಾಪ್ತಂ ಪ್ರಾಗಪ್ರಾಪ್ತಂ ಅವಾಪ್ತವ್ಯಮ್ ಉಪರಿ ಪ್ರಾಪ್ಯಂ ನೈವೇತಿ ಸಂಬಂಧಃ । ತಥಾಪಿ ಜನಸಂಗ್ರಹಾಯ ಕರ್ಮಣಿ ಕೈಲಾಸಯಾತ್ರಾ ಸೂರ್ಯಗ್ರಹಣೇ ಸ್ಯಮಂತಪಂಚಕಯಾತ್ರಾದೇವರ್ಷಿತರ್ಪಣಾದಿ-ಕರ್ಮಣಿ । **'ಉತ್ಸೀದೇಯುರಿಮೇ ಲೋಕಾ ನ ಕುರ್ಯಾಂ ಕರ್ಮ ಚೇದಹವ್'** ಇತ್ಯುತ್ತರವಾಕ್ಯಾತ್ **'ನಾನವಾಪ್ತಮವಾಪ್ತವ್ಯಮ್'** ಇತಿ ಸ್ವಫಲನಿಷೇಧಾಚ್ಚ ಕೇವಲಂ ಜನಸಂಗ್ರ-ಹಾಯೇತಿ ಗಮ್ಯತೇ । ಅವಶಿಷ್ಟಂ ತು ಸ್ಪಷ್ಟಮ್ । ಸಮಾಧತ್ಸ್ವ ಸಮಾಹಿತಂ ಕುರು ॥೪೩–೪೪॥

**ವಿವರಣೆ**- ಕೈಲಾಸಯಾತ್ರೆಯನ್ನು ಮಾಡಿದ ಕೃಷ್ಣನೇ 'ಮೇ ಕರ್ತವ್ಯಂ ನಾಸ್ತಿ'- ಇತ್ಯಾದಿ ವಚನಗಳನ್ನು ಹೇಳಿದ್ದಾನೆ. ಆದ್ದರಿಂದ ಕೈಲಾಸಯಾತ್ರಾದಿಗಳು ಭಗವದವತಾರಗಳು ಜನರಿಗೆ ಸ್ಫೂರ್ತಿಯನ್ನು ಉಂಟುಮಾಡುವುದಕ್ಕಾಗಿ, ತಮಗಾಗಿ ಅಲ್ಲ.

**ನ ಮಾಂ ಕರ್ಮಾಣಿ ಲಿಂಪಂತಿ ನ ಮೇ ಕರ್ಮಫಲೇ ಸ್ಪೃಹಾ ।**
**ಇತಿ ಗೀತಾವಚನತಃ ಸಮಾಧತ್ಸ್ವ ಮನಃ ಸದಾ ॥ ೪೪ ॥**
**(ಭ.ಗೀ.೪.೧೪)**

**ಅರ್ಥ**-ಮಾಂ = ನನಗೆ, ಕರ್ಮಾಣಿ = ಕರ್ಮಗಳು, ನ ಲಿಂಪಂತಿ = ಅಂಟುವುದಿಲ್ಲ, ಮೇ = ನನಗೆ, ಕರ್ಮಫಲೇ = ಕರ್ಮಫಲದಲ್ಲಿ ಸ್ಪೃಹಾ = ಇಚ್ಛೆಯು, ನ = ಇಲ್ಲ. ಇತಿ = ಎಂದು, ಗೀತಾವಚನತಃ = ಗೀತೆಯ ಮಾತಿನಿಂದ, ಸದಾ = ಯಾವಾಗಲೂ, ಮನಃ = ಮನಸ್ಸನ್ನು ಸಮಾಧತ್ಸ್ವ = ಸಮಸ್ಥಿತಿಯಲ್ಲಿ ಇಡು.

**ವಿವರಣೆ**- 'ನನಗೆ ಕರ್ಮಫಲದ ಲೇಪವಿಲ್ಲ, ಕರ್ಮಫಲದ ಆಸೆಯೂ ಇಲ್ಲ' ಎಂದು ಶ್ರೀಕೃಷ್ಣನು ಭಗವದ್ಗೀತೆಯಲ್ಲಿ ಹೇಳಿದ್ದಾನೆ. ಆದರೂ ಸಂಧ್ಯಾವಂದನೆ, ತರ್ಪಣ, ಯಾತ್ರೆ - ಇತ್ಯಾದಿಗಳನ್ನು ಮಾಡಿದ್ದಾನೆ. 'ತಾನು ಕರ್ಮಗಳನ್ನು ಮಾಡದಿದ್ದರೆ ಜನರೂ ಕರ್ಮಗಳನ್ನು ಮಾಡದೇ ಅವನತಿಯನ್ನು ಹೊಂದುವರು; ಅವರಿಗೆ ಅವನತಿಯಾಗದಿರಲಿ; ಕರ್ಮಗಳನ್ನು ಮಾಡಲಿ' ಎಂಬ ಅಭಿಪ್ರಾಯದಿಂದ ಶ್ರೀಕೃಷ್ಣನು ಕರ್ಮಗಳನ್ನು ಮಾಡಿದ್ದಾನೆ. ಶ್ರೀಕೃಷ್ಣನ ಅಭಿಪ್ರಾಯಗಳನ್ನು ತಿಳಿಯದೆ ಅವನು ಸಾಮಾನ್ಯಜನರಂತೆ ದೋಷವುಳ್ಳವನು ಎಂದು ಆಲೋಚಿಸಬಾರದು.

**ಹಿಂದೆ ಹೇಳಿದ ವಿಷಯದಲ್ಲಿ ಶ್ರೀಮದ್ಭಾಗವತವಚನವನ್ನೂ ಉದಾಹರಿಸುತ್ತಿದ್ದಾರೆ-**

**ಈಜೇ ಚ ಭಗವಾನ್ ರಾಮೋ ಯತ್ರಾಸ್ಪೃಷ್ಟೋಽಪಿ ಕರ್ಮಣಾ ।**
**ಲೋಕಸ್ಯ ಸಂಗ್ರಹಾಯೇಶೋ ಯಥಾನ್ಯೋಽಘಾಪನುತ್ತಯೇ ।**
**ಇತಿ ಭಾಗವತೋಕ್ತ್ಯಾ ಚ ಸ್ವಸ್ಥಚಿತ್ತಃ ಸದಾ ಭವ ॥ ೪೫ ॥**

**ಅರ್ಥ**-ಕರ್ಮಣಾ = ಪುಣ್ಯಕರ್ಮ ಮತ್ತು ಪಾಪಕರ್ಮಗಳಿಂದ, ಅಸ್ಪೃಷ್ಟೋಽಪಿ = ಲೇಪವಿಲ್ಲದವನಾದರೂ, ಭಗವಾನ್ = ಷಡ್ಗುಣಸಂಪನ್ನನಾದ, ಈಶಃ= ಸಮರ್ಥನಾದ, ರಾಮಃ = ಪರಶುರಾಮನು, ಅನ್ಯಃ = ಬೇರೆ ಸಾಮಾನ್ಯಮನುಷ್ಯನು, ಅಘಾಪನುತ್ತಯೇ = ಪಾಪಪರಿಹಾರಕ್ಕಾಗಿ, ಯಥಾ = ಹೇಗೆ, (ತಥಾ = ಹಾಗೆಯೇ) ಲೋಕಸ್ಯ ಸಂಗ್ರಹಾಯ = ಲೋಕಸಂಗ್ರಹಕ್ಕಾಗಿ, ಯತ್ರ= ಯಾವ ಸ್ಯಮಂತಪಂಚಕದಲ್ಲಿ, ಈಜೇ = ಯಾಗವನ್ನು ಮಾಡಿದನು, ಇತಿ = ಹೀಗೆಂದು, ಭಾಗವತೋಕ್ತ್ಯಾ ಚ = ಭಾಗವತದ ಮಾತಿನಿಂದಲೂ, ಸದಾ = ಯಾವಾಗಲೂ, ಸ್ವಸ್ಥಚಿತ್ತಃ = ಮನಸ್ಸಮಾಧಾನವುಳ್ಳವನು, ಭವ = ಆಗು.

**ಅನುವಾದ-** ಸಾಮಾನ್ಯಮನುಷ್ಯನು ಪಾಪಪರಿಹಾರಕ್ಕಾಗಿ ಯಜ್ಞಾದಿಸತ್ಕರ್ಮಗಳನ್ನು ಮಾಡುವಂತೆ ಕರ್ಮಲೇಪವಿಲ್ಲದ ಸಮರ್ಥನಾದ ಭಗವಾನ್ ಪರಶರಾಮನು ಸ್ಯಮಂತಪಂಚಕಕ್ಷೇತ್ರದಲ್ಲಿ ಯಜ್ಞವನ್ನು ಮಾಡಿದನು. ಇದು ಪಾಪಪರಿಹಾರಕ್ಕಾಗಿ ಅಲ್ಲ, ಜನರಿಗೆ ದಾರಿ ತೋರುವುದಕ್ಕಾಗಿ. ಇದು ಭಾಗವತದ (೧೦.೭೦.೪) ಮಾತು. ಆದ್ದರಿಂದ ಭಗವಂತನಿಗೆ ದೋಷವಿದೆ ಎಂದು ಭ್ರಾಂತನಾಗಬೇಡ. ಅವನು ನಿರ್ದೋಷನೆಂದು ನಿಶ್ಚಿತಮನಸ್ಸುಳ್ಳವನಾಗು.

**ಭಾವವಿಲಾಸಿನೀ–** ಉಕ್ತಾರ್ಥೇ ಭಾಗವತವಚನಮಾಹ– **ಈಜ ಇತಿ** ॥ ಯತ್ರ ಸ್ಯಮಂತ-ಪಂಚಕೇ । ಕರ್ಮಣಾ ಪುಣ್ಯಪಾಪರೂಪೇಣ । ರಾಮಃ ಪರಶುರಾಮಃ । ಅತ್ರ ಜನ-ಸಂಗ್ರಹಾಯೇತಿ ಸ್ಪಷ್ಟಮ್ । ಅನ್ಯಃ ಮನುಷ್ಯಾದಿಃ ಅಘಾಪನುತ್ತಯೇ ಯಥಾ ತಥಾ ಲೋಕಸ್ಯ ಸಂಗ್ರಹಾಯ। ಫಲವತ್ತ್ವಮಾತ್ರೇ ದೃಷ್ಟಾಂತಃ, ನತು ತದ್ವದಘಾಪನುತ್ತಯ ಇತಿ ಭಾವಃ । ಭಗವಾನೀಶ ಇತಿ ಚ ತತ್ರ ಹೇತುಸೂಚನಮ್ ॥ ೪೫ ॥

**ವಿವರಣೆ–** ಭಗವಾನ್ ಮತ್ತು ಈಶಃ- ಇವೆರಡು ಪದಗಳು ಪರಶುರಾಮನು ಪಾಪಪರಿಹಾರಕ್ಕಾಗಿ ಯಾಗವನ್ನು ಮಾಡಲಿಲ್ಲ ಎಂದು ತಿಳಿಸುತ್ತವೆ.

**ಅಥಾಪಿ ಭಗವದ್ದೋಷಂ ವೃಥಾ ಯೋ ಮನುತೇ ನರಃ ।**
**ತಂ ದೋಷೇಷುಃ ಶಿಲಾಕ್ಷಿಪ್ತದಾರುಪ್ರೋತಶರೋಪಮಃ ।**
**ಶ್ರುತ್ಯಾಕೃಷ್ಟಗುಣೋತ್ಸೃಷ್ಟೇರ್ಧಾನುಷ್ಕಮನುಧಾವತಿ ॥ ೪೬ ॥**

**ಅರ್ಥ-**ಅಥಾಪಿ = ಹೀಗಿದ್ದರೂ, ಯೋ ನರಃ = ಯಾವ ಮನುಷ್ಯನು, ವೃಥಾ = ಪ್ರಮಾಣವಿಲ್ಲದೆ, ಭಗವದ್ದೋಷಂ = ಭಗವಂತನ ದೋಷವನ್ನು, ಮನುತೇ = ತಿಳಿಯುತ್ತಾನೆಯೋ, ತಂ = ಆ, ಧಾನುಷ್ಕಂ = ದೋಷವೆಂಬ ಬಾಣವನ್ನು ಪ್ರಯೋಗಿಸಿದವನನ್ನೇ, ಶಿಲಾಕ್ಷಿಪ್ತದಾರುಪ್ರೋತಶರೋಪಮಃ = ಶಿಲೆಗೆ ಹೊಡೆಯಲ್ಪಟ್ಟ ಮರದ ತುದಿಯುಳ್ಳ ಬಾಣದಂತಿರುವ, ದೋಷೇಷುಃ = ದೋಷವೆಂಬ ಬಾಣವು, ಅನುಧಾವತಿ = ಬೆನ್ನಟ್ಟುತ್ತದೆ. (ಹಿಂದಕ್ಕೆ ಬಂದು ಘಾಸಿಗೊಳಿಸುತ್ತದೆ.) ಶ್ರುತ್ಯಾಕೃಷ್ಟಗುಣೋತ್ಸೃಷ್ಟೇಃ = ವೇದಗಳಿಂದ ಹೇಳಿದ ಗುಣಗಳನ್ನು ತ್ಯಜಿಸಿದ್ದರಿಂದ.

**ಅನುವಾದ-** ಹಿಂದೆ ಹೇಳಿದ ಪ್ರಮಾಣಗಳಿಂದ (ಶ್ರುತಿ-ಯುಕ್ತಿ-ಪ್ರತ್ಯಕ್ಷಗಳಿಂದ) ಭಗವಂತನಿಗೆ ನಿರ್ದೋಷತ್ವವೇ ಸಿದ್ಧವಾದರೂ ಪ್ರಮಾಣವಿಲ್ಲದೇ ಭಗವಂತನಲ್ಲಿ ದೋಷಗಳಿವೆ ಎಂದು ಹೇಳಿದರೆ ಆ ದೋಷವು, ಕಿವಿಯವರೆಗೆ ಎಳೆದು ಬಂಡೆಗೆ ಹೊಡೆಯಲ್ಪಟ್ಟ ಮರದ ತುದಿಯುಳ್ಳ ಬಾಣದಂತೆ ಹಿಂದಕ್ಕೆ ಬಂದು ಧಾನುಷ್ಕನನ್ನೇ (ಬಾಣಹೊಡೆದವನನ್ನೇ) ಘಾಸಿಗೊಳಿಸುತ್ತದೆ. ಶ್ರುತಿಗಳಲ್ಲಿ ಹೇಳಿದ ಗುಣಗಳನ್ನು ತ್ಯಜಿಸಿದ್ದರಿಂದ ಆ ದೋಷಾರೋಪವೆಂಬ ಬಾಣವು ಹಿಂದೆ ಬಂದು

**ದೋಷಾರೋಪವನ್ನು ಮಾಡಿದವನನ್ನೇ ಘಾಸಿಗೊಳಿಸುತ್ತದೆ. ಅಂದರೆ ಅವನಿಗೆ ಅಂಧಂತಮಸ್ಸು ಆಗುತ್ತದೆ.**

**ಭಾವವಿಲಾಸಿನೀ–** ಏವಂ ಶ್ರುತಿಸ್ಮೃತಿಯುಕ್ತಿಪ್ರತ್ಯಕ್ಷಾಖ್ಯಪ್ರಮಾಣತ್ರಿತಯೇನಾಪಿ ಭಗವತೋ ನಿರ್ದೋಷತ್ವೇ ಸಿದ್ಧೇಽಪಿ ಯಸ್ತಂ ದೋಷಿಣಂ ಮನುತೇ ಸ ನಿರ್ದೋಷಮಹಾಪುರುಷ-ದೂಷಣಾಖ್ಯದೋಷೇಣಾಂಧೇತಮಸಿ ಪಾತ್ಯತ ಇತೀಮಮರ್ಥಂ ಸದೃಷ್ಟಾಂತ-ಮುಪಪಾದಯನ್ ನಿರ್ದೋಷತ್ವಸಾಧನಮುಪಸಂಹರತಿ– **ಅಥಾಪೀತಿ** ॥ ಅಥಾಪಿ ಏವಂ ನಿರ್ದೋಷತ್ವೇ ಸಿದ್ಧೇಽಪಿ ವೃಥಾ ಪ್ರಮಾಣಂ ವಿನಾ । ತಂ ಪುರುಷಂ ದೋಷೇಷುಃ ದೋಷಾಖ್ಯಬಾಣಃ । ಶಿಲಾಯಾಂ ಕ್ಷಿಪ್ತಃ ಅಗ್ರೇ ದಾರುಪ್ರೋತಃ ಯಃ ಶರಃ ಸ ಉಪಮಾ ಯಸ್ಯ ಸಃ । ದೋಷೇಷುರಿತಿ ಸಂಬಂಧಃ । ದೋಷಸಾಧಕತ್ವೇನಾಭಿಮತಪ್ರತ್ಯಕ್ಷಾದೀನಾಮಯೋವತ್ ಪರಗಾತ್ರಭೇದನಸಾಮರ್ಥ್ಯಾಭಾವಸ್ಯೋಪಪಾದಿತತ್ವಾದ್ ದಾರುಪ್ರೋತೇತ್ಯುಕ್ತಮ್ । ಧಾನುಷ್ಕಂ ಪ್ರಯೋಕ್ತಾರಂ ತ್ವಾಮೇವೋಪಧಾವತಿ । ತ್ವಮೇವ ದೋಷೇಣ ತಮಸಿ ನಿಪಾತ್ಯಸ ಇತಿ ಭಾವಃ। ತತ್ರ ಹೇತುಃ– **ಶ್ರುತ್ಯಾಕೃಷ್ಟಗುಣೋತ್ಸೃಷ್ಟೇರಿತಿ** ॥ ಶ್ರುತ್ಯಾ ವೇದೇನಾಕೃಷ್ಟಾ ಆನೀತಾ ಸಾಧಿತಾ ಇತಿ ಯಾವತ್ । ಹರೇರ್ಗುಣಾಃ ಅಚ್ಛೇದ್ಯತ್ವಾವೇಧ್ಯತ್ವಾದಯಃ ತೇಷಾಮುತ್ಸೃಷ್ಟೇಃ ಪರಿತ್ಯಾಗಾತ್ । ಶ್ರುತಿಪ್ರತಿಪಾದಿತನಿರ್ದೋಷತ್ವಾಖ್ಯಗುಣೋತ್ಸರ್ಜನಾದಿತಿ ಭಾವಃ। ಇಷುಪಕ್ಷೇ ತು ಆಕರ್ಣಾಂತ ಮಾಕೃಷ್ಟಮೌರ್ವೀಮೋಚನಾದಿತಿ ದ್ರಷ್ಟವ್ಯಮ್ । ದಾರುಪ್ರೋತಶರಃ ಕರ್ಣಾಂತಮಾಕೃಷ್ಯ ಮೋಚನ ಏವ ಧಾನುಷ್ಕಮನುಧಾವತಿ । ತದ್ವದ್ದೋಷೇಷುರಪ್ಯುಕ್ತ-ಭಗವದ್ಗುಣವಿಸರ್ಜನಾತ್ ತ್ವಾಮೇವ ಯಮದೂತಕರಾಹತಖಡ್ಗಶರವಹ್ನ್ಯಾದಿಭಿಶ್ಛೇದ್ಯ-ತ್ವವೇಧ್ಯತ್ವದಾಹ್ಯತ್ವವಂತಂ ಕೃತ್ವಾ ತಮಸಿ ಮಜ್ಜಯತೀತಿ ಭಾವಃ ॥ ೪೬ ॥

**ವಿವರಣೆ–** ಮರದ ತುದಿಯುಳ್ಳ ಬಾಣಕ್ಕೆ ಶಿಲೆಯನ್ನು ಭೇದಿಸುವ ಸಾಮರ್ಥ್ಯವಿಲ್ಲ. ಪರಮಾತ್ಮನಲ್ಲಿ ದೋಷವನ್ನು ಸಾಧಿಸುವ ಚಿಂತನೆಗಳು ಮರದ ತುದಿಯುಳ್ಳ ಬಾಣಗಳಂತೆ ಅಸಮರ್ಥಗಳು.

ಇಷ್ಟರವರೆಗೆ ಹೇಳಿದ ಭಗವಂತನ ನಿರ್ದೋಷತ್ವವನ್ನು ಉಪಸಂಹರಿಸುತ್ತಾರೆ -

**ತಸ್ಮಾತ್ ಸ್ವಮೂಲರೂಪೇ ಚ ಸ್ವಾವತಾರೇಷು ಚ ಪ್ರಭುಃ ।**
**ಅವದ್ಯಗಂಧವಿಧುರಃ ಇತಿ ಸರ್ವಂ ಮನೋರಮಮ್ ॥ ೪೭ ॥**

**ಅರ್ಥ-**ತಸ್ಮಾತ್ = ಆದ್ದರಿಂದ, ಪ್ರಭುಃ = ಸಮರ್ಥನಾದ ಭಗವಂತನು, ಸ್ವಮೂಲರೂಪೇ = ತನ್ನ ಮೂಲರೂಪದಲ್ಲಿ, ಸ್ವಾವತಾರೇಷು ಚ = ತನ್ನ ಅವತಾರರೂಪಗಳಲ್ಲೂ, ಅವದ್ಯಗಂಧವಿಧುರಃ = ದೋಷಲೇಶವಿಲ್ಲದವನು. ಇತಿ = ಆದ್ದರಿಂದ, ಸರ್ವಂ = ಎಲ್ಲವೂ, ಮನೋರಮಮ್ = ಸುಂದರವಾಗಿದೆ.

**ಅನುವಾದ-** ಪರಮಾತ್ಮನಿಗೆ ಅವನ ಮೂಲರೂಪದಲ್ಲಿ ಮತ್ತು ಅವತಾರರೂಪಗಳಲ್ಲಿ ದೋಷಲೇಶವೂ ಇಲ್ಲ ಎಂದು ಶ್ರುತಿ-ಸ್ಮೃತಿ-ಮತ್ತು ಜ್ಞಾನಿಪ್ರತ್ಯಕ್ಷ- ಈ ಪ್ರಮಾಣಗಳಿಂದ ಸಿದ್ಧವಾಗಿದೆ. ಆದ್ದರಿಂದ ಎಲ್ಲವೂ (ಶಾಸ್ತ್ರಗಳು ಹೇಳುವ ಎಲ್ಲ ವಿಚಾರಗಳು) ಸುಂದರವಾಗಿವೆ.

**ಭಾವವಿಲಾಸಿನೀ–** ತಸ್ಮಾದಿತ್ಯುಪಸಂಹಾರಃ ॥ ೪೭ ॥

ಪರಮಾತ್ಮನಿಗೆ ಅಜ್ಞಾನಾರೋಪದ ನಿರಾಸ -

ಇದಂ ರೂಪ್ಯಂ ರೂಪ್ಯತಾತ್ರೇತ್ಯೇವಂ ವಾ ಭ್ರಮವಿಗ್ರಹಃ ।
ಅನ್ಯೋನ್ಯಧರ್ಮಾನಧ್ಯಸ್ಯ ಚಾನ್ಯೋನ್ಯಾತ್ಮಕತಾಂ ತಥಾ ॥ ೪೮ ॥

ಇತಿ ಭಾಷ್ಯಕೃತೋ ಭಾಷಾ ತೇನ ಭ್ರಾಂತಿರ್ದ್ವಿರೂಪಿಣೀ ।
ತಾದಾತ್ಮ್ಯಾರೋಪರೂಪಾ ವಾ ಧರ್ಮಾರೋಪಾತ್ಮಿಕಾಪಿ ವಾ ॥ ೪೯ ॥

**ಅರ್ಥ-** ಇದಂ ರೂಪ್ಯಂ= ಇದು ಬೆಳ್ಳಿ, ವಾ= ಅಥವಾ, ಅತ್ರ ರೂಪ್ಯತಾ= ಇದರಲ್ಲಿ ರಜತತ್ವವು ಇದೆ, ಇತ್ಯೇವಂ= ಹೀಗೆ, ಭ್ರಮವಿಗ್ರಹಃ= ಭ್ರಮೆಯ ಆಕಾರ. (೧) ಅನ್ಯೋನ್ಯ ಧರ್ಮಾನ್ ತಥಾ (೨) ಅನ್ಯೋನ್ಯತ್ಮಕತಾಂ ಚ ಅಧ್ಯಸ್ಯ ಇತಿ= ಅನ್ಯೋನ್ಯಧರ್ಮಾನ್.... ಅಧ್ಯಸ್ಯ ಎಂದು, ಭಾಷ್ಯಕೃತಃ= ಭಾಷ್ಯಕಾರರ(ಶಂಕರಾಚಾರ್ಯರ) ಭಾಷಾ= ಮಾತು, ತೇನ= ಆದ್ದರಿಂದ, ಭ್ರಾಂತಿಃ= ಭ್ರಾಂತಿಯು, ದ್ವಿರೂಪಿಣೀ= ಎರಡು ವಿಧ, (೧) ತಾದಾತ್ಮ್ಯಾರೋಪರೂಪಾ ವಾ= ತಾದಾತ್ಮ್ಯಾರೋಪವು ಸ್ವರೂಪವಾಗಿರುವ ಭ್ರಾಂತಿ, ವಾ= ಅಥವಾ, (೨) ಧರ್ಮಾರೋಪಾತ್ಮಿಕಾ= ಧರ್ಮಾರೋಪವು ಸ್ವರೂಪವಾಗಿರುವ ಭ್ರಾಂತಿ.

**ಅನುವಾದ-** (೧) 'ಇದು ರಜತ' (ಬೆಳ್ಳಿ) ಅಥವಾ (೨) ಇದರಲ್ಲಿ ರಜತತ್ವವು ಇದೆ ಎಂದು ಭ್ರಮೆಯ ಆಕಾರ. (೧) 'ಅನ್ಯೋನ್ಯಧರ್ಮಾನ್ ಅಧ್ಯಸ್ಯ' ಮತ್ತು 'ಅನ್ಯೋನ್ಯಾತ್ಮಕತಾಮ್ ಅಧ್ಯಸ್ಯ' ಎಂದು ಭಾಷ್ಯಕಾರರ (ಶಂಕರಾಚಾರ್ಯರ) ಮಾತು. ಆದ್ದರಿಂದ ಭ್ರಾಂತಿಯು ಎರಡು ವಿಧ. (೧) ತಾದಾತ್ಮ್ಯಾರೋಪ (೨) ಧರ್ಮಾರೋಪ.

**ಭಾವವಿಲಾಸಿನೀ–** ಭಗವತಿ ಪರೋಕ್ತಾಜ್ಞಾನಾಖ್ಯಂ ದೋಷಂ ವಿನಾಕರ್ತುಂ ತದಾರೋಪ ಏವ ನ ಸಂಭವತೀತ್ಯಾಹ– **ಇದಂ ರೂಪ್ಯಮಿತಿ** ॥ ಭ್ರಮಸ್ಯ ವಿಗ್ರಹಃ ಸ್ವರೂಪಂ ಇದಂ ರೂಪ್ಯಮಿತಿ ತಾದಾತ್ಮ್ಯಾರೋಪರೂಪಂ ವಾ ರೂಪ್ಯತಾಽತ್ರೇತಿ ಸಂಸರ್ಗಾರೋಪರೂಪಂ ವಾ । ತೃತೀಯಃ ಪ್ರಕಾರೋ ನಾಸ್ತಿ । ತಸ್ಮಿನ್ನರ್ಥೇ ಪರಭಾಷ್ಯಸಮ್ಮತಿಮಾಹ– **ಅನ್ಯೋನ್ಯಧರ್ಮಾನಿತಿ** ॥ 'ಅನ್ಯೋನ್ಯಸ್ಮಿನ್ನನ್ಯೋನ್ಯಾತ್ಮಕತಾಮನ್ಯೋನ್ಯಧರ್ಮಾಂಶ್ಚಾಧ್ಯಸ್ಯ' ಇತಿ ವಾಕ್ಯಂ ಸಂಗೃಹೀತಮ್। ಭಾಷಾ ವಾಕ್ಯಮ್ । ತೇನ ಕಾರಣೇನ । ತದ್ದ್ವಿರೂಪತ್ವಮೇವ ದರ್ಶಯತಿ– **ತಾದಾತ್ಮ್ಯೇತಿ** ॥ ೪೮–೪೯ ॥

**ವಿವರಣೆ–** (1) ಶಂಕರಾಚಾರ್ಯರ ಬ್ರಹ್ಮಸೂತ್ರದ ಅಧ್ಯಾಸ ಭಾಷ್ಯದಲ್ಲಿ ಎರಡು ವಿಧದ ಭ್ರಮೆಯನ್ನು ನಿರೂಪಿಸಲಾಗಿದೆ. (1) ಒಂದು ವಸ್ತುವಿನಲ್ಲಿ ಇನ್ನೊಂದು ವಸ್ತುವಿನ ಧರ್ಮದ ಆರೋಪ. (2) ಒಂದು ವಸ್ತು ಇನ್ನೊಂದು ವಸ್ತು ಎಂಬ ಜ್ಞಾನ. ಇದು ತಾದಾತ್ಮ್ಯಾರೋಪ. ಉದಾ : (1) 'ಅತ್ರರೂಪ್ಯತಾ' - 'ಇಲ್ಲಿ ರಜತತ್ವವು ಇದೆ' ಎಂದು ಭ್ರಮೆಯು ಹುಟ್ಟಬಹುದು. ಇದು ಕಪ್ಪೆಚಿಪ್ಪಿನಲ್ಲಿ ರಜತತ್ವದ ಆರೋಪ.

(2) 'ಇದಂ ರಜತಮ್'- 'ಇದು ಬೆಳ್ಳಿ' ಎಂದು ಭ್ರಮೆಯು ಹುಟ್ಟಬಹುದು. ಇದು ಕಪ್ಪೆಚಿಪ್ಪಿಗೆ ರಜತತಾದಾತ್ಮ್ಯದ ಆರೋಪ.

**'ಅನ್ಯೋನ್ಯಸ್ಮಿನ್ ಅನ್ಯೋನ್ಯಾತ್ಮಕತಾಮ್ ಅನ್ಯೋನ್ಯಧರ್ಮಾಂಶ್ಚ ಅಧ್ಯಸ್ಯ'**

- ಶಾಂಕರ ಅಧ್ಯಾಸ ಭಾಷ್ಯ 1.1.1

(3) ಪರಬ್ರಹ್ಮನಿಗೆ ಅಜ್ಞಾನವಿದೆ ಎಂದು ಮಾಯಾವಾದವು ಹೇಳುತ್ತದೆ. ಮುಂದಿನ ಪದ್ಯಗಳಲ್ಲಿ ಇದನ್ನು ನಿರಾಕರಿಸುತ್ತಾರೆ.

**ನಾಜ್ಞಾನಮಹಮಿತ್ಯಸ್ತಿ ನಾಜ್ಞಾನತ್ವಂ ಮಯೀತ್ಯಪಿ ।**
**ಭ್ರಮೋ ಬ್ರಹ್ಮಣಿ ತೇನ ಸ್ಯಾತ್ಕಥಮಜ್ಞಾನಕಲ್ಪನಾ ॥ ೫೦ ॥**

**ಅರ್ಥ**-ಬ್ರಹ್ಮಣಿ= ಬ್ರಹ್ಮನಲ್ಲಿ, ಅಜ್ಞಾನಮ್ ಅಹಮ್ ಇತಿ ಭ್ರಮಃ= 'ನಾನು ಅಜ್ಞಾನ' ಎಂಬ ಭ್ರಮೆಯು, ನ ಅಸ್ತಿ= ಇಲ್ಲ. ಮಯಿ ಅಜ್ಞಾನತ್ವಂ= ನನ್ನಲ್ಲಿ ಅಜ್ಞಾನತ್ವವು ಇದೆ. ಇತ್ಯಪಿ= ಎಂದೂ, ಭ್ರಮಃ= ಭ್ರಮೆಯು, ನ ಅಸ್ತಿ= ಇಲ್ಲ. ತೇನ= ಆದ್ದರಿಂದ, ಬ್ರಹ್ಮಣಿ= ಬ್ರಹ್ಮನಲ್ಲಿ, ಅಜ್ಞಾನಕಲ್ಪನಾ= ಅಜ್ಞಾನದ ಕಲ್ಪನೆಯು, ಕಥಮ್= ಹೇಗೆ?

**ಅನುವಾದ- 'ಅಜ್ಞಾನಮ್ ಅಹಮ್'= 'ನಾನು ಅಜ್ಞಾನ' ಎಂದು ಅಥವಾ 'ಮಯಿ ಅಜ್ಞಾನತ್ವಮ್'= 'ನನ್ನಲ್ಲಿ ಅಜ್ಞಾನತ್ವ' ಎಂದು ಭ್ರಮೆಯು ಬ್ರಹ್ಮನಿಗೆ ಇಲ್ಲ. ಆದ್ದರಿಂದ ಬ್ರಹ್ಮನಲ್ಲಿ ಅಜ್ಞಾನದ ಆರೋಪವು ಹೇಗೆ?**

**ಭಾವವಿಲಾಸಿನೀ–** ಅಸ್ತು ಭ್ರಾಂತೇರ್ದ್ವಿರೂಪತ್ವಮ್, ತಥಾಪಿ ಪ್ರಕೃತೇ ಕಿಮ್? ಇತ್ಯತ ಆಹ- **ನಾಜ್ಞಾನಮಿತಿ** ॥ ಬ್ರಹ್ಮಣಿ ಅಜ್ಞಾನಮಹಮಿತಿ ಭ್ರಮಃ ಅಜ್ಞಾನತಾದಾತ್ಮ್ಯಭ್ರಮಃ, ಮಯಿ ಅಜ್ಞಾನತ್ವಮಿತಿ ಸಂಸರ್ಗಾರೋಪಭ್ರಮಶ್ಚ ಯಸ್ಮಾನ್ನಾಸ್ತಿ ತದ್ರೀತ್ಯೈವ ನಾಸ್ತಿ ತೇನ ತತ್ತಸ್ಮತ್ತಾ-ಕಾರಭ್ರಮಾಭಾವೇನ ಅಜ್ಞಾನಕಲ್ಪನಾ ಅಜ್ಞಾನಾರೋಪಃ ಕಥಂ ಸ್ಯಾದಿತಿ ಸಂಬಂಧಃ ॥ ೫೦ ॥

**ವಿವರಣೆ–**'ಅಜ್ಞಾನಮಹಮ್'= 'ನಾನು ಅಜ್ಞಾನ'- ಇದು ಅಜ್ಞಾನ ತಾದಾತ್ಮ್ಯಾರೋಪ. 'ಮಯಿ ಅಜ್ಞಾನತ್ವಮ್'- 'ನನ್ನಲ್ಲಿ ಅಜ್ಞಾನತ್ವ' - ಇದು 'ಅಜ್ಞಾನತ್ವ' ಸಂಸರ್ಗದ ಆರೋಪ; ಇದೇ ಧರ್ಮಾರೋಪ. ಇವೆರಡು ಬ್ರಹ್ಮನಲ್ಲಿ - ಅವರ ದರ್ಶನದ ರೀತಿಯಿಂದ, ಇಲ್ಲ. ಆದ್ದರಿಂದ ಬ್ರಹ್ಮನಲ್ಲಿ ಅಜ್ಞಾನವಿದೆ ಎಂಬ ವಿಚಾರಕ್ಕೆ ಸಮರ್ಥನೆಯು ಇಲ್ಲ.

ಹಿಂದೆ ಹೇಳಿದ ಎರಡು ವಿಧವಾದ ಭ್ರಾಂತಿ ಇಲ್ಲದಿದ್ದರೂ, ಅಹಮ್ ಅಜ್ಞಃ - ನಾನು ಅಜ್ಞಾನವುಳ್ಳವನು ಎಂದು ಅಜ್ಞಾನಾರೋಪರೂಪವಾದ ಭ್ರಾಂತಿ ಇರಬಹುದು? ಎಂಬ ಪ್ರಶ್ನೆಗೆ ಉತ್ತರ.

**ಅಜ್ಞೋಽಹಮಿತಿ ತು ಜ್ಞಾನಂ ಸಿದ್ಧಾಜ್ಞಾನಸ್ಯ ವೇದನಮ್ ।**
**ಉಕ್ತಾಕಾರದ್ವಯಾಯೋಗಾತ್ ಸಿದ್ಧಿಶ್ಚ ಭ್ರಮರೂಪಿಣೀ ॥ ೫೧ ॥**

**ನಾಸ್ತ್ಯೇವೇತಿ ಕುತೋಽಜ್ಞಾನಂ ಕಲ್ಪಿತಂ ಸ್ಯಾದಿಯಂ ತು ಧೀಃ ।**
**ನಾಜ್ಞಾನಕಲ್ಪನಾರೂಪಾ ತತೋಽಜ್ಞಾನಮಕಲ್ಪಿತಮ್ ॥ ೫೨ ॥**

**ಅರ್ಥ**-ಅಜ್ಞಃ ಅಹಮ್ ಇತಿ ತು ಜ್ಞಾನಮ್= ನಾನು ಅಜ್ಞ ಎಂದು ಜ್ಞಾನವು, ಸಿದ್ಧಾಜ್ಞಾನಸ್ಯ= ಮೊದಲೇ ಸಿದ್ಧವಾದ ಅಜ್ಞಾನದ, ವೇದನಮ್= ಜ್ಞಾನವು, ಉಕ್ತಾಕಾರದ್ವಯಾಯೋಗಾತ್= (ಹಿಂದಿನ ಪದ್ಯದಲ್ಲಿ) ಹೇಳಲ್ಪಟ್ಟ ಎರಡು ಆಕಾರಗಳ ಭ್ರಮೆಯು ಅಯುಕ್ತವಾದ್ದರಿಂದ, ಭ್ರಮರೂಪಿಣೀ ಸಿದ್ಧಿಃ= ಭ್ರಮಾತ್ಮಕ ಸಿದ್ಧಿಯು (ಭ್ರಮೆಯ ಸಿದ್ಧಿಯು), ನಾಸ್ತಿ ಏವ= ಇಲ್ಲವೇ ಇಲ್ಲ. ಇತಿ= ಆದ್ದರಿಂದ, ಅಜ್ಞಾನಮ್= ಅಜ್ಞಾನವು, ಕುತಃ= ಯಾವ ಪ್ರಮಾಣದಿಂದ ಅಥವಾ ಏಕೆ, ಕಲ್ಪಿತಂ ಸ್ಯಾತ್?= ಕಲ್ಪಿತವಾಗುವುದು? ಇಯಂ ತು ಧೀಃ= ಈ ಜ್ಞಾನವು (ಅಹಮಜ್ಞಃ ಎಂಬ ಜ್ಞಾನವು) ನ ಅಜ್ಞಾನಕಲ್ಪನಾರೂಪಾ= ಅಜ್ಞಾನಕಲ್ಪನೆಯ ಆಕಾರವಲ್ಲ. ತತಃ= ಆದ್ದರಿಂದ, ಅಜ್ಞಾನಮ್= ಅಜ್ಞಾನವು, ಅಕಲ್ಪಿತಮ್= ಕಲ್ಪಿತವಲ್ಲ.

**ಅನುವಾದ**- 'ಅಜ್ಞೋಽಹಂ' 'ನಾನು ಅಜ್ಞ' ಎಂಬ ಜ್ಞಾನವು ಬೇರೆ ಪ್ರತೀತಿಯಿಂದ ಸಿದ್ಧವಾದ ಅಜ್ಞಾನದ ಜ್ಞಾನ. (ಹಿಂದಿನ ಪದ್ಯದಲ್ಲಿ) ಹೇಳಿದ ಎರಡು ವಿಧದ ಆಕಾರದ ಆರೋಪಗಳೇ ಅಜ್ಞಾನದ ಸಿದ್ಧಿ. ಈ ಆಕಾರದ ಆರೋಪಗಳಿಲ್ಲ. ಆದ್ದರಿಂದ ಅಜ್ಞಾನದ ಭ್ರಮಾತ್ಮಕ ಸಿದ್ಧಿಯು ಇಲ್ಲವೇ ಇಲ್ಲ. ಈ ಜ್ಞಾನವು= 'ಅಹಮಜ್ಞಃ' ಎಂಬ ಜ್ಞಾನವು - ಅಜ್ಞಾನಾರೋಪದ ಆಕಾರವಲ್ಲ. ಆದ್ದರಿಂದ ಅಜ್ಞಾನದ ಆರೋಪವು ಆಗಿಯೇ ಇಲ್ಲ.

**ಭಾವವಿಲಾಸಿನೀ**— ನನು ಅಹಮಜ್ಞಃ' ಇತ್ಯೇವಾಜ್ಞಾನಾರೋಪೋಽಸ್ತ್ವಿತ್ಯತ ಆಹ- **ಅಜ್ಞೋಽಹಮಿತಿ** ॥ ಅಹಮಜ್ಞ ಇತ್ಯರ್ಥಃ । ಇತಿ ಜ್ಞಾನಂ ತ್ವಿತಿ ಸಂಬಂಧಃ । ಸಿದ್ಧಾಜ್ಞಾನಸ್ಯ ವೇದನಂ ಪ್ರತೀತ್ಯಂತರಸಿದ್ಧಸ್ವರೂಪಸ್ಯಾತ್ಮನಿ ಸಂಸರ್ಗಮಾತ್ರವೇದನಮ್ । ಸಿದ್ಧಿಃ ಪ್ರಾಥಮಿಕೀ ಸಿದ್ಧಿಃ ನಾಸ್ತ್ಯೇವೇತಿ ಕೃತ್ವಾ ಜ್ಞಾನಂ ಕುತಃ ಕಲ್ಪಿತಂ ಸ್ಯಾದಿತಿ ಸಂಬಂಧಃ । ಇಯಂ ತು ಧೀಃ ಅಜ್ಞೋಽಹಮಿತಿ ಧೀಃ । ಅಜ್ಞಾನಕಲ್ಪನಾರೂಪಾ । ಅಜ್ಞಾನತಾದಾತ್ಮ್ಯಸ್ಯ ವಾ ಅಜ್ಞಾನತ್ವಾಖ್ಯ-ತದ್ಧರ್ಮಸ್ಯ ವಾಽತ್ರಾರೋಪಾದರ್ಶನಾದಿತಿ ಭಾವಃ । ತತಃ ಅಸ್ಯಾರೋಪರೂಪತ್ವಾ-ಭಾವಾತ್ । ಆರೋಪಾಂತರಸ್ಯ ಚೋಕ್ತರೀತ್ಯಾಽದರ್ಶನಾದಿತ್ಯರ್ಥಃ ॥ ೫೧-೫೨ ॥

**ವಿವರಣೆ–** 'ಅಹಮಜ್ಞಃ' - 'ನಾನು ಅಜ್ಞ' ಎಂಬ ಜ್ಞಾನವು ಇದೆ. ಇದು ಆತ್ಮನಲ್ಲಿ= ಬ್ರಹ್ಮನಲ್ಲಿ ಅಜ್ಞಾನವನ್ನು ವಿಷಯೀಕರಿಸುವ ಜ್ಞಾನ. ಈ ಜ್ಞಾನದಿಂದ ಬ್ರಹ್ಮನಿಗೆ ಅಜ್ಞಾನವಿದೆ ಎಂದು ಸಿದ್ಧವಾಗುತ್ತದೆ? ಇಲ್ಲ.

ಮೊದಲೇ ಅಜ್ಞಾನದ ಪರಿಚಯವಿದ್ದವನಿಗೆ 'ಅಹಮಜ್ಞಃ' ಎಂದು ಪ್ರತೀತಿಯು ಹುಟ್ಟಬಹುದು. ಅಜ್ಞಾನದ ಪ್ರಥಮ ಪರಿಚಯ ಎಂದರೆ 'ಅಜ್ಞಾನಮಹಂ' ಎಂಬ ಆಕಾರದ ಅಥವಾ 'ಮಯಿ ಅಜ್ಞಾನತ್ವಂ' ಎಂಬ ಆಕಾರದ ಆರೋಪ. ಈ ಆಕಾರದ ಆರೋಪಗಳು ಇಲ್ಲ. ಆದ್ದರಿಂದ ಅಜ್ಞಾನದ ಪ್ರಥಮ ಪರಿಚಯವು ಇಲ್ಲ. ಆದ್ದರಿಂದ 'ಅಹಮಜ್ಞಃ' ಎಂಬ ಪ್ರತೀತಿಯು ಆತ್ಮನಿಗೆ= ಬ್ರಹ್ಮನಿಗೆ ಹುಟ್ಟಲಾರದು.

**ನಾಜ್ಞಾನಮನ್ಯಧರ್ಮೋಽಯಂ ಬ್ರಹ್ಮಾಜ್ಞಾನೈಕವಾದಿನಃ ॥ ೫೩ ॥**

**ಅರ್ಥ**-ಬ್ರಹ್ಮಾಜ್ಞಾನೈಕವಾದಿನಃ= ಅಜ್ಞಾನವು ಬ್ರಹ್ಮನಲ್ಲಿ ಮಾತ್ರ ಇರುತ್ತದೆ ಎಂದು ಹೇಳುವವನ ಪ್ರಕಾರ, ಅಯಮ್ ಅಜ್ಞಾನಂ ಧರ್ಮಃ= ಈ ಅಜ್ಞಾನವೆಂಬ ಧರ್ಮವು, ನ ಅನ್ಯಧರ್ಮಃ= ಬೇರೆ ಚೇತನನ ಧರ್ಮವಲ್ಲ.

**ಅನುವಾದ-** ಅಜ್ಞಾನವು ಬ್ರಹ್ಮನನ್ನು ಮಾತ್ರ ಆಶ್ರಯಿಸಿದೆ ಎಂದು ಹೇಳುವ ಅದ್ವೈತ ಮತದ ಪ್ರಕಾರ ಅಜ್ಞಾನವು ಬೇರೆ ಚೇತನನ ಧರ್ಮವಲ್ಲ.

**ಭಾವವಿಲಾಸಿನೀ–** ನನು ತರ್ಹಿ ಪ್ರಾಕ್ಸಿದ್ಧಾಜ್ಞಾನಸಂಸರ್ಗಾರೋಪೋಽಯಮಸ್ತ್ವಿತ್ಯತ ಆಹ– **ನಾಜ್ಞಾನಮಿತಿ** ॥ ಅಯಮಜ್ಞಾನಂ ಧರ್ಮಃ ಅಜ್ಞಾನಾಖ್ಯೋ ಧರ್ಮ ಇತಿ ಯಾವತ್ । ಅನ್ಯ-ಧರ್ಮಃ ಬ್ರಹ್ಮವ್ಯತಿರಿಕ್ತಸ್ಯ ಕಸ್ಯಚಿದ್ಧರ್ಮೋ ನೇತಿ ಯೋಜನಾ । ತತ್ರ ಹೇತುಗರ್ಭವಿಶೇಷಣಮ್– **ಬ್ರಹ್ಮಾಜ್ಞಾನೈಕವಾದಿನ ಇತಿ** ॥ ಕೇವಲಂ ಬ್ರಹ್ಮಾಶ್ರಿತಮೇವಾಜ್ಞಾನಮಿತಿ ವಾದಿನಃ । ಆಶ್ರಯತ್ವ-ವಿಷಯತ್ವಭಾಗಿನೀ ನಿರ್ವಿಶೇಷಚಿತಿರೇವ ಕೇವಲೇತ್ಯುಕ್ತೇರಜ್ಞಾನಂ ಬ್ರಹ್ಮಾಶ್ರಿತಮೇವ ನಾನ್ಯಾಶ್ರಿತಮಿತಿ ಭಾವಃ ॥ ೫೩ ॥

**ವಿವರಣೆ–** ಬ್ರಹ್ಮನಲ್ಲಿ ಅಜ್ಞಾನದ ಆರೋಪವು ಆಗುವುದಿಲ್ಲ; ಬೇರೆ ಚೇತನನಲ್ಲಿ ಆಗಿರುತ್ತದೆ; ಬೇರೆ ಚೇತನನಲ್ಲಿ ಇದೆ ಎಂದು ಸಿದ್ಧವಾದ ಅಜ್ಞಾನದ ಸಂಸರ್ಗದ ಆರೋಪವು ಬ್ರಹ್ಮನಲ್ಲಿ ಆಗುತ್ತದೆ; ಈ ಆರೋಪವನ್ನು= ಭ್ರಮೆಯನ್ನು 'ಅಹಮಜ್ಞಃ' ಎಂಬ ಪದಗಳಿಂದ ಹೇಳುತ್ತೇವೆ; ಆದ್ದರಿಂದ ಬ್ರಹ್ಮನಲ್ಲಿ ಅಜ್ಞಾನದ ಆರೋಪವು ಉಪಪನ್ನ? ಇಲ್ಲ.

'ಆಶ್ರಯತ್ವವಿಷಯತ್ವಭಾಗಿನೀ ನಿರ್ವಿಶೇಷಚಿತಿರೇವ ಕೇವಲಾ' - ಇದು ಅದ್ವೈತ ದರ್ಶನದ ಹೇಳಿಕೆ. ನಿರ್ವಿಶೇಷ ಬ್ರಹ್ಮನೊಬ್ಬನೇ ಅಜ್ಞಾನಕ್ಕೆ ಆಶ್ರಯ ಮತ್ತು ವಿಷಯ ಎಂದು ಇದರ ಅರ್ಥ. ಆದ್ದರಿಂದ ಬೇರೆ ಚೇತನನಲ್ಲಿ ಅಜ್ಞಾನವು ಇಲ್ಲ. ಆದ್ದರಿಂದಲೇ ಅದರ ಸಂಸರ್ಗದ ಆರೋಪವು ಬ್ರಹ್ಮನಲ್ಲಿ ಆಗುವಂತಿಲ್ಲ. ಆದ್ದರಿಂದ 'ಅಹಮಜ್ಞಃ'

ಎಂಬ ಅನುಭವದ ಮಾತು ಬ್ರಹ್ಮನಲ್ಲಿ ಅಜ್ಞಾನತಾದಾತ್ಮ್ಯವಿದೆ ಅಥವಾ ಅಜ್ಞಾನತ್ವಸಂಸರ್ಗವಿದೆ ಎಂದು ತಿಳಿಯಲು ಉಪಯೋಗಿಯಾಗುವುದಿಲ್ಲ.

**ಅತದ್ವತಿ ಚ ತದ್ವತ್ವಜ್ಞಾನಂ ಚೇತ್ ಸ್ಯಾದಯಂ ಭ್ರಮಃ ।**
**ಅಜ್ಞಾನವಚ್ಚ ತೇ ಬ್ರಹ್ಮ ತದ್ವತ್ತಾಧೀಃ ಕಥಂ ಭ್ರಮಃ ॥ ೫೪ ॥**

**ಅರ್ಥ**-ಅಯಂ= ಇದು= ಅಹಮಜ್ಞಃ ಎಂಬ ಜ್ಞಾನವು, ತದ್ವತಿ = ಅಜ್ಞಾನವಿಲ್ಲದಿರುವಲ್ಲಿ, ತದ್ವತ್ವಜ್ಞಾನಂ ಚೇತ್ = ಅಜ್ಞಾನದ ಇರುವಿಕೆಯ ಜ್ಞಾನವಾದರೆ, ಭ್ರಮಃ ಸ್ಯಾತ್= ಭ್ರಮೆಯಾಗಬಹುದು. ತೇ = ನಿನ್ನ ಮತದಲ್ಲಿ, ಬ್ರಹ್ಮ ಚ= ಬ್ರಹ್ಮನು, ಅಜ್ಞಾನವತ್= ಅಜ್ಞಾನವುಳ್ಳವನೇ ಆಗಿದ್ದಾನೆ. ತದ್ವತ್ತಾಧೀಃ= ತನ್ನಲ್ಲಿ ಅಜ್ಞಾನವಿದೆ ಎಂಬ ಜ್ಞಾನವು, ಕಥಂ ಭ್ರಮಃ? = ಹೇಗೆ ಭ್ರಮೆಯಾದೀತು?

**ಅನುವಾದ**- ಅಜ್ಞಾನವಿಲ್ಲದ ಸ್ಥಳದಲ್ಲಿ ಅಜ್ಞಾನವಿದೆ ಎಂಬ ಜ್ಞಾನವು ಭ್ರಮೆಯಾಗಬಹುದು. ಬ್ರಹ್ಮನಲ್ಲಿ ಅಜ್ಞಾನವಿದೆ ಎಂದೇ ನಿನ್ನ ಮತ. ಆದ್ದರಿಂದ 'ನಾನು ಅಜ್ಞ' ಎಂಬ ಬ್ರಹ್ಮನ ಜ್ಞಾನವು ಭ್ರಮೆಯಾಗುವುದು ಹೇಗೆ? ಭ್ರಮೆಯಾಗಲಾರದು.

**ಭಾವವಿಲಾಸಿನೀ**- ಅಯಮಜ್ಞೋಽಹಮಿತ್ಯನುಭವಃ ಅತದ್ವತಿ ಅಜ್ಞಾನಾಭಾವವತಿ ತದ್ವತ್ತ್ವ-ಜ್ಞಾನಮಜ್ಞಾನವತ್ತ್ವಜ್ಞಾನಂ ಚೇದ್ ಭ್ರಮಃ ಸ್ಯಾತ್ । ಅಜ್ಞಾನಸಂಸರ್ಗಾರೋಪೋಽಪಿ ತದಾ ಸ್ಯಾದ್ ಯದ್ಯಜ್ಞಾನಾನಾಧಾರೇ ಬ್ರಹ್ಮಣಿ ಅಜ್ಞಾನಾಧಾರತ್ವಂ ಪ್ರತೀಯೇತ । ನಚೈವಂ ತವ ಮತಮಿತ್ಯಾಹ- **ಅಜ್ಞಾನವಚ್ಚೇತಿ** ॥ ತೇ ತವ ಮತೇ । ತದ್ವತ್ತಾಧೀಃ ಅಜ್ಞಾನವತ್ತಾಧೀಃ । ಅಜ್ಞಾನಸಂಸರ್ಗಧೀರಿತಿ ಯಾವತ್ । ಸಂಸರ್ಗರಹಿತೇ ಸಂಸರ್ಗಜ್ಞಾನಂ ಹಿ ಭ್ರಮಃ ಸ್ಯಾತ್ । ನಚೇದಂ ಜ್ಞಾನಂ ತಾದೃಶಮಿತಿ ಭಾವ ಃ ॥ ೫೪ ॥

**ವಿವರಣೆ**- 'ಅಹಮಜ್ಞಃ' ಎಂಬ ಅನುಭವವು, ಅಜ್ಞಾನವಿಲ್ಲದವನಲ್ಲಿ ಅಜ್ಞಾನ ಸಂಸರ್ಗದ ಪ್ರತೀತಿಯು ಆಗಿದ್ದಿದ್ದರೆ, ಭ್ರಮೆಯಾಗುತ್ತಿತ್ತು. ಅದ್ವೈತಮತದಲ್ಲಿ ಬ್ರಹ್ಮನಿಗೆ ಅಜ್ಞಾನವಿದೆ. ಆದ್ದರಿಂದ ಈ ಅನುಭವವು ಅಜ್ಞಾನವು ಇರುವವನಲ್ಲಿ ಅಜ್ಞಾನವಿದೆ ಎಂಬ ಪ್ರತೀತಿ. ಆದ್ದರಿಂದ 'ಅಹಮಜ್ಞಃ' - ಈ ಪ್ರತೀತಿಯು ಭ್ರಮೆ ಅಲ್ಲ.

**ಅಜ್ಞಾನಾರೋಪತಸ್ತತ್ರ ತದ್ಯೋಗಸ್ಯಾಪ್ಯಭಾವವಾಕ್ ।**
**ಅಜ್ಞಾನಾರೋಪಮೂಲೈವ ಸ ಚ ಸರ್ವತ್ರ ದುರ್ಲಭಃ ॥ ೫೫ ॥**

**ಅರ್ಥ**-ತತ್ರ= ಬ್ರಹ್ಮನಲ್ಲಿ, ಅಜ್ಞಾನಾರೋಪತಃ= ಅಜ್ಞಾನದ ಆರೋಪದಿಂದಾಗಿ, ತದ್ಯೋಗಸ್ಯ= ಅಜ್ಞಾನ ಸಂಬಂಧದ, ಅಭಾವವಾಕ್ ಅಪಿ= ಅಭಾವದ ಮಾತು ಕೂಡ,

ಅಜ್ಞಾನಾರೋಪ ಮೂಲಾ ಏವ= ಅಜ್ಞಾನಾರೋಪವೇ ಕಾರಣವಾಗಿವುಳ್ಳದ್ದು. ಸಚ= ಅಜ್ಞಾನಾರೋಪವಾದರೂ, ಸರ್ವತ್ರ= ಎಲ್ಲ ಕಡೆ, ದುರ್ಲಭಃ= ಸಿಗುವುದಿಲ್ಲ.

**ಅನುವಾದ-** ಅಜ್ಞಾನವು ಬ್ರಹ್ಮನಲ್ಲಿ ಆರೋಪಿತ. ಆದ್ದರಿಂದ ಅವನಲ್ಲಿ 'ಅಜ್ಞಾನ ಸಂಬಂಧವು ಇಲ್ಲ. 'ಅಹಮಜ್ಞಃ'- ಈ ಪ್ರತೀತಿಯು ಇಲ್ಲದ ಅಜ್ಞಾನ ಸಂಬಂಧವನ್ನು ವಿಷಯೀಕರಿಸುತ್ತದೆ; ಆದ್ದರಿಂದ ಇದು ಭ್ರಮೆ? ಇಲ್ಲ.

ಅಜ್ಞಾನ ಸಂಬಂಧವು ಆರೋಪಿತ ಎಂಬ ಮಾತಿಗೆ ಅಜ್ಞಾನಾರೋಪವು ಮೂಲ. ಅಜ್ಞಾನದ ಆರೋಪವು ಎಲ್ಲಿಯೂ - ಬ್ರಹ್ಮನಲ್ಲಿ ಅಥವಾ ಬೇರೆ ಚೇತನದಲ್ಲಿ ಉಪಪನ್ನವಲ್ಲ.

**ಭಾವವಿಲಾಸಿನೀ–** ನನ್ವಜ್ಞಾನಮೇವ ತತ್ರಾರೋಪಿತಮ್, ಅತಸ್ತತ್ಸಂಸರ್ಗಧೀರಪಿ ಭ್ರಮ ಇತ್ಯತ ಆಹ– **ಅಜ್ಞಾನಾರೋಪತ ಇತಿ** ॥ ಅಜ್ಞಾನಾರೋಪತ ಅಜ್ಞಾನಸ್ಯ ಮಿಥ್ಯಾತ್ವೇನಾರೋಪಿತತ್ವಾತ್ । ತತ್ರ ಬ್ರಹ್ಮಣಿ । ತದ್ಯೋಗಸ್ಯಾಜ್ಞಾನಸಂಸರ್ಗಸ್ಯ ಅಭಾವವಾಗ್ ಅಭಾವ ಇತಿ ವಾಕ್ ಅಜ್ಞಾನಾರೋಪಮೂಲೈವ । ಅಜ್ಞಾನಾರೋಪೇ ಸಿದ್ಧೇ ಹಿ ಆರೋಪಿತಸ್ಯ ತಸ್ಯ ಸಂಸರ್ಗೋಽಪ್ಯಾರೋಪಿತಃ ಸ್ಯಾದಿತಿ ಭಾವಃ । ಸಚ ಸಂಸರ್ಗಾರೋಪಮೂಲೀಭೂತಾಜ್ಞಾನಾರೋಪಸ್ಸರ್ವತ್ರ ಬ್ರಹ್ಮಣ್ಯನ್ಯತ್ರ ಚ ದುರ್ಲಭಃ । ಉಕ್ತರೀತ್ಯಾಽಽಜ್ಞಾನತಾದಾತ್ಮ್ಯಾರೋಪಸ್ಯಾಜ್ಞಾನತ್ವರೂಪ ತದ್ಧರ್ಮಾರೋಪಸ್ಯ ಚ ಕ್ವಾಪ್ಯದರ್ಶನಾತ್ । ತತಶ್ಚಾಜ್ಞಾನಸ್ಯಾನಾರೋಪಿತತ್ವಾತ್ ತತ್ಸಂಸರ್ಗಸ್ಯಾಪ್ಯಾರೋಪಿತತ್ವಪಕ್ಷೋ ನ ಘಟತೇ ಘಟಾದೌ ಜಡೇ ಜ್ಞಾನಸಂಸರ್ಗರಹಿತೇ ತತ್ಸಂಸರ್ಗಪ್ರತೀತೌ ಸಂಸರ್ಗಾರೋಪಃ ಸ್ಯಾತ್ । ನಚೈವಮ್ । ಅತಸ್ಸಂಸರ್ಗೋಽಪ್ಯನಾರೋಪಿತ ಏವೇತಿ ಭಾವಃ ॥ ೫೫ ॥

**ವಿವರಣೆ–** ಯಾವುದರ ಆರೋಪವು ಒಂದು ಸ್ಥಳದಲ್ಲಿ ಆಗುವುದೋ ಅದು ಇನ್ನೊಂದು ಸ್ಥಳದಲ್ಲಿ ಸತ್ಯವಾಗಿರುತ್ತದೆ. ರಜತತ್ವದ ಆರೋಪವು ಶುಕ್ತಿಯಲ್ಲಿ ಆಗುತ್ತದೆ. ಅದು ರಜತದಲ್ಲಿ ಸತ್ಯ. ಅಜ್ಞಾನದ ಆರೋಪವು ಬ್ರಹ್ಮನಲ್ಲಿ ಆಗುವುದಾದರೆ ಅದು ಎಲ್ಲಿ ಸತ್ಯವಾಗಿ ಇದೆ? ಬೇರೆ ಯಾವ ವಸ್ತುವೂ ಸತ್ಯವಲ್ಲ? ಆದ್ದರಿಂದ ಬ್ರಹ್ಮನಲ್ಲಿ ಅಜ್ಞಾನದ ಆರೋಪವು ಉಪಪನ್ನವಲ್ಲ. ಹೀಗೆ ಬ್ರಹ್ಮನಲ್ಲಿ ಅಜ್ಞಾನಾರೋಪವು ಅನುಪಪನ್ನವಾಗಿರುವಾಗ ಅವನಲ್ಲಿ ಅಜ್ಞಾನಸಂಬಂಧವಿಲ್ಲ ಎಂಬ ಮಾತು ಹೇಗೆ ತಾನೇ ಉಪಪನ್ನವಾದೀತು?

**ಅನ್ಯೋನ್ಯಧರ್ಮಾಧ್ಯಾಸೋಽಸ್ತಿ ತತ್ರಾಧ್ಯಾಸಸ್ತವಾಪಿ ನ ।**
**ಅತೋ ನಾಜ್ಞಾನಸಂಸರ್ಗಾರೋಪೋಽಪ್ಯಯಮಭೂತ್ ತವ ॥ ೫೬ ॥**

**ಅರ್ಥ-** ತವ= ನಿನ್ನ ಮತದಲ್ಲಿ, ಅನ್ಯೋನ್ಯಧರ್ಮಾಧ್ಯಾಸಃ ಅಸ್ತಿ= ಎರಡು ವಸ್ತುಗಳಲ್ಲಿ ಒಂದು ವಸ್ತುವಿನ ಧರ್ಮದ ಅಧ್ಯಾಸವು ಇನ್ನೊಂದರಲ್ಲಿ ಆಗುತ್ತದೆ. ತತ್ರ= ಅಲ್ಲಿ (ಆತ್ಮನಲ್ಲಿ)

ಅಧ್ಯಾಸಃ= ಅಜ್ಞಾನದ ಅಧ್ಯಾಸವು, ತವ ಅಪಿ= ನಿನ್ನ ಪ್ರಕಾರವೂ, ನ= ಇಲ್ಲ. ಅತಃ= ಆದ್ದರಿಂದ, ತವ= ನಿನ್ನ ಮತದಲ್ಲಿ, ಅಯಮ್= ಇದು (ಅಹಮಜ್ಞಃ ಎಂಬ ಪ್ರತೀತಿಯು) ಅಜ್ಞಾನ ಸಂಸರ್ಗಾರೋಪೋಽಪಿ= ಅಜ್ಞಾನ ಸಂಸರ್ಗದ ಆರೋಪವೂ, ನ ಅಭೂತ್= ಆಗಲಿಲ್ಲ.

**ಅನುವಾದ-** ಅದ್ವೈತ ದರ್ಶನವು ಅನ್ಯೋನ್ಯಧರ್ಮಾಧ್ಯಾಸವನ್ನು ಅಂಗೀಕರಿಸಿದೆ. ಉದಾ : ಆತ್ಮನಲ್ಲಿ ದೇಹಧರ್ಮಗಳ ಅಧ್ಯಾಸ, ದೇಹದಲ್ಲಿ ಆತ್ಮಧರ್ಮಗಳ ಅಧ್ಯಾಸ. ಈ ನಿನ್ನ ದರ್ಶನದ ಪ್ರಕಾರ ಆತ್ಮನಲ್ಲಿ ಅಜ್ಞಾನದ ಅಧ್ಯಾಸವು ಇಲ್ಲ (ಅದು ಆತ್ಮವಲ್ಲದ ವಸ್ತುವಿಗೆ ಧರ್ಮವಲ್ಲವಾದ್ದರಿಂದ). ಆದ್ದರಿಂದ ನೀನು ಹೇಳುವ ಅಜ್ಞಾನ ಸಂಸರ್ಗಾರೋಪವು ಇಲ್ಲ.

**ಭಾವವಿಲಾಸಿನೀ–** ಅಹಮಜ್ಞ ಇತಿ ಜ್ಞಾನಸ್ಯಾಜ್ಞಾನಾರೋಪತ್ವಪಕ್ಷೇಽಪಸಿದ್ಧಾಂತಶ್ಚ ಸ್ಯಾದಿತ್ಯಾಹ- **ಅನ್ಯೋನ್ಯೇತಿ** ॥ ಅನ್ಯೋನ್ಯಧರ್ಮಾಧ್ಯಾಸಃ ದೇಹಧರ್ಮಸ್ಯ ಕೃಶತ್ವಾದೇಃ ತವ ಮತೇ ಆತ್ಮನ್ಯಧ್ಯಾಸೋಽಸ್ತಿ । ತತ್ರಾತ್ಮನಿ ಅಧ್ಯಾಸಃ ಧರ್ಮಿಣ ಏವ । ಅನ್ಯೋನ್ಯಾತ್ಮಕತಾಮಿತ್ಯುಕ್ತ್ಯಾ ದೇಹತಾದಾತ್ಮ್ಯಾರೋಪಾಂಗೀಕಾರೇಽಪಿ ಮಯಿ ದೇಹ ಇತಿ ದೇಹಾಧಾರತ್ವಾದಿಭ್ರಮಸ್ತವಾಪಿ ಮತೇನ । ಏವಂ ಚಾಜ್ಞಾನತಾದಾತ್ಮ್ಯಾರೋಪಸಂಭವೇಽಪ್ಯಜ್ಞಾನಂ ಮಯೀತಿ ಸಂಸರ್ಗಾರೋಪಃ ಕಥಂಸ್ಯಾತ್? ಕಿಂತ್ವಜ್ಞಾನತ್ವರೂಪಾಜ್ಞಾನಧರ್ಮಸ್ಯೈವ ಸಂಸರ್ಗಾರೋಪೋ ವಾಚ್ಯಃ । ದೇಹಸ್ಯೇವಾಜ್ಞಾನಸ್ಯೈವ ಸಂಸರ್ಗಾರೋಪೇಽಪಿ ಕಥಂ ನಾಪಸಿದ್ಧಾಂತಃ ಇತಿ ಭಾವಃ । ಅತಃ ಅಜ್ಞಾನತ್ವಧರ್ಮಸಂಸರ್ಗಾರೋಪಸ್ಯೈವ ಸಂಸರ್ಗಾರೋಪತ್ವಾತ್ । ಅಯಮಜ್ಞಾನವಾನಹಮಿತ್ಯನುಭವಃ ಅಜ್ಞಾನಸಂಸರ್ಗಾರೋಪೋಽಪಿ ನಾಭೂದಿತ್ಯನ್ವಯಃ । ಅಪಿಪದೇನಾಜ್ಞಾನಸ್ವರೂಪಾರೋಪತ್ವಾಭಾವಂ ಸಮುಚ್ಚಿನೋತಿ ॥ ೫೬ ॥

**ವಿವರಣೆ–** ಅದ್ವೈತ ದರ್ಶನವು ಎರಡು ವಿಧ ಅಧ್ಯಾಸವನ್ನು ಅಂಗೀಕರಿಸಿದೆ. (1) ಅನ್ಯೋನ್ಯಧರ್ಮಾಧ್ಯಾಸ, (2) ಅನ್ಯೋನ್ಯತಾದಾತ್ಮ್ಯಾಧ್ಯಾಸ. ಆತ್ಮವೇ ದೇಹ, ದೇಹವೇ ಆತ್ಮ ಎಂಬ ಭ್ರಮೆಯು ಅನ್ಯೋನ್ಯತಾದಾತ್ಮ್ಯಾಧ್ಯಾಸ. ಹೀಗೆಯೇ, ಆತ್ಮನೇ ಅಜ್ಞಾನ, ಅಜ್ಞಾನವೇ ಆತ್ಮ ಎಂಬ ಅಧ್ಯಾಸವು ಆಗಬಹುದು. ಆದರೆ 'ಆತ್ಮನಲ್ಲಿ ಅಜ್ಞಾನ' ಎಂಬ ಅಧ್ಯಾಸಕ್ಕೆ ಅವಕಾಶವಿಲ್ಲ; ಅಜ್ಞಾನವು ಆತ್ಮವಲ್ಲದ ವಸ್ತುವಿನ ಧರ್ಮವಲ್ಲವಾದ್ದರಿಂದ. ಅದ್ವೈತ ದಾರ್ಶನಿಕರು ಹೇಳುವ ಅಜ್ಞಾನಸಂಸರ್ಗದ ಆರೋಪವು ಸರ್ವಥಾ ಅನುಪಪನ್ನ.

ತತ್ರೈವ ಸನ್ನಿಕೃಷ್ಟಸ್ಯ ಸನ್ನಿಕರ್ಷೇ ಕಥಂ ಭ್ರಮಃ ।
ಘಟವದ್ಭೂಮಿಘಟಯೋಃ ಸಂಯೋಗೋ ಯದಕಲ್ಪಿತಃ ॥ ೫೭ ॥

**ಅರ್ಥ-** ತತ್ರೈವ = ಅಲ್ಲಿಯೇ(ಧರ್ಮಿಯಲ್ಲೇ) ಸನ್ನಿಕೃಷ್ಟಸ್ಯ= ಸನ್ನಿಕರ್ಷವುಳ್ಳವಸ್ತುವಿನ, ಸನ್ನಿಕರ್ಷೇ= ಸನ್ನಿಕರ್ಷವಿಷಯದಲ್ಲಿ, ಭ್ರಮಃ = ಭ್ರಮೆಯು, ಕಥಂ= ಹೇಗಾದೀತು?

ಯತ್= ಏಕೆಂದರೆ, ಘಟವದ್ಭೂಮಿಘಟಯೋಃ = ಘಟವಿರುವ ಭೂಮಿ ಮತ್ತು ಘಟಗಳ, ಸಂಯೋಗಃ= ಸಂಯೋಗವು, ಅಕಲ್ಪಿತಃ = ಕಲ್ಪಿತವಾದದ್ದಲ್ಲ.

**ಅನುವಾದ-** ಘಟದ ಸಂಬಂಧವುಳ್ಳ ಭೂಮಿ ಮತ್ತು ಘಟದ ಸಂಯೋಗವು ಕಲ್ಪಿತವಲ್ಲ. ಒಂದು ಕಡೆ ಒಂದು ವಸ್ತುವಿದ್ದರೆ ಆ ಸ್ಥಳ ಮತ್ತು ಆ ವಸ್ತುವಿನ ಸಂಬಂಧವು ವಾಸ್ತವಿಕ. ಈ ಸಂಬಂಧದ ಜ್ಞಾನವು ಹೇಗೆ ತಾನೇ ಭ್ರಮೆಯಾಗುತ್ತದೆ? ಅಜ್ಞಾನವು ಬ್ರಹ್ಮನಲ್ಲಿ ಇದೆ ಎಂದು ನಿಮ್ಮ ಸಿದ್ಧಾಂತ. ಆದ್ದರಿಂದ ನಾನು ಅಜ್ಞ ಎಂದು ಬ್ರಹ್ಮನು ತಿಳಿದರೆ ಇದು ಯಥಾರ್ಥಜ್ಞಾನವೇ. ಆದ್ದರಿಂದ ಬ್ರಹ್ಮನಲ್ಲಿ ಅಜ್ಞಾನ ಸಂಸರ್ಗವು ಆರೋಪಿತವೆನ್ನುವುದು ಯುಕ್ತವಲ್ಲ.

**ಭಾವವಿಲಾಸಿನೀ–**ತತ್ರೈವ ಧರ್ಮಿಣಿ ಸನ್ನಿಕೃಷ್ಟಸ್ಯ ಸನ್ನಿಕರ್ಷವತಃ । ಸನ್ನಿಕರ್ಷೇ ಸನ್ನಿಕರ್ಷವಿಷಯೇ । ವಸ್ತುಗತ್ಯಾ ಘಟವತೀಯಂ ಭೂಮಿಃ ತಸ್ಯಾಘಟಸ್ಯ ಚ ಸಂಯೋಗಃ ಯದ್ಯಸ್ಮಾದಕಾಲ್ಪನಿಕಃ । ತಸ್ಮಾದಜ್ಞಾನವತಿ ಅಜ್ಞಾನಸಂಸರ್ಗಾರೋಪೋಽಪಿ ನ ಘಟತ ಇತಿ ಭಾವಃ ॥ ೫೭ ॥

ದೋಷಾಭಾವಾಚ್ಚ ನಾಜ್ಞಾನಭ್ರಾಂತಿರ್ಯುಕ್ತಾ ಮತೇ ತವ ।
ತಮೋಽನ್ಯಭ್ರಮದೋಷೋಽಪಿ ನಹಿ ದೋಷಃ ಸ್ವದರ್ಶನೇ ॥ ೫೮ ॥

**ಅರ್ಥ-**ದೋಷಾಭಾವಾಚ್ಚ= ದೋಷವಿಲ್ಲದಿರುವುದರಿಂದಲೂ, ತವ ಮತೇ= ನಿನ್ನ ಮತದಲ್ಲಿ, ಅಜ್ಞಾನಭ್ರಾಂತಿಃ= ಅಜ್ಞಾನದ ಭ್ರಾಂತಿಯು, ನ ಯುಕ್ತಾ= ಯುಕ್ತವಲ್ಲ. ತಮಃ= ಅಂಧಕಾರವು, ಅನ್ಯಭ್ರಮದೋಷೋಽಪಿ= ಘಟಾದಿ ಪದಾರ್ಥಗಳ ಭ್ರಮೆಯು ಹುಟ್ಟಲು ಕಾರಣವಾದ ದೋಷವಾದರೂ, ಸ್ವದರ್ಶನೇ= ತನ್ನ (ಅಂಧಕಾರದ)ಜ್ಞಾನವು ಹುಟ್ಟಲು ಕಾರಣವಾದ, ದೋಷೋ ನ ಹಿ= ದೋಷವಲ್ಲವಷ್ಟೇ.

**ಅನುವಾದ-** ಭ್ರಾಂತಿಯು ದೋಷದಿಂದ ಉಂಟಾಗುತ್ತದೆ. ಪ್ರಕೃತ, ಭ್ರಾಂತಿಕಾರಣವಾದ ಯಾವ ದೋಷವೂ ಬ್ರಹ್ಮನಿಗೆ ಇಲ್ಲ. ಆದ್ದರಿಂದ ಬ್ರಹ್ಮನಿಗೆ 'ನಾನು ಅಜ್ಞ' ಎಂಬ ಭ್ರಾಂತಿಯು ಬರಲು ಸಾಧ್ಯವಿಲ್ಲ. ಅಜ್ಞಾನವೇ ದೋಷ; ಇದರಿಂದ ಅವನಿಗೆ ಭ್ರಮೆಯು ಬರಬಹುದು? ಇಲ್ಲ. ಅಂಧಕಾರವು ಘಟದ ಭ್ರಾಂತಿಗೆ ಕಾರಣವಾಗಬಹುದು. ಆದರೆ 'ಇದು ಅಂಧಕಾರ' ಎಂಬ ಭ್ರಾಂತಿಗೆ ಜನಕವಾಗಲಾರದು. ಅದರಂತೆ ಅಜ್ಞಾನದ ಭ್ರಾಂತಿಗೆ ಕಾರಣವಾದ ದೋಷವು ಅಜ್ಞಾನವೇ ಆಗಲಾರದು. ಆದ್ದರಿಂದಲೂ ಬ್ರಹ್ಮನಿಗೆ 'ಅಹಮಜ್ಞಃ' ಎಂಬ ಭ್ರಾಂತಿ ಕೂಡಲಾರದು.

**ಭಾವವಿಲಾಸಿನೀ–ದೋಷಾಭಾವಾಚ್ಚ** ನಾಜ್ಞಾನಾರೋಪ ಇತ್ಯಾಹ–**ದೋಷೇತಿ** ॥ ತವ ಮತೇ । ನನ್ವಜ್ಞಾನಸ್ಯೈವಾಜ್ಞಾನಾರೋಪೇ ದೋಷತ್ವಮಸ್ತ್ವಿತ್ಯಾಶಂಕ್ಯ ಬಹುಧಾ ದೂಷಯತಿ– ತಮ

ಇತಿ ॥ ತಮಃ ಅಂಧಕಾರಃ ಅನ್ಯಭ್ರಮೇ ದೋಷಃ ಘಟಾದಿಭ್ರಮೇ ದೋಷೋಽಪಿ ಸ್ವದರ್ಶನೇಽಂಧಕಾರಸ್ಯೈವ ದರ್ಶನೇ ದೋಷೋ ನಹಿ । ಅಂಧಕಾರೇ ಸತ್ಯಂಧಕಾರ-ಪ್ರವೋದಯದರ್ಶನಾತ್ । ಏವಮಜ್ಞಾನೇ ಸತ್ಯಜ್ಞಾನವಶಾದಹಂ- ಮಮತಾದಿ-ಸಾಂಸಾರಿಕಭ್ರಮೋಽಸ್ತು ಅಜ್ಞಾನಸ್ಯ ಸ್ವಸ್ಯ ತು ಪ್ರಮೈವ ಸ್ಯಾತ್ ನ ಭ್ರಮ ಇತಿ ಭಾವಃ । ದೋಷೋ ಹಿ ಸ್ವಯಂ ವಿದ್ಯಮಾನ ಏವ ಭ್ರಮಕಾರಣಂ ಸ್ಯಾತ್ । ವಿದ್ಯಮಾನಸ್ಯ ಚ ಕಥಂ ಭ್ರಮ ಇತಿ ಭಾವಃ ॥ ೫೮ ॥

ಬ್ರಹ್ಮನ ಯಾವ ಅಜ್ಞಾನವು (ಇ) ಆರೋಪಿತವೋ ಅದಕ್ಕಿಂತ ಮೊದಲು ಇನ್ನೊಂದು ಅಜ್ಞಾನವು (ಅ) ಇರುತ್ತದೆ. 'ಅ' ಅಜ್ಞಾನದಿಂದ 'ಇ' ಅಜ್ಞಾನವು ಆರೋಪಿತವಾಗುತ್ತದೆ?

ತಮೋಂತರಂ ಚ ತಮಸಃ ಪ್ರಮಾಯೈ ಸ್ಯಾದ್ ಭ್ರಮಾಯ ನ ।
ತೇನಾಜ್ಞಾನಾಂತರಂ ಚಾಜ್ಞಾನಸ್ಯೋಪೋದ್ಬಲಕಂ ಭವೇತ್ ॥ ೫೯ ॥

ಪ್ರಮಾಯಾ ಏವ ಹೇತುಃ ಸ್ಯಾತ್ತದ್ಭೂಯಸ್ತ್ವೇ ಕ್ವ ತದ್ ಭ್ರಮಃ ।
ಅತದ್ವತಿ ಹಿ ತದ್ಧೀತ್ವೇ ಭ್ರಮಃ ಸ್ಯಾನ್ನತು ತದ್ವತಿ ॥ ೬೦ ॥

**ಅರ್ಥ-** ತಮೋಂತರಂ ಚ= ಇನ್ನೊಂದು (೨) ಅಂಧಕಾರವು, ತಮಸಃ= ಅಂಧಕಾರದ (೧), ಪ್ರಮಾಯೈ ಸ್ಯಾತ್= ಯಥಾರ್ಥಜ್ಞಾನಕ್ಕೆ ಕಾರಣವಾಗುತ್ತದೆ. ತೇನ= ಆದ್ದರಿಂದ, ಅಜ್ಞಾನಾಂತರಂ ಚ= (ಇ) ಅಜ್ಞಾನವು, ಅಜ್ಞಾನಸ್ಯ= (ಅ) ಅಜ್ಞಾನಕ್ಕೆ, ಉಪೋದ್ಬಲಕಂ= ಬಲಪ್ರದವೇ, ಭವೇತ್= ಆಗುತ್ತದೆ. ಪ್ರಮಾಯಾಃ ಏವ= ((ಈ ಅಜ್ಞಾನವು) 'ಅ' ಅಜ್ಞಾನದ ಯಥಾರ್ಥಜ್ಞಾನಕ್ಕೇ, ಹೇತುಃ ಸ್ಯಾತ್= ಕಾರಣವಾಗುತ್ತದೆ. ತದ್ ಭೂಯಸ್ತ್ವೇ= ಆ ಅಜ್ಞಾನವು ಹೆಚ್ಚು ಸಂಖ್ಯೆಯಲ್ಲಿ ಇದ್ದಾಗ, ತದ್‌ಭ್ರಮಃ= ಆ ಅಜ್ಞಾನದ ಭ್ರಮೆಯು, ಕ್ವ ?= ಎಲ್ಲಿ ಹುಟ್ಟಬೇಕು? ಹಿ= ಏಕೆಂದರೆ, ಅತದ್ವತಿ= ಅದು ಇಲ್ಲದ ಕಡೆ, ತದ್ಧೀತ್ವೇ= ಅದು ಎಂಬ ಪ್ರತೀತಿಯು ಉಂಟಾದರೆ, ಭ್ರಮಃ ಸ್ಯಾತ್= (ಆ ಪ್ರತೀತಿಯು) ಭ್ರಮೆಯಾಗುತ್ತದೆ. ತದ್ವತಿ= ಅದು ಇರುವಲ್ಲೇ, ತದ್ಧೀತ್ವೇ= ಅದು ಎಂಬ ಪ್ರತೀತಿಯು ಉಂಟಾದರೆ, ನತು= (ಆ ಪ್ರತೀತಿಯು) ಭ್ರಮೆ ಆಗುವುದೇ ಇಲ್ಲ.

**ಅನುವಾದ-** (ಇಲ್ಲ.) ಒಂದು ಅಂಧಕಾರ (೧) ದಿಂದ ಇನ್ನೊಂದು ಅಂಧಕಾರದ (೨) ಆರೋಪವು ಆಗುವುದಿಲ್ಲ. ಎರಡನೆಯ ಅಂಧಕಾರಜ್ಞಾನದಿಂದ, ಒಂದನೆಯ ಅಂಧಕಾರದ ಜ್ಞಾನವು 'ಪ್ರಮಾ' ಎಂದೇ ಸಿದ್ಧವಾಗುತ್ತದೆ. ಅಂತೆಯೇ 'ಅ' ಅಜ್ಞಾನವು 'ಇ' ಅಜ್ಞಾನವನ್ನು 'ಅಜ್ಞಾನ' ಎಂದು ದೃಢೀಕರಿಸುತ್ತದೆ. ಅಂಧಕಾರದ ಮತ್ತು ಅಜ್ಞಾನದ ಸಂಖ್ಯಾಬಾಹುಲ್ಯವು ಆ ರಾಶಿಯಲ್ಲಿನ ಪ್ರತಿಯೊಂದು ಅಂಧಕಾರವೂ ಅಂಧಕಾರವೇ ಎಂದು, ಪ್ರತಿಯೊಂದು ಅಜ್ಞಾನವೂ ಅಜ್ಞಾನವೇ ಎಂದು ದೃಢೀಕರಿಸುತ್ತದೆ. ಅಜ್ಞಾನದ ಪ್ರತೀತಿಯು ಭ್ರಮೆಯಾಗಲು

ಯಾವ ಕಾರಣವೂ ಇಲ್ಲ. ಒಂದು ಧರ್ಮವು ಇಲ್ಲದ ಸ್ಥಳದಲ್ಲಿ ಆ ಧರ್ಮವು ಇದೆ ಎಂಬ ಜ್ಞಾನವು ಭ್ರಮೆ. ಧರ್ಮವು ಇರುವ ಸ್ಥಳದಲ್ಲಿ ಧರ್ಮದ ಜ್ಞಾನವು ಭ್ರಮೆ ಅಲ್ಲ.

**ಭಾವವಿಲಾಸಿನೀ–** ನನೂತ್ತರಾಜ್ಞಾನಸ್ಯ ಪೂರ್ವಾಜ್ಞಾನಂ ದೋಷಃ ಸ್ಯಾದಿತ್ಯತ ಆಹ– **ತಮೋಽಂತರಮಿತಿ** ॥ ಯಸ್ಮಾತ್ ತಮೋಽಂತರಂ ತಮಸಃ ಪ್ರಮಾಯ್ಯೆ ಸ್ಯಾತ್ । ತೇನ ತಮಸಃ ತಮೋಽಂತರಪ್ರಮಾನುಕೂಲತ್ವೇನ । ಅಜ್ಞಾನಸ್ಯೋಪೋದ್ವಲಕಂ ದಾರ್ಢ್ಯಸಂಪಾದಕಮ್ । ಅತಃ ಪ್ರಮಾಯಾ ಏವ ಹೇತುಃ ಸ್ಯಾದಿತಿ ಸಂಬಂಧಃ । ಅಜ್ಞಾನಬಾಹುಲ್ಯೇ ಅಜ್ಞಾನಸ್ಯ ಸುತರಾಂ ಪ್ರಮ್ಯೆವ ಸ್ಯಾದಿತಿ ಭಾವಃ । ತತ್ರ ಹೇತುಂ ಸ್ಫೋರಯತಿ– **ತದ್ಭೂಯಸ್ತ್ವ ಇತಿ** ॥ ತಸ್ಯ ವಸ್ತುನಃ ಭೂಯಸ್ತ್ವೇ ನಿಬಿಡತ್ವೇ ತದ್ ಭ್ರಮಃ ಕ್ವ ವಿರಲತಮಸಿ ಛಾಯಾದೌ ಕದಾಚಿತ್ತಮೋ ನೇತಿ ಭ್ರಮಸಂಭವೇಽಪಿ ನಿಶಾಯಾಂ ಗುಹಾದೌ ಚ ನಿಬಿಡೇಽಂಧ- ಕಾರೇಽಂಧಕಾರ-ಭ್ರಮಾದರ್ಶನಾದಿತಿ ಭಾವಃ । ತದೇವಾನುಭಾವಯತಿ– **ಅತದ್ವತೀತಿ** ॥ ಅತದ್ವತಿ ತದ್ರಹಿತೇ । ತತ್ಸತ್ತ್ವೇ ತತ್ಪ್ರಮಾಯಾ ಏವಾವಶ್ಯಂಭಾವಾದಿತಿ ಭಾವಃ ॥ ೫೯–೬೦ ॥

**ವಿವರಣೆ–** ಅಂಧಕಾರದಿಂದಾಗಿ ಬೇರೆ ವಸ್ತುಗಳ ಬಗ್ಗೆ ಭ್ರಮೆಯು ಹುಟ್ಟಬಹುದು; ಅಂಧಕಾರದ ಬಗ್ಗೆಯೇ ಭ್ರಮೆಯು ಹುಟ್ಟುವುದಿಲ್ಲ. ಬ್ರಹ್ಮನ ಅಜ್ಞಾನದಿಂದ ಆ ಅಜ್ಞಾನದ ಬಗ್ಗೆಯೇ ಭ್ರಮೆಯು ಹುಟ್ಟಲು ಅವಕಾಶವಿಲ್ಲ.

ಅದ್ವೈತ ದರ್ಶನವು 'ಬ್ರಹ್ಮ ಜ್ಞಾನವು ಆರೋಪಿತ' ಎಂದು ಹೇಳಿದರೆ ಆ ಹೇಳಿಕೆಯು ಅನುಪಪನ್ನ ಎಂದು ತೋರಿಸಲು ವಿಪುಲಯುಕ್ತಿಗಳಿವೆ; ಅವುಗಳಲ್ಲಿ ಕೆಲವನ್ನು ತೋರಿಸಲಾಯಿತು. 'ವಸ್ತುತಃ ಬ್ರಹ್ಮಜ್ಞಾನವು ಆರೋಪಿತ' ಎಂದು ಅದ್ವೈತದರ್ಶನವು ಅಂಗೀಕರಿಸುವುದಿಲ್ಲ ಎಂದು ಹೇಳುತ್ತಾರೆ-

ಅನಾದ್ಯಜ್ಞಾನವಾದೇ ಚ ತಸ್ಯಾಜ್ಞಾನಂ ನ ಕಿಂಚನ ॥ ೬೧ ॥

**ಅರ್ಥ**–ಅನಾದ್ಯಜ್ಞಾನವಾದೇ ಚ = ಅಜ್ಞಾನವು ಅನಾದಿ ಎಂಬ ವಾದದಲ್ಲಿಯಾದರೂ, ತಸ್ಯ = ಅಜ್ಞಾನಕ್ಕೆ, ಕಿಂಚನ ಅಜ್ಞಾನಂ = ಇನ್ನೊಂದು ಯಾವ ಅಜ್ಞಾನವೂ, ನ = ಇಲ್ಲ

**ಅನುವಾದ-** ಅಜ್ಞಾನವನ್ನು ಅನಾದಿಯೆಂದು ಅದ್ವೈತ ಮತವು ಪರಿಗಣಿಸಿದೆ. ಆದ್ದರಿಂದ ಅದಕ್ಕೆ ಜನಕ ಅಜ್ಞಾನವು ಇಲ್ಲ.

**ಭಾವವಿಲಾಸಿನೀ–** ಯುಕ್ತಿದಾರಿದ್ರ್ಯಾಭಾವಾದಿದಮಾಶಂಕ್ಯ ದೂಷಿತಮ್ । ವಸ್ತುತಸ್ತು ನೈವಂ ತನ್ಮತಮಿತ್ಯಾಹ– ಅನಾದೀತಿ ॥ ತಸ್ಯಾಜ್ಞಾನಸ್ಯ । ಅಜ್ಞಾನಮಜ್ಞಾನಾಂತರಮ್ ॥ ೬೧ ॥

**ವಿವರಣೆ–** ಜೀವ ಈಶೋ ವಿಶುದ್ಧಾಚಿತ್ ಭೇದಸ್ತಸ್ಯಾಸ್ತಯೋರ್ದ್ವಯೋಃ।
ಅವಿದ್ಯಾ ತಚ್ಚಿತ್ತೋರ್ಯೋಗಃ ಷಡಸ್ಮಾಕಮನಾದಯಃ ॥

ಜೀವ-ಈಶ-ವಿಶುದ್ಧಚಿತ್ ಮತ್ತು ಜೀವೇಶ್ವರ ಭೇದ, ಅವಿದ್ಯೆ, ಮತ್ತು ಅವಿದ್ಯೆ ಮತ್ತು ಶುದ್ಧಚಿತ್‌ಗಳ ಸಂಬಂಧ - ಈ ಆರು ನಮಗೆ - ಅದ್ವೈತದರ್ಶನದವರಿಗೆ ಅನಾದಿಗಳು.

**ಕಿಂಚ ಪ್ರಾತೀತಿಕಾಜ್ಞಾನಂ ಕಥಂ ಸ್ವಭ್ರಮಕಾರಣಮ್ ।**
**ಭ್ರಮಾತ್ಪೂರ್ವೋ ಹಿ ದೋಷಃ ಸ್ಯಾದ್ದೋಷಜಶ್ಚ ಭ್ರಮೋ ಭವೇತ್ ॥ ೬೨ ॥**

**ಅರ್ಥ-** ಕಿಂಚ= ಇದಲ್ಲದೆ, ದೋಷಃ= ದೋಷವು, ಭ್ರಮಾತ್= ಭ್ರಮೆಗಿಂತ, ಪೂರ್ವಃ ಸ್ಯಾದ್= ಪೂರ್ವಭಾವಿಯಾಗಿರಲೇಬೇಕು. ಭ್ರಮಶ್ಚ= ಭ್ರಮೆಯಾದರೂ, ದೋಷಜಃ ಭವೇತ್= ದೋಷಜನ್ಯವಾಗಬೇಕು. ಹಿ= (ಈ ಪ್ರಕ್ರಿಯೆಯು) ಪ್ರಸಿದ್ಧ. ಪ್ರಾತೀತಿಕಾಜ್ಞಾನಂ= ಪ್ರತೀತಿಯು ಇದ್ದಾಗ ಮಾತ್ರ ಇರುವ ಅಜ್ಞಾನವು, ಕಥಂ ಸ್ವಭ್ರಮಕಾರಣಮ್?= ಹೇಗೆ ತಾನೆ ತನ್ನ ಭ್ರಮೆಗೆ ಕಾರಣವಾದೀತು?

**ಅನುವಾದ-** ಅಜ್ಞಾನದ ಪ್ರತೀತಿಯು ಹುಟ್ಟಿದ ಕ್ಷಣದಲ್ಲೇ ಅದಕ್ಕೆ ಅಸ್ತಿತ್ವ. ಮೊದಲು ಇಲ್ಲ. ಪೂರ್ವಕ್ಷಣದಲ್ಲಿ ಇಲ್ಲದ ಅಜ್ಞಾನವು ಅಜ್ಞಾನಭ್ರಮೆಗೆ ಹೇಗೆ ತಾನೇ ಕಾರಣವಾದೀತು? ಭ್ರಮೆಗಿಂತ ಮೊದಲು ದೋಷವಿರಬೇಕು. ದೋಷದಿಂದ ಭ್ರಮೆಯು ಹುಟ್ಟಬೇಕು.

**ಭಾವವಿಲಾಸಿನೀ– ದೂಷಣಾಂತರಮಾಹ– ಕಿಂಚೇತಿ ॥ ಪ್ರಾತೀತಿಕಾಜ್ಞಾನಂ ಪ್ರತೀತಿಸಮ-ಸಮಯಸತ್ತಾಕಂ ಸ್ವಭ್ರಮಕಾರಣಂ ಸ್ವಸ್ಯೈವ ಭ್ರಮಕಾರಣಮ್ । ಹಿ ಯಸ್ಮಾದ್ದೋಷಃ ಭ್ರಮಾತ್ ಪೂರ್ವಃ । ದೋಷಸ್ಯ ಭ್ರಮಕಾರಣತ್ವೇನ ಕಾರಣಸ್ಯ ಚ ಪೂರ್ವಭಾವಿತ್ವಾವಶ್ಯಂಭಾವಾದಿತಿ ಭಾವಃ । ತದೇವೋಪಪಾದಯತಿ– ದೋಷಜ ಇತಿ ॥ ೬೨ ॥**

**ವಿವರಣೆ–** ಕಾರಣವು ಕಾರ್ಯಕ್ಕಿಂತ ಮೊದಲು ಇರಬೇಕು. ಇದು ಎಲ್ಲರಿಗೂ ತಿಳಿದಿರುವ ನಿಯಮ. 'ಅಹಮಜ್ಞಃ'- ಈ ಪ್ರತೀತಿಯು ಹುಟ್ಟಿದಾಗಲೇ ಅಜ್ಞಾನಕ್ಕೆ ಅಸ್ತಿತ್ವ. ಮೊದಲು ಇಲ್ಲ. ಆದ್ದರಿಂದ ಈ ಭ್ರಮೆಗೆ ಇದಕ್ಕಿಂತ ಪೂರ್ವಭಾವಿಯಾದ ಅಜ್ಞಾನವು ಕಾರಣ ಎಂದು ಹೇಳಲು ಅವಕಾಶವಿಲ್ಲ. ಈ ಪ್ರತೀತಿಗೆ ವಿಷಯವಾದ ಅಜ್ಞಾನವೇ ಈ ಅಜ್ಞಾನಕ್ಕೆ ಕಾರಣ ಎಂದು ಹೇಳಲು ಆಗುವುದಿಲ್ಲ. ಕಾರ್ಯಕ್ಕಿಂತ ಮೊದಲು ಇಲ್ಲದಿರುವುದರಿಂದ.

**ದೋಷೇ ಧೀಃ ಸ್ಯಾದ್ಭ್ರಮಾಕಾರಾ ಭ್ರಮೇ ಸತ್ಯೇವ ತಚ್ಚ ಸತ್ ।**
**ಪ್ರಾತೀತಿಕಂ ಭವೇದ್ದೋಷ ಇತ್ಯನ್ಯೋನ್ಯಾಶ್ರಯೋ ಧ್ರುವಃ ॥ ೬೩ ॥**

**ಅರ್ಥ-** ದೂಷೇ ಸತಿ= ದೋಷವು ಇದ್ದಾಗ ಮಾತ್ರ, ಭ್ರಮಾಕಾರಾ ಧೀಃ ಸ್ಯಾತ್= ಭ್ರಮೆಯು ಹುಟ್ಟಬಹುದು, ಪ್ರಾತೀತಿಕಂ ತತ್ ಚ ದೋಷಃ= ಪ್ರತೀತಿ ಸಮಯದಲ್ಲಿ ಮಾತ್ರ ಇರುವ ಆ ಅಜ್ಞಾನವೆಂಬ ದೋಷವು, ಭ್ರಮೇ ಸತಿ ಏವ= ಭ್ರಮೆಯು ಇದ್ದಾಗ ಮಾತ್ರ, ಸತ್= ಇರುತ್ತದೆ. ಇತಿ= ಹೀಗೆ, ಅನ್ಯೋನ್ಯಾಶ್ರಯಃ= ಅನ್ಯೋನ್ಯಾಶ್ರಯವು, ಧ್ರುವಃ= ಸ್ಥಿರ.

**ಅನುವಾದ-** ('ಅಹಮಜ್ಞಃ' - ಈ ಜ್ಞಾನವು ಆತ್ಮನಲ್ಲಿ ಇಲ್ಲದ ಅಜ್ಞಾನವನ್ನು ವಿಷಯೀಕರಿಸುವುದರಿಂದ ಅಜ್ಞಾನ ಭ್ರಮೆ. ಇದು ಹುಟ್ಟಲು ಆತ್ಮನಲ್ಲಿರುವ

ದೋಷವು ಕಾರಣ. ಯಾವ ದೋಷ? ಅಜ್ಞಾನ. ಅಜ್ಞಾನಕ್ಕೆ ಪ್ರತೀತಿಯೇ ಅಸ್ತಿತ್ವ. ಪ್ರತೀತಿಗಿಂತ ಮೊದಲು ಅಸ್ತಿತ್ವವಿಲ್ಲ. ಆದ್ದರಿಂದ...).

ಅಜ್ಞಾನವೆಂಬ ದೋಷವಿದ್ದರೆ ಅಜ್ಞಾನಭ್ರಮೆಯ ಉತ್ಪತ್ತಿ; ಈ ಭ್ರಮೆಯ ಉತ್ಪತ್ತಿ-ಯಾದಾಗಲೇ, ಅಂದರೆ, ಅಜ್ಞಾನದ ಪ್ರತೀತಿಯು ಆದಾಗಲೇ ಅಜ್ಞಾನವೆಂಬ ದೋಷಕ್ಕೆ ಅಸ್ತಿತ್ವ. ಇದು ಸ್ಥಿರವಾದ=ಅಪರಿಹಾರ್ಯ ಅನ್ಯೋನ್ಯಾಶ್ರಯ.

**ಭಾವವಿಲಾಸಿನೀ**– ದೂಷಣಾಂತರಮಾಹ– **ದೋಷ ಇತಿ** ॥ ದೋಷೇ ಅಜ್ಞಾನಾಖ್ಯದೋಷೇ ಸತಿ । ಭ್ರಮಾಕಾರಾ ಅಜ್ಞಾನಭ್ರಮಾಕಾರಾ । ಭ್ರಮೇ ಸತ್ಯೇವ ಪ್ರಾತೀತಿಕಂ ತದಜ್ಞಾನಂ ಸತ್ ವಿದ್ಯಮಾನಂ ದೋಷಃ ಸ್ವಭ್ರಮಹೇತುರ್ದೋಷಃ। ಇತ್ಯನೇನ ಪ್ರಕಾರೇಣಾನ್ಯೋನ್ಯಾ- ಶ್ರಯೋ ಧ್ರುವಃ ಅಪರಿಹಾರ್ಯಃ । ಅಜ್ಞಾನರೂಪದೋಷೇ ಸತ್ಯಜ್ಞಾನಭ್ರಮಃ । ಅಜ್ಞಾನಭ್ರಮೇ ಸತಿ ಪ್ರಾತೀತಿಕಾಜ್ಞಾನರೂಪ ದೋಷಸತ್ತ್ವಮಿತ್ಯನ್ಯೋನ್ಯಾಶ್ರಯ ಇತಿ ಭಾವಃ ॥ ೬೩ ॥

**ವಿವರಣೆ**–ಕಾರಣವು (ಅಜ್ಞಾನವೆಂಬ ದೋಷವು) ಕಾರ್ಯವನ್ನು (ಅಜ್ಞಾನಭ್ರಮೆಯನ್ನು) ಕಾರ್ಯವು ಕಾರಣವನ್ನು ಅವಲಂಬಿಸಿದೆ. ಈ ಅವಲಂಬನೆಯೇ ಅನ್ಯೋನ್ಯಾಶ್ರಯ.

ಕಿಂಚಾಜ್ಞಾನಾಧ್ಯಾಸರೂಪೀ ಸಾಕ್ಷ್ಯನಾದಿರ್ಮತೇ ತವ ।
ಜನ್ಮೈವಾಸ್ಯ ನ ಯುಕ್ತಂ ತದ್ದೋಷಜತ್ವಂ ತು ದೂರತಃ ॥ ೬೪ ॥

**ಅರ್ಥ**– ಕಿಂಚ= ಮತ್ತು, ತವ ಮತೇ= ನಿನ್ನ ಮತದಲ್ಲಿ, ಅಜ್ಞಾನಾಧ್ಯಾಸರೂಪೀ= ಅವಿದ್ಯಾ ಸಾಕ್ಷಾತ್ಕಾರ ರೂಪಿಯಾದ, ಸಾಕ್ಷೀ= ಸಾಕ್ಷಿಯು, ಅನಾದಿಃ= ಅನಾದಿಯು. ಅಸ್ಯ= ಈ ಸಾಕ್ಷಿಗೆ, ಜನ್ಮ ಏವ= ಜನ್ಮವೇ, ನ ಯುಕ್ತಂ= ಯುಕ್ತವಲ್ಲ. ತತ್= ಆದ್ದರಿಂದ, ದೋಷಜನ್ಯತ್ವಂತು= ದೋಷದಿಂದ ಜನ್ಮವು, ದೂರತಃ (ಅಯುಕ್ತಮ್)= ಅತ್ಯಂತ ಅಯುಕ್ತ.

**ಅನುವಾದ**- ನಿನ್ನ ಮತದಲ್ಲಿ ಅವಿದ್ಯಾಸಾಕ್ಷಾತ್ಕಾರವು ಸಾಕ್ಷಿರೂಪ, ಸಾಕ್ಷಿಯು ಅನಾದಿ. ಆದ್ದರಿಂದ ಈ ಅವಿದ್ಯಾಸಾಕ್ಷಾತ್ಕಾರಕ್ಕೆ ಜನ್ಮವೇ ಅಯುಕ್ತ. ದೋಷದಿಂದ ಜನ್ಮವು ಅತ್ಯಂತ ಅಯುಕ್ತ.

**ಭಾವವಿಲಾಸಿನೀ**– ದೋಷಾಂತರಂ ಚಾಹ– **ಕಿಂಚೇತಿ** ॥ ಅಜ್ಞಾನಾಧ್ಯಾಸರೂಪೀ ಅವಿದ್ಯಾ-ಸಾಕ್ಷಾತ್ಕಾರರೂಪೀತ್ಯರ್ಥಃ । ತವ ಮತೇ ಅನಾದಿರಿತಿ ಸಂಬಂಧಃ । ಸಾಕ್ಷಿಣಶ್ಚಿದ್ರೂಪತ್ವಾಂಗೀ-ಕಾರಾದಿತಿ ಭಾವಃ । ಅಸ್ಯ ಸಾಕ್ಷಿಣಃ ॥ ೬೪ ॥

**ವಿವರಣೆ**–ಅದ್ವೈತದರ್ಶನದಲ್ಲಿ (1) ಸಾಕ್ಷಿಯು ಚಿದ್ರೂಪ. ಅಂದರೆ, ಶುದ್ಧಬ್ರಹ್ಮಸ್ವರೂಪ. ಇದು ಅನಾದಿ. (2) ಜ್ಞಾನಸಾಕ್ಷಾತ್ಕಾರವು ಸಾಕ್ಷಿರೂಪ. ಆದ್ದರಿಂದ ಅಜ್ಞಾನಸಾಕ್ಷಾತ್ಕಾರಕ್ಕೆ ಜನ್ಮವು ಅಯುಕ್ತ.

**ಅಮಾನತ್ವಸ್ವತಸ್ತ್ವಂ ಸ್ಯಾದ್ದೋಷಾಜನ್ಯೋ ಭ್ರಮೋಽಪಿ ಚೇತ್ ।**
**ಅತಃ ಪ್ರಮೀಯಮಾಣತ್ವಾತ್ತ್ವಯ್ಯಜ್ಞಾನಮಕಲ್ಪಿತಮ್ ॥ ೬೫ ॥**

**ಅರ್ಥ**-ದೋಷಾಜನ್ಯೋಽಪಿ = ದೋಷದಿಂದ ಹುಟ್ಟಿದ್ದಲ್ಲವಾದರೂ, ಭ್ರಮಃ ಚೇತ್ = ಭ್ರಮೆಯಾಗುವುದಾದರೆ, ಅಮಾನತ್ವಸ್ವತಸ್ತ್ವಂ ಸ್ಯಾತ್= ಅಪ್ರಾಮಾಣ್ಯವು ಸ್ವತಃ ಎಂದಾದೀತು. ಅತಃ = ಅಜ್ಞಾನವು ಆರೋಪಿತವಲ್ಲವಾದ್ದರಿಂದ, ಪ್ರಮೀಯಮಾಣತ್ವಾತ್ = ಪ್ರಮಾಣ ವಿಷಯವಾದ್ದರಿಂದ, ತ್ವಯಿ = ನಿನ್ನಲ್ಲಿ(ಜೀವನಲ್ಲಿ) ಅಜ್ಞಾನಂ= ಅಜ್ಞಾನವು, ಅಕಲ್ಪಿತಂ= ಸ್ವಾಭಾವಿಕ.

**ಅನುವಾದ**- ದೋಷಜನ್ಯವಲ್ಲವಾದರೂ ಅಹಮಜ್ಞಃ ಎಂಬ ಸಾಕ್ಷ್ಯಾತ್ಮಕಜ್ಞಾನವು ಭ್ರಾಂತಿಯಾದರೆ, ಅಪ್ರಾಮಾಣ್ಯವು ಸ್ವತಃ ಆಗಬೇಕಾದೀತು. ಆದ್ದರಿಂದ ಅಜ್ಞಾನವು ಪ್ರಮಾವಿಷಯ. ಆದ್ದರಿಂದ ನಿನ್ನಲ್ಲಿ ಅಜ್ಞಾನವು ಕಲ್ಪಿತವಲ್ಲ.

**ಭಾವವಿಲಾಸಿನೀ**– ದೂೀಷಾಜನ್ಯೋಽಪಿ ಭ್ರಮೋಽಸ್ತು, ಕೋ ದೋಷಃ? ಇತ್ಯತ ಆಹ– **ಅಮಾನತ್ವ-ಸ್ವತಸ್ತ್ವ**ಮಿತಿ ॥ ಅಪ್ರಾಮಾಣ್ಯಸ್ವತಸ್ತ್ವಮಿತ್ಯರ್ಥಃ। ಭ್ರಮಃ ದೋಷಾಜನ್ಯಶ್ಚೇತ್ತರ್ಹೀತಿ ಶೇಷಃ । ಅತಃ ಅಜ್ಞಾನಜ್ಞಾನಸ್ಯ ಸಾಕ್ಷಿಣೋ ದೋಷಾಜನ್ಯತ್ವನಿಯಮಾತ್ । ಅತಃ ಅಜ್ಞಾನಾರೋಪಾಯೋಗಾನ್ನಿಮಿತ್ತಾತ್ । ಅಸಂಭವದಾರೋಪಾಕಾರಂ ದೋಷಾಜನ್ಯಂ ಚ ಜ್ಞಾನಮೇವ ಹಿ ಪ್ರಮಾ । ಸಾಕ್ಷೀ ಚಾಜನ್ಯತಯಾ ದೋಷಾಜನ್ಯಃ । ಏವಂ ಅಜ್ಞಾನ-ತಾದಾತ್ಮ್ಯಾದ್ಯಗೋಚರತಯಾ ತದನಾರೋಪರೂಪಶ್ಚ। ತದ್ವಿಷಯತ್ವೇ ಪ್ರಮಾವಿಷಯತ್ವಮೇವ ಸ್ಯಾದಿತಿ ಭಾವಃ । ಪ್ರಮೀಯಮಾಣತ್ವಾದಸ್ತೀತಿ ಪ್ರಮಯಾ ಸಾಧಿತತ್ವಾತ್ । ತ್ವಯಿ ಜೀವೇ । ಅಹಮಜ್ಞ ಇತಿ ಜೀವ ಏವಾಜ್ಞಾನಸ್ಯ ಸಾಕ್ಷಿಣಾ ಸಾಧಿತತ್ವಾದ್ ಅಜ್ಞಾನಸ್ಯಾರೋಪಿತತ್ವಂ ಬ್ರಹ್ಮಾಶ್ರಿತತ್ವಂ ಚ ನ, ಕಿಂತು ಜೀವಾಶ್ರಿತತ್ವಮೇವೇತ್ಯರ್ಥಃ । ಯದ್ವಾ ಏತಾದೃಶ-ತತ್ವಜ್ಞಾನಾಭಾವಾಚ್ಚ ತ್ವಯ್ಯಜ್ಞಾನಮಕಲ್ಪಿತಂ ದೃಢಮೇವ । ಏವಂ ವದನ್ ತ್ವಮೇವಾಜ್ಞಾನೀತಿ ಭಾವಃ ॥ ೬೫ ॥

**ವಿವರಣೆ**– ಜ್ಞಾನದಲ್ಲಿ ಅಪ್ರಾಮಾಣ್ಯವು ಜ್ಞಾನಜನಕವಲ್ಲದ ಯಾವುದೋ ದೋಷದಿಂದ ಹುಟ್ಟುತ್ತದೆ. ಈ ವಿಷಯವನ್ನು "ಅಪ್ರಾಮಾಣ್ಯವು ಪರತಃ ಹುಟ್ಟುತ್ತದೆ; ಅಪ್ರಾಮಾಣ್ಯದಲ್ಲಿ ಪರತಸ್ತ್ವವು ಇದೆ" ಎಂದು ಪ್ರಾಜ್ಞರು ವ್ಯವಹರಿಸುತ್ತಾರೆ. 'ಅಹಮಜ್ಞಃ' ಎಂಬ ಅಜ್ಞಾನ ಜ್ಞಾನವು ಸಾಕ್ಷಿರೂಪ. ಸಾಕ್ಷಿಯು ಶುದ್ಧಚೈತನ್ಯ. ಅಲ್ಲಿ ದೋಷವಿಲ್ಲ. ದೋಷಜನ್ಯವಲ್ಲದ ಸಾಕ್ಷಿರೂಪಜ್ಞಾನವು ಭ್ರಮೆ= ಅಪ್ರಮಾ ಆದರೆ ಈ ಅಪ್ರಾಮಾಣ್ಯಕ್ಕೆ ಹೊರಗಿನ ಕಾರಣವಿಲ್ಲ. ಆದ್ದರಿಂದ ಅಪ್ರಾಮಾಣ್ಯವು ಸ್ವತಃ ಆಗುವ ಅನಿಷ್ಟ ಪ್ರಸಂಗವು ಏರ್ಪಡುತ್ತದೆ. ಇದು ಅದ್ವೈತ ದರ್ಶನಕ್ಕೆ ಸಮ್ಮತವಲ್ಲ. ಆದ್ದರಿಂದ 'ಅಹಮಜ್ಞಃ' ಎಂಬ ಜ್ಞಾನವು ಭ್ರಮೆಯಲ್ಲ. ಆದ್ದರಿಂದ ಅದ್ವೈತ ದರ್ಶನದಲ್ಲಿ ಸಕಲ ಜೀವರಲ್ಲಿ ಅಜ್ಞಾನವು ಸತ್ಯ; ಕಲ್ಪಿತವಲ್ಲ.

**ವಿಶೇಷ ವಿಚಾರ:-** (೧) 'ಅಹಮಜ್ಞಃ' ಎಂಬ ಜ್ಞಾನವು ಜೀವಾತ್ಮನಲ್ಲಿ ಅಜ್ಞಾನವನ್ನು ವಿಷಯೀಕರಿಸುತ್ತದೆ. ಆದ್ದರಿಂದ ಬ್ರಹ್ಮನು ಅಜ್ಞಾನಕ್ಕೆ ಆಶ್ರಯನಲ್ಲ= ಬ್ರಹ್ಮನಲ್ಲಿ ಅಜ್ಞಾನವು ಇಲ್ಲ. ಜೀವನಲ್ಲಿ ಇದೆ.

(೨) ಇಂತಹ ತತ್ತ್ವಜ್ಞಾನವು ನಿನ್ನಲ್ಲಿ ಇಲ್ಲ. ಆದ್ದರಿಂದ ನಿನ್ನಲ್ಲಿ ದೃಢವಾದ ಅಜ್ಞಾನವಿದೆ; ನೀನೇ ಅಜ್ಞಾನಿ.

**ತತ್ತ್ವಜ್ಞಾನಾಯೋಗ್ಯತಾಖ್ಯದೋಷೋಽಸ್ತ್ಯಾಸುರಸಾಕ್ಷಿಷು ।**
**ತನ್ಮೂಲತ್ವಂ ಚ ತಜ್‌ಜ್ಞಾನೇ ವಿಶೇಷಾದ್ ಘಟತೇ ಮಮ ॥ ೬೬ ॥**

**ಅರ್ಥ**-ತತ್ತ್ವಜ್ಞಾನಾಯೋಗ್ಯತಾಖ್ಯದೋಷಃ=ತತ್ತ್ವಜ್ಞಾನಕ್ಕೆ ಅನರ್ಹತೆ ಎಂಬ ದೋಷವು, ಆಸುರಸಾಕ್ಷಿಷು=ಅಸುರ ಜೀವರ ಸಾಕ್ಷಿಗಳಲ್ಲಿ, ಅಸ್ತಿ=ಇದೆ. ತಜ್‌ಜ್ಞಾನೇ=ಅಸುರ ಜೀವರ ಸಾಕ್ಷಿರೂಪ ಜ್ಞಾನದಲ್ಲಿ, ತನ್ಮೂಲತ್ವಂ ಚ=ತತ್ತ್ವಜ್ಞಾನಾನರ್ಹತೆ ಎಂಬ ದೋಷದಿಂದ ಅಭಿವ್ಯಕ್ತತ್ವವು, ವಿಶೇಷಾತ್=ಭೇದಪ್ರತಿನಿಧಿ ವಿಶೇಷದಿಂದ, ಮಮ (ಮತೇ)=ನನ್ನ ಮತದ ಪ್ರಕಾರ, ಘಟತೇ=ಕೂಡುತ್ತದೆ.

**ಅನುವಾದ- ಅಸುರ ಚೇತನಗಳಲ್ಲಿ ತತ್ವಜ್ಞಾನಕ್ಕೆ ಅಯೋಗ್ಯತೆ ಎಂಬ ದೋಷವಿದೆ. ಈ ದೋಷದಿಂದ ಅಸುರರ ಜ್ಞಾನದ ಅಭಿವ್ಯಕ್ತಿಯಾಗುತ್ತದೆ. ಈ ದೋಷ ಮತ್ತು ಅಸುರರ ಜ್ಞಾನಗಳು ಅಸುರ ಚೇತನಗಳ ಸ್ವರೂಪವೇ; ಆದ್ದರಿಂದ ಇವು ಅನಾದಿ ಮತ್ತು ಅಭಿನ್ನ. ಅಭಿನ್ನವಾದ ದೋಷ ಮತ್ತು ಅಸುರಜ್ಞಾನಗಳಿಗೆ ವ್ಯಂಗ್ಯ-ವ್ಯಂಜಕ ಭಾವವು ಭೇದಪ್ರತಿನಿಧಿ ವಿಶೇಷದಿಂದ ಉಪಪನ್ನವಾಗುತ್ತದೆ. ಇದು ನಮ್ಮ ಮತ.**

**ಭಾವವಿಲಾಸಿನೀ**—ನನ್ವಯೋಗ್ಯಜೀವಾನಾಂ ಸಾಕ್ಷೀ ಭವತಾಮಪಿ ಮತೇ ನಿತ್ಯೋ ಭ್ರಮರೂಪಶ್ಚ । ತತ್ರ ಕೋ ದೋಷಃ ಕಾ ಚ ತತೋ ಜನಿರಿತ್ಯತ ಆಹ- ತತ್ವಜ್ಞಾನೇತಿ ॥ ತಜ್‌ಜ್ಞಾನೇ ಆಸುರಸಾಕ್ಷಿರೂಪಜ್ಞಾನೇ ತನ್ಮೂಲತ್ವಂ ತತ್ವಜ್ಞಾನಾಯೋಗ್ಯತಾಖ್ಯದೋಷಜನ್ಯತ್ವಂ ತದ್ವ್ಯಕ್ತತ್ವಮಿತ್ಯರ್ಥಃ । ವಿಶೇಷಾದ್ ಭೇದಪ್ರತಿನಿಧಿರೂಪವಿಶೇಷಾತ್ । ಮಮ ಮತೇ । ಯೋಗ್ಯತಾಯಾಃ ಜ್ಞಾನಸ್ಯ ಚ ತತ್‌ಸ್ವರೂಪತ್ವೇನೈಕತ್ವಾತ್ । ಭೇದಸಾಪೇಕ್ಷವ್ಯಂಗ್ಯವ್ಯಂಜಕಭಾವಘಟನಾಯ ವಿಶೇಷಾದಿತ್ಯುಕ್ತಮ್ ॥ ೬೬॥

**ವಿವರಣೆ— ಪ್ರಶ್ನೆ**: ಅಸುರ ಚೇತನಗಳ 'ನಾನು' 'ನಾನು ಸ್ವತಂತ್ರ' 'ನನ್ನಲ್ಲಿ ಉತ್ಕರ್ಷವಿದೆ' 'ನಾನು ಸರಿಯಾಗಿ ತಿಳಿದಿದ್ದೇನೆ' ಮೊದಲಾದ ಜ್ಞಾನಗಳು ಆ ಚೇತನಗಳ ಸ್ವರೂಪವೇ. ಆದ್ದರಿಂದ ಇವು ಅನಾದಿ; ಜನ್ಯವಲ್ಲ. ಇವುಗಳಲ್ಲಿ 'ನಾನು ಸ್ವತಂತ್ರ' 'ನನ್ನಲ್ಲಿ ಉತ್ಕರ್ಷವಿದೆ' ಮೊದಲಾದ ಜ್ಞಾನಗಳು ಅಯಥಾರ್ಥ ಎಂದು ಶ್ರೀಮಧ್ವಾಚಾರ್ಯರ ದರ್ಶನವು ಅಂಗೀಕರಿಸಿದೆ. ಜನ್ಯವಲ್ಲದ ಜ್ಞಾನಗಳು ದೋಷಜನ್ಯವೂ ಅಲ್ಲವಷ್ಟೇ! ಆದ್ದರಿಂದ 'ಎಲ್ಲ ಅಯಥಾರ್ಥಜ್ಞಾನಗಳೂ ದೋಷಜನ್ಯ' ಎಂಬ ನಿಯಮವಿಲ್ಲ.

ಆದ್ದರಿಂದ ಆತ್ಮನಲ್ಲಿ (ಬ್ರಹ್ಮನಲ್ಲಿ) ಅಜ್ಞಾನಾರೋಪವು, ಇದು ಅನಾದಿಯಾದ್ದರಿಂದ, ಏಕೆ ದೋಷಜನ್ಯವಾಗದೆ ಇರಬಾರದು?

**ಉತ್ತರ** : ಅಸುರ ಚೇತನಗಳಲ್ಲಿ= ಅಸುರ ಸಾಕ್ಷಿಗಳಲ್ಲಿ ತತ್ವಜ್ಞಾನಕ್ಕೆ ಅನರ್ಹತೆ ಎಂಬ ದೋಷವಿದೆ. ಈ ದೋಷವಿರುವ ಸಾಕ್ಷಿಯಿಂದ ಅವರ ಜ್ಞಾನವು ಅಭಿವ್ಯಕ್ತವಾಗುತ್ತದೆ. 'ದೋಷಜನ್ಯ' ಎಂದರೆ ದೋಷಸಹಕೃತಸಾಕ್ಷಿಯಿಂದ ಅಭಿವ್ಯಕ್ತ ಎಂದೇ ಅರ್ಥ.

**ಪ್ರಶ್ನೆ**: ತತ್ವಜ್ಞಾನಾರ್ಹತೆ ಮತ್ತು ಅಯಥಾರ್ಥಜ್ಞಾನ - ಇವೆರಡೂ ಆತ್ಮನ ಸ್ವರೂಪವೇ. ಅಂದರೆ ಇವೆರಡೂ ಭಿನ್ನ ಅಲ್ಲ; ಒಂದೇ. ಆದ್ದರಿಂದ ಇವೆರಡು ವ್ಯಂಜಕ - ವ್ಯಂಗ್ಯ ಆಗುವುದು ಹೇಗೆ? ಭಿನ್ನವಾದವುಗಳೇ ವ್ಯಂಜಕ - ವ್ಯಂಗ್ಯಗಳು ಆಗಬಲ್ಲವಷ್ಟೆ?

**ಉತ್ತರ** : ವ್ಯಂಜಕ - ವ್ಯಂಗ್ಯಗಳ, ಉದಾ : ಬೆಳಕು ಮತ್ತು ಘಟಗಳ, ಪರಸ್ಪರ ಭೇದವು ಪ್ರಮಾಣ ಸಿದ್ಧವಾಗಿದ್ದರೆ ವ್ಯಂಜಕ - ವ್ಯಂಗ್ಯಭಾವವು ಭೇದಾವಲಂಬಿ ಆಗುತ್ತದೆ. ಭೇದಾವಲಂಬಿಯಾದ ಕಾರ್ಯಗಳು ಭೇದಕಾರ್ಯಗಳು.

ಅಭೇದವು ಪ್ರಮಾಣಸಿದ್ಧವಾಗಿದ್ದರೆ, ವ್ಯಂಜಕ-ವ್ಯಂಗ್ಯಭಾವವೂ ಇದ್ದರೆ, ಇದು ಅಭೇದವಿರುವ ಕಡೆ ಇರುವ ಪ್ರಮಾಣಸಿದ್ಧವಾದ ಭೇದಕಾರ್ಯ. ಅಭೇದವಿರುವ ನಿದರ್ಶನಗಳಲ್ಲಿ ನಡೆಯುವ ಭೇದಕಾರ್ಯಗಳನ್ನು 'ಭೇದ'ವಲ್ಲದ ಶಕ್ತಿಯು ನಡೆಸಬೇಕು. ಅಭೇದದ ಜತೆಗೆ ಇದ್ದು ಭೇದಕಾರ್ಯವನ್ನು ನಡೆಸುವ ಶಕ್ತಿಯು 'ಭೇದಪ್ರತಿನಿಧಿ'. ಈ ಶಕ್ತಿಗೆ 'ವಿಶೇಷ' ಎಂದು ಹೆಸರು.

ತತ್ವಜ್ಞಾನಾನರ್ಹತೆ ಮತ್ತು ಅಯಥಾರ್ಥಜ್ಞಾನಗಳು. ಆತ್ಮ (ಸಾಕ್ಷಿ) ಸ್ವರೂಪವೇ ಆಗಿರುವುದರಿಂದ ಇವುಗಳ ಅಭೇದವು ಪ್ರಮಾಣಸಿದ್ಧ. ಇವುಗಳ ವ್ಯಂಜಕ- ವ್ಯಂಗ್ಯ ಭಾವಗಳು ಭೇದಕಾರ್ಯ. ಇದು ಭೇದಪ್ರತಿನಿಧಿ ವಿಶೇಷದಿಂದ ನಡೆಯುತ್ತದೆ.

ಶ್ರೀಮಧ್ವಾಚಾರ್ಯರ ದರ್ಶನವು ಅಸುರಚೇತನಗಳ ಅಯಥಾರ್ಥಜ್ಞಾನವು ದೋಷದಿಂದ ಅಭಿವ್ಯಕ್ತವಾಗಲು ಬೇಕಾದ ವ್ಯವಸ್ಥೆಯನ್ನು ಗುರುತಿಸಿದೆ. ಅದ್ವೈತದರ್ಶನವು ಅಜ್ಞಾನಾರೋಪದ ಅಥವಾ ಅಜ್ಞಾನಭ್ರಮೆಯ ವ್ಯಂಜಕವನ್ನು ತೋರಿಸಿಲ್ಲ. ಆದ್ದರಿಂದ 64ನೇ ಪದ್ಯದಲ್ಲಿ ಹೇಳಿರುವ ದೋಷವು ಅಪರಿಹಾರ್ಯ.

**ನಿರ್ವಿಶೇಷಚಿತೋ ದೋಷಃ ಕಃ ಸ್ಯಾಜ್ಜನ್ಮ ಚ ಕಿಂ ತವ ।**
**ಅಜ್ಞಾನಾರೋಪವಾದಸ್ತದಜ್ಞಾನಾದೇವ ಕೇವಲಮ್ ॥ ೬೭ ॥**

**ಅರ್ಥ**-ತವ= ನಿನ್ನ ಮತದಲ್ಲಿ, ನಿರ್ವಿಶೇಷಚಿತಃ=ನಿರ್ವಿಶೇಷ (ಸಮಸ್ತಧರ್ಮಶೂನ್ಯ) ಚೈತನ್ಯಕ್ಕೆ, ಕಃ ದೋಷಃ ಸ್ಯಾತ್=ಯಾವ ದೋಷವು ಇದ್ದೀತು? ಜನ್ಮ ಚ ಕಿಮ್=ಅಂತಹ

ದೋಷದಿಂದ ಜನ್ಮ ಎಂದರೇನು? ತತ್=ಆದ್ದರಿಂದ (ಆರೋಪಕ್ಕೆ ಕಾರಣವಾದ ದೋಷ-ವಿಲ್ಲದಿರುವುದರಿಂದ, ಅಜ್ಞಾನಾರೋಪವಾದಃ=ಬ್ರಹ್ಮನಲ್ಲಿ ಅಜ್ಞಾನದ ಆರೋಪವಾಗಿದೆ ಎಂಬ ಮತ್ತು ಅಜ್ಞಾನದಿಂದ ಬ್ರಹ್ಮನಲ್ಲಿ ಜಗತ್ತು ಆರೋಪಿತವಾಗಿದೆ ಎಂಬ ವಾದವು, ಕೇವಲಮ್ ಅಜ್ಞಾನಾದೇವ= ಪೂರ್ವೋತ್ತರಪ್ರಮೇಯದ ಜ್ಞಾನವಿಲ್ಲದಿರುವುದರಿಂದಲೇ. (ಪ್ರವೃತ್ತವಾಗಿದೆ ಎಂದು ಹೇಳಬೇಕಾಗುತ್ತದೆ)

**ಅನುವಾದ-** ನಿನ್ನ ಮತದ ಪ್ರಕಾರ ಬ್ರಹ್ಮವು ನಿರ್ವಿಶೇಷ ಚೈತನ್ಯ. ಅದರಲ್ಲಿ ಯಾವ ಧರ್ಮವೂ ಇಲ್ಲ. ಇಂತಹ ಬ್ರಹ್ಮನಲ್ಲಿ ಯಾವ ದೋಷವು ಇರಬಹುದು? ಯಾವುದು ಇಲ್ಲ. ಈ ಬ್ರಹ್ಮನಲ್ಲಿ ಜನ್ಮವಾದರು ಏನು? ಏನು ಇಲ್ಲ. ಆದ್ದರಿಂದ ಬ್ರಹ್ಮನಲ್ಲಿ ಅಜ್ಞಾನದ ಆರೋಪವಾಗಿದೆ ಎಂಬ ವಾದವು ಸರ್ವಥಾ ಸರಿಯಲ್ಲ. ಇದು ಬ್ರಹ್ಮನ ಬಗ್ಗೆ ಜ್ಞಾನವಿಲ್ಲದವರ ವಾದ.

**ಭಾವವಿಲಾಸಿನೀ–** ನಿರ್ವಿಶೇಷಬ್ರಹ್ಮವಾದಿನಸ್ತವ ಮತೇ ನೇದಂ ಘಟತ ಇತ್ಯಾಹ– ನಿರ್ವಿಶೇಷೇತಿ ॥ ಸಮಸ್ತಧರ್ಮಶೂನ್ಯಚಿತ ಇತ್ಯರ್ಥಃ । ತೇ ಮತೇ ದೋಷಃ ಕಃ, ಜನ್ಮ ಚ ಕಿಮ್? ನ ಕಿಮಪಿ । ನಿರ್ಧರ್ಮಕತ್ವಾಂಗೀಕಾರಾದ್ ಯೋಗ್ಯತಾಖ್ಯಧರ್ಮಸ್ಯ ಚಾಭಾವಾದಿತಿ ಭಾವಃ । ತತ್ತಸ್ಮಾದ್ ಆರೋಪಮೂಲದೋಷಾದ್ಯಭಾವಾತ್ । ಅಜ್ಞಾನಾತ್ ಪೂರ್ವೋತ್ತರಜ್ಞಾನಾಭಾವಾತ್ ॥ ೬೭ ॥

**ವಿವರಣೆ–** ನಿಮ್ಮ ಮತದಲ್ಲಿ ಶುದ್ಧಚೇತನವು ನಿರ್ವಿಶೇಷ. ಅಂದರೆ, ಆ ಚೇತನದಲ್ಲಿ ಯಾವ ಧರ್ಮವೂ ಇಲ್ಲ. ಆದ್ದರಿಂದ ಚೇತನದಲ್ಲಿ ಯಾವ ದೋಷವು ಇಲ್ಲ. ಅಲ್ಲಿ ಏನೂ ಹುಟ್ಟಲು ಅವಕಾಶವಿಲ್ಲ. ಶುದ್ಧ ಚೇತನದಲ್ಲಿ ಅಜ್ಞಾನದ ಆರೋಪವಾಗಲು ಅಲ್ಲಿ ದೋಷವಿರಬೇಕು. ಅಲ್ಲಿ ದೋಷವು ಇಲ್ಲ. ಆದ್ದರಿಂದ ನಿಮ್ಮ ದರ್ಶನವು ಮಾಡುವ ಅಜ್ಞಾನಾರೋಪವಾದವು ನಿರ್ಮೂಲ. ಈ ವಾದಕ್ಕೆ ವಾದಿಗಳ ಅಜ್ಞಾನವೇ ಮೂಲ.

ಅಜ್ಞಾನಾರೋಪಮೂಲಸ್ತೇ ಶಾಸ್ತ್ರವಿಸ್ತೃತಪಾದಪಃ ।
ಮೂಲಸ್ಯ ದುರ್ಬಲತ್ವೇ ತು ಸೋಽಪಿ ವಾತಾಹತಃ ಪತೇತ್ ॥ ೬೮ ॥

**ಅರ್ಥ-**ತೇ = ನಿನ್ನ ಶಾಸ್ತ್ರವಿಸ್ತೃತಪಾದಪಃ = ಶಾಸ್ತ್ರವೆಂಬ ವಿಶಾಲವೃಕ್ಷವು, ಅಜ್ಞಾನಾರೋಪಮೂಲಃ = ಅಜ್ಞಾನಾರೋಪ ಎಂಬ ಬೇರು ಉಳ್ಳದ್ದು , ಮೂಲಸ್ಯ ದುರ್ಬಲತ್ವೇ ತು = ಬೇರು ದುರ್ಬಲವಾಗಿರುವಾಗ, ಸಃ ಅಪಿ = ವಿಶಾಲ ವೃಕ್ಷವು, ವಾತಾಹತಃ = ಗಾಳಿಯ ಹೊಡೆತಕ್ಕೆ ಸಿಕ್ಕಿ ಪತೇತ್ = ಬಿದ್ದುಹೋಗುತ್ತದೆ.

**ಅನುವಾದ-** ನಿಮ್ಮ (ಮಾಯಾವಾದಿಗಳ) ಶಾಸ್ತ್ರವು ವಿಶಾಲವಾದ ಮರ. ಬ್ರಹ್ಮನಲ್ಲಿ ಅಜ್ಞಾನದ ಆರೋಪವು ಈ ಮರದ ಬೇರು. ಈ ಬೇರು ದುರ್ಬಲ. ಬೇರು ದುರ್ಬಲವಾಗಿದ್ದರೆ ಗಾಳಿಯ ಹೊಡೆತಕ್ಕೆ ಸಿಕ್ಕಿ ಮರವು ಬಿದ್ದುಹೋಗುತ್ತದೆ.

ವಾತ = ವಾಯುದೇವರು= ಮಧ್ವಾಚಾರ್ಯರು. ಅವರು ಹೇಳುವ ಯುಕ್ತಿಗಳು ಹೊಡೆತ. ಇವುಗಳಿಂದ ಮಾಯಾವಾದವು ಬಿದ್ದುಹೋಗುತ್ತದೆ.

**ಭಾವವಿಲಾಸಿನೀ–** ಅಧುನಾಽಜ್ಞಾನಾರೋಪಾಸಮ್ಭವೇ ಚ ಸರ್ವಂ ತಚ್ಛಾಸ್ತ್ರಂ ಗತಮಿತ್ಯಾಹ– ಅಜ್ಞಾನೇತಿ ॥ ಅಜ್ಞಾನಾರೋಪ ಏವ ಮೂಲಂ ಯಸ್ಯ ಸಃ। ಸೋಽಪಿ ಶಾಸ್ತ್ರಪಾದಪೋಽಪಿ । ವಾತಾಹತಃ ಮೂಲಾಭಾವೇ ವಾಯ್ವಾಹತತರುವತ್ । ವಾತೇನ ಮುಖ್ಯಪ್ರಾಣೇನ । ತದುಕ್ತ-ಯುಕ್ತಿಭಿರಿತಿ ಯಾವತ್ । ಆಹತಃ ತಾಡಿತಃ । ಪತೇತ್ ಅಧಃ ಪತೇತ್ ॥ ೬೮ ॥

**ವಿವರಣೆ–** ಅದ್ವೈತಶಾಸ್ತ್ರದ ಎಲ್ಲ ಪ್ರಮೇಯಗಳಿಗೂ ಬ್ರಹ್ಮನಲ್ಲಿ ಅಜ್ಞಾನಾರೋಪವೇ ಮೂಲ. ಅದ್ವೈತಶಾಸ್ತ್ರಕ್ಕೆ ಅಜ್ಞಾತವಾದ ಜೀವಬ್ರಹ್ಮೈಕ್ಯವು ವಿಷಯ. ಅಜ್ಞಾನನಿವೃತ್ತಿಯು ಪ್ರಯೋಜನ, ಅಜ್ಞಾನನಿವೃತ್ತಿಯನ್ನು ಬಯಸುವ ಪುರುಷನು ಅಧಿಕಾರಿ, ಹೀಗೆ ಅದ್ವೈತಶಾಸ್ತ್ರದ ಅನುಬಂಧಚತುಷ್ಟಯವು ಅಜ್ಞಾನವನ್ನೇ ಅವಲಂಬಿಸಿದೆ. ಅಂತಹ ಅಜ್ಞಾನಾರೋಪವೇ ಅನುಪಪನ್ನವಾದಾಗ ದೃಢವಾದ ಬುಡವಿಲ್ಲದ ಹೆಮ್ಮರವು ಗಾಳಿಯ ಹೊಡೆತಕ್ಕೆ ಸಿಕ್ಕಿ ಧರೆಗುರುಳುವಂತೆ ನಿನ್ನ ಶಾಸ್ತ್ರವೆಂಬ ವಿಶಾಲವೃಕ್ಷವೂ ವಾಯ್ವಂಶರಾದ ಮಧ್ವಾಚಾರ್ಯರು ಹೇಳಿರುವ ಯುಕ್ತಿಗಳ ಹೊಡೆತಕ್ಕೆ ಸಿಕ್ಕುಬಿದ್ದು ಹೋಗುವುದು. 'ಅಜ್ಞಾನಾಸಂಭವಾದೇವ ತನ್ತ್ರಮಖಿಲಮಪಾಕೃತಂ' ಶ್ರೀಮಧ್ವಾಚಾರ್ಯರ ಮಾಯಾವಾದಖಂಡನ.

ಸತ್ಯಾಜ್ಞಾನಭವಂ ವಿಶ್ವಮಸತ್ಯಂ ಕೇನ ಹೇತುನಾ ।
ಆಮ್ರಸ್ಯ ಬೀಜತಃ ಕಿಂ ಸ್ಯಾದ್ ವಿಷವೃಕ್ಷಸ್ಯ ಸಂಭವಃ ॥ ೬೯ ॥

**ಅರ್ಥ–**ಸತ್ಯಾಜ್ಞಾನಭವಂ = ಸತ್ಯವಾದ ಅಜ್ಞಾನದಿಂದ ಹುಟ್ಟಿದ, ವಿಶ್ವಂ = ಜಗತ್ತು, ಕೇನ ಹೇತುನಾ = ಯಾವ ಕಾರಣದಿಂದ, ಅಸತ್ಯಂ = ಅಸತ್ಯವಾಗುವುದು? ಆಮ್ರಸ್ಯ ಬೀಜತಃ = ಮಾವಿನ ಬೀಜದಿಂದ, ವಿಷವೃಕ್ಷಸ್ಯ = ವಿಷವೃಕ್ಷದ, ಸಂಭವಃ = ಉತ್ಪತ್ತಿಯು, ಸ್ಯಾತ್ ಕಿಂ = ಆಗುವುದೇನು?

**ಅನುವಾದ-** (ಬ್ರಹ್ಮನಲ್ಲಿ ಅಜ್ಞಾನವು ಆರೋಪಿತವಲ್ಲ ಎಂದು ಪ್ರತಿಪಾದಿಸಲಾಗಿದೆ. ಆದ್ದರಿಂದ ಅವನಲ್ಲಿ ಅಜ್ಞಾನವು ಇದ್ದರೆ ಅದು ಸತ್ಯ). ಸತ್ಯ ಅಜ್ಞಾನದಿಂದ ಹುಟ್ಟಿದ ಜಗತ್ತು ಯಾವ ಕಾರಣದಿಂದಲೂ ಅಸತ್ಯವಲ್ಲ. ಮಾವಿನ ಬೀಜದಿಂದ ವಿಷವೃಕ್ಷವು ಹುಟ್ಟುವುದೇ?

**ಭಾವವಿಲಾಸಿನೀ–** ಆರೋಪಾಸಂಭವಾತ್ ಸತ್ಯಮನಾರೋಪಿತಂ ಯದಜ್ಞಾನಂ ತದ್ಭವಂ ತದುಪಾದಾನಕಮಿತ್ಯರ್ಥಃ । ಕೇನ ಹೇತುನಾ ಅಸತ್ಯಮಿತಿ ಸಂಬಂಧಃ । ಸತ್ಯೋಪಾದಾನಕಸ್ಯ ಕಾರ್ಯಸ್ಯ ಸತ್ಯತ್ವಾವಶ್ಯಂಭಾವಾದಿತಿ ಭಾವಃ । ತತ್ರ ದೃಷ್ಟಾಂತಃ ಆಮ್ರಸ್ಯೇತ್ಯಾದಿ ॥ ಉಪಾ-ದಾನೋಪಾದೇಯಯೋಃ ಸರ್ವತ್ರ ಸಾಜಾತ್ಯದರ್ಶನಾದಿತಿ ಭಾವಃ । ಅನೇನ ವಿಶ್ವಮಿಥ್ಯಾತ್ವ-ವಾದಾಖ್ಯಶಾಖಾ ಪತಿತೇತಿ ದ್ರಷ್ಟವ್ಯಮ್ ॥ ೬೯ ॥

**ಸತ್ಯಾಜ್ಞಾನಾಗತೋ ಭೇದೋ ಜ್ಞಾನಬಾಧ್ಯಃ ಕಥಂ ತವ ।**
**ಸತ್ಯಾಜ್ಞಾನನಿವೃತ್ತೇಶ್ಚಾಯೋಗಾನ್ಮೋಕ್ಷಃ ಕಥಂ ತವ ॥ ೭೦ ॥**

**ಅರ್ಥ**-ಸತ್ಯಾಜ್ಞಾನಾಗತಃ = ಸತ್ಯವಾದ ಅಜ್ಞಾನದಿಂದ ಉಂಟಾದ, ಆದ್ದರಿಂದಲೇ ಸತ್ಯವಾದ, ಭೇದಃ= ಭೇದವು, ತವ = ನಿನ್ನ ಮತದಲ್ಲಿ ಜ್ಞಾನಬಾಧ್ಯಃ ಕಥಂ = ಜ್ಞಾನಬಾಧ್ಯವಾಗುವುದು ಹೇಗೆ? ಸತ್ಯಾಜ್ಞಾನನಿವೃತ್ತೇಃ ಚ ಅಯೋಗಾತ್ = ಸತ್ಯವಾದ ಅಜ್ಞಾನಕ್ಕೆ ನಿವೃತ್ತಿಯು ಅಯುಕ್ತವಾದ್ದರಿಂದಲೂ, ತವ = ನಿನ್ನ ಮತದಲ್ಲಿ, ಮೋಕ್ಷಃ = ಅಜ್ಞಾನನಿವೃತ್ತಿರೂಪಮೋಕ್ಷವು, ಕಥಮ್ = ಹೇಗೆ?

**ಅನುವಾದ**- ಜೀವ-ಈಶರ ಭೇದವು ಅನಾದಿಯೆಂದು ಅದ್ವೈತದರ್ಶನವು ಅಂಗೀಕರಿಸಿದೆ. ಆದ್ದರಿಂದ ಅದು ಸತ್ಯವೇ. ಈ ಭೇದವನ್ನು ಯಾವುದಾದರೊಂದು ರೀತಿಯಿಂದ ಅಜ್ಞಾನ ಕಲ್ಪಿತ ಎಂದು ಸಾಧಿಸಿದರೂ ಇದು ಅಸತ್ಯವಾಗುವುದಿಲ್ಲ. ಏಕೆಂದರೆ ಅಜ್ಞಾನವು ಆರೋಪಿತವಲ್ಲ; ಸತ್ಯ ಎಂದು ಸಮರ್ಥಿಸಲಾಗಿದೆ. ಸತ್ಯ ಅಜ್ಞಾನದಿಂದ ಕಲ್ಪಿತವಾದ ಭೇದವು ಅಸತ್ಯವಾಗುವುದಿಲ್ಲ. ಸತ್ಯವೇ. ಸತ್ಯವಾದ ಬ್ರಹ್ಮನಿಗೆ ನಿವೃತ್ತಿಯು ಇಲ್ಲ. ಅಂತೆಯೇ ಸತ್ಯವಾದ ಭೇದವು ಜ್ಞಾನದಿಂದ ನಿವೃತ್ತವಾಗಲಾರದು.

ಇದಲ್ಲದೇ ಅಜ್ಞಾನವು ಸತ್ಯವಾದ್ದರಿಂದ ಇದಕ್ಕೆ ಬ್ರಹ್ಮನಿಗೆ ಹೇಗೆ ಹಾಗೆ ನಿವೃತ್ತಿಯು ಇಲ್ಲ. ಅದ್ವೈತ ದರ್ಶನದಲ್ಲಿ ಅಜ್ಞಾನ ನಿವೃತ್ತಿಯೇ ಮೋಕ್ಷ. ಆದ್ದರಿಂದ ಈ ದರ್ಶನದ ಪ್ರಕಾರ ಮೋಕ್ಷವೂ ಅನುಪಪನ್ನ.

**ಭಾವವಿಲಾಸಿನೀ**— ಸತ್ಯಾಜ್ಞಾನಾಗತಃ ಸತ್ಯಾಜ್ಞಾನೋಪಾದಾನಕಃ ಭೇದಃ । ಅತ ಏವ ಸತ್ಯಃ । ತವ ಮತೇ ಜ್ಞಾನಬಾಧ್ಯಃ ಕಥಮ್? ಸತ್ಯಸ್ಯ ಬ್ರಹ್ಮವದ್ ಬಾಧಾಯೋಗಾದಿತಿ ಭಾವಃ । ಅಥವಾ ಸತ್ಯಾಜ್ಞಾನಾಗತಃ ಸತ್ಯಾಜ್ಞಾನನಿಮಿತ್ತಕೋ ಭೇದಃ । ಅತ ಏವ ಸತ್ಯಃ । ಅಜ್ಞಾನಸಾರ್ವಜ್ಞಾಖ್ಯ-ಭೇದಕಧರ್ಮಯೋಸ್ಸತ್ಯತ್ವೇ ಭೇದಸ್ಯಾಪಿ ಸತ್ಯತ್ವಾವಶ್ಯಂಭಾವಾದಿತಿ ಭಾವಃ । ಜ್ಞಾನಬಾಧ್ಯಃ ಬ್ರಹ್ಮಜ್ಞಾನಬಾಧ್ಯಃ । ಮುಕ್ತಾವಪೀಶ್ವರಸಕಲಮಾಹಾತ್ಮ್ಯಾಜ್ಞಾನಸ್ಯ ಸತ್ತ್ವೇನ ವಿರುದ್ಧ-ಧರ್ಮಾನುವರ್ತನಾದಿತಿ ಭಾವಃ । ಅನೇನ ಭೇದಮಿಥ್ಯಾತ್ವಶಾಖಾ ಪತಿತೇತಿ ದ್ರಷ್ಟವ್ಯಮ್ । ತೇ ತವ ಮತೇ । ಸತ್ಯಸ್ಯಾಜ್ಞಾನಸ್ಯ ನಿವೃತ್ತೇರಯೋಗಾತ್ । ಪರೇಣ ಬ್ರಹ್ಮವತ್ ಸತ್ಯಸ್ಯ ನಿವೃತ್ತ್ಯನಂಗೀಕಾರಾದಿತಿ ಭಾವಃ । ಮೋಕ್ಷಃ ಅವಿದ್ಯಾನಿವೃತ್ತಿರೂಪಮೋಕ್ಷಃ । ಅನೇನಾಜ್ಞಾನ-ನಿವೃತ್ತಿರೂಪಚರಮಶಾಖಾ ಪತಿತೇತಿ ದ್ರಷ್ಟವ್ಯಮ್ ॥ ೭೦ ॥

**ವಿವರಣೆ**— 'ಸತ್ಯಾಜ್ಞಾನಾಗತಃ ಭೇದಃ' ಎಂದರೆ ಸತ್ಯವಾದ ಅಜ್ಞಾನವು ಭೇದದ ಉಪಾದಾನಕಾರಣ ಎಂದು ಅರ್ಥ. ಆದ್ದರಿಂದಲೇ ಆ ಭೇದವು ಸತ್ಯ. ಇಂತಹ ಸತ್ಯವಾದ ಭೇದವು ನಿನ್ನ ಮತದಲ್ಲಿ ಜ್ಞಾನದಿಂದ ಬಾಧ್ಯವಾಗುವುದು ಹೇಗೆ? ಸತ್ಯವಾದ ಬ್ರಹ್ಮನಿಗೆ

ಹೇಗೆ ಬಾಧವಿಲ್ಲವೋ ಹಾಗೆಯೇ ಸತ್ಯವಾದ ಭೇದಕ್ಕೂ ಬಾಧವು ಅನುಪಪನ್ನ ಎಂದು ಅಭಿಪ್ರಾಯ.

ಅಥವಾ 'ಸತ್ಯಾಜ್ಞಾನಾಗತೋ ಭೇದಃ' ಎಂದರೆ ಸತ್ಯವಾದ ಅಜ್ಞಾನವು ಭೇದದ ನಿಮಿತ್ತ ಕಾರಣ ಎಂದು ಅರ್ಥ. ಆದ್ದರಿಂದಲೇ ಭೇದವು ಸತ್ಯ. ಅಜ್ಞಾನ ಮತ್ತು ಸರ್ವಜ್ಞತ್ವ - ಇವು ವಿರುದ್ಧ ಧರ್ಮಗಳು. ವಿರುದ್ಧಧರ್ಮಗಳನ್ನು ಹೊಂದಿರುವ ಚೇತನಗಳು ಭಿನ್ನವಾಗಿರಬೇಕು. ಈ ವಿರುದ್ಧಧರ್ಮಗಳು ಸತ್ಯವಾದರೆ ಇವುಗಳನ್ನು ಹೊಂದಿರುವ ಚೇತನಗಳ ಭೇದವೂ ಸತ್ಯವೇ ಆಗಬೇಕು.

ಜೀವಾತ್ಮನಿಗೆ ಮುಕ್ತಿದೆಶೆಯಲ್ಲೂ= ಪರಮಾತ್ಮನ ಸಕಲ ಮಹಿಮೆಗಳ ಜ್ಞಾನವು ಇರುವುದಿಲ್ಲ. ಆದ್ದರಿಂದ, ಮುಕ್ತಿಯಲ್ಲೂ ಪರಮಾತ್ಮನು ಸರ್ವಜ್ಞ ಮತ್ತು ಮುಕ್ತ ಜೀವಾತ್ಮರು ಅಲ್ಪಜ್ಞರು. ವಿರುದ್ಧ ಧರ್ಮಗಳನ್ನು ಹೊಂದಿರುವುದರಿಂದ ಮುಕ್ತಿಯಲ್ಲೂ ಪರಮಾತ್ಮ-ಜೀವಾತ್ಮರ ಭೇದವು ಇದ್ದೇ ಇರುತ್ತದೆ. ಆದ್ದರಿಂದ ಭೇದವು ಜ್ಞಾನಬಾಧ್ಯವಲ್ಲ. ಈ ಕಾರಣದಿಂದ ಅದ್ವೈತ ಶಾಸ್ತ್ರವೆಂಬ ಮರದ 'ಭೇದಮಿಥ್ಯಾತ್ವ' ಎಂಬ ಟೊಂಗೆಯು ಬಿದ್ದು ಹೋಯಿತು ಎಂದು ತಿಳಿಯಬೇಕು.

ಅದ್ವೈತ ದರ್ಶನವು ಸತ್ಯಪದಾರ್ಥಕ್ಕೆ ನಿವೃತ್ತಿಯಾಗುವುದಿಲ್ಲ ಎಂದು ಅಂಗೀಕರಿಸಿದೆ. ಬ್ರಹ್ಮನಲ್ಲಿ ಅಜ್ಞಾನವು ಸತ್ಯ ಎಂದು ತೋರಿಸಲಾಗಿದೆ. ಆದ್ದರಿಂದ ಅಜ್ಞಾನದ ನಿವೃತ್ತಿಯೂ ಆಗುವುದಿಲ್ಲ. ಅಜ್ಞಾನದ ನಿವೃತ್ತಿಯೇ, ಈ ದರ್ಶನದ ಪ್ರಕಾರ ಮೋಕ್ಷ. ಆದ್ದರಿಂದ ಈ ದರ್ಶನದ ಪ್ರಕಾರ ಯಾರಿಗೂ ಮುಕ್ತಿಯೂ ಆಗುವಂತಿಲ್ಲ. ಈ ಕಾರಣದಿಂದ ಅದ್ವೈತಶಾಸ್ತ್ರವೆಂಬ ಮರದ ಕೊನೆಯ ಟೊಂಗೆಯೂ= ಮುಕ್ತಿಯೂ, ಬಿದ್ದು ಹೋಯಿತು ಎಂದು ತಿಳಿಯಬೇಕು.

**ಅಜ್ಞಾನಾಸಂಭವೇ ಕ್ವ ಸ್ಯಾತ್ ಪ್ರತಿಕರ್ಮವ್ಯವಸ್ಥಿತಿಃ ।**
**ಐಕ್ಯಸ್ಯಾऽವರಣಾಭಾವಾತ್ ಶಾಸ್ತ್ರವೇದ್ಯಂ ಚ ಕಿಂ ಭವೇತ್ ॥ ೭೦ ॥**

**ಅರ್ಥ-**ಅಜ್ಞಾನಾಸಂಭವೇ = ಅಜ್ಞಾನವೇ ಇಲ್ಲದಿದ್ದರೆ, ಪ್ರತಿಕರ್ಮವ್ಯವಸ್ಥಿತಿಃ ಕ್ವ ಸ್ಯಾತ್ = ಜ್ಞಾನಕ್ಕೆ ವಿಷಯವ್ಯವಸ್ಥೆಯಾದರೂ ಎಲ್ಲಿದ್ದೀತು? ಐಕ್ಯಸ್ಯ = ಜೀವಬ್ರಹ್ಮೈಕ್ಯಕ್ಕೆ, ಆವರಣಾಭಾವಾತ್ = ಆವರಕವಾಗಿ ಅಜ್ಞಾನವು ಇಲ್ಲದಿರುವುದರಿಂದ, ಶಾಸ್ತ್ರವೇದ್ಯಂ ಚ ಕಿಂ ಭವೇತ್?= ಶಾಸ್ತ್ರದಿಂದ ತಿಳಿಯಲ್ಪಡಬೇಕಾದ ವಿಷಯವಾದರೂ ಯಾವುದು ಇದ್ದೀತು?

**ಪೀಠಿಕೆ-** ಕರ್ಮ= ವಿಷಯ. ಬೇರೆ ಬೇರೆ ಜ್ಞಾನಗಳಿಗೆ ಬೇರೆ ಬೇರೆ ವಿಷಯಗಳು ಇರುತ್ತವೆ. ಇದು ಎಲ್ಲರ ಅನುಭವ. ಇದು ವ್ಯವಸ್ಥಿತ. ಯಾವ ಇಂದ್ರಿಯಕ್ಕೆ ಯಾವ ವಸ್ತುವಿನ ಸಂನಿಕರ್ಷವು ಉಂಟಾಗಿ, ಆ ಇಂದ್ರಿಯಕ್ಕೆ ಮನಸ್ಸಿನ ಸಂನಿಕರ್ಷವು ಉಂಟಾಗಿ ವೃತ್ತಿಯು (ಜ್ಞಾನವು) ಹುಟ್ಟುವುದೋ ಆ ವೃತ್ತಿಗೆ ಆ ವಸ್ತುವು ವಿಷಯ.

ಉದಾ : ಚಕ್ಷುರಿಂದ್ರಿಯಕ್ಕೆ ಘಟದ ಸನ್ನಿಕರ್ಷವು ಉಂಟಾಗಿ, ಈ ಚಕ್ಷುರಿಂದ್ರಿಯಕ್ಕೆ ಮನಸ್ಸಿನ ಸನ್ನಿಕರ್ಷವು ಉಂಟಾದಾಗ ಮನಸ್ಸು ಪರಿಣಾಮವನ್ನು ಹೊಂದುತ್ತದೆ. ಈ ಮನಃ ಪರಿಣಾಮವು ವೃತ್ತಿಜ್ಞಾನ. ಇದಕ್ಕೆ ಘಟವು ವಿಷಯ. ಮನೋವೃತ್ತಿಗಳಿಗೆ = ಜ್ಞಾನಗಳಿಗೆ ಇರುವ ವಿಷಯಗಳ ವ್ಯವಸ್ಥೆಯೇ ಪ್ರತಿಕರ್ಮ ವ್ಯವಸ್ಥೆ.

**<u>ಅದ್ವೈತದರ್ಶನದ ಪ್ರಕಾರ ಪ್ರತಿಕರ್ಮವ್ಯವಸ್ಥೆ :</u>**

ಘಟ, ಪಟ ಮೊದಲಾದ ಸಕಲ ವಸ್ತುಗಳೂ ಬ್ರಹ್ಮನಲ್ಲಿ ಆರೋಪಿತ. ಬ್ರಹ್ಮನು ಅಧಿಷ್ಠಾನ. ಈ ಅಧಿಷ್ಠಾನವನ್ನು ಅಜ್ಞಾನವು ಆವರಿಸಿರುತ್ತದೆ. ಮೇಲೆ ಹೇಳಿದಂತೆ ಹುಟ್ಟುವ ವೃತ್ತಿಗಳಿಂದ ಆಯಾಯಾ ಆರೋಪಕ್ಕೆ ಅಧಿಷ್ಠಾನವಾದ ಬ್ರಹ್ಮನನ್ನು ಆವರಿಸಿರುವ ಅಜ್ಞಾನವು ನಿವೃತ್ತವಾಗುತ್ತದೆ. ಯಾವ ವೃತ್ತಿಯಿಂದ ಯಾವ ಆರೋಪದ ಅಧಿಷ್ಠಾನಕ್ಕೆ ಆವರಣವಾದ ಅಜ್ಞಾನದ ನಿವೃತ್ತಿಯಾಗುವುದೋ ಅದು ಆ ವೃತ್ತಿಗೆ ವಿಷಯ.

ಉದಾ: ಘಟವೃತ್ತಿಯಿಂದ ಘಟಾರೋಪದ ಅಧಿಷ್ಠಾನಕ್ಕೆ ಆವರಣವಾದ ಅಜ್ಞಾನದ ನಿವೃತ್ತಿಯಾಗುತ್ತದೆ. ಆದ್ದರಿಂದ ಘಟವೃತ್ತಿಗೆ ಘಟವು ವಿಷಯ).

**ಅನುವಾದ-(೧)** ಅದ್ವೈತ ದರ್ಶನದ ಪ್ರಕಾರ ಸತ್ಯವಸ್ತುವಿಗೆ ನಿವೃತ್ತಿಯಾಗುವುದಿಲ್ಲ. ಅಜ್ಞಾನವು ಸತ್ಯ. (ನೋಡಿ ಪದ್ಯ ೬೭). ಆದ್ದರಿಂದ ಅದಕ್ಕೆ ನಿವೃತ್ತಿಯು ಇಲ್ಲ. ಆದ್ದರಿಂದ ಪ್ರತಿಕರ್ಮ ವ್ಯವಸ್ಥೆಯು ಹೇಗೆ?

(೨) ಅಜ್ಞಾನವು ಇಲ್ಲದಿದ್ದರೆ ಪ್ರತಿಕರ್ಮವ್ಯವಸ್ಥೆಯು ಹೇಗೆ? (ಅಜ್ಞಾನವು ಸತ್ಯವಾದರೆ ಅದ್ವೈತಭಂಗ; ಆದ್ದರಿಂದ ಸತ್ಯವಲ್ಲ. ಅನಿರ್ವಚನೀಯವೂ ಅಲ್ಲ; ಪ್ರಮಾಣವಿಲ್ಲದಿರುವುದರಿಂದ. ಆದ್ದರಿಂದ ಅದು ಅಸತ್, ಎಂದರೆ, ಇಲ್ಲ. ಇಲ್ಲದಿರುವಿಕೆಯೇ ಅಸಂಭವ).

(೩) (ಅದ್ವೈತದರ್ಶನದಲ್ಲಿ ಶಾಸ್ತ್ರಕ್ಕೆ ಐಕ್ಯವೇ ವಿಷಯ; ಇದು ಬ್ರಹ್ಮ ಸ್ವರೂಪವೇ; ಬ್ರಹ್ಮನು ಸ್ವಪ್ರಕಾಶ; ಇದರ ಜ್ಞಾನವು ಯಾವಾಗಲೂ ಇದೆ; ಅಜ್ಞಾನವು ಆವರಣವಾಗಿ ಇದ್ದರೆ, ಇದರಿಂದಾಗಿ ಬ್ರಹ್ಮಸ್ವರೂಪವೇ ಆದ ಐಕ್ಯದ ಜ್ಞಾನವು ಇಲ್ಲ; ಅಜ್ಞಾನದ ಪರಿಹಾರಕ್ಕಾಗಿ ಶಾಸ್ತ್ರವು ಬೇಕು; ಆದ್ದರಿಂದ ಶಾಸ್ತ್ರಕ್ಕೆ ಐಕ್ಯವು ವಿಷಯ ಎಂದು ಹೇಳಬಹುದು).

ಐಕ್ಯಕ್ಕೆ ಆವರಣವಾಗಿ ಅಜ್ಞಾನವು ಇಲ್ಲದಿರುವುದರಿಂದ ಶಾಸ್ತ್ರಕ್ಕೆ ಐಕ್ಯವು ವಿಷಯವಾಗುವುದೇ? ಇಲ್ಲ.

**ಭಾವವಿಲಾಸಿನೀ–** ಪ್ರತಿಕರ್ಮವ್ಯವಸ್ಥಿತಿಃ ಯದಪರೋಕ್ಷವೃತ್ತ್ಯಾ ಯದಧಿಷ್ಠಾನಾವಾರಕಾಜ್ಞಾನಂ ನಿವರ್ತತೇ ಸ ಘಟಃ ಪಟೋ ವಾ ತಸ್ಯ ಚೈತನ್ಯಸ್ಯ ವಿಷಯ ಇತಿ ಪ್ರತಿವಿಷಯವ್ಯವಸ್ಥೇತ್ಯರ್ಥಃ। ಉಕ್ತರೀತ್ಯಾ ಸತ್ಯಸ್ಯಾಜ್ಞಾನಸ್ಯ ನಿವೃತ್ತ್ಯಯೋಗಾದಿತಿ ಭಾವಃ। ಅನೇನ ಪ್ರತಿಕರ್ಮ-

ವ್ಯವಸ್ಥಾಖ್ಯಶಾಖಾ ಪತಿತೇತಿ ದ್ರಷ್ಟವ್ಯಮ್ । ಐಕ್ಯಸ್ಯ ಜೀವಬ್ರಹ್ಮೈಕ್ಯಸ್ಯಾವರಕಾಭಾವಾತ್ ಸತ್ಯಸ್ಯಾಜ್ಞಾನಸ್ಯ ಭೇದಸ್ಥಾಪಕಸ್ಯೈಕ್ಯಘಾತಕತಯಾ ಆರೋಪಿತಮಜ್ಞಾನಮಾವರಕಮಿತಿ ವಕ್ತವ್ಯಮ್ । ತಸ್ಯಾಭಾವಾದಿತ್ಯರ್ಥಃ । ಸ್ವತಸ್ಸಿದ್ಧಬ್ರಹ್ಮಸ್ವರೂಪಭೂತೈಕ್ಯಸ್ಯ ಶಾಸ್ತ್ರವಿಷಯತಾ ಅಜ್ಞಾನಾವರಣಾದೇವ ಹಿ ವಕ್ತವ್ಯಾ । ತದಭಾವೇ ತಸ್ಯ ಕಥಂ ಶಾಸ್ತ್ರವೇದ್ಯತೇತಿ ಭಾವಃ । ಅನೇನ ಶಾಸ್ತ್ರತರೋರ್ವಿಷಯಾಖ್ಯಮೂಲಶಾಖೈವ ಪತಿತೇತಿ ದ್ರಷ್ಟವ್ಯಮ್ ॥ ೭೧ ॥

**ವಿವರಣೆ–** (ಅ) ಇಲ್ಲಿಯ ಪದಗಳಿಗೆ ಮೂರು ವಿಧ ಅನ್ವಯ :

(1) ಸತ್ಯಾಜ್ಞಾನನಿವೃತ್ತೇರಯೋಗಾತ್ ಕ್ವ ಸ್ಯಾತ್ ಪ್ರತಿಕರ್ಮವ್ಯವಸ್ಥಿತಿಃ?

(2) ಅಜ್ಞಾನಾಸಂಭವೇ ಕ್ವ ಸ್ಯಾತ್ ಪ್ರತಿಕರ್ಮವ್ಯವಸ್ಥಿತಿಃ?

(3) ಅಜ್ಞಾನಾಸಂಭವೇ ಐಕ್ಯಸ್ಯ ಆವರಣಾಭಾವಾತ್ ಶಾಸ್ತ್ರವೇದ್ಯಂ ಚ ಕಿಂ ಭವೇತ್? 1 ಮತ್ತು 2ನೆಯ ಅನ್ವಯಗಳು ಶ್ರೀಸುರೋತ್ತಮೀಯದಲ್ಲಿ ಉಕ್ತವಾಗಿವೆ.

(ಆ) 'ಅಜ್ಞಾನಾಸಂಭವ' ದಿಂದ ಮಾಯಾವಾದವೃಕ್ಷದ ಪ್ರತಿಕರ್ಮವ್ಯವಸ್ಥಾ ಎಂಬ ಕೊಂಬೆಯು ಮತ್ತು 'ವಿಷಯ' ಎಂಬ ಮೂಲ ಕೊಂಬೆಯು ಬಿದ್ದು ಹೋದವು ಎಂದು ತಿಳಿಯುತ್ತದೆ. - ಶ್ರೀಸುರೋತ್ತಮೀಯ.

**ಅಜ್ಞಾನಾಸಂಭವಾದ್ ಬ್ರಹ್ಮಭ್ರಾಂತ್ಯಾ ಸರ್ವಂ ನ ಕಲ್ಪಿತಮ್ ।**
**ಅಜ್ಞಾನಾಸಂಭವಾದೇವ ಶಾಸ್ತ್ರಂ ಸರ್ವಂ ಗತಂ ತವ ॥ ೭೨ ॥**

**ಅರ್ಥ**–ಅಜ್ಞಾನಾಸಂಭವಾತ್= ಬ್ರಹ್ಮನಲ್ಲಿ ಅಜ್ಞಾನವು ಕೂಡದಿರುವುದರಿಂದ, ಸರ್ವಂ= ಎಲ್ಲವೂ, ಬ್ರಹ್ಮಭ್ರಾಂತ್ಯಾ= ಬ್ರಹ್ಮನ ಭ್ರಾಂತಿ(ವಿಪರೀತಜ್ಞಾನ)ಯಿಂದ, ನ ಕಲ್ಪಿತಂ= ಕಲ್ಪಿತವಲ್ಲ, ಅಜ್ಞಾನಾಸಂಭವಾದೇವ= ಅಜ್ಞಾನವು ಕೂಡದಿರುವುದರಿಂದಲೇ, ತವ= ನಿನ್ನ ಸರ್ವಂ ಶಾಸ್ತ್ರಂ = ಸಮಗ್ರ ಶಾಸ್ತ್ರವು (ಶಾಸ್ತ್ರದ ಎಲ್ಲ ಪ್ರಮೇಯಗಳು) ಗತಂ= ಬಿದ್ದುಹೋದವು.

**ಅನುವಾದ–** ಬ್ರಹ್ಮನಿಗೆ ತನ್ನ ಬಗ್ಗೆ ಅಜ್ಞಾನವಿದೆ ಎಂದು ಸಮರ್ಥಿಸಲು ಆಗುವುದಿಲ್ಲ. ಆದ್ದರಿಂದ ಅಜ್ಞಾನಕ್ಕೆ ಅಸಂಭವ. ಆದ್ದರಿಂದ ಜಗತ್ತು ಕಲ್ಪಿತವಲ್ಲ. ಅಜ್ಞಾನವು ಇಲ್ಲವಾದ್ದರಿಂದಲೇ ಶಾಸ್ತ್ರಕ್ಕೆ ವಿಷಯ- ಪ್ರಯೋಜನ- ಅಧಿಕಾರಿ- ಸಂಬಂಧಗಳು ಸಿದ್ಧವಾಗುವುದಿಲ್ಲ. ಇವುಗಳಿಲ್ಲದ ಪ್ರಬಂಧವು ಶಾಸ್ತ್ರವಲ್ಲ. ಆದ್ದರಿಂದ ಶಾಸ್ತ್ರವಾಗುವ ಅರ್ಹತೆಯನ್ನೇ ಕಳೆದುಕೊಳ್ಳುವ ಮಾಯಾವಾದಕ್ಕೆ ಸರ್ವನಾಶ.

**ಭಾವವಿಲಾಸಿನೀ–** ಪೂರ್ವಂ ಸತ್ಯೋಪಾದಾನಕತ್ವೇನ ಸತ್ಯತ್ವಮುಕ್ತಮ್ । ಇದಾನೀಂ ತು ಭ್ರಾಂತ್ಯಯೋಗೇನ ಸತ್ಯತ್ವಮಿತಿ ಭಾವಃ । ಉಪಸಂಹರತಿ ಅಜ್ಞಾನಾಸಂಭವಾದಿತಿ ॥ ಗುಣಾನಾ-

ಮಾಕಾರಸ್ಯ ಚ ಮಿಥ್ಯಾಭೂತಾಜ್ಞಾನಕಲ್ಪಿತತ್ವೇನ ಮಿಥ್ಯಾತ್ವೇ ಹಿ ಪರಮಾರ್ಥತೋ ನೈರ್ಗುಣ್ಯಂ ನಿರಾಕಾರತ್ವಂ ಚ ಸಿದ್ಧ್ಯೇತ್ । ಅಜ್ಞಾನಾಸಂಭವಾದೇವ ತದುಭಯರೂಪಶಾಖಯೋರಪಿ ಪತನಾತ್ ಸರ್ವಮಿತ್ಯುಕ್ತಮ್ ಏವಮಜ್ಞಾನಪ್ರತೀತೇರಾರೋಪತ್ವಾಸಂಭವೇ ಪ್ರಮಾತ್ವಾವಶ್ಯಂಭಾವೇನ ಪ್ರಮಾವಿಷಯಸ್ಯ ಚ ಸತ್ಯತ್ವನಿಯಮಾತ್ ಸತ್ಯಾಜ್ಞಾನಂ ಪ್ರಸಾಧ್ಯ ಮಾಯಿಮತಂ ದೂಷಿತಮ್ । ವಸ್ತುತಸ್ತು ಮಿಥ್ಯಾಭೂತಾಜ್ಞಾನಸ್ಯಾಸಂಭವೇ ಸತ್ಯಾಜ್ಞಾನಸ್ಯ ಚ ತೇನೈವಾನಂಗೀಕಾರೇಣಾಜ್ಞಾನಸ್ವರೂಪಸ್ಯೈವಾಭಾವಾತ್ ಅಜ್ಞಸ್ಯಾಧಿಕಾರಿಣೋಽಜ್ಞಾತಸ್ಯ ವಿಷಯಸ್ಯ ಅಜ್ಞಾನನಿವೃತ್ತಿರೂಪಸ್ಯ ಪ್ರಯೋಜನಸ್ಯಾವಿದ್ಯಕ ಭೇದಸ್ಯಾಽವಿದ್ಯಕಭಗವದ್ಗುಣದೇಹಾದೇರಾವಿದ್ಯಕಪ್ರಪಂಚಾದೇಶ್ಚಾಯೋಗೇನ ತತ್ಪ್ರಕ್ರಿಯಾ ಸರ್ವಾಽಪಿ ವಿಶ್ರಿಯ್ಯೈವಾಭೂದಿತಿ ದ್ರಷ್ಟವ್ಯಮ್ ॥ ೭೨ ॥

**ವಿವರಣೆ–** ಹಿಂದೆ ಹೇಳಿದ ಪ್ರಕಾರ ಬ್ರಹ್ಮನಲ್ಲಿ ಅಜ್ಞಾನವು ಕೂಡುವುದಿಲ್ಲ. ಆದ್ದರಿಂದ ಇಡೀ ಜಗತ್ತು ಬ್ರಹ್ಮನ ಅಜ್ಞಾನಕಲ್ಪಿತವೆನ್ನಲು ಬರುವುದಿಲ್ಲ. ಭ್ರಮೆಯು ಅಧಿಷ್ಠಾನದ ಅಜ್ಞಾನದಿಂದ ಉಂಟಾಗುತ್ತದೆ. ಅಜ್ಞಾನವೇ ಕೂಡದಿದ್ದಾಗ, ಅಧಿಷ್ಠಾನದ ಅಜ್ಞಾನದ ಮೂಲಕ ಉಂಟಾಗುವ ಭ್ರಾಂತಿಗೆಲ್ಲಿ ಅವಕಾಶ? ಸತ್ಯಾಜ್ಞಾನಭವಂ ವಿಶ್ವಮಸತ್ಯಂ ಕೇನ ಹೇತುನಾ? (ಪದ್ಯ 69) ಎಂದು ಜಗತ್ತು ಸತ್ಯ ಎಂದು ಸಮರ್ಥಿಸಲಾಗಿದೆ. ಈ ಶ್ಲೋಕದಲ್ಲಿಯೂ ಜಗತ್ತುಸತ್ಯ ಎಂದು ಸಮರ್ಥಿಸಲಾಗಿದೆ. ಹಿಂದೆ ಸತ್ಯವಾದ ಅಜ್ಞಾನವೆಂಬ ಉಪಾದಾನಕಾರಣದಿಂದ ಹುಟ್ಟಿದ್ದರಿಂದ ಜಗತ್ತು ಸತ್ಯ ಎಂದು ಸಮರ್ಥಿಸಲಾಗಿದೆ. ಈ ಶ್ಲೋಕದಲ್ಲಿ ಅಜ್ಞಾನವು ಕೂಡದಿರುವುದರಿಂದ ಬ್ರಹ್ಮನಿಗೆ ಭ್ರಾಂತಿಯೇ ಕೂಡುವುದಿಲ್ಲ; ಆದ್ದರಿಂದ ಬ್ರಹ್ಮಭ್ರಾಂತಿಯಿಂದ ಜಗತ್ತು ಕಲ್ಪಿತವಾಗಿದೆ ಎಂದು ಹೇಳಲು ಬರುವುದಿಲ್ಲ; ಅರ್ಥಾತ್ ಜಗತ್ತು ಸತ್ಯ ಎಂದು ನಿರೂಪಿಸಲಾಗುತ್ತಿದೆ.

ಅದ್ವೈತಸಿದ್ಧಾಂತದಲ್ಲಿ ಬ್ರಹ್ಮನನ್ನು ಪರಮಾರ್ಥತಃ ನಿರ್ಗುಣ(ಜ್ಞಾನಾದಿಗುಣಶೂನ್ಯ) ನಿರಾಕಾರ (ಕೈ ಕಾಲು ಮೊದಲಾದ ಆಕಾರವಿಲ್ಲದವನು) ಎಂದು ಅಂಗೀಕರಿಸಲಾಗಿದೆ. ಶಾಸ್ತ್ರಗಳು ಬ್ರಹ್ಮನಲ್ಲಿ ಇವೆ ಎಂದು ಹೇಳುವ ಜ್ಞಾನಾನಂದಾದಿಗುಣಗಳು, ಕೈ ಕಾಲು ಮೊದಲಾದ ಆಕಾರವು, ಮಿಥ್ಯಾಭೂತಾವಾದ ಅಜ್ಞಾನದಿಂದ ಕಲ್ಪಿತ; ಆದ್ದರಿಂದ ಮಿಥ್ಯಾ ಎಂದು ಸಿದ್ಧವಾದರೆ ಮಾತ್ರ ಬ್ರಹ್ಮನು ಪರಮಾರ್ಥತಃ ನಿರ್ಗುಣ, ನಿರಾಕಾರ ಎಂದು ಸಿದ್ಧವಾಗುತ್ತದೆ. ಆದರೆ ಅಜ್ಞಾನವು ಅನುಪಪನ್ನ. ಆದ್ದರಿಂದ ಬ್ರಹ್ಮನು ನಿರ್ಗುಣ, ನಿರಾಕಾರ ಎಂಬ ಎರಡು ಮುಖ್ಯ ಕೊಂಬೆಗಳೂ ಬಿದ್ದುಹೋಗುವುದರಿಂದ **ಸರ್ವಂ** (ಎಲ್ಲ ಶಾಸ್ತ್ರ) ಎಂದು ಹೇಳಲಾಗಿದೆ. ಅಜ್ಞಾನಪ್ರತೀತಿಯು ಭ್ರಮೆ ಎಂದು ಸಿದ್ಧವಾಗದಿದ್ದರೆ ಅದು ಪ್ರಮಾ ಆಗಲೇಬೇಕು. ಪ್ರಮಾವಿಷಯವು ಸತ್ಯವಾಗಿರಲೇಬೇಕು ಆದ್ದರಿಂದ ಅಜ್ಞಾನವು ಸತ್ಯವೆಂದು ಸಿದ್ಧವಾಗುವುದು. ಹೀಗೆ ಸತ್ಯವಾದ ಅಜ್ಞಾನವನ್ನು ಸಾಧಿಸಿ ಮಾಯಾವಾದಿಗಳ ಮತವನ್ನು ದೂಷಿಸಲಾಗಿದೆ.

ವಸ್ತುತಃ ಮಿಥ್ಯಾಭೂತವಾದ ಅಜ್ಞಾನವು ಅನುಪಪನ್ನ. ಸತ್ಯವಾದ ಅಜ್ಞಾನವನ್ನು ಮಾಯಾವಾದವೇ ಅಂಗೀಕರಿಸುವುದಿಲ್ಲ. ಆದ್ದರಿಂದ ಅಜ್ಞಾನವೇ ಸಿದ್ಧವಾಗುವುದಿಲ್ಲ. ಆಗ ಅದ್ವೈತಶಾಸ್ತ್ರಕ್ಕೆ ಅದ್ವೈತಿಗಳು ಹೇಳುವ ಅಜ್ಞನು ಅಧಿಕಾರಿ, ಅಜ್ಞಾತವಾದ ಜೀವಬ್ರಹ್ಮೈಕ್ಯವು ವಿಷಯ, ಅಜ್ಞಾನನಿವೃತ್ತಿಯು ಪ್ರಯೋಜನ ಮುಂತಾದವು ಕೂಡಲಾರವು. ಅವಿದ್ಯಾ(ಅಜ್ಞಾನ)ಕಲ್ಪಿತವಾದ ಭೇದವು, ಅಜ್ಞಾನಕಲ್ಪಿತವಾದ ಭಗವದ್ಗುಣಗಳು, ಅಜ್ಞಾನಕಲ್ಪಿತವಾದ ದೇಹಾದಿಗಳು, ಅಜ್ಞಾನಕಲ್ಪಿತವಾದ ಪ್ರಪಂಚ, ಇವೆಲ್ಲವೂ ಅಜ್ಞಾನವನ್ನೇ ಅವಲಂಬಿಸಿರುವುದರಿಂದ ಅಜ್ಞಾನವು ಕೂಡದಿದ್ದಾಗ ಇವೆಲ್ಲ ಪ್ರಕ್ರಿಯೆಗಳು ಬಿದ್ದುಹೋಗುವವು ಎಂದು ತಿಳಿಯಬೇಕು.

'ಅಜ್ಞಾನಾಸಂಭವಾತ್, ಬ್ರಹ್ಮಭ್ರಾಂತ್ಯಾ ಸರ್ವಂ ನ ಕಲ್ಪಿತಮ್' - ಈ ಮಾತಿನ ಅಭಿಪ್ರಾಯವಿಷ್ಟು; ಬ್ರಹ್ಮನ ಭ್ರಾಂತಿಯಿಂದ, ಅಂದರೆ, ವಿಪರೀತಜ್ಞಾನದಿಂದ ಇಡೀ ಜಗತ್ತು ಕಲ್ಪಿತವಾಗಿದೆ ಎಂದು ಹೇಳುವುದು ಸಮಂಜಸವಾಗಿಲ್ಲ. ಏಕೆಂದರೆ ಭ್ರಾಂತಿಯು ಅಧಿಷ್ಠಾನದ ಅಜ್ಞಾನದಿಂದಲೇ ಉಂಟಾಗುತ್ತದೆ. ಉದಾಹರಣೆಗೆ ಹಗ್ಗದ ಅಜ್ಞಾನದಿಂದ, ಅಂದರೆ, ಹಗ್ಗದ ಸರಿಯಾದ ತಿಳುವಳಿಕೆ ಇಲ್ಲದಿರುವುದರಿಂದ ಹಾವಿನ ಭ್ರಾಂತಿಯುಂಟಾಗುತ್ತದೆ. ಪ್ರಪಂಚದ ಭ್ರಮೆಗೆ ಬ್ರಹ್ಮನೇ ಅಧಿಷ್ಠಾನ. ಅವನ ಬಗ್ಗೆ ಅಜ್ಞಾನವೇ ಭ್ರಮೆಗೆ ಕಾರಣವಾಗಬೇಕು. ಹಿಂದೆ ಹೇಳಿದ ಪ್ರಕಾರ ಅಜ್ಞಾನವೇ ಕೂಡದಿರುವುದರಿಂದ ಅಜ್ಞಾನಮೂಲಕವಾಗಿ ಬರುವ ಭ್ರಾಂತಿಗೆ ಅವಕಾಶವೇ ಇಲ್ಲ.

ಕಿಂಚಾಜ್ಞಾನಸ್ಯ ವಿಜ್ಞಾನಮಹಮಿತ್ಯೇವ ದೇಹಿನಾಮ್ ।
ಆಶಾ ಬ್ರಹ್ಮಾಶ್ರಿತಾಜ್ಞಾನೇ ಪಶ್ಯ ಕಿಂ ಕೇನ ಸಂಗತಮ್ ॥ ೭೩ ॥

**ಅರ್ಥ**-ಕಿಂಚ = ಇದಲ್ಲದೆ, ಅಹಮ್ ಇತಿ= ನಾನು ಎಂದು= ನಾನು ಅಜ್ಞ ಎಂದು, ಅಜ್ಞಾನಸ್ಯ= ಅಜ್ಞಾನದ, ವಿಜ್ಞಾನಂ = ಪ್ರತೀತಿಯು, ದೇಹಿನಾಮೇವ = ದೇಹಧಾರಿಗಳಿಗೆ ಮಾತ್ರ ಇದೆ (ಆದರೆ), ಬ್ರಹ್ಮಾಶ್ರಿತಾಜ್ಞಾನೇ= ಬ್ರಹ್ಮನಲ್ಲಿರುವ ಅಜ್ಞಾನದ ಬಗ್ಗೆ, (ನಿನಗೆ) ಆಶಾ= ಆಸೆಯು, ಕಿಂ ಕೇನ ಸಂಗತಂ?= ಯಾವುದು ಯಾವುದರ ಸಂಬಂಧವನ್ನು ಹೊಂದಿದೆ? ಪಶ್ಯ= ನೋಡು. (ದೇಹಧಾರಿಗಳಿಗೆ ಇರುವ 'ಅಹಮಜ್ಞಃ' ಎಂಬ ಪ್ರತೀತಿ ಮತ್ತು ಬ್ರಹ್ಮಾಜ್ಞಾನಕ್ಕೆ ಏನು ಸಂಬಂಧ?)

**ಅನುವಾದ**- 'ಅಹಮಜ್ಞಃ' 'ಮಾಮ್ ಅನ್ಯಂ ಚ ನ ಜಾನಾಮಿ' - 'ನಾನು ಅಜ್ಞ' 'ನಾನು ನನ್ನನ್ನು ತಿಳಿದಿಲ್ಲ, ಬೇರೆ ವ್ಯಕ್ತಿಯನ್ನು ತಿಳಿದಿಲ್ಲ' ಇವು ದೇಹಧಾರಿ ಜೀವಾತ್ಮರ ಪ್ರತ್ಯಕ್ಷ. ಇದರ ಬಗ್ಗೆ ವಿವಾದವಿಲ್ಲ. ಈ ಪ್ರತ್ಯಕ್ಷವು ದೇಹಧಾರಿಗಳಿಗೆ ಮಾತ್ರ ತಮ್ಮಲ್ಲಿ ಅಜ್ಞಾನವಿದೆ ಎಂದು ಜ್ಞಾನವು ಬರುತ್ತದೆ ಎಂದು ತಿಳಿಸುವ ಪ್ರಮಾಣ. ಬ್ರಹ್ಮನು ದೇಹಧಾರಿಯಲ್ಲ. ಮಾಯಾವಾದಿಗಳಿಗೆ ಈ ಪ್ರಮಾಣದಿಂದ

ಬ್ರಹ್ಮನಲ್ಲಿ ಅಜ್ಞಾನವು ಇದೆ ಎಂದು ತಿಳಿಸುವ ಆಸೆ! ಇದು ಪ್ರಮಾಣಾನುಗುಣವಾದ ಪ್ರಮೇಯ ನಿರ್ಣಯವಲ್ಲ. ಆದ್ದರಿಂದ ಈ ಆಸೆಯು ಅಸಂಗತ.

**ಭಾವವಿಲಾಸಿನೀ–** ಪ್ರಕಾರಾಂತರೇಣಾಪ್ಯಜ್ಞಾನವಾದಂ ದೂಷಯತಿ **ಕಿಂಚೇತಿ** ॥ ಅಹಮಿತ್ಯಜ್ಞಾನಸ್ಯ ವಿಜ್ಞಾನಂ ದೇಹಿನಾಮೇವೇತಿ ಸಂಬಂಧಃ । ಅಹಮಜ್ಞೋ, ಮಾಮನ್ಯಂ ಚ ನ ಜಾನಾಮೀತಿ ವದಂತೋ ಲೌಕಿಕಾ ಏವ ಪುರುಷಾಃ । ನತ್ವಲೌಕಿಕಸ್ಸರ್ವಜ್ಞೋ ಭಗವಾನಪ್ಯೇವಮಾಹ । ಅತಃ ಪ್ರತ್ಯಕ್ಷಂ ಜೀವೇಷ್ವೇವಾಜ್ಞಾನಂ ಸಾಧಯತಿ । ಬ್ರಹ್ಮಾಶ್ರಿತಾಜ್ಞಾನೇ ಪರಸ್ಯಾಶಾ, ಅಹಮಜ್ಞ ಇತಿ ಪ್ರತ್ಯಕ್ಷಾದ್ ಬ್ರಹ್ಮಣ್ಯಜ್ಞಾನಂ ಸಿದ್ಧ್ಯತೀತ್ಯಭಿಸಂಧಿಃ । ತಥಾಚ ಪ್ರಮಾಣಮನ್ಯತ್ರ ಪ್ರಮೇಯಮನ್ಯತ್ರೇತ್ಯಸಂಗತಿರೇವ । ಅತೋ ಬ್ರಹ್ಮೈವ ಸ್ವಾಜ್ಞಾನವಶಾತ್ ಸಂಸರತೀತ್ಯಾದಿ ಪ್ರಮೇಯಮಪ್ಯಸಂಗತಮೇವೇತಿ ಭಾವಃ ॥ ೭೩॥

ಐಕ್ಯಾತ್ ತದೇವ ಚೇದ್ ಬ್ರಾಹ್ಮಮನ್ಯೋನ್ಯಾಶ್ರಯತಾ ತದಾ ॥ ೭೪ ॥

**ಅರ್ಥ**-ಐಕ್ಯಾತ್= ಜೀವ ಮತ್ತು ಬ್ರಹ್ಮ ಒಂದೇ ಆದ್ದರಿಂದ, ತದೇವ = ಅಹಮಜ್ಞಃ ಎಂಬ ಜೀವಾಜ್ಞಾನಪ್ರತ್ಯಕ್ಷವೇ, ಬ್ರಾಹ್ಮಂ ಚೇತ್= ಬ್ರಹ್ಮಾಜ್ಞಾನ ಪ್ರತ್ಯಕ್ಷವೆಂದರೆ, ತದಾ = ಆಗ, ಅನ್ಯೋನ್ಯಾಶ್ರಯತಾ (ಸ್ಯಾತ್)= ಅನ್ಯೋನ್ಯಾಶ್ರಯತ್ವದೋಷವು ಉಂಟಾಗುವುದು.

**ಭಾವವಿಲಾಸಿನೀ–** ಐಕ್ಯಾಜ್ಜೀವಬ್ರಹ್ಮಣೋರೈಕ್ಯಾತ್ ತದೇವ ಜೀವಾಜ್ಞಾನಪ್ರತ್ಯಕ್ಷಮೇವ ಬ್ರಾಹ್ಮಂ ಬ್ರಹ್ಮಸಂಬಂಧಿ ಬ್ರಹ್ಮಾಜ್ಞಾನಪ್ರತ್ಯಕ್ಷಂ ಚೇದಿತಿ ಸಂಬಂಧಃ । ತದಾಽನ್ಯೋನ್ಯಾಶ್ರಯತಾ ಸ್ಯಾದಿತ್ಯರ್ಥಃ ॥ ೭೪ ॥

**ವಿವರಣೆ–** ಜೀವಾಜ್ಞಾನಪ್ರತ್ಯಕ್ಷವು ಬ್ರಹ್ಮನಲ್ಲಿ ಅಜ್ಞಾನವಿದೆ ಎನ್ನಲು ಹೇಗೆ ಪ್ರಮಾಣ? ಈ ಪ್ರಶ್ನೆಗೆ ಜೀವನೇ ಬ್ರಹ್ಮ; ಆದ್ದರಿಂದ 'ಅಹಮಜ್ಞಃ' ಎಂಬ ಜೀವಾಜ್ಞಾನಪ್ರತ್ಯಕ್ಷವೇ ಬ್ರಹ್ಮಾಜ್ಞಾನ ಪ್ರತ್ಯಕ್ಷ ಎಂದು ಉತ್ತರವನ್ನು ಹೇಳಿದರೆ, ಐಕ್ಯ ಸಿದ್ಧಿ ಮತ್ತು ಬ್ರಹ್ಮಾಜ್ಞಾನ ಸಿದ್ಧಿಗಳಿಗೆ ಅನ್ಯೋನ್ಯಾಶ್ರಯತಾ ಇದೆ.

ಐಕ್ಯಸಿದ್ಧೌ ಭವೇದಜ್ಞಂ ಬ್ರಹ್ಮ ತಸ್ಯಾಜ್ಞತಾವಶಾತ್ ।
ಜೀವಭಾವೇ ಭವೇದೈಕ್ಯಂ ತತೋಽನ್ಯೋನ್ಯಾಶ್ರಯೋ ನ ಕಿಮ್ ॥ ೭೫ ॥

**ಅರ್ಥ**-ಐಕ್ಯಸಿದ್ಧೌ = ಜೀವಬ್ರಹ್ಮರ ಐಕ್ಯವು ಸಿದ್ಧವಾದರೆ, ಬ್ರಹ್ಮ = ಬ್ರಹ್ಮನು, ಅಜ್ಞಂ ಭವೇತ್ = ಅಜ್ಞಾನಕ್ಕೆ ಆಶ್ರಯನಾಗುವನು. ತಸ್ಯ = ಆ ಬ್ರಹ್ಮನಿಗೆ, ಅಜ್ಞತಾವಶಾತ್ = ಅಜ್ಞಾನದಿಂದ, ಜೀವಭಾವೇ = ಜೀವತ್ವವು ಉಂಟಾಗಲು, ಐಕ್ಯಂ = ಜೀವೈಕ್ಯವು, ಭವೇತ್ = ಆಗುವುದು. ತತಃ = ಆದ್ದರಿಂದ, ಅನ್ಯೋನ್ಯಾಶ್ರಯಃ ನ ಕಿಮ್?= ಅನ್ಯೋನ್ಯಾಶ್ರಯವಲ್ಲವೆ?

**ಅನುವಾದ-** ಜೀವನೇ ಬ್ರಹ್ಮ ಎಂದು ಸಿದ್ಧವಾದರೆ 'ಅಹಮಜ್ಞಃ' ಎಂಬ ಪ್ರತ್ಯಕ್ಷದಿಂದ ಬ್ರಹ್ಮನು ಅಜ್ಞ ಎಂದು ಸಿದ್ಧವಾಗುತ್ತದೆ. ಅಜ್ಞಾನದಿಂದ ಬ್ರಹ್ಮನೇ ಜೀವನಾಗಿದ್ದಾನೆ ಎಂದು ಸಿದ್ಧವಾದರೆ ಬ್ರಹ್ಮ ಮಾತ್ರವೇ ಸತ್ಯ ಎಂದು ಸಿದ್ಧವಾಗಿ ಐಕ್ಯವು ಸಿದ್ಧವಾಗುತ್ತದೆ. ಹೀಗೆ ಐಕ್ಯಸಿದ್ಧಿಯು ಬ್ರಹ್ಮಾಜ್ಞಾನ ಸಿದ್ಧಿಯನ್ನು, ಬ್ರಹ್ಮಾಜ್ಞಾನ-ಸಿದ್ಧಿಯು ಐಕ್ಯಸಿದ್ಧಿಯನ್ನು ಅವಲಂಬಿಸಿವೆ.

**ಭಾವವಿಲಾಸಿನೀ–** ತಾಮೇವ ದರ್ಶಯತಿ । ಐಕ್ಯಸಿದ್ಧೌ ಜೀವಬ್ರಹ್ಮಣೋರೈಕ್ಯಸಿದ್ಧೌ ಬ್ರಹ್ಮ ಜೀವಾಜ್ಞಾನಪ್ರತ್ಯಕ್ಷಾತ್ ಸ್ವಯಮಪ್ಯಜ್ಞಮಜ್ಞಾನಾಧಿಕರಣಂ ಭವೇತ್ । ತಸ್ಯ ಬ್ರಹ್ಮಣಃ ಅಜ್ಞತಾವಶಾತ್ ಜೀವಭಾವೇ ಜೀವತ್ವೇ ಜಾತೇ ಸತಿ ಐಕ್ಯಂ ಜೀವೈಕ್ಯಂ ಭವೇತ್ । ಪರಮತೇ ಬ್ರಹ್ಮಣೋಽಜ್ಞಾನವಶಾಜ್ಜೀವಭಾವೇ ಜಾತೇ ಹಿ ಜೀವೈಕ್ಯಮ್ । ಅನೇನಾಜ್ಞಾನಾಕಲ್ಪಿತಃ ಸ್ವಾಭಾವಿಕೋ ಜೀವಶ್ಚೇತ್ ಕಥಂ ತೇನೈಕ್ಯಂ ಸಂಭಾವ್ಯೇತಾಪೀತಿ ಸೂಚಿತಮ್ । ತಥಾಚ ಬ್ರಹ್ಮಣ್ಯಜ್ಞಾನೇ ಸಿದ್ಧೇ ತಸ್ಯ ಜೀವೈಕ್ಯಸಿದ್ಧಿಃ । ಜೀವೈಕ್ಯೇ ಸಿದ್ಧೇ ಜೀವಾಜ್ಞಾನಪ್ರತ್ಯಕ್ಷಮೇವ ಬ್ರಹ್ಮಾಜ್ಞಾನಪ್ರತ್ಯಕ್ಷಮಿತಿ ತಸ್ಮಿನ್ ಬ್ರಹ್ಮಣ್ಯಜ್ಞಾನ ಸಿದ್ಧಿರಿತ್ಯನ್ಯೋನ್ಯಾಶ್ರಯ ಇತಿ ಭಾವಃ । ವಸ್ತುತಸ್ತು ನೇದಂ ಮಾಯಾವಾದಿನಾಂ ಮತಮ್ । ತೈರ್ವ್ಯಾವಹಾರಿಕಭೇದೇನ ತತ್ತದ್ವ್ಯವಹಾರಾಸಂಕರ-ಸ್ಯೈವಾಂಗೀಕರಾದ್ ಅನ್ಯಥಾ ಜೀವಾಜ್ಞಾನಮತಂ ಬ್ರಹ್ಮಾಜ್ಞಾನಮತಮಿತಿ ಮತದ್ವೈವಿಧ್ಯಮೇವ ನ ಸಿದ್ಧ್ಯೇತ್ । ಉಪಾಧೇಃ ಪ್ರತಿಬಿಂಬಪಕ್ಷಪಾತಿತ್ವಂ ವದತಾ ತೇನ ಬಿಂಬಧರ್ಮಾಃ ಪ್ರತಿಬಿಂಬೇ ಆನೇತುಂ ಶಕ್ಯಂತೇ ನತು ಪ್ರತಿಬಿಂಬಧರ್ಮೋ ಬಿಂಬೇ । ನಹಿ ಪ್ರತಿಮುಖಮಾಲಿನ್ಯಂ ಮುಖೇಽಪಿ ವ್ಯವಹ್ರಿಯತೇ । ಅತೋ ಜೈವವ್ಯವಹಾರಸ್ಯ ಬ್ರಹ್ಮಣ್ಯಾನಯನಂ ಸ್ವಮತವಿರುದ್ಧಮಿತ್ಯಪಿ ದ್ರಷ್ಟವ್ಯಮ್ । ವಕ್ಷ್ಯತಿ ಚೈತದ್ ಗ್ರಂಥಕಾರಃ ಸ್ವಯಮೇವ ॥ ೭೫ ॥

**ವಿವರಣೆ–** ಅನ್ಯೋನ್ಯಾಶ್ರಯದೋಷವನ್ನೇ ತೋರಿಸುತ್ತಿದ್ದಾರೆ - ಜೀವಬ್ರಹ್ಮರಿಗೆ ಐಕ್ಯವು ಸಿದ್ಧವಾದರೆ ಅಹಮಜ್ಞಃ ಎಂಬ ಜೀವಾಜ್ಞಾನಪ್ರತ್ಯಕ್ಷವು ಬ್ರಹ್ಮಾಜ್ಞಾನಪ್ರತ್ಯಕ್ಷವಾಗುವುದರಿಂದ ಬ್ರಹ್ಮನು ಅಜ್ಞಾನಕ್ಕೆ ಆಶ್ರಯನಾಗುವನು. ಆ ಬ್ರಹ್ಮನೇ ಅಜ್ಞಾನದಿಂದ ಜೀವ ಎಂದು ಸಿದ್ಧವಾದರೆ ಬ್ರಹ್ಮವೊಂದೇ ಸತ್ಯ ಎಂದು ಸಿದ್ಧವಾಗುತ್ತದೆ; ಇದೇ ಐಕ್ಯಸಿದ್ಧಿ. ಅದ್ವೈತಿಗಳ ಪ್ರಕಾರ ಬ್ರಹ್ಮನೇ ಅಜ್ಞಾನದಿಂದ ಜೀವಭಾವವನ್ನು ಹೊಂದಿದರೆ ತಾನೇ ಜೀವ-ಬ್ರಹ್ಮೈಕ್ಯಕ್ಕೆ ಅವಕಾಶ. 'ತಸ್ಯ ಅಜ್ಞಾನವಶಾತ್ ಜೀವಭಾವೇ ಭವೇದೈಕ್ಯಂ' ಈ ಪದಗಳಿಂದ 'ಜೀವನು ಅಜ್ಞಾನಕಲ್ಪಿತನಾಗದೆ, ಸ್ವಾಭಾವಿಕ ಅಸ್ತಿತ್ವವುಳ್ಳವನೇ ಆದರೆ, ಜೀವ-ಬ್ರಹ್ಮ ಒಂದೇ ಎಂಬ ವಿಚಾರವು ಅಸಂಭಾವಿತವಾದೀತು ಎಂದು ಸೂಚಿತವಾಗಿದೆ.

ತಥಾಚ ಬ್ರಹ್ಮನಲ್ಲಿ ಅಜ್ಞಾನವು ಸಿದ್ಧವಾದರೆ ಅವನೇ ಜೀವ ಎಂದು ಸಿದ್ಧವಾಗುತ್ತದೆ. ಇದೇ ಐಕ್ಯಸಿದ್ಧಿ. ಜೀವೈಕ್ಯವು ಸಿದ್ಧವಾದರೆ ಆಗ ಜೀವಾಜ್ಞಾನಪ್ರತ್ಯಕ್ಷವೇ ಬ್ರಹ್ಮಾಜ್ಞಾನಪ್ರತ್ಯಕ್ಷವಾಗುವುದರಿಂದ ಆ ಬ್ರಹ್ಮನಲ್ಲಿ ಅಜ್ಞಾನದ ಸಿದ್ಧಿ. ಹೀಗೆ ಅನ್ಯೋನ್ಯಾಶ್ರಯದೋಷವು ಎಂದು ಭಾವ.

ವಸ್ತುತಃ 'ಅಹಮಜ್ಞಃ' - ಈ ಪ್ರತ್ಯಕ್ಷವು ಬ್ರಹ್ಮನಿಗೆ ತನ್ನ ಅಜ್ಞಾನದ ಪ್ರತ್ಯಕ್ಷ ಎಂಬ ವಿಚಾರವು ಮಾಯಾವಾದಿಗಳ ಅಭಿಪ್ರಾಯವಲ್ಲ. ಈ ದರ್ಶನವು ಜೀವ-ಬ್ರಹ್ಮರಿಗೆ ವ್ಯಾವಹಾರಿಕಭೇದವನ್ನು ಅಂಗೀಕರಿಸಿ ವ್ಯವಹಾರಗಳ ಪ್ರತ್ಯೇಕತೆಯನ್ನು ಅಂಗೀಕರಿಸಿದೆ. ಆದ್ದರಿಂದ 'ಅಹಮಜ್ಞಃ' ಎಂಬ ಪ್ರತ್ಯಕ್ಷವು ಬ್ರಹ್ಮನ ಅಜ್ಞಾನಕ್ಕೆ ಪ್ರತ್ಯಕ್ಷಪ್ರಮಾಣವಲ್ಲ. ಈ ವಿಷಯವನ್ನು ಗ್ರಂಥಕಾರರೇ ಮುಂದೆ ಹೇಳುತ್ತಾರೆ.

ತಾನ್ಯಹಂ ವೇದ ಸರ್ವಾಣೀತ್ಯುಕ್ತ್ಯಾ ಕೃಷ್ಣಸ್ಯ ಸರ್ವದಾ ।
ಅಸ್ತಿ ಸರ್ವಜ್ಞತಾಧ್ಯಕ್ಷಂ ನತ್ವಜ್ಞಾನಾಪರೋಕ್ಷಧೀಃ ।
ಮನಸಾ ಧ್ಯಾತಮೇವಾರ್ಥಂ ವದೇದ್ ವಾಚಾ ಕಿಲಾಖಿಲಃ ॥ ೭೬ ॥

**ಅರ್ಥ**-ತಾನ್ಯಹಂ ವೇದ ಸರ್ವಾಣಿ ಇತ್ಯುಕ್ತ್ಯಾ= ತಾನ್ಯಹಂ ವೇದ ಸರ್ವಾಣಿ - ಈ ಉಕ್ತಿಯಿಂದ, ಕೃಷ್ಣಸ್ಯ= ಶ್ರೀಕೃಷ್ಣನಿಗೆ, ಸರ್ವದಾ = ಯಾವಾಗಲೂ, ಸರ್ವಜ್ಞತಾಧ್ಯಕ್ಷಂ = ನಾನು ಸರ್ವಜ್ಞ ಎಂಬ ಪ್ರತ್ಯಕ್ಷವು, ಅಸ್ತಿ = ಇದೆ. ನತು ಅಜ್ಞಾನಾಪರೋಕ್ಷಧೀಃ = ನಾನು ಅಜ್ಞ ಎಂಬ ಪ್ರತ್ಯಕ್ಷವಿಲ್ಲ. ಮನಸಾ = ಮನಸ್ಸಿನಿಂದ, ಧ್ಯಾತಂ= ಧ್ಯಾನಿಸಲ್ಪಟ್ಟ, ಅರ್ಥಮೇವ= ವಿಷಯವನ್ನೇ, ಅಖಿಲಃ = ಎಲ್ಲ ಜನರು, ವಾಚಾ ವದೇತ್ ಕಿಲ = ಬಾಯಿಂದ ನುಡಿಯುವರಷ್ಟೇ.

**ಅನುವಾದ**- 'ತಾನ್ಯಹಂ ವೇದ ಸರ್ವಾಣಿ' ಎಂದು ಗೀತೆ (೪.೫) ಯಲ್ಲಿ ಶ್ರೀಕೃಷ್ಣನ ವಚನವಿದೆ. ಇದರಿಂದ 'ತಾನು ಸರ್ವಜ್ಞ' ಎಂದು ಶ್ರೀಕೃಷ್ಣನಿಗೆ ಸಾಕ್ಷಾತ್ಕಾರವಿದೆ ಎಂದು ತಿಳಿಯುತ್ತದೆ. ಅವನಿಗೆ ತನ್ನ ಅಜ್ಞಾನದ ಸಾಕ್ಷಾತ್ಕಾರವು ಇಲ್ಲವೇ ಇಲ್ಲ. ಮನಸ್ಸಿನಲ್ಲಿ ಮೂಡಿದ ವಿಷಯವನ್ನೇ ಎಲ್ಲರೂ ವಾಗಿಂದ್ರಿಯದಿಂದ ಹೇಳುತ್ತಾರಷ್ಟೆ.

**ಭಾವವಿಲಾಸಿನೀ**— ಪ್ರಕಾರಾಂತರೇಣಾಪಿ ಜೈವಪ್ರತ್ಯಕ್ಷಂ ನ ಬ್ರಹ್ಮಣಿ ನೇತುಂ ಶಕ್ಯತ ಇತಿ ಸಾಹಿತ್ಯಮುದ್ರಯೋಪಪಾದಯತಿ— **ತಾನ್ಯಹಮಿತ್ಯಾದಿನಾ** ॥ ಉಕ್ತ್ಯಾ ಗೀತೋಕ್ತ್ಯಾ । ಸರ್ವಜ್ಞತಾಧ್ಯಕ್ಷಂ ಸರ್ವಜ್ಞೋಽಹಮಿತಿ ಪ್ರತ್ಯಕ್ಷಮ್ । ಅಜ್ಞಾನಾಪರೋಕ್ಷಧೀಃ ಅಜ್ಞೋಽಹ-ಮಿತ್ಯಪರೋಕ್ಷಧೀಃ ನತ್ವಿತಿ ಯೋಜನಾ । ಸರ್ವಜ್ಞತ್ವಾಸರ್ವಜ್ಞತ್ವಾಭ್ಯಾಂ ವಿರುದ್ಧಧರ್ಮಾಭ್ಯಾಂ ವ್ಯಾವಹಾರಿಕಭೇದಮಂಗೀಕುರ್ವನ್ ಪರೋಽಪಿ ಇದಮಂಗೀಕರೋತ್ಯೇವ । ಉಪಪಾದನಂ ತು ಯುಕ್ತಿವೈಭವಾದಿತಿ ದ್ರಷ್ಟವ್ಯಮ್ । ಅಖಿಲೋ ಜನಃ ಮನಸಾ ಧ್ಯಾತಮಪರೋಕ್ಷೀಕೃತಂ ವಾಚಾ ವದೇತ್ । ಕಿಲೇತ್ಯನೇನ ಯದ್ಧಿ ಮನಸಾ ಧ್ಯಾಯತಿ ತದ್ವಾಚಾ ವದತೀತಿ ಶ್ರುತಿಂ ಸೂಚಯತಿ । ವಾಚಾ ವದತೋ ಮಾನಸೋಽನುಭವಃ ಕಥಂ ಜ್ಞಾತ ಇತ್ಯಾಶಂಕಾ-ಪರಿಹಾರಾರ್ಥಮಿದಮ್ ॥ ೭೬ ॥

ಅತಃ ಸರ್ವಜ್ಞತಾಧ್ಯಕ್ಷಹರ್ಯಕ್ಷಸ್ಯ ಗುಹಾಮಿಮಾಮ್ ।
ಅಜ್ಞಾನಾಧ್ಯಕ್ಷಹರಿಣೀ ಜೈವೀ ನೈವ ವಿವಿಕ್ಷತಿ ॥ ೭೭ ॥

**ಅರ್ಥ**-ಅತಃ= ಆದ್ದರಿಂದ, ಸರ್ವಜ್ಞತಾಧ್ಯಕ್ಷಸ್ಯ= ಸರ್ವಜ್ಞತ್ವದ ಪ್ರತ್ಯಕ್ಷವೆಂಬ ಸಿಂಹದ, ಇಮಾಂ ಗುಹಾಂ= ಈ ಹೃದಯವೆಂಬ ಗುಹೆಯನ್ನು, ಜೈವೀ= ಜೀವನ, ಅಜ್ಞಾನಾಧ್ಯಕ್ಷ-ಹರಿಣೀ = ಅಜ್ಞಾನಪ್ರತ್ಯಕ್ಷವೆಂಬ ಜಿಂಕೆಯು, ನೈವ ವಿವಿಕ್ಷತಿ = ಪ್ರವೇಶಿಸಲು ಇಚ್ಛಿಸುವುದಿಲ್ಲ.

**ಅನುವಾದ**- 'ತಾನ್ಯಹಂ ವೇದ ಸರ್ವಾಣಿ' ಗೀತಾವಚನದಿಂದ ಪರಬ್ರಹ್ಮನಿಗೆ ತನ್ನ ಸರ್ವಜ್ಞತ್ವದ ಸಾಕ್ಷಾತ್ಕಾರವಿದೆ ಎಂದು ತಿಳಿದಿದೆ. ಸರ್ವಜ್ಞತ್ವವು ಮಹಾಬಲ. ಆದ್ದರಿಂದ ಪರಬ್ರಹ್ಮನು ಸಿಂಹ. ಅಜ್ಞಾನದ ಪ್ರತ್ಯಕ್ಷವು ಜಿಂಕೆ. ಜಿಂಕೆಯು ಸಿಂಹದ ಗುಹೆಯೊಳಗೆ ಪ್ರವೇಶಿಸಲು ಬಯಸುವುದೇ? 'ಅಹಮಜ್ಞಃ' ಎಂಬ ಜೀವಾತ್ಮನ ಪ್ರತ್ಯಕ್ಷವು ಪರಬ್ರಹ್ಮನಿಗೆ ಸರ್ವಥಾ ಅನ್ವಯಿಸುವುದಿಲ್ಲ.

**ಭಾವವಿಲಾಸಿನೀ**– ಅತಃ ಭಗವತಃ ಸಾರ್ವಜ್ಞಪ್ರತ್ಯಕ್ಷಸಿದ್ಧೇಃ ಸರ್ವಜ್ಞತಾಪ್ರತ್ಯಕ್ಷಾಖ್ಯಹರ್ಯಕ್ಷಸ್ಯ ಸಿಂಹಸ್ಯ ಗುಹಾಂ ಭಗವದ್ಧೃದಯಗುಹಾಂ ಜೈವೀ ಜೀವಸಂಬಂಧಿನೀ ಅಜ್ಞಾನಪ್ರತ್ಯಕ್ಷಮೃಗೀ । ವಿವಿಕ್ಷತಿ ಪ್ರವೇಷ್ಟುಮಿಚ್ಛತಿ । ಯಥಾ ಸಿಂಹಗುಹಾಂ ಹರಿಣೀ ಪ್ರವೇಷ್ಟುಂ ನ ಶಕ್ನುತೇ, ತಥಾ ನಿರವದ್ಯಭಗವತ್ಪ್ರತ್ಯಕ್ಷೇಣ ಸರ್ವಜ್ಞತಯಾ ಸಿದ್ಧೇ ಭಗವನ್ಮನಸಿ ಅಜ್ಞೋಽಹಮ್' ಇತಿ ಜೀವ-ಪ್ರತ್ಯಕ್ಷಂ ನಾಜ್ಞಾನಮಾಧಾತುಂ ಶಕ್ನುತ ಇತಿ ಭಾವಃ । ಬಲಾತ್ ಕೇನಚಿನ್ನೀತಾ ಚೇತ್ ಪ್ರಬಲ-ಪ್ರತ್ಯಕ್ಷಬಾಧಿತಾ ಅಪ್ರಾಮಾಣ್ಯಾಖ್ಯಮರಣಂ ಹರಿಣೀವ ಪ್ರಾಪ್ನುಯಾದಿತಿ ಭಾವಃ ॥ ೭೭ ॥

**ವಿವರಣೆ**–ಪ್ರಬಲಪ್ರತ್ಯಕ್ಷವಿರುದ್ಧವಾದ ದುರ್ಬಲ ಪ್ರತ್ಯಕ್ಷವು ಅಪ್ರಮಾಣ. ಪರಮಾತ್ಮನಿಗೆ ತನ್ನ ಸರ್ವಜ್ಞತ್ವದ ಸಾಕ್ಷಾತ್ಕಾರವಿದೆ. ಈ ಸಾಕ್ಷಾತ್ಕಾರದಲ್ಲಿ ಯಾವ ದೋಷವೂ ಇಲ್ಲ. ಆದ್ದರಿಂದ ಇದು ಪ್ರಬಲ. 'ಅಹಮಜ್ಞಃ'- ಜೀವನಿಗೆ ತನ್ನ ಅಜ್ಞಾನದ ಸಾಕ್ಷಾತ್ಕಾರ. ಇದು ಪರಮಾತ್ಮನ ಸರ್ವಜ್ಞತ್ವದ ಸಾಕ್ಷಾತ್ಕಾರಕ್ಕೆ ಹೇಗೆ ವಿರೋಧಿಯಾಗಬಲ್ಲದು? ಜೀವಾಜ್ಞಾನದ ಸಾಕ್ಷಾತ್ಕಾರವನ್ನು ಬ್ರಹ್ಮನಿಗೆ ಅನ್ವಯಿಸಲು ಪ್ರಯತ್ನಿಸಿದರೆ ಪ್ರಬಲಸಿಂಹದ ಗುಹೆಗೆ ಪ್ರವೇಶಿಸಿದ ದುರ್ಬಲ ಜಿಂಕೆಗೆ ಆಗುವ ಗತಿಯೇ ದುರ್ಬಲ ಜೀವ ಪ್ರತ್ಯಕ್ಷಕ್ಕೆ ಆಗುತ್ತದೆ. ಸರ್ವಥಾ ಅನ್ವಯಿಸುವುದಿಲ್ಲ ಎಂದು ಅಭಿಪ್ರಾಯ.

ಪ್ರತ್ಯಕ್ಷಮೇಷಯೋರ್ಯುದ್ಧೇ ತಚ್ಚೈಕ್ಯಂ ಜಂಬುಕಾಯತೇ ।
ತಸ್ಮಾದ್ ಬ್ರಹ್ಮಾಶ್ರಿತಾಜ್ಞಾನಪ್ರತ್ಯಕ್ಷಂ ಮರಣೇಽಪಿ ನ ॥ ೭೮ ॥

**ಅರ್ಥ**-ಪ್ರತ್ಯಕ್ಷಮೇಷಯೋಃ= ಭಗವಂತನ 'ನಾನು' ಸರ್ವಜ್ಞ ಎಂಬ ಪ್ರತ್ಯಕ್ಷ ಮತ್ತು ಜೀವಾತ್ಮನಿಗೆ ನಾನು ಅಸರ್ವಜ್ಞ ಎಂಬ ಪ್ರತ್ಯಕ್ಷ- ಈ ಎರಡು ಟಗರುಗಳ, ಯುದ್ಧೇ= ಯುದ್ಧದಲ್ಲಿ, ತತ್ ಚ ಐಕ್ಯಂ= ಆ ಜೀವಬ್ರಹ್ಮೈಕ್ಯವು, ಜಂಬುಕಾಯತೇ= ನರಿಯಂತೆ ಆಗುತ್ತದೆ. ತಸ್ಮಾದ್= ಆದ್ದರಿಂದ, ಬ್ರಹ್ಮಾಶ್ರಿತಾಜ್ಞಾನಪ್ರತ್ಯಕ್ಷಂ= ಬ್ರಹ್ಮನಿಗೆ 'ತಾನು ಅಜ್ಞ' ಎಂಬ ಪ್ರತ್ಯಕ್ಷವು, ಮರಣೇ ಅಪಿ ನ = ಮರಣದವರೆಗೆ ಶಾಸ್ತ್ರವನ್ನು ವಿಚಾರಮಾಡಿದರೂ ಸಾಧಿಸಲು ಸಾಧ್ಯವಾಗದು.

**ಅನುವಾದ-** ಬ್ರಹ್ಮನಿಗೆ 'ನಾನು ಸರ್ವಜ್ಞ' (ನೋಡಿ ಪದ್ಯ ೭೬) ಎಂಬ ಪ್ರತ್ಯಕ್ಷವಿದೆ. ಜೀವಾತ್ಮನಿಗೆ 'ನಾನು ಅಜ್ಞ' ಎಂಬ ಪ್ರತ್ಯಕ್ಷವಿದೆ. ಇವೆರಡು ಪ್ರತ್ಯಕ್ಷಗಳು ಟಗರುಗಳು. ಒಂದರ ವಿರುದ್ಧ ಇನ್ನೊಂದು ಯುದ್ಧಮಾಡುತ್ತಿದೆ. ಯುದ್ಧಮಾಡುತ್ತಿರುವ ಎರಡು ಪ್ರತ್ಯಕ್ಷಗಳ ಮಧ್ಯೆ ಮಾಯಾವಾದಿಗೆ ಬೇಕಾದ ಜೀವಬ್ರಹ್ಮೈಕ್ಯವು ಪ್ರವೇಶಿಸಿದೆ. ಹೀಗೆ ಪ್ರವೇಶಿಸಿರುವ ಐಕ್ಯವು ಯುದ್ಧ ಮಾಡುತ್ತಿರುವ ಟಗರುಗಳ ಮಧ್ಯೆ ಪ್ರವೇಶಿಸುವ ನರಿಯು ಎರಡು ಟಗರುಗಳ ಪ್ರಹಾರದಿಂದ ಸಾಯುವಂತೆ ಸತ್ತುಹೋಗುತ್ತದೆ. ಆದ್ದರಿಂದ ಬ್ರಹ್ಮನಿಗೆ 'ತಾನು ಅಜ್ಞ' ಎಂಬ ಪ್ರತ್ಯಕ್ಷವು ಇದೆ ಎಂದು ಸಾಧಿಸಲು ಸಾಯುವವರೆಗೆ ಪ್ರಯತ್ನಿಸಿದರೂ ಸಾಧ್ಯವಿಲ್ಲ.

**ಭಾವವಿಲಾಸಿನೀ–** ಪ್ರತ್ಯಕ್ಷಮೇಷಯೋಸ್ಸರ್ವಜ್ಞತ್ವಾಸರ್ವಜ್ಞತ್ವವಿಷಯಕಪ್ರತ್ಯಕ್ಷಮೇಷಯೋಃ। ಮೇಷಯೋರಿತ್ಯುಕ್ತ್ಯೋಭಯೋರಪಿ ಪ್ರತ್ಯಕ್ಷಯೋಃ ಸ್ವಸ್ವವಿಷಯೇ ಸ್ವಾರ್ಥಸಾಧನಸಾಮರ್ಥ್ಯಂ ಸೂಚಯತಿ । ಹರಿಣೇತಿ 'ಪರಸದನನಿವಿಷ್ಟಃ ಕೋ ಲಘುತ್ವಂ ನ ಯಾತಿ' ಇತಿ ನ್ಯಾಯೇನ ಭಗವದ್ಗುಹಾಪ್ರವೇಶಭೀರುತ್ವಾದೇವೋಕ್ತಮ್ । ನತು ಸ್ವವಿಷಯೇಽಪ್ಯಸಾಮರ್ಥ್ಯಾದಿತಿ ಭಾವಃ। ತಯೋರ್ಯುದ್ಧೇ ಬ್ರಹ್ಮಣ್ಯಜ್ಞಾನಮಾನೇತುಂ ನ ಮುಂಚಾಮಿ, 'ಜೀವೇ ಸಾರ್ವಜ್ಞಮಾನೇತುಂ ನ ಮುಂಚಾಮಿ' ಇತಿ ಪರಸ್ಪರಕಲಹೇ । ಪ್ರಬಲಪ್ರತ್ಯಕ್ಷದ್ವಯಸಿದ್ಧಸಾರ್ವಜ್ಞಾಸಾರ್ವಜ್ಞ-ರೂಪವಿರುದ್ಧಧರ್ಮಾಕ್ರಾಂತಯೋರಿತಿ ಫಲಿತೋಽರ್ಥಃ। ಐಕ್ಯಂ ತ್ವಯೋಚ್ಯಮಾನಜೀವ-ಬ್ರಹ್ಮೈಕ್ಯಂ ಜಂಬುಕಾಯತೇ ಜಂಬುಕವದಾಚರತಿ। ಯಥಾ ಮೇಷಯೋಃ ಶಿರಸ್ತಾಡನಸಮಯೇ ರಕ್ತಾಶಯಾ ತನ್ಮಧ್ಯೇ ಪತಿತಃ ಜಂಬುಕೋ ಮ್ರಿಯತೇ ತಥಾ ವಿರುದ್ಧಪ್ರತ್ಯಕ್ಷಸಿದ್ಧಸಾರ್ವಜ್ಞಾ ಸಾರ್ವಜ್ಞಾಖ್ಯವ್ಯಾವರ್ತಕಧರ್ಮಪ್ರತಿಹತಮೈಕ್ಯಂ ಚ ತಯೋರುಭಯೋರ್ಮುಂಡನೇ ಸತಿ ಜೀವಾಮೀತ್ಯಾಗತಂ ಸ್ವಯಮೇವ ನಶ್ಯೇ ದಿತ್ಯರ್ಥಃ । ಪ್ರಮಾಸಿದ್ಧಭೇದಯೋ-ರೈಕ್ಯಸ್ಯೈವಾಯೋಗಾದನ್ಯಪ್ರತ್ಯಕ್ಷಸ್ಯಾನ್ಯತ್ರಾಕರ್ಷಣಂ ದುಶ್ಶಕಮಿತಿ ಹೃದಯಮ್। ಉಪಸಂಹರತಿ ತಸ್ಮಾದಿತಿ ॥ ಮರಣೇಽಪಿ ನ ಮರಣಪರ್ಯಂತಶಾಸ್ತ್ರಪರ್ಯಾಲೋಚನೇ ಕೃತೇಽಪಿ ನ ಸಾಧಿತುಂ ನ ಶಕ್ಯತ ಇತ್ಯರ್ಥಃ ॥ ೭೮ ॥

**ವಿವರಣೆ–** ಬ್ರಹ್ಮನಿಗೆ 'ಅಹಂ ಸರ್ವಜ್ಞಃ' ಎಂದು ಪ್ರತ್ಯಕ್ಷವಿದೆ. ಜೀವಾತ್ಮನಿಗೆ 'ಅಹಮಜ್ಞಃ' ಎಂದು ಪ್ರತ್ಯಕ್ಷವಿದೆ. ಇವೆರಡು ಎರಡು ಟಗರುಗಳಂತೆ. ಎರಡು ಟಗರುಗಳಿಗೆ ತಮ್ಮ ಕೆಲಸವನ್ನು ಸಾಧಿಸುವ ಸಾಮರ್ಥ್ಯವಿದೆ. ಅಂತೆಯೇ ಈ ಎರಡು ಪ್ರತ್ಯಕ್ಷಗಳಿಗೂ ತಮ್ಮ ತಮ್ಮ ವಿಷಯಗಳನ್ನು ಸಮರ್ಥಿಸುವ ಸಾಮರ್ಥ್ಯವಿದೆ. ಈ ಎರಡು ಪ್ರತ್ಯಕ್ಷಗಳಿಂದ ಬ್ರಹ್ಮ ಮತ್ತು ಜೀವಾತ್ಮರಲ್ಲಿ ಸರ್ವಜ್ಞತ್ವ ಮತ್ತು ಅಜ್ಞಾನವೆಂಬ ವಿರುದ್ಧ ಧರ್ಮಗಳಿವೆ ಎಂದು ಸಿದ್ಧವಾಗಿದೆ. ಈ ಎರಡು ಪ್ರತ್ಯಕ್ಷಗಳು ಅಬಾಧಿತ. ಆದ್ದರಿಂದ ಈ ವಿರುದ್ಧ ಧರ್ಮಗಳ ನಿರಾಕರಣೆಯು ಅಸಾಧ್ಯ. ಈ ಸ್ಥಿತಿಯಲ್ಲಿ ಬ್ರಹ್ಮ-ಜೀವಾತ್ಮರ ಭೇದವೇ ದೃಢವಾಗಿ ಸಿದ್ಧವಾಗುತ್ತದೆ. ಭೇದಸಾಧಕ ಪ್ರಬಲ ಪ್ರತ್ಯಕ್ಷಗಳಿಂದಾಗಿ ಬ್ರಹ್ಮ-ಜೀವರ ಐಕ್ಯವು ಸಿದ್ಧವಾಗಲು ಅವಕಾಶವೇ ಇಲ್ಲ.

ಯುದ್ಧಮಾಡುತ್ತಿರುವ ಎರಡು ಬಲಿಷ್ಠ ಟಗರುಗಳ ಮಧ್ಯೆ, ರಕ್ತದ ಆಸೆಯಿಂದ, ಪ್ರವೇಶಿಸುವ ನರಿಯು ಆ ಎರಡು ಟಗರುಗಳ ಪ್ರಹಾರಕ್ಕೆ ಸಿಕ್ಕಿ ಸಾಯುತ್ತದೆ. ಬ್ರಹ್ಮ-ಜೀವರ ಭೇದವನ್ನು ಸಾಧಿಸುವ ಪ್ರತ್ಯಕ್ಷಗಳ ಮಧ್ಯೆ ಐಕ್ಯವನ್ನು ಸಾಧಿಸಲು ಸಾಧ್ಯವಿಲ್ಲ. ಸಾಧಿಸಲು ಪ್ರಯತ್ನಿಸುವವರ ಪ್ರಯತ್ನವು ವಿಫಲವಾಗುತ್ತದೆ. ಜೀವಾತ್ಮನ **ಅಹಮಜ್ಞಃ** ಎಂಬ ಪ್ರತ್ಯಕ್ಷವು ಜೀವಾತ್ಮನಲ್ಲಿ ಸರ್ವಜ್ಞತ್ವಕ್ಕೆ ಅವಕಾಶವನ್ನು ಕೊಡುವುದಿಲ್ಲ. ಬ್ರಹ್ಮನ **'ಅಹಂ ಸರ್ವಜ್ಞಃ'** ಎಂಬ ಪ್ರತ್ಯಕ್ಷವು ಬ್ರಹ್ಮನಲ್ಲಿ ಅಜ್ಞಾನಕ್ಕೆ ಅವಕಾಶವನ್ನು ಕೊಡುವುದಿಲ್ಲ. ಆದ್ದರಿಂದ ಬ್ರಹ್ಮನೇ ಜೀವ ಆಗಲು ಸುತರಾಂ ಅವಕಾಶವಿಲ್ಲ.

**ಪೀಠಿಕೆ-** 'ಜ್ಞಾನರೂಪನಾದ ಬ್ರಹ್ಮನಲ್ಲಿ ಅಜ್ಞಾನವು ಇರುವುದಿಲ್ಲ' ಎಂಬ ಅಭಿಪ್ರಾಯಕ್ಕೆ ಪ್ರತಿಯಾಗಿ ಅಜ್ಞಾನವು ಇರುವುದಕ್ಕೆ ಯಾವ ಪ್ರಮಾಣ/ಯುಕ್ತಿಗಳು ಬೇಕಿಲ್ಲ; ಅಸಮರ್ಥನೀಯತೆಯೇ ಆದರ ಸ್ವಭಾವ ಎಂದು ಮಾಯಾವಾದಿಗಳು ಹೇಳುತ್ತಾರೆ. ಇದನ್ನು ಮುಂದಿನ ಕೆಲವು ಪದ್ಯಗಳು ವಿಮರ್ಶಿಸುತ್ತವೆ.

**ಪ್ರತ್ಯಕ್ಷೇಣಾಜ್ಞತಾಸಿದ್ಧೌ ಬ್ರಹ್ಮಣೋ ಜ್ಞಾನರೂಪಿಣಃ ।**
**ಅವಿದ್ಯಾದುರ್ಘಟತ್ವೇನ ಘಟನಾ ಸ್ಯಾತ್ ಕಥಂಚನ ॥ ೭೯ ॥**

**ಅರ್ಥ-**ಜ್ಞಾನರೂಪಿಣಃ ಬ್ರಹ್ಮಣಃ= ಜ್ಞಾನಸ್ವರೂಪನಾದ ಬ್ರಹ್ಮನಿಗೆ, ಪ್ರತ್ಯಕ್ಷೇಣ= ಪ್ರತ್ಯಕ್ಷ ಪ್ರಮಾಣದಿಂದ, ಅಜ್ಞತಾಸಿದ್ಧೌ= ಅಜ್ಞಾನವು ಸಿದ್ಧವಾದರೆ, ಅವಿದ್ಯಾದುರ್ಘಟತ್ವೇನ= ಅವಿದ್ಯೆಯ ಅಸಮರ್ಥನೀಯತೆಯಿಂದ, ಕಥಂಚನ= ಹೇಗೋ, ಘಟನಾ= ಸಮರ್ಥನೆಯು, ಸ್ಯಾತ್= ಇದ್ದೀತು.

**ಅನುವಾದ-** ಜ್ಞಾನಸ್ವರೂಪನಾದ ಬ್ರಹ್ಮನಲ್ಲಿ ಅಜ್ಞಾನವು ಇದೆ ಎಂದು ಪ್ರತ್ಯಕ್ಷ-ಪ್ರಮಾಣದಿಂದ ಸಿದ್ಧವಾದರೆ 'ಜ್ಞಾನಸ್ವರೂಪನಲ್ಲಿ ಅಜ್ಞಾನವು ಹೇಗೆ ಇದ್ದೀತು?' ಎಂಬ ಪ್ರಶ್ನೆಯು ಎದುರಾಗುತ್ತದೆ. ಹೇಗೆ? ಎಂಬ ಪ್ರಶ್ನೆಗೆ ಅವಕಾಶವಿಲ್ಲ. ಸಮರ್ಥನೆಯ ಅಭಾವವೇ ಅದರ ಸ್ವಭಾವ ಎಂದು ಉತ್ತರವನ್ನು ಹೇಳಬಹುದು.

**ಭಾವವಿಲಾಸಿನೀ–** ಜ್ಞಾನರೂಪೇ ಬ್ರಹ್ಮಣಿ ಕಥಮಜ್ಞಾನಂ ಘಟತೇ ಇತಿ ಶಂಕಾಪರಿಹಾರಾಯ ದುರ್ಘಟತ್ವಮವಿದ್ಯಾಯಾ ಭೂಷಣಂ ನತು ದೂಷಣಮಿತಿ ಯತ್ಪರೇಣೋಕ್ತಮ್, ತದಪಿ ನಿರ್ಮೂಲಮಿತ್ಯಾಹ ಪ್ರತ್ಯಕ್ಷೇಣೇತಿ ॥ ಜ್ಞಾನರೂಪಿಣೋ ಬ್ರಹ್ಮಣಃ ಅಜ್ಞತಾಸಿದ್ಧೌ ಅಜ್ಞಾನ-ಸಿದ್ಧೌ ಸತ್ಯಾಂ ಅವಿದ್ಯಾದುರ್ಘಟತ್ವೇನ ಘಟನಾ ಜ್ಞಾನಾಜ್ಞಾನಯೋರೇಕತ್ರಾವಸ್ಥಾ-ಸಂಪಾದನಮ್ ॥ ೭೯ ॥

**ವಿವರಣೆ–** ಜ್ಞಾನರೂಪನಾದ ಬ್ರಹ್ಮನಲ್ಲಿ ಅಜ್ಞಾನವು ಹೇಗೆ? ಎಂಬ ಶಂಕೆಯನ್ನು ಪರಿಹರಿಸಲು ಅದ್ವೈತ ದರ್ಶನವು 'ದುರ್ಘಟತ್ವಮವಿದ್ಯಾಯಾಃ ಭೂಷಣಂ ನ ತು ದೂಷಣಂ' - ದುರ್ಘಟತ್ವವು (ಕೂಡದೇ ಇರುವಿಕೆಯು) ಅವಿದ್ಯೆಗೆ (ಅಜ್ಞಾನಕ್ಕೆ) ಭೂಷಣ ದೂಷಣವಲ್ಲ ಎಂದು ಹೇಳುತ್ತದೆ.

**ಅನುವಾದ-** ಬ್ರಹ್ಮನಿಗೆ 'ನಾನು ಸರ್ವಜ್ಞ' (ನೋಡಿ ಪದ್ಯ ೭೬) ಎಂಬ ಪ್ರತ್ಯಕ್ಷವಿದೆ. ಜೀವಾತ್ಮನಿಗೆ 'ನಾನು ಅಜ್ಞ' ಎಂಬ ಪ್ರತ್ಯಕ್ಷವಿದೆ. ಇವೆರಡು ಪ್ರತ್ಯಕ್ಷಗಳು ಟಗರುಗಳು. ಒಂದರ ವಿರುದ್ಧ ಇನ್ನೊಂದು ಯುದ್ಧಮಾಡುತ್ತಿದೆ. ಯುದ್ಧಮಾಡುತ್ತಿರುವ ಎರಡು ಪ್ರತ್ಯಕ್ಷಗಳ ಮಧ್ಯೆ ಮಾಯಾವಾದಿಗೆ ಬೇಕಾದ ಜೀವಬ್ರಹ್ಮೈಕ್ಯವು ಪ್ರವೇಶಿಸಿದೆ. ಹೀಗೆ ಪ್ರವೇಶಿಸಿರುವ ಐಕ್ಯವು ಯುದ್ಧ ಮಾಡುತ್ತಿರುವ ಟಗರುಗಳ ಮಧ್ಯೆ ಪ್ರವೇಶಿಸುವ ನರಿಯು ಎರಡು ಟಗರುಗಳ ಪ್ರಹಾರದಿಂದ ಸಾಯುವಂತೆ ಸತ್ತುಹೋಗುತ್ತದೆ. ಆದ್ದರಿಂದ ಬ್ರಹ್ಮನಿಗೆ 'ತಾನು ಅಜ್ಞ' ಎಂಬ ಪ್ರತ್ಯಕ್ಷವು ಇದೆ ಎಂದು ಸಾಧಿಸಲು ಸಾಯುವವರೆಗೆ ಪ್ರಯತ್ನಿಸಿದರೂ ಸಾಧ್ಯವಿಲ್ಲ.

**ಭಾವವಿಲಾಸಿನೀ–** ಪ್ರತ್ಯಕ್ಷಮೇಷಯೋಸ್ಸರ್ವಜ್ಞತ್ವಾಸರ್ವಜ್ಞತ್ವವಿಷಯಕಪ್ರತ್ಯಕ್ಷಮೇಷಯೋಃ । ಮೇಷಯೋರಿತ್ಯುಕ್ತ್ಯೋಭಯೋರಪಿ ಪ್ರತ್ಯಕ್ಷಯೋಃ ಸ್ವಸ್ವವಿಷಯೇ ಸ್ವಾರ್ಥಸಾಧನಸಾಮರ್ಥ್ಯಂ ಸೂಚಯತಿ । ಹರಿಣೇತಿ 'ಪರಸದನನಿವಿಷ್ಟಃ ಕೋ ಲಘುತ್ವಂ ನ ಯಾತಿ' ಇತಿ ನ್ಯಾಯೇನ ಭಗವದ್ಗುಹಾಪ್ರವೇಶಭೀರುತ್ವಾದೇವೋಕ್ತಮ್ । ನತು ಸ್ವವಿಷಯೇಽಪ್ಯಸಾಮರ್ಥ್ಯಾದಿತಿ ಭಾವಃ । ತಯೋರ್ಯುದ್ಧೇ ಬ್ರಹ್ಮಣ್ಯಜ್ಞಾನಮಾನೇತುಂ ನ ಮುಂಚಾಮಿ, 'ಜೀವೇ ಸಾರ್ವಜ್ಞಮಾನೇತುಂ ನ ಮುಂಚಾಮಿ' ಇತಿ ಪರಸ್ಪರಕಲಹೇ । ಪ್ರಬಲಪ್ರತ್ಯಕ್ಷದ್ವಯಸಿದ್ಧಸಾರ್ವಜ್ಞಾಸಾರ್ವಜ್ಞ-ರೂಪವಿರುದ್ಧಧರ್ಮಾಕ್ರಾಂತಯೋರಿತಿ ಫಲಿತೋಽರ್ಥಃ । ಐಕ್ಯಂ ತ್ವಯೋಚ್ಯಮಾನಜೀವ-ಬ್ರಹ್ಮೈಕ್ಯಂ ಜಂಬುಕಾಯತೇ ಜಂಬುಕವದಾಚರತಿ । ಯಥಾ ಮೇಷಯೋಃ ಶಿರಸ್ತಾಡನಸಮಯೇ ರಕ್ತಾಶಯಾ ತನ್ಮಧ್ಯೇ ಪತಿತಃ ಜಂಬುಕೋ ಮ್ರಿಯತೇ ತಥಾ ವಿರುದ್ಧಪ್ರತ್ಯಕ್ಷಸಿದ್ಧಸಾರ್ವಜ್ಞಾ-ಸಾರ್ವಜ್ಞಾಖ್ಯವ್ಯಾವರ್ತಕಧರ್ಮಪ್ರತಿಹತಮೈಕ್ಯಂ ಚ ತಯೋರುಭಯೋರ್ಮುಂಡನೇ ಸತಿ ಜೀವಾಮೀತ್ಯಾಗತಂ ಸ್ವಯಮೇವ ನಶ್ಯೇ ದಿತ್ಯರ್ಥಃ । ಪ್ರಮಾಸಿದ್ಧಭೇದಯೋ-ರೈಕ್ಯಸ್ಯೈವಾಯೋಗಾದನ್ಯಪ್ರತ್ಯಕ್ಷಸ್ಯಾನ್ಯತ್ರಾಕರ್ಷಣಂ ದುಶ್ಶಕಮಿತಿ ಹೃದಯಮ್ । ಉಪಸಂಹರತಿ ತಸ್ಮಾದಿತಿ ॥ ಮರಣೇಽಪಿ ನ ಮರಣಪರ್ಯಂತಶಾಸ್ತ್ರಪರ್ಯಾಲೋಚನೇ ಕೃತೇಽಪಿ ನ ಸಾಧಿತುಂ ನ ಶಕ್ಯತ ಇತ್ಯರ್ಥಃ ॥ ೭೮ ॥

**ವಿವರಣೆ–** ಬ್ರಹ್ಮನಿಗೆ 'ಅಹಂ ಸರ್ವಜ್ಞಃ' ಎಂದು ಪ್ರತ್ಯಕ್ಷವಿದೆ. ಜೀವಾತ್ಮನಿಗೆ 'ಅಹಮಜ್ಞಃ' ಎಂದು ಪ್ರತ್ಯಕ್ಷವಿದೆ. ಇವೆರಡು ಎರಡು ಟಗರುಗಳಂತೆ. ಎರಡು ಟಗರುಗಳಿಗೆ ತಮ್ಮ ಕೆಲಸವನ್ನು ಸಾಧಿಸುವ ಸಾಮರ್ಥ್ಯವಿದೆ. ಅಂತೆಯೇ ಈ ಎರಡು ಪ್ರತ್ಯಕ್ಷಗಳಿಗೂ ತಮ್ಮ ತಮ್ಮ ವಿಷಯಗಳನ್ನು ಸಮರ್ಥಿಸುವ ಸಾಮರ್ಥ್ಯವಿದೆ. ಈ ಎರಡು ಪ್ರತ್ಯಕ್ಷಗಳಿಂದ ಬ್ರಹ್ಮ ಮತ್ತು ಜೀವಾತ್ಮರಲ್ಲಿ ಸರ್ವಜ್ಞತ್ವ ಮತ್ತು ಅಜ್ಞಾನವೆಂಬ ವಿರುದ್ಧ ಧರ್ಮಗಳಿವೆ ಎಂದು ಸಿದ್ಧವಾಗಿದೆ. ಈ ಎರಡು ಪ್ರತ್ಯಕ್ಷಗಳು ಅಬಾಧಿತ. ಆದ್ದರಿಂದ ಈ ವಿರುದ್ಧ ಧರ್ಮಗಳ ನಿರಾಕರಣೆಯು ಅಸಾಧ್ಯ. ಈ ಸ್ಥಿತಿಯಲ್ಲಿ ಬ್ರಹ್ಮ-ಜೀವಾತ್ಮರ ಭೇದವೇ ದೃಢವಾಗಿ ಸಿದ್ಧವಾಗುತ್ತದೆ. ಭೇದಸಾಧಕ ಪ್ರಬಲ ಪ್ರತ್ಯಕ್ಷಗಳಿಂದಾಗಿ ಬ್ರಹ್ಮ-ಜೀವರ ಐಕ್ಯವು ಸಿದ್ಧವಾಗಲು ಅವಕಾಶವೇ ಇಲ್ಲ.

ಯುದ್ಧಮಾಡುತ್ತಿರುವ ಎರಡು ಬಲಿಷ್ಠ ಟಗರುಗಳ ಮಧ್ಯೆ, ರಕ್ತದ ಆಸೆಯಿಂದ, ಪ್ರವೇಶಿಸುವ ನರಿಯು ಆ ಎರಡು ಟಗರುಗಳ ಪ್ರಹಾರಕ್ಕೆ ಸಿಕ್ಕಿ ಸಾಯುತ್ತದೆ. ಬ್ರಹ್ಮ-ಜೀವರ ಭೇದವನ್ನು ಸಾಧಿಸುವ ಪ್ರತ್ಯಕ್ಷಗಳ ಮಧ್ಯೆ ಐಕ್ಯವನ್ನು ಸಾಧಿಸಲು ಸಾಧ್ಯವಿಲ್ಲ. ಸಾಧಿಸಲು ಪ್ರಯತ್ನಿಸುವವರ ಪ್ರಯತ್ನವು ವಿಫಲವಾಗುತ್ತದೆ. ಜೀವಾತ್ಮನ **ಅಹಮಜ್ಞಃ** ಎಂಬ ಪ್ರತ್ಯಕ್ಷವು ಜೀವಾತ್ಮನಲ್ಲಿ ಸರ್ವಜ್ಞತ್ವಕ್ಕೆ ಅವಕಾಶವನ್ನು ಕೊಡುವುದಿಲ್ಲ. ಬ್ರಹ್ಮನ **'ಅಹಂ ಸರ್ವಜ್ಞಃ'** ಎಂಬ ಪ್ರತ್ಯಕ್ಷವು ಬ್ರಹ್ಮನಲ್ಲಿ ಅಜ್ಞಾನಕ್ಕೆ ಅವಕಾಶವನ್ನು ಕೊಡುವುದಿಲ್ಲ. ಆದ್ದರಿಂದ ಬ್ರಹ್ಮನೇ ಜೀವ ಆಗಲು ಸುತರಾಂ ಅವಕಾಶವಿಲ್ಲ.

**ಪೀಠಿಕೆ-** 'ಜ್ಞಾನರೂಪನಾದ ಬ್ರಹ್ಮನಲ್ಲಿ ಅಜ್ಞಾನವು ಇರುವುದಿಲ್ಲ' ಎಂಬ ಅಭಿಪ್ರಾಯಕ್ಕೆ ಪ್ರತಿಯಾಗಿ ಅಜ್ಞಾನವು ಇರುವುದಕ್ಕೆ ಯಾವ ಪ್ರಮಾಣ/ಯುಕ್ತಿಗಳು ಬೇಕಿಲ್ಲ; ಅಸಮರ್ಥನೀಯತೆಯೇ ಅದರ ಸ್ವಭಾವ ಎಂದು ಮಾಯಾವಾದಿಗಳು ಹೇಳುತ್ತಾರೆ. ಇದನ್ನು ಮುಂದಿನ ಕೆಲವು ಪದ್ಯಗಳು ವಿಮರ್ಶಿಸುತ್ತವೆ.

**ಪ್ರತ್ಯಕ್ಷೇಣಾಜ್ಞತಾಸಿದ್ಧೌ ಬ್ರಹ್ಮಣೋ ಜ್ಞಾನರೂಪಿಣಃ ।**
**ಅವಿದ್ಯಾದುರ್ಘಟತ್ವೇನ ಘಟನಾ ಸ್ಯಾತ್ ಕಥಂಚನ ॥ ೭೯ ॥**

**ಅರ್ಥ-** ಜ್ಞಾನರೂಪಿಣಃ ಬ್ರಹ್ಮಣಃ= ಜ್ಞಾನಸ್ವರೂಪನಾದ ಬ್ರಹ್ಮನಿಗೆ, ಪ್ರತ್ಯಕ್ಷೇಣ= ಪ್ರತ್ಯಕ್ಷ ಪ್ರಮಾಣದಿಂದ, ಅಜ್ಞತಾಸಿದ್ಧೌ= ಅಜ್ಞಾನವು ಸಿದ್ಧವಾದರೆ, ಅವಿದ್ಯಾದುರ್ಘಟತ್ವೇನ= ಅವಿದ್ಯೆಯ ಅಸಮರ್ಥನೀಯತೆಯಿಂದ, ಕಥಂಚನ= ಹೇಗೋ, ಘಟನಾ= ಸಮರ್ಥನೆಯು, ಸ್ಯಾತ್= ಇದ್ದೀತು.

**ಅನುವಾದ-** ಜ್ಞಾನಸ್ವರೂಪನಾದ ಬ್ರಹ್ಮನಲ್ಲಿ ಅಜ್ಞಾನವು ಇದೆ ಎಂದು ಪ್ರತ್ಯಕ್ಷ-ಪ್ರಮಾಣದಿಂದ ಸಿದ್ಧವಾದರೆ 'ಜ್ಞಾನಸ್ವರೂಪನಲ್ಲಿ ಅಜ್ಞಾನವು ಹೇಗೆ ಇದ್ದೀತು?' ಎಂಬ ಪ್ರಶ್ನೆಯು ಎದುರಾಗುತ್ತದೆ. ಹೇಗೆ? ಎಂಬ ಪ್ರಶ್ನೆಗೆ ಅವಕಾಶವಿಲ್ಲ. ಸಮರ್ಥನೆಯ ಅಭಾವವೇ ಅದರ ಸ್ವಭಾವ ಎಂದು ಉತ್ತರವನ್ನು ಹೇಳಬಹುದು.

**ಭಾವವಿಲಾಸಿನೀ–** ಜ್ಞಾನರೂಪೇ ಬ್ರಹ್ಮಣಿ ಕಥಮಜ್ಞಾನಂ ಘಟತೇ ಇತಿ ಶಂಕಾಪರಿಹಾರಾಯ ದುರ್ಘಟತ್ವಮವಿದ್ಯಾಯಾ ಭೂಷಣಂ ನತು ದೂಷಣಮಿತಿ ಯತ್ಪರೇಣೋಕ್ತಮ್, ತದಪಿ ನಿರ್ಮೂಲಮಿತ್ಯಾಹ ಪ್ರತ್ಯಕ್ಷೇಣೇತಿ ॥ ಜ್ಞಾನರೂಪಿಣೋ ಬ್ರಹ್ಮಣಃ ಅಜ್ಞತಾಸಿದ್ಧೌ ಅಜ್ಞಾನ-ಸಿದ್ಧೌ ಸತ್ಯಾಂ ಅವಿದ್ಯಾದುರ್ಘಟತ್ವೇನ ಘಟನಾ ಜ್ಞಾನಾಜ್ಞಾನಯೋರೇಕತ್ರಾವಸ್ಥಾ-ಸಂಪಾದನಮ್ ॥ ೭೯ ॥

**ವಿವರಣೆ–** ಜ್ಞಾನರೂಪನಾದ ಬ್ರಹ್ಮನಲ್ಲಿ ಅಜ್ಞಾನವು ಹೇಗೆ? ಎಂಬ ಶಂಕೆಯನ್ನು ಪರಿಹರಿಸಲು ಅದ್ವೈತ ದರ್ಶನವು 'ದುರ್ಘಟತ್ವಮವಿದ್ಯಾಯಾಃ ಭೂಷಣಂ ನ ತು ದೂಷಣಂ' - ದುರ್ಘಟತ್ವವು (ಕೂಡದೇ ಇರುವಿಕೆಯು) ಅವಿದ್ಯೆಗೆ (ಅಜ್ಞಾನಕ್ಕೆ) ಭೂಷಣ ದೂಷಣವಲ್ಲ ಎಂದು ಹೇಳುತ್ತದೆ.

**ತದಸಿದ್ಧೌ ಶ್ರೌತಸಾರ್ವಜ್ಞಸ್ಯೈವಾನುಭವೇ ಸತಿ ।**
**ಉಪಯಂತುರಭಾವಾತ್ತೇ ಕುಮಾರೀಭೂಷಣಂ ವೃಥಾ ॥ ೮೦ ॥**

**ಅರ್ಥ**-ತದಸಿದ್ಧೌ = ಅಜ್ಞೋಽಹಂ ಎಂಬ ಪ್ರತ್ಯಕ್ಷದಿಂದ ಬ್ರಹ್ಮನಲ್ಲಿ ಅಜ್ಞಾನವು ಸಿದ್ಧವಾಗದೆ ಇರಲು, ಶ್ರೌತಸಾರ್ವಜ್ಞಸ್ಯ = ಯಃ ಸರ್ವಜ್ಞಃ ಎಂಬ ಶ್ರುತಿಸಿದ್ಧವಾದ ಸರ್ವಜ್ಞತ್ವದ, ಅನುಭವೇ ಏವ ಸತಿ = ಅನುಭವವೇ ಇರುವಾಗ, ಉಪಯಂತುಃ ಅಭಾವಾತ್= ಅವಿದ್ಯೆ ಎಂಬ ನಿನ್ನ ಕುಮಾರಿಯನ್ನು ವರಿಸುವ (ಮದುವೆ ಮಾಡಿಕೊಳ್ಳುವ) ವರನೇ ಇಲ್ಲದಿರುವುದರಿಂದ, ತೇ= ನಿನಗೆ ಅಭಿಮತವಾದ, ಕುಮಾರೀಭೂಷಣಂ= ಅವಿದ್ಯಾ ಎಂಬ ಕುಮಾರಿಯ ದುರ್ಘಟತ್ವ ಎಂಬ ಆಭರಣವು, ವೃಥಾ= ವ್ಯರ್ಥವಾಗುವುದು.

**ಅನುವಾದ-** ಜ್ಞಾನರೂಪನಾದ ಬ್ರಹ್ಮನಲ್ಲಿ ಅಜ್ಞಾನವು ಇದೆ ಎಂದು ಪ್ರಮಾಣದಿಂದ ಸಿದ್ಧವಾಗದಿರುವಾಗ, ಇದಕ್ಕೆ ವ್ಯತಿರಿಕ್ತವಾಗಿ ಶ್ರುತಿಯು ಹೇಳುವ ಸರ್ವಜ್ಞತ್ವದ ಅನುಭವವೇ ಇರುವಾಗ, ಅಜ್ಞಾನಕ್ಕೆ ಆಶ್ರಯವೇ ಇಲ್ಲ. ಅಜ್ಞಾನವು ಬ್ರಹ್ಮನಲ್ಲಿ ಇದ್ದರೆ, ಇರುವಿಕೆಯು ದುರ್ಘಟ=ಅಸಮರ್ಥನೀಯ ಆದರೆ ದುರ್ಘಟತ್ವವೇ ಭೂಷಣವೆಂದು ಹೇಳಲು ಅವಕಾಶವು ಹೇಗಾದರೂ ಇದ್ದೀತು. ಅವಿದ್ಯೆಗೆ ಬ್ರಹ್ಮನು ಆಶ್ರಯವಲ್ಲ. ಆದ್ದರಿಂದ ಅವಿದ್ಯಾ ಎಂಬ ಕುಮಾರಿಗೆ ದುರ್ಘಟತ್ವ ಎಂಬ ಆಭರಣವು ವ್ಯರ್ಥ.

**ಭಾವವಿಲಾಸಿನೀ–** ಅಜ್ಞೋಽಹಮಿತಿ ಪ್ರತ್ಯಕ್ಷೇಣ ಭಗವತಿ ತಸ್ಯಾಜ್ಞಾನಸ್ಯಾಸಿದ್ಧೌ ಪ್ರತ್ಯುತ ಶ್ರೌತಸ್ಯ ಸರ್ವಜ್ಞ ಇತಿ ಶ್ರುತಿಸಿದ್ಧಸ್ಯ । ಶ್ರೌತಸ್ಯೇತ್ಯುಪಲಕ್ಷಣಮ್ । 'ತಾನ್ಯಹಂ ವೇದ ಸರ್ವಾಣಿ' 'ಸರ್ವದೃಗ್ಉಪದ್ರಷ್ಟಾ' ಇತ್ಯಾದಿಸ್ಮೃತಿಸಿದ್ಧಸ್ಯೇತ್ಯಪಿ ಗ್ರಾಹ್ಯಮ್ । ಸಾರ್ವಜ್ಞಸ್ಯಾನುಭವೇ ಏವ ಸತಿ । ಏವಪದೇನಾಜ್ಞಾನಾನುಭವಂ ವ್ಯಾವರ್ತಯತಿ । ಉಪಯನ್ತುಃ ಅವಿದ್ಯಾಮಂಗೀಕುರ್ವತ ಇತಿ ಯಾವತ್ । ಜ್ಞಾನರೂಪೇ ಭಗವತಿ ಅಜ್ಞಾನಪ್ರವೇಶೇ ಹಿ ದುರ್ಘಟತ್ವಾದಿನಾ ಭೂಷಣಂ ಕರ್ತವ್ಯಮ್ । ತಸ್ಯೈವಾಭಾವಾದಿತಿ ಭಾವಃ । ಜೀವೇಽವಿದ್ಯಾಯಾಸ್ತ್ವಯೈವಾನಂಗೀಕಾರಾತ್ । ಬ್ರಹ್ಮಣಿ ಚ ತ್ವದುಕ್ತಪ್ರತ್ಯಕ್ಷಸ್ಯಾಭಾವೇನ ಪ್ರವೇಶಯಿತುಮಶಕ್ಯತ್ವಾದ್ ಉಪಯಂತುರಭಾವಾದಿ-ತ್ಯುಕ್ತಮ್ । ತೇ ತವಾಭಿಮತಾವಿದ್ಯಾಖ್ಯಕುಮಾರೀಭೂಷಣಂ ದುರ್ಘಟಘಟಕತ್ವಾಖ್ಯ-ಕರ್ಣಭೂಷಣಂ ವೃಥಾ । ಅವಿದ್ಯಾಯಾಃ ದುರ್ಘಟಘಟಕತ್ವಶಕ್ತಿಕಲ್ಪನಂ ವ್ಯರ್ಥಮೇವೇತಿ ಭಾವಃ ॥ ೮೦ ॥

**ವಿವರಣೆ–** 'ಅಹಮಜ್ಞಃ' - ಇದು ಜೀವಾತ್ಮನ ಅನುಭವ, ಬ್ರಹ್ಮನ ಅನುಭವವಲ್ಲ ಎಂದು ಹಿಂದಿನ ಪದ್ಯಗಳಲ್ಲಿ ಹೇಳಲಾಗಿದೆ. ಬ್ರಹ್ಮನು ಸರ್ವಜ್ಞ ಎಂದು '**ಯಃ ಸರ್ವಜ್ಞಃ ಸ ಸರ್ವವಿತ್**' ಎಂಬ ಶ್ರುತಿಯು (ಆಥರ್ವಣ 4.8) '**ಸರ್ವದೃಕ್**' '**ಉಪದ್ರಷ್ಟಾ**'

(ಭ.ಗೀ.13.23) **'ತಾನ್ಯಹಂ ವೇದ ಸರ್ವಾಣಿ'** ಮೊದಲಾದ ಸ್ಮೃತಿಗಳು ಹೇಳುತ್ತವೆ. ಆದ್ದರಿಂದ ಬ್ರಹ್ಮನಲ್ಲಿ ಅಜ್ಞಾನವು ಇಲ್ಲ. ಅವಿದ್ಯೆಯು ಇದ್ದು, ಅದು ಅಸಮರ್ಥನೀಯವಾದರೆ ಅಸಮರ್ಥನೀಯತೆಯು= ದುರ್ಘಟತ್ವವು ಭೂಷಣ ಎಂದು ಕಲ್ಪನೆಯನ್ನಾದರೂ ಮಾಡಬಹುದು. ಅವಿದ್ಯೆಯು ಕುಮಾರಿ. ದುರ್ಘಟತ್ವವು ಆಭರಣ. ಕುಮಾರಿಯು ಇದ್ದರೆ ಅವಳಿಗೆ ಆಭರಣವನ್ನು ತೊಡಿಸಬಹುದು. ಅವಿದ್ಯಾಕುಮಾರಿಯೇ ಇಲ್ಲವಾದ್ದರಿಂದ ದುರ್ಘಟತ್ವದ ಕಲ್ಪನೆಯು ವ್ಯರ್ಥ.

**ಪೀಠಿಕೆ-** ಮಾಯಾವಾದವು ಬ್ರಹ್ಮನಲ್ಲಿ ಅವಿದ್ಯೆಯು ಇದೆ ಎಂದು ಹೇಳುತ್ತದೆ. ಇದನ್ನು ವಿಮರ್ಶಿಸುತ್ತಿರುವ ಗ್ರಂಥಕಾರರು ಅವಿದ್ಯೆಯನ್ನು 'ಕುಮಾರಿ' ಎಂದು, ಬ್ರಹ್ಮನನ್ನು 'ವರ' ಎಂದು, ದುರ್ಘಟತ್ವವನ್ನು 'ಆಭರಣ' ಎಂದು ರೂಪಿಸಿದ್ದಾರೆ. ಭಾಗವತ ಪುರಾಣದ ಉಕ್ತಿಯೊಂದನ್ನು ಅತ್ತೆ ಎಂದು ರೂಪಿಸಿದ್ದಾರೆ. 'ಅವಿದ್ಯಾ' ಕನ್ಯೆಗೆ ಬ್ರಹ್ಮನೊಡನೆ ಮದುವೆ ಮಾಡಿಸಲು ಮಾಯಾವಾದಿಗಳು ಬಯಸಿದ್ದಾರೆ; ಈ ಮದುವೆಯು ಆದರೂ ಕುಮಾರಿಯು (ವಧುವು) ವರನೊಡನೆ ಇರಲು ಆಗುವುದಿಲ್ಲ ಎಂದೂ ರೂಪಿಸಿದ್ದಾರೆ-

**ಮಾಯಾಂ ವ್ಯದಸ್ಯ ಚಿಚ್ಛಕ್ತ್ಯೇತ್ಯುಕ್ತಿಶ್ವಶ್ರೂಃ ಕ್ಷಣೇಕ್ಷಣೇ ।**
**ಉದೂಢಾಮಪಿ ತಾಂ ಕನ್ಯಾಂ ಹನ್ಯಾದೇವೇತಿ ಮೇ ಮತಿಃ ॥ ೮೧ ॥**

**ಅರ್ಥ-**ಉದೂಢಾಮ್ ಅಪಿ= ವರಿಸಲ್ಪಟ್ಟಿದ್ದರೂ, ತಾಂ ಕನ್ಯಾಂ= ಆ (ಅವಿದ್ಯಾ) ಕನ್ಯೆಯನ್ನು, **'ಮಾಯಾಂ ವ್ಯದಸ್ಯ ಚಿಚ್ಛಕ್ತ್ಯಾ'** ಇತ್ಯುಕ್ತಿಶ್ವಶ್ರೂಃ= **'ಮಾಯಾಂ ವ್ಯದಸ್ಯ ಚಿಚ್ಛಕ್ತ್ಯಾ'**ಎಂಬ ಉಕ್ತಿಯೆಂಬ ಅತ್ತೆಯು, ಕ್ಷಣೇಕ್ಷಣೇ= ಪ್ರತಿಕ್ಷಣವೂ, ಹನ್ಯಾದ್ ಏವ= ನಿಶ್ಚಿತವಾಗಿ ಪೀಡಿಸುತ್ತಾಳೆ. ಇತಿ= ಎಂದು, ಮೇ= ನನ್ನ, ಮತಿಃ= ಅಭಿಪ್ರಾಯ.

**ಅನುವಾದ-** ಅವಿದ್ಯಾಕನ್ಯೆಯನ್ನು ಬ್ರಹ್ಮನು ಮದುವೆಯಾಗಿದ್ದರೆ 'ಮಾಯಾಂ ವ್ಯದಸ್ಯ ಚಿಚ್ಛಕ್ತ್ಯಾ...' ಈ ಉಕ್ತಿಯು ಅವಳ ಅತ್ತೆಯಾಗುತ್ತಾಳೆ. ಈ ಅತ್ತೆಯು ಅವಳನ್ನು ಪ್ರತಿಕ್ಷಣವೂ ಪೀಡಿಸುತ್ತಾಳೆ. ಎಂದು ನನ್ನ ಅಭಿಪ್ರಾಯ.

**ಭಾವವಿಲಾಸಿನೀ–** ಉದೂಢಾಂ ಸ್ವರೂಪಜ್ಞಾನಸ್ಯಾಜ್ಞಾನವಿರೋಧಿತ್ವಮಿತ್ಯಾದ್ಯನೃತವಚನೇನ ವಿವಾಹಿತಾಂ ಬಲಾತ್ ಪ್ರವೇಶಿತಾಮಿತಿ ಯಾವತ್ । ಯಥಾ ಶೂದ್ರೀಪರಿಣಯನಂ ಬ್ರಾಹ್ಮಣಸ್ಯ ನೋಚಿತಮಿತಿ ನ್ಯಾಯಂ ಪಾಮರಬ್ರಾಹ್ಮಣವಿಷಯಂ ಕೃತ್ವಾ ವೈದಿಕೇ ಬ್ರಾಹ್ಮಣೇ ನ ದೋಷ ಇತಿ ದತ್ತಾಂ ಶೂದ್ರೀಮಿವ ತಾಂ ಕನ್ಯಾಮ್ । 'ಮಾಯಾಂ ವ್ಯದಸ್ಯ ಚಿಚ್ಛಕ್ತ್ಯಾ ಕೈವಲ್ಯೇ ಸ್ಥಿತ ಆತ್ಮನಿ' ಇತಿ ಭಾಗವತೋಕ್ತ್ಯಾಖ್ಯಶ್ವಶ್ರೂಃ । ಏತಾದೃಶಕುಯುಕ್ತಿಭಿರಜ್ಞಾನಾಖ್ಯಪಂಕೇ ನಿಮಜ್ಜಿತಸ್ಯ ಭಗವತಃ ತಸ್ಮಾದಜ್ಞಾನಾದುದ್ಧೃತ್ಯ ಸರ್ವಜ್ಞತಯಾ ಪುನಃ ಪ್ರಸವಾತ್ ಶ್ವಶ್ರೂರಿತ್ಯುಕ್ತಮ್ । ವರಪ್ರಸವಿತ್ರೀ ಹಿ ಶ್ವಶ್ರೂರಿತ್ಯುಚ್ಯತೇ । ಚಿಚ್ಛಕ್ತ್ಯಾ ಮಾಯಾಂ ವ್ಯದಸ್ಯೇತಿ ಸ್ವರೂಪಜ್ಞಾನಶಕ್ತ್ಯೈವ ಮಾಯಾನಿರ್ಹರಣಸಾಮರ್ಥ್ಯಸ್ಯ ಪ್ರತಿಪಾದಕತ್ವಾತ್ ಕ್ಷಣೇಕ್ಷಣೇ ತವ ಕನ್ಯಾಮವಿದ್ಯಾಂ ಹನ್ಯಾತ್ । ಏತದ್ವಚನಬಲಾತ್ ಸ್ವರೂಪಜ್ಞಾನಸ್ಯೈವಾಜ್ಞಾನವಿರೋಧಿತ್ವಕಥನಾತ್ ಮಾಯಾವಾದ್ಯುಕ್ತಾನೃತ-

**ವಾಚಾ ಪ್ರವೇಶಿತಾಮಪಿ ತಾಂ ಪರಮಾತ್ಮನೋ ಗೃಹಾದೇವ ಬಹಿಷ್ಕುರ್ಯಾದಿತಿ ಭಾವಃ । 'ನ ಯತ್ರ ಮಾಯಾ' ಇತಿ ವೈಕುಂಠಾದೇರಪಿ ತಯೈವ ಬಹಿಷ್ಕೃತತ್ವಾತ್ । ಕ್ಷಣೇಕ್ಷಣೇ ಇತ್ಯನೇನ 'ನ ಯತ್ರ ಶ್ರೂಯತೇ ಮಾಯಾ ವಿಲಜ್ಜಮಾನಯಾ' ಇತ್ಯಾದಿವಾಕ್ಯಾನಿ ಸೂಚಯತಿ ॥ ೮೧ ॥**

**ವಿವರಣೆ–** ಬ್ರಹ್ಮನ ಸ್ವರೂಪವೇ ಆದ ಜ್ಞಾನವು ಅವನಲ್ಲಿ ಅಜ್ಞಾನವು ಇರುವುದಕ್ಕೆ ವಿರೋಧಿ ಅಲ್ಲ; ಆದ್ದರಿಂದ ಸರ್ವಜ್ಞನಾದ ಬ್ರಹ್ಮನಲ್ಲಿ ಅಜ್ಞಾನವು ಇರಬಹುದು ಎಂದು ಮಾಯಾವಾದಿಗಳು ಅಂಗೀಕರಿಸುತ್ತಾರೆ. ಆದ್ದರಿಂದ ಅವಿದ್ಯಾಕನ್ಯೆಗೆ ಬ್ರಹ್ಮನೊಂದಿಗೆ ಮದುವೆಯು ಆಗಿದೆ.

**'ಮಾಯಾಂ ವ್ಯುದಸ್ಯ ಚಿಚ್ಛಕ್ತ್ಯಾ ಕೈವಲ್ಯೆ ಸ್ಥಿತ ಆತ್ಮನಿ'** (1.7.23) ಎಂಬ ಉಕ್ತಿಯು ಭಾಗವತದಲ್ಲಿ ಇದೆ. ಬ್ರಹ್ಮನ ಸ್ವರೂಪಜ್ಞಾನವು ಅವಿದ್ಯೆಯನ್ನು ದೂರಮಾಡಿದೆ' ಎಂದು ಈ ಉಕ್ತಿಯ ಅರ್ಥ. ಅಂದರೆ ಬ್ರಹ್ಮನ ಸ್ವರೂಪಜ್ಞಾನವು ಅವಿದ್ಯೆಗೆ ವಿರೋಧಿ; ಆದ್ದರಿಂದ ಬ್ರಹ್ಮನಲ್ಲಿ ಅವಿದ್ಯೆಗೆ ಪ್ರವೇಶವಿಲ್ಲ ಎಂದು ಅಭಿಪ್ರಾಯ. ಈ ವಿಷಯವನ್ನು - ಮಾಯಾವಾದವು ಅವಿದ್ಯೆಗೆ ಬ್ರಹ್ಮನೊಂದಿಗೆ ಮದುವೆ ಮಾಡಿಸಿದೆ; ಆದರೆ ಬ್ರಹ್ಮನನ್ನು ಜಿಜ್ಞಾಸುಗಳಿಗೆ ಅಭಿವ್ಯಕ್ತಗೊಳಿಸುವ 'ಮಾಯಾಂ ವ್ಯುದಸ್ಯ ಚಿಚ್ಛಕ್ತ್ಯಾ...' ಈ ಉಕ್ತಿಯು ಬ್ರಹ್ಮನ ತಾಯಿ; ಅಂದರೆ ಅವಿದ್ಯೆಯ ಅತ್ತೆ; ಈ ಅತ್ತೆಯು ಅವಿದ್ಯೆಯು ಬ್ರಹ್ಮನೊಂದಿಗೆ ಸೇರದಂತೆ ಪ್ರತಿಕ್ಷಣವೂ ತಡೆಯುತ್ತದೆ - ಎಂದು ಗುರುರಾಜರು ಕಾವ್ಯಮಾರ್ಗದಿಂದ ರಸಮಯವಾಗಿ ಹೇಳಿದ್ದಾರೆ.

**ಸ್ವಾನರ್ಹಾಲಂಕೃತಿಂ ತಸ್ಯಾಃ ಸಹೇತ ಕಥಮೈಶ್ವರೀಮ್ ।**
**ನಾಪಿ ಜೀವಸ್ಯ ಯೋಗ್ಯೇಯಮನ್ಯೋನ್ಯಾಶ್ರಯದೋಷತಃ ॥ ೮೨ ॥**

**ಅರ್ಥ-**ಶ್ರುತಿಃ= ಶ್ರುತಿಯು, ಐಶ್ವರೀಮ್= ಈಶ್ವರನಿಗೆ= ಬ್ರಹ್ಮನಿಗೆ ಮಾತ್ರವೇ ಇರುವ, ಸ್ವಾನರ್ಹಾ ಲಂಕೃತಿಮ್= ತನಗೆ (ಶ್ರುತಿಗೇ) ಅರ್ಹವಲ್ಲದ ಆಭರಣವನ್ನು, ತಸ್ಯಾಃ= ಆ ಅವಿದ್ಯೆಗೆ, ಕಥಂ ಸಹೇತ= ಹೇಗೆ ತಾನೆ ಸಹಿಸೀತು? ಇಯಮ್= ಈ ಅವಿದ್ಯೆಯು, ಜೀವಸ್ಯ ಅಪಿ= ಜೀವನಿಗೂ (ಜೀವನಲ್ಲಿ ಇರಲು), ನ ಯೋಗ್ಯಾ= ಯೋಗ್ಯವಲ್ಲ; ಅನ್ಯೋನ್ಯಾಶ್ರಯ ದೋಷತಃ= ಅನ್ಯೋನ್ಯಾಶ್ರಯದೋಷವಿರುವುದರಿಂದ.

**ಅನುವಾದ-** ಲೋಕದೃಷ್ಟಿಯಿಂದ ಅನುಪಪನ್ನವಾಗಿದ್ದನ್ನು ನಿಜವಾಗಿಸುವ ಸಾಮರ್ಥ್ಯವು= ಅಘಟಿತಘಟನಾ ಸಾಮರ್ಥ್ಯವು ಈಶ್ವರನಿಗೆ= ಪರಮಾತ್ಮನಿಗೆ ಮಾತ್ರವೇ ಇದೆ. ಶ್ರುತಿಗೂ ಇಲ್ಲ. ಅವಿದ್ಯೆಗಿಂತ ಪ್ರಬಲವಾದ, ತನಗೆ ಇಲ್ಲದ ಆಭರಣವು ಅವಿದ್ಯೆಗೆ ಇದೆ ಎಂದು ಶ್ರುತಿಯು ಹೇಳುವುದೇ? ಸರ್ವಥಾ ಇಲ್ಲ. ಅವಿದ್ಯೆಯು ಜೀವಾತ್ಮನಲ್ಲೂ ಇರಲಾರದು. ಅನ್ಯೋನ್ಯಾಶ್ರಯ ದೋಷವು ಇರುವುದರಿಂದ (ನೋಡಿ ಶ್ಲೋಕ ೮೩).

**ಭಾವವಿಲಾಸಿನೀ–** ಸ್ವಾನರ್ಹಾಲಂಕೃತಿಂ ಅವಿದ್ಯಾತೋಽಪಿ ವಿದ್ಯಾರೂಪತಯಾ ಪ್ರಬಲಾಯಾಃ ಸ್ವಸ್ಯಾ ಅಪ್ಯನರ್ಹಾಂ ದುರ್ಘಟಘಟಕತ್ವಾಖ್ಯಾಲಂಕೃತಿಮ್ । ಐಶ್ವರೀಂ ಕರ್ತುಮಕರ್ತು-ಮನ್ಯಥಾಕರ್ತುಂ ಸಮರ್ಥಸ್ಯೇಶ್ವರಸ್ಯೈವಂ ಯೋಗ್ಯಾಂ ತಸ್ಯಾ ಅವಿದ್ಯಾಯಾಃ ಕಥಂ ಸಹೇತ । ಈಶ್ವರಾದನ್ಯತ್ರ ದುರ್ಘಟಘಟಕಂ ಶ್ರುತಿರ್ನ ಸಹೇತ ಇತಿ ಭಾವಃ । ಪ್ರಮಾಣಾಭಾವಾತ್ ಪ್ರಬಲಪ್ರತ್ಯಕ್ಷವಿರುದ್ಧತ್ವಾಚ್ಚ ಬ್ರಹ್ಮಣ್ಯಜ್ಞಾನಂ ನಿರಾಕೃತ್ಯ ಪರಮತೇ ಜೀವೇಽಪ್ಯಜ್ಞಾನಂ ನ ಘಟತ ಇತ್ಯಾಹ ನಾಪೀತಿ ॥ ೮೨ ॥

**ವಿವರಣೆ–** (1) ಶ್ರುತಿಯು ವಿದ್ಯಾನಿಧಿ. ಆದ್ದರಿಂದ ಅವಿದ್ಯೆಗಿಂತ ಹೆಚ್ಚು ಪ್ರಬಲ. ಹೆಚ್ಚು ಪ್ರಬಲವಾದ ಶ್ರುತಿಗೆ ಅಘಟಿತಘಟನಾಶಕ್ತಿಯು ಇಲ್ಲ. ಆದ್ದರಿಂದ ಅವಿದ್ಯೆಗೆ ಈ ಶಕ್ತಿಯು ಇದೆ ಎಂದು ಶ್ರುತಿಯು ಹೇಳುವುದಿಲ್ಲ. ಆದ್ದರಿಂದ ಮಾಯಾವಾದವು ಹೇಳುವ ಅವಿದ್ಯೆಯ ಈ ಶಕ್ತಿಯು ಅಪ್ರಾಮಾಣಿಕ.

(ಆದ್ದರಿಂದ ಬ್ರಹ್ಮನಲ್ಲಿ ಅವಿದ್ಯೆಯು ಇದೆ ಎಂಬ ವಿಚಾರವು ಅಪ್ರಾಮಾಣಿಕ).

(2) ಈಶ್ವರಶಬ್ದಕ್ಕೆ ಕರ್ತುಮ್, ಅಕರ್ತುಮ್ ಅನ್ಯಥಾಕರ್ತುಂ ಶಕ್ತ ಎಂದು ಅರ್ಥ. ಆದ್ದರಿಂದ ಈಶ್ವರ ಶಬ್ದವಾಚ್ಯನಾದ ಪರಬ್ರಹ್ಮನಿಗೆ ಮಾತ್ರ ಅಘಟಿತಘಟನಾಶಕ್ತಿಯು ಇದೆ. ಬೇರೆಯವರಿಗೆ ಇಲ್ಲ.

ಜೀವೋ ಹ್ಯಜ್ಞಾನಕಲ್ಪ್ಯಸ್ತೇ ಸೋಽಜ್ಞಾನಸ್ಯ ಕಥಂ ಮಹೀ ।
ನಹಿ ಭಾರ್ಯೈವ ಭರ್ತಾರಂ ಸೂತೇ ಯತ್ನಶತೈರಪಿ ॥ ೮೩ ॥

**ಅರ್ಥ-**ತೇ= ನಿನಗೆ= ನಿಮ್ಮ ಮತದಲ್ಲಿ, ಜೀವಃ= ಜೀವನು, ಅಜ್ಞಾನಕಲ್ಪ್ಯಃ= ಅಜ್ಞಾನದಿಂದ ಕಲ್ಪಿಸಲ್ಪಡಬೇಕಾದವನು. ಹಿ= ಇದು ನಿಶ್ಚಿತ. ಸಃ= ಆ ಜೀವನು, ಅಜ್ಞಾನಸ್ಯ= ಅಜ್ಞಾನಕ್ಕೆ, ಕಥಮ್= ಹೇಗೆ, ಮಹೀ= ಆಶ್ರಯ? ಭಾರ್ಯಾ ಏವ= ಪತ್ನಿಯೇ, ಯತ್ನಶತೈಃ ಅಪಿ= ನೂರಾರು ಪ್ರಯತ್ನಗಳಿಂದಲೂ, ಭರ್ತಾರಂ= ಪತಿಯನ್ನು, ನ ಹಿ ಸೂತೇ= ಹಡೆಯುವುದಿಲ್ಲವಷ್ಟೆ.

**ಅನುವಾದ-** ನಿಮ್ಮ ದರ್ಶನದಲ್ಲಿ ಜೀವನು ಅಜ್ಞಾನಕಲ್ಪಿತ. ಆದ್ದರಿಂದ ಅವನು ಅಜ್ಞಾನಕ್ಕೆ ಹೇಗೆ ಆಶ್ರಯ? ಪತಿಯಿಂದ ಪೋಷಿಸಲ್ಪಡುವವಳು ಭಾರ್ಯಾ. ಪತಿಯು ಪೋಷಕ. ಆದ್ದರಿಂದ ಅವನು ಭರ್ತಾ. ಪೋಷಿಸಲ್ಪಡಬೇಕಾದವಳು ಪೋಷಕನ ತಾಯಿ ಆಗುವುದುಂಟೆ? ಅಜ್ಞಾನವು ಕಲ್ಪಕ. ಜೀವನು ಕಲ್ಪಿತ, ಕಲ್ಪಿತವು ಕಲ್ಪಕಕ್ಕೆ ಆಶ್ರಯವಾಗುವುದು ಅಸಂಬದ್ಧ.

**ಭಾವವಿಲಾಸಿನೀ–** ಅನ್ಯೋನ್ಯಾಶ್ರಯಮುಪಪಾದಯತಿ– ಜೀವ ಇತಿ ॥ ಹಿ ಯಸ್ಮಾತ್ ತವ ಮತೇ ಯೋ ಜೀವಃ ಅಜ್ಞಾನಕಲ್ಪಿತಃ ಸ ಅಜ್ಞಾನಸ್ಯ ಮಹೀ ಆಶ್ರಯಃ ಕಥಮ್? ತತ್ರ ದೃಷ್ಟಾಂತಃ

ನಹಿ ಭಾರ್ಯೇತಿ ॥ ಭಾರ್ಯಾ ಭರ್ತ್ರಾ ಭರ್ತುಂ ಯೋಗ್ಯಾ ಭರ್ತುರುತ್ತರಕಾಲೀನೇತಿ ಯಾವತ್ ॥ ೮೩ ॥

**ವಿವರಣೆ**– 'ಪೂರ್ವಸಿದ್ಧತಮಸೋ ಹಿ ಪಶ್ಚಿಮೋ ನಾಶ್ರಯೋ ಭವತಿ ನಾಪಿ ಗೋಚರಃ' - ಇದು ಶಂಕರಾಚಾರ್ಯಬ್ರಹ್ಮಸೂತ್ರದ ಭಾಷ್ಯಕ್ಕೆ ವಿಮುಕ್ತಾತ್ಮಯತಿಯು ರಚಿಸಿದ 'ವಿವರಣ' ಎಂಬ ಟೀಕೆಯಲ್ಲಿರುವ ವಾಕ್ಯ. 'ಮೊದಲು ಸಿದ್ಧವಾಗಿರುವ ಅಜ್ಞಾನಕ್ಕೆ ಅನಂತರ ಬರುವ ಯಾವ ಪದಾರ್ಥವೂ ಆಶ್ರಯವಾಗುವುದಿಲ್ಲ. ವಿಷಯವೂ ಆಗುವುದಿಲ್ಲ' ಎಂದು ಈ ವಾಕ್ಯದ ಅರ್ಥ. ಜೀವನು ಅಜ್ಞಾನಕಲ್ಪಿತ. ಆದ್ದರಿಂದ ಅಜ್ಞಾನವು ಜೀವನಿಗಿಂತ ಮೊದಲೇ ಇದೆ. ಮೊದಲೇ ಇರುವ ಅಜ್ಞಾನಕ್ಕೆ ಆದರಿಂದ ಕಲ್ಪಿತನಾಗುವ ಜೀವನು ಆಶ್ರಯನಾಗಲಾರ.

ಜೀವಸಿದ್ಧೌ ತದಾಧಾರಮಜ್ಞಾನಂ ತೇ ಪ್ರಸಿದ್ಧ್ಯತಿ ।
ಅಜ್ಞಾನಸಿದ್ಧೌ ತತ್ಕಲ್ಪ್ಯೋ ಜೀವಃ ಸಿದ್ಧ್ಯೇತ್ ನಚಾನ್ಯಥಾ ॥ ೮೪ ॥

**ಅರ್ಥ**-ತೇ= ನಿನ್ನ ಮತದಲ್ಲಿ, ಜೀವಸಿದ್ಧೌ= ಜೀವನು ಸಿದ್ಧವಾದರೆ, ತದಾಧಾರಂ= ಜೀವನೇ ಆಧಾರವಾಗಿವುಳ್ಳ ಅಜ್ಞಾನವು, ಪ್ರಸಿದ್ಧ್ಯತಿ= ಸಿದ್ಧವಾಗುವುದು. ಅಜ್ಞಾನಸಿದ್ಧೌ= ಅಜ್ಞಾನವು ಸಿದ್ಧವಾದರೆ, ತತ್ಕಲ್ಪ್ಯಃ= ಅಜ್ಞಾನದಿಂದ ಕಲ್ಪಿಸಲ್ಪಡಬೇಕಾದ, ಜೀವಃ= ಜೀವನು, ಸಿದ್ಧ್ಯೇತ್= ಸಿದ್ಧಿಸುವನು. ಅನ್ಯಥಾ ನಚ= ಅಜ್ಞಾನವಿಲ್ಲದೇ, ಅಜ್ಞಾನಕಲ್ಪಿತವಾದ ಜೀವನು ಸಿದ್ಧನಾಗಲಾರನು.

**ಅನುವಾದ**- ನಿಮ್ಮ ಮತದಲ್ಲಿ ಅಜ್ಞಾನಕ್ಕೆ ಜೀವನು ಆಶ್ರಯ. ಆದ್ದರಿಂದ ಜೀವನು ಸಿದ್ಧವಾದರೆ ಅವನಲ್ಲಿ ಅಜ್ಞಾನವು ಸಿದ್ಧವಾಗುತ್ತದೆ. ನಿಮ್ಮ ಮತದಲ್ಲಿ ಜೀವನು ಅಜ್ಞಾನ ಕಲ್ಪಿತ. ಆದ್ದರಿಂದ ಅಜ್ಞಾನವು ಸಿದ್ಧವಾದರೆ ಜೀವನು ಸಿದ್ಧನಾಗುತ್ತಾನೆ.

**ಭಾವವಿಲಾಸಿನೀ**– ಅನ್ಯೋನ್ಯಾಶ್ರಯಪ್ರಕಾರಂ ದರ್ಶಯತಿ ಜೀವಸಿದ್ಧಾವಿತಿ ॥ ಅನ್ಯಥಾ ಅಜ್ಞಾನಂ ವಿನಾ । ಅಸ್ಮದ್ವತ್ ಸ್ವಾಭಾವಿಕಜೀವಾನಂಗೀಕಾರಾದಿತಿ ಭಾವಃ ॥ ೮೪ ॥

ಯದ್ಯಜ್ಞಾನಂ ವಿನೈವ ಸ್ಯಾಜ್ಜೀವೋಽನಾದಿಃ ಸ್ವತಸ್ತದಾ ।
ಸತ್ಯೋ ಜೀವೇಶಭೇದಃ ಸ್ಯಾತ್ ತಸ್ಮಾದಜ್ಞಾನಕಲ್ಪಿತಃ ।
ಜೀವೋಽವಶ್ಯಂ ತ್ವಯಾ ವಾಚ್ಯಃ ಕಥಂ ನಾನ್ಯೋನ್ಯಸಂಶ್ರಯಃ ॥ ೮೫ ॥

**ಅರ್ಥ**-ಅಜ್ಞಾನಂ ವಿನಾ ಏವ= ಅಜ್ಞಾನವಿಲ್ಲದೆ, ಜೀವಃ= ಜೀವನು, ಯದಿ ಸ್ಯಾತ್= ಇರುವುದಾದರೆ (ಅಜ್ಞಾನಕಲ್ಪಿತವಲ್ಲದಿದ್ದರೆ), ತದಾ= ಆಗ, ಸ್ವತಃ= ಸ್ವಾಭಾವಿಕವಾಗಿ, ಅನಾದಿಃ= ಅನಾದಿ (ಮತ್ತು) ಸತ್ಯಃ= ಸತ್ಯ, ಸ್ಯಾತ್= ಆಗುವನು, ತದಾ= ಆಗ, ಜೀವೇಶಭೇದಃ= ಜೀವೇಶಭೇದವು, ಸತ್ಯಃ ಸ್ಯಾತ್= ಸತ್ಯವಾಗುವುದು, ತಸ್ಮಾದ್= ಆದ್ದರಿಂದ,

ಜೀವಃ= ಜೀವನು, ಅಜ್ಞಾನಕಲ್ಪಿತಃ= ಅಜ್ಞಾನಕಲ್ಪಿತ ಎಂದು, ತ್ವಯಾ= ನಿನ್ನಿಂದ, ಅವಶ್ಯಂ ವಾಚ್ಯಃ= ಹೇಳಲ್ಪಡಲೇಬೇಕು, ತದಾ= ಆಗ, ಕಥಂ= ಹೇಗೆ ಅನ್ಯೋನ್ಯಸಂಶ್ರಯಃ= ಅನ್ಯೋನ್ಯಾಶ್ರಯವು, ನ= ಇಲ್ಲ?

**ಅನುವಾದ-** ಜೀವನು ಅಜ್ಞಾನಕಲ್ಪಿತನಲ್ಲದಿದ್ದರೆ ಸತ್ಯ ಆಗುವನು. ಅನಾದಿಯೂ ಆಗುವನು. ಆದ್ದರಿಂದ ಜೀವೇಶಭೇದವೂ ಸತ್ಯ ಆಗುವುದು. ಇದನ್ನು ಪರಿಹರಿಸಲು ಜೀವನು ಅಜ್ಞಾನಕಲ್ಪಿತ ಎಂದು ಮಾಯಾವಾದವು ಹೇಳಲೇಬೇಕು. ಆಗ ಅನ್ಯೋನ್ಯಾಶ್ರಯದೋಷವು ಇದ್ದೇ ಇದೆ.

**ಭಾವವಿಲಾಸಿನೀ–** ಅನ್ಯಥಾ ನೇತ್ಯೇತದ್ ವಿವೇಚಯತಿ– ಯದ್ಯಜ್ಞಾನಮಿತಿ ॥ ಸ್ವತಃ ಸ್ವಭಾವತಃ। ಈಶ್ವರಸ್ಯೈವಾಜ್ಞಾನವಶಾಜ್ಜೀವಭಾವಾನುಕ್ತೌ ಸ್ವಭಾವತ ಏವ ಸತ್ತ್ವೇ ಪರಸ್ಪರನಿರಪೇಕ್ಷತಯಾಽನಾದಿತಃ ಸ್ವಭಾವತ ಏವ ಸತೋರುಭಯೋರಪಿ ಕಾಲಾಕಾಶಯೋರಿವ ಸತ್ಯೋ ಭೇದಃ ಕಥಂ ನ ಸಿದ್ಧ್ಯೇದಿತಿ ಭಾವಃ। ಜೀವಸ್ಯ ಬ್ರಹ್ಮಭಾವೇ ಹಿ ಭೇದಸ್ಯ ಬಾಧಃ ಪರೇಣ ವಕ್ತವ್ಯಃ। ತದಜ್ಞಾನಾಕಲ್ಪಿತಸ್ಯ ಚ ತದ್ಭಾವೋ ಘಟಸ್ಯ ಪಟಭಾವ ಇವ ಕದಾಪಿ ನ ಸ್ಯಾತ್। ತಸ್ಮಾದಬಾಧಿತೋ ಭೇದ ಇತ್ಯರ್ಥಃ। ತಸ್ಮಾದ್ಭೇದಕಸ್ಯ ತವ ಮತೇ ಆವಶ್ಯಕತ್ವಾತ್। ನನ್ವಂತಃಕರಣಾದ್ಯುಪಾಧಿನಾ ಜೀವೋ ಭವಿಷ್ಯತಿ। ಅತಃ ಕಥಮನ್ಯೋನ್ಯಾಶ್ರಯ ಇತಿ ಚೇತ್। ನ। ತಸ್ಯಾಪ್ಯಜ್ಞಾನಕಲ್ಪಿತತ್ವೇನಾನ್ಯೋನ್ಯಾಶ್ರಯಸ್ಯ ಚಕ್ರಕಸ್ಯ ವಾಽಪರಿಹಾರಾತ್ ॥ ೮೫ ॥

**ವಿವರಣೆ–** (1) 'ಬ್ರಹ್ಮನೇ ಅಜ್ಞಾನವಶನಾಗಿ ಜೀವನಾಗುತ್ತಾನೆ' ಎಂದು ಹೇಳದಿದ್ದರೆ, ಜೀವನು ಸ್ವಭಾವತಃ ಇದ್ದಾನೆ; ಆದ್ದರಿಂದ ಅನಾದಿ ಎಂದು ಸಿದ್ಧವಾಗುತ್ತದೆ. ಸ್ವಭಾವತಃ ಇರುವ ಬ್ರಹ್ಮ-ಜೀವರಿಗೆ, ಹೀಗೆಯೇ ಇರುವ ಕಾಲ-ಆಕಾಶಗಳಿಗೆ ಹೇಗೆ ಹಾಗೆ ಭೇದವೂ ಸತ್ಯವೇ.

(2) ಜೀವನು, 'ಅಂತಃಕರಣ' ದಿಂದ ಕಲ್ಪಿತ; ಅಜ್ಞಾನದಿಂದ ಅಲ್ಲ; ಆದ್ದರಿಂದ ಅನ್ಯೋನ್ಯಾಶ್ರಯವಿಲ್ಲ? ಇಲ್ಲ. ಅಂತಃಕರಣವೂ ಅಜ್ಞಾನಕಲ್ಪಿತವೇ. ಆದ್ದರಿಂದ ಅಜ್ಞಾನ - ಅಂತಃಕರಣಗಳಿಗೆ ಅನ್ಯೋನ್ಯಾಶ್ರವು ಇದ್ದೇ ಇದೆ.

(3) ಅಥವಾ ಅಜ್ಞಾನ - ಅಂತಃಕರಣ- ಜೀವ - ಹೀಗೆ ಮೂರರ ಚಕ್ರವು ಏರ್ಪಟ್ಟು ಯಾವುದೂ ಸಿದ್ಧವಾಗುವುದಿಲ್ಲ.

**ಜೀವೋಪಾಧಿರವಿದ್ಯೈವ ಲಯೇ ಸುಪ್ತೌ ಚ ವರ್ತನಾತ್ ॥ ೮೬ ॥**

**ಅರ್ಥ-**ಲಯೇ = ಪ್ರಳಯಕಾಲದಲ್ಲಿ, ಚ = ಮತ್ತು, ಸುಪ್ತೌ = ಸುಷುಪ್ತಿಯ ಸಮಯದಲ್ಲಿ ವರ್ತನಾತ್ = ಇರುವುದರಿಂದ, ಅವಿದ್ಯಾ ಏವ= ಅವಿದ್ಯೆಯೇ, ಜೀವೋಪಾಧಿಃ = ಜೀವನಿಗೆ ಉಪಾಧಿಯು, (ಅಂತಃಕರಣಾದಿಗಳು ಉಪಾಧಿಗಳಲ್ಲ).

**ಅನುವಾದ-** ಅವಿದ್ಯೆಯು ಪ್ರಲಯ ಮತ್ತು ಸುಷುಪ್ತಿ ಕಾಲಗಳಲ್ಲಿ ಇದೆ. ಅಂತಃಕರಣವು ಇಲ್ಲ. ಆದ್ದರಿಂದ ಅವಿದ್ಯೆಯೇ ಜೀವನ ಆವಿಷ್ಕಾರಕ್ಕೆ ಉಪಾಧಿ. ಬೇರೆ ಯಾವುದೂ ಅಲ್ಲ.

**ಭಾವವಿಲಾಸಿನೀ–** ಕಿಂಚಾವಿದ್ಯೈವ ಜೀವೋಪಾಧಿಸ್ತವ ಮತೇ ನಾಂತಃಕರಣಮಿತ್ಯಾಹ– **ಜೀವೋಪಾಧಿರಿತಿ** ॥ ಲಯೇ ಪ್ರಲಯೇ ಸುಪ್ತೌ ಚ ವರ್ತನಾತ್ ಅವಿದ್ಯಾಯಾ ವಿದ್ಯಮಾನತ್ವಾತ್ । ಅಂತಃಕರಣಾದೇಸ್ತದಾಽಭಾವಾಚ್ಚೇತ್ಯರ್ಥಃ ॥ ೮೬ ॥

**ವಿವರಣೆ–** ಅದ್ವೈತ ಮತದ ಪ್ರಕಾರ ಪ್ರಲಯ - ಸುಷುಪ್ತಿ ಕಾಲಗಳಲ್ಲಿ ಅಂತಃಕರಣವು ಇಲ್ಲ; ಬ್ರಹ್ಮನಿಗೆ ಜೀವಭಾವವು ಇದೆ. ಅಂತಃಕರಣವು ಉಪಾಧಿಯಾದರೆ, ಅದು ಇಲ್ಲದ ಕಾರಣ ಆ ಕಾಲಗಳಲ್ಲಿ ಜೀವನೂ ಇರಬಾರದು. ಪ್ರಲಯ - ಸುಷುಪ್ತಕಾಲಗಳಲ್ಲಿ ಜೀವನು ಇರುವುದರಿಂದಲೇ ಪುನಃ ಸೃಷ್ಟಿ- ಎಚ್ಚರಿಕೆಗಳು ಆಗುತ್ತಿವೆ.

ಅನಾದಿತ್ವೇನಾನವಸ್ಥಾದೋಷಸ್ಯ ಸ್ಯಾತ್ ಕ್ವಚಿಚ್ಛಮಃ ।
ಅನ್ಯೋನ್ಯಾಶ್ರಯದೋಷಸ್ತು ಕ್ಷೋಣ್ಯಾಂ ಶೂನ್ಯಪ್ರತಿಕ್ರಿಯಃ ।
ಯದಂಕುರಾದ್ಧಿ ಯದ್ ಬೀಜಂ ಕಿಂ ತದ್‌ಬೀಜಾತ್ ತದಂಕುರಃ॥ ೮೭ ॥

**ಅರ್ಥ-**ಕ್ವಚಿತ್= ಪ್ರಾಮಾಣಿಕ ನಿದರ್ಶನಗಳಲ್ಲಿ, ಅನಾದಿತ್ವೇನ = ಅನಾದಿ ಎಂಬ ಕಾರಣದಿಂದ, ಅನವಸ್ಥಾದೋಷಸ್ಯ = ಅನವಸ್ಥಾದೋಷಕ್ಕೆ, ಶಮಃ = ಪರಿಹಾರವು, ಸ್ಯಾತ್ = ದೊರಕೀತು. ಅನ್ಯೋನ್ಯಾಶ್ರಯದೋಷಃ ತು = ಅನ್ಯೋನ್ಯಾಶ್ರಯದೋಷವಾದರೂ, ಕ್ಷೋಣ್ಯಾಂ = ಭೂಮಿಯಲ್ಲಿ, ಶೂನ್ಯಪ್ರತಿಕ್ರಿಯಃ = ಪರಿಹಾರಶೂನ್ಯ (ರಹಿತ)ವಾದುದು. ಯದಂಕುರಾತ್ = ಯಾವ ಮೊಳಕೆಯಿಂದ, ಯದ್ ಬೀಜಂ (ಸ್ಯಾತ್)= ಯಾವ ಬೀಜವು ಉಂಟಾಗುವುದೋ, ತದ್‌ಬೀಜಾತ್ = ಅದೇ ಬೀಜದಿಂದ, ತದಂಕುರಃ = ಅದೇ ಮೊಳಕೆಯು, (ಸ್ಯಾತ್) ಕಿಮ್= ಉಂಟಾಗುವುದೇನು?

**ಅನುವಾದ-** ಬೀಜದಿಂದ ಮೊಳಕೆ, ಇದರಿಂದ ಆದ ಮರದಿಂದ ಬೀಜ, ಹೀಗೆ ಬೀಜ-ಮೊಳಕೆಗಳ ಪರಂಪರೆಯು ಪ್ರತ್ಯಕ್ಷಸಿದ್ಧವಾಗಿದೆ. ಈ ಪರಂಪರೆಗೆ ಮೂಲವು ಸಿಗುವುದಿಲ್ಲ. ಆದ್ದರಿಂದ ಇದು ಅನಾದಿ. ಈ ನಿದರ್ಶನದಲ್ಲಿ ಇರುವ ಅನವಸ್ಥಾ ದೋಷವಲ್ಲ. ಅನವಸ್ಥಾ ದರ್ಶನಕ್ಕಿಂತ ಮೊದಲೇ ಬೀಜ-ಮೊಳಕೆಗಳು ಸಿದ್ಧವಾಗಿರುವುದರಿಂದ. ಅನ್ಯೋನ್ಯಾಶ್ರಯವು ದೋಷವಾಗದಿರುವ ನಿದರ್ಶನವೇ ಇಲ್ಲ. ಅದು ದೋಷವೇ. ಅದಕ್ಕೆ ಇಡೀ ಭೂಮಂಡಲದಲ್ಲಿ ಪರಿಹಾರವೇ ಇಲ್ಲ. ಯಾವ ಮೊಳಕೆಯಿಂದ ಯಾವ ಬೀಜವು ಹುಟ್ಟುವುದೋ. ಅದೇ ಬೀಜದಿಂದ ಆ ಅಂಕುರವು ಹುಟ್ಟುವುದೆ? ಇಲ್ಲ.

**ಭಾವವಿಲಾಸಿನೀ–** ಅನವಸ್ಥಾತೋಽಪ್ಯನ್ಯೋನ್ಯಾಶ್ರಯಃ ಪ್ರಬಲದೋಷ ಇತ್ಯಾಹ ಅನಾದಿತ್ವೇನೇತಿ ॥ ಕ್ವಚಿತ್ ಪ್ರಾಮಾಣಿಕತ್ವೇ ಸತೀತ್ಯರ್ಥಃ। ಶಮಃ ಪರಿಹಾರಃ। ಬೀಜಾಂಕುರಾ-ನವಸ್ಥಾಯಾಃ ಪ್ರಾಮಾಣಿಕತ್ವೇನ ಸರ್ವೈರದೋಷತ್ವಾಂಗೀಕಾರಾತ್ । ಶೂನ್ಯಾ ಪ್ರತಿಕ್ರಿಯಾ ಪರಿಹಾರೋ ಯಸ್ಯ ಸಃ। ತದೇವ ದರ್ಶಯತಿ ಯದಂಕುರಾದಿತಿ ॥ ಯಸ್ಮಾದಂಕುರಾತ್ ಯದ್ ಬೀಜಂ ಕಲಮಾದಿಬೀಜಂ ತದ್ಬೀಜಾತ್ ತದಂಕುರಜನ್ಯತದ್ಬೀಜಾತ್ ಸ ಚಾಸಾವಂಕುರಶ್ಚ ತದಂಕುರಃ ಭವತಿ ಕಿಮ್ ನೇತ್ಯರ್ಥಃ। ಅತೋಽಪರಿಹಾರ್ಯೋಽನ್ಯೋನ್ಯಾಶ್ರಯ ಇತಿ ಭಾವಃ ॥ ೮೭॥

**ವಿವರಣೆ–** ಬೀಜದಿಂದ ಅಂಕುರ; ಈ ಅಂಕುರದಿಂದ ಇನ್ನೊಂದು ಬೀಜ; ಈ ಬೀಜದಿಂದ ಇನ್ನೊಂದು ಅಂಕುರ - ಹೀಗೆ ಬೀಜ- ಅಂಕುರಗಳ ನಿಲ್ಲದ ಪರಂಪರೆಯು ಪ್ರತ್ಯಕ್ಷ ಸಿದ್ಧವಾಗಿದೆ. ಆದ್ದರಿಂದ ಈ ಅನವಸ್ಥಾ ದೋಷವಲ್ಲ. ಬೀಜ-ಬೀಜದಿಂದ ಅಂಕುರ, ಈ ಅಂಕುರದಿಂದ ಇದೇ ಬೀಜ- ಈ ವ್ಯವಸ್ಥೆಯು ಇಲ್ಲ. ಹೀಗೆ ಆಗುವುದೂ ಇಲ್ಲ. ಆದ್ದರಿಂದ ಅನ್ಯೋನ್ಯಾಶ್ರಯದೋಷಕ್ಕೆ ಪರಿಹಾರವೇ ಇಲ್ಲ.

ಜೀವ- ಅಜ್ಞಾನಗಳು ಅನಾದಿ. ಆದ್ದರಿಂದ ಇವುಗಳ ಅನ್ಯೋನ್ಯಾಶ್ರಯವು ದೋಷವಲ್ಲ? ಇಲ್ಲ.

ಜೀವನು ಅಜ್ಞಾನಕ್ಕೆ ಅಧೀನ, ಅಜ್ಞಾನಕಲ್ಪಿತವಾದ್ದರಿಂದ, ಅಜ್ಞಾನವು ಜೀವನಿಗೆ ಅಧೀನ, ಅವನು ಅದಕ್ಕೆ ಆಶ್ರಯವಾದ್ದರಿಂದ, ಈ ಪರಸ್ಪರ ಅಧೀನತೆಯು, ಒಂದರ ಅಸ್ತಿತ್ವವು ಇನ್ನೊಂದನ್ನು ಅವಲಂಬಿಸಿರುವುದರಿಂದ ಉಂಟಾಗಿದೆ. ಆದ್ದರಿಂದ 'ಜೀವನಿಂದ ಅಜ್ಞಾನದ ಪ್ರಯುಕ್ತಿ ಮತ್ತು ಅಜ್ಞಾನದಿಂದ ಜೀವನ ಪ್ರಯುಕ್ತಿಯು ಅನಿವಾರ್ಯ. ಪರಸ್ಪರ ಅವಲಂಬನೆಯು ಎರಡರ ಪ್ರಯುಕ್ತಿಯನ್ನು ತಡೆಯುವುದರಿಂದ ಅನ್ಯೋನ್ಯಾಶ್ರಯವು ದೋಷವೇ.

**ತಸ್ಮಾದವಿದ್ಯಾಪ್ರತ್ಯಕ್ಷಂ ಮನ್ಯೇ ಪಾಂಡಿತ್ಯಶೂನ್ಯ ತೇ ।**
**ಪೂರ್ವೋತ್ತರಪ್ರಮೇಯಸ್ಯಾವಿದ್ಯಾಯಾ ಏವ ಸಾಧಕಮ್ ॥ ೮೮ ॥**

**ಅರ್ಥ-**ತಸ್ಮಾತ್ = ಆದ್ದರಿಂದ, ಪಾಂಡಿತ್ಯಶೂನ್ಯ = ಪಾಂಡಿತ್ಯಶೂನ್ಯನೇ, ಅವಿದ್ಯಾ-ಪ್ರತ್ಯಕ್ಷಂ= 'ಅಹಮಜ್ಞಃ' ಎಂಬ ಅಜ್ಞಾನದ ಪ್ರತ್ಯಕ್ಷವು, ತೇ = ನಿನ್ನ ಪೂರ್ವೋತ್ತರ-ಪ್ರಮೇಯಸ್ಯ= ಪೂರ್ವೋತ್ತರಪ್ರಮೇಯದ, ಅವಿದ್ಯಾಯಾಃ ಏವ= ಜ್ಞಾನಾಭಾವಕ್ಕೇ, ಸಾಧಕಂ= ಸಾಧಕ ಎಂದು, ಮನ್ಯೇ= ಭಾವಿಸುವೆನು.

**ಅನುವಾದ-** ಆದ್ದರಿಂದ ಪಾಂಡಿತ್ಯಶೂನ್ಯನೇ, 'ಅಹಮಜ್ಞಃ' - ಈ ಪದಗಳಿಂದ ಪ್ರಕಟವಾಗುವ ಅಜ್ಞಾನ ಪ್ರತ್ಯಕ್ಷವು. ನಿನಗೆ ಹಿಂದಿನ - ಮುಂದಿನ ಪ್ರಮೇಯಗಳ ಅಜ್ಞಾನವಿದೆ ಎಂದೇ ಸಾಧಿಸುತ್ತದೆ.

**ಭಾವವಿಲಾಸಿನೀ**— ಅಜ್ಞಾನಪ್ರತ್ಯಕ್ಷದೂಷಣಮುಪಸಂಹರತಿ— **ತಸ್ಮಾದಿತಿ** ॥ ಪಾಂಡಿತ್ಯಶೂನ್ಯೇತಿ ಪರಂ ಪ್ರತಿ ಸಂಬುದ್ಧಿಃ । ಪೂರ್ವೋತ್ತರಪ್ರಮೇಯಸ್ಯ ಜೀವಪ್ರತ್ಯಕ್ಷಸ್ಯ ಬ್ರಹ್ಮಣ್ಯಾನಯನಾತ್ । ಅವಿದ್ಯಾಯಾಃ ಪೂರ್ವೋತ್ತರಪ್ರಮೇಯಜ್ಞಾನಾಭಾವರೂಪಾಜ್ಞಾನಸ್ಯೇತ್ಯರ್ಥಃ । ಅಹಮಜ್ಞ ಇತಿ ಪ್ರತ್ಯಕ್ಷಸ್ಯ ತ್ವನ್ನಿಷ್ಠಪೂರ್ವೋತ್ತರಪ್ರಮೇಯಾನಭಿಜ್ಞತ್ವೈವ ವಿಷಯ ಇತಿ ಭಾವಃ ॥ ೮೮ ॥

**ವಿವರಣೆ**— 'ಅಹಮಜ್ಞಃ' - ಈ ಮಾತಿಗೆ ನಾನು ಅಜ್ಞ ಎಂದು ಅರ್ಥ. ಇಲ್ಲಿಯ 'ನಾನು' ಜೀವಾತ್ಮ. ಆದ್ದರಿಂದ ಜೀವಾತ್ಮನ ಅಜ್ಞಾನವು ಈ ಮಾತಿಗೆ ವಿಷಯ. ಈ ಮಾತನ್ನು ಮಾಯಾವಾದವು ಬ್ರಹ್ಮನಿಗೆ ಅನ್ವಯಿಸುತ್ತದೆ. ಆದ್ದರಿಂದ ಈ ವಾದನಿಷ್ಠರಿಗೆ ಹಿಂದಿನ - ಮುಂದಿನ ವಿಷಯಗಳ ಅಜ್ಞಾನವಿದೆ. ಆದ್ದರಿಂದ ಇವರು ಹೇಳುವ 'ಅಹಮಜ್ಞಃ' ಎಂಬ ಮಾತು ಇವರ ಅಜ್ಞಾನವನ್ನು ಕುರಿತೇ ಹೇಳಿಕೆ, ಬ್ರಹ್ಮನ ಅಜ್ಞಾನವನ್ನು ಕುರಿತು ಅಲ್ಲ.

ಏಕಾಜ್ಞಾನೇಽಪಿ ಸರ್ವೋಽಜ್ಞಃ ಸ್ಯಾದೈಕ್ಯಬಲತೋ ನ ಚೇತ್ ।
ಏಕದುಃಖೇಽಪಿ ದುಃಖ್ಯನ್ಯಃ ಸ್ಯಾದೈಕ್ಯಸ್ಯ ಸಮಾಶ್ರಯಾತ್ ॥
ಏಕಾನುಭೂತಿಃ ಸರ್ವಸ್ಯೇತ್ಯಾಗತೋ ಜಾತಿಸಂಕರಃ ॥ ೮೯ ॥

**ಅರ್ಥ**-ನ ಚೇತ್=ವ್ಯಾವಹಾರಿಕ ಭೇದದಿಂದ ವ್ಯವಸ್ಥೆ (ಅಜ್ಞಾನ-ದುಃಖ-ಸುಖಾದಿ ವ್ಯವಸ್ಥೆ)ಯನ್ನು ಉಪಪಾದಿಸದಿದ್ದರೆ, ಐಕ್ಯಬಲತಃ=ಐಕ್ಯಬಲದಿಂದ, ಏಕಾಜ್ಞಾನೇ=ಒಬ್ಬನಿಗೆ ಅಜ್ಞಾನವು ಇದ್ದಾಗ, ಸರ್ವೋಽಪಿ=ಎಲ್ಲರೂ, ಅಜ್ಞಃ ಸ್ಯಾತ್=ಅಜ್ಞಾನಿಗಳಾಗಬೇಕಾದೀತು. ಐಕ್ಯಸ್ಯ ಸಮಾಶ್ರಯಾತ್=ಐಕ್ಯದ ಬಲದಿಂದ, ಏಕದುಃಖೇ=ಒಬ್ಬನಿಗೆ ದುಃಖವಾದಾಗ, ಅನ್ಯೋಽಪಿ=ಬೇರೆಯವನೂ, ದುಃಖೀ ಸ್ಯಾತ್=ದುಃಖಿಯಾಗಬೇಕಾದೀತು. ಏಕಾನು-ಭೂತಿಃ=ಒಬ್ಬನ ಅನುಭವವು, ಸರ್ವಸ್ಯ= ಎಲ್ಲರ ಅನುಭವವು ಆಗಬೇಕಾದೀತು. ಇತಿ= ಹೀಗೆ, ಜಾತಿಸಂಕರಃ=ಜಾತಿಸಾಂಕರ್ಯವು, ಆಗತಃ= ಉಂಟಾಯಿತು (ದೀತು).

**ಅನುವಾದ**- ಲೋಕದಲ್ಲಿ ಒಬ್ಬನಿಗೆ (ದೇವದತ್ತನಿಗೆ) ಸುಖವಾದಾಗ ಮತ್ತೊಬ್ಬನಿಗೆ (ಯಜ್ಞದತ್ತನಿಗೆ) ಸುಖವಾಗುವುದಿಲ್ಲ. ಒಬ್ಬನಿಗೆ ಅಜ್ಞಾನವು ಉಂಟಾದಾಗ ಮತ್ತೊಬ್ಬನಿಗೆ ಆಗುವುದಿಲ್ಲ. ಈ ಸುಖದುಃಖಾದಿ ವ್ಯವಸ್ಥೆಯನ್ನು ಅದ್ವೈತಿಗಳು ವ್ಯಾವಹಾರಿಕ ಭೇದವನ್ನು ಅಂಗೀಕರಿಸಿಯೇ ಕೂಡಿಸಬೇಕು. ಇಲ್ಲದಿದ್ದರೆ, ಐಕ್ಯಬಲದಿಂದ ಒಬ್ಬನು ಅಜ್ಞಾನಿಯಾದಾಗ ಎಲ್ಲರೂ ಅಜ್ಞಾನಿಗಳಾಗಬೇಕಾದೀತು. ಒಬ್ಬನಿಗೆ ದುಃಖವಾದಾಗ ಎಲ್ಲರೂ ದುಃಖಿಗಳಾಗಬೇಕಾದೀತು. ಒಬ್ಬನಿಗೆ ಆಗುವ ಸುಖಾನುಭವವು ಎಲ್ಲರಿಗೂ ಆಗಬೇಕಾದೀತು. ಆಗ ಜಾತಿಸಾಂಕರ್ಯವು ಪ್ರಾಪ್ತವಾಗುವದು.

**ಭಾವವಿಲಾಸಿನೀ**— ಐಕ್ಯಾಜ್ಜೀವಪ್ರತ್ಯಕ್ಷಮೇವ ಬ್ರಹ್ಮಪ್ರತ್ಯಕ್ಷಮಿತ್ಯಂಗೀಕಾರೇ ಸರ್ವವ್ಯವ-ಹಾರೋಚ್ಛೇದಃ ಸ್ಯಾದಿತ್ಯಾಹ— **ಏಕಾಜ್ಞಾನ ಇತಿ** ॥ ನಚೇದ್ ವ್ಯಾವಹಾರಿಕಭೇದೇನ ವ್ಯವಸ್ಥಾ ನ

ಚೇತ್ । ಏಕಸ್ಯ ಪುರುಷಸ್ಯಾಜ್ಞಾನೇಽಪ್ಯೈಕ್ಯಬಲತಃ ಸರ್ವೋಽಪ್ಯಜ್ಞಃ ಸ್ಯಾತ್ । ಏಕದುಃಖೇ ಏಕಸ್ಯ ದುಃಖೇ ಐಕ್ಯಬಲಾದನ್ಯೋಽಪಿ ದುಃಖೀ ಸ್ಯಾತ್ । ಏಕಾನುಭೂತಿಃ ಏಕಸ್ಯ ಚಂಡಾಲಾದೇಃ ಅನುಭೂತಿಃ ಸ್ವಸ್ತ್ರ್ಯಾದ್ಯನುಭವಃ ಸರ್ವಸ್ಯ ಬ್ರಾಹ್ಮಣಾದೇಶ್ಚೈಕ್ಯಬಲತಃ ಸ್ಯಾತ್ ॥ ೮೯ ॥

**ವಿವರಣೆ–** ಹಿಂದೆ 'ಅಹಮಜ್ಞಃ' ಎಂಬ ಜೀವನ ಪ್ರತ್ಯಕ್ಷದಿಂದ ಜೀವನಿಗೆ ಅಜ್ಞಾನವು ಸಿದ್ಧಿಸುವುದು; ಬ್ರಹ್ಮನಲ್ಲಿ ಅಜ್ಞಾನವು ಸಿದ್ಧವಾಗದು ಎಂದು ನಿರೂಪಿಸಿದ್ದಾರೆ. ಈ ಶ್ಲೋಕದಲ್ಲಿ ಜೀವಬ್ರಹ್ಮರಿಗೆ ಪರಸ್ಪರ ಅಭೇದವಿರುವದರಿಂದ ಜೀವನ ಪ್ರತ್ಯಕ್ಷವೇ ಬ್ರಹ್ಮನ ಪ್ರತ್ಯಕ್ಷ ಆದರಿಂದ ಬ್ರಹ್ಮನಲ್ಲಿ ಅಜ್ಞಾನವು ಸಿದ್ಧಿಸುವದು ಎಂಬ ವಿಚಾರವನ್ನು ವಿಮರ್ಶಿಸುತ್ತಿದ್ದಾರೆ. ಜೀವಬ್ರಹ್ಮರಿಗೆ ಪರಸ್ಪರ ಅಭೇದವನ್ನು ಒಪ್ಪಿರುವ ಅದ್ವೈತಿಗಳೂ ಲೋಕವ್ಯವಹಾರವನ್ನು ವ್ಯಾವಹಾರಿಕಭೇದವನ್ನಂಗೀಕರಿಸಿಯೇ ಸಮರ್ಥಿಸಬೇಕು. ಇಲ್ಲದಿದ್ದರೆ, ಐಕ್ಯಬಲದಿಂದ ಒಬ್ಬನ ಅಜ್ಞಾನ ಎಲ್ಲರ ಅಜ್ಞಾನವಾಗಬೇಕಾದೀತು. ಒಬ್ಬನ ದುಃಖವು ಎಲ್ಲರ ದುಃಖವಾಗಬೇಕಾದೀತು. ಒಬ್ಬನ ಭೋಗವು ಎಲ್ಲರ ಭೋಗವಾಗಬೇಕಾದೀತು. ಹೀಗೆ ಇಲ್ಲ, ಆದ್ದರಿಂದ ವ್ಯಾವಹಾರಿಕಭೇದವನ್ನಂಗೀಕರಿಸಿಯೇ ಇಂತಹ ದೋಷಗಳನ್ನು ಪರಿಹರಿಸಬೇಕು. ಆಗ 'ಅಹಮಜ್ಞಃ' ಎಂಬ ಜೀವನ ಪ್ರತ್ಯಕ್ಷದಿಂದ, ಬ್ರಹ್ಮನಲ್ಲಿಯೂ ಅಜ್ಞಾನವು ಸಿದ್ಧಿಸುವದು ಎಂಬ ನಿಮ್ಮ ಉದ್ದೇಶವು ಈಡೇರಲಾರದು.

ವ್ಯಾವಹಾರಿಕಭೇದೇನ ಸಮಾಧಾನೇ ತ್ವಿದಂ ಗತಮ್ ।
ಏಕಂ ಸಂಧಿತ್ಸತಃ ಪುಚ್ಛಮಪರಂ ಚ್ಯವತೇ ತವ ॥ ೯೦ ॥

**ಅರ್ಥ–**ವ್ಯಾವಹಾರಿಕಭೇದೇನ=ವ್ಯಾವಹಾರಿಕಭೇದದಿಂದ (ಈ ಪ್ರಸಂಗವನ್ನು), ಸಮಾಧಾನೇ ತು=ಪರಿಹರಿಸಲು ಹೊರಟರೆ ಆಗ, ಇದಂ= ಇದು= 'ಅಹಮಜ್ಞಃ' ಎಂಬ ಜೀವಾಜ್ಞಾನಪ್ರತ್ಯಕ್ಷದಿಂದ ಬ್ರಹ್ಮನಲ್ಲಿ ಅಜ್ಞಾನವು ಸಿದ್ಧಿಸುವುದೆಂಬ ಮತವು, ಗತಮ್=ಬಿದ್ದು ಹೋಗುವದು. ಏಕಂ ಪುಚ್ಛಂ=ಒಂದು ತುದಿಯನ್ನು, ಸಂಧಿತ್ಸತಃ= ಕೂಡಿಸುವ, ತೇ= ನಿನಗೆ, ಅಪರಂ=ಮತ್ತೊಂದು ತುದಿಯು, ಚ್ಯವತೇ=ಜಾರುತ್ತದೆ (ತಪ್ಪಿ ಹೋಗುತ್ತದೆ).

**ಅನುವಾದ-** ಅದ್ವೈತ ಮತದಲ್ಲಿ ಜೀವಬ್ರಹ್ಮರಿಗೆ ಐಕ್ಯವನ್ನು ಒಪ್ಪಲಾಗಿದೆ. ಆದ್ದರಿಂದ, ಒಬ್ಬನಿಗೆ ದುಃಖವಾದಾಗ ಎಲ್ಲರಿಗೂ ದುಃಖವಾಗಲಿ. ಒಬ್ಬನಿಗೆ ಅಜ್ಞಾನವು ಬಂದಾಗ, ಎಲ್ಲರಿಗೂ ಅಜ್ಞಾನವು ಉಂಟಾಗಲಿ ಎಂಬ ಪ್ರಶ್ನೆ ಸಹಜವಾಗಿ ಉಂಟಾಗುತ್ತದೆ, ಅದನ್ನು ಪರಿಹರಿಸಲು ಅದ್ವೈತಿಗಳು ಜೀವಬ್ರಹ್ಮರಿಗೆ ಪಾರಮಾರ್ಥಿಕವಾಗಿ ಅಭೇದವಿದ್ದರೂ ಲೋಕವ್ಯವಹಾರದ ನಿರ್ವಹಣೆಗಾಗಿ ಜೀವಬ್ರಹ್ಮರಲ್ಲಿ ವ್ಯಾವಹಾರಿಕಭೇದವನ್ನು ಒಪ್ಪಿರುತ್ತಾರೆ. ಜೀವಬ್ರಹ್ಮರಲ್ಲಿ ಪರಸ್ಪರ ವ್ಯಾವಹಾರಿಕ ಭೇದವಿರುವದರಿಂದ ಒಬ್ಬನಿಗೆ ದುಃಖವಾದಾಗ, ಇನ್ನೊಬ್ಬನಿಗೂ ದುಃಖವುಂಟಾಗಲಿ ಎಂಬ ಆಪಾದನೆಗೆ ಅವಕಾಶವಿಲ್ಲ ಎಂದು ಅದ್ವೈತ ದರ್ಶನವು

ಹೇಳುತ್ತದೆ ಎಂದರೆ ಆಗ ನಿನ್ನ ಮತವು ಬಿದ್ದು ಹೋಗುವದು. ವ್ಯಾವಹಾರಿಕವು ಭೇದವಿದ್ದರೆ 'ಅಹಮಜ್ಞಃ' - ಇದು ಜೀವಾಜ್ಞಾನಪ್ರತ್ಯಕ್ಷವಾಗುವುದು. ಇದರಿಂದ ಜೀವನಲ್ಲಿ ಅಜ್ಞಾನವು ಸಿದ್ಧಿಸುವುದೇ ಹೊರತು ಬ್ರಹ್ಮನಲ್ಲಿ ಅಜ್ಞಾನವು ಸಿದ್ಧಿಸಲಾರದು. ಸಾಕಷ್ಟು ಉದ್ದವಿಲ್ಲದ ಕೌಪೀನವನ್ನು ಧರಿಸಲು ಹೊರಟವನು, ಒಂದು ತುದಿಯನ್ನು ಸಿಕ್ಕಿಸುವಾಗ ಇನ್ನೊಂದು ತುದಿಯು ಜಾರುವಂತೆ ಅದ್ವೈತ ನಿಷ್ಠರ ಪರಿಸ್ಥಿತಿಯು ಆಗಿದೆ.

**ಭಾವವಿಲಾಸಿನೀ–** ಇದಂ ಜೀವಾಜ್ಞಾನಪ್ರತ್ಯಕ್ಷೇಣ ಬ್ರಹ್ಮಣ್ಯಜ್ಞಾನಕಲ್ಪನಮ್ । ತಥಾಚೇದ ಮಾಭಾಣಕಮಾಪತಿತಂ ತ್ವಯೀತ್ಯಾಹ **ಏಕಮಿತಿ** ॥ ತವ ದೀರ್ಘಕೌಪೀನರಹಿತಸ್ಯ ಏಕಂ ಪುಚ್ಛಂ ಕೌಪೀನಪುಚ್ಛಂ । ಅಪರಂ ಪುಚ್ಛಾಂತರಮ್ ॥ ೯೦ ॥

**ಅತೋಽನುಭವಮಾಶ್ರಿತ್ಯ ಜೀವಾಜ್ಞಾನೇ ಮತಂ ಗತಮ್ ।**
**ಐಕ್ಯೇನ ತಮತಿಕ್ರಮ್ಯ ಬ್ರಹ್ಮಾಜ್ಞಾನೇ ಮತಂ ಗತಮ್ ॥ ೯೧ ॥**

**ಅರ್ಥ-** ಅತಃ=ಆದ್ದರಿಂದ, ಅನುಭವಂ='ಅಹಮಜ್ಞಃ' ಎಂಬ ಜೀವನ ಪ್ರತ್ಯಕ್ಷಾನು-ಭವವನ್ನು, ಆಶ್ರಿತ್ಯ=ಆಶ್ರಯಿಸಿ, ಜೀವಾಜ್ಞಾನೇ=ಜೀವನಲ್ಲಿ ಅಜ್ಞಾನವನ್ನು ಅಂಗೀಕರಿಸಿದರೆ, ಮತಂ= ನಿನ್ನ ಮತವು, ಗತಂ=ಬಿದ್ದು ಹೋಗುವದು. ಐಕ್ಯೇನ= ಜೀವಬ್ರಹ್ಮರಿಗೆ ಐಕ್ಯವಿದೆ ಎಂದು ಪರಿಗಣಿಸಿ, ತಂ= ಆ ಅನುಭವವನ್ನು, ಅತಿಕ್ರಮ್ಯ=ಅತಿಕ್ರಮಿಸಿ, ಬ್ರಹ್ಮಾಜ್ಞಾನೇ= ಅಜ್ಞಾನವು ಬ್ರಹ್ಮಾಶ್ರಿತವಾಗಿದೆ ಎಂದು ಅಂಗೀಕರಿಸಿದರೆ, ಮತಂ=ವ್ಯಾವಹಾರಿಕಭೇದ ಎಂಬ ನಿನ್ನ ಮತವು, ಗತಮ್=ಬಿದ್ದು ಹೋಗುವುದು.

**ಅನುವಾದ-** ಅನುಭವಕ್ಕನುಗುಣವಾಗಿ 'ಅಹಮಜ್ಞಃ' ಎಂಬ ಪ್ರತ್ಯಕ್ಷವು ಜೀವನಲ್ಲಿ ಅಜ್ಞಾನವನ್ನು ವಿಷಯೀಕರಿಸುತ್ತದೆ ಎಂದು ಪರಿಗಣಿಸಿದರೆ ಅಜ್ಞಾನವು ಬ್ರಹ್ಮನಲ್ಲಿದೆ ಎಂಬ ನಿನ್ನ ಮತವು ಬಿದ್ದು ಹೋಗುತ್ತದೆ. ಜೀವಬ್ರಹ್ಮರ ಐಕ್ಯವನ್ನು ಅಂಗೀಕರಿಸಿ, ಅನುಭವವನ್ನು ಮೀರಿ ಬ್ರಹ್ಮನಿಗೆ ಅಜ್ಞಾನವನ್ನು ಅಂಗೀಕರಿಸಿದರೆ ಜೀವ-ಬ್ರಹ್ಮರಿಗೆ ವ್ಯಾವಹಾರಿಕ ಭೇದವಿದೆ ಎಂಬ ನಿನ್ನ ಮತವು ಬಿದ್ದು ಹೋಗುತ್ತದೆ.

**ಭಾವವಿಲಾಸಿನೀ–** ಏತದೇವ ದಾರ್ಷ್ಟಾಂತಿಕೇ ದರ್ಶಯತಿ– **ಅತ ಇತಿ** ॥ ಅನುಭವಮಜ್ಞೋಽ-ಹಮಿತ್ಯನುಭವಂ ಮತಂ ಬ್ರಹ್ಮಾಜ್ಞಾನಮತಮ್ । ಐಕ್ಯೇನ ತಂ ಜೀವಾಜ್ಞಾನಪಕ್ಷಮ್ । ಮತಂ ವ್ಯಾವಹಾರಿಕಭೇದಮಂಗೀಕೃತ್ಯ ತದ್ವ್ಯವಸ್ಥಾಸಂಪಾದನಂ ಗತಮ್ ॥ ೯೧ ॥

**ಜೀವೋಽಜ್ಞೋ ನ ಜಗತ್ಕರ್ತಾ ಯಃ ಕರ್ತಾ ತಸ್ಯ ನಾಜ್ಞತಾ ।**
**ಅತೋಽಜ್ಞಾನಭ್ರಮಾಯೋಗಾದ್ ಭ್ರಾಂತಿಃ ಶಾಸ್ತ್ರಕೃತಸ್ತವ ।**
**ಕಥಂಚಿದ್ ಭ್ರಮಯೋಗೇಽಪಿ ಭ್ರಾಂತಿಃ ಶಾಸ್ತ್ರಕೃತಸ್ತವ ॥ ೯೨ ॥**

**ಅರ್ಥ**- ಯಃ=ಯಾವ, ಜೀವಃ=ಜೀವನು, ಅಜ್ಞಃ=ಅಜ್ಞನೋ (ಅಜ್ಞಾನಕ್ಕೆ ಆಶ್ರಯನೋ), ಸಃ=ಅವನು, ನ ಜಗತ್ಕರ್ತಾ=ಜಗತ್ಕರ್ತನಲ್ಲ. ಯಃ ಕರ್ತಾ=ಯಾರು ಜಗತ್ಕರ್ತನೋ, ತಸ್ಯ= ಅವನಿಗೆ, ಅಜ್ಞತಾ=ಅಜ್ಞಾನವು, ನ=ಇಲ್ಲ. ಅತಃ=ಆದ್ದರಿಂದ (ಹಿಂದೆ ಹೇಳಿದ ನ್ಯಾಯದಿಂದ), ಅಜ್ಞಾನಭ್ರಮಾಯೋಗಾತ್=ಅಜ್ಞಾನಾರೋಪವು ಕೂಡದೇ ಇರುವದರಿಂದ, ಶಾಸ್ತ್ರಕೃತಃ=ಬ್ರಹ್ಮಾಜ್ಞಾನದಿಂದ ಈ ಜಗತ್ತು ಕಲ್ಪಿತವಾಗಿದೆ ಎಂಬ ಶಾಸ್ತ್ರವನ್ನು ರಚಿಸಿರುವ, ತವ (ಏವ)=ನಿನಗೇ, ಭ್ರಾಂತಿಃ=ಭ್ರಾಂತಿಯು, ಕಥಂಚಿದ್= ಹೇಗಾದರೂ, ಭ್ರಮಯೋಗೇಽಪಿ= 'ಅಹಮಜ್ಞಃ' ಎಂಬ ಪ್ರತ್ಯಕ್ಷದ ಆಧಾರದಿಂದ (ಜೀವನಲ್ಲಿ) ಅಜ್ಞಾನವನ್ನು ಹೇಳಲಿಕ್ಕೆ ಅವಕಾಶವಾದರೂ, ಶಾಸ್ತ್ರಕೃತಃ='ಬ್ರಹ್ಮನಲ್ಲಿ ಅಜ್ಞಾನವು ಆರೋಪಿತ' ಎಂದು ಶಾಸ್ತ್ರವನ್ನು ರಚಿಸಿರುವ, ತವ (ಏವ)=ನಿನಗೇ (ಅದ್ವೈತಿಗೇ), ಭ್ರಾಂತಿಃ= ಭ್ರಾಂತಿಯು.

**ಅನುವಾದ**- 'ಮತಂ ಗತಂ' ಎಂದು ಹಿಂದಿನ ಶ್ಲೋಕದಲ್ಲಿ ಹೇಳಿದ ಮತಹಾನಿಯನ್ನೇ 'ಜೀವೋಽಜ್ಞೋ ನ ಜಗತ್ಕರ್ತಾ' ಎಂಬ ಶ್ಲೋಕದಲ್ಲಿ ಲೇಶತಃ ತೋರಿಸುತ್ತಿದ್ದಾರೆ. ಅಜ್ಞಾನಕ್ಕೆ ಆಶ್ರಯ ಜೀವ. ಅವನು ಜಗತ್‌ಕರ್ತನಾಗಲು ಸಾಧ್ಯವಿಲ್ಲ. ಯಾರು ಜಗತ್‌ಕರ್ತನೋ, ಅವನು ಅಜ್ಞಾನಿಯಾಗಲಾರ. ಬ್ರಹ್ಮನಿಗೆ ಅಜ್ಞಾನವು ಉಪಪನ್ನವಾಗದಿದ್ದಾಗ 'ಜಗತ್ತು ಅಜ್ಞಾನಕಲ್ಪಿತವಾಗಿದೆ' ಎಂಬ ವಾದವು ಹೇಗೆ ತಾನೇ ಸಂಗತವಾಗುವುದು? ಇಂತಹ ಅಸಂಗತ ವಿಚಾರವನ್ನು ಪ್ರತಿಪಾದಿಸುವ ಶಾಸ್ತ್ರವನ್ನು ರಚಿಸಿರುವ ನಿನಗೇ ಭ್ರಾಂತಿ ಎಂದು ಹೇಳಬೇಕಾಗುತ್ತದೆ. ಕಥಂಚಿತ್ 'ಅಹಮಜ್ಞಃ' ಎಂಬ ಪ್ರತ್ಯಕ್ಷಾನುಭವದ ಆಧಾರದಿಂದ ಅಜ್ಞಾನವನ್ನು ಕಲ್ಪಿಸಿದರೂ ಅದು ಜೀವನಲ್ಲಿ ಅಜ್ಞಾನದ ಕಲ್ಪನೆಯಾಗುತ್ತದೆ. ಬ್ರಹ್ಮನಲ್ಲಿ ಅಜ್ಞಾನವನ್ನು ಕಲ್ಪಿಸಲು ಸಾಧ್ಯವಾಗುವದಿಲ್ಲ. ಆದ್ದರಿಂದ, 'ಬ್ರಹ್ಮನಲ್ಲಿ ಅಜ್ಞಾನವು ಆರೋಪಿತವಾಗಿದೆ' ಎಂಬ ಶಾಸ್ತ್ರವನ್ನು ರಚಿಸಿರುವ ನಿನಗೇ ಭ್ರಾಂತಿ (ಅಜ್ಞಾನ) ಎಂದು ಹೇಳಬೇಕಾಗುತ್ತದೆ.

**ಭಾವವಿಲಾಸಿನೀ**— ಮತಹಾನಿಪ್ರಕಾರಮೇವ ಲೇಶತೋ ದರ್ಶಯತಿ– ಜೀವಇತಿ ॥ ಅಜ್ಞಃ ಅಜ್ಞಾನವಾನ್ । ಸ ಜಗತ್ಕರ್ತಾ ನ । ಯಃ ಪರಮೇಶ್ವರಃ । ತಸ್ಯ ಪರಮೇಶ್ವರಸ್ಯಾಜ್ಞತಾ ಅಜ್ಞಾನವತ್ತಾ । ಅತೋ ಜಗತೋಽಜ್ಞಾನಕಲ್ಪಿತತ್ವಕಥಾ ವ್ಯರ್ಥೇತಿ ಭಾವಃ । ಅತಃ ಉಕ್ತ-ನ್ಯಾಯಾತ್ । ಅಜ್ಞಾನಭ್ರಮಾಯೋಗಾತ್ ಅಜ್ಞಾನಾರೋಪಾಯೋಗಾತ್ । ಶಾಸ್ತ್ರಕೃತಃ ಅಜ್ಞಾನಾರೋಪಿತತ್ವಶಾಸ್ತ್ರಕೃತಃ ಭ್ರಾಂತಿಃ ಅಸಂಭವದಾರೋಪೇ ಆರೋಪಿತತ್ವಭ್ರಾಂತಿಃ । ಕಥಂಚಿದವಿಚಾರಿತರಮಣೀಯತಯಾ ಭ್ರಮಯೋಗೇಽಜ್ಞಾನಾರೋಪಯೋಗೇ ಶಾಸ್ತ್ರಕೃತಃ ಬ್ರಹ್ಮಣ್ಯಜ್ಞಾನಮಿತಿ ಶಾಸ್ತ್ರಕೃತಸ್ತವೈವ ಭ್ರಾಂತಿಃ । ಅಜ್ಞೋಽಹಮಿತಿ ತ್ವದಭಿಲಷಿತಾರೋಪಾದಪಿ ಜೀವ ಏವಾಜ್ಞಾನಸಿದ್ಧೇರಿತಿ ಭಾವಃ ॥ ೯೨ ॥

**ಜೀವೇऽನುಭೂತಮಜ್ಞಾನಂ ಸರ್ವಜ್ಞೇ ಕೇನ ನೀಯತೇ ।**
**ಹಾ ವತ್ಸಗಲರಜ್ಜ್ವೈವ ದಿಗ್ಗಜಂ ಬದ್ಧುಮಿಚ್ಛಸಿ ॥ ೯೩ ॥**

**ಅರ್ಥ**-ಜೀವೇ=ಜೀವಾತ್ಮನಲ್ಲಿ, ಅನುಭೂತಂ= 'ನಾನು ಅಜ್ಞ' ಎಂಬ ಪ್ರತ್ಯಕ್ಷದಿಂದ ಸಿದ್ಧವಾದ, ಅಜ್ಞಾನಂ=ಅಜ್ಞಾನವು, ಸರ್ವಜ್ಞೇ=ಸರ್ವಜ್ಞನಾದ ಪರಮಾತ್ಮನಲ್ಲಿ, ಕೇನ=ಯಾವ ಪ್ರಮಾಣದಿಂದ, ನೀಯತೇ= ಅನ್ವಯಿಸಲ್ಪಡುತ್ತದೆ, ಹಾ!=ಕಷ್ಟ, ವತ್ಸಗಲರಜ್ಜ್ವೈವ= ಕರುವನ್ನು ಕಟ್ಟುವ ಚಿಕ್ಕ ಹಗ್ಗದಿಂದಲೇ, ದಿಗ್ಗಜಂ=ದಿಗ್ಗಜವನ್ನು, ಬದ್ಧುಂ=ಬಂಧಿಸಲು, ತ್ವಂ=ನೀನು, ಇಚ್ಛಸಿ=ಇಚ್ಛಿಸುವಿ.

**ಅನುವಾದ**- 'ಅಹಮಜ್ಞಃ' ಎಂದು ಜೀವಾತ್ಮರ ಅನುಸಂಧಾನ. ಇದರಿಂದ ಜೀವಾತ್ಮರಿಗೆ ತಮ್ಮಲ್ಲಿರುವ ಅಜ್ಞಾನದ ಅನುಭವವಿದೆ ಎಂದು ತಿಳಿಯುತ್ತದೆ. ಈ ಅನುಸಂಧಾನವನ್ನು ಅಥವಾ ಹೇಳಿಕೆಯನ್ನು ಪರಮಾತ್ಮನಿಗೆ ಅನ್ವಯಿಸಲು ಏನು ಪ್ರಮಾಣ? ಏನೂ ಇಲ್ಲ. ಕರುವಿನ ಕುತ್ತಿಗೆಯ ಹಗ್ಗದಿಂದ ದಿಗ್ಗಜವನ್ನು ಕಟ್ಟಲು ಬಯಸುತ್ತಿರುವಿ! ಅಯ್ಯೋ!

**ಭಾವವಿಲಾಸಿನೀ**– ಉಕ್ತಪ್ರಮೇಯಂ ಸರ್ವಸ್ಯಾಪಿ ಬುದ್ಧ್ಯಾರೋಹಾಯ ಸಾಹಿತ್ಯಮುದ್ರಯಾ ದರ್ಶಯನ್ ಬಾಧಕಾಂತರಂ ಚಾಹ– **ಜೀವೇತಿ** ॥ ಅನುಭೂತಮ್ 'ಅಜ್ಞೋऽಹಮ್' ಇತಿ ಪ್ರತ್ಯಕ್ಷಸಿದ್ಧಮ್ । ಸರ್ವಜ್ಞೇ ಬ್ರಹ್ಮಣಿ । ಸರ್ವಜ್ಞ ಇತ್ಯನೇನಾಜ್ಞಾನಾಸಂಭವಂ ಸೂಚಯತಿ । ಕೇನ ಪ್ರಮಾಣೇನ । ಪ್ರತ್ಯಕ್ಷಸ್ಯ ಜೀವ ಏವಾಜ್ಞಾನಸಾಧಕತ್ವಾತ್ ಸರ್ವಜ್ಞೇऽಜ್ಞಾನಸ್ಯ ವ್ಯಾಹತತ್ವಾಚ್ಚ । ಅತ್ಯಸಂಭಾವಿತಮಿದಂ ಪ್ರಮೇಯಮಿತ್ಯತ್ರ ದೃಷ್ಟಾಂತಮಾಹ– **ಹಾ ವತ್ಸೇತಿ** ॥ ವತ್ಸಗಲರಜ್ಜ್ವಾ ವತ್ಸಗಲಬಂಧನಸೂಕ್ಷ್ಮರಜ್ಜ್ವಾ । ಹಾ ಕಷ್ಟಮ್ । ಏವಮೇವಾಲ್ಪಕೇ ಜೀವೇ ಬಂಧಕಮಜ್ಞಾನಂ ನಿತ್ಯಮುಕ್ತೇ ಸರ್ವೇಶ್ವರೇ ತ್ವಮಪಿ ನಯಸಿ । ಅತೋऽಸಂಭಾವನಾಪರಾಹತಮಿತಿ ಭಾವಃ ॥೯೩॥

**ವಿವರಣೆ**– ಈ ಶ್ಲೋಕದಲ್ಲಿ 'ಹಾ ಬಸ್ತಗಲರಜ್ಜ್ವೈವ' ಎಂದು ಕೆಲವು ಪ್ರತಿಗಳಲ್ಲಿ ಪಾಠವಿದೆ. ಆ ಪಾಠದ ಪ್ರಕಾರ ಕುರಿಮರಿಯನ್ನು ಕಟ್ಟುವ ಸಣ್ಣ ಹಗ್ಗದಿಂದ ಎಂದು ಅರ್ಥವನ್ನು ಹೇಳಬೇಕು.

ಹೇಗೆ ಕರುವನ್ನು ಅಥವಾ ಕುರಿಮರಿಯನ್ನು ಕಟ್ಟುವ ಹಗ್ಗದಿಂದ ದೊಡ್ಡದಾದ ದಿಗ್ಗಜವನ್ನು ಕಟ್ಟಲು ಸಾಧ್ಯವಿಲ್ಲವೋ, ಅದರಂತೆ 'ಅಜ್ಞೋऽಹಂ' 'ನಾನು ಅಜ್ಞ' ಎಂಬ ಜೀವನ ಪ್ರತ್ಯಕ್ಷದಿಂದ ಪರಮಾತ್ಮನಲ್ಲಿ ಅಜ್ಞಾನವನ್ನು ಸಾಧಿಸಲು ಸಾಧ್ಯವಿಲ್ಲ. ಪರಮಾತ್ಮನಲ್ಲಿ ಅಜ್ಞಾನವನ್ನು ಸಾಧಿಸಬೇಕಾದರೆ, ಅಂತಹ ಪ್ರಬಲ ಪ್ರಮಾಣವನ್ನೇನಾದರೂ ಉದಾಹರಿಸಬೇಕು. ಅದು ನಿನ್ನಿಂದ ಸಾಧ್ಯವಾಗುತ್ತಿಲ್ಲ.

**ಜೀವಸರ್ವಸ್ವಮಜ್ಞಾನಂ ತ್ವಂ ರಾಜ್ಞೇ ದಾತುಮಿಚ್ಛಸಿ ।**
**ನ ತದ್ದರಿದ್ರವಿತ್ತಂ ಸ ಮಹಾರಾಜೋ ದಿದೃಕ್ಷತಿ ॥ ೯೪ ॥**

**ಅರ್ಥ**-ಜೀವಸರ್ವಸ್ವಂ=ಜೀವನ ವಿತ್ತವಾದ, ಅಜ್ಞಾನಂ=ಅಜ್ಞಾನವನ್ನು, ರಾಜ್ಞೇ= ರಾಜನಿಗೆ, ದಾತುಂ=ಕೊಡಲು, ತ್ವಂ=ನೀನು, ಇಚ್ಛಸಿ=ಇಚ್ಛಿಸುತ್ತಿರುವಿ. ಆದರೆ, ದರಿದ್ರವಿತ್ತಂ= ದರಿದ್ರನ ಹಣವಾದ, ತತ್=ಆ ಅಜ್ಞಾನವನ್ನು, ಸಃ ಮಹಾರಾಜಃ=ಆ ಮಹಾರಾಜನು (ಭಗವಂತನು), ನ ದಿದೃಕ್ಷತಿ= ನೋಡಲೂ ಸಹ ಬಯಸುವದಿಲ್ಲ.

**ಅನುವಾದ**- ಅಜ್ಞಾನವು ಜೀವಾತ್ಮನ ಆಸ್ತಿ. ಅದನ್ನು ರಾಜನಿಗೆ ಕೊಡಲು ಬಯಸಿರುವಿ.
ಆ ಬಡವರ ಆಸ್ತಿಯನ್ನು ಆ ಮಹಾರಾಜನು ನೋಡಲೂ ಬಯಸುವುದಿಲ್ಲ.

**ಭಾವವಿಲಾಸಿನೀ**– ಪ್ರಕಾರಾಂತರೇಣಾಪ್ಯಸಂಭಾವನಾಂ ದರ್ಶಯತಿ– ಜೀವೇತಿ ॥ ದರಿದ್ರವಿತ್ತಂ ದರಿದ್ರಸ್ಯ ಜೀವಸ್ಯ ವಿತ್ತಂ ತದಜ್ಞಾನಂ । ದಿದೃಕ್ಷತಿ ದ್ರಷ್ಟುಮಿಚ್ಛತಿ । ದಿದೃಕ್ಷತೀತ್ಯನೇನ 'ವಿಲಜ್ಜಮಾನಯಾ ಯಸ್ಯ ಸ್ಥಾತುಮೀಕ್ಷಾಪಥೇಽಮುಯಾ' ಇತಿ ಸ್ಮೃತಿಂ ಸೂಚಯತಿ । ಇದಮೇಕಂ ಬಾಧಕಮ್ ॥ ೯೪ ॥

ಅನಾದಿಮಾಯಯಾ ಸುಪ್ತಃ ಯದಾ ಜೀವಃ ಪ್ರಬುಧ್ಯತೇ ।
ಇತಿ ಶ್ರುತಿಸತೀ ಸಾಧ್ವೀ ತ್ವಾಮಧ್ವನಿ ರುಣದ್ಧಿ ಚ ॥ ೯೫ ॥

**ಅರ್ಥ**- ಚ= ಮತ್ತು, 'ಅನಾದಿಮಾಯಯಾ ಸುಪ್ತಃ ಯದಾ ಜೀವಃ ಪ್ರಬುಧ್ಯತೇ' ಇತಿ= ಅನಾದಿಮಾಯಾ.... ಪ್ರಬುಧ್ಯತೇ ಎಂಬ, ಸಾಧ್ವೀ= ಸಾಧು ಸ್ವಭಾವದ, ಶ್ರುತಿಸತೀ= ಶ್ರುತಿಯೆಂಬ ನಿರ್ದುಷ್ಟ ಮಹಿಳೆಯು, ತ್ವಾಂ=ನಿನ್ನನ್ನು (ಜೀವನ ಅಜ್ಞಾನವನ್ನು ಬ್ರಹ್ಮನಿಗೆ ಸಮರ್ಪಿಸಲು ಹೊರಟಿರುವ ನಿನ್ನನ್ನು), ಅಧ್ವನಿ=ದಾರಿಯಲ್ಲಿ (ಬ್ರಹ್ಮನಿಗೆ ಅಜ್ಞಾನವನ್ನು ಸಮರ್ಪಿಸುವದಕ್ಕಿಂತ ಮೊದಲೇ) ರುಣದ್ಧಿ=ತಡೆಯುವಳು.

**ಅನುವಾದ**-
(ಅನಾದಿಮಾಯಯಾ ಸುಪ್ತಃ ಯದಾ ಜೀವಃ ಪ್ರಬುಧ್ಯತೇ ।
ಅಜಮನಿದ್ರಮಸ್ವಪ್ನಮದ್ವೈತಂ ಬುಧ್ಯತೆ ತದಾ ॥ -ಮಾಂಡೂಕೋಪನಿಷತ್ ೧-೨-೮)
ಈ ಶ್ರುತಿಯು ಸತೀ= ದೋಷರಹಿತ, ಸಾಧ್ವೀ= ಸಾಧುಸ್ವಭಾವದವಳು= ಎರಡನೆಯ ಅರ್ಥವಿಲ್ಲದವಳು= ನಿರವಕಾಶ. ಈ ಶ್ರುತಿಯು ಬ್ರಹ್ಮನಲ್ಲಿ ಅಜ್ಞಾನವನ್ನು ಸ್ಥಾಪಿಸಲು ಹೊರಟಿರುವ ನಿನ್ನನ್ನು ದಾರಿಯಲ್ಲೇ ತಡೆಯುತ್ತದೆ.

**ಭಾವವಿಲಾಸಿನೀ**– ಸಾಹಿತ್ಯಮುದ್ರಯೈವ ಬಾಧಕಾಂತರಂ ಚಾಹ– ಅನಾದಿಮಾಯಯೇತಿ ॥ ಇತಿ ಶ್ರುತಿಸತೀ ಜೀವೇಽಜ್ಞಾನಸಾಧಕತ್ವೇನ ಜೀವಪಕ್ಷಪಾತಿನೀ ಶ್ರುತಿನಾರೀ । ತ್ವಾಂ ಜೀವಾ-ಜ್ಞಾನಂ ಬ್ರಹ್ಮಣೋ ದಾತುಂ ನಯಂತಂ । ಅಧ್ವನಿ ಮಾರ್ಗೇ । ಬ್ರಹ್ಮಣಿ ಸ್ಥಾಪನಾತ್ ಪೂರ್ವ-ಮೇವೇತ್ಯರ್ಥಃ । ಯಥಾ ದರಿದ್ರಗೃಹಾದ್ ವಿತ್ತಾಪಹಾರಂ ಕೃತ್ವಾ ಗಚ್ಛಂತಂ ತದ್‌ಗೃಹಸ್ಥನಾರೀ ರುಣದ್ಧಿ ತಥೇತಿ ಭಾವಃ । ಜೀವಾಜ್ಞಾನಸಾಧಕಶ್ರುತೇರತಿಸ್ಪಷ್ಟತ್ವಾದ್ 'ಅಜಮನಿದ್ರಮ್' ಇತಿ ವೇದ್ಯೇ ಬ್ರಹ್ಮಣಿ ನಿದ್ರಾಪದೋದಿತಾಜ್ಞಾನಸ್ಯ ಚ ಸ್ಪಷ್ಟಂ ನಿಷೇಧಾಚ್ಚಾಧ್ವನೀತ್ಯುಕ್ತಮ್ ।

ಜೀವಾಶ್ರಿತಮಜ್ಞಾನಮಿತ್ಯೇವಾನುಕ್ತ್ವಾ ಸ್ಪಷ್ಟಂ ಬ್ರಹ್ಮಣಿ ನೇತ್ಯಪಿ ನಿಷೇಧಾಚ್ಚ್ರುತೇಶ್ಚಮತ್ಕಾರಃ ರಾಜಮಾರ್ಗ ಇವ ಸರ್ವೈರ್ದೃಶ್ಯತ ಇತಿ ಭಾವಃ ॥ ೯೫ ॥

**ವಿವರಣೆ–** 'ಅನಾದಿಅಜ್ಞಾನದಿಂದ ಮಲಗಿರುವ (ಪರಮಾತ್ಮನ ಮತ್ತು ತನ್ನ ಸ್ವರೂಪಜ್ಞಾನವಿಲ್ಲದ) ಜೀವನು ಯಾವಾಗ ಏಳುತ್ತಾನೋ (ತತ್ವಜ್ಞಾನವನ್ನು ಪಡೆಯುವನೋ) ಆಗ ಜನ್ಮ-ಮರಣ ಮೊದಲಾದ ದೋಷವಿಲ್ಲದ, ನಿದ್ರೆ-ಸ್ವಪ್ನಗಳಿಲ್ಲದ, ಅದ್ವಿತೀಯನನ್ನು ಕಾಣುತ್ತಾನೆ' - ಇದು ಮಾಂಡೂಕಶ್ರುತಿಯ ಅರ್ಥ.

ಈ ಶ್ರುತಿಯ ಪೂರ್ವಾರ್ಧವು ಜೀವನಿಗೆ ಅಜ್ಞಾನವು ಇದೆ ಎಂದು ಉತ್ತರಾರ್ಧವು ಬ್ರಹ್ಮನಿಗೆ ಇಲ್ಲವೆಂದೂ ಹೇಳುತ್ತಿವೆ. 'ಅಹಮಜ್ಞಃ' ಎಂಬ ಅನುಭವದ ಉಕ್ತಿಯನ್ನು ಬ್ರಹ್ಮನಿಗೆ ಅನ್ವಯಿಸಿ, ಅವನಿಗೆ ಅಜ್ಞಾನವಿದೆ ಎಂದು ಸಾಧಿಸಲು ಪ್ರಯತ್ನಿಸುವ ಮಾಯಾವಾದಿಗೆ ಈ ಶ್ರುತಿಯ ವಿರೋಧವಿದೆ.

ಈ ಶ್ರುತಿಗೆ ಬ್ರಹ್ಮನಿಗೆ ಅಜ್ಞಾನವಿದೆ ಎಂದು ಸಾಧಿಸಲು ಅನುಕೂಲವಾಗುವ ಯಾವ ಅರ್ಥವನ್ನೂ ಹೇಳಲು ಅವಕಾಶವಿಲ್ಲ. 'ಅಹಮಜ್ಞಃ' ಎಂಬ ಅನುಭವದ ಉಕ್ತಿಯನ್ನು ಜೀವನಿಗೇ ಅನ್ವಯಿಸಬೇಕು ಎಂದು ಈ ಶ್ರುತಿಯ ಪೂರ್ವಾರ್ಧದಿಂದ ತಿಳಿಯುತ್ತದೆ.

**ಪೀಠಿಕೆ–** 'ಅಹಮಜ್ಞಃ' ಎಂಬ ಪ್ರತ್ಯಕ್ಷವು 'ನಾನು' - ಎನಲ್ಲಿ ಇರುವ ಭಾವರೂಪ ಅಜ್ಞಾನವನ್ನು ವಿಷಯೀಕರಿಸುತ್ತದೆ ಎಂದು ಅದ್ವೈತದರ್ಶನವು ಹೇಳುತ್ತದೆ. 'ಅಹಮಜ್ಞಃ' ಎಂಬ ಜ್ಞಾನದ ವಿಷಯವು 'ಮಯಿ ಜ್ಞಾನಂ ನಾಸ್ತಿ' ಎಂಬ ಜ್ಞಾನದ ವಿಷಯಕ್ಕಿಂತ ಬೇರೆ ಅಲ್ಲ. ಆದ್ದರಿಂದ 'ಜ್ಞಾನಾಭಾವ'ವೂ 'ಅಹಮಜ್ಞಃ' ಎಂಬ ಪ್ರತ್ಯಕ್ಷಕ್ಕೆ ವಿಷಯವಾಗಬಹುದು. ಯಾವುದು ಸರಿ?

ಪ್ರಶ್ನೆ : ಅಭಾವಜ್ಞಾನಕ್ಕೆ ಪ್ರತಿಯೋಗಿಜ್ಞಾನವು ಕಾರಣ. ಜ್ಞಾನಾಭಾವಕ್ಕೆ ಪ್ರತಿಯೋಗಿಯು ಜ್ಞಾನ. ಜ್ಞಾನದ ಜ್ಞಾನವು ಇದ್ದರೆ ಜ್ಞಾನದ ವಿಷಯದ ಜ್ಞಾನವೂ ಇರಬೇಕಾಗುತ್ತದೆ. ಯಾವುದು ವಿಷಯ? ಅಹಮ್. ಇದು ಚಿತ್. ಚಿತ್ ಪೂರ್ಣಜ್ಞಾನ-ಆನಂದ ಸ್ವರೂಪ. ಇಂತಹ 'ಅಹಮ್' ನ ಜ್ಞಾನವಿದ್ದರೆ 'ಅಹಮಜ್ಞಃ' ಎಂಬ ಜ್ಞಾನವು ಹುಟ್ಟಲಾರದು.

ಪ್ರತಿಯೋಗಿಯ ಜ್ಞಾನವು ಇಲ್ಲದಿದ್ದರೂ ಜ್ಞಾನಾಭಾವದ ಜ್ಞಾನವು ಹುಟ್ಟಲಾರದು. ಆದ್ದರಿಂದ 'ಅಹಮಜ್ಞಃ' ಎಂಬ ಪ್ರತ್ಯಕ್ಷಕ್ಕೆ ಜ್ಞಾನಾಭಾವವು ವಿಷಯವಲ್ಲ?

ಉತ್ತರ: ಭಾವರೂಪ ಅಜ್ಞಾನವು ವಿಷಯವಾದರೂ ದೋಷಗಳಿವೆ; 'ಅಹಮಜ್ಞಃ' ಎಂಬ ಅನುಭವವು ಇರುವವನಿಗೆ 'ಅಹಮ್' ನ ಜ್ಞಾನವು ಇರಬೇಕು. ಈ 'ಅಹಮ್' ಎಂದರೆ ಚಿತ್. ಚಿತ್ ಪೂರ್ಣ ಆನಂದ-ಜ್ಞಾನಸ್ವರೂಪ ಎಂದು ಅದ್ವೈತ ದರ್ಶನವು ಹೇಳುತ್ತದೆ. ಆದ್ದರಿಂದ 'ಅಹಮಜ್ಞಃ' ಎಂದು ಅನುಭವವು ಇರುವಾಗ 'ಅಹಮ್' ನ ಪೂರ್ಣ ಆನಂದ-ಜ್ಞಾನಗಳ ಅನುಭವವೂ ಇರಬೇಕಾಗುತ್ತದೆ. ಈ ಅನುಭವವೇ ಮುಕ್ತಿ. ಆದ್ದರಿಂದ ಸಂಸಾರವೇ ಮುಕ್ತಿ ಆಗುವ ಪ್ರಸಂಗ.

ಪೂರ್ಣಸ್ವರೂಪಾನಂದದ ಅನುಭವವು ಇಲ್ಲದಿದ್ದರೆ 'ಅಹಮಜ್ಞಃ' ಎಂಬ ಪದಗಳಿಂದ ಪ್ರಕಟವಾಗುವ 'ಅಜ್ಞಾನದ ಜ್ಞಾನ'ವೂ ಆಗಲಾರದು. ಏಕೆಂದರೆ, ಅಜ್ಞಾನದ ಜ್ಞಾನಕ್ಕೆ

ಅಜ್ಞಾನವು ವಿಷಯ. ಈ ಅಜ್ಞಾನಕ್ಕೆ ಅವಚ್ಛೇದಕ ಪೂರ್ಣಾನಂದ. ಅವಚ್ಛೇದಕ ಜ್ಞಾನವಿಲ್ಲದೆ ಅವಚ್ಛಿನ್ನದ ಜ್ಞಾನವು ಹುಟ್ಟುವುದಿಲ್ಲ. ಇದು ಸರ್ವಸಮ್ಮತ-

ಸಂಪೂರ್ಣಸ್ವಸುಖಜ್ಞಾನೇ ಸಂಸಾರೋ ಮುಕ್ತಿರೇವ ತೇ ।
ತದಜ್ಞಾನೇ ತು ನಾಜ್ಞಾನಬೋಧೋಽವಚ್ಛೇದಕೋ ಹ್ಯಸೌ ॥ ೯೬ ॥

**ಅರ್ಥ**-ತೇ= ನಿನಗೆ, ಸಂಪೂರ್ಣಸ್ವಸುಖಜ್ಞಾನೇ= ಪೂರ್ಣಸ್ವರೂಪಸುಖದ ಜ್ಞಾನವಿದ್ದರೆ, ಸಂಸಾರಃ= ಸಂಸಾರವು, ಮುಕ್ತಿಃ ಏವ= ಮುಕ್ತಿಯೇ. ತದಜ್ಞಾನೇ ತು= ಆ ಸುಖದ ಜ್ಞಾನವಿಲ್ಲದಿದ್ದರೆ ಅಜ್ಞಾನಬೋಧಃ ನ= ಅಜ್ಞಾನದ ಜ್ಞಾನವು ಆಗುವುದಿಲ್ಲ. ಹಿ= ಏಕೆಂದರೆ, ಅಸೌ= ಈ ಪೂರ್ಣಸುಖದ ಜ್ಞಾನವು, ಅವಚ್ಛೇದಕಃ= ಅವಚ್ಛೇದಕವು.

**ಅನುವಾದ**- 'ಅಹಮಜ್ಞಃ'- ಇದು ತನ್ನಲ್ಲಿ ಇರುವ ಅಜ್ಞಾನದ ಪ್ರತ್ಯಕ್ಷಾನುಭವ. ಈ ಪ್ರತ್ಯಕ್ಷಕ್ಕೆ 'ಅಹಮ್' ಮತ್ತು ಅಜ್ಞಾನವು ವಿಷಯ. ಯಾವುದರ ಅಜ್ಞಾನ? 'ಅಹಮ್' ಎಂದರೆ ಚಿತ್, ಈ ಚಿತ್‌ನ (೧) ಅಜ್ಞಾನ? ಅಥವಾ (೨) ಚಿತ್‌ನ ಸ್ವರೂಪವೇ ಆದ ಪೂರ್ಣಾನಂದದ ಅಜ್ಞಾನ?

ಎರಡನೆಯ ಕಲ್ಪವು ನಿಜವಾದರೆ, 'ನನಗೆ ಪೂರ್ಣಾನಂದದ ಅಜ್ಞಾನವು ಇದೆ' ತಿಳಿಯುವವನಿಗೆ ತನ್ನ ಪೂರ್ಣಾನಂದದ ಜ್ಞಾನವು ಇದೆ? ಅಥವಾ ಇಲ್ಲ? ಇದೆಯಾದರೆ ಸಂಸಾರವೇ ಮುಕ್ತಿಯಾಗುವ ಪ್ರಸಂಗ. ಇಲ್ಲವಾದರೆ ಪೂರ್ಣಾನಂದದ ಅಜ್ಞಾನದ ಜ್ಞಾನವೂ ಆಗಲಾರದು. ಏಕೆಂದರೆ ಈ ಜ್ಞಾನಕ್ಕೆ ಅಜ್ಞಾನವು ವಿಷಯ. ಈ ಅಜ್ಞಾನಕ್ಕೆ ಪೂರ್ಣಾನಂದವು ಅವಚ್ಛೇದಕ. ಅವಚ್ಛೇದಕ ಜ್ಞಾನವಿಲ್ಲದೆ ಅವಚ್ಛಿನ್ನದ ಜ್ಞಾನವು ಹುಟ್ಟುವುದಿಲ್ಲ.

**ಭಾವವಿಲಾಸಿನೀ**— ಜ್ಞಾನಾಭಾವಪಕ್ಷೇ ಪ್ರತಿಯೋಗಿಜ್ಞಾನೇಽಜ್ಞಾನೇ ಚ ನ ಜ್ಞಾನಾಭಾವೋ ವಕ್ತುಂ ಶಕ್ಯತ ಇತಿ ದೂಷಣಂ ತವಾಪಿ ಸಮಮಿತ್ಯಾಹ ಸಂಪೂರ್ಣೇತಿ ॥ ಸಂಪೂರ್ಣಂ ಸ್ವಸುಖಂ ಆತ್ಮಸ್ವರೂಪಸುಖಂ ತಸ್ಯೇದಾನೀಂ ಜ್ಞಾನೇಽನುಭವೇ ತೇ ಸಂಸಾರೋ ಮುಕ್ತಿರೇವ ಸ್ಯಾತ್ । ಅನವಚ್ಛಿನ್ನಾನಂದಾನುಭವೋ ಹಿ ಮುಕ್ತಿಃ । ತದಜ್ಞಾನೇ ತಸ್ಯ ಸುಖಸ್ಯಾಜ್ಞಾನೇ ಅಜ್ಞಾನಬೋಧೋ ನ । ಅಸೌ ಸ್ವರೂಪಾನಂದಃ ಅವಚ್ಛೇದಕೋ ಹಿ । ಸ್ವರೂಪಾನಂದಂ ನ ಜಾನಾಮೀತ್ಯಜ್ಞಾನಂ ಅವಚ್ಛೇದಕಜ್ಞಾನಂ ವಿನಾ ಕಥಂ ಸ್ಯಾತ್ ಸ್ವರೂಪಜ್ಞಾನಸ್ಯಾ-ಜ್ಞಾನಾವಿರೋಧಿತ್ವಂ ವದತಾಪಿ ಸಾಕ್ಷಿಣಾ ಸ್ವರೂಪಭೂತಾನಂದಾನುಭವೋ ನೇದಾನೀಂ ವಕ್ತುಂ ಶಕ್ಯಃ ॥ ೯೬ ॥

**ವಿವರಣೆ**— "ಜಗದಾರೋಪಕ್ಕ ಬ್ರಹ್ಮನು ಅಧಿಷ್ಠಾನ. ಅಧಿಷ್ಠಾನದ ಯಥಾರ್ಥಜ್ಞಾನದ ಅಭಾವವು ಆರೋಪಕ್ಕೆ ಕಾರಣ. ಆದ್ದರಿಂದ ಬ್ರಹ್ಮನಿಗೆ ತನ್ನ ಬಗ್ಗೆ ಅಜ್ಞಾನವಿದೆ"- ಇದು

ಅದ್ವೈತದರ್ಶನ. ಬ್ರಹ್ಮನು ಜ್ಞಾನರೂಪ ಎಂದೂ ಈ ದರ್ಶನವು ಹೇಳುತ್ತದೆ. ಜ್ಞಾನರೂಪದಲ್ಲಿ ಹೇಗೆ ಅಜ್ಞಾನ? ಸ್ವರೂಪಜ್ಞಾನವು ಅಜ್ಞಾನವಿರೋಧಿಯಲ್ಲ ಎಂದು ಅದ್ವೈತದರ್ಶನವು ಹೇಳುತ್ತದೆ. ಅಜ್ಞಾನದ ಜೊತೆಗೇ ಸ್ವರೂಪಜ್ಞಾನವೂ ಇರುವುದಾದರೆ ಸ್ವರೂಪಾನಂದವು ಇರಬಹುದು. ಇಲ್ಲ ಎಂದು ಹೇಳಲು ಅವಕಾಶವಿಲ್ಲ. ಇದ್ದರೆ ಸಂಸಾರವೇ ಮುಕ್ತಿಯಾಗುವ ಪ್ರಸಂಗವು ಅನಿವಾರ್ಯ.

**ಪೀಠಿಕೆ-** 'ಅಹಮ್' ಪದದ ಅರ್ಥದಲ್ಲಿ ಎರಡು ಅಂಶಗಳಿವೆ. (೧) ಚಿತ್ (೨) ಪೂರ್ಣಸ್ವರೂಪಜ್ಞಾನ-ಆನಂದ. ಇವುಗಳಲ್ಲಿ ಎರಡನೆಯ ಅಂಶದ ಬಗ್ಗೆ ವಿಮರ್ಶೆಯು ಆಗಿದೆ. ಮೊದಲನೆಯದರ ಬಗ್ಗೆ ವಿಮರ್ಶೆಯು ಈ ಶ್ಲೋಕದಲ್ಲಿದೆ. 'ಅಹಮಜ್ಞಃ' - ಈ ಪ್ರತ್ಯಕ್ಷಕ್ಕೆ 'ಚಿತ್' ನ ಅಜ್ಞಾನವು ವಿಷಯ ಎಂದರೆ...

**ಅಹಮಂಶೇ ನ ತೇಽಜ್ಞಾನಂ ಕಿಂತ್ವಾನಂದಾದಿಕೇ ಪರಮ್ ।**
**ಯದ್ ಭಾತಂ ನ ತದಜ್ಞಾತಂ ಇತಿ ವಾಕ್ಯಮನುಸ್ಮರ ॥ ೯೭ ॥**

**ಅರ್ಥ-**ತೇ= ನಿನಗೆ, ಅಹಮಂಶೇ= ಅಹಂ ನ= 'ಚಿತ್' ನ ವಿಷಯದಲ್ಲಿ, ನ ಅಜ್ಞಾನಂ= ಅಜ್ಞಾನವಿಲ್ಲ. ('ಅಹಂ' ಎಂದು ಅನುಸಂಧಾನವಾಗುತ್ತಿರುವುದರಿಂದ) 'ಯದ್ ಭಾತಂ ನ ತದ್ ಅಜ್ಞಾತಮ್' (ಇದು ಅದ್ವೈತದಾರ್ಶನಿಕರ ಹೇಳಿಕೆ). ಇತಿ ವಾಕ್ಯಂ= ಈ ವಾಕ್ಯವನ್ನು, ಅನುಸ್ಮರ= ನೆನಪಿಸಿಕೊಳ್ಳು. ಕಿಂತು= ಆದರೆ, ಆನಂದಾದಿಕೆ ಪರಂ= ಕೇವಲ ಆನಂದ ಮೊದಲಾದವುಗಳ ಬಗ್ಗೆ(ಅಜ್ಞಾನವಿದೆ).

**ಅನುವಾದ-** 'ಅಹಮಜ್ಞಃ' - ಈ ಪ್ರತ್ಯಕ್ಷವು ವಿಷಯೀಕರಿಸುವ 'ಅಹಂ' ನ= ಚಿತ್ ನ ವಿಷಯದಲ್ಲಿ ಅಜ್ಞಾನವಿದೆ; ಈ ಅಜ್ಞಾನವು ಈ ಪ್ರತ್ಯಕ್ಷಕ್ಕೆ ವಿಷಯ. ಹೀಗೆ ಅದ್ವೈತ ಚಿಂತಕರು ಹೇಳಿದರೆ, 'ನಿಮಗೆ' 'ಅಹಂ' ನ ವಿಷಯದಲ್ಲಿ ಅಜ್ಞಾನವಿಲ್ಲ. ಏಕೆಂದರೆ 'ಅಹಮ್' ಎಂದು ಅನುಸಂಧಾನವಿರುವುದರಿಂದ. ಈ ಅನುಸಂಧಾನಕ್ಕೆ 'ಚಿತ್' ವಿಷಯ. ಅಂದರೆ 'ಚಿತ್' ಭಾಸವಾಗುತ್ತಿದೆ. ಯಾವುದು ಪ್ರಕಾಶಿಸಿದೆಯೋ ಅದರ ಅಜ್ಞಾನವಿಲ್ಲ' ಎಂದು ಅದ್ವೈತದರ್ಶನದ ಗ್ರಂಥ (ತತ್ವಪ್ರದೀಪ) ದಲ್ಲಿ ಹೇಳಲಾಗಿದೆ. ಇದನ್ನು ನೆನಪಿಸಿಕೊಳ್ಳಿ ಎಂದು ಉತ್ತರ. ಆದರೆ ಪೂರ್ಣಾನಂದ, ಪೂರ್ಣಜ್ಞಾನಗಳ ಬಗ್ಗೆ ಮಾತ್ರವೇ ಅಜ್ಞಾನವಿದೆ.

**ಭಾವವಿಲಾಸಿನೀ–** ಏತದೇವೋಪಪಾದಯತಿ– **ಅಹಮಂಶ ಇತಿ** ॥ ತೇ ಅಜ್ಞಾನಂ ನೇತಿ ಸಂಬಂಧಃ । ಪರಂತ್ವಾನಂದಾದಿಕ ಏವಾಜ್ಞಾನಮ್ । ತತ್ರ ಹೇತುಃ– ಯದ್ಭಾತಮಿತಿ ॥ ಯದ್ ಭಾತಂ ನ ತದಜ್ಞಾತಮಿತಿ ತತ್ವದೀಪನೋಕ್ತ್ಯಾ ಜ್ಞಾತೇ ಅಂಶೇಽಜ್ಞಾನಸ್ಯ ತ್ವಯಾಪ್ಯನಂಗೀ-ಕಾರಾದಿತಿ ಭಾವಃ ॥ ೯೭ ॥

**ವಿವರಣೆ–** 'ಅಹಮಜ್ಞಃ' - ಈ ಪ್ರತ್ಯಕ್ಷಕ್ಕೆ 'ಚಿತ್'ನ ಅಜ್ಞಾನವು ವಿಷಯವಲ್ಲ. 'ಚಿತ್' ನ ಭಾಸವಿರುವುದರಿಂದ. ಪೂರ್ಣಾನಂದ, ಪೂರ್ಣಜ್ಞಾನಗಳ ಅಜ್ಞಾನವು ಇದೆ. ಆದರೆ

ಈ ಅಜ್ಞಾನವು 'ಅಹಮಜ್ಞಃ' - ಈ ಪ್ರತ್ಯಕ್ಷಕ್ಕೆ ವಿಷಯವಾಗಲಾರದು (ನೋಡಿ ಶ್ಲೋಕ - 96). ಆದ್ದರಿಂದ ಈ ಪ್ರತ್ಯಕ್ಷಕ್ಕೆ ಭಾವರೂಪ ಅಜ್ಞಾನವು ವಿಷಯವಾಗಲಾರದು.

ಮುಂದಿನ ಶ್ಲೋಕವು. ೯೬ನೇ ಶ್ಲೋಕದ ಉತ್ತರಾರ್ಧದಲ್ಲಿ ಹೇಳಿದ ವಿಮರ್ಶೆಯ ಮುಂದುವರಿಕೆ -

ಅತೋಽವಚ್ಛೇದಕಜ್ಞಾನಾಭಾವಾನ್ನಾಜ್ಞಾನಧೀಸ್ತವ ।
ಅವಚ್ಛೇದಕತಜ್ಞಾನೇ ಭವ ಏವಾಪುನರ್ಭವಃ ॥ ೯೮ ॥

**ಅರ್ಥ**-ಅತಃ=ಆದ್ದರಿಂದ, ಅವಚ್ಛೇದಕಜ್ಞಾನಾಭಾವಾತ್=ಅವಚ್ಛೇದಕವಾದ ಸ್ವರೂಪ-ಸುಖದ ಜ್ಞಾನವಿಲ್ಲದೇ ಇರುವುದರಿಂದ, ತವ=ನಿನಗೆ, ಅಜ್ಞಾನಧೀಃ= 'ಅಹಮಜ್ಞಃ' ಎಂಬ ಅಜ್ಞಾನದ ಜ್ಞಾನವು, ನ=ಇಲ್ಲ (ಬರುವದಿಲ್ಲ). ಅವಚ್ಛೇದಕತಜ್ಞಾನೇ= ಅವಚ್ಛೇದಕವಾದ ಸ್ವರೂಪಸುಖದ ಜ್ಞಾನವು ಇರುವುದಾದರೆ, ಭವ ಏವ=ಸಂಸಾರವೇ, ಅಪುನರ್ಭವಃ= ಮೋಕ್ಷ ಎಂದು ಆಗುವ ಪ್ರಸಂಗ.

**ಅನುವಾದ**- ಆದ್ದರಿಂದ= 'ಅಹಮಜ್ಞಃ'- ಈ ಜ್ಞಾನಕ್ಕೆ ಚಿತ್ ವಿಷಯವಾಗಿ-ರುವುದರಿಂದ, ೯೬ನೇ ಶ್ಲೋಕದಲ್ಲಿ ಹೇಳಿದಂತೆ ಅವಚ್ಛೇದಕ= ಪೂರ್ಣಾನಂದದ ಜ್ಞಾನವು ಇಲ್ಲ ಎಂದೇ ಪರಿಗಣಿಸಬೇಕು. (ಈ ಅಜ್ಞಾನವನ್ನೇ 'ಅಹಮಜ್ಞಃ'- ಈ ಜ್ಞಾನವು ವಿಷಯೀಕರಿಸುತ್ತದೆ ಎಂದು ಪರಿಗಣಿಸಬೇಕು). ಅವಚ್ಛೇದಕದ ಜ್ಞಾನವಿಲ್ಲದೆ ಅಜ್ಞಾನದ ಜ್ಞಾನವೂ ಬರಲಾರದು. ಆದ್ದರಿಂದ 'ಅಹಮಜ್ಞಃ' ಎಂಬ ಪ್ರತ್ಯಕ್ಷವು ಅನುಪಪನ್ನ. ಅವಚ್ಛೇದಕದ ಜ್ಞಾನವು ಇದೆ ಎಂದರೆ ಸಂಸಾರವೇ ಮುಕ್ತಿ ಆಗುವ ಪ್ರಸಂಗ. ಏಕೆಂದರೆ ಪೂರ್ಣಾನಂದದ ಅನುಭವವೇ ಮುಕ್ತಿ.

**ಭಾವವಿಲಾಸಿನೀ**– ಉಪಸಂಹರತಿ- **ಅತ ಇತಿ** ॥ ಅವಚ್ಛೇದಕಸ್ಯ ತಸ್ಯಾನಂದಸ್ಯ ಜ್ಞಾನೇ ಸಾಕ್ಷಿಣಾಽನುಭವೇ । ಅಪುನರ್ಭವೋ ಮೋಕ್ಷಃ । ಭಾವರೂಪಾಜ್ಞಾನೇ ಜ್ಞಾನಾಭಾವೇ ಚಾವಚ್ಛೇದಕಜ್ಞಾನಾಭಾವ ಇತಿ ದೂಷಣಮುಭಯೋರಪಿ ಸಮಮ್ ॥ ೯೮ ॥

**ವಿವರಣೆ**–'ಅಹಮಜ್ಞಃ' - ಈ ಪ್ರತ್ಯಕ್ಷಕ್ಕೆ ಅಜ್ಞಾನವು ವಿಷಯ. ಈ ಅಜ್ಞಾನವು 'ಭಾವರೂಪ' ಆದರೂ, 'ಜ್ಞಾನಾಭಾವ' ಆದರೂ ಅವಚ್ಛೇದಕ ಜ್ಞಾನದ ಅಭಾವವು ಇದೆ. ಅವಚ್ಛೇದಕದ ಜ್ಞಾನವಿಲ್ಲದೆ ಅವಚ್ಛಿನ್ನದ ಜ್ಞಾನವು ಹುಟ್ಟುವುದಿಲ್ಲ. ಆದ್ದರಿಂದ 'ಅಹಮ್'ನ ಅಜ್ಞಾನದ ಜ್ಞಾನವು ಹುಟ್ಟಲಾರದು.

'ಅಹಮಜ್ಞಃ' ಎಂಬ ಪ್ರತ್ಯಕ್ಷ ಸಿದ್ಧವಾದ ಅಜ್ಞಾನದ ಜ್ಞಾನವು ಹೇಗೆ ಉಪಪನ್ನವಾಗಬೇಕು? ಎಂದು ೯೯, ೧೦೦, ೧೦೧ನೇ ಶ್ಲೋಕಗಳಲ್ಲಿ ಹೇಳುತ್ತಾರೆ-

ಯಥಾಽಽಲೋಕಪುರಸ್ಕಾರಶ್ಚಕ್ಷುಷಃ ಸರ್ವವಸ್ತುನಃ ।
ಗ್ರಹಣೇಽಪ್ಯಸ್ತಿ ತಮಸೋ ಗ್ರಹಣೇ ತು ಸ ನೇಷ್ಯತೇ ।
ಸಿದ್ಧವ್ಯಾಪ್ತೇಸ್ತು ಸಂಕೋಚೋ ವಿರುದ್ಧತ್ವಾದ್ಧಿ ಕೇವಲಮ್ ॥ ೯೯ ॥

**ಅರ್ಥ-** ಸರ್ವವಸ್ತುನಃ ಅಪಿ= ಎಲ್ಲ ವಸ್ತುಗಳ, ಗ್ರಹಣೇ= ಗ್ರಹಿಕೆಗೆ, ಚಕ್ಷುಷಃ= ಚಕ್ಷುರಿಂದ್ರಿಯಕ್ಕೆ, ಆಲೋಕ ಪುರಸ್ಕಾರಃ= ದೀಪದ (ಬೆಳಕಿನ) ಸಹಕಾರವು, ಅಸ್ತಿ= ಇದೆ, ತು= ಆದರೆ, ತಮಸಃ ಗ್ರಹಣೇ= ಕತ್ತಲಿನ ಗ್ರಹಿಕೆಗೆ, ಸಃ= ಆ ಬೆಳಕಿನ ಸಹಕಾರವು, ನ ಇಷ್ಯತೇ= ಅಪೇಕ್ಷಿಸಲ್ಪಡುವುದಿಲ್ಲ (ಬೇಕಿಲ್ಲ).

ಕೇವಲಂ ವಿರುದ್ಧತ್ವಾತ್ ಹಿ= (ಬೆಳಕು- ಕತ್ತಲುಗಳಿಗೆ) ವಿರೋಧವಿರುವುದರಿಂದಲೇ, ಸಿದ್ಧವ್ಯಾಪ್ತೇಃ (ಚಕ್ಷುರಿಂದ್ರಿಯದಿಂದ ಗ್ರಹಣ ಮತ್ತು ಬೆಳಕಿಗೆ ವ್ಯಾಪ್ತಿಯು ಸಿದ್ಧವಾಗಿದೆ) ಈ ಸಿದ್ಧವಾದ ವ್ಯಾಪ್ತಿಗೆ, ಸಂಕೋಚಃ ತು= ಅಪವಾದವಾದವು ಅಂಗೀಕರಿಸಲ್ಪಟ್ಟಿದೆ.

**ಅನುವಾದ-** **ಕಣ್ಣಿನಿಂದ ವಸ್ತುಗಳ ಗ್ರಹಣವಾಗಲು ಬೆಳಕಿನ ಸಹಕಾರವು ಬೇಕು. ಕತ್ತಲನ್ನು ಗ್ರಹಿಸಲು ಬೇಡ. ಕಣ್ಣಿನಿಂದ ಆಗುವ ವಸ್ತುಗಳ ಗ್ರಹಣ ಮತ್ತು ಬೆಳಕಿಗೆ ವ್ಯಾಪ್ತಿಯು ಇದೆ. ಕತ್ತಲಿನ ಗ್ರಹಣದಲ್ಲಿ ಈ ವ್ಯಾಪ್ತಿಗೆ ಭಂಗವಿದೆ. ಆದ್ದರಿಂದ ಕತ್ತಲಿನ ಗ್ರಹಣವು ಈ ವ್ಯಾಪ್ತಿಗೆ ಅಪವಾದ ಎಂದು ಚಿಂತಕರು ನಿರ್ಣಯಿಸಿದ್ದಾರೆ. ಕತ್ತಲು ಮತ್ತು ಬೆಳಕಿಗೆ ವಿರೋಧವಿರುವುದರಿಂದಲೇ ಈ ವ್ಯಾಪ್ತಿಗೆ ಅಪವಾದವನ್ನು ಅಂಗೀಕರಿಸಲಾಗಿದೆ.**

**ಭಾವವಿಲಾಸಿನೀ–** ಕಸ್ತರ್ಹಿ ಪರಿಹಾರ ಇತಿ ಸುಹೃದ್ಭಾವೇನ ಪೃಚ್ಛಂತಂ ಪ್ರತ್ಯಾಹ – **ಯಥೇತಿ** ॥ ಚಕ್ಷುಷಃ ಸರ್ವವಸ್ತುನೋ ಘಟಪಟಾದೇರ್ಗ್ರಹಣೇ। ಆಲೋಕ ಸಹಕೃತಚಕ್ಷುರ್ಗ್ರಾಹ್ಯತ್ವಾಂಗೀಕಾರಾತ್ । ಚಕ್ಷುಷಾ ತಮಸೋ ಗ್ರಹಣೇ। ಸಃ ಆಲೋಕಪುರಸ್ಕಾರಃ। ಯತ್ರಯತ್ರ ಚಕ್ಷುಷಾ ಸ್ವಾರ್ಥಗ್ರಹಣಂ ತತ್ರಾಲೋಕಪುರಸ್ಕಾರ ಇತಿ ಲೋಕಸಿದ್ಧವ್ಯಾಪ್ತೇರ್ವಿರುದ್ಧತ್ವಾತ್ । ಆಲೋಕೇ ಸತಿ ತಮಸ ಏವಾಯೋಗಾತ್ ತಮೋಗ್ರಹಣೇಽಪ್ಯಾಲೋಕಾಪೇಕ್ಷಣೇ ತಮಸಃ ಸ್ವರೂಪಸ್ಯೈವ ನಾಶಾತ್ ತನ್ಮಾತ್ರೇ ತದನಪೇಕ್ಷಣಮ್ ॥ ೯೯ ॥

ಅತ್ರಾಪಿ ತತ್ಪುರಸ್ಕಾರೇ ನ ಸ್ಯಾದಜ್ಞಾನಮೇವ ಹಿ ।
ಅತೋ ವ್ಯಾಪ್ತೇಶ್ಚ ಸಂಕೋಚಂ ಕೃತ್ವಾ ಸಾಮನ್ಯತೋ ಗ್ರಹಃ ॥ ೧೦೦ ॥

ವಾಚ್ಯೋಽವಚ್ಛೇದಕಾದೀನಾಮಜ್ಞಾನಂ ತು ವಿಶೇಷತಃ ।
ಇತಿ ಸರ್ವೈಃ ಸಮಾಧೇಯಂ ತ್ವಂ ಸರ್ವೇಭ್ಯೋ ಬಹಿಷ್ಕೃತಃ ॥ ೧೦೧ ॥

**ಅರ್ಥ-** ಅತ್ರ ಅಪಿ= ಅಜ್ಞಾನದ ಜ್ಞಾನದ ವಿಷಯದಲ್ಲೂ, ತತ್ಪುರಸ್ಕಾರೇ= ಅವಚ್ಛೇದಕದ ಜ್ಞಾನವು ಬೇಕೇ ಬೇಕು ಎಂಬ ನಿಯಮವನ್ನು ಪುರಸ್ಕರಿಸಿದರೆ, ಅಜ್ಞಾನಮೇವ ನ ಸ್ಯಾದ್= 'ಅಹಮಜ್ಞಃ' ಎಂಬ ಪ್ರತ್ಯಕ್ಷಕ್ಕೆ ವಿಷಯವಾದ ಅಜ್ಞಾನವೇ ಇರಲಾರದು, ಹಿ= ನಿಶ್ಚಯ. ಅತಃ= ಆದ್ದರಿಂದ, ವ್ಯಾಪ್ತೇಶ್ಚ= ಅವಚ್ಛಿನ್ನ ಜ್ಞಾನವು ಅವಚ್ಛೇದ ಜ್ಞಾನ ಪೂರ್ವಕ ಎಂಬ ವ್ಯಾಪ್ತಿಗೆ, ಸಂಕೋಚಂ ಕೃತ್ವಾ= ಸಂಕೋಚವನ್ನು ಮಾಡಿ, ಅವಚ್ಛೇದಕಾದೀನಾಮ್=

ಅವಚ್ಛೇದಕ ಮೊದಲಾದವುಗಳ, ಸಾಮಾನ್ಯತಃ= ಸಾಮಾನ್ಯಾಕಾರವಾದ, ಗ್ರಹಃ= ಜ್ಞಾನವು, ವಿಶೇಷತಃ ತು= ವಿಶೇಷ ಆಕಾರದಿಂದ, ಅಜ್ಞಾನಂ= ಅಜ್ಞಾನವು, ವಾಚ್ಯಃ= ಹೇಳಲ್ಪಡಬೇಕು, ಇತಿ= ಹೀಗೆಯೇ, ಸರ್ವೈಃ= ಎಲ್ಲರಿಂದಲೂ, ಸಮಾಧೇಯಂ= ಸಮಾಧಾನವು ಮಾಡಲ್ಪಡಬೇಕು, ತ್ವಂ= ನೀನು, ಸರ್ವೇಭ್ಯೋ= ಎಲ್ಲ ವಿದ್ವಾಂಸರಿಂದಲೂ, ಬಹಿಷ್ಕೃತಃ= ಹೊರಗೆ ಇರುವಿ.

**ಅನುವಾದ-** ಅಜ್ಞಾನದ ಜ್ಞಾನವು ಹುಟ್ಟಲು ಅಜ್ಞಾನದ ಅವಚ್ಛೇದಕದ ಜ್ಞಾನವು ಬೇಕೇ ಬೇಕು ಎಂಬ ನಿಯಮವನ್ನು ಪುರಸ್ಕರಿಸಿದರೆ 'ಅಹಮಜ್ಞಃ' ಈ ಪ್ರತ್ಯಕ್ಷಕ್ಕೆ ವಿಷಯವಾದ ಅಜ್ಞಾನವು ಇರಲು ಅವಕಾಶವೇ ಇರುವುದಿಲ್ಲ. ಆದ್ದರಿಂದ **'ಅವಚ್ಛಿನ್ನ ಜ್ಞಾನವು ಅವಚ್ಛೇದಕ ಜ್ಞಾನಪೂರ್ವಕ'** ಎಂಬ ವ್ಯಾಪ್ತಿಗೆ ಸಂಕೋಚವನ್ನು ಮಾಡಬೇಕು. ಅದು ಹೀಗೆ : ಅವಚ್ಛೇದಕದ ಸಾಮಾನ್ಯಜ್ಞಾನ ಮತ್ತು ವಿಶೇಷಾಂಶಗಳ ಅಜ್ಞಾನವಿದ್ದರೆ ಅವಚ್ಛಿನ್ನದ ಜ್ಞಾನವು ಹುಟ್ಟುತ್ತದೆ. ಹೀಗೆಯೇ ಎಲ್ಲರೂ ಆ ಸಮಾಧಾನವನ್ನು ಮಾಡಬೇಕು. ನೀನು ಮಾತ್ರ ಈ ಸಂಕೋಚವನ್ನು ಒಪ್ಪುವುದಿಲ್ಲ; ಆದ್ದರಿಂದ ನೀನು ಎಲ್ಲರಿಂದ ಹೊರಗೆ ಇರುವಿ.

**ಭಾವವಿಲಾಸಿನೀ–** ತಥಾಽತ್ರಾಪಿ ಅಜ್ಞಾನಜ್ಞಾನೇಽಪಿ ತತ್ಪುರಸ್ಕಾರೇ ಅಜ್ಞಾನಾವಚ್ಛೇದಕ-ಪ್ರತಿಯೋಗ್ಯಾದಿಜ್ಞಾನಮೇವ ನಶ್ಯೇತ್ । ಜ್ಞಾನೇ ಸತ್ಯಜ್ಞಾನಾಯೋಗಾತ್ ॥ ೧೦೦ ॥

ಅತೋ ವ್ಯಾಪ್ತೇರವಚ್ಛಿನ್ನಜ್ಞಾನಮವಚ್ಛೇದಕಜ್ಞಾನಸಾಪೇಕ್ಷಮಿತಿ ವ್ಯಾಪ್ತೇಃ । ಸಾಮಾನ್ಯತೋ ಗ್ರಹಃ ಸಾಮಾನ್ಯತೋ ಜ್ಞಾನಂ ಅಜ್ಞಾನಂ ತು ತದ್ವಿಶೇಷತ ಇತ್ಯೇವ ವಕ್ತವ್ಯಮ್ । ಸ್ವೋಪರಿ ಪತತೋ ವೃಕ್ಷಸ್ಯ ಛೇತ್ತಾ ತ್ವಂ ಸರ್ವೇಭ್ಯೋ ಬಹಿಷ್ಕೃತಃ ಸಕಲವಿದ್ವದ್ಭ್ಯೋ ಬಹಿರ್ಭೂತಃ ॥ ೧೦೧ ॥

**ವಿವರಣೆ-** ಅವಚ್ಛಿನ್ನದ ಜ್ಞಾನಕ್ಕೆ ಅವಚ್ಛೇದಕದ ಜ್ಞಾನವು ಕಾರಣ - ಹೀಗೆ ವ್ಯಾಪ್ತಿಯು ಇದೆ. ಈ ವ್ಯಾಪ್ತಿಗೆ ಸಂಕೋಚವನ್ನು ಮಾಡಲೇಬೇಕು. ಅದು ಹೀಗೆ : ಅವಚ್ಛಿನ್ನದ ಜ್ಞಾನಕ್ಕೆ ಅವಚ್ಛೇದಕದ ಸಾಮಾನ್ಯ ಜ್ಞಾನ ಮತ್ತು ವಿಶೇಷಾಂಶಗಳ ಅಜ್ಞಾನವು ಕಾರಣ. ಹೀಗೆ ಸಂಕೋಚವನ್ನು ಮಾಡದಿದ್ದರೆ 'ಅಹಮಜ್ಞಃ' - ಈ ಪ್ರತ್ಯಕ್ಷಕ್ಕೆ ವಿಷಯವಾದ ಅಜ್ಞಾನವನ್ನು ಕೂಡಿಸಲು ಆಗುವುದಿಲ್ಲ. ಏಕೆಂದರೆ ಪ್ರಕೃತ ಅಜ್ಞಾನಕ್ಕೆ ಸ್ವರೂಪಾನಂದವು ಅವಚ್ಛೇದಕ. ಇದರ ಜ್ಞಾನವಿದ್ದರೆ 'ಸ್ವರೂಪಾನಂದಂ ನ ಜಾನಾಮಿ' ಎಂಬ ಅಜ್ಞಾನವು ಇರಲಾರದು. ಇರದಿದ್ದರೂ ಈ ಅಜ್ಞಾನವು ಇರಲಾರದು. ವ್ಯಾಪ್ತಿಗೆ ಸಂಕೋಚವನ್ನು ಮಾಡಿದರೆ 'ಅವಚ್ಛೇದಕದ= ಸ್ವರೂಪಾನಂದದ ಸಾಮಾನ್ಯಜ್ಞಾನವು ಇದೆ; ವಿಶೇಷಜ್ಞಾನವು ಇಲ್ಲ' - ಈ ವ್ಯವಸ್ಥೆಯನ್ನು ಗುರುತಿಸಿ ಅಜ್ಞಾನವನ್ನು ಸಮರ್ಥಿಸಬಹುದು.

ಇದರ ವಿವರಣೆಯು ನ್ಯಾಯಾಮೃತದ ಪ್ರಥಮಪರಿಚ್ಛೇದದಲ್ಲಿ 'ಅವಿದ್ಯಾವಿಷಯ ಭಂಗ' ಪ್ರಕರಣದಲ್ಲಿ ಇದೆ.

**ಜ್ಞಾನಾವಿರೋಧಿ ತೇಽಜ್ಞಾನಂ ಜ್ಞಾನೇ ಸತಿ ಕುತೋ ನ ತತ್ ।**
**ವಿರೋಧಿ ಚೇತ್ ಪರನ್ಯಾಯತರೋಸ್ತ್ವಂ ಮೂಲಸೇಚಕಃ ॥ ೧೦೨ ॥**

**ಅರ್ಥ**-ತೇ= ನಿನ್ನ ಮತದಲ್ಲಿ, ಅಜ್ಞಾನಂ= ಅಜ್ಞಾನವು, ಜ್ಞಾನಾವಿರೋಧಿ= ಜ್ಞಾನಕ್ಕೆ ವಿರೋಧಿಯಲ್ಲ, (ಆದ್ದರಿಂದ) ಜ್ಞಾನೇ ಸತಿ= ಸುಖಾದಿ ಜ್ಞಾನವಿರುವಾಗ, ತತ್= ಸುಖಾದಿಗಳ ಅಜ್ಞಾನವು, ಕುತೋ ನ= ಏಕೆ ಇಲ್ಲ? ವಿರೋಧಿ ಚೇತ್= ಅಜ್ಞಾನವು ಜ್ಞಾನವಿರೋಧಿಯಾದರೆ, ತ್ವಂ= ನೀನು, ಪರನ್ಯಾಯತರೋಃ= ಪ್ರತಿವಾದಿಯ ನ್ಯಾಯ ಎಂಬ ವೃಕ್ಷದ, ಮೂಲಸೇಚಕಃ= ಬುಡಕ್ಕೆ ನೀರು ಹಾಕುವವನಾಗುತ್ತೀಯೇ.

**ಅನುವಾದ– ನಿನ್ನ ಮತದಲ್ಲಿ ಅಜ್ಞಾನವು ಜ್ಞಾನಕ್ಕೆ ಅವಿರೋಧಿ. ಆದ್ದರಿಂದ ಸುಖಾದಿಗಳ ಜ್ಞಾನವಿರುವಾಗ ಅವುಗಳ ಅಜ್ಞಾನವು ಏಕೆ ಇಲ್ಲ? ಅಜ್ಞಾನವು ಜ್ಞಾನವಿರೋಧಿ ಎಂದು ಒಪ್ಪಿದರೆ ನೀನು ಪ್ರತಿವಾದಿಯ ನ್ಯಾಯ ಎಂಬ ವೃಕ್ಷದ ಬುಡಕ್ಕೆ ನೀರು ಎರೆಯುವವನಾಗುತ್ತೀಯೇ.**

**ಭಾವವಿಲಾಸಿನೀ– ಜ್ಞಾನಾವಿರೋಧ್ಯಜ್ಞಾನಮ್ । ಜ್ಞಾನೇ ಸತಿ ಸುಖಾದಿಜ್ಞಾನೇ ಸತಿ ಕುತೋ ನ ತದ್ ಅಜ್ಞಾನಮ್ । ವಿರೋಧಿ ಚೇತ್ ಪರನ್ಯಾಯತರೋಃ ಪರಸ್ಯ ಪ್ರತಿವಾದಿನೋ ನ್ಯಾಯತರೋಃ ತ್ವಂ ಮೂಲಸೇಚಕಃ। ಪರರೀತ್ಯೈವ ತ್ವಯಾಪಿ ಸಮಾಧಾನಸ್ಯ ವಕ್ತವ್ಯತ್ವಾತ್ ॥೧೦೨॥**

**ವಿವರಣೆ**- ಅಜ್ಞಾನವು ಜ್ಞಾನವಿರೋಧಿ ಎಂದು ಒಪ್ಪಿದರೆ ಅಜ್ಞಾನದ ಜ್ಞಾನವು ಹೇಗೆ ಬರುತ್ತದೆ ಎಂಬ ಪ್ರಶ್ನೆಯು ಇದ್ದೇ ಇದೆ. ಅಜ್ಞಾನದ ಜ್ಞಾನವು ಬರುವಾಗ ಅಜ್ಞಾನಕ್ಕೆ ಅವಚ್ಛೇದಕವಾದ ವಿಷಯದ ಜ್ಞಾನವು ಬರುವುದರಿಂದ ಮತ್ತು ಅದು ಅಜ್ಞಾನಕ್ಕೆ ವಿರೋಧಿಯಾಗುವುದರಿಂದ ಅಜ್ಞಾನದ ಜ್ಞಾನವೇ ಬರಲು ಸಾಧ್ಯವಿಲ್ಲ. ಆದ್ದರಿಂದ ಅಜ್ಞಾನದ ಅವಚ್ಛೇದಕದ ಸಾಮಾನ್ಯಾಕಾರಜ್ಞಾನ ಮತ್ತು ವಿಶೇಷಾಕಾರದ ಅಜ್ಞಾನವಿದ್ದಾಗ ಅಜ್ಞಾನದ ಜ್ಞಾನವು ಆಗುತ್ತದೆ ಎಂದು ಅಂಗೀಕರಿಸಿ ಅಜ್ಞಾನದ ಜ್ಞಾನವನ್ನು ಕೂಡಿಸಬೇಕಾಗುತ್ತದೆ. ಹಾಗೆ ಮಾಡಿದರೆ ಇದು ಪರನ್ಯಾಯವಾದ್ದರಿಂದ ನೀನು ಪರನ್ಯಾಯವನ್ನೇ ಪೋಷಿಸಿದಂತಾಗುತ್ತದೆ.

**ಜ್ಞಾನಾಭಾವಪದಾರ್ಥಸ್ಯ ಸರ್ವಥಾಽಭಾವ ಏವ ಚೇತ್ ।**
**ಅತ್ಯಂತಾಭಾವಶೂನ್ಯಂ ತಜ್ಜ್ಞಾನಂ ಸ್ಯಾತ್ ಪರಮಾರ್ಥಸತ್ ॥ ೧೦೩ ॥**

**ಅರ್ಥ**-ಜ್ಞಾನಾಭಾವಪದಾರ್ಥಸ್ಯ= 'ಜ್ಞಾನಾಭಾವ' ಎಂಬ ಪದಾರ್ಥಕ್ಕೆ, ಸರ್ವಥಾಽ-ಭಾವ ಏವ ಚೇತ್= ಸರ್ವಥಾ ಅಭಾವವೇ ಆದರೆ, ಅತ್ಯಂತಾಭಾವಶೂನ್ಯಂ= ಅತ್ಯಂತಾ-ಭಾವರಹಿತವಾದ, ತತ್‌ಜ್ಞಾನಂ= ಆ ಜ್ಞಾನವು, ಪರಮಾರ್ಥಸತ್= ಪಾರಮಾರ್ಥಿಕ ಸತ್ಯವು, ಸ್ಯಾತ್= ಆಗಬೇಕಾದೀತು.

**ಅನುವಾದ-** ಜ್ಞಾನಾಭಾವವೆಂಬ ಪದಾರ್ಥವು ಸರ್ವಥಾ ಇಲ್ಲವೇ ಇಲ್ಲ ಎಂದು ಹೇಳಿದರೆ ಅತ್ಯಂತಾಭಾವಶೂನ್ಯವಾದ ಆ ಜ್ಞಾನವು ಬ್ರಹ್ಮನಂತೆ ಪಾರಮಾರ್ಥಿಕ ಸತ್ಯವಾಗಬೇಕಾದೀತು.

**ಭಾವವಿಲಾಸಿನೀ–** ಪ್ರತಿಯೋಗಿನೋ ಜ್ಞಾನಭಾವಾಭಾವಾಭ್ಯಾಂ ಜ್ಞಾನಾಭಾವಜ್ಞಾನಂ ದೂಷಯನ್ ಮಾಯಾವಾದೀ ಪ್ರಷ್ಟವ್ಯಃ । ಕಿಮೇವಂ ವದತಸ್ತವ ಮತೇ ಜ್ಞಾನಾತ್ಯಂತಾಭಾವ ಏವ ನಾಸ್ತಿ, ಉತಾಸ್ತೀತಿ? ಆದ್ಯಸ್ಯೋತ್ತರಮಾಹ– **ಜ್ಞಾನಾಭಾವೇತಿ** ॥ ಜ್ಞಾನಾಭಾವಪದಾರ್ಥಸ್ಯ ಜ್ಞಾನಾತ್ಯಂತಾಭಾವಪದಾರ್ಥಸ್ಯ । ತರ್ಹ್ಯತ್ಯಂತಾಭಾವಶೂನ್ಯಂ ತಜ್ಞಾನಂ ಬ್ರಹ್ಮವತ್ ಪರಮಾರ್ಥಸತ್ ಸ್ಯಾತ್ । ಅತ್ಯಂತಾಭಾವಪ್ರತಿಯೋಗಿತ್ವಸ್ಯೈವ ಮಿಥ್ಯಾತ್ವಾತ್ । ಅತ್ಯಂತಾ-ಭಾವಾಭಾವೇ ತತ್ಪ್ರತಿಯೋಗಿತ್ವಸ್ಯ ಸುತರಾಮಭಾವೇನ ಸತ್ಯತ್ವಾಪರಿಹಾರಾದಿತಿ ಭಾವಃ ॥೧೦೩॥

**ವಿವರಣೆ-** ಜ್ಞಾನವು ಜ್ಞಾನಾಭಾವದ ಪ್ರತಿಯೋಗಿ ಇದರ ಜ್ಞಾನವಿದ್ದರೂ ಜ್ಞಾನಾಭಾವದ ಜ್ಞಾನವು ಬರುವುದಿಲ್ಲ. ಇಲ್ಲದಿದ್ದರೂ ಜ್ಞಾನಾಭಾವದ ಜ್ಞಾನವು ಬರುವುದಿಲ್ಲ ಎಂದು ಮಾಯಾವಾದಿಯು ಜ್ಞಾನಾಭಾವಜ್ಞಾನವನ್ನು ದೂಷಿಸುತ್ತಾನೆ. ಅವನನ್ನು ಕುರಿತು ನಮ್ಮ ಪ್ರಶ್ನೆ ಹೀಗಿದೆ. ನಿನ್ನ ಮತದಲ್ಲಿ ಜ್ಞಾನಾತ್ಯಂತಾಭಾವವನ್ನು ಒಪ್ಪುವುದಿಲ್ಲ? ಅಥವಾ ಒಪ್ಪುತ್ತೀರೀ? ಜ್ಞಾನಾತ್ಯಂತಾಭಾವವನ್ನು ಒಪ್ಪುವುದಿಲ್ಲ ಎಂದು ಹೇಳಿದರೆ ಜ್ಞಾನಕ್ಕೆ ಅತ್ಯಂತಾಭಾವವಿಲ್ಲ ಎಂದು ಅರ್ಥವಾಗುತ್ತದೆ. ಜ್ಞಾನದ ಅತ್ಯಂತಾಭಾವವಿಲ್ಲವೆಂದರೆ ಜ್ಞಾನ ಅತ್ಯಂತಾಭಾವ-ಪ್ರತಿಯೋಗಿ ಅಲ್ಲ ಎಂದು ಅರ್ಥ. ನಿಮ್ಮ ಮತದಲ್ಲಿ ಅತ್ಯಂತಾಭಾವ- ಪ್ರತಿಯೋಗಿತ್ವವೇ ಮಿಥ್ಯಾತ್ವ. ಜ್ಞಾನದಲ್ಲಿ ಅತ್ಯಂತಾಭಾವ ಪ್ರತಿಯೋಗಿತ್ವವು ಇಲ್ಲವೆಂದರೆ, ಮಿಥ್ಯಾತ್ವವು ಇಲ್ಲ ಎಂದು ಅರ್ಥ. ಹೀಗಾದರೆ ಬ್ರಹ್ಮನಂತೆ ಜ್ಞಾನವೂ ಪಾರಮಾರ್ಥಿಕಸತ್ಯ ಆಗಬೇಕಾದೀತು.

ವಿದ್ಯಮಾನಸ್ಯ ಚಾರ್ಥಸ್ಯ ಯಥಾಸಂಭವಮೇವ ಧೀಃ ।
ಕಿಂ ಜಾತ್ಯಂಧಮತೇ ನಾಸ್ತಿ ಚಿತ್ರರೂಪವತೀ ಕ್ಷಿತಿಃ ॥ ೧೦೪ ॥

**ಅರ್ಥ**-ವಿದ್ಯಮಾನಸ್ಯ ಅರ್ಥಸ್ಯ= ಇರುವ ಅರ್ಥದ, ಧೀಃ= ಜ್ಞಾನವು, ಯಥಾಸಂಭವಮ್= ಹೇಗೆ ಉಪಪನ್ನವೋ ಹಾಗೆ, (ಭವತಿ) ಏವ= ಆಗಿಯೇ ಆಗುತ್ತದೆ, ಜಾತ್ಯಂಧಮತೇ= ಹುಟ್ಟುಕುರುಡನ ಅಭಿಪ್ರಾಯದಲ್ಲಿ, ಚಿತ್ರರೂಪವತೀ= ಅನೇಕ ರೂಪವನ್ನು ಹೊಂದಿರುವ, ಕ್ಷಿತಿಃ= ಪೃಥ್ವಿಯು, ನಾಸ್ತಿ ಕಿಂ= ಇಲ್ಲವೇ?

**ಅನುವಾದ-** ಜ್ಞಾನಾತ್ಯಂತಾಭಾವವು ಇದೆಯಾದರೆ ಅದರ ಜ್ಞಾನವು ಯಾವುದಾದರೊಂದು ಸಾಧನದಿಂದ ಆಗಿಯೇ ಆಗುತ್ತದೆ. ಹುಟ್ಟು ಕುರುಡನಿಗೆ ಭೂಮಿಯಲ್ಲಿರುವ ಅನೇಕ ಬಣ್ಣವು ಕಾಣಿಸುವುದಿಲ್ಲವೆಂಬ ಮಾತ್ರಕ್ಕೆ ಭೂಮಿಯಲ್ಲಿ ಅನೇಕ ಬಣ್ಣಗಳೇ ಇಲ್ಲವೇ?

**ಭಾವವಿಲಾಸಿನೀ– ದ್ವಿತೀಯಸ್ಯೋತ್ತರಮಾಹ– ವಿದ್ಯಮಾನಸ್ಯೇತಿ ॥** ಸರ್ವಥಾऽಜ್ಞಾತಸ್ಯ ವಸ್ತುನೋऽಸಂಭವಾದಿತಿ ಭಾವಃ। ತತ್ರ ದೃಷ್ಟಾಂತಮಾಹ– **ಕಿಂ ಜಾತ್ಯಂಧೇತಿ ॥** ಚಿತ್ರರೂಪವತೀ ನಾನಾರೂಪವತೀ। ಅಂಧಸ್ಯ ರೂಪಜ್ಞಾನವತ್ ತವ ಮತೇ ತಜ್ಜ್ಞಾನಾಸಂಭವಾಂಗೀಕಾರೇऽಪಿ ಚಕ್ಷುಷ್ಮತಾಮಿವ ವಿವೇಕಿನಾಂ ಮತೇ। ಸರ್ವಥಾऽಜ್ಞಾತೇ ವಸ್ತುನಿ ಪ್ರಮಾಣಾಭಾವಾದ್ ವಿದ್ಯಮಾನಸ್ಯ ಜ್ಞಾನಾತ್ಯಂತಾಭಾವಸ್ಯ ಜ್ಞಾನಮಪಿ ಘಟನೀಯಮಿತಿ ಭಾವಃ। ಜ್ಞಾನೇऽತ್ಯಂತಾಭಾವಪ್ರತಿಯೋಗಿತ್ವರೂಪಮಿಥ್ಯಾತ್ವಬೋಧಾಯಾತ್ಯಂತಾಭಾವಸ್ಯಾಪಿ ಬೋದ್ಧವ್ಯತ್ವಮನಿವಾರ್ಯಮಿತಿ ದ್ರಷ್ಟವ್ಯಮ್ ॥ ೧೦೪ ॥

**ವಿವರಣೆ**– 'ಜ್ಞಾನಾತ್ಯಂತಾಭಾವ'ವನ್ನು ಅಂಗೀಕರಿಸುವ ಪಕ್ಷವನ್ನು ಇಲ್ಲಿ ವಿಮರ್ಶಿಸುತ್ತಾರೆ: ಜ್ಞಾನಾತ್ಯಂತಾಭಾವವು ಇದ್ದರೆ ಅದರ ಜ್ಞಾನವೂ ಆಗಲೇಬೇಕು. ವಸ್ತುವಿನ ಇರುವಿಕೆಗೆ ಅದರ ಜ್ಞಾನವೇ ಪ್ರಮಾಣ. ಆದ್ದರಿಂದ ಜ್ಞಾನಾತ್ಯಂತಾಭಾವದ ಜ್ಞಾನವನ್ನು ಹೇಗಾದರೂ ಉಪಪಾದಿಸಬೇಕು. ನಿರಾಕರಿಸಬಾರದು. ಕುರುಡನಿಗೆ ಭೂಮಿಯಲ್ಲಿ ಇರುವ ನಾನಾರೂಪಗಳು ಕಾಣುವುದಿಲ್ಲ. ಈ ಕಾರಣದಿಂದ ಅವು ಇಲ್ಲವಾಗುವುದಿಲ್ಲ.

**ವಿಶೇಷ ವಿಚಾರ– ಸುರೋತ್ತಮೀಯ :** 'ಅಹಮಜ್ಞಃ' ಎಂಬ ಜ್ಞಾನವೂ ಮಿಥ್ಯಾ; ಅಂದರೆ ಅತ್ಯಂತಾಭಾವ ಪ್ರತಿಯೋಗಿ– ಹೀಗೆ ಜ್ಞಾನವು ('ಅಹಮಜ್ಞಃ' ಎಂಬ ಜ್ಞಾನವು ಅತ್ಯಂತಾಭಾವ ಪ್ರತಿಯೋಗಿ ಎಂದು) ಆಗುವುದಕ್ಕೂ 'ಅತ್ಯಂತಾಭಾವ' ದ ಜ್ಞಾನವು ಬೇಕು. ಆದ್ದರಿಂದ 'ಜ್ಞಾನಾಭಾವ' ವನ್ನು (ವ್ಯಾಹತಿ ದೋಷದಿಂದ) ನಿರಾಕರಿಸಲು ಆಗುವುದೇ ಇಲ್ಲ.

**ಅಜ್ಞಾನಸ್ಯ ಹಿ ದೌರ್ಘಟ್ಯಂ ಯಥಾ ತೇ ಭೂಷಣಂ ಸದಾ ।**
**ತಥಾ ತಜ್ಜ್ಞಾನದೌರ್ಘಟ್ಯಮಪಿ ಭೂಷಣಮಸ್ತ್ವಿದಮ್ ॥ ೧೦೫ ॥**

**ಅರ್ಥ**–ತೇ= ನಿನ್ನ ಮತದಲ್ಲಿ, ಅಜ್ಞಾನಸ್ಯ= ಅಜ್ಞಾನಕ್ಕೆ, ದೌರ್ಘಟ್ಯಂ[೧]= ದುರ್ಘಟತ್ವವು, ಯಥಾ= ಹೇಗೆ, ಸದಾ= ಯಾವಾಗಲೂ, ಭೂಷಣಂ= ಭೂಷಣವಾಗಿದೆಯೋ, ತಥಾ= ಹಾಗೆ, ಇದಂ= ಈ, ತಜ್ಜ್ಞಾನದೌರ್ಘಟ್ಯಮಪಿ= ಅಜ್ಞಾನದ ಜ್ಞಾನದ ದುರ್ಘಟತ್ವವೂ, ಭೂಷಣಮಸ್ತು= ಭೂಷಣವಾಗಲಿ.

**ಅನುವಾದ**– ನಿಮ್ಮ ಮತದಲ್ಲಿ ಅಜ್ಞಾನಕ್ಕೆ ದುರ್ಘಟತ್ವವು ಹೇಗೆ ಸರ್ವದಾ ಭೂಷಣವಾಗಿದೆಯೋ, ಅದರಂತೆ ಈ ಅಜ್ಞಾನದ ಜ್ಞಾನದ ದುರ್ಘಟತ್ವವೂ ಭೂಷಣವಾಗಲಿ.

**ಭಾವವಿಲಾಸಿನೀ**– ಸೌಹಾರ್ದೇನೋಕ್ತಮುತ್ತರಮನಂಗೀಕುರ್ವತಃ ಪ್ರತಿಬಂದ್ಯಾ ಉತ್ತರಮಾಹ– **ಅಜ್ಞಾನಸ್ಯೇತಿ ॥** ದೌರ್ಘಟ್ಯಂ ಜ್ಞಾನೇ ಸತ್ಯಪ್ಯಾವರಕತ್ವರೂಪಮ್ । ತಥಾ ತಜ್ಜ್ಞಾನದೌರ್ಘಟ್ಯಂ

೧. ದುರ್ಘಟತ್ವ= ಪ್ರಮಾಣದಿಂದ ಸಮರ್ಥಿಸಲಾಗದ ಸ್ಥಿತಿ.

ತಸ್ಯ ಜ್ಞಾನಾಭಾವರೂಪಾಜ್ಞಾನಸ್ಯ ಯಜ್ಞಾನಂ ಜ್ಞಾನಾಭಾವಜ್ಞಾನಮಿತಿ ಯಾವತ್ ।
ದೌರ್ಘಟ್ಯಂ ಪ್ರತಿಯೋಗಿಜ್ಞಾನಾಭಾವೇऽಪಿ ಜ್ಞಾತತ್ವರೂಪದೌರ್ಘಟ್ಯಮ್ ॥ ೧೦೫ ॥

**ವಿವರಣೆ-** ಸೌಹಾರ್ದದಿಂದ ಹೇಳಿದ ಪರಿಹಾರವನ್ನು ಒಪ್ಪದಿದ್ದರೆ ಪ್ರತಿಬಂದಿಯನ್ನು ಹೇಳುತ್ತಾರೆ. ಮಾಯಾವಾದಿಗಳು ಅಜ್ಞಾನಕ್ಕೆ ದುರ್ಘಟತ್ವವು ಭೂಷಣ ಎಂದು ಅಂಗೀಕರಿಸುತ್ತಾರೆ. ಜ್ಞಾನವು ಪ್ರಕಾಶಮಾನವಾಗಿರುವಾಗ ಅದಕ್ಕೆ ಅಜ್ಞಾನವು ಹೇಗೆ ಆವರಣವಾಗುತ್ತದೆ ಎಂದು ಯುಕ್ತಿಯಿಂದ ಉಪಪಾದನೆ ಮಾಡಲು ಬರುವುದಿಲ್ಲ. ಆದ್ದರಿಂದ ಅದು ದುರ್ಘಟ ಎಂದು ಅವರ ಅಭಿಪ್ರಾಯ. ಅದರಂತೆ ಜ್ಞಾನಾತ್ಯಂತಾಭಾವರೂಪವಾದ ಅಜ್ಞಾನದ ಜ್ಞಾನವೂ ದುರ್ಘಟವೆಂದು ಅಂಗೀಕರಿಸಬಹುದು. ಎಂದರೆ, ಅಭಾವಜ್ಞಾನಕ್ಕೆ ಪ್ರತಿಯೋಗಿಜ್ಞಾನವು ಕಾರಣ ಎಂದು ಸಾಮಾನ್ಯ ನಿಯಮ. ಅಜ್ಞಾನದ= ಜ್ಞಾನಾತ್ಯಂತಾಭಾವದ ಜ್ಞಾನದ ವಿಷಯದಲ್ಲಿ ಈ ನಿಯಮವನ್ನು ಬಿಡಬೇಕು. ಜ್ಞಾನವು ಜ್ಞಾನಾತ್ಯಂತಾಭಾವದ ಪ್ರತಿಯೋಗಿ. ಈ ಜ್ಞಾನವು ಇಲ್ಲದೆ ಜ್ಞಾನಾತ್ಯಂತಾಭಾವದ ಜ್ಞಾನವು ಆಗುತ್ತದೆ ಎಂದು ಅಂಗೀಕರಿಸಬೇಕು. ಇದನ್ನು ಪ್ರಮಾಣದಿಂದ ಸಮರ್ಥಿಸಲು ಆಗುವುದಿಲ್ಲ. ಇದು ದುರ್ಘಟ? ಮಾಯಾವಾದದಲ್ಲಿ ದುರ್ಘಟತ್ವವು ಭೂಷಣ. ಆದ್ದರಿಂದ ಈ ನಿಯಮಕ್ಕೆ ಹೆದರುವ ಅವಶ್ಯಕತೆಯು ಇಲ್ಲ.

**ಕಿಮೇಕಕುಂಡಲತ್ವೇನ ಕುಂಡಲದ್ವಯವಾನ್ ಭವ ।**
**ದುರ್ಘಟಸ್ಯ ಹಿ ಯೋ ಹಂತಾ ಸ ಸ್ಯಾದತ್ಯಂತದುರ್ಘಟಃ ॥ ೧೦೬ ॥**

**ಅರ್ಥ-** ಏಕಕುಂಡಲತ್ವೇನ ಕಿಮ್= ಒಂದು ಕುಂಡಲವೇಕೆ? ಕುಂಡಲದ್ವಯವಾನ್= ಎರಡು ಕುಂಡಲವುಳ್ಳವನು, ಭವ= ಆಗು, ಯಃ= ಯಾವುದು, ದುರ್ಘಟಸ್ಯ= ದುರ್ಘಟವಾದದ್ದನ್ನು, ಹಂತಾ= ನಾಶಮಾಡುತ್ತದೆಯೋ, ಸಃ= ಅದು, ಅತ್ಯಂತದುರ್ಘಟಃ= ಅತ್ಯಂತ ದುರ್ಘಟವೇ, ಸ್ಯಾತ್ ಹಿ= ಆಗಿರಬೇಕಷ್ಟೇ.

**ಅನುವಾದ-** ಒಂದು ಕುಂಡಲವೇಕೇ? ಎರಡು ಕುಂಡಲಗಳನ್ನು ಧರಿಸು. ಯಾವುದು ದುರ್ಘಟವಾದುದನ್ನು ನಾಶಮಾಡುತ್ತದೆಯೋ ಅದು ಅದಕ್ಕಿಂತ ಹೆಚ್ಚು ದುರ್ಘಟವಾಗಿರಬೇಕಷ್ಟೇ.

**ಭಾವವಿಲಾಸಿನೀ-** ಕುಂಡಲದ್ವಯವಾನ್ ಅವಿದ್ಯಾದುರ್ಘಟತ್ವಜ್ಞಾನದುರ್ಘಟತ್ವಾಖ್ಯ-ಭೂಷಣದ್ವಯವಾನ್ । ಶಾಸ್ತ್ರರೂಪತಯಾ ಕರ್ಣಯೋಗ್ಯತ್ವಾತ್ ಕುಂಡಲೇತ್ಯುಕ್ತಮ್ । ಜ್ಞಾನಾಭಾವಜ್ಞಾನಸ್ಯಾಸ್ಯ ಜ್ಞಾನಾಭಾವವಿಷಯಕಾಜ್ಞಾನನಿವರ್ತಕತ್ವಾವಶ್ಯಂಭಾವೇನ ದುರ್ಘಟಹಂತೃತ್ವಾದತ್ಯಂತ ದುರ್ಘಟತ್ವಮಾಶ್ರಯಣೀಯಮಿತ್ಯಾಹ- **ದುರ್ಘಟಸ್ಯ ಹೀತಿ** ॥ ಹೀತ್ಯನೇನ ಸಮರ್ಥಗಜಸ್ಯ ಹಂತುಃ ಸಿಂಹಸ್ಯ ತತೋऽಪ್ಯತಿಸಾಮರ್ಥ್ಯಂ ದೃಷ್ಟಮಿತಿ ಸೂಚಯತಿ ॥ ೧೦೬ ॥

**ವಿವರಣೆ-** (1) 105ನೇ ಶ್ಲೋಕದ ವಿವರಣೆಯಲ್ಲಿ ವಿವರಿಸಿರುವಂತೆ ಅದ್ವೈತದರ್ಶನವು ಅವಿದ್ಯೆಗೆ ದುರ್ಘಟತ್ವವನ್ನು ಮೊದಲೇ ಅಂಗೀಕರಿಸಿದೆ. ಜ್ಞಾನಾತ್ಯಂತಾಭಾವದ ಜ್ಞಾನವು ಅದರ ಪ್ರತಿಯೋಗಿಯ ಜ್ಞಾನವಿಲ್ಲದೆ ಆಗುತ್ತದೆ ಎಂದು ಅಂಗೀಕರಿಸಿ, ಹೀಗೆ ಜ್ಞಾನೋತ್ಪತ್ತಿಯು ದುರ್ಘಟ ಎಂಬ ಪ್ರಶ್ನೆಗೆ, ದುರ್ಘಟತ್ವವು ಭೂಷಣ ಎಂದು ಉತ್ತರವನ್ನು ಹೇಳಬಹುದು. ಹೀಗೆ ಮಾಡಿದರೆ ಈ ದರ್ಶನಕ್ಕೆ ಎರಡು ಭೂಷಣಗಳು ದೊರೆಯುತ್ತವೆ. ಒಂದೇ ಭೂಷಣಕ್ಕಿಂತ ಎರಡು ಭೂಷಣಗಳು ಹೆಚ್ಚು ಸಂತೋಷದಾಯಕ. ಎರಡು ದುರ್ಘಟತ್ವಗಳನ್ನು ಗುರುಗಳ ಉಪದೇಶದಿಂದ ತಿಳಿಯಬೇಕು. ಗುರುಗಳ ಉಪದೇಶವು ಕಿವಿಗೆ ಭೂಷಣ. ಆದ್ದರಿಂದ 'ಒಂದೇ ಕುಂಡಲವೇಕೆ? ಎರಡು ಕುಂಡಲಗಳನ್ನು ಧರಿಸು' ಎಂದು ರಾಜರು ಚಮತ್ಕರಿಸಿದ್ದಾರೆ.

(2) 'ಅಹಮಜ್ಞಃ' - ಈ ಅನುಭವವು ಜ್ಞಾನಾಭಾವದ ಜ್ಞಾನ. ಈ ಜ್ಞಾನವು ದುರ್ಘಟ. ಜ್ಞಾನಕ್ಕೆ ವಿಷಯವಾದ ಜ್ಞಾನಾಭಾವವೂ ದುರ್ಘಟ. (ನೋಡಿ ಶ್ಲೋಕ 96-101) ದುರ್ಘಟ ಜ್ಞಾನವು ಜ್ಞಾನಾಭಾವದ ದುರ್ಘಟತ್ವವನ್ನು ಪರಿಹರಿಸಿದೆ. ಆದ್ದರಿಂದ ಜ್ಞಾನದ ಸಾಮರ್ಥ್ಯವು ಜ್ಞಾನಾಭಾವದ ಸಾಮರ್ಥ್ಯಕ್ಕಿಂತ ಹೆಚ್ಚು. ಗಜದ ಸಾಮರ್ಥ್ಯಕ್ಕಿಂತ ಅದನ್ನು ಕೊಲ್ಲುವ ಸಿಂಹದ ಸಾಮರ್ಥ್ಯದಂತೆ. ಆದ್ದರಿಂದ ಇದನ್ನು ಸಂತೋಷದಿಂದ ಅಂಗೀಕರಿಸಬೇಕು.

**ಕಿಂಚ ಭಾವಾಜ್ಞಾನವಾದೇ ದುರ್ಘಟತ್ವಂ ಯಥೇಷ್ಯತೇ ।**
**ಅಭಾವಾಜ್ಞಾನವಾದೇಽಪಿ ದೌರ್ಘಟ್ಯಂ ತದ್ವದಿಷ್ಯತಾಮ್ ॥ ೧೦೭ ॥**

**ಅರ್ಥ-** ಕಿಂಚ= ಮತ್ತು, ಭಾವಾಜ್ಞಾನವಾದೇ= ಅಜ್ಞಾನವು ಭಾವರೂಪ ಎಂಬ ವಾದದಲ್ಲಿ, ದುರ್ಘಟತ್ವಂ= ದುರ್ಘಟತ್ವವು, ಯಥಾ ಇಷ್ಯತೇ= ಹೇಗೆ ಸ್ವೀಕರಿಸಲ್ಪಡುತ್ತದೆಯೋ, ತದ್ವದ್= ಅದರಂತೆ, ಅಭಾವಾಜ್ಞಾನವಾದೇ ಅಪಿ= ಅಜ್ಞಾನವು ಜ್ಞಾನಾತ್ಯಂತಾಭಾವರೂಪ ಎಂಬ ವಾದದಲ್ಲಿಯೂ, ದೌರ್ಘಟ್ಯಂ= ದುರ್ಘಟತ್ವವು, ಇಷ್ಯತಾಮ್= ಸ್ವೀಕರಿಸಲ್ಪಡಲಿ.

**ಅನುವಾದ-** ಅಜ್ಞಾನವು ಭಾವರೂಪ ಎಂದು ಅಂಗೀಕರಿಸಿದಾಗ ಅದಕ್ಕೆ ದುರ್ಘಟತ್ವವು ಅಂಗೀಕರಿಸಲ್ಪಟ್ಟಿದೆ. ಹೀಗೆಯೇ ಅಜ್ಞಾನವು 'ಜ್ಞಾನಾತ್ಯಂತಾಭಾವ' ರೂಪ ಎಂದು ಅಂಗೀಕರಿಸಿದರೂ, ಈ ಜ್ಞಾನಾತ್ಯಂತಾಭಾವಕ್ಕೆ ದುರ್ಘಟತ್ವವು ಅಂಗೀಕರಿಸಲ್ಪಡಲಿ.

**ವಿವರಣೆ-** ಅದ್ವೈತ ದರ್ಶನವು ಭಾವರೂಪ ಅಜ್ಞಾನವನ್ನು ಅಂಗೀಕರಿಸುತ್ತದೆ. ಅದನ್ನು ಪ್ರಮಾಣಗಳಿಂದ ಸಮರ್ಥಿಸಲು ಆಗುವುದಿಲ್ಲ. ಇದೇ ಅಜ್ಞಾನಕ್ಕೆ ದುರ್ಘಟತ್ವ. ಈ ದುರ್ಘಟತ್ವವು ಭೂಷಣವೆಂದು ಹೇಳುತ್ತಾರೆ. ಸಮರ್ಥನೆಯು ಬೇಕಿಲ್ಲ ಎಂದು ಅಭಿಪ್ರಾಯ.

ಹೀಗೆಯೇ ಅಜ್ಞಾನವು ಅತ್ಯಂತಾಭಾವರೂಪ ಎಂದು ಅಂಗೀಕರಿಸಬಹುದು. ಇಲ್ಲೂ ದುರ್ಘಟತ್ವವೂ ಇದೆ. ಇರಲಿ. ಈ ದುರ್ಘಟತ್ವವನ್ನೂ ಭೂಷಣ ಎಂದು ಅಂಗೀಕರಿಸಬಹುದು.

**ಅಜ್ಞಾನತ್ವಾವಿಶೇಷೇಣ ದ್ವಯೋರಪಿ ಸಮತ್ವತಃ ।**
**ಪಕ್ಷಪಾತೇ ಹೇತ್ವಭಾವಾತ್ ಪಕ್ಷಪಾತೋ ಭವೇತ್ತವ ॥ ೧೦೮ ॥**

**ಅರ್ಥ**-ಅಜ್ಞಾನತ್ವಾವಿಶೇಷೇಣ= ಅಜ್ಞಾನತ್ವ ಎಂಬ ಸಮಾನ ಧರ್ಮದಿಂದ, ದ್ವಯೊರಪಿ ಸಮತ್ವತಃ= ಎರಡೂ ಸಮಾನವಾದ ಕಾರಣ, ಪಕ್ಷಪಾತೇ= ಒಂದು ಪಕ್ಷವನ್ನು ಅಂಗೀಕರಿಸುವುದರಲ್ಲಿ, ಹೇತ್ವಭಾವಾತ್= ಕಾರಣವಿಲ್ಲದಿರುವುದರಿಂದ, ತವ= ನಿನ್ನ, ಪಕ್ಷಪಾತಃ= ಪಕ್ಷಕ್ಕೆ= ಸಿದ್ಧಾಂತಕ್ಕೆ ಪತನವು, ಭವೇತ್= ಉಂಟಾಗುತ್ತದೆ.

**ಅನುವಾದ- ಭಾವರೂಪ ಅಜ್ಞಾನ ಮತ್ತು ಅಭಾವರೂಪ ಅಜ್ಞಾನ ಇವೆರಡರಲ್ಲೂ ಅಜ್ಞಾನತ್ವವು ಸಮಾನಧರ್ಮ. ಹೀಗಿರುವಾಗ ಅಭಾವರೂಪವಾದ ಅಜ್ಞಾನವನ್ನು ನಿರಾಕರಿಸಿ ಭಾವರೂಪವಾದ ಅಜ್ಞಾನವನ್ನು ಅಂಗೀಕರಿಸಲು ಏನೂ ಕಾರಣವಿಲ್ಲ. ಆದರೂ ಒಂದು ಪಕ್ಷವನ್ನು ಅಂಗೀಕರಿಸಿದರೆ ನಿನ್ನ ಸಿದ್ಧಾಂತಕ್ಕೆ ಭಂಗವು ಉಂಟಾಗುತ್ತದೆ.**

**ಭಾವವಿಲಾಸಿನೀ–ದ್ವಯೋಃ ಭಾವಾಭಾವರೂಪಾಜ್ಞಾನಯೋಸ್ಸಮತ್ವತಃ ಅಜ್ಞಾನತ್ವಸಾಮ್ಯಾತ್ । ತವ ಪಕ್ಷಸ್ಯ ಸಿದ್ಧಾಂತಸ್ಯ ಪಾತಃ ॥ ೧೦೮ ॥**

**ವಿವರಣೆ-** ದುರ್ಘಟವೂ= ಪ್ರಮಾಣದಿಂದ ಸಮರ್ಥಿಸಲಾಗದ ಅರ್ಥವೂ ಅಂಗೀಕಾರಾರ್ಹ ಎಂದು ಅದ್ವೈತಸಿದ್ಧಾಂತವಿದೆ. ಪ್ರಕೃತ, 'ಜ್ಞಾನಾಭಾವ' ಎಂಬ ಪದಾರ್ಥವನ್ನು, ಅದು ದುರ್ಘಟ ಎಂಬ ಕಾರಣದಿಂದ ಅಂಗೀಕರಿಸುತ್ತಿಲ್ಲ. ಈ ಧೋರಣೆಯು 'ದುರ್ಘಟ' ವು ಅಂಗೀಕಾರಾರ್ಹ ಎಂಬ ಅದ್ವೈತ ಸಿದ್ಧಾಂತಕ್ಕೆ ಭಂಗವನ್ನು ಉಂಟು ಮಾಡುತ್ತಿದೆ. 'ಪಕ್ಷಪಾತ' (ಸಿದ್ಧಾಂತದ ಪತನ) ಎಂಬ ಪದದಿಂದ ರಾಜರು ಈ ಅಭಿಪ್ರಾಯವನ್ನು ವ್ಯಕ್ತಪಡಿಸಿದ್ದಾರೆ.

**ನಿತ್ಯಜ್ಞಾನಮತೇ ಜ್ಞಾನಸಾಮಾನ್ಯಾಭಾವ ಏವ ನ ।**
**ಚಕ್ಷುಷಾ ಬ್ರಹ್ಮವಿಜ್ಞಾನಸ್ಯಾಭಾವೋಽಜ್ಞಾನಮುಚ್ಯತೇ ॥ ೧೦೯ ॥**

**ಅರ್ಥ**-ನಿತ್ಯಜ್ಞಾನಮತೇ= ನಿತ್ಯಜ್ಞಾನವನ್ನು ಒಪ್ಪುವ ಮತದಲ್ಲಿ, ಜ್ಞಾನಸಾಮಾನ್ಯಾಭಾವ ಏವ= ಎಲ್ಲ ವಿಧವಾದ ಜ್ಞಾನಗಳ ಅಭಾವವು, ನ= ಇಲ್ಲ, ಚಕ್ಷುಷಾ= ಕಣ್ಣಿನಿಂದ, ಬ್ರಹ್ಮವಿಜ್ಞಾನಸ್ಯಾಭಾವಃ= ಬ್ರಹ್ಮಜ್ಞಾನದ ಅಭಾವವು, ಅಜ್ಞಾನಂ= ಅಜ್ಞಾನವೆಂದು, ಉಚ್ಯತೇ= ಹೇಳಲ್ಪಡುತ್ತದೆ.

**ಅನುವಾದ-** ನಿತ್ಯಜ್ಞಾನವನ್ನು ಒಪ್ಪುವ ಮತದಲ್ಲಿ ಯಾವ ಜ್ಞಾನವೂ ಇಲ್ಲದ ಸ್ಥಿತಿಯೇ ಇಲ್ಲ. ಚಾಕ್ಷುಷ ಬ್ರಹ್ಮಜ್ಞಾನದ ಅಭಾವವೇ ಅಜ್ಞಾನವೆಂದು ಹೇಳಲ್ಪಡುತ್ತದೆ.

**ಭಾವವಿಲಾಸಿನೀ–** ರೀತ್ಯಂತರೇಣಾಪಿ ಜ್ಞಾನಾಭಾವಜ್ಞಾನೇ ಪರೋಕ್ತಾನುಪಪತ್ತಿಂ ಪರಿಹರತಿ– **ನಿತ್ಯಜ್ಞಾನೇತಿ** ॥ ಜ್ಞಾನಸಾಮಾನ್ಯಾಭಾವಃ ಜ್ಞಾನತ್ವಾವಚ್ಛಿನ್ನಜ್ಞಾನಾಭಾವಃ । ಚೇತನಮಾತ್ರೇ ಸಾಕ್ಷಿರೂಪಜ್ಞಾನಸ್ಯ ಸದಾ ಸತ್ತ್ವಾತ್ ಜ್ಞಾನಸಾಮಾನ್ಯಾಭಾವೋ ನ ಘಟತ ಇತಿ ಭಾವಃ । ತರ್ಹಿ ಪ್ರಕೃತೇಽಜ್ಞಾನಂ ನಾಮ ಕಿಮ್? ಇತ್ಯತ ಆಹ– **ಚಕ್ಷುಷೇತಿ** ॥ ಅಜ್ಞಾನಮಿತಿ ಪದಚ್ಛೇದಃ । 'ಬ್ರಹ್ಮ ನ ಜಾನಾಮಿ' ಇತಿ ವದತೋಽಪಿ ಚಕ್ಷುಷಾ ತಜ್ಜ್ಞಾನಾಭಾವೋ ನತು ಸರ್ವಥಾ ತಜ್ಜ್ಞಾನಾಭಾವಃ । ಬ್ರಹ್ಮಪದೇನ ಪರೋಕ್ಷರೂಪತಜ್ಜ್ಞಾನಸ್ಯ ಸತ್ತ್ವಾತ್ । ಉಚ್ಯತ ಇತ್ಯನೇನ ಅಜ್ಞಾನಪದಸ್ಯ ಜ್ಞಾನವಿಶೇಷಾಭಾವೇ ಪ್ರಯೋಗೋ ಲೋಕರೂಢ ಇತಿ ಸೂಚಯತಿ ॥೧೦೯॥

**ವಿವರಣೆ-** 'ಜ್ಞಾನಾಭಾವ' ದ ಜ್ಞಾನವು ಹುಟ್ಟಲು ಅನುಪಪತ್ತಿಗಳು ಇವೆ ಎಂದು ಮಾಯಾವಾದಿಗಳು ಹೇಳಿದ್ದಾರೆ (ನೋಡಿ ಶ್ಲೋಕ 96-97). ಈ ಹೇಳಿಕೆಯನ್ನು ಇನ್ನೊಂದು ರೀತಿಯಿಂದ ಇಲ್ಲಿ ವಿಮರ್ಶಿಸಿದ್ದಾರೆ. ಸಕಲ ಚೇತನಗಳಿಗೂ ಸಾಕ್ಷಿರೂಪ ಜ್ಞಾನವು ಯಾವಾಗಲೂ ಇದೆ. ಜ್ಞಾನವು ಚೇತನನ ಸ್ವಭಾವ. ಆದ್ದರಿಂದ 'ಜ್ಞಾನಾಭಾವ' ವು= ಜ್ಞಾನಶೂನ್ಯ ಸ್ಥಿತಿಯು ಅಹಮರ್ಥಕ್ಕೆ ಇಲ್ಲವೇ ಇಲ್ಲ.

ಆದ್ದರಿಂದ 'ಅಹಮಜ್ಞಃ' ಎಂಬ ಪ್ರತ್ಯಕ್ಷವು ನಿರ್ದಿಷ್ಟವಿಷಯಗಳ ಅಜ್ಞಾನವನ್ನು= ಜ್ಞಾನಾಭಾವವನ್ನು ವಿಷಯೀಕರಿಸುತ್ತದೆ.

ಉದಾ : 'ನಾನು ಚಕ್ಷುರಿಂದ್ರಿಯದಿಂದ ಹುಟ್ಟಿದ ಬ್ರಹ್ಮಜ್ಞಾನವುಳ್ಳವನು ಅಲ್ಲ' ಎಂಬ ಅಭಿಪ್ರಾಯದಿಂದ 'ಅಹಮಜ್ಞಃ' ಎಂದು ಒಬ್ಬನು ತಿಳಿಯಬಹುದು. ಇದು ಚಾಕ್ಷುಷ ಬ್ರಹ್ಮಜ್ಞಾನಾಭಾವ. ಇದರ ಜ್ಞಾನವು ಹುಟ್ಟಲು ಯಾವ ಅನುಪಪತ್ತಿಯೂ ಇಲ್ಲ.

**ವಿಶೇಷವಿಚಾರ: ನಿತ್ಯಜ್ಞಾನಮತ-** ಜ್ಞಾನವು ಆತ್ಮನ= ಚೇತನನ ಸ್ವಭಾವ. ಆದ್ದರಿಂದ ಆತ್ಮನಿಗೆ ಯಾವಾಗಲೂ ಜ್ಞಾನವು ಇದೆ. ಇದು ಶ್ರೀಮಧ್ವಾಚಾರ್ಯರ ಮತ.

'ಸರ್ವಂ ಸಾಮಾನ್ಯತೋ ಯಸ್ಮಾತ್ ಸರ್ವೈರೇವಾನುಭೂಯತೇ' - ಅನುವ್ಯಾಖ್ಯಾನ

ಪ್ರಪಂಚದ ಸಕಲವಸ್ತುಗಳ ಜ್ಞಾನವು ಇದ್ದರೆ ಮಾತ್ರ 'ಸರ್ವ' ಶಬ್ದದ ಪ್ರಯೋಗವನ್ನು ಮಾಡಬಹುದು. ಜನರು ಪ್ರಯೋಗಿಸುತ್ತಾರೆ. ಆದ್ದರಿಂದ ಸಕಲವಸ್ತುಗಳ ಸಾಮಾನ್ಯಜ್ಞಾನವು ಎಲ್ಲರಿಗೂ ಯಾವಾಗಲೂ ಇದೆ.

ಈ ಶ್ಲೋಕದ ಪೂರ್ವಾರ್ಧವು ಹಿಂದಿನ ಶ್ಲೋಕದ ಉತ್ತರಾರ್ಧಕ್ಕೆ ಅನ್ವಯಿಸುತ್ತದೆ-

ನಿಷ್ಕಿಂಚನಪದಂ ವಿತ್ತವಿಶೇಷಾಭಾವವಾಗ್ ಯಥಾ ।
ಏವಂಚ ಮಾನಸಂ ಜ್ಞಾನಂ ಸ್ಯಾದೇವ ಪ್ರತಿಯೋಗಿನಃ ॥ ೧೧೦ ॥

**ಅರ್ಥ**-ನಿಷ್ಕಿಂಚನಪದಂ= ನಿಷ್ಕಿಂಚನ ಎಂಬ ಪದವು, ವಿತ್ತವಿಶೇಷಾಭಾವವಾಗ್ ಯಥಾ= ಧನವಿಶೇಷದ ಅಭಾವವನ್ನು ಹೇಳುವಂತೆ. ಏವಂಚ= ಹೀಗೆ, ಪ್ರತಿಯೋಗಿನಃ= ಪ್ರತಿಯೋಗಿಯ, ಮಾನಸಂ ಜ್ಞಾನಂ= ಮಾನಸ ಜ್ಞಾನವು, ಸ್ಯಾದೇವ= ಆಗಿಯೇ ಆಗುತ್ತದೆ.

**ಅನುವಾದ- ನಿಷ್ಕಿಂಚನ ಶಬ್ದಕ್ಕೆ (ಯಾವ ಧನವೂ ಇಲ್ಲದವನು ಎಂದು ಅರ್ಥವಲ್ಲ). ಹಣ, ಬಂಗಾರ ಮೊದಲಾದ ವಿಶೇಷಧನವು ಇಲ್ಲದವನು ಎಂದು ಅರ್ಥದಂತೆ. ಹೀಗೆಯೇ ಪ್ರತಿಯೋಗಿಯಾದ ಜ್ಞಾನದ ಮಾನಸಜ್ಞಾನವು ಇರಲು ಏನೂ ಅಡ್ಡಿಯಿಲ್ಲ.**

**ಭಾವವಿಲಾಸಿನೀ**–ತತ್ರ ದೃಷ್ಟಾಂತಮಾಹ– **ನಿಷ್ಕಿಂಚನೇತಿ** ॥ ನಿಷ್ಕಿಂಚನಪದಂ ನ ವಿದ್ಯತೇ ಕಿಂಚನೇತಿ ದರಿದ್ರೇ ಪ್ರಯುಜ್ಯಮಾನಂ ನಿಷ್ಕಿಂಚನಪದಂ ವಿತ್ತವಿಶೇಷಾಭಾವವಾಕ್ ವಸ್ತ್ರಭೋಜನ-ಪಾತ್ರಾದ್ಯತಿರಿಕ್ತಧನಕನಕಾದಿಬಹುತರವಸ್ತುವಿಶೇಷಾಭಾವವಾಕ್ । ತಥಾಽಜ್ಞಾನಪದಂ ಜ್ಞಾನ-ವಿಶೇಷಾಭಾವವಾಚೀತಿ ಪೂರ್ವೇಣಾನ್ವಯಃ । ಅಸ್ತ್ವೇವಮ್, ಪ್ರಕೃತೇ ಕಿಮಾಯಾತಮ್? ಇತ್ಯತ ಆಹ– **ಏವಂಚೇತಿ** ॥ ಪ್ರತಿಯೋಗಿನೋ ಬ್ರಹ್ಮಜ್ಞಾನಸ್ಯ ತದ್ವಿಶೇಷಣೀಭೂತಬ್ರಹ್ಮಣಶ್ಚ ಮಾನಸಂ ಮನಃಪರಿಣಾಮರೂಪಜ್ಞಾನಂ ಸ್ಯಾದೇವ ॥ ೧೧೦ ॥

**ವಿವರಣೆ**- ನಿಷ್ಕಿಂಚನಪದಕ್ಕೆ ಏನೂ ಇಲ್ಲದವನು ಎಂದು ಅರ್ಥ. ಆದರೆ ದರಿದ್ರನಲ್ಲಿ ಪ್ರಯೋಗಿಸುವ ನಿಷ್ಕಿಂಚನಶಬ್ದವು ಅವನಲ್ಲಿ ವಸ್ತ್ರವೂ ಇಲ್ಲ, ಪಾತ್ರೆಯೂ ಇಲ್ಲ, ಪುಡಿಕಾಸುಗಳೂ ಇಲ್ಲ ಎಂಬ ಅರ್ಥವನ್ನು ಕೊಡುವುದಿಲ್ಲ. ಅವೆಲ್ಲ ಇದ್ದರೂ ತನ್ನ ಅವಶ್ಯಕತೆಗೆ ಬೇಕಾದಷ್ಟು ಧನವಿಲ್ಲ ಎಂಬ ಅರ್ಥವನ್ನೇ ಕೊಡುತ್ತದೆ. ಹೀಗೆಯೇ 'ಅಹಮಜ್ಞಃ' ಎಂಬ ಹೇಳಿಕೆಯಲ್ಲಿ ಇರುವ 'ಅಜ್ಞಃ' ಪದವು ಜ್ಞಾನವೇ ಇಲ್ಲದವನು ಎಂದು ಅರ್ಥವನ್ನು ಹೇಳುವುದಿಲ್ಲ; ಬ್ರಹ್ಮನ ಚಾಕ್ಷುಷ ಜ್ಞಾನವಿಲ್ಲದವನು ಎಂಬ ಅರ್ಥವನ್ನು ಹೇಳುತ್ತದೆ; ಆದ್ದರಿಂದ 'ಬ್ರಹ್ಮನ ಚಾಕ್ಷುಷ ಜ್ಞಾನದ ಅಭಾವ' ವು ಇಲ್ಲಿ ಪ್ರಸಕ್ತವಾದ ಅಜ್ಞಾನ. ಈ ಜ್ಞಾನಾಭಾವದ ಪ್ರತಿಯೋಗಿ ಬ್ರಹ್ಮಜ್ಞಾನ. ಇದರ ವಿಷಯ ಬ್ರಹ್ಮ; ಇವೆರಡರ ಮಾನಸಜ್ಞಾನವು, ಎಂದರೆ ಶಾಸ್ತ್ರಗಳಿಂದ ಮತ್ತು ಯುಕ್ತಿಗಳಿಂದ ಹುಟ್ಟಿದ ವೃತ್ತಿಜ್ಞಾನವು ಇದ್ದೇ ಇದೆ.

**ವಿಶೇಷ ವಿಚಾರ:** ಪ್ರತಿಯೋಗಿಯ ಸಾಕ್ಷಿರೂಪಜ್ಞಾನವೂ ಸಾಮಾನ್ಯರೂಪದಿಂದ ಇದೆ. 'ಸರ್ವಂ ಸಾಮಾನ್ಯತೋ ಯಸ್ಮಾತ್ ಸರ್ವೈರೇವಾನುಭೂಯತೇ'- ಅನುವ್ಯಾಖ್ಯಾನ.

**ಪರೋಕ್ಷರೂಪಂ ತಜ್ಞಾನಂ ತದಭಾವಶ್ಚ ನೋಚ್ಯತೇ ।**
**ಬ್ರಹ್ಮಾಪರೋಕ್ಷಾಭಾವೇನ ನ ಜಾನಾಮೀತಿ ವಾಕ್ ತು ಸಾ ॥ ೧೧೧ ॥**

**ಅರ್ಥ**-ತಜ್ಞಾನಂ= ಆ ಪ್ರತಿಯೋಗಿಯ ಜ್ಞಾನವು, ಪರೋಕ್ಷರೂಪಂ= ಪರೋಕ್ಷ ರೂಪವಾದುದು, ತದಭಾವಶ್ಚ= ಆ ಪರೋಕ್ಷ ಜ್ಞಾನದ ಅಭಾವವು, ನೋಚ್ಯತೇ=

ಹೇಳಲ್ಪಡುವುದಿಲ್ಲ, ಸಾ ನ ಜಾನಾಮೀತಿ ವಾಕ್ ತು= ನಾನು ಬ್ರಹ್ಮನನ್ನು ತಿಳಿದಿಲ್ಲ ಎಂಬ ಆ ಮಾತು., ಬ್ರಹ್ಮಾಪರೋಕ್ಷಾಭಾವೇನ= ಬ್ರಹ್ಮನ ಅಪರೋಕ್ಷ ಜ್ಞಾನವಿಲ್ಲದಿರುವುದರಿಂದ.

**ಭಾವವಿಲಾಸಿನೀ–** ತಜ್ಜ್ಞಾನಂ ಪ್ರತಿಯೋಗಿಜ್ಞಾನಂ ಪರೋಕ್ಷರೂಪಂ ಶಬ್ದಲಿಂಗಾದಿಜನ್ಯಮ್, ನತು ಮನಸಾಽಪರೋಕ್ಷೀಕರಣಮ್ । ತದಭಾವಃ ಪ್ರತಿಯೋಗಿನಃ ಪ್ರತಿಯೋಗಿವಿಶೇಷಣಸ್ಯ ಬ್ರಹ್ಮಣೋ ವಾ ಪರೋಕ್ಷರೂಪಜ್ಞಾನಾಭಾವಃ । 'ಸಾ ನ ಜಾನಾಮಿ ಇತಿ ವಾಕ್' 'ಬ್ರಹ್ಮ ನ ಜಾನಾಮಿ ಇತಿ ವಾಕ್ ತು' ಬ್ರಹ್ಮಾಪರೋಕ್ಷಾಭಾವೇನ ಬ್ರಹ್ಮಾಪರೋಕ್ಷನಿಷೇಧಿಕಾ । ನತು ತಜ್ಜ್ಞಾನಮಾತ್ರನಿಷೇಧಿಕೇತ್ಯರ್ಥಃ ॥ ೧೧೧ ॥

**ವಿವರಣೆ–** (1) ಈ ಪ್ರತಿಯೋಗಿಜ್ಞಾನವು ಪರೋಕ್ಷಜ್ಞಾನ. ಇದರ ಅಭಾವವನ್ನು 'ಅಜ್ಞಃ' ಪದವು = ಹೇಳುವುದಿಲ್ಲ. ಈ ಪದವು ಬ್ರಹ್ಮನ ಅಪರೋಕ್ಷ ಜ್ಞಾನದ ಅಭಾವವನ್ನು ಹೇಳುತ್ತವೆ. ಈ ಅಪರೋಕ್ಷಜ್ಞಾನವು ಇಲ್ಲದಿರುವುದರಿಂದ ಈ ಮಾತು ಯುಕ್ತವೇ.

(2) ಶ್ಲೋಕದಲ್ಲಿರುವ 'ನ ಜಾನಾಮಿ'- ಇದು 'ಅಹಮಜ್ಞಃ'- ಈ ಹೇಳಿಕೆಯಲ್ಲಿರುವ 'ಅಜ್ಞಃ' ಪದದ ಅರ್ಥ.

ಪ್ರತ್ಯಕ್ಷವೃತ್ತಿವೈರೇಽಪಿ ನ ಜಾನಾಮೀತಿ ತೇ ಯಥಾ ।
ಪ್ರತ್ಯಕ್ಷವೃತ್ತ್ಯಭಾವೇಽಪಿ ನ ಜಾನಾಮೀತಿ ಮೇ ತಥಾ ॥ ೧೧೨ ॥

**ಅರ್ಥ–**ಪ್ರತ್ಯಕ್ಷವೃತ್ತಿವೈರೇಽಪಿ= ಕೇವಲ ಅಪರೋಕ್ಷವೃತ್ತಿಯ ವಿರೋಧವಿದ್ದರೂ, ತೇ= ನಿನಗೆ, ನ ಜಾನಾಮೀತಿ= ನಾನು ಬ್ರಹ್ಮನನ್ನು ತಿಳಿದಿಲ್ಲ ಎಂಬ ಪ್ರತೀತಿಯು, ಯಥಾ= ಹೇಗೆ ಉಪಪನ್ನವಾಗುತ್ತದೆಯೋ, ತಥಾ= ಹಾಗೆ, ಮೇ= ನನಗೆ, ಪ್ರತ್ಯಕ್ಷವೃತ್ತ್ಯಭಾವೇಽಪಿ= ಅಪರೋಕ್ಷ ವೃತ್ತಿ ಇಲ್ಲದಿರುವುದರಿಂದಲೂ, ನ ಜಾನಾಮೀತಿ= ನ ಜಾನಾಮಿ ಎಂಬ ಪ್ರತೀತಿಯು ಉಪಪನ್ನವಾಗುತ್ತದೆ.

**ಅನುವಾದ–** ನಿಮ್ಮ ದರ್ಶನದಲ್ಲಿ ಭಾವರೂಪ ಅಜ್ಞಾನಕ್ಕೆ ಅಪರೋಕ್ಷ ಮನೋವೃತ್ತಿಯ ವಿರೋಧವಿದೆ. (ಪರೋಕ್ಷ ವೃತ್ತಿಯ ವಿರೋಧವಿಲ್ಲ). ಆದರೂ 'ನ ಜಾನಾಮಿ' ಎಂಬ ಪ್ರತೀತಿಯು ಉಪಪನ್ನವಾಗುತ್ತದೆ. ಹೀಗೆಯೇ ಅಪರೋಕ್ಷ ವೃತ್ತಿಯು ಇಲ್ಲದಿರುವಾಗಲೇ (ಪರೋಕ್ಷವೃತ್ತಿಯು ಇದ್ದರೂ) ನಮ್ಮ ದರ್ಶನದಲ್ಲಿ 'ನ ಜಾನಾಮಿ' ಎಂಬ ಪ್ರತೀತಿಯು ಉಪಪನ್ನವಾಗುತ್ತದೆ.

**ಭಾವವಿಲಾಸಿನೀ–** ನ ಕೇವಲಂ ಲೋಕಪ್ರಸಿದ್ಧ್ಯಾದಿನಾಽಜ್ಞಾನಪದಂ ಜ್ಞಾನವಿಶೇಷಾಭಾವ-ಪರಮ್, ಕಿಂತು ತ್ವದ್ರೀತ್ಯಾಽಪೀತ್ಯಾಹ– **ಪ್ರತ್ಯಕ್ಷೇತಿ** ॥ ತೇ ತವ ಮತೇ ಪ್ರತ್ಯಕ್ಷರೂಪವೃತ್ತಿವೈರೇ ಅಪರೋಕ್ಷರೂಪಮನೋವೃತ್ತಿವೈರೇ ವಿರೋಧೇ ಸತ್ಯಪಿ ನ ಜಾನಾಮೀತಿ ವಾಕ್

ಜ್ಞಾನಮಾತ್ರನಿಷೇಧಾರ್ಥಕಸಾಮಾನ್ಯವಾಕ್ । ಪರೋಕ್ಷಜ್ಞಾನಾವಿರೋಧಿತಯಾಽಂಗೀ-ಕೃತೇಽಪರೋಕ್ಷವೃತ್ತಿಮಾತ್ರವೈರಿಣಿ ತವ ಭಾವರೂಪಾಜ್ಞಾನೇ ನ ಜಾನಾಮೀತಿ ಸಾಮಾನ್ಯವಾಗ್ ಯಥಾ ಭವತಿ ತಥಾ ಮೇ ಮಮ ಮತೇ ಪ್ರತ್ಯಕ್ಷವೃತ್ತ್ಯಭಾವೇಽಪಿ ಬ್ರಹ್ಮಾಪರೋಕ್ಷಜ್ಞಾನ-ಮಾತ್ರಾಭಾವೇಽಪಿ ನ ಜಾನಾಮೀತಿ ವಾಕ್ । ಅಂಗೀಕೃತ್ಯೇದಮುದಿತಮ್ । ವಸ್ತುತಸ್ತು ತವ ಪರೋಕ್ಷಜ್ಞಾನಾತ್ ಸಾಕ್ಷಿರೂಪಾಪರೋಕ್ಷಜ್ಞಾನಾಚ್ಚಜ್ಞಾನಪದಸ್ಯ ಸಂಕೋಚಂ ಕೃತ್ವಾ-ಪರೋಕ್ಷವೃತ್ತಾವೇವ ಪ್ರಯೋಗಃ । ನಞಶ್ಚ ಘಟಾಪರೋಕ್ಷವೃತ್ತಿವಿರೋಧಿನಸ್ತಮಆದೇಃ ಸಂಕೋಚಂ ಕೃತ್ವಾ ವಿರೋಧ್ಯೇಕದೇಶಿನಿ ಭಾವರೂಪಾಜ್ಞಾನೇ ಪ್ರಯೋಗ ಇತಿ ಬಹು-ಸಂಕೋಚಕಲ್ಪನಾ । ಮಮ ತು ಪರೋಕ್ಷಜ್ಞಾನಮಾತ್ರಾತ್ ಸಂಕೋಚ ಇತಿ ತ್ವತ್ತೋಽ-ಪ್ಯತಿಲಾಘವಮಿತಿ ದ್ರಷ್ಟವ್ಯಮ್ ॥ ೧೧೨ ॥

**ವಿವರಣೆ-** 'ಅಹಮಜ್ಞಃ' ಈ ಹೇಳಿಕೆಗೆ 'ನ ಜಾನಾಮಿ' ಎಂದು ಅರ್ಥ. ಈ ಹೇಳಿಕೆಗೆ 'ನನಗೆ ಭಾವರೂಪ ಅಜ್ಞಾನವಿದೆ' ಎಂದು ಅರ್ಥ ಎಂದು ಅದ್ವೈತದರ್ಶನವು ಹೇಳುತ್ತದೆ. ಭಾವರೂಪಅಜ್ಞಾನವು ಜ್ಞಾನವಿರೋಧಿ ಎಂದೂ ಹೇಳುತ್ತದೆ. ಆದ್ದರಿಂದ 'ಅಹಮಜ್ಞಃ' ಎಂಬ ಹೇಳಿಕೆಯಿಂದ 'ನನಗೆ ಯಾವ ಜ್ಞಾನವೂ ಇಲ್ಲ, ಜ್ಞಾನವಿರೋಧಿಗಳು ಇವೆ' ಎಂದು ಅರ್ಥವಾಗುತ್ತದೆ. ಅದ್ವೈತದರ್ಶನಕ್ಕೆ ಈ ಅರ್ಥವು ಸಮ್ಮತವಲ್ಲ. ಭಾವರೂಪ ಅಜ್ಞಾನವು ಅಪರೋಕ್ಷವೃತ್ತಿಗೆ ಮಾತ್ರ ವಿರೋಧಿ ಎಂದು ಈ ದರ್ಶನದ ನಿರ್ಣಯವಿದೆ. ಅಂದರೆ, ಈ ದರ್ಶನವು 'ಅಹಮಜ್ಞಃ' ಅಥವಾ 'ನ ಜಾನಾಮಿ' - ಈ ಹೇಳಿಕೆಯ ಅರ್ಥವ್ಯಾಪ್ತಿಯಲ್ಲಿ ಬರುವ (1) ಪರೋಕ್ಷಜ್ಞಾನಾಭಾವ ಮತ್ತು (2) ಅಪರೋಕ್ಷಜ್ಞಾನ ವಿರೋಧಿಯಾದ ಕತ್ತಲು, (3) ತಡೆಗಳು - ಇವುಗಳನ್ನು ಬಿಟ್ಟು 'ಅಪರೋಕ್ಷವೃತ್ತಿಯ ಅಭಾವ' ಎಂಬ ಅರ್ಥವನ್ನು ಮಾತ್ರ ಹೇಳುತ್ತದೆ. ಇದು ಅರ್ಥಸಂಕೋಚ. ಪರೋಕ್ಷಜ್ಞಾನವು ಇದ್ದರೂ ಅಪರೋಕ್ಷಜ್ಞಾನವು ಇಲ್ಲ ಎಂಬ ಅಭಿಪ್ರಾಯದಿಂದ 'ಅಹಮಜ್ಞಃ' ಎಂಬ ಹೇಳಿಕೆಯು ಯುಕ್ತವಾಗಬಹುದು.

ಮಧ್ವದರ್ಶನವು 'ನ ಜಾನಾಮಿ' - ಈ ಹೇಳಿಕೆಗೆ ನನಗೆ ಜ್ಞಾನವಿಲ್ಲ ಎಂದು ಅರ್ಥವನ್ನು ಹೇಳುತ್ತದೆ. 'ಜ್ಞಾನವು ಇಲ್ಲ' ಎಂಬ ಸಾಮಾನ್ಯಹೇಳಿಕೆಗೆ 'ಅಪರೋಕ್ಷಜ್ಞಾನವು ಇಲ್ಲ' ಎಂದು ಅಭಿಪ್ರಾಯವನ್ನು ಹೇಳುತ್ತದೆ. ಎರಡು ದರ್ಶನಗಳೂ 'ನ ಜಾನಾಮಿ' - ಈ ಹೇಳಿಕೆಯ ಎಲ್ಲ ಅರ್ಥಗಳನ್ನು ಪರಿಗಣಿಸದೆ, 'ಅಪರೋಕ್ಷಜ್ಞಾನಾಭಾವ' ಎಂಬ ಒಂದೇ ಅರ್ಥವು ಈ ಹೇಳಿಕೆಯ ತಾತ್ಪರ್ಯ ಎಂದು ಅಂಗೀಕರಿಸಿವೆ.

**ವಿಶೇಷ ವಿಚಾರ :** 'ನ ಜಾನಾಮಿ' ಅಥವಾ 'ಅಜ್ಞಃ' - ಇಲ್ಲಿ 'ನಞ್' ಇದೆ. ಅದ್ವೈತ ದರ್ಶನದಲ್ಲಿ ಇದಕ್ಕೆ - ವಿರೋಧಿ ಎಂದು ಅರ್ಥ. ಅಪರೋಕ್ಷ ವೃತ್ತಿಗೆ ಕತ್ತಲು, ತಡೆಗಳು, ಭಾವರೂಪ ಅಜ್ಞಾನ - ಇವು ವಿರೋಧಿ. ಇವುಗಳಲ್ಲಿ ಎರಡನ್ನು ಬಿಟ್ಟು 'ಭಾವರೂಪ ಅಜ್ಞಾನ' ಎಂಬ ಅರ್ಥವನ್ನು ಮಾತ್ರ ಈ ದರ್ಶನವು ಹೇಳುತ್ತದೆ.

ಮಧ್ವದರ್ಶನದಲ್ಲಿ 'ನಞ್'ಗೆ ಅಭಾವ ಎಂದು ಅರ್ಥ. ಎಂದರೆ, ಪರೋಕ್ಷಜ್ಞಾನಾಭಾವ ಮತ್ತು ಅಪರೋಕ್ಷಜ್ಞಾನಾಭಾವ ಎಂದು 'ನ ಜಾನಾಮಿ' ಯ ಅರ್ಥ. ಇವೆರಡರಲ್ಲಿ 'ಪರೋಕ್ಷಜ್ಞಾನಾಭಾವ' ಈ ಅರ್ಥವನ್ನು ಬಿಟ್ಟು 'ಅಪರೋಕ್ಷಜ್ಞಾನಾಭಾವ' ಎಂಬ ಅರ್ಥವನ್ನು ಈ ದರ್ಶನವು ಸ್ವೀಕರಿಸುತ್ತದೆ. ಅದ್ವೈತ ದರ್ಶನದಲ್ಲಿ ಎರಡು ಅರ್ಥಗಳ ತ್ಯಾಗ. ಮಧ್ವದರ್ಶನದಲ್ಲಿ ಒಂದು ಅರ್ಥದ ತ್ಯಾಗ.

**ಅತೋ ಮಮ ಮತೇಽಜ್ಞಾನಜ್ಞಾನದೌರ್ಘಟ್ಯಮೇವ ನ ॥ ೧೧೩॥**

**ಅರ್ಥ**-ಅತಃ= ಆದ್ದರಿಂದ, ಮಮ ಮತೇ= ನನ್ನ ಮತದಲ್ಲಿ, ಅಜ್ಞಾನಜ್ಞಾನ= ಅಜ್ಞಾನವನ್ನು ತಿಳಿಯಲು, ದೌರ್ಘಟ್ಯಂ= ದೌರ್ಘಟ್ಯವು= ಸಮರ್ಥನೆಗೆ ಅಡ್ಡಿಯು, ನ ಏವ= ಇಲ್ಲವೇ ಇಲ್ಲ.

**ಅನುವಾದ**- ಆದ್ದರಿಂದ ನನ್ನ ಮತದಲ್ಲಿ ಅಜ್ಞಾನದ ಜ್ಞಾನಕ್ಕೆ ದೌರ್ಘಟ್ಯವು ಇಲ್ಲವೇ ಇಲ್ಲ.

**ಭಾವವಿಲಾಸಿನೀ**– ಉಪಸಂಹರತಿ– **ಅತ ಇತಿ** ॥ ಅತಃ 'ಬ್ರಹ್ಮ ನ ಜಾನಾಮಿ' ಇತ್ಯತ್ರ ಪರೋಕ್ಷರೂಪಪ್ರತಿಯೋಗಿಜ್ಞಾನಾದೇರಂಗೀಕಾರಾದ್ ಅಪರೋಕ್ಷರೂಪತಜ್ಜ್ಞಾನ-ಮಾತ್ರನಿಷೇಧೇನ ವಿರೋಧಾಭಾವಾತ್ । ಮಮ ಮತೇ ಅಜ್ಞಾನಜ್ಞಾನದೌರ್ಘಟ್ಯಮಿತಿ ಪದಚ್ಛೇದಃ । ಅಜ್ಞಾನಜ್ಞಾನೇ ದೌರ್ಘಟ್ಯಂ ದುರ್ಘಟತ್ವಂ ಪ್ರತಿಯೋಗಿಜ್ಞಾನಮಂಗೀಕೃತ್ಯ ಪುನಸ್ತಸ್ಯೈವ ನಿಷೇಧೇ ಸತಿ ವಿರೋಧಃ । ಪ್ರತಿಯೋಗ್ಯಾದೇಃ ಪರೋಕ್ಷಜ್ಞಾನಮಂಗೀಕೃತ್ಯ ಬ್ರಹ್ಮಾಪರೋಕ್ಷಜ್ಞಾನಸ್ಯೈವ ನಿಷೇಧೇ ವಿರೋಧಗಂಧಸ್ಯಾಪ್ಯಭಾವಾದಿತಿ ಭಾವಃ ॥ ೧೧೩ ॥

**ವಿವರಣೆ**- ಅಜ್ಞಾನಜ್ಞಾನದ ದೌರ್ಘಟ್ಯವಿಚಾರವನ್ನು ಇಲ್ಲಿ ಉಪಸಂಹಾರ ಮಾಡುತ್ತಾರೆ. 'ಬ್ರಹ್ಮ ನ ಜಾನಾಮಿ' ಎಂಬ ಹೇಳಿಕೆಯು ಬ್ರಹ್ಮನ ಅಪರೋಕ್ಷಜ್ಞಾನವನ್ನು ಮಾತ್ರ ನಿಷೇಧಿಸುತ್ತದೆ, ಪರೋಕ್ಷಜ್ಞಾನವನ್ನು ನಿಷೇಧಿಸುವುದಿಲ್ಲ. ನಿಷೇಧಿಸಿದ್ದಿದ್ದರೆ ಪ್ರತಿಯೋಗಿ ಜ್ಞಾನವಿಲ್ಲದೇ ಅಭಾವಜ್ಞಾನವು ದುರ್ಘಟವಾಗುತ್ತಿತ್ತು. ನಿಷೇಧಿಸಲ್ಪಡದ ಪರೋಕ್ಷಜ್ಞಾನವು ಪ್ರತಿಯೋಗಿ. ಆದ್ದರಿಂದ 'ನ ಜಾನಾಮಿ' - ಈ ಪ್ರತೀತಿಗೆ ಅಪರೋಕ್ಷ ಜ್ಞಾನಾಭಾವವು ವಿಷಯ ಎಂದು ಪರಿಗಣಿಸಲು ವಿರೋಧಲೇಶವೂ ಇಲ್ಲ.

**ದೌರ್ಘಟ್ಯಮೇಕಂ ಭೂಷಾ ಚೇತ್ ಕಿಂ ನ ಸ್ಯಾದ್ಭೂಷಣಾಂತರಮ್ ।**
**ಪರಸ್ಯೋತ್ತರಮೇವಂ ಚ ಸ್ಯಾದಿತ್ಯೇವ ತದೀರಿತಮ್ ॥ ೧೧೪ ॥**

**ಅರ್ಥ**-ಏಕಂ= ಒಂದು, ದೌರ್ಘಟ್ಯಂ= ದೌರ್ಘಟ್ಯವು, ಭೂಷಾ ಚೇತ್= ಭೂಷಣ-ವಾಗುವುದಾದರೆ, ಭೂಷಣಾಂತರಮ್= ಇನ್ನೊಂದು ಭೂಷಣವು, ಕಿಂ ನ ಸ್ಯಾತ್= ಏಕೆ ಆಗಬಾರದು, ಏವಂಚ= ಈ ರೀತಿಯಾಗಿಯೂ, ಪರಸ್ಯ= ಪರವಾದಿಗೆ, ಉತ್ತರಂ ಸ್ಯಾತ್=

ಉತ್ತರವಾಗುತ್ತದೆ, ಇತ್ಯೇವ= ಎಂಬ ಕಾರಣದಿಂದಲೇ, ತತ್= ಅಜ್ಞಾನಜ್ಞಾನದ ದೌರ್ಘಟ್ಯವು, ಈರಿತಮ್= ಹೇಳಲ್ಪಟ್ಟಿತು.

**ಅನುವಾದ-** **ಒಂದು ದೌರ್ಘಟ್ಯವು ಭೂಷಣವಾದರೆ ಇನ್ನೊಂದು ದೌರ್ಘಟ್ಯವು ಏಕೆ ಇನ್ನೊಂದು ಭೂಷಣ ಆಗಬಾರದು? ಪರರಿಗೆ ಉತ್ತರವನ್ನು ಹೀಗೂ ಹೇಳಬಹುದು. ಈ ಅಭಿಪ್ರಾಯದಿಂದ ಅಜ್ಞಾನ ಜ್ಞಾನದೌರ್ಘಟ್ಯವು ಹಿಂದೆ ಹೇಳಲ್ಪಟ್ಟದೆ. (ಶ್ಲೋಕ ೧೦೫)**

**ಭಾವವಿಲಾಸಿನೀ–** ತರ್ಹಿ ತಥಾ ತಜ್ಞಾನದೌರ್ಘಟ್ಯಮಪಿ ಭೂಷಣಮಸ್ತ್ವಿದಮಿತಿ ಕಿಮರ್ಥಂ ಪ್ರಾಗುತ್ತರಂ ದತ್ತಮಿತ್ಯತಃ ಪರಸ್ಯೋತ್ತರಮ್ । ಏವಂಚ ವಕ್ತುಂ ಶಕ್ಯಮಿತಿ ಯೌಕ್ತ-ತ್ವಾದೇವೋಕ್ತಮ್ । ನತು ಸ್ವಮತರೀತ್ಯೇತ್ಯಾಹ–**ದೌರ್ಘಟ್ಯಮಿತಿ** ॥ **ಭೂಷಣಾಂತರಂ** ದೌರ್ಘಟ್ಯಾಖ್ಯಭೂಷಣಾಂತರಮ್ । ತಜ್ಞಾನದೌರ್ಘಟ್ಯಮ್ ॥ ೧೧೪ ॥

**ವಿವರಣೆ-** ಅಜ್ಞಾನದ ದುರ್ಘಟತ್ವವು ಭೂಷಣವಾಗಬಹುದಾದರೆ ಅಜ್ಞಾನಜ್ಞಾನದ ದುರ್ಘಟತ್ವವು ಇನ್ನೊಂದು ಭೂಷಣವಾಗಲೀ ಎಂಬ ಅನಿಷ್ಟಾಪಾದನೆಯನ್ನು ಹಿಂದೆ ಮಾಡಿದ್ದಾರೆ (ಶ್ಲೋಕ 105). ಈಗ ಅಜ್ಞಾನಜ್ಞಾನದಲ್ಲಿ ದೌರ್ಘಟ್ಯವೇ ಇಲ್ಲ ಎಂದು ಉಪಪಾದನೆಯನ್ನು ಮಾಡಿರುವುದರಿಂದ ಅದು ಭೂಷಣಾಂತರವಾಗಲೀ ಎಂದು ಹೇಗೆ ಆಪಾದನೆ ಮಾಡಿದರು? ಈ ಪ್ರಶ್ನೆಗೆ ಇಲ್ಲಿ ಉತ್ತರವನ್ನು ಹೇಳುತ್ತಾರೆ : ನಮ್ಮ ಮತದಲ್ಲಿ ಅಜ್ಞಾನದ ಜ್ಞಾನವು ಹುಟ್ಟಲು ಯಾವ ಅನುಪಪತ್ತಿಯೂ ಇಲ್ಲ. ಆದರೆ ಪರಮತದಲ್ಲಿ ಅಜ್ಞಾನಜ್ಞಾನವು ಹುಟ್ಟಲು ಅನುಪಪತ್ತಿಯು ಇದೆ. ಈ ದೌರ್ಘಟ್ಯವು ಅವರಿಗೆ ಇನ್ನೊಂದು ಭೂಷಣವಾಗಲಿ ಎಂದು ಆಪಾದನೆಯನ್ನು ಮಾಡಿದ್ದಾರೆ ಎಂದು ಅಭಿಪ್ರಾಯ.

**ಪರಾಸಿನಾಽತಿಕ್ರೂರೇಣ ಯಾ ಹ್ಯವಿದ್ಯಾ ಕ್ಷತಾಽಪಿ ನ ।**
**ಯತೋ ಬ್ರಹ್ಮಚಿತಾ ನಾಶೋ ನಾಜ್ಞಾನಸ್ಯ ಭವನ್ಮತೇ ॥ ೧೧೫ ॥**

**ಸ್ವಸಂತಾನಾಸಿನಾ ಮಂದಧಾರೇಣ ಚ್ಛಿದ್ಯತೇ ಕಿಲ ।**
**ಆವಿದ್ಯಕಮನೋರೂಪವಿದ್ಯಯಾ ನಾಶಕೀರ್ತನಾತ್ ॥ ೧೧೬ ॥**

**ಅರ್ಥ-**ಯತಃ= ಯಾವ ಕಾರಣದಿಂದ, ಭವನ್ಮತೇ= ನಿಮ್ಮ ಮತದಲ್ಲಿ, ಬ್ರಹ್ಮಚಿತಾ= ಬ್ರಹ್ಮಚೈತನ್ಯದಿಂದ, ಅಜ್ಞಾನಸ್ಯ= ಅಜ್ಞಾನಕ್ಕೆ, ನಾಶೋ ನ= ನಾಶವಿಲ್ಲವೋ, ಆದ್ದರಿಂದ, ಅತಿಕ್ರೂರೇಣ= ಅತ್ಯಂತ ಕ್ರೂರವಾದ, ಪರಾಸಿನಾ= ಬ್ರಹ್ಮಚೈತನ್ಯವೆಂಬ ಖಡ್ಗದಿಂದ, ಯಾ ಅವಿದ್ಯಾ= ಯಾವ ಅವಿದ್ಯೆಯು, ಕ್ಷತಾಽಪಿ ನ= ಗಾಯವನ್ನೂ ಹೊಂದುವುದಿಲ್ಲವೋ, ಅಂತಹ ಅವಿದ್ಯೆಯು, ಮಂದಧಾರೇಣ= ಮೊಂಡು ಅಲಗು ಇರುವ, ಸ್ವಸಂತಾನಾಸಿನಾ= ತನ್ನ(ಅವಿದ್ಯೆಯ) ಸಂತಾನವೇ ಆಗಿರುವ ಖಡ್ಗದಿಂದ, ಚ್ಛಿದ್ಯತೇ ಕಿಲ= ಕತ್ತರಿಸಲ್ಪಡುವುದಂತೆ!

ಆವಿದ್ಯಕಮನೋರೂಪವಿದ್ಯಯಾ= ಅವಿದ್ಯಾಕಾರ್ಯವಾದ ಮನೋವೃತ್ತಿರೂಪವಾದ ಜ್ಞಾನದಿಂದ, ನಾಶಕೀರ್ತನಾತ್= ನಾಶವನ್ನು ಹೇಳುವುದರಿಂದ.

**ಅನುವಾದ-** ಅತಿಕ್ರೂರವಾದ ಬ್ರಹ್ಮಚೈತನ್ಯವೆಂಬ ಶ್ರೇಷ್ಠವಾದ ಖಡ್ಗದಿಂದ ನಿನ್ನ ಅವಿದ್ಯೆಗೆ ಗಾಯವೂ ಆಗುವುದಿಲ್ಲ. ಏಕೆಂದರೆ ನಿನ್ನ ಮತದಲ್ಲಿ ಅಜ್ಞಾನಕ್ಕೆ ಬ್ರಹ್ಮಸ್ವರೂಪ ಚೈತನ್ಯದಿಂದ ನಾಶವನ್ನು ಅಂಗೀಕರಿಸುವುದಿಲ್ಲ. ಅಂತಹ ಅವಿದ್ಯೆಯು ತನ್ನದೇ ಸಂತಾನವಾದ ಮೊಂಡು ಖಡ್ಗದಿಂದ ಮರಣವನ್ನು ಹೊಂದುತ್ತದೆ! ಏಕೆಂದರೆ ನಿಮ್ಮ ಮತದಲ್ಲಿ ಅವಿದ್ಯಾ ಕಾರ್ಯವಾದ ಮನಸ್ಸಿನ ಪರಿಣಾಮ ರೂಪವಾದ ವೃತ್ತಿಜ್ಞಾನದಿಂದ ಅವಿದ್ಯೆಗೆ ನಾಶವನ್ನು ಅಂಗೀಕರಿಸುವಿರಿ.

**ಭಾವವಿಲಾಸಿನೀ–** ಯಚ್ಚೋಕ್ತಂ ಬ್ರಹ್ಮಸ್ವರೂಪಭೂತಂ ಜ್ಞಾನಮಜ್ಞಾನಾನಾಶಕಮ್ । ಕಿಂತು ಮನೋವೃತ್ತಿರೂಪಜ್ಞಾನಮೇವ ತನ್ನಾಶಕಮಿತಿ, ತದಪಿ ನ । **'ಮಾಯಾಂ ವ್ಯುದಸ್ಯ ಚಿಚ್ಛಕ್ತ್ಯಾ'** ಇತಿ ಸ್ಮೃತಿವಿರುದ್ಧತ್ವಾತ್ । ಯುಕ್ತಿವಿರುದ್ಧತ್ವಾಚ್ಚ ನೇತ್ಯಾಹ– **ಪರಾಸಿನೇತಿ** ॥ ಯಾ ಅವಿದ್ಯಾ ಅತಿಕ್ರೂರೇಣ ಅನಾದ್ಯನಂತತಯಾ ಭ್ರಮಪ್ರಮಾದಾದಿದೋಷೈರಚ್ಛೇದ್ಯೇನ ಪರಾಸಿನಾ ಪರ-ಮಾತ್ಮಸ್ವರೂಪಭೂತಜ್ಞಾನಾಸಿನಾ । ವೈರಿಖಡ್ಗೇನೇತಿ ಧ್ವನಿಃ । ಕ್ಷತಾ ನಿವರ್ತ್ಯಾಽಪಿ ನ ಘಾತವತೀತಿ ಧ್ವನಿಃ । ನೇದಂ ಮಯೋಚ್ಯತ ಇತ್ಯತ ಉಕ್ತಮ್– **ಯತ ಇತಿ** ॥ ಯತಃ ಯಸ್ಮಾತ್ । ಭವನ್ಮತೇ ಮಾಯಿಮತೇ ಬ್ರಹ್ಮಚಿತಾ ಬ್ರಹ್ಮಸ್ವರೂಪಜ್ಞಾನೇನಾಜ್ಞಾನಸ್ಯ ನಾಶೋ ನ । ತತಃ ಕ್ಷತಾ ನೇತಿ ಸಂಬಂಧಃ । ಸಾ ಅವಿದ್ಯಾ । ಸ್ವಸಂತಾನಾಸಿನಾ ಆವಿದ್ಯಕತ್ವಾತ್ ಸ್ವಸಂತಾನರೂಪಮನಸೋ ಯಾ ವೃತ್ತಿಃ ತದಾತ್ಮಕಾಸಿನಾ ಮಂದಧಾರೇಣ ಆಶುತರವಿನಾಶಿಜಡಜ್ಞಾನತಯಾ ಮಂದಧಾರೇಣ ಛಿದ್ಯತೇ ಕಿಲೇತಿ ಸಂಬಂಧಃ। ಲೀಲಯಾ ಸ್ವಪುತ್ರಧೃತಶಸ್ತ್ರೇಣೇತಿ ಧ್ವನಿಃ। ಅತ್ರಾಪಿ ತತ್ಸಮ್ಮತಿಮಾಹ– **ಆವಿದ್ಯಕೇತಿ** ॥ ವಿದ್ಯಯಾ ಜ್ಞಾನೇನ । ಜಡಾಜಡಯೋರ್ವಿರೋಧಾ-ದಜಡೇನಾನಶ್ಯಜ್ಜಡಮಜ್ಞಾನಂ ಸ್ವೋತ್ಪನ್ನೇನ ಜಡಮಾನಸಜ್ಞಾನೇನ ನಶ್ಯತೀತ್ಯೇತ-ನ್ಮಾಯಿಪ್ರಮೇಯಂ ವೈರಿಶಸ್ತ್ರೇಣಾಪ್ರತಿಹತೋ ರಾಜಾ ಸ್ವಪುತ್ರಧೃತಮಂದಧಾರಖಡ್ಗೇನ ಮೃತ ಇತಿವತ್ ಅಸಂಭಾವನಾಪರಾಹತಮಿತಿ ಸಾಹಿತ್ಯಮುದ್ರಯಾ ಧ್ವನಿತೋಽರ್ಥಃ ॥೧೧೫–೧೧೬॥

**ವಿವರಣೆ-** ಬ್ರಹ್ಮಸ್ವರೂಪಚೈತನ್ಯದಿಂದ ಅಜ್ಞಾನವು ನಾಶವಾಗುವುದಿಲ್ಲ; ಮನೋವೃತ್ತಿಯಿಂದ ನಾಶವಾಗುತ್ತದೆ ಎಂದು ಮಾಯಾವಾದಿಗಳು ಹೇಳುತ್ತಾರೆ. ಇದು ಸರಿಯಲ್ಲವೆಂದು ಇಲ್ಲಿ ಉಪಪಾದಿಸುತ್ತಾರೆ. 'ಮಾಯಾಂ ವ್ಯುದಸ್ಯ ಚಿಚ್ಛಕ್ತ್ಯಾ ಕೈವಲ್ಯೇ ಸ್ಥಿತ ಆತ್ಮನಿ' (1.7.23) ಈ ಭಾಗವತ ಶ್ಲೋಕವು ಬ್ರಹ್ಮಚೈತನ್ಯವು ಅಜ್ಞಾನವಿರೋಧಿ ಎಂದು ಹೇಳುತ್ತದೆ. ಇದಲ್ಲದೆ ಯುಕ್ತಿವಿರೋಧವೂ ಇದೆ. ಬ್ರಹ್ಮರೂಪವೇ ಆದ ಜ್ಞಾನವು ದೋಷಶೂನ್ಯವಾಗಿ ಅತ್ಯಂತ ಹರಿತವಾದ ಖಡ್ಗದಂತಿದೆ. ಅಂತಹ ಚೈತನ್ಯದಿಂದ ಅಜ್ಞಾನಕ್ಕೆ ನಾಶವನ್ನು ಮಾಯಾವಾದವು ಒಪ್ಪುವುದಿಲ್ಲ. ಆದರ ವೃತ್ತಿಜ್ಞಾನದಿಂದ ಅಜ್ಞಾನದ ನಾಶವನ್ನು ಹೇಳುತ್ತದೆ. ಆ ವೃತ್ತಿಯಾದರೂ ಅವಿದ್ಯೆಯ ಪರಿಣಾಮ. ಆದ್ದರಿಂದ ಇದು ಅವಿದ್ಯೆಯ

ಸಂತಾನ. ಆದ್ದರಿಂದಲೇ ಇದು ಮೊಂಡು ಕತ್ತಿ. ಮಾಯಾವಾದಿಗಳ ಚಿಂತನೆಯು ತನಗೆ ಅತ್ಯಂತವಿರೋಧಿಯಾದ ಶತ್ರುವಿನ ಕ್ರೂರಖಡ್ಗದಿಂದ ಗಾಯಗೊಳ್ಳದ ರಾಜನು ತನ್ನ ಮಗನ ಹಸ್ತದಲ್ಲಿರುವ ಆಟಿಕೆಯ ಖಡ್ಗದಿಂದ ಮೃತನಾಗುತ್ತಾನೆ ಎಂಬ ಹಾಸ್ಯಾಸ್ಪದ ಮಾತಿಗೆ ಸಮಾನ.

**ಮನಸೋಽಪಿ ಹಿ ಚಿದ್ಯೋಗಾಚ್ಛಕ್ತಿರರ್ಥಪ್ರಕಾಶನೇ ।**
**ಅಜ್ಞಾನನಾಶನೇ ಚ ಸ್ಯಾಚ್ಛಕ್ತಿಸ್ತದ್ಯೋಗತಃ ಪರಮ್ ॥ ೧೧೭ ॥**

**ಅರ್ಥ-**ಮನಸೋಽಪಿ= ಮನಸ್ಸಿಗೂ ಕೂಡ, ಅರ್ಥಪ್ರಕಾಶನೇ= ಅರ್ಥವನ್ನು ತೋರಿಸಲು, ಚಿದ್ಯೋಗಾತ್= ಚೈತನ್ಯಸಂಬಂಧದಿಂದಲೇ, ಶಕ್ತಿಃ ಹಿ= ಶಕ್ತಿಯುಂಟಾಗುವುದಷ್ಟೇ, ಪರಂ= ಹಾಗೆಯೇ, ಅಜ್ಞಾನನಾಶನೇ ಚ= ಅಜ್ಞಾನನಾಶವನ್ನು ಮಾಡುವುದಕ್ಕೂ, ತದ್ಯೋಗತಃ= ಆ ಚೈತನ್ಯಸಂಬಂಧದಿಂದಲೇ, ಶಕ್ತಿಃ ಸ್ಯಾತ್= ಶಕ್ತಿಯು ಉಂಟಾಗಬೇಕು.

**ಅನುವಾದ-** ಮನಸ್ಸಿಗೆ ಪದಾರ್ಥಗಳ ಜ್ಞಾನವನ್ನು ಉಂಟುಮಾಡುವ ಶಕ್ತಿಯು ಇದೆ. ಚೈತನ್ಯಸಂಬಂಧದಿಂದಲೇ ಈ ಶಕ್ತಿಯು ಉಂಟಾಗಿದೆ. ಈ ಚೈತನ್ಯಸಂಬಂಧದಿಂದಲೇ ಅಜ್ಞಾನವನ್ನು ನಾಶಮಾಡುವ ಶಕ್ತಿಯು ಮನಸ್ಸಿಗೆ ಉಂಟಾಗಬೇಕು.

**ಭಾವವಿಲಾಸಿನೀ–** ಸ್ವಪ್ರಕ್ರಿಯಾವಿರುದ್ಧಂ ಚೇದಮಿತಿ ಭಾವೇನೋಕ್ತಮ್– **ಮನಸೋಽಪೀತಿ** ॥ ಮನಸ ಅರ್ಥಪ್ರಕಾಶನಶಕ್ತಿಃ ಚಿದ್ಯೋಗಾತ್ ಸ್ವರೂಪಚಿತ್ಸಂವಲನಾತ್ । ಅಜ್ಞಾನನಾಶನೇ ಚ ಪರಂ ಕೇವಲಂ ತದ್ಯೋಗಾದೇವ ಶಕ್ತಿಃ ಸ್ಯಾತ್ । ತತ್ಪ್ರಕಾಶನಸಮರ್ಥಸ್ಯೈವ ತದಜ್ಞಾನನಿಬರ್ಹಣಸಾಮರ್ಥ್ಯೌಚಿತ್ಯಾತ್ । ಹೀತ್ಯನೇನ ಅನ್ಯಥಾ ಚಿತ್ಸಂವಲನಾಂಗೀಕಾರವೈಯರ್ಥ್ಯಂ ಸ್ಯಾದಿತಿ ಸೂಚಯತಿ ॥ ೧೧೭ ॥

**ವಿವರಣೆ-** ಚೈತನ್ಯವು ಅಜ್ಞಾನ ಅವಿರೋಧಿ ಎಂದು ಒಪ್ಪುವುದು ಅದ್ವೈತ ದರ್ಶನದ ಪ್ರಕ್ರಿಯೆಗೇ ವಿರುದ್ಧ ಎಂದು ಇಲ್ಲಿ ಉಪಪಾದಿಸುತ್ತಾರೆ. ಮನಸ್ಸಿಗೆ ಚೈತನ್ಯಸಂಬಂಧದಿಂದಲೇ ಅರ್ಥಪ್ರಕಾಶಕತ್ವವು ಇದೆ. ಆದ್ದರಿಂದ ಇದಕ್ಕೆ ಅಜ್ಞಾನವನ್ನು ನಾಶಪಡಿಸುವ ಸಾಮರ್ಥ್ಯವೂ ಚೈತನ್ಯಸಂಬಂಧದಿಂದಲೇ ಬರಬೇಕು. ಆಗ ಅರ್ಥಪ್ರಕಾಶಕತ್ವ ಮತ್ತು ಅಜ್ಞಾನನಾಶಕತ್ವಗಳು ಚೈತನ್ಯದ ಸ್ವಭಾವ, ಅಂತಹ ಚೈತನ್ಯಸಂಬಂಧದಿಂದ ಜಡವಾದ ಮನಸ್ಸಿಗೂ ಅರ್ಥಪ್ರಕಾಶಕತ್ವ ಮತ್ತು ಅಜ್ಞಾನನಾಶಕತ್ವಗಳು ಉಂಟಾಗುತ್ತದೆ ಎಂದು ಹೇಳುವುದು ಸಮಂಜಸ. ಹೀಗೆ ಮಾಡದಿದ್ದರೆ ಮನಸ್ಸಿಗೆ ಚಿತ್‌ನ ಸಂಬಂಧವನ್ನು ಅಂಗೀಕರಿಸುವುದು ವ್ಯರ್ಥವಾಗುತ್ತದೆ.

**ನ ಚೇದ್ವ್ಯಾಘ್ರಾದಿತುಲ್ಯಸ್ಯ ಜಡಸ್ಯ ದ್ವಿತಯಂ ಚ ನ ।**
**ಭೂತಾವಿಷ್ಟಾಚ್ಚ ಭೀತಸ್ಯ ಭೂತಾತ್ ಕಥಮಭೀತತಾ ॥ ೧೧೮ ॥**

**ಅರ್ಥ**-ನ ಚೇತ್= ಚೈತನ್ಯಸಂಬಂಧದಿಂದಲೇ ಘಟವು ಅರ್ಥಪ್ರಕಾಶನ ಶಕ್ತಿಯನ್ನು ಮತ್ತು ಅಜ್ಞಾನನಾಶನಶಕ್ತಿಯನ್ನು, ಹೊಂದದಿದ್ದರೆ, ಘಟಾದಿತುಲ್ಯಸ್ಯ= ಘಟಾದಿಗಳಿಗೆ ಸಮಾನವಾದ, ಜಡಸ್ಯ= ಜಡವಾದ ಮನೋವೃತ್ತಿಗೆ, ದ್ವಿತಯಂ ಚ= ಅರ್ಥಪ್ರಕಾಶಕತ್ವ ಮತ್ತು ಅಜ್ಞಾನನಾಶಕತ್ವ ಇವೆರಡೂ, ನ= ಇರಲಾರದು. ಭೂತಾವಿಷ್ಟಾತ್ ಚ= ಭೂತಾವೇಷವುಳ್ಳ ಮನುಷ್ಯನಿಗೆ, ಭೀತಸ್ಯ= ಹೆದರುವವನಿಗೆ, ಭೂತಾತ್= ಭೂತದಿಂದ, ಅಭೀತತಾ ಕಥಮ್= ಭಯಾಭಾವವು ಹೇಗೆ?

**ಅನುವಾದ-** ಮನಸ್ಸು ಜಡ. ಅದಕ್ಕೆ ಚೈತನ್ಯಸಂಬಂಧದಿಂದಲೇ ಅರ್ಥಪ್ರಕಾಶನ ಶಕ್ತಿಯು ಉಂಟಾಗುತ್ತದೆ ಎಂದು ಅದ್ವೈತದರ್ಶನದ ಅಭಿಪ್ರಾಯವಿದೆ. ಈ ಸಂಬಂಧದಿಂದಲೇ ಮನಸ್ಸಿಗೆ ಅಜ್ಞಾನವನ್ನು ನಾಶಪಡಿಸುವ ಶಕ್ತಿಯೂ ಉಂಟಾಗಲಿ ಎಂದು ಸಲಹೆಯನ್ನು ಕೊಡಲಾಗಿದೆ. ಈ ಸಲಹೆಯನ್ನು ಒಪ್ಪದಿದ್ದರೆ ಅರ್ಥಪ್ರಕಾಶನ ಶಕ್ತಿಯೂ ಉಂಟಾಗದಿರಲಿ ಎಂದು ಪ್ರಸಂಗವನ್ನು ಹೇಳಲು ಅವಕಾಶವಿದೆ. ಆದ್ದರಿಂದ ಮನಸ್ಸಿಗೆ ಚೈತನ್ಯಸಂಬಂಧದಿಂದ ಎರಡು ಶಕ್ತಿಗಳು ಇರಬೇಕು. ಅಥವಾ ಎರಡೂ ಇರಬಾರದು.

ಭೂತಾವೇಶವಿರುವ ಮನುಷ್ಯನಿಗೆ ಹೆದರುವ ಸ್ವಭಾವದವರಿಗೆ ಭೂತದಿಂದ ನಿರ್ಭೀತಿಯೇ?

**ಭಾವವಿಲಾಸಿನೀ–** ವಿಪಕ್ಷೇ ಬಾಧಕಮಾಹ– ನ **ಚೇದಿತಿ** ॥ ನಚೇಚ್ಚಿದಾಹಿತಶಕ್ತಿದ್ವಯಂ ನ ಚೇತ್ ಘಟಾದಿತುಲ್ಯಸ್ಯ ಜಡಸ್ಯ ಮನಃಪರಿಣಾಮಸ್ಯ ದ್ವಿತಯಮ್ ಅರ್ಥಪ್ರಕಾಶನಶಕ್ತಿಃ ಅಜ್ಞಾನಾ-ನಿವರ್ತನಶಕ್ತಿಶ್ಚೇತಿ ದ್ವಯಮ್ । ಅನೇನ ವಿಮತೋ ಮನೋವೃತ್ತ್ಯಂತರ್ಗತಾಚಿದಂಶಃ ನೋಕ್ತಶಕ್ತಿದ್ವಯವಾನ್ ಜಡತ್ವಾದ್ ಘಟವದಿತ್ಯನುಮಾನರೂಪಬಾಧಕಂ ದರ್ಶಯತಿ । ಲೌಕಿಕದೃಷ್ಟಾಂತವಿರೋಧಂ ಚ ದರ್ಶಯತಿ– **ಭೂತೇತಿ** ॥ ಭೂತೇನ ಪಿಶಾಚೇನಾವಿಷ್ಟಾತ್ ಪುರುಷಾದ್ ಭೀತಃ । ಅನ್ಯತ್ ಸ್ಪಷ್ಟಮ್ । ಏವಂ ಚಿದಾವಿಷ್ಟಮನೋನಷ್ಟಮಜ್ಞಾನಂ ಕಥಂ ಮುಖ್ಯಚಿತೋ ನ ನಶ್ಯತೀತಿ ದಾರ್ಷ್ಟಾಂತಿಕಮಪಿ ಸೂಚಯತಿ । ತಸ್ಮಾದನಾದಿನಿತ್ಯಸರ್ವ-ವಿಷಯಕಸ್ವಭಜಕಸಾರ್ವಜ್ಞಪ್ರದದಿವ್ಯಜ್ಞಾನರೂಪಸ್ಯ ಬ್ರಹ್ಮಣಃ ಅಜ್ಞಾನಾವಿನಾಶಕತ್ವಾಂಗೀಕರಣಂ ಸ್ಮೃತಿ ಸ್ವಪ್ರಕ್ರಿಯಾ-ಯುಕ್ತಿ-ಲೌಕಿಕದೃಷ್ಟಾಂತವಿರುದ್ಧತ್ವಾ- ದುಪೇಕ್ಷಣೀಯಮೇವ । ನತ್ತ್ವವಿದ್ಯಾಯಾಮಸಂಭಾವಿತಶಕ್ತಿಘಟನಯಾ ಸಂಘಟನೀಯಮಿತಿ ಭಾವಃ ॥ ೧೧೮ ॥

**ವಿವರಣೆ-** ಜಡವಾದ ಘಟಾದಿವೃತ್ತಿಯಲ್ಲಿ ಚೈತನ್ಯಸಂಬಂಧವು ಬರುವುದರಿಂದ ಚೈತನ್ಯಾರೂಢವಾದ ವೃತ್ತಿಯಿಂದ ಅರ್ಥಪ್ರಕಾಶವು ಮತ್ತು ಅಜ್ಞಾನ ನಿವೃತ್ತಿಯೂ ಆಗುತ್ತದೆ ಎಂದು ಅದ್ವೈತ ದರ್ಶನವು ಒಪ್ಪುತ್ತದೆ. ಯಾವ ಚೈತನ್ಯಸಂಬಂಧದಿಂದ ಜಡವಾದ ವೃತ್ತಿಗೆ ಈ ಎರಡು ಧರ್ಮಗಳು ಬರುತ್ತವೆಯೋ ಅಂತಹ ಚೈತನಕ್ಕೆ ಅಜ್ಞಾನನಾಶಕತ್ವವನ್ನು

ಅಂಗೀಕರಿಸದಿದ್ದರೆ ಅಥವಾ ಅಜ್ಞಾನವಿರೋಧವನ್ನು ಅಂಗೀಕರಿಸದಿದ್ದರೆ ಪಿಶಾಚಿ ಹಿಡಿದ ಮನುಷ್ಯನಿಗೇ ಹೆದರುವ ವ್ಯಕ್ತಿಯು ಪಿಶಾಚಿಗೆ ಹೆದರುವುದಿಲ್ಲ ಎಂದು ಹೇಳಿದರೆ ಹೇಗೆ ಅಸಂಗತವಾಗುತ್ತದೆಯೋ ಹಾಗೆ ಅಸಂಗತವಾಗುತ್ತದೆ.

**ಸಿದ್ಧಂ ಪಶ್ಯತಿ ಚೇದ್ ಬ್ರಹ್ಮ ಜಗನ್ನ ಭ್ರಮಜಂ ತವ ।**
**ಕಲ್ಪಯಿತ್ವೈವ ಪಶ್ಯೇಚ್ಚೇತ್ ಸರ್ವಂ ಸ್ಯಾತ್ ಸಾರ್ವಕಾಲಿಕಮ್ ॥**
**ಆಮುಕ್ತೇಃ ಕಲ್ಪಕಾಜ್ಞಾನಬ್ರಹ್ಮಚೈತನ್ಯಯೋಃ ಸ್ಥಿತೇಃ ॥ ೧೧೯ ॥**

**ಅರ್ಥ**-ತವ ಬ್ರಹ್ಮ= ನಿನ್ನ ಬ್ರಹ್ಮನು, ಸಿದ್ಧಂ= ಮೊದಲೇ ಇರುವ ಜಗತ್ತನ್ನು, ಪಶ್ಯತಿ= ನೋಡುವುದಾದರೆ, ಜಗತ್= ಜಗತ್ತು, ಭ್ರಮಜಂ ನ= ಭ್ರಮಜನ್ಯವಲ್ಲ, ಕಲ್ಪಯಿತ್ವೈವ= ಕಲ್ಪನೆ ಮಾಡಿಯೇ, ಪಶ್ಯೇತ್ ಚೇತ್= ನೋಡುವುದಾದರೆ, ಆಮುಕ್ತೇಃ= ಮೋಕ್ಷದವರೆಗೂ, ಕಲ್ಪಕಾಜ್ಞಾನಬ್ರಹ್ಮಚೈತನ್ಯಯೋಃ= ಕಲ್ಪಕಾಜ್ಞಾನ ಮತ್ತು ಬ್ರಹ್ಮಚೈತನ್ಯಗಳಿಗೆ, ಸ್ಥಿತೇಃ= ಸ್ಥಿತಿಯು ಇರುವುದರಿಂದ, ಸರ್ವಂ= ಎಲ್ಲ ಜಗತ್ತೂ, ಸಾರ್ವಕಾಲಿಕಮ್ ಸ್ಯಾತ್= ಸಾರ್ವಕಾಲಿಕವಾಗಬೇಕಾಗುತ್ತದೆ.

**ಅನುವಾದ**- ಅದ್ವೈತದರ್ಶನದ ಬ್ರಹ್ಮನು ಮೊದಲು ಸಿದ್ಧವಾದ ಜಗತ್ತನ್ನೇ ನೋಡುವುದಾದರೆ ಜಗತ್ತು ಬ್ರಹ್ಮನ ಭ್ರಮೆಯಿಂದ ಜನ್ಯವಲ್ಲ ಎಂದಾಗುತ್ತದೆ. ಕಲ್ಪನೆ ಮಾಡಿಯೇ ನೋಡುವುದಾದರೆ ಕಲ್ಪಕವಾದ ಅಜ್ಞಾನ ಮತ್ತು ಬ್ರಹ್ಮಚೈತನ್ಯಗಳು ಮೋಕ್ಷದವರೆಗೂ ಇರುವುದರಿಂದ ಜಗತ್ತು ನಿತ್ಯವಾಗಬೇಕಾಗುತ್ತದೆ.

**ಭಾವವಿಲಾಸಿನೀ**– ಬ್ರಹ್ಮಣಃ ಅಜ್ಞಾನಾಖ್ಯದೋಷಂ ಪರಿಹೃತ್ಯ ತತ ಏವ ಪರಿಹೃತಮಪಿ ಭ್ರಾಂತಿಲಕ್ಷಣದೋಷಂ ಯುಕ್ತ್ಯಂತರೇಣಾಪಿ ಪರಿಹರತಿ– **ಸಿದ್ಧಮಿತಿ** ॥ ತವ ಬ್ರಹ್ಮ ಸಿದ್ಧಂ ಪೂರ್ವಂ ವಿದ್ಯಮಾನಂ ಜಗದಿತಿ ಸಂಬಂಧಃ । ಭ್ರಮಜಂ ಬ್ರಹ್ಮಣೋ ಭ್ರಮಜನ್ಯಮ್ । ಕಲ್ಪಯಿತ್ವೈವ ಪ್ರಾಗವಿದ್ಯಮಾನಂ ಜಗತ್ ಸ್ವಭ್ರಾನ್ತ್ಯಾ ಕಲ್ಪಯಿತ್ವೈವೇತ್ಯರ್ಥಃ । ಸರ್ವಂ ಜಗತ್ ಸಾರ್ವಕಾಲಿಕಂ ವಿದ್ಯಮಾನಂ ಸ್ಯಾತ್ । ತದೇವೋಪಪಾದಯತಿ– **ಆಮುಕ್ತೇರಿತಿ** ॥ ಕಲ್ಪಕಯೋಃ ದೋಷ-ರೂಪತಯಾ ಭ್ರಮರೂಪತಯಾ ಚ ಕಲ್ಪಕಯೋಃ ಜಗತ್ಸಂಪಾದಕಯೋರಜ್ಞಾನ-ಬ್ರಹ್ಮಚೈತನ್ಯಯೋಃ । ಅಜ್ಞಾನಂ ಚ ಬ್ರಹ್ಮಚೈತನ್ಯಂ ಚೇತಿ ವಿಗ್ರಹಃ ॥ ೧೧೯ ॥

**ವಿವರಣೆ**- ಬ್ರಹ್ಮನು ಮೊದಲೇ ಸಿದ್ಧವಾದ ಎಂದರೆ ಇರುವ ಜಗತ್ತನ್ನು ನೋಡುತ್ತಾನೆ ಎಂದರೆ ಬ್ರಹ್ಮಕ್ಕಿಂತಲೂ ಮೊದಲೇ ಇರುವ ಜಗತ್ತು ಅವನ ಭ್ರಮೆಯಿಂದ ಜನ್ಯವಲ್ಲ; ಕಲ್ಪನೆ ಮಾಡಿಯೇ ನೋಡುವುದಾದರೆ ಬ್ರಹ್ಮಚೈತನ್ಯ ಮತ್ತು ಕಲ್ಪನೆಗೆ ಕಾರಣವಾದ ಅಜ್ಞಾನಗಳು ಯಾವಾಗಲೂ ಇರುವುದರಿಂದ ಜಗತ್ತು ಯಾವಾಗಲೂ ಇರಬೇಕಾಗುತ್ತದೆ. ಮೋಕ್ಷದಲ್ಲಿ ಅಜ್ಞಾನ ನಾಶವನ್ನು ಒಪ್ಪಿದರೆ, ಮೋಕ್ಷದವರೆಗೂ ಜಗತ್ತು ಇರಬೇಕಾದೀತು.

**ವಿಶೇಷವಿಚಾರ-** ಅನಾದಿಭಾವರೂಪವಾದ ಅಜ್ಞಾನಕ್ಕೆ ಬ್ರಹ್ಮನಿಗೆ ಹೇಗೆ ಹಾಗೆ ಜ್ಞಾನದಿಂದ ನಿವೃತ್ತಿಯು ಉಂಟಾಗಲು ಸಾಧ್ಯವಿಲ್ಲ. ಆದ್ದರಿಂದ ಮೋಕ್ಷವೇ ಉಂಟಾಗುವುದಿಲ್ಲ. ಆದ್ದರಿಂದ ಜಗತ್ತು ಸಾರ್ವಕಾಲಿಕವಾಗಬೇಕು ಎಂದು ಆಪಾದನೆಯ ಅಭಿಪ್ರಾಯ.

**ಅತೋ ದೈನಂದಿನಲಯಃ ಕಲ್ಪಾಂತಪ್ರಲಯೋಽಪಿ ವಾ ।**
**ಕಥಂ ಸ್ಯಾತ್ತಸ್ಯ ನಿತ್ಯಸ್ಯ ದರ್ಶನಸ್ಯ ನಹಿ ಕ್ಷಯಃ ॥ ೧೨೦ ॥**

**ಅರ್ಥ-**ಅತಃ= ಆದ್ದರಿಂದ, ದೈನಂದಿನಲಯಃ= ಬ್ರಹ್ಮದೇವರ ಪ್ರತಿದಿನದಲ್ಲಿ ಉಂಟಾಗುವ ಪ್ರಳಯವು, ಕಲ್ಪಾಂತಪ್ರಲಯೋಽಪಿ ವಾ= ಅಥವಾ ಬ್ರಹ್ಮಕಲ್ಪದ ಕೊನೆಯಲ್ಲಿ ಉಂಟಾಗುವ ಮಹಾಪ್ರಳಯವು, ಕಥಂ ಸ್ಯಾತ್= ಹೇಗೆ ಉಂಟಾಗುತ್ತದೆ? ನಿತ್ಯಸ್ಯ= ನಿತ್ಯವಾದ, ತಸ್ಯ ದರ್ಶನಸ್ಯ= ಆ ಭ್ರಮರೂಪವಾದ ಜ್ಞಾನಕ್ಕೆ, ಕ್ಷಯಃ= ನಾಶವು, ನಹಿ= ಇಲ್ಲವಷ್ಟೇ.

**ಅನುವಾದ-** ಆದ್ದರಿಂದ ಬ್ರಹ್ಮದೇವರ ದೈನಂದಿನ ಪ್ರಳಯ ಮತ್ತು ಬ್ರಹ್ಮಕಲ್ಪದಲ್ಲಿ ಉಂಟಾಗುವ ಮಹಾಪ್ರಳಯವು ಹೇಗೆ ಉಂಟಾಗುತ್ತದೆ? ಏಕೆಂದರೆ ಪ್ರಪಂಚದ ಭ್ರಮೆಗೆ, ಅದು ನಿತ್ಯವಾದ ಕಾರಣದಿಂದ, ನಾಶವಿಲ್ಲವಷ್ಟೇ?

**ಭಾವವಿಲಾಸಿನೀ–** ಅತಃ ಕಲ್ಪಕಸದ್ಭಾವಾತ್ । ದೈನಂದಿನಲಯಃ ಚತುರ್ಮುಖಸ್ಯ ದಿನೇ ಜಾಯಮಾನೋ ಲಯಃ । ಕಲ್ಪಾಂತಲಯಃ ಬ್ರಹ್ಮಕಲ್ಪಪ್ರಲಯಃ । ತಸ್ಯ ಕಲ್ಪಕಸ್ಯ ನಿತ್ಯಸ್ಯ ಬ್ರಹ್ಮ-ಸ್ವರೂಪತಯಾ ನಿತ್ಯಸ್ಯ ದರ್ಶನಸ್ಯ ಚೈತನ್ಯರೂಪಜಗದ್ಭ್ರಮಸ್ಯ ಕ್ಷಯೋ ನಹೀತಿ ಸಂಬಂಧಃ । ಹೀತ್ಯನೇನ ಭ್ರಾಂತಿಸಿದ್ಧಂ ವಸ್ತು ಭ್ರಮನಿವೃತ್ತ್ಯೈವ ನಿವರ್ತತೇ । ನಾನ್ಯಥೇತಿ ಸೂಚಯತಿ ॥೧೨೦॥

**ವಿವರಣೆ-** ಭ್ರಾಂತಿಸಿದ್ಧವಾದ ವಸ್ತುವು ಭ್ರಾಂತಿಯ ನಿವೃತ್ತಿಯಿಂದಲೇ ನಿವೃತ್ತವಾಗಬೇಕು. ಜಗದ್‌ಭ್ರಮೆಯು ಬ್ರಹ್ಮಚೈತನ್ಯರೂಪ. ಬ್ರಹ್ಮಚೈತನ್ಯವು ನಿತ್ಯ. ಆದ್ದರಿಂದ ಜಗದ್‌ಭ್ರಮೆಗೆ ನಿವೃತ್ತಿಯೇ ಇಲ್ಲ. ಆದ್ದರಿಂದ ಜಗತ್ತು ಯಾವಾಗಲೂ ಇರಲೇಬೇಕು. ಆದ್ದರಿಂದ ಪ್ರಲಯಕ್ಕೆ ಅವಕಾಶವೇ ಇಲ್ಲ.

**ಭ್ರಮಕಲ್ಪ್ಯಂ ಹಿ ಸರ್ವಂ ತೇ ಕಾಲಾದೃಷ್ಟಾದಿಕಂ ಜಗತ್ ।**
**ಭ್ರಮಸ್ಯ ನಿತ್ಯಸಿದ್ಧತ್ವಾತ್ ಕಿಂಕಿಂ ನ ಸ್ಯಾತ್ ಸದಾ ತವ ॥ ೧೨೧ ॥**

**ಅರ್ಥ-**ತೇ= ನಿಮ್ಮ ದರ್ಶನದಲ್ಲಿ, ಕಾಲಾದೃಷ್ಟಾದಿಕಂ= ಕಾಲ, ಅದೃಷ್ಟ ಮೊದಲಾದ, ಸರ್ವಂ ಜಗತ್= ಇಡೀ ಜಗತ್ತು, ಭ್ರಮಕಲ್ಪ್ಯಂ ಹಿ= ಭ್ರಮದಿಂದ ಕಲ್ಪ್ಯವಷ್ಟೇ, ಭ್ರಮಸ್ಯ= ಭ್ರಮೆಗೆ, ನಿತ್ಯಸಿದ್ಧತ್ವಾತ್= ಯಾವಾಗಲೂ ಸ್ಥಿತಿಯು ಇರುವುದರಿಂದ, ತವ= ನಿಮ್ಮ ದರ್ಶನದ ಪ್ರಕಾರ, ಕಿಂಕಿಮ್= ಯಾವ ಯಾವ ವಸ್ತುಗಳು, ಸದಾ= ಸರ್ವಕಾಲದಲ್ಲೂ, ನ ಸ್ಯಾತ್?= ಇರದಿರಲು ಸಾಧ್ಯ?

**ಅನುವಾದ-** ಕಾಲ, ಅದೃಷ್ಟ ಮೊದಲಾದ ಸಮಸ್ತ ಜಗತ್ತು ಭ್ರಮದಿಂದಲೇ ಕಲ್ಪನೀಯವಷ್ಟೇ. ಆ ಭ್ರಮವಾದರೂ ನಿತ್ಯಸಿದ್ಧ. ಆ ನಿನ್ನ ಮತದಂತೆ ಯಾವ ಕಾಲದಲ್ಲಿ ಯಾವುದು ಇಲ್ಲ?

**ಭಾವವಿಲಾಸಿನೀ-** ಕಾಲಾದೃಷ್ಟಾದಿಸಾಧಾರಣಕಾರಣಾಭಾವಾನ್ನ ಭ್ರಮಸ್ಯ ಸದಾತನತ್ವಮಿತಿ ಶಂಕಾಂ ಪರಿಹರನ್ನುಪಸಂಹರತಿ- **ಭ್ರಮಕಲ್ಪ್ಯಮಿತಿ** ॥ ತೇ ಮತೇ ಕಾಲಾದೃಷ್ಟಾದಿಕಂ ಸರ್ವಂ ಜಗದ್ಭ್ರಮಕಲ್ಪ್ಯಂ ಹಿ । ಭ್ರಮಸ್ಯ ಚ ನಿತ್ಯಸಿದ್ಧತ್ವಾತ್ ಕಿಂ ನ ಸ್ಯಾತ್? ಸರ್ವಮಪಿ ಸ್ಯಾದಿತ್ಯರ್ಥಃ । ಜಗದಿವ ಕಾಲಾದೃಷ್ಟಾದಿಕಮಪಿ ಭ್ರಮೇಣೈವ ಕಲ್ಪನೀಯಂ ಚೇತ್, ತದಪಿ ಯಾವದ್ಭ್ರಮ-ಮನುವರ್ತಮಾನಮಸ್ತ್ಯೇವೇತಿ ಕಥಂ ತದಭಾವ ಇತಿ ಭಾವಃ ॥ ೧೨೧ ॥

**ವಿವರಣೆ-** ಭ್ರಮೆಯು ನಿತ್ಯವಾದರೂ, ಸಕಲವಸ್ತುಗಳ ಉತ್ಪತ್ತಿಗೆ ಕಾಲ ಮತ್ತು ಅದೃಷ್ಟಗಳು ಸಾಧಾರಣಕಾರಣ. ಅವು ಇಲ್ಲದಿರುವಾಗ ಜಗತ್ತು ಇರುವುದಿಲ್ಲ. ಆದ್ದರಿಂದ ಜಗತ್ತು ಯಾವಾಗಲೂ ಇರುವ ಪ್ರಸಂಗವು ಇಲ್ಲ? ಈ ಪ್ರಶ್ನೆಗೆ ಈ ಶ್ಲೋಕದಲ್ಲಿ ಉತ್ತರವನ್ನು ಹೇಳಿದ್ದಾರೆ. ನಿತ್ಯವಾದ ಭ್ರಮದಿಂದ ಜಗತ್ತಿನ ಭಾಗವಾದ ಕಾಲಾದೃಷ್ಟಾದಿಗಳು ಕಲ್ಪನೀಯವೇ ಆಗಿವೆ. ಆದ್ದರಿಂದ ಎಲ್ಲಿಯವರೆಗೆ ಭ್ರಮೆಯು ಇರುತ್ತದೆಯೋ, ಅಲ್ಲಿಯವರೆಗೆ ಕಾಲ ಅದೃಷ್ಟಗಳು ಇಲ್ಲದಿರುವ ಕಾಲವೇ ಇಲ್ಲ.

**ಮಾಯಾಂ ತು ಪ್ರಕೃತಿಂ ವಿದ್ಯಾನ್ಮಾಯಿನಂ ತು ಮಹೇಶ್ವರಮ್ ।**
**ಗೌರಿಯಂ ವಾಕ್ ಶುನೀ ನೇಯಂ ಪುಚ್ಛಂ ತಸ್ಯಾ ವಿಚಾರಯ ॥**
**ಯತಃ ಪ್ರಕೃತಿರೇವೈಷಾ ಮಾಯಾ ಪುಚ್ಛೇಽತ್ರ ಗೀಯತೇ ॥ ೧೨೨ ॥**

**ಅರ್ಥ**-ಮಾಯಾಂ= ಮಾಯೆಯನ್ನು, ಪ್ರಕೃತಿಂ ತು= ಪ್ರಕೃತಿ ಎಂದೇ, ವಿದ್ಯಾತ್= ತಿಳಿಯಬೇಕು, ಮಹೇಶ್ವರಂ ತು= ಮಹೇಶ್ವರನನ್ನಾದರೂ, ಮಾಯಿನಂ= ಮಾಯೆವುಳ್ಳವನು ಎಂದು, ವಿದ್ಯಾತ್= ತಿಳಿಯಬೇಕು, ಇಯಂ ವಾಕ್= ಈ ವಾಕ್ಯವು, ಗೌಃ= ಹಸು, ಇಯಂ= ಈ ವಾಕ್ಯವು, ಶುನೀ ನ= ಹೆಣ್ಣು ನಾಯಿಯಲ್ಲ, ತಸ್ಯಾಃ= ಅದರ, ಪುಚ್ಛಂ= ಬಾಲವನ್ನು (ವಾಕ್ಯಶೇಷವನ್ನು), ವಿಚಾರಯ= ವಿಮರ್ಶೆ ಮಾಡು, ಯತಃ= ಏಕೆಂದರೆ, ಪುಚ್ಛೇ ಅತ್ರ= ಈ ಬಾಲದಲ್ಲಿ (ವಾಕ್ಯಶೇಷದಲ್ಲಿ), ಏಷಾ ಪ್ರಕೃತಿರೇವ= ಈ ಪ್ರಕೃತಿಯೇ, ಮಾಯಾ= ಮಾಯೆ ಎಂದು, ಗೀಯತೇ= ಹೇಳಲ್ಪಡುತ್ತದೆ.

**ಅನುವಾದ-** 'ಮಾಯಾಂ ತು ಪ್ರಕೃತಿಂ ವಿದ್ಯಾನ್ಮಾಯಿನಂ ತು ಮಹೇಶ್ವರಮ್' - ಈ ವಾಕ್ಯವು ಹಸು ನಾಯಿಯಲ್ಲ. ಅದರ ಬಾಲವನ್ನು (ವಾಕ್ಯಶೇಷವನ್ನು) ವಿಮರ್ಶೆ ಮಾಡು. ಏಕೆಂದರೆ ಈ ವಾಕ್ಯಶೇಷದಲ್ಲಿ ಈ ಪ್ರಕೃತಿಯೇ ಮಾಯಾಶಬ್ದದಿಂದ ಹೇಳಲ್ಪಡುತ್ತದೆ.

**ಭಾವವಿಲಾಸಿನೀ**– 'ಮಾಯಿನಂ ತು ಮಹೇಶ್ವರಮ್' ಇತಿ ಶ್ರುತ್ಯಾ ಬ್ರಹ್ಮಣಿ ಮಾಯಾಶ್ರವಣಾತ್ ಸರ್ವಮಿದಂ ಕಲ್ಪಿತ ಇತಿ ಶಂಕಾಂ ಸೋಪಹಾಸಂ ಪರಿಹರತಿ– **ಮಾಯಾಂ ತ್ವಿತಿ** ॥ **'ಮಾಯಾಂ ತು ಪ್ರಕೃತಿಂ ವಿದ್ಯಾನ್ಮಾಯಿನಂ ತು ಮಹೇಶ್ವರಮ್'** ಇತಿ ಇಯಂ ವಾಗ್ ಗೌಃ ಗೃಷ್ಟಿಃ, ಶುನೀ ಇಯಂ ವಾಕ್ ನ । ತತ್ರ ಹೇತುಸೂಚನಾಯ ಗೃಷ್ಟಿರಿತ್ಯನುಕ್ತ್ವಾ ಗೌರಿತ್ಯೇವೋಕ್ತಮ್ । ಗೋಶಬ್ದಸ್ಯ ಗೃಷ್ಟಿವಾಚೋರುಭಯೋರಪಿ ಸಮತ್ವಾತ್ ಗೋತ್ವಮೇವ ಸಂಭಾವಿತಮ್, ನ ಶುನೀತ್ವಮಿತಿ ಭಾವಃ । ಅತ ಏವ ಪರಮಾತ್ಮನಃ ಜಗತ್ಕಾರಣೀಭೂತಪ್ರಕೃತಿ ನಿಯಾಮಕತ್ವಾಖ್ಯಮಹಿಮಾಮೃತಮೇವ ದೋಗ್ಧಿ, ನತು ಸ್ವದಂಶನೇನ ಭಗವತಿ ಅಜ್ಞಾನರೂಪವ್ರಣಂ ಸಾಧಯತೀತಿ ಧ್ವನಿತಮ್ । ನನು ಶ್ಲೋಕರೂಪಸ್ಯ ವಾಕ್ಯಸ್ಯ ಪಾದಚತುಷ್ಟಯವತ್ತ್ವಾತ್ ಕಥಂ ಗೋತ್ವಮೇವ ನಿರ್ಣೀಯತೇ? ಇತ್ಯತ ಆಹ– **ಪುಚ್ಛಮಿತಿ** ॥ ತಸ್ಯಾ ವಾಚಃ ಪುಚ್ಛಂ ಪುಚ್ಛವತ್ ಪೃಷ್ಠಲಂಬಿನಂ ಅಂಶಮ್ । 'ಮಾಯಾಂ ತು ಪ್ರಕೃತಿಂ ವಿದ್ಯಾದ್' ಇತಿ ವಾಕ್ಯಶೇಷಮಿತಿ ಯಾವತ್ । ಯತಃ ಪುಚ್ಛೇ ಏಷಾ ಮಾಯಾ ಪ್ರಕೃತಿರೇವ ಪ್ರಗೀಯತೇ । ಏವಕಾರೇಣ ಪರಾಭಿಲಷಿತಾನಿರ್ವಾಚ್ಯಾವಿದ್ಯಾಂ ವ್ಯಾವರ್ತಯತಿ । ಏವಂಚೇದಂ ಪುಚ್ಛಂ ಉಕ್ತಭಗವನ್ಮಹಿಮಾನುಕೂಲತಯಾ ಋಜ್ವೇವ, ನತು ಭಗವನ್ಮಹಿಮ್ನೋ ವಕ್ರಮ್ । ಏವಂಚ ಪುಚ್ಛವಿಚಾರಣೇ ಋಜು ಪುಚ್ಛತಯಾ ಗೋತ್ವಮೇವಾಸ್ಯಾಶ್ಶೋಭತೇ, ನತು ಶುನೀತ್ವಮ್, ತಲ್ಲಕ್ಷಕವಕ್ರಪುಚ್ಛಾಭಾವಾದಿತಿ ಭಾವಃ ॥ ೧೨೨ ॥

**ವಿವರಣೆ**– ಮಾಯಾಂ ತು ಪ್ರಕೃತಿಂ ವಿದ್ಯಾತ್ ಮಾಯಿನಂ ತು ಮಹೇಶ್ವರಮ್ ।
ತಸ್ಯಾವಯವಭೂತೈಸ್ತು ವ್ಯಾಪ್ತಂ ಸರ್ವಮಿದಂ ಜಗತ್ ॥
- ಶ್ವೇತಾಶ್ವತರಉಪನಿಷದ್ ೪-೧೦

ಈ ಶ್ರುತಿಯು ಬ್ರಹ್ಮನಲ್ಲಿ ಮಾಯೆಯು ಇದೆ ಎಂದು ಹೇಳಿದೆ. ಇದರ ಬಲದಿಂದ ಬ್ರಹ್ಮನಲ್ಲಿ ಅಜ್ಞಾನವಿದೆ ಎಂದು ಮತ್ತು ಇದಕ್ಕೆ ಸಂಬಂಧಿಸಿದ ವಿಚಾರಗಳನ್ನು ಕಲ್ಪಿಸಬೇಕಾಗುತ್ತದೆ ಎಂದು ಅದ್ವೈತದರ್ಶನವು ಹೇಳುತ್ತದೆ. ಈ ಅಭಿಪ್ರಾಯವನ್ನು ಈ ಶ್ಲೋಕವು ವಿಮರ್ಶಿಸಿದೆ.

ಈ ಶ್ರುತಿಯ ಪ್ರಕಾರ 'ಪ್ರಕೃತಿ' ಯು ಮಾಯಾ. ಪರಮಾತ್ಮನು ಮಾಯೀ= ಪ್ರಕೃತಿಯ ಅಧಿಪತಿ (ಧನೀ ಎಂದರೆ ಧನಾಧಿಪತಿ). ಈ ಶ್ರುತಿಯು ಹಸು. ನಾಯಿ ಅಲ್ಲ. ಹಸುವು ಅಮೃತವನ್ನು ಕರೆಯುತ್ತದೆ. ಚಿದ್=ಅಚಿತ್ ಪ್ರಕೃತಿಗಳು ಜಗತ್ಸೃಷ್ಟಿಗೆ ಕಾರಣ. ಇವುಗಳ ನಿಯಾಮಕ ಪರಮಾತ್ಮ. ಪರಮಾತ್ಮನ ಪ್ರಕೃತಿನಿಯಾಮಕತ್ವ ಮಹಿಮಾಮೃತವನ್ನು ಈ ಶ್ರುತಿಯು ಕರೆಯುತ್ತಿದೆ (ಹೇಳುತ್ತಿದೆ).

ನಾಯಿಯು ಕಚ್ಚಿಗಾಯಗೊಳಿಸುತ್ತದೆ. ಈ ಶ್ರುತಿಯು ಬ್ರಹ್ಮನಲ್ಲಿ ಅಜ್ಞಾನವಿದೆ ಎಂದು ಹೇಳಿದರೆ, ಅವನಲ್ಲಿ ಗಾಯವನ್ನು (ದೋಷವನ್ನು) ಸಾಧಿಸಿ ನಾಯಿಯ ಸ್ಥಾನದಲ್ಲಿ ಇರಬೇಕಾಗುತ್ತದೆ. ಇದು ಅವೈದಿಕ ಮಾರ್ಗ. ಸರ್ವಥಾ ಸರಿಯಲ್ಲ. 'ಮಾಯಿನಂ ತು

ಮಹೇಶ್ವರಮ್' - ಈ ವಚನದ ಹಿಂದಿನ ವಚನ 'ಮಾಯಾಂ ತು ಪ್ರಕೃತಿಂ ವಿದ್ಯಾತ್'. ಆದ್ದರಿಂದ ಇದು ಪುಚ್ಛ (ಬಾಲ). ಈ ಪುಚ್ಛವು 'ಮಾಯಾ' ಶಬ್ದವನ್ನು 'ಪ್ರಕೃತಿ' ಎಂದು ವ್ಯಾಖ್ಯಾನಿಸಿದೆ. 'ಅವಿದ್ಯೆ' ಎಂದು ಅಲ್ಲ. ಈ ವ್ಯಾಖ್ಯಾನವು 'ಪ್ರಕೃತಿನಿಯಾಮಕತ್ವ' ಎಂಬ ಭಗವನ್ಮಹಿಮೆಗೆ ಅನುಕೂಲವಾಗಿದೆ. ಆದ್ದರಿಂದ ಋಜು (ನೇರ). ಮಹಿಮೆಗೆ ವಿರುದ್ಧವಾದ ದೋಷವನ್ನು ಹೇಳುವುದಿಲ್ಲ; ಆದ್ದರಿಂದ ವಕ್ರವಲ್ಲ. ನಾಯಿಬಾಲ ಡೊಂಕು. ಶ್ರುತಿಯ ಪುಚ್ಛ ಡೊಂಕು ಅಲ್ಲ. ಆದ್ದರಿಂದ ಶ್ರುತಿಯು ಬ್ರಹ್ಮನಿಗೆ ಅವಿದ್ಯೆಯು ಇದೆ ಎಂಬ ಕಲ್ಪನೆಗೆ ಅನುಕೂಲವಾಗಿಲ್ಲ.

**ಯಥಾ ಕುಲಾಲಶ್ಚಕ್ರೀ ಸ್ಯಾತ್ ತಥಾ ಮಾಯೀ ತಯಾ ಸೃಜನ್ ॥ ೧೨೩ ॥**

**ಅರ್ಥ**-ಕುಲಾಲಃ= ಕುಂಬಾರನು, ಯಥಾ= ಹೇಗೆ, ಚಕ್ರೀ ಸ್ಯಾತ್= ಚಕ್ರವುಳ್ಳವನು ಆಗುವನೋ, ತಥಾ= ಅದರಂತೆ, ತಯಾ= ಆ ಮಾಯೆಯಿಂದ, ಸೃಜನ್= ಸೃಷ್ಟಿಯನ್ನು ಮಾಡುವ ಈಶ್ವರನು, ಮಾಯೀ ಸ್ಯಾತ್= ಮಾಯಿಯಾಗುತ್ತಾನೆ.

**ಅನುವಾದ- ಘಟದ ನಿರ್ಮಾಣಕ್ಕೆ ಚಕ್ರವನ್ನು ಉಪಯೋಗಿಸುವ ಕುಲಾಲನು ಹೇಗೆ ಚಕ್ರೀ ಎನಿಸಿಕೊಳ್ಳುತ್ತಾನೆಯೋ, ಹಾಗೆ ಮಾಯೆಯನ್ನು ಬಳಸಿ ಜಗತ್ತನ್ನು ಸೃಷ್ಟಿ ಮಾಡುವ ಈಶ್ವರನು ಮಾಯೀ ಎಂದು ಕರೆಯಲ್ಪಡುತ್ತಾನೆ.**

**ಭಾವವಿಲಾಸಿನೀ–** ನನು ಮಾಯಾಯಾಃ ಪ್ರಕೃತಿತ್ವೇऽಪ್ಯಪ್ರಾಕೃತಸ್ಯ ಭಗವತಃ ಪ್ರಾಕೃತ-ತ್ವಾಖ್ಯದೋಷಃ ಸ್ಯಾದಿತ್ಯತ ಆಹ- **ಯಥೇತಿ** ॥ ಯಥಾ ಸ್ವಶಾಲಾಸ್ಥಿತಚಕ್ರಮಾದಾಯ ತೇನ ಘಟಂ ಸೃಜನ್ ಕುಲಾಲಶ್ಚಕ್ರೀ ಸ್ಯಾತ್ । ತಥಾ ತಯಾ ಪ್ರಕೃತ್ಯಾಖ್ಯಮಾಯಯಾ ಜಗತ್ ಸೃಜನ್ನಪಿ ಮಾಯೀ ಸ್ಯಾತ್ । ಚಕ್ರಿಪದವಾಚ್ಯಸ್ಯ ಕುಲಾಲಸ್ಯ ಚಕ್ರೇಣ ಬನ್ಧಾಭಾವವತ್ ಮಾಯಿ-ಪದವಾಚ್ಯಸ್ಯ ಭಗವತೋ ಮಾಯಯಾ ಬನ್ಧಾಭಾವಾತ್ ಮಾಯಾಬದ್ಧತ್ವರೂಪಪ್ರಾಕೃತತ್ವಂ ಕಥಂ ಸ್ಯಾದಿತಿ ಭಾವಃ ॥ ೧೨೩॥

**ವಿವರಣೆ-** ಕುಂಬಾರನು ಮಡಕೆ ಇತ್ಯಾದಿಗಳನ್ನು ತಯಾರಿಸಲು ಒಂದು ವಿಧವಾದ ಚಕ್ರವನ್ನು ಬಳಸುತ್ತಾನೆ. ಈ ಕಾರಣದಿಂದ ಅವನನ್ನು 'ಚಕ್ರೀ' ಎಂದು ಹೇಳುತ್ತಾರೆ. ಇದರಿಂದ ಕುಂಬಾರನು ಚಕ್ರದ ಬಂಧನಕ್ಕೆ ಒಳಗಾದವನು ಎಂದು ಅರ್ಥವಲ್ಲ. ಇದರಂತೆ 'ಮಾಯೀ' ಪದದಿಂದ ಹೇಳಲ್ಪಟ್ಟ ಕಾರಣದಿಂದ ಪರಮಾತ್ಮನಿಗೆ ಮಾಯೆಯ ಬಂಧನವಿದೆ ಎಂದು ಅರ್ಥವಾಗುವುದಿಲ್ಲ. ಆದ್ದರಿಂದ 'ಪ್ರಾಕೃತ' ಆಗುವ ಪ್ರಸಂಗವಿಲ್ಲ. 'ಮಾಯೆ' ಯನ್ನು ಬಳಸಿ ಸೃಷ್ಟಿಯನ್ನು ಮಾಡುವುದರಿಂದ ಪರಮಾತ್ಮನು 'ಮಾಯೀ'.

**ಕಿಂ ನ ಕೋಶಸ್ಥವಿತ್ತೇನ ಧನೀ ರಾಜಾ ವನೇಚರಃ ।**
**ಮತುಪಾ ಸರ್ವಸರ್ವಸ್ವಂ ಗಲೇ ತಸ್ಯ ನ ನಿಕ್ಷಿಪ ॥ ೧೨೪ ॥**

**ಅರ್ಥ**-ವನೇಚರಃ= ಕಾಡಿನಲ್ಲಿ ಸಂಚರಿಸುವ, ರಾಜಾ= ರಾಜನು, ಕೋಶಸ್ಥವಿತ್ತೇನ= ಖಜಾನೆಯಲ್ಲಿ ಧನವಿರುವ ಕಾರಣದಿಂದ, ಧನೀ ಕಿಂ ನ= ಧನಿಯಲ್ಲವೇ? ಮತುಪಾ= ಮತುಪ್ ಪ್ರತ್ಯಯದಿಂದ (ಮತುಪ್ ಪ್ರತ್ಯಯದ ಅರ್ಥವನ್ನು ಹೇಳುವ ಇನಿ ಪ್ರತ್ಯಯವು ಇರುವುದರಿಂದ), ಸರ್ವಸರ್ವಸ್ವಂ= ಆ ರಾಜನ ಆನೆ ಕುದುರೆ ಇತ್ಯಾದಿ ಎಲ್ಲವನ್ನೂ, ತಸ್ಯ ಗಲೇ= ಅವನ ಕೊರಳಿಗೆ, ನ ನಿಕ್ಷಿಪ= ಕಟ್ಟಬೇಡ.

**ಅನುವಾದ**- ಕಾಡಿನಲ್ಲಿ ಸಂಚರಿಸುವ ರಾಜನು ಅವನ ಕೋಶದಲ್ಲಿ ಧನವಿರುವ ಕಾರಣದಿಂದ ಧನೀ ಎನಿಸುವುದಿಲ್ಲವೇ? ಧನೀ ಎಂಬಲ್ಲಿ ಇನ್ ಪ್ರತ್ಯಯವಿರುವ ಕಾರಣ ಅವನ ಗಜತುರಗಾದಿ ಸರ್ವಸ್ವವನ್ನೂ ಅವನ ಕೊರಳಿಗೆ ಕಟ್ಟಬೇಡ.

**ಭಾವವಿಲಾಸಿನೀ**– ಅಧುನಾ ಮಾಯಿಪದಪ್ರಯೋಗೇಽಪಿ ಭಗವತೋ ಮಾಯಾತಿದೂರತ್ವೇ ದೃಷ್ಟಾಂತಮಾಹ– **ಕಿಂ ನ ಕೋಶಸ್ಥೇತಿ** ॥ ವನೇಚರಃ ರಾಜಾ ಕೋಶಸ್ಥವಿತ್ತೇನ ಧನೀ ನ ಕಿಮ್? । ತತ್ಸ್ವಾಮಿತ್ವಸಂಬಂಧೇನ ಭವತ್ಯೇವ । ತಸ್ಯಾಪಿ ಧನಾಧಾರತ್ವಮೇವಾಸ್ತ್ವಿತಿ ಮಂದಾಶಂಕಾಂ ಸೋಪಹಾಸಂ ಪರಿಹರತಿ– **ಮತುಪೇತಿ** ॥ ಧನೀತಿ ಮತುಬರ್ಥಕೇನ್‌ಪ್ರತ್ಯಯಬಲಾತ್ ಸರ್ವ-ಸರ್ವಸ್ವಂ ಗಜತುರಗಾದಿಸರ್ವಸರ್ವಸ್ವಂ ತಸ್ಯ ರಾಜ್ಞೋ ಗಲೇ ನ ನಿಕ್ಷಿಪ । ತಥಾ ಸತಿ ರಾಜಮರಣೇನಾರಾಜಕಂ ರಾಷ್ಟ್ರಂ ಸ್ಯಾದಿತ್ಯುಪಹಾಸಃ । ಅತಃ ಶ್ರುತಿರಪಿ ನತ್ವದಭಿ-ಲಷಿತಾರ್ಥಸಾಧಿಕಾ ॥ ೧೨೪ ॥

**ವಿವರಣೆ**– 1. ಪರಮಾತ್ಮನಿಗೆ ಮಾಯೆಯ= ಪ್ರಕೃತಿಯ ಬಂಧವಿಲ್ಲ. ಆದರೂ ಅವನು 'ಮಾಯೀ'. ಬೇಟೆಗೆ ಹೋಗುವ ರಾಜನು ತನ್ನ ಖಜಾನೆಯಲ್ಲಿರುವ ವಿತ್ತವನ್ನು ಜತೆಗೆ ತೆಗೆದುಕೊಂಡು ಹೋಗಿರುವುದಿಲ್ಲ. ಆದರೂ ಕಾಡಿನಲ್ಲಿದ್ದಾಗಲೂ ಅವನು ಧನೀ. ದೂರದಲ್ಲಿರುವ ಧನದ ಒಡೆಯನಾದುದರಿಂದ. ಹೀಗೆಯೇ ಪರಮಾತ್ಮನು 'ಪ್ರಕೃತಿ'ಯ ನಿಯಾಮಕನಾದ್ದರಿಂದ, ಅದರ ಲೇಪವಿಲ್ಲದಿದ್ದರೂ, 'ಮಾಯೀ'. 'ಧನಿನ್' ಶಬ್ದದಲ್ಲಿ 'ಇನಿ' ಎಂಬ ಪ್ರತ್ಯಯವಿದೆ. ಇದಕ್ಕೆ ಉಳ್ಳವನು ಎಂದು ಅರ್ಥ. ಉಳ್ಳವನು ಎಂದರೆ ಯಾವಾಗಲೂ ಕುತ್ತಿಗೆಗೆ ಕಟ್ಟಿಕೊಂಡಿದ್ದಾನೆ ಎಂದು ಅರ್ಥವಲ್ಲ. ಯಜಮಾನ ಎಂದು ಅರ್ಥ. 'ಮಾಯಿನ್' ಶಬ್ದದಲ್ಲೂ 'ಇನಿ' ಪ್ರತ್ಯಯವಿದೆ. ಆದ್ದರಿಂದ ಮಾಯೆಯು= ಪ್ರಕೃತಿಯು ಅವನಿಗೆ ಅಂಟಿಕೊಂಡಿದೆ ಎಂದು ಅರ್ಥವಲ್ಲ; ಅವನು ಪ್ರಕೃತಿಯ ಮೇಲೆ ಪ್ರಭುತ್ವವುಳ್ಳವನು ಎಂದಷ್ಟೇ ಅರ್ಥ.

2. ಶ್ಲೋಕದಲ್ಲಿ 'ಮತುಪಾ' ಎಂದು ಇದೆ. ಆದರೆ ಮಾಯಿನ್, ಧನಿನ್ ಶಬ್ದಗಳಲ್ಲಿ 'ಮತುಪ್' ಇಲ್ಲ. 'ಇನ್' ಇದೆ. ಎರಡು ಪ್ರತ್ಯಯಗಳಿಗೂ ಒಂದೇ ಅರ್ಥ. ಆದ್ದರಿಂದ 'ಮತುಪ್' ಪ್ರತ್ಯಯದ ಅರ್ಥವನ್ನೇ ಹೊಂದಿರುವ 'ಇನಿ' ಪ್ರತ್ಯಯದಿಂದ ಎಂದು ಶ್ರೀ ಸುರೋತ್ತಮರು ವ್ಯಾಖ್ಯಾನಿಸಿದ್ದಾರೆ.

**ಸರ್ವಜ್ಞಂ ಖಲು ತದ್ ಬ್ರಹ್ಮ ಕಥಮಜ್ಞಾನವದ್ ಭವೇತ್ ।**
**ಸ್ವರೂಪಸ್ಯ ಸದಾ ದೃಷ್ಟೇಃ ಸರ್ವಸ್ಯಾನ್ಯಸ್ಯ ಚಾಂಜಸಾ ॥ ೧೨೫ ॥**

**ಅರ್ಥ**-ತದ್ ಬ್ರಹ್ಮ= ಆ ಬ್ರಹ್ಮನು, ಸದಾ= ಯಾವಾಗಲೂ, ಸ್ವರೂಪಸ್ಯ= ತನ್ನ ಸ್ವರೂಪವನ್ನು, ಅನ್ಯಸ್ಯ ಸರ್ವಸ್ಯ ಚ= ಮತ್ತು ತನಗಿಂತ ಭಿನ್ನವಾದ ಎಲ್ಲವನ್ನೂ, ಅಂಜಸಾ= ಚೆನ್ನಾಗಿ, ದೃಷ್ಟೇಃ= ನೋಡುವುದರಿಂದ, ಸರ್ವಜ್ಞಂ ಖಲು= ಸರ್ವಜ್ಞನಷ್ಟೇ, ಕಥಂ= ಹೇಗೆ, ಅಜ್ಞಾನವತ್ ಭವೇತ್= ಅಜ್ಞಾನವುಳ್ಳವನಾದಾನು?

**ಅನುವಾದ-** ಆ ಬ್ರಹ್ಮನು ಯಾವಾಗಲೂ ತನ್ನನ್ನು ಮತ್ತು ತನಗಿಂತ ಭಿನ್ನವಾದ ಎಲ್ಲವನ್ನೂ ಚೆನ್ನಾಗಿ ನೋಡುತ್ತಾನೆ. ಆದ್ದರಿಂದ ಅವನು ಸರ್ವಜ್ಞನೇ. ಅಂತಹ ಬ್ರಹ್ಮನು ಅಜ್ಞಾನವುಳ್ಳವನು ಹೇಗೆ ಆಗುತ್ತಾನೆ?

**ಭಾವವಿಲಾಸಿನೀ–** ಯುಕ್ತ್ಯಂತರೇಣಾಪಿ ಭಗವತ್ಯಜ್ಞಾನಂ ನ ಘಟತ ಇತ್ಯಾಹ– **ಸರ್ವಜ್ಞಮಿತಿ** ॥ ತದೇವ ಸಾರ್ವಜ್ಞ್ಯಂ ವಿವೃಣೋತಿ– **ಸ್ವರೂಪಸ್ಯೇತಿ** ॥ ಸ್ವರೂಪಸ್ಯಾತ್ಮಸ್ವರೂಪಸ್ಯ ಅನ್ಯಸ್ಯ ಸರ್ವಸ್ಯ ಜಗತಃ ಸದಾ ದೃಷ್ಟೇಃ ಸರ್ವಜ್ಞೇನ ಬ್ರಹ್ಮಣಾ ದೃಷ್ಟತ್ವಾದಿತ್ಯರ್ಥಃ । ಯತ್ರೈವ ಜ್ಞಾನಂ ತತ್ರೈವ ತದೈವ ಕಥಮಜ್ಞಾನಮ್? ಅತಃ 'ಸರ್ವಜ್ಞ ಅಜ್ಞಾನವಾನ್' ಇತಿ ಮತಂ 'ಮಾತಾ ವಂಧ್ಯಾ' ಇತಿವದ್ ವ್ಯಾಹತಮಿತಿ ಭಾವಃ ॥ ೧೨೫ ॥

**ವಿವರಣೆ-** ಇನ್ನೊಂದು ಯುಕ್ತಿಯಿಂದಲೂ ಭಗವಂತನಿಗೆ ಅಜ್ಞಾನವು ಕೂಡುವುದಿಲ್ಲ ಎಂದು ಸಮರ್ಥಿಸುತ್ತಾರೆ. ಸರ್ವಜ್ಞತ್ವ ಮತ್ತು ಅಜ್ಞಾನಗಳು ಪರಸ್ಪರ ವಿರುದ್ಧ. ಭಗವಂತನು ಯಾವಾಗಲೂ ಸರ್ವಜ್ಞನಾಗಿರುವುದರಿಂದ ಅವನಿಗೆ ಎಂದೂ ಅಜ್ಞಾನವು ಸಂಭವಿಸುವುದಿಲ್ಲ. 'ಇವನು ಸರ್ವಜ್ಞ ಅಜ್ಞಾನಿ' - ಈ ಮಾತು 'ತಾಯಿ-ಬಂಜೆ' ಎಂಬ ಮಾತಿನಂತೆ ಪರಸ್ಪರ ವಿರುದ್ಧ.

**ಅಸಂಗಸ್ಯ ಯತಃ ಸಂಗೋ ವಿನಾಽಜ್ಞಾನಂ ನ ಯುಜ್ಯತೇ ।**
**ಅತಸ್ಸಾರ್ವಜ್ಞಮಪ್ಯಜ್ಞಾನಾಪೇಕ್ಷಮಿತಿ ಯನ್ಮತಮ್ ॥ ೧೨೬ ॥**

**ಸ ಪ್ರಷ್ಟವ್ಯಃ ಕಿಮಜ್ಞಾನಂ ಸನ್ನಾಧಕರಣೇ ತವ ।**
**ಕಿಂ ವಾ ದ್ರವತ್ವನಿಬಿಡತ್ವಾರ್ಹಸೀಸಾದಿಧಾತುವತ್ ॥ ೧೨೭ ॥**

**ಅರ್ಥ**-ಯತಃ= ಯಾವ ಕಾರಣದಿಂದ, ಅಸಂಗಸ್ಯ= ಅಸಂಗನಾದ ಬ್ರಹ್ಮನಿಗೆ, ಅಜ್ಞಾನಂ ವಿನಾ= ಅಜ್ಞಾನವಿಲ್ಲದೇ, ಸಂಗಃ= ಸರ್ವವಸ್ತುಗಳ ಸಂಬಂಧವು, ನ ಯುಜ್ಯತೇ= ಕೂಡುವುದಿಲ್ಲವೋ, ಅತಃ= ಆ ಕಾರಣದಿಂದ, ಸಾರ್ವಜ್ಞಮಪಿ= ಸರ್ವಜ್ಞತ್ವವೂ ಕೂಡ, ಅಜ್ಞಾನಾಪೇಕ್ಷಂ= ಅಜ್ಞಾನಾವಲಂಬಿ, ಇತಿ= ಎಂದು, ಯನ್ಮತಮ್= ಯಾರ ಮತವೋ,

ಸಃ= ಅವನು, ಪ್ರಷ್ಟವ್ಯಃ= ಪ್ರಶ್ನೆಗೆ ಅರ್ಹ, ತವ= ನಿನ್ನ, ಅಜ್ಞಾನಂ= ಅಜ್ಞಾನವು, ಸನ್ಧಾನಕರಣೀ ಕಿಂ= ಕೂಡಿಸುವ ಒಂದು ಔಷಧವೇ? ವಾ= ಅಥವಾ, ದ್ರವತ್ವನಿಬಿಡತ್ವಾರ್ಹ-ಸೀಸಾದಿಧಾತುವತ್ ಕಿಮ್?= ದ್ರವತ್ವ ಮತ್ತು ನಿಬಿಡತ್ವಕ್ಕೆ ಯೋಗ್ಯವಾದ ಸೀಸಾದಿಲೋಹಗಳಂತೆ?

**ಅನುವಾದ-** ಅಸಂಗನಾದ ಬ್ರಹ್ಮನಿಗೆ ಅಜ್ಞಾನವಿಲ್ಲದೇ ಸರ್ವವಸ್ತುಗಳ ಸಂಬಂಧವು ಉಂಟಾಗುವುದಿಲ್ಲ. ಸರ್ವವಸ್ತುಗಳ ಸಂಬಂಧವಿಲ್ಲದೆ ಸರ್ವಜ್ಞತ್ವವು ಉಪಪನ್ನವಲ್ಲ. ಆದ್ದರಿಂದ ಸರ್ವಜ್ಞತ್ವವೂ ಅಜ್ಞಾನವನ್ನು ಅಪೇಕ್ಷಿಸುತ್ತದೆ ಎಂದು ಯಾರ ಮತವಿದೆಯೋ ಅವರನ್ನು ಹೀಗೆ ಪ್ರಶ್ನಿಸಬೇಕು. ನಿಮ್ಮ ಮತದಲ್ಲಿ ಅಜ್ಞಾನವು ಕೂಡಿಸುವ ಔಷಧಿಯೇ? ಅಥವಾ ಕರಗುವ ಮತ್ತು ಗಟ್ಟಿಯಾಗುವ ಸೀಸಾದಿಲೋಹಗಳಂತಹ ಪದಾರ್ಥವೇ?

**ಭಾವವಿಲಾಸಿನೀ–** ನನ್ವಸಂಗಸ್ಯ ಬ್ರಹ್ಮಸ್ವರೂಪಭೂತಜ್ಞಾನಸ್ಯ ವಿಷಯಸಂಗೋ ವಿನಾಽಜ್ಞಾನಂ ನ ಘಟತ ಇತಿ ಸಾರ್ವಜ್ಞ್ಯಮೇವಾಜ್ಞಾನಮಾಕ್ಷಿಪತೀತಿ ಶಂಕಾಮನೂದ್ಯ ದೂಷಯತಿ– **ಅಸಂಗಸ್ಯೇತಿ** ॥ ಅಸ್ಯಾರ್ಥಃ ಸ್ಪಷ್ಟಃ। ಉತ್ತರಂ ವಕ್ತುಂ ಪೃಚ್ಛತಿ– **ಸ ಪ್ರಷ್ಟವ್ಯ ಇತಿ** ॥ ಅಸಂಗಸ್ಯಾಜ್ಞಾನಂ ತತ್ತದರ್ಥಸಂಗಸಂಪಾದಕಮಿತಿ ವದನ್ ಪ್ರಷ್ಟವ್ಯಃ ಕಿಮಜ್ಞಾನಂ ಸಂಧಾನಕರಣ್ಯಾಖ್ಯೌಷಧವದಸಂಗಯೋಃ ಸಂಬಂಧಕರಣಸ್ವಭಾವಮ್? ಉತ ಕಾಂಸ್ಯಾದಿಪಾತ್ರಖಂಡದ್ವಯಸಂಧಾಯಕತ್ರಪುಸೀಸಾದಿವತ್ ಏಕವಾರಂ ದ್ರವೀಭೂಯ ಪಶ್ಚಾದ್ ಘನೀ ಭವತ್ಸ್ವಭಾವಂ ವಾ? ಅಸಂಗಯೋಸ್ಸಂಶ್ಲೇಷಕಾರಿವಸ್ತು ದ್ವಿಪ್ರಕಾರಕಮೇವ ದೃಷ್ಟಮ್ । ಅಜ್ಞಾನಂ ಚ ನ ತಾದೃಶಸ್ವಭಾವಮ್, ಅತಃ ಕಥಮಸಂಗಸ್ಯ ಬ್ರಹ್ಮಣಸ್ಸಂಗಹೇತುಃ ಸ್ಯಾದಿತಿ ಪ್ರಶ್ನಪದ್ಯಾ ॥೧೨೬–೧೨೭॥

**ವಿವರಣೆ-** ಬ್ರಹ್ಮನು ಸರ್ವಜ್ಞ ಎಂದರೆ, ಅವನು ಸರ್ವವಿಷಯಗಳ ಜ್ಞಾನವುಳ್ಳವನು ಎಂದೇ ಅರ್ಥ. ಬ್ರಹ್ಮನಿಗೆ ಸರ್ವವಿಷಯಕಜ್ಞಾನವಿದ್ದರೆ ಸರ್ವವಿಷಯದ ಸಂಬಂಧವು ಇರಬೇಕಾಗುತ್ತದೆ. ಆದರೆ ಅವನು ಅಸಂಗ. ಆದ್ದರಿಂದ ಅವನಿಗೆ ಸರ್ವವಿಷಯದ ಸಂಬಂಧವು ಉಪಪನ್ನವಲ್ಲ. ಆದ್ದರಿಂದ ಬ್ರಹ್ಮನಿಗೆ ಅಜ್ಞಾನವಿದೆ; ಈ ಕಾರಣದಿಂದ ಸರ್ವವಿಷಯಗಳ ಸಂಬಂಧವೂ ಅವನಿಗೆ ಇದೆ; ಆದ್ದರಿಂದ ಅವನು ಸರ್ವಜ್ಞ ಎಂದು ಹೇಳಬೇಕು ಎಂದು ಅದ್ವೈತಚಿಂತಕರು ಹೇಳುತ್ತಾರೆ. ಇದನ್ನು ಇಲ್ಲಿ ನಿರಾಕರಿಸಿದ್ದಾರೆ. ಸಂಧಾನಕರಣಿಯು ಮುರಿದ ಮೂಳೆಗಳನ್ನು ಕೂಡಿಸುವ ಒಂದು ಔಷಧಿ. ಅದರಂತೆ ಅಜ್ಞಾನವು ಪರಸ್ಪರ ಸಂಬಂಧವಿಲ್ಲದ ಬ್ರಹ್ಮನಿಗೂ ಮತ್ತು ಸಕಲವಸ್ತುಗಳಿಗೂ ಸಂಬಂಧವನ್ನು ಉಂಟುಮಾಡುತ್ತದೆಯೇ? ಅಥವಾ ಹಿತ್ತಾಳೆ ಮುಂತಾದ ಪಾತ್ರೆಗಳು ಒಡೆದಾಗ ಸೀಸವನ್ನು ಕರಗಿಸಿ ಹೊಯ್ದರೆ ಸೀಸವು ಸ್ವಲ್ಪ ಕಾಲದಲ್ಲಿ ಆರಿ ಗಟ್ಟಿಯಾಗಿ ಆ ಒಡಕನ್ನು ಮುಚ್ಚುವಂತೆ ಮುಚ್ಚುತ್ತದೆಯೇ? ಎಂದು ಪ್ರಶ್ನೆಯು ಉದ್ಭವಿಸುತ್ತದೆ. ಸಂಬಂಧವಿಲ್ಲದಿರುವ ವಸ್ತುಗಳಿಗೆ ಸಂಬಂಧವನ್ನು ಉಂಟು ಮಾಡುವ ಮೂರನೇ ಪ್ರಕಾರವು ಇಲ್ಲ. ಈ ಎರಡು ಪ್ರಶ್ನೆಗಳಿಗೆ ಯಾವ ಉತ್ತರವನ್ನೂ ಹೇಳಲು ಸಾಧ್ಯವಿಲ್ಲ ಎಂದು ಮುಂದಿನ ಶ್ಲೋಕಗಳಲ್ಲಿ ವಿವರಿಸುತ್ತಾರೆ.

ವ್ಯಾಪಿನೀ ಚಿನ್ನ ನೇತವ್ಯಾ ನಾನೇತವ್ಯಾ ಚ ಕೇನಚಿತ್ ।
ಅತಃ ಸ್ವತಸ್ತತ್ತದರ್ಥಸಂಗಸ್ತಸ್ಯಾ ಭವಿಷ್ಯತಿ ॥ ೧೨೮ ॥

**ಅರ್ಥ**-ವ್ಯಾಪಿನೀ ಚಿತ್= ವ್ಯಾಪ್ತವಾದ ಚೈತನ್ಯವು, ಕೇನಚಿತ್= ಯಾವುದರಿಂದಲೂ, ನ ನೇತವ್ಯಾ= ದೂರ ತೆಗೆದುಕೊಂಡು ಹೋಗಲು ಅರ್ಹವಲ್ಲ, ನಾನೇತವ್ಯಾ= ಹತ್ತಿರ ತರಲು ಅರ್ಹವಲ್ಲ. ಅತಃ= ಆದ್ದರಿಂದ, ತಸ್ಯ= ಆ ಚೈತನ್ಯಕ್ಕೆ, ಸ್ವತಃ= ಸ್ವಾಭಾವಿಕವಾಗಿಯೇ, ತತ್ತದರ್ಥಸಂಗಃ= ಆಯಾ ಅರ್ಥಗಳ ಸಂಬಂಧವು, ಭವಿಷ್ಯತಿ= ಇರುತ್ತದೆ.

**ಅನುವಾದ**- ಚೈತನ್ಯವು ವ್ಯಾಪ್ತ. ಅದನ್ನು ಎಲ್ಲಿಯೂ ಒಯ್ಯಲು ಸಾಧ್ಯವಿಲ್ಲ. ತರಲೂ ಸಾಧ್ಯವಿಲ್ಲ. ಆದ್ದರಿಂದ ಆ ಚೈತನ್ಯಕ್ಕೆ ಸ್ವಾಭಾವಿಕವಾಗಿಯೇ ಸರ್ವ ವಸ್ತುಗಳ ಸಂಬಂಧವು ಇದೆ.

**ಭಾವವಿಲಾಸಿನೀ**— ಬ್ರಹ್ಮಚಿದ್ ದೂರೇ ತಿಷ್ಠತಿ ಅರ್ಥೋಽಪಿ ದೂರೇ ॥ ಅತಸ್ತಯೋಃ ಸರ್ಪ-ಮಂಡೂಕಯೋರಿವ ಸಂಬಂಧಘಟನಾಯಾಜ್ಞಾನಮಿತಿ ಪಕ್ಷಂ ದೂಷಯತಿ— **ವ್ಯಾಪಿನೀತಿ** ॥ ವ್ಯಾಪಿನೀ ಸರ್ವತ್ರ ವ್ಯಾಪ್ತಾ ಚಿದ್ ಬ್ರಹ್ಮಚಿತ್ । ನೇತವ್ಯಾ ಇತೋಽನ್ಯತ್ರ ನೇತವ್ಯಾ ನ । ಆನೇತವ್ಯಾ ಅನ್ಯತೋಽತ್ರಾನೇತವ್ಯಾ ಚ ನೇತಿ·ಯೋಜನಾ । ಅತಸ್ಸಕಲಮೂರ್ತದ್ರವ್ಯಸಂಗಿತ್ವಾತ್ । ಸ್ವತಃ ಸ್ವಭಾವತ ಏವ ತಸ್ಯಾಃ ಬ್ರಹ್ಮಚಿತಃ ॥ ೧೨೮ ॥

**ವಿವರಣೆ**- ಬ್ರಹ್ಮಚೈತನ್ಯ ಮತ್ತು ಸರ್ವವಸ್ತುಗಳು ದೂರದಲ್ಲಿರುತ್ತವೆ; ಸರ್ಪ ಮಂಡೂಕಗಳಂತೆ; ದೂರದಲ್ಲಿರುವ ಬ್ರಹ್ಮ ಮತ್ತು ವಸ್ತುಗಳಿಗೆ ಅಜ್ಞಾನವು ಸಂಬಂಧವನ್ನು ಉಂಟುಮಾಡುತ್ತದೆ ಎಂಬ ವಿಚಾರವನ್ನು ಇಲ್ಲಿ ವಿಮರ್ಶಿಸುತ್ತಾರೆ. ಬ್ರಹ್ಮಚೈತನ್ಯವು ಯಾವುದರಿಂದಲೂ ದೂರವಿಲ್ಲ. ಏಕೆಂದರೆ ಅದು ಸರ್ವತ್ರ ವ್ಯಾಪ್ತ, ಸರ್ವತ್ರ ವ್ಯಾಪ್ತವಾದುದಕ್ಕೆ ಸ್ವಾಭಾವಿಕವಾಗಿಯೇ ಸರ್ವಸಂಬಂಧವು ಇದೆ. ಆದ್ದರಿಂದ ಬ್ರಹ್ಮನಿಗೆ ಸರ್ವವಸ್ತುಗಳ ಸಂಬಂಧವು ಉಂಟಾಗಲು ಅಜ್ಞಾನದ ಅವಶ್ಯಕತೆಯು ಇಲ್ಲ.

ಅಸಂಗತ್ವಶ್ರುತೇರ್ಭೀತಿಸ್ತವಾಪಿ ಚ ಮಮಾಪಿ ಚ ॥ ೧೨೯ ॥

**ಅರ್ಥ**-ಅಸಂಗತ್ವಶ್ರುತೇಃ= ಅಸಂಗತ್ವವನ್ನು ಹೇಳುವ ಶ್ರುತಿಯಿಂದ, ಭೀತಿಃ= ಭಯವು, ತವಾಪಿ ಚ= ನಿನಗೂ, ಮಮಾಪಿ ಚ= ನನಗೂ ಇದ್ದೇ ಇದೆ.

**ಅನುವಾದ**- ಅಸಂಗತ್ವಶ್ರುತಿಯ ಭೀತಿಯು ನಿನಗೂ ಮತ್ತು ನನಗೂ ಸಮಾನ.

**ಭಾವವಿಲಾಸಿನೀ**— ಅಸಂಗಶ್ರುತಿರ್ಬಾಧಿಕೇತಿ ಚೇತ್ ಕಿಮಜ್ಞಾನೇನ ತತ್ರೋಪಾಯಃ ಕ್ರಿಯತೇ? ನಹ್ಯಜ್ಞಾನಂ ತಸ್ಯಾಃ ಮುಖಮೋಟನಂ ಕರ್ತುಂ ಶಕ್ನೋತಿ । ಅತಃ ಶ್ರುತಿತೋ ಭೀತಿರುಭಯೋ-ಸ್ಸಮೇತ್ಯಾಹ— **ಅಸಂಗತ್ವೇತಿ** ॥ ೧೨೯ ॥

**ವಿವರಣೆ-** ಅಸಂಗತ್ವಶ್ರುತಿಯು ಸರ್ವಜ್ಞತ್ವಕ್ಕೆ ಬಾಧಕ; (ನೋಡಿ ಶ್ಲೋಕ 126). ಅಜ್ಞಾನವನ್ನು ಇದರ ಪರಿಹಾರಕ್ಕಾಗಿ ಬ್ರಹ್ಮನಿಗೆ ಕಲ್ಪಿಸಬೇಕಾಗುತ್ತದೆ? ಇಲ್ಲ. ಅಜ್ಞಾನವು ಯಾವ ರೀತಿಯಿಂದಲೂ ಅಸಂಗತ್ವವನ್ನು ಪರಿಹರಿಸಿ, ಸರ್ವಜ್ಞತ್ವವನ್ನು ಸಮರ್ಥಿಸಲಾರದು. ಆದ್ದರಿಂದ ಈ ಶ್ರುತಿಗೆ ಅರ್ಥವನ್ನು ಹೇಳುವ ಭಾರವು ಇಬ್ಬರಿಗೂ ಇದೆ.

**ಯದಿ ಸ್ವಭಾವತೋಽಸಂಗ ಇತ್ಯರ್ಥಃ ಸ್ಯಾಚ್ಛ್ರುತೇಸ್ತವ ।**
**ಮಮಾಪ್ಯುಪಾಧಿತೋಽಸಂಗ ಇತಿ ಸ್ಯಾದುಕ್ತಯುಕ್ತಿತಃ ॥ ೧೩೦ ॥**

**ಅರ್ಥ-** ತವ= ನಿನ್ನ ಮತದಲ್ಲಿ, ಸ್ವಭಾವತಃ= ಸ್ವಾಭಾವಿಕವಾಗಿ, ಅಸಂಗಃ= ಸಂಗ ರಹಿತವಾದುದು, ಇತಿ= ಎಂದು, ಯದಿ ಅರ್ಥಃ ಸ್ಯಾತ್= ಅರ್ಥವಾಗುವುದಾದರೆ, ಮಮಾಪಿ= ನನ್ನ ಮತದಲ್ಲಿ, ಉಕ್ತಯುಕ್ತಿತಃ= ನಾವು ಹಿಂದೆ ಹೇಳಿದ ಯುಕ್ತಿಯ ಬಲದಿಂದ, ಉಪಾಧಿತಃ= ಔಪಾಧಿಕವಾಗಿ, ಅಸಂಗಃ ಇತಿ= ಅಸಂಗವೆಂದು, ಸ್ಯಾತ್= ಅರ್ಥವು ಆಗುತ್ತದೆ.

**ಅನುವಾದ-** 'ಬ್ರಹ್ಮವು ಸ್ವಾಭಾವಿಕವಾಗಿ ಸಂಬಂಧಶೂನ್ಯ' ಎಂದು ಅರ್ಥವನ್ನು ನೀನು ಶ್ರುತಿಗೆ ಹೇಳುವುದಾದರೆ ಹಿಂದೆ ಹೇಳಿದ ಯುಕ್ತಿಯ ಬಲದಿಂದ 'ಬ್ರಹ್ಮವು ಔಪಾಧಿಕವಾಗಿ ಅಸಂಗ' ಎಂದು ಅರ್ಥವನ್ನು ನಾನು ಹೇಳುತ್ತೇನೆ.

**ಭಾವವಿಲಾಸಿನೀ–** ಸ್ವಭಾವತೋಽಸಂಗ ಉಪಾಧಿತಸ್ತು ಸಸಂಗೋ ಭವತೀತಿ ತವ ಶ್ರುತ್ಯರ್ಥಶ್ಚೇತ್ ತರ್ಹಿ ಮಮ ಉಪಾಧಿತೋಽಸಂಗಃ । ಬ್ರಹ್ಮಚರಿತ್ರಸ್ಯ ನಿರುಪಾಧಿಕತ್ವಾತ್ । ಸ್ವಭಾವತ ಏವ ಸಸಂಗ ಇತಿ ಶ್ರುತ್ಯರ್ಥೋ ಭವಿಷ್ಯತಿ । ಕಥಮನ್ಯಥಾ ಸರ್ವವ್ಯಾಪಿತ್ವಪ್ರತಿಪಾದಕಶ್ರುತಿರ್ಜೀವೇದಿತ್ಯಾಹ–**ಯದೀತಿ** ॥ ಉಕ್ತಯುಕ್ತಿತಃ ಭವದಜ್ಞಾನಾಖ್ಯೋಪಾಧೇಃ ಸಂಧಾನಕರಣಾದಿಸ್ವಭಾವಾಭಾವಾಖ್ಯಯುಕ್ತಿತ ಇತ್ಯರ್ಥಃ ॥ ೧೩೦ ॥

**ವಿವರಣೆ-** 'ಅಸಂಗೋ ಹ್ಯಯಂ ಪುರುಷಃ' - ಇದು ಶ್ರುತಿ. ಸಂಗರಹಿತನಾಗಿರುವುದು ಬ್ರಹ್ಮನ ಸ್ವಭಾವ, ಉಪಾಧಿಯಿಂದ ಅವನಿಗೆ ಸಂಗವು ಉಂಟಾಗುತ್ತದೆ - ಹೀಗೆ ಅದ್ವೈತ ದರ್ಶನವು ವ್ಯಾಖ್ಯಾನಿಸುತ್ತದೆ. ಮಧ್ವದರ್ಶನವು 'ಬ್ರಹ್ಮನಿಗೆ ಉಪಾಧಿಯಿಂದ ಸಂಗವು ಉಂಟಾಗುವುದಿಲ್ಲ; ಸ್ವಾಭಾವಿಕವಾಗಿಯೇ ಅವನಿಗೆ ಸಕಲವಸ್ತುಗಳ ಸಂಗವಿದೆ' ಎಂದು ವ್ಯಾಖ್ಯಾನಿಸಬಹುದು ಎಂದು ಹೇಳುತ್ತದೆ. ಇವೆರಡು ವ್ಯಾಖ್ಯಾನಗಳಲ್ಲಿ ಮಾಧ್ವವ್ಯಾಖ್ಯಾನವೇ ಸಮಂಜಸ. ದೂರವಿರುವ ಎರಡು ವಸ್ತುಗಳನ್ನು ಸೇರಿಸುವ ಸಾಮರ್ಥ್ಯವು ಅಜ್ಞಾನಕ್ಕೆ ಇಲ್ಲ ಎಂದು ಪ್ರತಿಪಾದಿಸಿರುವುದರಿಂದ (ಶ್ಲೋಕ 127).

**ಕಿಂಚ ತ್ವದಜ್ಞಾನತೋಽಪಿ ಸಂಗಸ್ತಸ್ಯ ಕಥಂ ವದ ।**
**ಯದಸಂಗ ಇತಿ ಶ್ರುತ್ಯಾ ಸರ್ವಸಂಗೋ ನಿಷಿದ್ಧ್ಯತೇ ॥ ೧೩೧ ॥**

**ಅರ್ಥ-** ಕಿಂಚ= ಇದಲ್ಲದೆ, ತಸ್ಯ= ಬ್ರಹ್ಮನಿಗೆ, ತ್ವದಜ್ಞಾನತೋಽಪಿ= ನಿನ್ನ ಅಜ್ಞಾನದಿಂದಾದರೂ, ಸಂಗಃ= ಸಂಬಂಧವು, ಕಥಂ= ಹೇಗೆ? ವದ= ಹೇಳು, ಯತ್=

ಏಕೆಂದರೆ, ಅಸಂಗ ಇತಿ ಶ್ರುತ್ಯಾ= 'ಅಸಂಗೋ ಹ್ಯಯಂ ಪುರುಷಃ' ಈ ಶ್ರುತಿಯಿಂದ, ಸರ್ವಸಂಗಃ= ಎಲ್ಲ ವಸ್ತುಗಳ ಸಂಬಂಧವೂ, ನಿಷಿದ್ಧ್ಯತೇ= ನಿಷೇಧಿಸಲ್ಪಡುತ್ತದೆ.

**ಅನುವಾದ-** ಇದಲ್ಲದೆ 'ಅಸಂಗಃ' ಎಂಬ ಶ್ರುತಿಯು ಎಲ್ಲ ವಸ್ತುಗಳ ಸಂಗವನ್ನು ನಿಷೇಧಿಸುವುದರಿಂದ ನೀನು ಹೇಳುವ ಅಜ್ಞಾನವೆಂಬ ವಸ್ತುವಿನಿಂದಾದರೂ ಬ್ರಹ್ಮನಿಗೆ ಹೇಗೆ ಸಂಬಂಧವುಂಟಾಗುತ್ತದೆ? ಹೇಳು.

**ಭಾವವಿಲಾಸಿನೀ–** ಬ್ರಹ್ಮಣ್ಯಜ್ಞಾನಸಂಗೇ ಖಲ್ವನ್ಯಾರ್ಥಸಙ್ಘಟಕಂ ತತ್ ಸ್ಯಾತ್ । ಅನ್ಯಥಾऽತಿಪ್ರಸಂಗಾತ್ । ಅಸಂಗಶ್ರುತಿಃ ಸಂಗತ್ವಾವಿಶೇಷಾದಜ್ಞಾನಸಂಗಮಪಿ ನಿಷೇಧತೀತ್ಯಾಹ– **ಕಿಂಚೇತಿ** ॥ ಯದ್ ಯಸ್ಮಾತ್॥ ೧೩೧ ॥

**ವಿವರಣೆ-** 'ಅಸಂಗೋ ಹ್ಯಯಂ ಪುರುಷಃ' - ಈ ಶ್ರುತಿಯು ಸರ್ವಸಂಗವನ್ನು ನಿಷೇಧಿಸುತ್ತದೆ. 'ಸರ್ವ'ದಲ್ಲಿ ಅಜ್ಞಾನವೂ ಸೇರಿದೆ. ಆದ್ದರಿಂದ ಅದರ ಸಂಗವೂ ನಿಷಿದ್ಧ. ಆದ್ದರಿಂದ ಬ್ರಹ್ಮನಲ್ಲಿ ಅಜ್ಞಾನವನ್ನು ಕಲ್ಪಿಸಿ ಸರ್ವಜ್ಞತ್ವವನ್ನು ಉಪಪಾದಿಸಲು ಆಗುವುದಿಲ್ಲ.

**ಅಥಾಜ್ಞಾನಾನ್ಯಸಂಗೋ ನೇತ್ಯರ್ಥೇऽನರ್ಥಪರಂಪರಾ ।**
**ಯಾ ಶ್ರುತಿರ್ನಿರನಿಷ್ಟಂ ತಂ ನಿರವದ್ಯಂ ಚ ಶಂಸತಿ ॥**
**ಮಹಾಶಕ್ತಿಮತಸ್ತಸ್ಯ ಸಾ ದೋಷಂ ಕಿಲ ಶೇಷಯೇತ್ ॥ ೧೩೨ ॥**

**ಅರ್ಥ-**ಅಥ= ಅಥವಾ, ಅಜ್ಞಾನಾನ್ಯಸಂಗಃ= ಅಜ್ಞಾನ ವ್ಯತಿರಿಕ್ತವಾದ ವಸ್ತುವಿನ ಸಂಬಂಧವು, ನ ಇತ್ಯರ್ಥೇ= ಇಲ್ಲ ಎಂದು ಅರ್ಥವಿದ್ದರೆ, ಅನರ್ಥಪರಂಪರಾ= ಅನರ್ಥಪರಂಪರೆಯೇ ಉಂಟಾಗುತ್ತದೆ, ಯಾ ಶ್ರುತಿಃ= ಯಾವ ವೇದವು, ತಂ= ಆ ಬ್ರಹ್ಮನನ್ನು, ನಿರನಿಷ್ಟಂ ನಿರವದ್ಯಂ ಚ= ಅನಿಷ್ಟಶೂನ್ಯನಾದವನು ಮತ್ತು ದೋಷಶೂನ್ಯನಾದವನು ಎಂದು, ಶಂಸತಿ= ಹೊಗಳುತ್ತದೆಯೋ, ಮಹಾಶಕ್ತಿಮತಃ= ಮಹಾ ಸಾಮರ್ಥ್ಯವುಳ್ಳ, ತಸ್ಯ= ಅವನಿಗೆ, ಸಾ= ಆ ಶ್ರುತಿಯು, ದೋಷಂ= ಅಜ್ಞಾನರೂಪವಾದ ದೋಷವನ್ನು, ಶೇಷಯೇತ್ ಕಿಲ= ಉಳಿಸುವುದೇ?

**ಅನುವಾದ-** ಅಥವಾ ಅಜ್ಞಾನ ಒಂದನ್ನು ಬಿಟ್ಟು ಬೇರೆ ಯಾವ ವಸ್ತುವಿನ ಸಂಗವೂ ಇಲ್ಲ ಎಂದು ಶ್ರುತಿಗೆ ಅರ್ಥವನ್ನು ಹೇಳಿದರೆ ಅನರ್ಥಪರಂಪರೆಯೇ ಉಂಟಾಗುತ್ತದೆ. ಯಾವ ಶ್ರುತಿಯು ಬ್ರಹ್ಮನನ್ನು ಅನಿಷ್ಟರಹಿತ ಮತ್ತು ದೋಷರಹಿತ ಎಂದು ಹೊಗಳುತ್ತದೆಯೋ, ಆ ಶ್ರುತಿಯು ಮಹಾಶಕ್ತಿಶಾಲಿಯಾದ ಅವನಲ್ಲಿ ದೋಷವನ್ನು (ಅಜ್ಞಾನವನ್ನು) ಹೇಗೆ ಉಳಿಸುತ್ತದೆ?

**ಭಾವವಿಲಾಸಿನೀ–** ಅಜ್ಞಾನಾನ್ಯಸಂಗೋ ನೇತ್ಯಸಂಗಶ್ರುತೇರರ್ಥಃ । ತೇನಾಜ್ಞಾನಸಂಗಂ ನ ಸಾ ಶ್ರುತಿರ್ನಿಷೇಧತೀತಿ ಪಕ್ಷಮಪ್ಯನೂದ್ಯ ದೂಷಯತಿ– **ಅಥೇತಿ** ॥ ಅನರ್ಥಪರಂಪರಾಮುಪ-

ಪಾದಯಿತುಮೇಕಮನರ್ಥಂ ತಾವದಾಹ- **ಯಾ ಶ್ರುತಿರಿತಿ** ॥ ಯಾ ಶ್ರುತಿಃ 'ನಿರನಿಷ್ಟೋ ನಿರವದ್ಯಃ' ಇತ್ಯಾದಿಕಾ । ತಂ ಪರಮಾತ್ಮಾನಮ್ । ತಸ್ಯ ಪರಮಾತ್ಮನಃ । ಸಾ ಶ್ರುತಿಃ । ತತ್ಸಜಾತೀಯಾ ಅಸಂಗಶ್ರುತಿರಿತಿ ಯಾವತ್ । ದೋಷಮ್ ಅಜ್ಞಾನರೂಪದೋಷಮ್ । ಮಹಾಶಕ್ತಿಮತ ಇತ್ಯನೇನಾಜ್ಞಾನನಿರ್ಹರಣಸಮರ್ಥತ್ವಾಖ್ಯಯುಕ್ತಿವಿರೋಧಂ ಸೂಚಯತಿ । ಅಜ್ಞಾನಾನ್ಯಸಂಗ-ರಹಿತಮಿತ್ಯರ್ಥಕಥನೇನಾಜ್ಞಾನರೂಪದೋಷಸ್ಯ ಬ್ರಹ್ಮಣ್ಯವಶೇಷಣೇ ಉಕ್ತಶ್ರುತಿಯುಕ್ತಿವಿರೋಧ ಇತಿ ಭಾವಃ ॥ ೧೩೨ ॥

**ವಿವರಣೆ-** ಅಸಂಗಶ್ರುತಿಯು ಅಜ್ಞಾನವ್ಯತಿರಿಕ್ತವಾದ ವಸ್ತುವಿನ ಸಂಗವನ್ನು ನಿಷೇಧ ಮಾಡುತ್ತದೆ ಅಜ್ಞಾನಸಂಗವನ್ನು ನಿಷೇಧಿಸುವುದಿಲ್ಲ ಎಂದು ಹೇಳುವುದು ಅತ್ಯಂತ ಹಾಸ್ಯಾಸ್ಪದ. ರಾಗದ್ವೇಷದುಃಖಾದಿಗಳಿಗೆ ಅಜ್ಞಾನವೇ ಕಾರಣ. ಅಂತಹ ಅಜ್ಞಾನವು ಬ್ರಹ್ಮನಲ್ಲಿ ಇದ್ದರೆ ಅದರಿಂದ ಅನರ್ಥಪರಂಪರೆಯೇ ಉಂಟಾಗುತ್ತದೆ. ಇದಲ್ಲದೆ, ಸರ್ವಜ್ಞತ್ವ, ಸರ್ವೇಶ್ವರತ್ವಾದಿ ಗುಣಗಳ ಸಂಗವನ್ನು ಶ್ರುತಿಯು ನಿಷೇಧಿಸುತ್ತದೆ, ಅಜ್ಞಾನದ ಸಂಗವನ್ನು ಅಂಗೀಕರಿಸುತ್ತದೆ ಎಂದು ಹೇಳುವುದು ಹಾಸ್ಯಾಸ್ಪದವಾದ ಮಾತು. ಅಲ್ಲದೇ, ಮಹಾಸಾಮರ್ಥ್ಯಶಾಲಿಯಾದ ಅವನು ಅಜ್ಞಾನವನ್ನು ಪರಿಹರಿಸಿಕೊಳ್ಳುವ ಸಾಮರ್ಥ್ಯವುಳ್ಳವನು. ಅಂತಹ ಅವನಿಗೆ ಅಜ್ಞಾನದ ಸಂಬಂಧವನ್ನು ಹೇಳುವುದು ಯುಕ್ತಿವಿರುದ್ಧವೂ ಆಗಿದೆ. ಆದ್ದರಿಂದ ಶ್ರುತಿಯು ಅಜ್ಞಾನಾತಿರಿಕ್ತವಾದ ವಸ್ತುವಿನ ಸಂಬಂಧವನ್ನು ನಿಷೇಧಿಸುತ್ತದೆ ಎಂದು ವ್ಯಾಖ್ಯಾನಿಸಬಾರದು.

**ಸರ್ವೇಶ್ವರತ್ವಕರ್ತೃತ್ವಸರ್ವವ್ಯಾಪಿತ್ವಪೂರ್ವಕಾನ್ ।**
**ಗುಣಾನ್ ಪೋಷಯಿತುಂ ಕಸ್ಮಾನ್ನಾದೋಷಂ ಶೇಷಯೇಜ್ಜಗತ್ ॥ ೧೩೩ ॥**

**ಅರ್ಥ-** ಸರ್ವೇಶ್ವರತ್ವಕರ್ತೃತ್ವಸರ್ವವ್ಯಾಪಿತ್ವಪೂರ್ವಕಾನ್= ಸರ್ವೇಶ್ವರತ್ವ, ಕರ್ತೃತ್ವ, ಸರ್ವ ವ್ಯಾಪಿತ್ವ ಮೊದಲಾದ, ಗುಣಾನ್= ಗುಣಗಳನ್ನು, ಪೋಷಯಿತುಂ= ಪೋಷಿಸಲು, (ಅಸಂಗ ಶ್ರುತಿಯು), ಕಸ್ಮಾತ್= ಏಕೆ, ಅದೋಷಂ= ದೋಷಾಪಾದಕವಲ್ಲದ, ಜಗತ್= ಜಗತ್ತನ್ನು, ನ ಶೇಷಯೇತ್?= ಉಳಿಸುವುದಿಲ್ಲ?

**ಅನುವಾದ-** ಸರ್ವೇಶ್ವರತ್ವ, ಕರ್ತೃತ್ವ, ಸರ್ವವ್ಯಾಪಿತ್ವ ಮೊದಲಾದ ಗುಣಗಳನ್ನು ಪೋಷಿಸಲು ಅಸಂಗ ಶ್ರುತಿಯು ದೋಷಾಪಾದಕವಲ್ಲದ ಜಗತ್ತನ್ನು ಏಕೆ ಉಳಿಸುವುದಿಲ್ಲ?

**ಭಾವವಿಲಾಸಿನೀ–** ಅತಃ ಮಹದಾದಿಜಗದನ್ಯಸಂಗೋ ನಾಸ್ತೀತಿ ಬ್ರಹ್ಮಣಿ ನಿಷಿದ್ಧಾಜ್ಞಾನಂ ಸಂಪ್ರತಿಷಿಧ್ಯ ಸರ್ವೇಶ್ವರತ್ವಾದಿಭಗವದ್ಗುಣಪೋಷಕದೋಷಾನಾಧಾಯಕಜಗದವಶೇಷಣಂ ಶ್ರೇಯ ಇತ್ಯಾಹ– **ಸರ್ವೇಶ್ವರತ್ವೇತಿ** ॥ ಈಶ್ವರತ್ವಂ ಚ ಕರ್ತೃತ್ವಂ ಚ ಈಶ್ವರತ್ವಕರ್ತೃತ್ವೇ ಸರ್ವಸ್ಯೇಶ್ವರತ್ವಕರ್ತೃತ್ವೇ ಇತಿ ವಿಗ್ರಹಃ । ಪೋಷಯಿತುಂ ಪುಷ್ಟೀಕರ್ತುಂ । ಸರ್ವಸ್ಯಾಪಿ ಜಗತೋಽವಶೇಷಣೇ ಹಿ ಸರ್ವೇಶ್ವರತ್ವಾದೇಃ ಪೋಷಣಂ ಸ್ಯಾತ್ । ಅನ್ಯಥಾ ಸರ್ವಸ್ಯಾಭಾವೇ

ಕಸ್ಯೇಶ್ವರತ್ವಾದಿಕಮಿತಿ ಗುಣಪುಷ್ಟಿರ್ನ ಸ್ಯಾದಿತಿ ಭಾವಃ । ಅದೋಷಂ ದೋಷಾನಾಧಾಯಕಂ ಜಗತ್ ಕಸ್ಮಾನ್ನ ಶೇಷಯೇತ್ । ಜಗತೋಽನ್ಯಸಂಗರಾಹಿತ್ಯಾರ್ಥಮುಕ್ತ್ವಾ ಜಗತ್ ಶೇಷಯೇದೇವೇತ್ಯರ್ಥಃ ॥ ೧೩೩ ॥

**ವಿವರಣೆ-** ಮಹತ್ತತ್ತ್ವ ಮೊದಲಾದ ವಸ್ತುಗಳ ಸಂಗವಿದೆ; ನಿಂದ್ಯವಾದ ವಸ್ತುಗಳ ಸಂಗವಿಲ್ಲ ಎಂದೇ ಅಸಂಗಶ್ರುತಿಯ ಅರ್ಥವನ್ನು ಸ್ವೀಕರಿಸಿ ಸರ್ವೇಶ್ವರತ್ವಾದಿಗುಣಗಳನ್ನು ಉಳಿಸಿಕೊಳ್ಳುವುದು ಸರಿಯಾದ ಮಾರ್ಗ. ಬ್ರಹ್ಮನಿಗೆ ಜಗತ್ತಿನ ಸಂಬಂಧವೇ ಇಲ್ಲದಿದ್ದರೇ ಅವನು ಹೇಗೆ ಸರ್ವೇಶ್ವರನಾಗಬೇಕು? ಆದ್ದರಿಂದ ಜಗತ್‌ಸಂಬಂಧವನ್ನು ಅಂಗೀಕರಿಸಿ ನಿಂದ್ಯವಾದ ಪಾರತಂತ್ರ್ಯಾದಿಧರ್ಮಗಳ ಸಂಗವನ್ನು ನಿಷೇಧಿಸುವುದು ಸರಿಯಾದ ಕ್ರಮ.

ಸ್ವಸಂಗವನ್ಮಂಗಲಾರ್ಥಂ ಸಂಗಮಂಗೀಕರೋತಿ ತತ್ ।
ಅಜ್ಞಾನದುಃಖಕರ್ಮಾದಿಲೇಪರೂಪಮಪಾಕರೋತ್ ॥ ೧೩೪ ॥

**ಅರ್ಥ-**ತತ್= ಆದ್ದರಿಂದ, ಅಸಂಗಶ್ರುತಿಯು, ಸ್ವಸಂಗವತ್= ತನ್ನ (ಅಸಂಗತ್ವದ) ಸಂಬಂಧದಂತೆ, ಮಂಗಲಾರ್ಥಂ= ಮಂಗಲರೂಪವಾದ ಶ್ರುತಿಗಳ ಅರ್ಥವಾದ, ಸಂಗಂ= ಮಹತ್ತತ್ವ ಮೊದಲಾದವುಗಳ ಸಂಬಂಧವನ್ನು, ಅಂಗೀಕರೋತಿ= ಅಂಗೀಕರಿಸುತ್ತದೆ, ಅಜ್ಞಾನದುಃಖಕರ್ಮಾದಿಲೇಪರೂಪಂ= ಅಜ್ಞಾನ, ದುಃಖ, ಪುಣ್ಯ ಪಾಪಾದಿಲೇಪ-ರೂಪವಾದ ಸಂಗವನ್ನು, ಅಪಾಕರೋತ್= ನಿರಾಕರಿಸಿದೆ.

**ಅನುವಾದ-** ಅಸಂಗಶ್ರುತಿಯು ಬ್ರಹ್ಮನಲ್ಲಿ ತನ್ನ ಸಂಬಂಧವನ್ನು ಅಂಗೀಕರಿಸುವಂತೆ ಮಾಂಗಲಿಕವಾದ ಶ್ರುತಿಗಳ ಅರ್ಥಗಳ 'ಸಂಗ'ವನ್ನು ಅಂಗೀಕರಿಸುತ್ತದೆ. ಅಜ್ಞಾನ, ದುಃಖ, ಪುಣ್ಯಪಾಪಗಳ ಲೇಪ ಮೊದಲಾದ ಸಂಗವನ್ನು ನಿರಾಕರಿಸುತ್ತದೆ.

**ಭಾವವಿಲಾಸಿನೀ–** ತತ್ ತಸ್ಮಾತ್ । ಸ್ವಸಂಗವತ್ ಪ್ರತಿಪಾದ್ಯಪ್ರತಿಪಾದಕಭಾವೇನ ಶ್ರುತಿ-ಸಂಬಂಧವತ್ । ಅನೇನಾಜ್ಞಾನತೋಽನ್ಯಸಂಗೋ ನೇತ್ಯರ್ಥಕಥನೇ ಶ್ರುತೇರಪಿ ಬ್ರಹ್ಮಣಾ ಸಹ ಸಂಗೋ ನ ಭವೇದೇವ । ಅತಃ ಬ್ರಹ್ಮಜ್ಞಾನಸ್ಯ ಸರ್ವಾರ್ಥಸಂಬಂಧೇ ನ ಕಿಂಚಿದ್ ಬಾಧಕಮತ ಏತಾದೃಶಾರ್ಥಕಥನೇಽಸ್ಮದಿಷ್ಟಸಿದ್ಧಿರೇವೇತ್ಯನರ್ಥಾಂತರಂ ಚ ಸೂಚಿತಮ್ । ಮಂಗಲಾರ್ಥ-ಮಿತ್ಯನೇನಪರಮಮಂಗಲಶ್ರುತಿಪ್ರತಿಪಾದಿತಮಹದಾದ್ಯಾಧಾರತ್ವರೂಪಗುಣಸಂಗಂ, ಸರ್ವಸ್ಯ ವಶೀ ಸರ್ವಸ್ಯೇಶಾನಃ' ಇತ್ಯಾದಿಶ್ರುತಿಪ್ರತಿಪಾದಿತಪರಮಮಂಗಲಗುಣಸಂಗಂ 'ಶ್ರೀಸದೋಪಾಸ್ಯ ಪಾದಾಬ್ಜೋಽನಂತಶ್ರೀಃ ಶ್ರೀನಿಕೇತನಃ' ಇತ್ಯಾದಿಸ್ಮೃತ್ಯುಕ್ತಪರಮಮಂಗಲ- ಮಹಾಲಕ್ಷ್ಮೀ-ಸಂಗಮ್ ಅಂತತಃ ಸ್ವಪ್ರತಿಪಾದಿತಾಸಂಗತ್ವಾಖ್ಯಗುಣಸಂಗಂ ಚ ಸಂಗೃಹ್ಣಾತಿ । ತರ್ಹ್ಯಸಂಗಶ್ರುತೇಃ ಕಾ ಗತಿಃ? ಇತ್ಯತಃ ನಿರವದ್ಯತ್ವಶ್ರುತಿಸಮಾಖ್ಯಯಾ ದೋಷರೂಪಗುಣಾಸಂಗ ಏವೇತ್ಯಾಹ- ಅಜ್ಞಾನೇತಿ ॥ ೧೩೪ ॥

**ವಿವರಣೆ-** ಅಸಂಗಶ್ರುತಿಯು ತನ್ನಸಂಬಂಧವನ್ನು ಬ್ರಹ್ಮನಲ್ಲಿ ಅಂಗೀಕರಿಸುತ್ತದೆ. ಇಲ್ಲದಿದ್ದರೆ ಬ್ರಹ್ಮನಲ್ಲಿ ಅಸಂಗತ್ವವು ಸಿದ್ಧವಾಗುವುದು ಹೇಗೆ? ಅಸಂಗತ್ವರೂಪವಾದ ಮಹಿಮೆಯು ಸಿದ್ಧವಾಗುವುದಕ್ಕೆ ತನ್ನ ಸಂಬಂಧವನ್ನು ಅಂಗೀಕರಿಸಿದಂತೆ, ಸರ್ವೇಶ್ವರತ್ವ ಮೊದಲಾದ ಮಹಿಮೆಯು ಸಿದ್ಧವಾಗುವುದಕ್ಕೋಸ್ಕರ ಮಂಗಲವಾದ ಎಲ್ಲಾ ಸಂಗಗಳನ್ನೂ ಅಂಗೀಕರಿಸಬೇಕು. ಅಮಂಗಲವಸ್ತುಗಳ ಸಂಬಂಧವನ್ನು ನಿರಾಕರಿಸಬೇಕು. ಆಗ ಅಮಂಗಲವಾದ ಅಜ್ಞಾನ, ದುಃಖ, ಪಾಪ ಮೊದಲಾದ ದೋಷಗಳ ಅಭಾವವು ಬ್ರಹ್ಮನಲ್ಲಿ ಸಿದ್ಧವಾಗಿ ಇನ್ನೂ ಹೆಚ್ಚು ಮಹಿಮೆಯೇ ಸಿದ್ಧವಾಗುತ್ತದೆ.

**ವಿಶೇಷ ವಿಚಾರ-** ಅಸಂಗಶ್ರುತಿಯು ಬ್ರಹ್ಮನಲ್ಲಿ ಅಂಗೀಕರಿಸುವ ಸಂಗಗಳು :

೧. 'ಅಸಂಗೋ ಹ್ಯಯಂ ಪುರುಷಃ' - ಈ ಶ್ರುತಿಯ ಸಂಗ

೨. ಪರಮಮಂಗಲಕರವಾದ ಶ್ರುತಿಯು ಬ್ರಹ್ಮನಲ್ಲಿ ಪ್ರತಿಪಾದಿಸುವ ಮಹತ್ತತ್ವ ಮೊದಲಾದವುಗಳಿಗೆ ಆಧಾರತ್ವದ ಸಂಗ.

೩. 'ಸರ್ವಸ್ಯವಶೀ', 'ಸರ್ವಸ್ಯ ಈಶಾನಃ' - ಈ ಶ್ರುತಿಗಳಿಂದ ಪ್ರತಿಪಾದ್ಯವಾದ ಪ್ರಭುತ್ವ ಮೊದಲಾದ ಗುಣಗಳ ಸಂಗ.

೪. ಪರಮಮಂಗಲಮಯಳಾದ ಮಹಾಲಕ್ಷ್ಮಿಯ ಸಂಗ.

೫. 'ಅಸಂಗತ್ವ' - ಈ ಗುಣದ ಸಂಗ.

**ಅಥವಾ ದುರ್ಜನೈಸ್ಸಂಗಂ ಸ್ನೇಹರೂಪಂ ನಿಷೇಧತಿ ।**
**ಪ್ರಮಾತೃತ್ವಪ್ರಮೇಯತ್ವಸಂಗಂ ವಾ ತೈರ್ನ್ಯವಾರಯತ್ ॥**
**ಅತಸ್ತ್ವಚ್ಛರಪಾತಸ್ಯ ಲಕ್ಷ್ಯಂ ವಕ್ಷೋಽಭವತ್ತವ ॥ ೧೩೫ ॥**

**ಅರ್ಥ-**ಅಥವಾ= ಅಥವಾ, ದುರ್ಜನೈಃ= ದುರ್ಜನರ ಜೊತೆ, ಸ್ನೇಹರೂಪಂ= ಸ್ನೇಹರೂಪವಾದ, ಸಂಗಂ= ಸಂಬಂಧವನ್ನು, ನಿಷೇಧತಿ= ನಿರಾಕರಿಸುತ್ತದೆ, ವಾ= ಅಥವಾ, ತೈಃ= ದುರ್ಜನರ ಜೊತೆಯಲ್ಲಿ, ಪ್ರಮಾತೃತ್ವಪ್ರಮೇಯತ್ವಸಂಗಂ= ಪ್ರಮಾತೃ ಪ್ರಮೇಯ ಭಾವ, ಸಂಬಂಧವನ್ನು, ನ್ಯವಾರಯತ್= ನಿಷೇಧಿಸುತ್ತದೆ, ಅತಃ= ಆದ್ದರಿಂದ, ತವ ವಕ್ಷಃ= ನಿನ್ನ ಎದೆಯೇ, ತ್ವಚ್ಛರಪಾತಸ್ಯ= ನಿನ್ನ ಬಾಣದ ಪತನಕ್ಕೆ, ಲಕ್ಷ್ಯಮ್ ಅಭವತ್= ಗುರಿಯಾಗುತ್ತದೆ.

**ಅನುವಾದ- ಅಥವಾ ಅಸಂಗಶ್ರುತಿಯು ದುರ್ಜನರ ಜೊತೆಯಲ್ಲಿ ಸ್ನೇಹರೂಪವಾದ ಸಂಬಂಧವನ್ನು ನಿಷೇಧಿಸುತ್ತದೆ. ಅಥವಾ ದುರ್ಜನ ಮತ್ತು ಬ್ರಹ್ಮನಿಗೆ ಪ್ರಮಾತೃ-ಪ್ರಮೇಯಭಾವವನ್ನು ಶ್ರುತಿಯು ನಿರಾಕರಿಸುತ್ತದೆ. ದುರ್ಜನರು ಬ್ರಹ್ಮನ ಪ್ರಮಾತೃಗಳಲ್ಲ. ದುರ್ಜನರ ಪ್ರಮೆಗೆ ಬ್ರಹ್ಮನು ವಿಷಯನಲ್ಲ ಎಂದು ಈ ನಿರಾಕರಣೆಯ ಅಭಿಪ್ರಾಯ. ಆದ್ದರಿಂದ ನಿನ್ನ ಬಾಣಕ್ಕೆ ನಿನ್ನ ಎದೆಯೇ ಗುರಿಯಾಗಿದೆ.**

**ಭಾವವಿಲಾಸಿನೀ–** ಅರ್ಥಾಂತರಂ ಚಾಹ– **ಅಥವೇತಿ** ॥ ಸತ್ಸಂಗಃ ಗುಣಪೂರ್ವಕಂ ಪ್ರೀತಿಃ ಸಂಗ ಇತ್ಯಾದೌ ಸಂಗಶಬ್ದಸ್ಯ ಸ್ನೇಹೇ ಪ್ರಯೋಗಾದಿತಿ ಭಾವಃ। ತೈರ್ದೃತ್ಯೈಃ ಪ್ರಮಾತೃತ್ವಪ್ರಮೇಯತ್ವ-ರೂಪಸಂಗಂ ಪ್ರಮಾತೃಪ್ರಮೇಯಭಾವಲಕ್ಷಣಸಂಗಂ ಬ್ರಹ್ಮಣೇತಿ ಶೇಷಃ। ದುರ್ಜನಾಃ ಬ್ರಹ್ಮಣಃ ಪ್ರಮಾತಾರೋ ನ ಭವಂತಿ। ಬ್ರಹ್ಮ ಚ ತೇಷಾಂ ಪ್ರಮೇಯಂ ನ ಭವತೀತ್ಯಸಂಗಶ್ರುತೇರರ್ಥ ಇತಿ ಭಾವಃ। ಅತಃ ಅಸಂಗಶ್ರುತೇರಜ್ಞಾನಸಂಗರಾಹಿತ್ಯಸ್ಯ ತದಪ್ರಮೇಯತ್ವಸ್ಯಾರ್ಥತಯಾ ಪ್ರಾಪ್ತೇರಿತ್ಯರ್ಥಃ। ತವ ವಕ್ಷ ಏವ ಲಕ್ಷ್ಯಂ ವೇಧ್ಯಮಭವದಿತ್ಯರ್ಥಃ ॥ ೧೩೫ ॥

**ವಿವರಣೆ-** ಅಸಂಗಶ್ರುತಿಯಿಂದ ಅಜ್ಞಾನವನ್ನು ಸಾಧಿಸುವುದು ಪರವಾದಿಯ ಮಹೋದ್ದೇಶ. ಈಗ ಅಸಂಗಶ್ರುತಿಯು ಬ್ರಹ್ಮನಲ್ಲಿ ಅಜ್ಞಾನವನ್ನು ಉಳಿಸಿದರೆ ಉಂಟಾಗುವ ಅನರ್ಥಪರಂಪರೆಯನ್ನು ಹೇಳಿ ಅಸಂಗಶ್ರುತಿಗೆ ಮಾಂಗಲಿಕವಾದ ಸಂಬಂಧ ನಿಷೇಧದಲ್ಲಿ ತಾತ್ಪರ್ಯವಿಲ್ಲವೆಂದು ಉಪಪಾದಿಸಲಾಗಿದೆ. ಆದ್ದರಿಂದ ಅಸಂಗಶ್ರುತಿಯು ನಿನಗೆ ನಿಷ್ಪ್ರಯೋಜಕವಾಯಿತು. ಆದರಿಂದ ಅಸಂಗಶ್ರುತಿ ಎಂಬ ಬಾಣಕ್ಕೆ ನಿನ್ನ ಎದೆಯೇ ಗುರಿ. ಈ ಶ್ರುತಿಯಿಂದ ನಿಮ್ಮ ಅಭೀಷ್ಟವು ನೆರವೇರುವುದಿಲ್ಲ.

ಕಿಂಚ ಸಾರ್ವಜ್ಞ್ಯಮಜ್ಞಾನಸಾಪೇಕ್ಷಮಿತಿ ಯದ್ವಚಃ ।
ಮೂಕೋಽಹಮಿತಿವತ್ತಚ್ಚ ವಿರುದ್ಧಮಿತಿ ಮೇ ಮತಿಃ ॥ ೧೩೬ ॥

**ಅರ್ಥ-** ಕಿಂಚ= ಮತ್ತು, ಸಾರ್ವಜ್ಞ್ಯಂ= ಸರ್ವಜ್ಞತ್ವವು, ಅಜ್ಞಾನಸಾಪೇಕ್ಷಂ= ಅಜ್ಞಾನವನ್ನು ಅವಲಂಬಿಸಿದೆ. ಇತಿ= ಎಂಬ, ಯದ್ವಚಃ= ಯಾವ ಮಾತು ಇದೆಯೋ, ತಚ್ಚ= ಅದೂ ಸಹ, ಮೂಕೋಽಹಮಿತಿವತ್= ನಾನು ಮೂಕ ಎಂಬ ವಾಕ್ಯದಂತೆ, ವಿರುದ್ಧಮ್ ಇತಿ= ವಿರುದ್ಧವೆಂದು, ಮೇ ಮತಿಃ= ನನ್ನ ಅಭಿಪ್ರಾಯ.

**ಅನುವಾದ-** ಮತ್ತು ಸರ್ವಜ್ಞತ್ವವು ಅಜ್ಞಾನಸಾಪೇಕ್ಷವೆಂಬ ಮಾತು 'ನಾನು ಮೂಕ' ಎಂಬ ವಾಕ್ಯದಂತೆ ವ್ಯಾಹತವಾದುದು ಎಂದು ನನ್ನ ಅಭಿಪ್ರಾಯ.

**ಭಾವವಿಲಾಸಿನೀ–** ಪೂರ್ವಂ ಸಾರ್ವಜ್ಞೇನಾಜ್ಞಾನಾಕ್ಷೇಪಮಂಗೀಕೃತ್ಯ ಪರಿಹಾರ ಉಕ್ತಃ। ಅಧುನಾಽಕ್ಷೇಪ್ಯಾಕ್ಷೇಪಕಯೋರಜ್ಞಾನಸಾರ್ವಜ್ಞರೂಪಯೋಃ ಪರಸ್ಪರವಿರೋಧೇನ ವ್ಯಾಹತಿರಿತ್ಯಾಹ– **ಕಿಂಚೇತಿ** ॥ ವಿರುದ್ಧಂ ವ್ಯಾಹತಮ್ ॥ ೧೩೬ ॥

**ವಿವರಣೆ-** ಹಿಂದಿನ ಶ್ಲೋಕಗಳಲ್ಲಿ ಅಜ್ಞಾನವು ಸರ್ವಜ್ಞತ್ವದ ಮೂಲ ಎಂಬ ವಿಚಾರವನ್ನು ಅಂಗೀಕರಿಸಿದರೆ ಉಂಟಾಗುವ ದೋಷಗಳನ್ನು ನಿರೂಪಣೆ ಮಾಡಿದರು. ಈಗ ಅವು ಪರಸ್ಪರವಿರುದ್ಧವಾದ್ದರಿಂದ ಸರ್ವಜ್ಞತ್ವ ಮತ್ತು ಅಜ್ಞಾನಗಳಿಗೆ ಆಕ್ಷೇಪ್ಯ-ಆಕ್ಷೇಪಕಭಾವವೇ ಇಲ್ಲವೆಂದು ಉಪಪಾದಿಸುತ್ತಾರೆ. 'ಮೂಕೋಽಹಂ' ಎಂಬ ಮಾತು ಹೇಗೆ ವ್ಯಾಹತವೋ ಹಾಗೆ ಸರ್ವಜ್ಞತ್ವವು ಅಜ್ಞಾನಾವಲಂಬಿ ಎಂಬ ಮಾತು ವ್ಯಾಹತ.

**ಮಾಯಾಂ ವ್ಯುದಸ್ಯ ಚಿಚ್ಛಕ್ತ್ಯಾ ಕೈವಲ್ಯೇ ಸ್ಥಿತ ಆತ್ಮನಿ ।**
**ಇತಿ ಭಾಗವತೋಕ್ತ್ಯಾ ಯಚ್ಚಿದಪ್ಯಜ್ಞಾನನಾಶಿನೀ ।**
**ಸ್ವರೂಪಜ್ಞಾನಮಪ್ಯಜ್ಞಾನಸ್ಯ ವೈರಿ ನ ಸಂಶಯಃ ॥ ೧೩೭ ॥**

**ಅರ್ಥ-** 'ಮಾಯಾಂ ವ್ಯುದಸ್ಯ ಚಿಚ್ಛಕ್ತ್ಯಾ ಕೈವಲ್ಯೇ ಸ್ಥಿತ ಆತ್ಮನಿ' ಇತಿ= 'ಮಾಯಾಂ ವ್ಯುದಸ್ಯ... ಆತ್ಮನಿ' ಎಂಬ, ಭಾಗವತೋಕ್ತ್ಯಾ= ಭಾಗವತದ ವಚನದಿಂದ, ಚಿದ್ ಅಪಿ= ಚೈತನ್ಯವೂ ಸಹ, ಅಜ್ಞಾನನಾಶಿನೀ ಯತ್= ಅಜ್ಞಾನನಾಶಕವಾದುದರಿಂದ, ಸ್ವರೂಪ-ಜ್ಞಾನಮಪಿ= ಬ್ರಹ್ಮಸ್ವರೂಪ ಜ್ಞಾನವೂ, ಅಜ್ಞಾನಸ್ಯ= ಅಜ್ಞಾನಕ್ಕೆ, ವೈರಿ= ವಿರೋಧಿ, ನ ಸಂಶಯಃ= ಸಂಶಯವಿಲ್ಲ.

**ಅನುವಾದ-** 'ಮಾಯಾಂ ವ್ಯುದಸ್ಯ ಚಿಚ್ಛಕ್ತ್ಯಾ ಕೈವಲ್ಯೇ ಸ್ಥಿತ ಆತ್ಮನಿ' - ಈ ಭಾಗವತ ವಚನವು ಚೈತನ್ಯಶಕ್ತಿಯಿಂದ ಮಾಯೆಯನ್ನು ನಾಶಮಾಡಿ ಜಡಾಮಿಶ್ರವಾದ ತನ್ನ ಸ್ವರೂಪದಲ್ಲಿಯೇ ಇರುತ್ತಾನೆ ಎಂದು ಹೇಳಿದೆ. ಇದರಿಂದ ಕೇವಲ ಚೈತನ್ಯಕ್ಕೂ ಅಜ್ಞಾನ ನಾಶಕತ್ವವು ಇದೆ ಎಂದು ತಿಳಿಯುತ್ತದೆ. ಆದ್ದರಿಂದ ಸ್ವರೂಪಜ್ಞಾನವೂ ಅಜ್ಞಾನಕ್ಕೆ ವಿರೋಧಿಯೇ. ಸಂಶಯವಿಲ್ಲ.

**ಭಾವವಿಲಾಸಿನೀ**—ಸ್ವರೂಪಜ್ಞಾನಸ್ಯಾಜ್ಞಾನಸ್ಯ ಚಾವಿರೋಧಾತ್ ಕಥಂ ವ್ಯಾಹತಿಃ? ಇತ್ಯತ ಆಹ- **ಮಾಯಾಮಿತಿ** ॥ ಯದ್ ಯಸ್ಮಾತ್ । ವ್ಯುದಸ್ಯ ನಿರಸ್ಯ । ಚಿದಪಿ ಸ್ವರೂಪಭೂತಜ್ಞಾನಮಪಿ । ತತ್ ತಸ್ಮಾತ್ ॥ ೧೩೭ ॥

**ವಿವರಣೆ-** ಸರ್ವಜ್ಞತ್ವ ಮತ್ತು ಅಜ್ಞಾನಗಳಿಗೆ ಪರಸ್ಪರವಿರೋಧವಿಲ್ಲ. ಆದ್ದರಿಂದ ವ್ಯಾಹತಿ ಹೇಗೆ? ಸ್ವರೂಪಜ್ಞಾನ ಮತ್ತು ಅಜ್ಞಾನಗಳಿಗೆ ವಿರೋಧವಿಲ್ಲ ಎಂಬ ವಿಚಾರವು ಅಪ್ರಾಮಾಣಿಕ. ಏಕೆಂದರೆ ಭಾಗವತವು ಸ್ವರೂಪಜ್ಞಾನವು ಅಜ್ಞಾನವನ್ನು ನಾಶ ಮಾಡುತ್ತದೆ ಎಂದು ಹೇಳುತ್ತಿದೆ. ಆದ್ದರಿಂದ ಸರ್ವಜ್ಞತ್ವ ಮತ್ತು ಅಜ್ಞಾನಗಳಿಗೆ ವಿರೋಧವು ಇದ್ದೇ ಇದೆ. ಆದ್ದರಿಂದ ವ್ಯಾಹತಿದೋಷವು ಇದೆ.

**ಸುಖಜ್ಞಾನೇ ಸತಿ ತದಾ ತದಜ್ಞಾನಂ ಚ ಕೋಽನ್ವಭೂತ್ ।**
**ಸತ್ಯಜ್ಞಾನೇಽನವಚ್ಛಿನ್ನಸುಖಂ ವಾ ಕೋಽನ್ವಭೂದ್ ಭವೇ ॥ ೧೩೮ ॥**

**ಅರ್ಥ-** ಸುಖಜ್ಞಾನೇ ಸತಿ= ಸುಖದ ಜ್ಞಾನವಿದ್ದರೆ, ತದಾ= ಆಗ, ತದಜ್ಞಾನಂ ಚ= ಸುಖದ ಅಜ್ಞಾನವನ್ನೂ ಸಹ, ಕಃ= ಯಾವನು, ಅನ್ವಭೂತ್= ಅನುಭವಿಸಿದ್ದಾನೆ, ಅಜ್ಞಾನೇ ಸತಿ= ಸುಖದ ಅಜ್ಞಾನವಿರುವಾಗ, ಭವೇ= ಸಂಸಾರದಲ್ಲಿ, ಅನವಚ್ಛಿನ್ನಸುಖಂ ವಾ= ನಿರವಧಿಕವಾದ ಸುಖವನ್ನು ತಾನೆ, ಕಃ= ಯಾರು, ಅನ್ವಭೂದ್= ಅನುಭವಿಸಿದ್ದಾನೆ?

**ಅನುವಾದ-** ಸುಖದ ಜ್ಞಾನವಿರುವಾಗ ಸುಖದ ಅಜ್ಞಾನದ ಅನುಭವವು ಯಾರಿಗೆ ಇದೆ? ಸುಖದ ಅಜ್ಞಾನವಿರುವಾಗ ಸಂಸಾರದಲ್ಲಿ ಅಪರಿಚ್ಛಿನ್ನವಾದ ಸುಖದ ಅನುಭವವು ಯಾರಿಗೆ ಆಗಿದೆ?

**ಭಾವವಿಲಾಸಿನೀ–** ಅನುಭವವಿರುದ್ಧಂ ಚ ಸ್ವರೂಪಜ್ಞಾನಸ್ಯಾಜ್ಞಾನಾವಿರೋಧಿತ್ವಮಿತ್ಯಾಹ– **ಸುಖಜ್ಞಾನ ಇತಿ** ॥ ತದಾ ಸುಖಜ್ಞಾನದಶಾಯಾಂ ತದಜ್ಞಾನಂ 'ಸುಖಂ ನ ಜಾನಾಮಿ' ಇತಿ ಸುಖಾಜ್ಞಾನಮ್ । ಸುಖಜ್ಞಾನಂ ಹಿ ಸಾಕ್ಷೀ ತಚ್ಚ ಸ್ವರೂಪಜ್ಞಾನಂ ತಸ್ಯ ಚಾಜ್ಞಾನಾವಿರೋಧಿತ್ವೇ ಸುಖಜ್ಞಾನದಶಾಯಾಮೇವ 'ಸುಖಂ ನ ಜಾನಾಮಿ' ಇತ್ಯನುಭವೋಽಪಿ ಸ್ಯಾದಿತಿ ಭಾವಃ । ಅಜ್ಞಾನೇ ಸತಿ ಭವೇ ಸಂಸಾರೇ ಅನವಚ್ಛಿನ್ನಸುಖಂ ವಾ ಕೋಽನ್ವಭೂತ್? ಅನುಭೂತವಾನ್? ನ ಕೋಽಪೀತ್ಯರ್ಥಃ । ಸುಖಜ್ಞಾನಸ್ಯಾಜ್ಞಾನಾವಿರೋಧಿತ್ವೇ ತದಪ್ಯನುಭೂಯೇತೇತಿ ಭಾವಃ ॥ ೧೩೮ ॥

**ವಿವರಣೆ-** ಸ್ವರೂಪಜ್ಞಾನವು ಅಜ್ಞಾನವಿರೋಧಿಯಲ್ಲ ಎಂಬ ವಿಚಾರವು ಅನುಭವ ವಿರುದ್ಧ ಎಂದು ಈ ಶ್ಲೋಕದಲ್ಲಿ ಸಮರ್ಥಿಸುತ್ತಾರೆ. ಸುಖದ ಜ್ಞಾನವಿರುವಾಗ ಯಾರಿಗೂ ಸುಖದ ಅಜ್ಞಾನವಿಲ್ಲ. ಆದ್ದರಿಂದ ಸುಖಜ್ಞಾನವು ಸುಖದ ಅಜ್ಞಾನಕ್ಕೆ ವಿರೋಧಿ. ಸುಖಜ್ಞಾನವು ಚೈತನ್ಯರೂಪ. ಆದ್ದರಿಂದ ಚೈತನ್ಯವೇ ಅಜ್ಞಾನವಿರೋಧಿ. ಹಾಗೆಯೇ ಸಂಸಾರದಲ್ಲಿ ಸುಖದ ಅಜ್ಞಾನವಿದೆ. ಆಗ ಯಾರಿಗೂ ಅಪರಿಚ್ಛಿನ್ನವಾದ ಸುಖದ ಅನುಭವವು ಇರುವುದಿಲ್ಲ. ಆದ್ದರಿಂದಲೂ ಅಜ್ಞಾನ ಮತ್ತು ಚೈತನ್ಯಗಳಿಗೆ ವಿರೋಧವು ಸಿದ್ಧವಾಗುತ್ತದೆ.

ಯದ್ ಭಾತಂ ನ ತದಜ್ಞಾತಮಿತಿ ಯತ್ತತ್ತ್ವದೀಪನೇ ।
ಸ್ವಯಮಪ್ಯಾಹ ಸಾರ್ವಜ್ಞಾಜ್ಞತ್ವೇ ತದ್ದೂರದೂರಗೇ ॥ ೧೩೯ ॥

**ಅರ್ಥ-** ಯದ್ ಭಾತಂ= ಯಾವುದು ಜ್ಞಾನಕ್ಕೆ ವಿಷಯವಾಗುತ್ತದೆಯೋ, ತತ್= ಅದು, ನ ಅಜ್ಞಾತಂ= ಅಜ್ಞಾತವಾಗುವುದಿಲ್ಲ, ಇತಿ= ಎಂದು, ತತ್ತ್ವದೀಪನೇ= ತತ್ತ್ವಪ್ರದೀಪ ಎಂಬ ಅದ್ವೈತಗ್ರಂಥದಲ್ಲಿ, ಸ್ವಯಮಪಿ= ತಾನೇ (ಅದ್ವೈತಿಯೇ) ಯದ್ ಆಹ ತದ್= ಹೇಳಿರುವುದರಿಂದ, ಸಾರ್ವಜ್ಞಾಜ್ಞತ್ವೇ= ಸರ್ವಜ್ಞತ್ವ ಮತ್ತು ಅಜ್ಞಾನಗಳು, ದೂರದೂರಗೇ= ಬಹಳ ದೂರ ಇರುವಂತಹವು (ಪರಸ್ಪರ ವಿರುದ್ಧವಾದವು).

**ಅನುವಾದ-** ತತ್ತ್ವಪ್ರದೀಪ ಎಂಬ ಅದ್ವೈತ ಗ್ರಂಥದಲ್ಲಿ ಯಾವುದು ಜ್ಞಾತ-ವಾಗುತ್ತದೆಯೋ ಅದು ಅಜ್ಞಾತವಾಗುವುದಿಲ್ಲ ಎಂದು ಹೇಳಿರುವುದರಿಂದ ಸರ್ವಜ್ಞತ್ವ ಮತ್ತು ಅಜ್ಞತ್ವಗಳು ಪರಸ್ಪರ ವಿರುದ್ಧವಾದವುಗಳು.

**ಭಾವವಿಲಾಸಿನೀ–** ತತ್ ತಸ್ಮಾತ್ । ದೂರದೂರಗೇ ಅತ್ಯಂತದೂರಸ್ಥೇ ಪರಸ್ಪರವಿರುದ್ಧೇ । ಅತೋ ನ ವ್ಯಾಹತೇಃ ಪರಿಹಾರ ಇತಿ ಭಾವಃ ॥ ೧೩೯ ॥

**ವಿವರಣೆ-** ಸರ್ವಜ್ಞತ್ವ ಮತ್ತು ಅಜ್ಞಾನಗಳು ಪರಸ್ಪರ ವಿರುದ್ಧವಾದವುಗಳು ಎಂದು ನಾವು ಮಾತ್ರ ಹೇಳುವುದಲ್ಲ, ಅದ್ವೈತಗ್ರಂಥದಲ್ಲಿಯೂ ಹಾಗೆಯೇ ಹೇಳಿದ್ದಾರೆ. ಆದ್ದರಿಂದ ಸರ್ವಜ್ಞತ್ವವು ಅಜ್ಞಾನಸಾಪೇಕ್ಷವಾಗಿದೆ ಎಂದರೆ ವ್ಯಾಹತಿ ದೋಷವು ಇದ್ದೇ ಇದೆ.

**ಅಜ್ಞತಾऽಖಿಲಸಂವೇತ್ತುರ್ಘಟತೇ ನ ಕುತಶ್ಚನ ।**
**ಇತ್ಯುಕ್ತಮತ ಏವಾರ್ಯೈಃ ಕಾರ್ಯಧುರ್ಯೈರ್ಮಹಾತ್ಮಭಿಃ ॥ ೧೪೦ ॥**

**ಅರ್ಥ-** ಅತ ಏವ= ಆ ಕಾರಣದಿಂದಲೇ, ಮಹಾತ್ಮಭಿಃ= ಮಹಾತ್ಮರಾದ, ಕಾರ್ಯಧುರ್ಯೈಃ= (ವೈಷ್ಣವ ಸಿದ್ಧಾಂತ ಪ್ರತಿಷ್ಠಾಪನೆ ಎಂಬ) ಮಹಾಕಾರ್ಯದ ಭಾರವನ್ನು ಹೊತ್ತಿರುವ, ಆರ್ಯೈಃ= ಪರಮಪೂಜ್ಯರಾದ ಶ್ರೀಮಧ್ವಾಚಾರ್ಯರಿಂದ, ಅಖಿಲ ಸಂವೇತ್ತುಃ= ಸರ್ವಜ್ಞನಾದ ಬ್ರಹ್ಮನಿಗೆ, ಅಜ್ಞತಾ= ಅಜ್ಞಾನವು, ಕುತಶ್ಚನ= ಯಾವ ರೀತಿಯಿಂದಲೂ, ನ ಘಟತೇ= ಉಪಪನ್ನವಾಗುವುದಿಲ್ಲ, ಇತಿ= ಎಂದು, ಉಕ್ತಂ= ಹೇಳಲ್ಪಟ್ಟಿದೆ.

**ಅನುವಾದ-** ಆದ್ದರಿಂದಲೇ ವೈಷ್ಣವಸಿದ್ಧಾಂತಪ್ರತಿಷ್ಠಾಪನೆಯನ್ನು ಮಾಡುವ ಮಹಾಕಾರ್ಯದ ಭಾರವನ್ನು ಹೊತ್ತಿರುವ ಮಹಾನುಭಾವರಾದ ಶ್ರೀಮಧ್ವಾ-ಚಾರ್ಯರಿಂದ ಸರ್ವಜ್ಞನಾದ ಬ್ರಹ್ಮನಿಗೆ ಯಾವ ರೀತಿಯಿಂದಲೂ ಅಜ್ಞಾನವು ಕೂಡುವುದಿಲ್ಲ ಎಂದು ಹೇಳಲ್ಪಟ್ಟಿದೆ.

**ಭಾವವಿಲಾಸಿನೀ–** ಅತ ಏವ ಸಾರ್ವಜ್ಞಾಸಾರ್ವಜ್ಞಯೋಃ ಪರಸ್ಪರವಿರುದ್ಧತ್ವಾದೇವ । ಕಾರ್ಯಂ ಪರನಿರಾಕರಣಾಖ್ಯಮ್ ತತ್ರ ಧುರ್ಯೈರ್ಧುರಂಧರೈರಾಚಾರ್ಯೈರುಪಾಧಿಖಂಡನೇ 'ಅಜ್ಞತಾऽಖಿಲಸಂವೇತ್ತುರ್ಘಟತೇ ನ ಕುತಶ್ಚನ' ಇತ್ಯುಕ್ತಮಿತಿ ॥ ೧೪೦ ॥

**ವಿವರಣೆ-** ಶ್ರೀಮಧ್ವಾಚಾರ್ಯರು ಪರಮಪೂಜ್ಯರು. ಕಾರ್ಯಧುರಂಧರರು. ಅಂದರೆ ಸತ್ಸಿದ್ಧಾಂತ ಸ್ಥಾಪನೆಯ ಕಾರ್ಯಭಾರವನ್ನು ಯಶಸ್ವಿಯಾಗಿ ನಿರ್ವಹಿಸುವವರು. ಸರ್ವಜ್ಞತ್ವ-ಅಜ್ಞಾನಗಳಿಗೆ ಪರಸ್ಪರ ವಿರೋಧವಿರುವುದರಿಂದಲೇ ಶ್ರೀಮದಾಚಾರ್ಯರು ತಮ್ಮ ಉಪಾಧಿ ಖಂಡನದಲ್ಲಿ 'ಅಜ್ಞತಾಖಿಲಸಂವೇತ್ತುಃ ...........' ಇತ್ಯಾದಿವಚನವನ್ನು ಹೇಳಿದ್ದಾರೆ.

**ಜ್ಞಾನೇ ಸತ್ಯೇವ ಚಾಜ್ಞಾನಂ ಯದೀದಂ ತರ್ಹಿ ಕಿಂ ನಞಾ ।**
**ನಾಮ್ನಿ ವಿಪ್ರತಿಪತ್ತಿಸ್ತೇ ಜಾನತಾಂ ಜ್ಞಾನಮೇವ ತತ್ ॥ ೧೪೧ ॥**

**ಅರ್ಥ-** ಜ್ಞಾನೇ = ಸ್ವರೂಪಜ್ಞಾನವು, ಸತ್ಯೇವ = ಇರುವಾಗಲೇ, ಇದಂ = ಈ, ಅಜ್ಞಾನಂ ಚ = ಭಾವರೂಪ ಅಜ್ಞಾನವು, ಯದಿ (ಅಸ್ತಿ) = (ಅದರೊಂದಿಗೆ) ಇರುವುದಾದರೆ, ತರ್ಹಿ = ಆ ಪಕ್ಷದಲ್ಲಿ ನಞಾ ಕಿಂ = ನಞ ನಿಂದ ಏನು ಉಪಯೋಗ? ನಾಮ್ನಿ = ಹೆಸರಿನ ಬಗ್ಗೆ,

ವಿಪ್ರತಿಪತ್ತಿಃ = ವಿರುದ್ಧಾಭಿಪ್ರಾಯವಷ್ಟೇ. ಜಾನತಾಂ = (ಅಕಾರಕ್ಕೆ ವಿಷ್ಣು ಎಂದು ಅರ್ಥ ಎಂಬ) ಜ್ಞಾನವುಳ್ಳವರಿಗೆ, ತೇ= ನಿನ್ನ, ತತ್= ಆ ಅಜ್ಞಾನವು, ಜ್ಞಾನಮೇವ = ಜ್ಞಾನವೇ.

**ಅನುವಾದ-** ಬ್ರಹ್ಮನಿಗೆ ಸ್ವರೂಪಜ್ಞಾನವಿದೆ, ಅಲ್ಲಿಯೇ ಅಜ್ಞಾನವೂ ಇದೆ, ಆದ್ದರಿಂದ ಅಜ್ಞಾನವು ಸ್ವರೂಪಜ್ಞಾನಕ್ಕೆ ಅವಿರೋಧಿ ಎಂದು ಹೇಳಬೇಕಾಗುತ್ತದೆ ಎಂದು ಅಭಿಪ್ರಾಯವಿದ್ದರೆ ಆ ಪಕ್ಷದಲ್ಲಿ ಅಜ್ಞಾನ ಶಬ್ದದಲ್ಲಿ ಇರುವ ವಿರುದ್ಧಾರ್ಥಕವಾದ ನಞ್ ವ್ಯರ್ಥವೇ ಆಗುತ್ತದೆ. ಆದ್ದರಿಂದ ಅಜ್ಞಾನ ಶಬ್ದದಲ್ಲಿ ಇರುವ ಆಕಾರಕ್ಕೆ ಅ ಇತಿ ಬ್ರಹ್ಮ - ಈ ಶ್ರುತಿಗೆ ಅನುಸಾರವಾಗಿ ವಿಷ್ಣು ಎಂದು, ಅಜ್ಞಾನಶಬ್ದಕ್ಕೆ ವಿಷ್ಣುವಿನ ಜ್ಞಾನ ಎಂದು ಅರ್ಥ ಎಂದು ವ್ಯಾಖ್ಯಾನಿಸಬೇಕು. ಹೀಗೆ ವ್ಯಾಖ್ಯಾನಿಸಿದಾಗ ಅವಿದ್ಯೆ ಎಂದರೆ ವಿದ್ಯೆಯೇ ಆಗುತ್ತದೆ. ಅಕ್ಷರಾರ್ಥವನ್ನು ಬಲ್ಲವರಿಗೆ ಅದ್ವೈತದರ್ಶನವು ಹೇಳುವ ಅಜ್ಞಾನವು ಜ್ಞಾನವೇ.

**ಭಾವವಿಲಾಸಿನೀ–** ಇದಾನೀಮಜ್ಞಾನಂ ಸ್ವರೂಪಜ್ಞಾನಾವಿರೋಧಿ ಚೇತ್ ತರ್ಹಿ ನಞರ್ಥ-ಸ್ಯಾಭಾವೇನ ಅಸ್ಯ ಅಕಾರವಾಚ್ಯಸ್ಯ ಪರಮಾತ್ಮನೋ ವಿದ್ಯೇತಿ ವ್ಯುತ್ಪತ್ತ್ಯಾ ಬ್ರಹ್ಮಣ್ಯವಿದ್ಯಾ ನಾಮ ವಿದ್ಯೈವಾಭೂದಿತ್ಯಾಹ– **ಜ್ಞಾನೇ ಸತೀತಿ** ॥ ನಞಾ ಕಿಮ್? ನ ಕಿಮಪಿ । ಭಾವರೂಪಾಜ್ಞಾನ-ವಾದಿನಾ ತ್ವಯಾಽಜ್ಞಾನಪದಾಂತರ್ಗತನಞಃ ವಿರೋಧೋ ಹ್ಯರ್ಥೋ ವಕ್ತವ್ಯಃ । ಸ ಚ ಬ್ರಹ್ಮಜ್ಞಾನೇನ ಸಹ ನಾಸ್ತಿ ಚೇನ್ನಞೋ ವೈಯರ್ಥ್ಯಮಿತಿ ಭಾವಃ। ನಾಮ್ನಿ ಸಾ ವಿದ್ಯೈವೇತ್ಯಸ್ಮಾಭಿಃ ಕಥ್ಯಮಾನವಿದ್ಯಾನಾಮ್ನಿ । ಜಾನತಾಮಕ್ಷರಾರ್ಥಜ್ಞಾನವತಾಮ್ । ತದ್ಬ್ರಹ್ಮಣ್ಯಭಿಲಪ್ಯಮಾನಂ ತೇ ತವ ಅಜ್ಞಾನಂ ಜ್ಞಾನಮೇವ ಅಸ್ಯ ಬ್ರಹ್ಮಣೋ ಜ್ಞಾನಮಿತಿ ವ್ಯುತ್ಪತ್ತಿಸೂಚನಾಯ ಜಾನತಾಮಿತ್ಯುಕ್ತಮ್ ॥ ೧೪೧ ॥

**ವಿವರಣೆ-** 'ಚಿತ್' ನಲ್ಲಿರುವ ಭಾವರೂಪ ಅಜ್ಞಾನವು ಅದರ ಜ್ಞಾನಸ್ವರೂಪಕ್ಕೆ ವಿರೋಧಿಯಲ್ಲ ಎಂಬ ಅದ್ವೈತದರ್ಶನದ ಅಭಿಪ್ರಾಯವನ್ನು ಇನ್ನೊಂದು ಮುಖದಿಂದ ವಿಮರ್ಶಿಸಿದ್ದಾರೆ. ಅಜ್ಞಾನವು ಜ್ಞಾನವಿರೋಧಿ ಅಲ್ಲದಿದ್ದರೆ 'ಅಜ್ಞಾನ' ಶಬ್ದದಲ್ಲಿರುವ ನಞ್ ವ್ಯರ್ಥವಾಗುತ್ತದೆ. ಆದ್ದರಿಂದ 'ಅಜ್ಞಾನ' ಶಬ್ದದಲ್ಲಿರುವ 'ಅ' ವನ್ನು 'ನಞ್' ಎಂದು ಪರಿಗಣಿಸಬಾರದು. 'ಅ ಇತಿ ಬ್ರಹ್ಮ' ಎಂದು ಶ್ರುತಿಯು ಇದೆ; ಇದರಂತೆ ('ಅಜ್ಞಾನ' ಶಬ್ದದಲ್ಲಿರುವ) 'ಅ' ಗೆ ಬ್ರಹ್ಮ ಎಂದು ಅರ್ಥ; 'ಅಜ್ಞಾನ' ಶಬ್ದಕ್ಕೆ ಬ್ರಹ್ಮನ ವಿದ್ಯೆ ಎಂದು ಅರ್ಥ ಎಂದು ವ್ಯಾಖ್ಯಾನಿಸಬೇಕು. ಆದ್ದರಿಂದ ಅದ್ವೈತದರ್ಶನವು ಬ್ರಹ್ಮನಿಷ್ಠ ಎಂದು ಹೇಳುವ 'ಅಜ್ಞಾನ' ವು ಅವನಲ್ಲಿರುವ ಜ್ಞಾನವೇ.

ಆದ್ದರಿಂದ ಮಧ್ವದರ್ಶನವು ಬ್ರಹ್ಮನಲ್ಲಿರುವ ಯಾವ ಗುಣವನ್ನು 'ಜ್ಞಾನ' ಎಂದು ಹೆಸರಿಸುವುದೋ, ಅದನ್ನು ಅದ್ವೈತದರ್ಶನವು 'ಅಜ್ಞಾನ' ಎಂದು ಹೆಸರಿಸಿದೆ; ಇದು ವಸ್ತುವಿನ ಹೆಸರಿನ ಬಗ್ಗೆ ವಿವಾದ, ಅಷ್ಟೇ, ವಸ್ತುವಿನ ಬಗ್ಗೆ ಅಲ್ಲ.

ಬ್ರಹ್ಮನಲ್ಲಿ ಮಾನಸಜ್ಞಾನವಿಲ್ಲ-

ಯದಿ ತನ್ಮಾನಸಂ ಜ್ಞಾನಂ ರುಣದ್ಧಿ ತವ ನಿಷ್ಕಲೇ ।
ನ ಬ್ರಹ್ಮಣಿ ಮನೋಽಪ್ಯಸ್ತಿ ತಸ್ಯಾಜ್ಞಾನಂತು ಕೇನ ತತ್ ॥ ೧೪೨ ॥

**ಅರ್ಥ**- ತತ್= ಅದು= ಅಜ್ಞಾನವು, ಮಾನಸಂ= ಬ್ರಹ್ಮನ ಮನೋಜನ್ಯವಾದ, ಜ್ಞಾನಂ = ಜ್ಞಾನವನ್ನು ಯದಿ ರುಣದ್ಧಿ = ವಿರೋಧಿಸುತ್ತದೆಯಾದರೆ, ತವ = ನಿನ್ನ ನಿಷ್ಕಲೇ = ಹದಿನಾರುಕಲೆಗಳಿಲ್ಲದ, ಬ್ರಹ್ಮಣಿ = ಪರಬ್ರಹ್ಮನಲ್ಲಿ, ಮನಃ ಅಪಿ = ಮನಸ್ಸೂ ಕೂಡ, ನಾಸ್ತಿ = ಇಲ್ಲ. ತತ್ = ಆದ್ದರಿಂದ, ತಸ್ಯ = ಆ ಬ್ರಹ್ಮನಿಗೆ, ಅಜ್ಞಾನಂ= ಅಜ್ಞಾನವು, ಕೇನ= ಯಾವ ಹೇತುವಿನಿಂದ (ಉಪಪನ್ನವಾಗುತ್ತದೆ)?

**ಅನುವಾದ**- ಪ್ರಶ್ನೆ : ಅಜ್ಞಾನಶಬ್ದದಲ್ಲಿರುವ ನಞ್‌ಗೆ ವಿರೋಧ ಎಂದೇ ಅರ್ಥ. ಈ ಅಜ್ಞಾನವು ಬ್ರಹ್ಮನ ಮಾನಸಜ್ಞಾನಕ್ಕೆ ವಿರೋಧಿ?

ಉತ್ತರ : ಮನಸ್ಸಿನ ಪರಿಣಾಮವಾದ ಜ್ಞಾನವೇ ಮಾನಸಜ್ಞಾನ. ಅದ್ವೈತಮತದಲ್ಲಿ **'ನಿಷ್ಕಲಂ ನಿಷ್ಕ್ರಿಯಂ ಶಾಂತಂ'** ಎಂಬ ಶ್ರುತಿಗೆ ಅನುಗುಣವಾಗಿ ಪರಬ್ರಹ್ಮನು ಕಲಾರಹಿತ. ಆದ್ದರಿಂದ ಅವನಿಗೆ ಮನಸ್ಸು ಇಲ್ಲ. ಆದ್ದರಿಂದಲೇ ಮಾನಸಜ್ಞಾನವೂ ಇಲ್ಲ. ಆದ್ದರಿಂದಲೇ ಪರಬ್ರಹ್ಮನಲ್ಲಿರುವ ಅಜ್ಞಾನವು ಅವನ ಮಾನಸಜ್ಞಾನಕ್ಕೆ ವಿರೋಧಿಯಾಗಲಾರದು. ಆದ್ದರಿಂದ ಬ್ರಹ್ಮನಲ್ಲಿ ಅಜ್ಞಾನವನ್ನು ಸಮರ್ಥಿಸುವ ಯಾವ ಹೇತುವೂ ಇಲ್ಲ.

**ಭಾವವಿಲಾಸಿನೀ**—ತದಜ್ಞಾನಂ ತರ್ಹಿ ನಿಷ್ಕಲೇ ಏಕಾದಶೇಂದ್ರಿಯಪಂಚಭೂತಾತ್ಮಕ- ಷೋಡಶ-ಕಲಾರಹಿತೇ ಬ್ರಹ್ಮಣಿ ಮನೋಽಪಿ ನಾಸ್ತೀತಿ ಯೋಜನಾ । ತಸ್ಯ ಬ್ರಹ್ಮಣಃ ತದಜ್ಞಾನಂ ಕೇನ ನಿಮಿತ್ತೇನಾಜ್ಞಾನಮ್? ನ ಕೇನಾಪಿ । ಜ್ಞಾತೃಮಾನಸವೃತ್ತ್ಯಾ ವಿರೋಧಸ್ತು ಜ್ಞಾತೃನಿಷ್ಠಾ-ಜ್ಞಾನಸ್ಯೈವ ನ ಬ್ರಹ್ಮನಿಷ್ಠಾಜ್ಞಾನಸ್ಯ ವೈಯ್ಯಧಿಕರಣ್ಯಾತ್ । ಸ್ವರೂಪಜ್ಞಾನಂ ಪ್ರತ್ಯವಿರೋಧಿತ್ವಾತ್ ಮಾನಸಜ್ಞಾನಸ್ಯ ಚ ಬ್ರಹ್ಮಣ್ಯಭಾವಾತ್ ನ ದ್ವೇಧಾಪಿ ತಸ್ಯಾಜ್ಞಾನತ್ವಮಿತಿ ಭಾವಃ ॥ ೧೪೨ ॥

**ವಿವರಣೆ**- ಅಜ್ಞಾನವು ಎಲ್ಲಿ ಇರುವುದೋ ಅಲ್ಲಿ ಅದು ಜ್ಞಾನಕ್ಕೆ ವಿರೋಧಿಯಾಗುತ್ತದೆ. ಪರಬ್ರಹ್ಮನಲ್ಲಿ ಇರುವ ಅಜ್ಞಾನವು ಜೀವನಲ್ಲಿರುವ ಮಾನಸಜ್ಞಾನಕ್ಕೆ ವಿರೋಧಿ ಆಗಲಾರದು. ತನ್ನ ಮಾನಸಜ್ಞಾನಕ್ಕೆ ವಿರೋಧಿಯಾಗಬಹುದು. ಪರಬ್ರಹ್ಮನಲ್ಲಿ ಮಾನಸ ಜ್ಞಾನವಿಲ್ಲ; ಆದ್ದರಿಂದ ಅದಕ್ಕೂ ವಿರೋಧಿಯಾಗಲಾರದು.

**ಟಿಪ್ಪಣಿ** : ಐದು ಜ್ಞಾನೇಂದ್ರಿಯಗಳು. ಐದು ಕರ್ಮೇಂದ್ರಿಯಗಳು, ಮನಸ್ಸು, ಐದು ಭೂತಗಳು - ಇವು ಹದಿನಾರು ಕಲೆಗಳು.

ಶ್ಲೋಕದಲ್ಲಿರುವ 'ತದ್' ಪದವನ್ನು ಮೂರು ಕಡೆ ಅನ್ವಯಿಸಬೇಕು. (೧) ತತ್ ಪ್ರಾಕ್‌ಸೃಷ್ಟೇಃ (೨) ತದ್ ಅಜ್ಞಾನಮ್ (೩) ತತ್ ಪರಃ

**ಅಜ್ಞಾನಕಲ್ಪ್ಯಂ ಸರ್ವಂ ತೇ ಮನಆದಿಜಗತ್ತ್ರಯಮ್ ।**
**ಪ್ರಾಕ್‌ಸೃಷ್ಟೇರ್ನತದಜ್ಞಾನಂ ನಾಜ್ಞೋ ಭ್ರಾಂತೋಽಪಿ ವಾ ಪರಃ ॥ ೧೪೩ ॥**

**ಅರ್ಥ-** ತೇ= ನಿನ್ನ (ಮತದಲ್ಲಿ), ಮನಆದಿಜಗತ್‌ತ್ರಯಂ ಸರ್ವಂ= ಮನಸ್ ಮೊದಲಾದ ಮೂರು ಲೋಕಗಳೆಲ್ಲವೂ, ಅಜ್ಞಾನಕಲ್ಪ್ಯಮ್= ಅಜ್ಞಾನದ ಕಾರ್ಯ, ತದ್= ಆದ್ದರಿಂದ, ಪ್ರಾಕ್ ಸೃಷ್ಟೇ= ಸೃಷ್ಟಿಗಿಂತ ಮೊದಲು, ತದ್= ಆ= ಬ್ರಹ್ಮನಲ್ಲಿ ಅಂಗೀಕರಿಸಲ್ಪಡುವ ಅಜ್ಞಾನವು, ನ ಅಜ್ಞಾನಂ= ಜ್ಞಾನವಿರೋಧಿ ಅಲ್ಲ= ಅಜ್ಞಾನವಲ್ಲ, ತತ್= ಆದ್ದರಿಂದ, ಪರಃ= ಪರಬ್ರಹ್ಮನು, ಅಜ್ಞಃ ನ= ಅಜ್ಞಾನವುಳ್ಳವನು ಅಲ್ಲ, ಭ್ರಾಂತಃ ಅಪಿ ನ= ಭ್ರಮೆವುಳ್ಳವನೂ ಅಲ್ಲ.

**ಅನುವಾದ-** ಅದ್ವೈತ ದರ್ಶನದಲ್ಲಿ ಮನಸ್ ಮೊದಲಾದ ಇಡೀ ವಿಶ್ವವು ಅಜ್ಞಾನಕಲ್ಪಿತ. ಆದ್ದರಿಂದ ಸೃಷ್ಟಿಗಿಂತ ಮೊದಲು ಮನಸ್ ಇಲ್ಲ. ಆದ್ದರಿಂದ ಮಾನಸ ಜ್ಞಾನವು ಇಲ್ಲ. ಆದ್ದರಿಂದ ಸೃಷ್ಟಿಗಿಂತ ಮೊದಲು ಬ್ರಹ್ಮನಲ್ಲಿ ಇದೆ ಎಂದು ಮಾಯಾವಾದವು ಹೇಳುವ ಅಜ್ಞಾನವು ಮಾನಸಜ್ಞಾನವಿರೋಧಿ ಅಲ್ಲ. ವಿರೋಧಿ ಆಗದ ಅದು ಅಜ್ಞಾನವೇ ಅಲ್ಲ. ಆದ್ದರಿಂದ ಪರಬ್ರಹ್ಮನಿಗೆ ಅಜ್ಞಾನವಿದೆ ಎಂದು ಮತ್ತು ಅಜ್ಞಾನದಿಂದಾಗಿ ಇಲ್ಲದ ವಿಶ್ವದ ಕಲ್ಪನೆಯು (ಭ್ರಾಂತಿಯು) ಅವನಿಗೆ ಇದೆ ಎಂದು ಸಿದ್ಧವಾಗುವುದಿಲ್ಲ.

**ಭಾವವಿಲಾಸಿನೀ–** ತೇ ಮತೇ ಸರ್ವಂಮನಆದಿಜಗತ್ತ್ರಯಮಿತಿ ಸಂಬಂಧಃ । ಪ್ರಾಕ್ ಸೃಷ್ಟೇಃ, ಸೃಷ್ಟೇಃ ಪ್ರಾಕ್ । ತದ್ ಬ್ರಹ್ಮಣಿ ತ್ವಯಾಂಗೀಕ್ರಿಯಮಾಣಂ ಅಜ್ಞಾನಂ ನ ಜ್ಞಾನವಿರೋಧೀತಿ ವ್ಯುತ್ಪತ್ತ್ಯಾ ನಾಜ್ಞಾನಂ ತತ್ ತಸ್ಮಾತ್ ಪರಃ ಪರಮಾತ್ಮಾ ಅಜ್ಞೋಽಪಿ ನ ಭ್ರಾಂತೋಽಪಿ ನ । ಅಜ್ಞಾನನಿಮಿತ್ತಕಭ್ರಾಂತಿಮಾನಪಿ ನ । ಅತಸ್ತೇನ ಬ್ರಹ್ಮಣಾ ಪ್ರಕ್ಲ್ಪ್ಯಮಾಣಂ ಜಗನ್ನಾಜ್ಞಾನಕಲ್ಪಿತಮಿತಿ ಭಾವಃ ॥ ೧೪೩ ॥

**ವಿವರಣೆ-** ಬ್ರಹ್ಮನಲ್ಲಿ ಅಂಗೀಕರಿಸಲ್ಪಡುವ ಅಜ್ಞಾನಕ್ಕೆ ಮಾನಸಜ್ಞಾನವು ವಿರೋಧಿ ಎಂದು ಹೇಳಿದರೆ, ಸೃಷ್ಟಿಗಿಂತ ಮೊದಲು ಮಾನಸಜ್ಞಾನವು ಇಲ್ಲದಿರುವುದರಿಂದ ಜ್ಞಾನವಿರೋಧಿತ್ವ ಎಂಬ ಲಕ್ಷಣವು ಇಲ್ಲದ ಅಜ್ಞಾನವು ವಸ್ತುತಃ ಅಜ್ಞಾನವಲ್ಲ. ಬರೀ ಹೆಸರು. ಆದ್ದರಿಂದ ವಿಶ್ವವು ಬ್ರಹ್ಮನ ಅಜ್ಞಾನದಿಂದ ಕಲ್ಪಿತವಲ್ಲ.

**ಸೃಜ್ಯಜೀವಸ್ಯ ಮನಸೋ ವೃತ್ತ್ಯಾ ನಾಶ್ಯತ್ವತೋ ಯದಿ ।**
**ತದಜ್ಞಾನಂ ತವ ಮತಂ ಯುಕ್ತಿರ್ನಾಂಗೀಕರೋತಿ ತತ್ ॥ ೧೪೪ ॥**

ಅನ್ಯಜ್ಞಾನೇನಾನ್ಯನಿಷ್ಠಸ್ಯಾಜ್ಞಾನಸ್ಯಾನಿವರ್ತನಾತ್ ।
ಕಿಂ ದೇವದತ್ತಜ್ಞಾನೇನ ಯಜ್ಞದತ್ತಾಜ್ಞತಾ ಗತಾ ॥ ೧೪೫ ॥

**ಅರ್ಥ-** ಸೃಜ್ಯಜೀವಸ್ಯ = ಮುಂದೆ ಸೃಷ್ಟಿಸಲ್ಪಡುವ ಜೀವನ, ಮನಸಃ = ಮನಸ್ಸಿನ, ವೃತ್ತ್ಯಾ = ವೃತ್ತಿಯಿಂದ, ನಾಶ್ಯತ್ವತಃ = ನಾಶಕ್ಕೆ ಒಳಗಾಗುವುದರಿಂದ, ತದ್= ಅದು= ಪರಬ್ರಹ್ಮನ ಅಜ್ಞಾನವು, ಅಜ್ಞಾನಂ= ಜ್ಞಾನವಿರೋಧಿ ಎಂದು (ಭಾವಿ ಜೀವನ ಮಾನಸಜ್ಞಾನದಿಂದ ನಾಶವಾಗುವುದರಿಂದ ಅಜ್ಞಾನ ಎಂದು) ತವ = ನಿನ್ನ, ಮತಂ ಯದಿ= ಅಭಿಪ್ರಾಯವಾಗಿದ್ದರೆ, ತತ್= ಆ ಮತವನ್ನು, ಯುಕ್ತಿಃ = ಯುಕ್ತಿಯು, ನಾಂಗೀಕರೋತಿ = ಒಪ್ಪುವುದಿಲ್ಲ.

ಅನ್ಯಜ್ಞಾನೇನ = ಒಬ್ಬನ ಜ್ಞಾನದಿಂದ, ಅನ್ಯನಿಷ್ಠಸ್ಯ = ಬೇರೊಬ್ಬನಲ್ಲಿರುವ, ಅಜ್ಞಾನಸ್ಯ = ಅಜ್ಞಾನದ, ಅನಿವರ್ತನಾತ್ = ನಿವೃತ್ತಿಯಾಗದಿರುವುದರಿಂದ, (ಯುಕ್ತಿಃ = ಯುಕ್ತಿಯು, ನಾಂಗೀಕರೋತಿ = ಒಪ್ಪುವುದಿಲ್ಲ) ದೇವದತ್ತಜ್ಞಾನೇನ = ದೇವದತ್ತನ ಜ್ಞಾನದಿಂದ, ಯಜ್ಞದತ್ತಾಜ್ಞತಾ = ಯಜ್ಞದತ್ತನಲ್ಲಿರುವ ಅಜ್ಞಾನವು, ಗತಾ ಕಿಂ = ಹೋಗಿದೆಯೇನು?

**ಅನುವಾದ-** ಪರಬ್ರಹ್ಮನಲ್ಲಿರುವ ಅಜ್ಞಾನದಿಂದ ಮುಂದೆ ಜೀವನೊಬ್ಬ ಸೃಷ್ಟನಾಗಲಿರುವನು. ಅವನ ಮನೋಜನ್ಯಜ್ಞಾನ (ಅಂತಃಕರಣವೃತ್ತಿ)ದಿಂದ ಬ್ರಹ್ಮನಲ್ಲಿರುವ ಅಜ್ಞಾನವು ನಾಶವಾಗುವುದರಿಂದ ಅದು ಅಜ್ಞಾನವೆನಿಸಿದೆ. ಜ್ಞಾನದಿಂದ ನಾಶವಾಗುವ ವಸ್ತುವೇ ಅಜ್ಞಾನವಷ್ಟೇ? ಇದು ಮಾಯಾವಾದಿಯ ಅಭಿಪ್ರಾಯವಾಗಿದ್ದರೆ ಇದಕ್ಕೆ ಮುಂದೆ ಹೇಳುವ ಯುಕ್ತಿವಿರೋಧವು ಇದೆ.

ಒಬ್ಬನಲ್ಲಿರುವ ಜ್ಞಾನದಿಂದ ಮತ್ತೊಬ್ಬರಲ್ಲಿರುವ ಅಜ್ಞಾನವು ಹೋಗುವುದಿಲ್ಲ. ಅದಕ್ಕೆ ದೃಷ್ಟಾಂತವೂ ಇದೆ. ದೇವದತ್ತನ ಜ್ಞಾನದಿಂದ ಯಜ್ಞದತ್ತನಲ್ಲಿರುವ ಅಜ್ಞಾನವು ಹೋಗುವುದಿಲ್ಲ. ಆದ್ದರಿಂದ ಭಾವಿಜೀವನ ಮಾನಸಜ್ಞಾನದಿಂದ ಪರಬ್ರಹ್ಮನಲ್ಲಿರುವ ಅಜ್ಞಾನವೂ ಹೋಗಲಾರದು.

**ಭಾವವಿಲಾಸಿನೀ–** ಯದಿ ಸೃಜ್ಯಜೀವಸ್ಯ ಸ್ರಕ್ಷ್ಯಮಾಣಜೀವಸ್ಯ ಮನೋವೃತ್ತ್ಯಾ ಭಾವಿಜೀವನಿಷ್ಠಾಂತಃಕರಣವೃತ್ತ್ಯೇತ್ಯರ್ಥಃ । ತದಜ್ಞಾನತ್ವಾಭಿಮತಮ್ । ಯುಕ್ತಿಸ್ತದುಕ್ತರೀತ್ಯಾ ಕಥ್ಯಮಾನಮಜ್ಞಾನತ್ವಂ ಯುಕ್ತಿರ್ನಾಂಗೀಕರೋತೀತಿ ಸಂಬಂಧಃ ॥ ೧೪೪ ॥

ತಾಮೇವ ಯುಕ್ತಿಂ ದರ್ಶಯತಿ– **ಅನ್ಯಜ್ಞಾನೇನೇತಿ** ॥ ತತ್ರ ದೃಷ್ಟಾಂತಮಾಹ– **ಕಿಂ ದೇವದತ್ತೇತಿ** ॥ ೧೪೫ ॥

ಐಕ್ಯೇನ ತತ್ಸಮಾಧಾನಮಪಿ ದತ್ತೋತ್ತರಂ ತವ ।
ಐಕ್ಯೇ ಸತಿ ತದಜ್ಞಾನಂ ತತ್ಸಿದ್ಧೌ ಚ ತದೇಕತಾ ॥ ೧೪೬ ॥

**ಸ್ವಾಜ್ಞಾನಾದೇವ ತದ್ ಬ್ರಹ್ಮ ಜೀವತಾಮೇತಿ ಚೇದ್ಧಿ ಸಾ ।
ಅತೋಽನ್ಯೋನ್ಯಾಶ್ರಯಾಚ್ಚಾತ್ರ ನಞರ್ಥೋ ನಾಶ್ಯತಾ ನ ತೇ ॥ ೧೪೭ ॥**

**ಅರ್ಥ-** ತವ= ನಿನ್ನ ದರ್ಶನದ, ಐಕ್ಯೇನ= ಜೀವ-ಬ್ರಹ್ಮೈಕ್ಯದಿಂದ, ತತ್ ಸಮಾಧಾನಮ್= ಒಬ್ಬನ ಜ್ಞಾನದಿಂದ ಮತ್ತೊಬ್ಬನ ಅಜ್ಞಾನಕ್ಕೆ ನಾಶವಿಲ್ಲ ಎಂಬ ಪರಿಸ್ಥಿತಿಗೆ ಪರಿಹಾರವು, ದತ್ತೋತ್ತರಮ್= ಈಗಾಗಲೇ ಉತ್ತರಿಸಲ್ಪಟ್ಟಿದೆ.

ಐಕ್ಯೇ ಸತಿ= ಜೀವಬ್ರಹ್ಮೈಕ್ಯವು ಸಿದ್ಧವಾದರೆ, ತದಜ್ಞಾನಂ= ಬ್ರಹ್ಮನಲ್ಲಿ ಅಜ್ಞಾನವು ಸಿದ್ಧವಾಗುತ್ತದೆ. ತತ್ಸಿದ್ಧೌ= ಬ್ರಹ್ಮನಲ್ಲಿ ಅಜ್ಞಾನವು ಸಿದ್ಧವಾದರೆ, ತದೇಕತಾ= ಜೀವಬ್ರಹ್ಮೈಕ್ಯವು ಸಿದ್ಧವಾಗುತ್ತದೆ.

ಸ್ವಾಜ್ಞಾನಾದ್ ಏವ= ತನ್ನ ಅಜ್ಞಾನದಿಂದಲೇ, ತದ್ ಬ್ರಹ್ಮ= ಆ ಬ್ರಹ್ಮವು, ಜೀವತಾಂ= ಜೀವಭಾವವನ್ನು, ಏತಿ ಚೇತ್= ಹೊಂದುವುದಾದರೆ, ಸಾ= ಅದು= ಜೀವಬ್ರಹ್ಮೈಕ್ಯವು, ಹಿ= ಯುಕ್ತವಾಗುವುದಷ್ಟೆ. ಅತಃ= ಆದ್ದರಿಂದ= ವ್ಯಧಿಕರಣವಾದುದರಿಂದ (ಶ್ಲೋಕ ೧೪೨), ಐಕ್ಯದಿಂದ ಪರಿಹಾರವು ಯುಕ್ತವಲ್ಲವಾದ್ದರಿಂದ (ಶ್ಲೋಕ ೧೪೬), ಅನ್ಯೋನ್ಯಾಶ್ರಯವಿರುವುದರಿಂದ (ಶ್ಲೋಕ ೧೪೬,೧೪೭), ತೇ= ನಿನ್ನ ಮತದಲ್ಲಿ, ಅತ್ರ= ಇಲ್ಲಿ= 'ಅಜ್ಞಾನ' ಶಬ್ದದಲ್ಲಿ, ನಾಶ್ಯತಾ= ನಾಶಾರ್ಹತೆಯು, ನ ನಞರ್ಥಃ= ನಞ್ ನ ಅರ್ಥವಲ್ಲ.

**ಅನುವಾದ-** ಒಬ್ಬನ ಜ್ಞಾನದಿಂದ ಮತ್ತೊಬ್ಬನ ಅಜ್ಞಾನಕ್ಕೆ ನಾಶವಿಲ್ಲ. ನಿಜ. ಆದರೆ ಜೀವನೇ ಬ್ರಹ್ಮ. ಆದ್ದರಿಂದ ಜೀವನ ಜ್ಞಾನದಿಂದ ಬ್ರಹ್ಮನ ಅಜ್ಞಾನಕ್ಕೆ ನಾಶ ಎಂದರೆ ಬ್ರಹ್ಮನ ಜ್ಞಾನದಿಂದ ಬ್ರಹ್ಮನ ಅಜ್ಞಾನಕ್ಕೆ ನಾಶ ಎಂದೇ ಅರ್ಥ. ಹೀಗೆ ಆಗಲು ಏನೂ ಅನುಪಪತ್ತಿಯು ಇಲ್ಲ - ಹೀಗೆ ಸಮಾಧಾನವನ್ನು ಹೇಳಲು ಆಲೋಚಿಸಬಹುದು. ಇದೇ 'ಐಕ್ಯೇನ ಸಮಾಧಾನ'.

ಇದು ಸರಿಯಲ್ಲ. ಅದ್ವೈತದರ್ಶನದಲ್ಲಿ ಜೀವನೇ ಬ್ರಹ್ಮ ಆಗಿರುವಂತೆ ದೇವದತ್ತನೇ ಯಜ್ಞದತ್ತ. ಬೇರೆ ಬೇರೆ ಚೇತನಗಳು ಇಲ್ಲವೇ ಇಲ್ಲ. ಆದ್ದರಿಂದ ದೇವದತ್ತನ ಜ್ಞಾನದಿಂದ ಯಜ್ಞದತ್ತನ ಅಜ್ಞಾನದ ಪರಿಹಾರವೂ ಆಗಬೇಕಾದೀತು. ಈ ಉತ್ತರವನ್ನು ೧೪೫ನೇ ಶ್ಲೋಕದಲ್ಲೇ ಹೇಳಲಾಗಿದೆ.

ಇನ್ನೊಂದು ದೋಷವೂ ಇದೆ : ಜೀವ-ಬ್ರಹ್ಮೈಕ್ಯವು ಸಿದ್ಧವಾದರೆ ಬ್ರಹ್ಮನಲ್ಲಿ ಅಜ್ಞಾನವು ಉಪಪನ್ನವಾಗುತ್ತದೆ. ಅಜ್ಞಾನವು ಉಪಪನ್ನವಾದರೆ, ತನ್ನದೇ ಅಜ್ಞಾನದಿಂದ ಬ್ರಹ್ಮವು ಜೀವಭಾವವನ್ನು ಹೊಂದುವುದಾದರೆ ಜೀವಬ್ರಹ್ಮೈಕ್ಯವು ಉಪಪನ್ನವಾಗುತ್ತದೆ. ಈ ಅನ್ಯೋನ್ಯಾಶ್ರಯದೋಷ ಮತ್ತು ೧೪೨ ಮತ್ತು

**೧೪೬ನೇ ಶ್ಲೋಕಗಳಲ್ಲಿ ಹೇಳಿದಂತೆ ವ್ಯಧಿಕರಣತ್ವ ಮತ್ತು ದೇವದತ್ತ ಜ್ಞಾನದಿಂದ ಯಜ್ಞದತ್ತನ ಅಜ್ಞಾನದ ಪರಿಹಾರವಾಗುವ ಪ್ರಸಂಗ - ಈ ಮೂರು ಬಾಧಕಗಳಿರುವುದರಿಂದ 'ಅಜ್ಞಾನ' ಶಬ್ದದಲ್ಲಿರುವ ನಞ್‌ಗೆ ನಾಶಯೋಗ್ಯತೆ ಎಂದು ಅರ್ಥವನ್ನು ಹೇಳಲು ಅವಕಾಶವಿಲ್ಲ.**

**ಭಾವವಿಲಾಸಿನೀ–** ಐಕ್ಯೇನ ಜೀವಬ್ರಹ್ಮಣೋರೈಕ್ಯೇನ । ತತ್ಸಮಾಧಾನಮ್ ಅನ್ಯನಿಷ್ಠಾಜ್ಞಾನತ್ವ-ಸಮಾಧಾನಂ ಪರಿಹಾರ ಇತಿ ಯಾವತ್ । ತವ ಮತೇ ದತ್ತೋತ್ತರಂ ದೇವದತ್ತಜ್ಞಾನೇನ ಯಜ್ಞದತ್ತಾಜ್ಞಾನಸ್ಯಾನಿವರ್ತನಾಖ್ಯಯುಕ್ತ್ಯಾ ದತ್ತೋತ್ತರಮಿತ್ಯರ್ಥಃ । ಐಕ್ಯಸ್ಯೋಭಯಥಾಪಿ ಸಾಮ್ಯಾದಿತಿ ಭಾವಃ । ದೋಷಾಂತರಂ ಚಾಹ– **ಐಕ್ಯ ಇತಿ** ॥ ಐಕ್ಯೇ ಜೀವಬ್ರಹ್ಮಣೋರೈಕ್ಯೇ ತದ್ ಬ್ರಹ್ಮಾದ್ಯಾಶ್ರಿತಂ ಅಜ್ಞಾನಂ ಸ್ಯಾತ್ । ಜೀವಜ್ಞಾನವಿನಾಶ್ಯತ್ವಾಖ್ಯನಿಮಿತ್ತಸಂಭವಾತ್ । ತತ್ಸಿದ್ಧೌ ಬ್ರಹ್ಮಣ್ಯಜ್ಞಾನಸಿದ್ಧೌ ತದೇಕತಾ ತೇನ ಬ್ರಹ್ಮಣಾ ಸಹೈಕತಾ । ಜೀವಸ್ಯೇತಿ ಶೇಷಃ ॥೧೪೬॥

ಸಾ ಏಕತಾ । ಅತಃ ಉಕ್ತಯುಕ್ತೇಃ ತೇ ಮತೇ ನಾಶ್ಯತಾ ನಞರ್ಥೋ ನೇತಿ ಯೋಜನಾ ॥೧೪೭॥

**ವಿವರಣೆ–** ಶ್ಲೋಕ 146 ಮತ್ತು 147ರಲ್ಲಿ ಹೇಳಿರುವ ಅನ್ಯೋನ್ಯಾಶ್ರಯವು ಹೀಗೆ: 'ಅಹಮಜ್ಞಃ' ಎಂಬ ಪ್ರತೀತಿಗೆ ವಿಷಯವಾದ ಅಜ್ಞಾನವು ಬ್ರಹ್ಮನ ಅಜ್ಞಾನ ಎಂದು ಅದ್ವೈತದರ್ಶನವು ಹೇಳುತ್ತದೆ. ಜೀವನೇ (ಅಹಂ ಪದಾರ್ಥ) ಬ್ರಹ್ಮ ಆಗಿದ್ದರೆ ಇದು ಉಪಪನ್ನವಾಗುತ್ತದೆ. ಅರ್ಥಾತ್ ಜೀವಬ್ರಹ್ಮೈಕ್ಯವು ಸಿದ್ಧವಾದರೆ ಬ್ರಹ್ಮನಿಗೆ ಅಜ್ಞಾನವು ಉಪಪನ್ನವಾಗುತ್ತದೆ. ಅದ್ವೈತ ದರ್ಶನದಲ್ಲಿ ಬ್ರಹ್ಮವೊಂದೇ ಸತ್ಯ. ಆ ಬ್ರಹ್ಮವು ತನ್ನ ಅಜ್ಞಾನದಿಂದ ಜೀವಭಾವವನ್ನು ಹೊಂದಿದ್ದರೆ (=ಬ್ರಹ್ಮನು ಅಜ್ಞಾನದಿಂದ ತನ್ನನ್ನು ಜೀವ ಎಂದು ಭ್ರಮಿಸಿದ್ದರೆ) ಒಂದೇ ಚೇತನಕ್ಕೆ ಎರಡು ಹೆಸರು ಆಗುವುದರಿಂದ ಜೀವಬ್ರಹ್ಮೈಕ್ಯವು ಸಿದ್ಧವಾಗುತ್ತದೆ.

ಕಥಮಾವರಣೇ ಸತ್ಯೇವಾನ್ಯಸ್ಯಾಪ್ಯಪರೋಕ್ಷಧೀಃ ।
ಜ್ಞಾನೋತ್ಪತ್ತಿವಿರೋಧ್ಯೇವ ಯಸ್ಮಾದಾವರಣಂ ವಿದುಃ ॥ ೧೪೮ ॥

**ಅರ್ಥ–** ಆವರಣೇ = ಅಜ್ಞಾನರೂಪವಾದ ಆವರಣವು, ಸತಿ ಏವ= ಇರುವಾಗಲೇ (ಬ್ರಹ್ಮನಲ್ಲಿ) ಅನ್ಯಸ್ಯಾಪಿ = ಔಪಾಧಿಕವಾಗಿ ಭಿನ್ನನಾದ ಜೀವನಿಗಾದರೂ, ಅಪರೋಕ್ಷಧೀಃ = ಅಪರೋಕ್ಷಜ್ಞಾನವು (ಅಪರೋಕ್ಷವೃತ್ತಿಯು) ಕಥಂ ವಾ = ಹೇಗೆತಾನೆ (ಹುಟ್ಟುವುದು?). ಯಸ್ಮಾತ್ = ಯಾಕೆಂದರೆ, ಜ್ಞಾನೋತ್ಪತ್ತಿವಿರೋಧಿ ಏವ = ಜ್ಞಾನದ ಹುಟ್ಟಿಗೆ (ಉತ್ಪತ್ತಿಗೆ) ವಿರೋಧಿಯನ್ನೇ, ಆವರಣಂ = ಆವರಣವೆಂದು, ವಿದುಃ = (ಬಲ್ಲವರು) ತಿಳಿಯುತ್ತಾರೆ.

**ಅನುವಾದ–** (ಪೀಠಿಕೆ : ಆವರಿಸಲ್ಪಟ್ಟ ವಸ್ತುವಿನ ಜ್ಞಾನವು ಬೇರೆಯವರಿಗೆ ಆಗುವುದಿಲ್ಲ).

ಬ್ರಹ್ಮನಿಗೆ ಅಜ್ಞಾನವು ಆವರಣ ಎಂದು ಅದ್ವೈತದರ್ಶನವು ಹೇಳುತ್ತದೆ. ಈ ಆವರಣವು ಇರುವಾಗ ಬೇರೆ ಯಾರಿಗಾದರೂ ಬ್ರಹ್ಮನ ಅಪರೋಕ್ಷಜ್ಞಾನವು ಹೇಗೆ ಉಂಟಾದೀತು? ಜ್ಞಾನದ ಉತ್ಪತ್ತಿಗೆ ವಿರೋಧಿಯು ಆವರಣ ಎಂದು ತಿಳಿದವರ ಅಭಿಪ್ರಾಯ.

**ಭಾವವಿಲಾಸಿನೀ–** ಪೂರ್ವಂ ವೈಯ್ಯಧಿಕರಣ್ಯಾಜ್ಜೀವನಿಷ್ಠಮನೋವೃತ್ತ್ಯಾ ಬ್ರಹ್ಮನಿಷ್ಠಾಜ್ಞಾನನಾಶೋ ನೇತ್ಯುಕ್ತಮ್ । ಇದಾನೀಮಜ್ಞಾನಾವೃತೇ ಬ್ರಹ್ಮಣಿ ಜೀವಸ್ಯಾಪರೋಕ್ಷವೃತ್ತಿರೇವ ನೋತ್ಪತ್ತುಮರ್ಹತೀತ್ಯಾಹ– **ಕಥಮಿತಿ** ॥ ಅನ್ಯಸ್ಯಾಪಿ ಜೀವಸ್ಯಾಪಿ । ಅಪರೋಕ್ಷಧೀಃ ಮಾನಸಾಪರೋಕ್ಷಧೀಃ । ತತ್ರ ಹೇತುಮಾಹ– **ಜ್ಞಾನೋತ್ಪತ್ತೀತಿ** ॥ ವಿದುರಿತ್ಯನೇನಾಂಧಕಾರೇ ಜ್ಞಾನೋತ್ಪತ್ತಿವಿರೋಧಿತ್ವೇನೈವಾವರಣತ್ವದರ್ಶನಾದಿತಿ ಸೂಚಯತಿ ॥ ೧೪೮ ॥

**ವಿವರಣೆ–** ಜೀವನಿಷ್ಠ ಅಪರೋಕ್ಷ ವೃತ್ತಿಯಿಂದ ಬ್ರಹ್ಮನಿಷ್ಠ ಅಜ್ಞಾನದ ನಾಶವಾಗುವುದಿಲ್ಲ ಎಂದು ಹಿಂದಿನ ಪದ್ಯಗಳಲ್ಲಿ ಹೇಳಲಾಗಿದೆ. ಈ ಪದ್ಯದಲ್ಲಿ ಜೀವನಿಗೆ ಬ್ರಹ್ಮನ ಅಪರೋಕ್ಷ ಜ್ಞಾನವೇ ಹುಟ್ಟಲಾರದು ಎಂದು ಹೇಳುತ್ತಾರೆ.

ಕತ್ತಲಿನಲ್ಲಿ ಇರುವ ಪದಾರ್ಥಗಳ ಜ್ಞಾನವು ಆಗುವುದಿಲ್ಲ. ಕತ್ತಲು ಜ್ಞಾನೋತ್ಪತ್ತಿಗೆ ವಿರೋಧಿಆದ್ದರಿಂದ ಅದನ್ನು ಆವರಣ ಎಂದು ಪ್ರಾಜ್ಞರು ಪರಿಗಣಿಸುತ್ತಾರೆ. ಬ್ರಹ್ಮನಿಗೆ ಅಜ್ಞಾನವು ಆವರಣ ಎಂದು ಅದ್ವೈತದರ್ಶನವು ಹೇಳುತ್ತದೆ. ಆದ್ದರಿಂದ ಜೀವನಿಗೆ ಬ್ರಹ್ಮನ ಅಪರೋಕ್ಷ ಜ್ಞಾನವು ಹುಟ್ಟಲು ಅವಕಾಶವೇ ಇಲ್ಲ.

**ತದುತ್ಪತ್ತ್ಯವಿರೋಧೇ ತನ್ನಾಶ್ಯತಾಶಾऽಪಿ ಕಿಂ ಕೃತಾ ।**
**ಬಂಧಸ್ಯೈವ ಕುತೋ ನಾಶಸ್ತರ್ಹಿ ನ ಸ್ಯಾಚ್ಛ್ರುತೇರ್ಬಲಾತ್ ॥ ೧೪೯ ॥**

**ಅರ್ಥ–** ತದುತ್ಪತ್ತ್ಯವಿರೋಧೇ= ಜೀವನಿಗೆ ಬ್ರಹ್ಮನ ಅಪರೋಕ್ಷ ಜ್ಞಾನವು ಹುಟ್ಟಲು ಬ್ರಹ್ಮನಿಷ್ಠ ಅಜ್ಞಾನವು ವಿರೋಧಿಯಲ್ಲವಾದರೆ, ತನ್ನಾಶ್ಯತಾಶಾ ಅಪಿ= ಅದರಿಂದ (ಜೀವನಿಷ್ಠ ಅಪರೋಕ್ಷ ಜ್ಞಾನದಿಂದ), ನಾಶಾರ್ಹತೆಯ ಆಶೆಯಾದರೂ, ಕಿಂ ಕೃತಾ= ಯಾವ ಕಾರಣದಿಂದ? ತರ್ಹಿ= ಹಾಗೆ ನಾಶವಾಗುವುದಾದರೆ, ಶ್ರುತೇಃ ಬಲಾತ್= ಶ್ರುತಿಯ ಆಧಾರದಿಂದ= ಶ್ರುತಿಯ ಪ್ರಮಾಣದಿಂದ, ಬಂಧಸ್ಯೈವ= ಸಂಸಾರ ಬಂಧಕ್ಕೇ, ನಾಶಃ= ನಾಶವು, ಕುತಃ= ಏಕೆ, ನ ಸ್ಯಾತ್= ಆಗಬಾರದು?

**ಅನುವಾದ–** ಬ್ರಹ್ಮನನ್ನು ಆವರಿಸುವ ಅಜ್ಞಾನವು ಜೀವನಿಗೆ ಬ್ರಹ್ಮನ ಅಪರೋಕ್ಷಜ್ಞಾನವು ಹುಟ್ಟಲು ವಿರೋಧಿಯಲ್ಲ ಎಂದು ಪರಿಗಣಿಸಿದರೆ, ಈ ಜೀವನಿಗೆ ಹುಟ್ಟಿದ ಜ್ಞಾನದಿಂದ ಬ್ರಹ್ಮನಿಷ್ಠ ಅಜ್ಞಾನದ ನಾಶವಾಗುತ್ತದೆ ಎಂಬ ಆಶೆಗೆ ಏನು ಸಮರ್ಥನೆ? ಹಾಗೆ ಆಗುವುದಾದರೆ ಜೀವನಿಗೆ ಹುಟ್ಟಿದ

ಬ್ರಹ್ಮಜ್ಞಾನದಿಂದ ಸಂಸಾರಬಂಧದ ನಾಶವೇ ಏಕೆ ಆಗಬಾರದು? ಹೀಗೆ ನಾಶವಾಗುತ್ತದೆ ಎಂದು ಶ್ರುತಿಯು ಹೇಳುವುದರಿಂದ.

**ಭಾವವಿಲಾಸಿನೀ–** ತಸ್ಯ ಮಾನಸಜ್ಞಾನಸ್ಯ ಉತ್ಪತ್ತಿಂ ಪ್ರತ್ಯಜ್ಞಾನಸ್ಯಾವಿರೋಧೇ ತನ್ನಾಶ್ಯತಾಶಾ ತೇನ ಜ್ಞಾನೇನಾಜ್ಞಾನಸ್ಯ ನಾಶ್ಯತ್ವಾಶಾ ಕಿಂ ಕೃತಾ? ಅಜ್ಞಾನಸ್ಯ ನಾಶಾತ್ ಪ್ರಾಗೇವ ಜ್ಞಾನೇನ ಸಹೋಕ್ತವಿರೋಧೇ ಸತಿ ಜ್ಞಾನನಾಶ್ಯತಾ ಸ್ಯಾತ್ । ತದಭಾವೇ ತು ಕಥಂ ತನ್ನಾಶ್ಯತೇತ್ಯರ್ಥಃ । ಯದಿಚ ಜ್ಞಾನನಾಶ್ಯತ್ವಮೇವ ಜ್ಞಾನೇನ ಸಹ ವಿರೋಧೋ ನಾನ್ಯ ಇತಿ ವದೇತ್, ತದೋತ್ತರಮಾಹ– **ಬಂಧಸ್ಯೈವೇತಿ** ॥ ತರ್ಹಿ ಪೂರ್ವಮವಿರುದ್ಧಸ್ಯೈವಾಜ್ಞಾನಸ್ಯ ಜ್ಞಾನೇನ ನಾಶೇ ಬಂಧಸ್ಯೈವ ನಾಶಃ ಸಾಕ್ಷಾಜ್ಜ್ಞಾನೇನ ನಾಶಃ ಕುತೋ ನ ಸ್ಯಾತ್ ಸ್ಯಾದೇವ । ಪೂರ್ವಂ ಯಯಾ ಕಯಾಚನ ವಿಧಯಾ ವಿರೋಧರಹಿತೇನ ಜ್ಞಾನೇನ ನಾಶ್ಯತ್ವಮಾತ್ರಸ್ಯಾಜ್ಞಾನವದ್ ಬಂಧೇಽಪಿ ಸುವಚತ್ವಾತ್ । ನ ಕೇವಲಂ ಸಾಮ್ಯಂ ಅಸ್ಮತ್ಪಕ್ಷೇ ಆಧಿಕ್ಯಂ ಚೇತ್ಯಾಹ– **ಶ್ರುತೇರ್ಬಲಾದಿತಿ** ॥ 'ದೃಷ್ಟ್ವೈವ ತಂ ಮುಚ್ಯತೇ' ಇತಿ ದರ್ಶನಾದೇವ ಬಂಧನಿವೃತ್ತಿಶ್ರವಣಾದಿತಿ ಭಾವಃ ॥ ೧೪೯ ॥

**ವಿವರಣೆ–** ಅಜ್ಞಾನವು ಜ್ಞಾನೋತ್ಪತ್ತಿಗೆ ವಿರೋಧಿ ಅಲ್ಲ ಎಂದು ಪರಿಗಣಿಸಿದರೆ, ವಿರೋಧಿಯಲ್ಲದ ಅಜ್ಞಾನವು ಜ್ಞಾನದಿಂದ ನಾಶವಾಗುವುದು ಹೇಗೆ? ನಾಶವಾಗುತ್ತದೆ ಎಂದು ಅದ್ವೈತ ದರ್ಶನವು ಹೇಳುತ್ತದೆ. ಜ್ಞಾನವಿರೋಧಿಯಲ್ಲದ ಅಜ್ಞಾನಕ್ಕೂ ಜ್ಞಾನದಿಂದ ನಾಶವು ಆಗುವುದಾದರೆ ಜ್ಞಾನದಿಂದ ಸಂಸಾರಬಂಧದ ನಾಶವೇ ಏಕೆ ಆಗಬಾರದು? (ಆಗುವುದಿಲ್ಲ; ಜ್ಞಾನದಿಂದ ಅಜ್ಞಾನದ ನಾಶವಾಗುತ್ತದೆ; ಅನಂತರ ಸಂಸಾರಬಂಧದ ನಾಶವಾಗುತ್ತದೆ ಎಂದು ಅದ್ವೈತದರ್ಶನ) ಇಷ್ಟೇ ಅಲ್ಲ. ಜ್ಞಾನದಿಂದ ಸಂಸಾರಬಂಧದ ನಾಶವಾಗುತ್ತದೆ ಎಂದು 'ದೃಷ್ಟ್ವಾ ಏವ ತಂ ಮುಚ್ಯತೇ' 'ತರತಿ ಶೋಕಮಾತ್ಮವಿತ್' - ಈ ಶ್ರುತಿಗಳೂ ಹೇಳುತ್ತವೆ. ಆದ್ದರಿಂದ ಆಗುತ್ತದೆ ಎಂದು ಅಂಗೀಕಾರವು ಶ್ರುತಿಗೆ ಅನುಗುಣವೂ ಆಗುತ್ತದೆ.

ಅಜ್ಞಾನಮೇವ ಜ್ಞಾನೇನ ನಾಶ್ಯಂ ಬಂಧಸ್ತು ನೇತಿ ವಾಕ್ ।
ತದಾ ಸ್ಯಾದ್ ಯದಿ ನಾಶಾಚ್ಚ ಪ್ರಾಕ್ ತಯೋಸ್ಸ್ಯಾದ್ ವಿರುದ್ಧತಾ
॥ ೧೫೦ ॥

**ಅರ್ಥ-** ಜ್ಞಾನೇನ = ಜೀವನ ಮಾನಸಜ್ಞಾನದಿಂದ, ಅಜ್ಞಾನಮೇವ= ಕೇವಲ ಅಜ್ಞಾನವು, ನಾಶ್ಯಂ = ನಾಶಯೋಗ್ಯ, ಬಂಧಃ = ಸಂಸಾರಬಂಧವು, ನ = ಅಲ್ಲ ಇತಿ ವಾಕ್ ತು= ಎಂಬ ಮಾತು, ನಾಶಾಚ್ಚ = ನಾಶಕ್ಕಿಂತ, ಪ್ರಾಕ್ =ಮೊದಲು, ತಯೋಃ = ಜ್ಞಾನಾಜ್ಞಾನಗಳಿಗೆ, ವಿರುದ್ಧತಾ = ವಿರೋಧವು, ಯದಿ ಸ್ಯಾತ್ = ಇರುವುದಾದರೆ, ತದಾ = ಆಗ, ಸ್ಯಾತ್ = ಉಪಪನ್ನವಾಗುವುದು.

**ಅನುವಾದ-** ಅಜ್ಞಾನವು ಮಾತ್ರ ಜ್ಞಾನದಿಂದ ನಾಶ್ಯ (ಜ್ಞಾನದಿಂದ ನಾಶವಾಗಲು ಯೋಗ್ಯ) ಸಂಸಾರಬಂಧವು ಅಲ್ಲ. ಈ ಮಾತು ನಾಶಕ್ಕಿಂತ ಮೊದಲೇ ಅವೆರಡಕ್ಕೆ ವಿರೋಧವು ಇದ್ದರೆ ಉಪಪನ್ನವಾಗುವುದು.

**ಭಾವವಿಲಾಸಿನೀ–** ಶ್ರುತಸ್ಯಾಪ್ಯಸ್ಯ ನಾಶ್ಯನಾಶಕಭಾವಸ್ಯಾಪಹಾರಃ ಪರಸ್ಯಾಭಿಮತಃ । ಸಚ ನಾಶ್ಯನಾಶಕಭಾವಾತಿರಿಕ್ತವಿರೋಧೇ ಸತ್ಯೇವ ಸ್ಯಾನ್ನಾಪರಥೇತ್ಯಾಹ– **ಅಜ್ಞಾನಮಿತಿ** ॥ ತಯೋರ್ಜ್ಞಾನಾಜ್ಞಾನಯೋಃ । ಜ್ಞಾನನಾಶ್ಯತ್ವಮೇವ ಹಿ ತವಾಪ್ಯಜ್ಞಾನತ್ವಂ ನಾಮ । ತಚ್ಚ ಜ್ಞಾನವಿನಾಶ್ಯೇ ಬಂಧೇಽಪಿ ವಕ್ತುಂ ಶಕ್ಯತ ಇತಿ ನಾಜ್ಞಾನತ್ವೇನಾಪಿ ವಿಶೇಷಃ । ಅತೋ ಜ್ಞಾನೋತ್ಪತ್ತಿಪ್ರತಿಬಂಧಕತ್ವರೂಪವಿರೋಧೇನೈವ ಪ್ರಾಗ್ವಿರೋಧೋ ವಕ್ತವ್ಯಃ ತದಭಾವೇ ಶ್ರೌತೀ ಬಂಧಸ್ಯೈವ ಜ್ಞಾನನಾಶ್ಯತಾ ಯುಕ್ತೇತಿ ಭಾವಃ ॥ ೧೫೦ ॥

**ವಿವರಣೆ-** ಜ್ಞಾನ-ಅಜ್ಞಾನಗಳಿಗೆ ಪರಸ್ಪರ ವಿರೋಧವೆಂದರೆ ಜ್ಞಾನದಿಂದ ಅಜ್ಞಾನದ ನಾಶ. ಇದಕ್ಕಿಂತ ಬೇರೆಯಾದ ವಿರೋಧವನ್ನು ಅವರು ಒಪ್ಪಿಲ್ಲ ಈ ಬಗೆಯ ವಿರೋಧವನ್ನು ನೇರವಾಗಿ ಸಂಸಾರಬಂಧದಲ್ಲಿಯೂ ಶ್ರುತಿಗೆ ಅನುಸಾರವಾಗಿ ಹೇಳಲು ಸಾಧ್ಯವಿದೆ. ಆದುದರಿಂದ ಅಜ್ಞಾನದಲ್ಲಿ ಮಾತ್ರ ಹೇಳಬೇಕೆಂದು ಯಾವ ನಿರ್ಣಾಯಕಪ್ರಮಾಣವೂ ಇಲ್ಲ. ಜ್ಞಾನದ ವಿರೋಧವನ್ನು ಅಜ್ಞಾನಕ್ಕೆ ಮಾತ್ರ ಹೇಳಬೇಕೆಂದರೆ ಅದು ಜ್ಞಾನೋತ್ಪತ್ತಿಪ್ರತಿಬಂಧಕತ್ವರೂಪ ವಿರೋಧವೇ ಎಂದು ಆಗಬೇಕು. ಆದರೆ ಇದು ಅದ್ವೈತಮತದಲ್ಲಿ ಯುಕ್ತವಾಗಲಾರದು. ಇಂತಹ ವಿರೋಧವನ್ನು ಒಪ್ಪಿದಲ್ಲಿ ಬ್ರಹ್ಮನಲ್ಲಿ ಈಗಾಗಲೇ ಅಜ್ಞಾನವಿರುವುದರಿಂದ ಮಾನಸಜ್ಞಾನವೇ ಹುಟ್ಟಲಾರದು. ಆದ್ದರಿಂದ ಶ್ರುತಿಯು ಹೇಳಿದಂತೆ ಭಗವದ್ದರ್ಶನದಿಂದ ನೇರವಾಗಿ ಸಂಸಾರಬಂಧನಾಶವನ್ನು ಹೇಳಬೇಕು.

'ಬ್ರಹ್ಮನ ಮನಃಪರಿಣಾಮರೂಪವಾದ ವೃತ್ತಿಜ್ಞಾನವು ಬ್ರಹ್ಮಾಶ್ರಿತವಾದ ಅಜ್ಞಾನವನ್ನು ನಾಶಮಾಡುತ್ತದೆ' ಎಂಬ ಅದ್ವೈತಮತದ ಅಭಿಪ್ರಾಯವನ್ನು ಶ್ರೀವಾದಿರಾಜರು ಈ ಶ್ಲೋಕದಲ್ಲಿ ನಿರಾಕರಿಸುತ್ತಾರೆ.

ಮನಸೋ ಹ್ಯಚಿದಂಶಸ್ತೇ ಘಟಪ್ರಾಯೋ ನ ನಾಶಕಃ ।
ಚಿದಂಶಸ್ಯ ಬಲಾನ್ನಾಶೇ ಕಥಂ ಬ್ರಹ್ಮಚಿತಿ ಸ್ಥಿತಿಃ ।
ಅತೋ ಬ್ರಹ್ಮಾಶ್ರಿತಾಜ್ಞಾನೇ ನಞಃ ಕಾರ್ಯಂ ನ ವಿದ್ಯತೇ ॥ ೧೫೧ ॥

**ಅರ್ಥ-** ತೇ = ನಿನ್ನ ಮತದಲ್ಲಿ (ಬ್ರಹ್ಮನ ಮಾನಸಜ್ಞಾನವು ಬ್ರಹ್ಮಾಶ್ರಿತವಾದ ಅಜ್ಞಾನವನ್ನು ನಾಶಮಾಡುವುದೆಂಬ ಮತದಲ್ಲಿ) ಮನಸಃ = ಮನಸ್ಸಿನ, ಅಚಿದಂಶೋ ಹಿ = ಜಡಾಂಶವಾದರೂ, ಘಟಪ್ರಾಯಃ = ಮಡಕೆಗೆ ಸಮಾನ. (ಅದು), ನ ನಾಶಕಃ = ಅಜ್ಞಾನನಾಶಕವಾಗಲಾರದು. ಚಿದಂಶಸ್ಯ= ಮನಸ್ಸಿನ ಚಿದ್‌ಭಾಗದ, ಬಲಾತ್= ಸಾಮರ್ಥ್ಯದಿಂದ, ನಾಶೇ = ಅಜ್ಞಾನದ ನಾಶವಾಗುವುದಾದರೆ, ಬ್ರಹ್ಮಚಿತಿ = (ಅಜ್ಞಾನವನ್ನು

ನಾಶಮಾಡುವ ಸಾಮರ್ಥ್ಯವಿರುವ) ಬ್ರಹ್ಮರೂಪಚೈತನ್ಯದಲ್ಲಿ ಸ್ಥಿತಿಃ = ಅಜ್ಞಾನದ ಇರುವಿಕೆಯಾದರೂ, ಕಥಂ = ಹೇಗೆ ಕೂಡುತ್ತದೆ? ಅತಃ = ಆದ್ದರಿಂದ, ಬ್ರಹ್ಮಾಶ್ರಿತಾಜ್ಞಾನೇ = ಬ್ರಹ್ಮನಲ್ಲಿರುವುದೆಂದು ಹೇಳಲಾಗುವ ಅಜ್ಞಾನದಲ್ಲಿ, ನಞಃ = ನಞ್‌ಗೆ, ಕಾರ್ಯಂ = ಕೃತ್ಯವು (ಸಾರ್ಥಕ್ಯವು) ನ ವಿದ್ಯತೇ = ಇಲ್ಲ.

**ಅನುವಾದ-** **ಮಾನಸಜ್ಞಾನವು ಅದ್ವೈತಮತದಲ್ಲಿ ವೃತ್ತಿಪ್ರತಿಫಲಿತಚೈತನ್ಯರೂಪವಾದ್ದರಿಂದ ಅದರಲ್ಲಿ ಚಿತ್ ಮತ್ತು ಅಚಿತ್ ಅಂಶಗಳಿವೆ. ಈ ಎರಡರಲ್ಲಿ ಅಜ್ಞಾನನಾಶಕವಾದ ಭಾಗವು ಯಾವುದು? ಜಡಾಂಶಕ್ಕೆ ಅಜ್ಞಾನವನ್ನು ನಾಶಮಾಡುವ ಸಾಮರ್ಥ್ಯವಿರಲು ಸಾಧ್ಯವಿಲ್ಲ. ಆದ್ದರಿಂದ ಚಿತ್‌ಅಂಶದಿಂದಲೇ ಅಜ್ಞಾನದ ನಾಶವನ್ನು ಹೇಳಬೇಕು. ಹೀಗೆ ಆದರೆ ಬ್ರಹ್ಮಚೈತನ್ಯದಲ್ಲಿ ಅಜ್ಞಾನದ ಅಸ್ತಿತ್ವವಾದರೂ ಹೇಗೆ ಯುಕ್ತವಾಗುತ್ತದೆ? ಆದ್ದರಿಂದ ಅಜ್ಞಾನವನ್ನು ಪರಬ್ರಹ್ಮನಲ್ಲಿ ಒಪ್ಪಿದರೆ ಅಜ್ಞಾನ ಶಬ್ದದಲ್ಲಿರುವ ನಞ್‌ಗೆ ಅರ್ಥವೇ ಇಲ್ಲವೆಂದಾಗುತ್ತದೆ. ಏಕೆಂದರೆ ವಿರುದ್ಧವಾದ ಜ್ಞಾನ ಮತ್ತು ಅಜ್ಞಾನಗಳಿಗೆ ಒಂದೆಡೆ ಇರುವಿಕೆ ಯುಕ್ತವಲ್ಲವಷ್ಟೇ.**

**ಭಾವವಿಲಾಸಿನೀ–** ಬ್ರಹ್ಮಣಿ ಪರೇಣ ಪರಿಕಲ್ಪ್ಯಮಾನಾಜ್ಞಾನಸ್ಯ ಪ್ರಾಗುಕ್ತನ್ಯಾಯೇನಾಪಿ ಮಾನಸಜ್ಞಾನನಾಶ್ಯತಾಂ ನಿರಾಕರೋತಿ– **ಮನಸ ಇತಿ** ॥ ಮಾನಸಜ್ಞಾನಮಜ್ಞಾನನಾಶಕಮಿತಿ ವದತಾಪಿ ಚಿದಂಶಸ್ಯ ಬಲಾದೇವ ನಾಶೋ ವಕ್ತವ್ಯಃ। ನತು ಘಟಪ್ರಾಯಾಚಿದಂಶಬಲಾತ್। ತಥಾಚಾಜ್ಞಾನನಿರ್ಹರಣಸಮರ್ಥಾಯಾಂ ಬ್ರಹ್ಮಚಿತಿ ಮಾನಸವೃತ್ತಿನಾಶ್ಯತ್ವೇನೋಚ್ಯಮಾನಾಜ್ಞಾನಸ್ಯ ಸ್ಥಿತಿರೇವ ಕಥಮ್? ನ ಕಥಂಚಿದಿತ್ಯರ್ಥಃ। ಪ್ರತಿಯೋಗಿಸತ್ತ್ವಸ್ಯೈವಾ- ಸಂಭವಾತ್ ಜ್ಞಾನನಾಶ್ಯತ್ವೇನ ನ ತಸ್ಯಾಜ್ಞಾನತ್ವಮಿತಿ ಭಾವಃ। ಉಪಸಂಹರತಿ– **ಅತ ಇತಿ** ॥ ೧೫೧ ॥

**ವಿವರಣೆ–** ಮಾನಸಜ್ಞಾನವು ಅಜ್ಞಾನನಾಶಕ ಎಂಬ ಅಭಿಪ್ರಾಯವು ಸರಿಯಲ್ಲ. ಮನಸ್ಸು ಚಿತ್-ಅಚಿತ್‌ಗಳ ಮಿಶ್ರಣ. ಅದರಲ್ಲಿರುವ ಜಡಾಂಶಕ್ಕೆ ಅಜ್ಞಾನನಾಶಕತ್ವಶಕ್ತಿಯಿಲ್ಲ. ಚೈತನ್ಯಾಂಶಕ್ಕೆ ಇದೆ. ಮನಸ್ಸಿನ ಈ ಚೈತನ್ಯಾಂಶ ಪರಬ್ರಹ್ಮವೇ. ಪರಬ್ರಹ್ಮನು ಅಜ್ಞಾನನಾಶಕನಾದ್ದರಿಂದ ಅವನಲ್ಲಿ ಅಜ್ಞಾನವು ಇರಲು ಹೇಗೆ ಸಾಧ್ಯ?

ಅಸ್ಯ ವಿದ್ಯೇತಿ ವಿದ್ಯೈವ ತತ್ಪದೇನೋಚ್ಯತೇ ಹರೌ ।
ತದಧೀನಾ ರಮಾ ಚಾಭಿಮನ್ಯಮಾನಾಽಥವಾ ಜಡಾ ।
ತಾಭಿಃ ಸೃಷ್ಟಮಿದಂ ವಿಶ್ವಂ ಭ್ರಾಂತ್ಯುತ್ಥಂ ಕೇನ ಕಥ್ಯತಾಮ್ ॥ ೧೫೨ ॥

**ಅರ್ಥ–** ಅಸ್ಯ = ಅಕಾರವಾಚ್ಯನಾದ ವಿಷ್ಣುವಿನ, ವಿದ್ಯಾ ಇತಿ= ವಿದ್ಯೆ ಎಂದು, ಹರೌ = ವಿಷ್ಣುವಿನಲ್ಲಿ, ವಿದ್ಯಾ ಏವ = ವಿದ್ಯೆಯೇ, ತತ್ಪದೇನ= ಆ ಪದದಿಂದ= ಅವಿದ್ಯಾಪದದಿಂದ, ಉಚ್ಯತೇ = ಹೇಳಲ್ಪಡುತ್ತದೆ. ತದಧೀನಾ = ಭಗವಂತನ ಅಧೀನಳಾದ, ರಮಾ ಚ = ರಮಾದೇವಿಯೂ, ಅಥವಾ= ಮತ್ತು, ಅಭಿಮನ್ಯಮಾನಾ= ರಮಾದೇವಿಯಿಂದ

ನಿಯಮ್ಯವಾದ, ಜಡಾ= ಜಡಪ್ರಕೃತಿಯೂ, ತತ್ಪದೇನ ಉಚ್ಯತೇ= ಆ 'ಅವಿದ್ಯಾ' ಪದದಿಂದ ಹೇಳಲ್ಪಡುತ್ತದೆ. ತಾಭಿಃ= ವಿಷ್ಣುವಿನ ಜ್ಞಾನಶಕ್ತಿ, ಮಹಾಲಕ್ಷ್ಮಿ ಮತ್ತು, ಜಡಪ್ರಕೃತಿ - ಈ ಮೂರರಿಂದ, ಸೃಷ್ಟಂ = ಸೃಷ್ಟಿಸಲ್ಪಡುವ, ಇದಂ ವಿಶ್ವಂ = ಈ ಪ್ರಪಂಚವು, ಭ್ರಾಂತ್ಯುತ್ಥಂ = ಭ್ರಮಜನ್ಯವೆಂದು, ಕೇನ = ಯಾವ ಕಾರಣದಿಂದ, ಕಥ್ಯತಾಮ್= ಹೇಳಲ್ಪಡುತ್ತದೆ?

**ಅನುವಾದ-** ಶ್ರೀಹರಿಯ ವಿದ್ಯೆಯೇ 'ಅವಿದ್ಯಾ' ಎಂದು ಪ್ರಮಾಣವಚನಗಳಲ್ಲಿ ಹೇಳಲ್ಪಡುತ್ತದೆ. (೧) ಅ= ವಿಷ್ಣು (ಇವನ) ವಿದ್ಯಾ= ಅವಿದ್ಯಾ. ರಮಾದೇವಿಗೆ ವಿದ್ಯಾ ಎಂದು ಹೆಸರಿದೆ. ಇವಳು ವಿಷ್ಣುವಿಗೆ ಅಧೀನ. (೨) ವಿಷ್ಣುವಿಗೆ ಅಧೀನಳಾದ ರಮಾದೇವಿಗೆ (ಅಸ್ಯ ವಿದ್ಯಾ) ಅವಿದ್ಯಾ ಎಂದು ಹೆಸರು. (೩) ಅಭಿಮಾನಿ-ವಾಚಕಶಬ್ದವನ್ನು ಅಭಿಮಾನ್ಯಮಾನವಾಚಕವಾಗಿಯೂ ಪ್ರಯೋಗಿಸುವ ರೂಢಿಯಿದೆ. ಆದ್ದರಿಂದ ಅವಿದ್ಯೆಯಿಂದ ರಮಾದೇವಿಯಿಂದ ಅಭಿಮನ್ಯ-ಮಾನವಾದ ಜಡಪ್ರಕೃತಿಯೂ ಅವಿದ್ಯೆ. ಅವಿದ್ಯಾ ಶಬ್ದಕ್ಕೆ ಮೂರು ಅರ್ಥ : (೧) ವಿಷ್ಣುವಿನ ವಿದ್ಯಾ, (೨) ರಮಾದೇವಿ (೩) ಜಡಪ್ರಕೃತಿ.

**ಭಾವವಿಲಾಸಿನೀ—** ಪ್ರಾಕ್ ಸೂಚಿತಂ ಭಗವತಿ ಪ್ರಯುಜ್ಯಮಾನಾವಿದ್ಯಾಶಬ್ದಾರ್ಥಂ ಸ್ಪಷ್ಟಮಾಹ— **ಅಸ್ಯೇತಿ** ॥ ಅಸ್ಯ ಅಕಾರವಾಚ್ಯಸ್ಯ । ತತ್ಪದೇನಾವಿದ್ಯಾಪದೇನ । ತದಧೀನಾ ಭಗವದಧೀನಾ ರಮಾ ವಿದ್ಯಾರೂಪಾ ರಮಾ ಅಕಾರವಾಚ್ಯಸ್ಯ ಪರಮಾತ್ಮನಃ ಅಧೀನಾ ಇತಿ ಪೂರ್ವೇಣ ಸಂಬಂಧಃ । ಅಭಿಮನ್ಯಮಾನೇತಿ ತತ್ರ ಹೇತುಸೂಚನಮ್ । ಅಭಿಮಾನಿವಾಚಕಪದಸ್ಯಾಭಿಮನ್ಯಮಾನೇ ಪ್ರಯೋಗಾದಿತ್ಯರ್ಥಃ । ಜಡೇತ್ಯನೇನ ವಿದ್ಯಾಯಾ ಅಯೋಗ್ಯಾ ಅವಿದ್ಯೇತಿ ನಿಮಿತ್ತಾಂತರಂ ಚ ಸೂಚಿತಮ್ । ತಾಭಿಸ್ತಿಸೃಭಿರವಿದ್ಯಾಭಿಃ । ಅನೇನ **ಭವೋ ನಿರೋಧಃ ಸ್ಥಿತಿರಪ್ಯವಿದ್ಯಯೇತ್ಯಾ-** ದಿವಾಕ್ಯಾನಾಮರ್ಥತ್ರಯಮುಕ್ತಂ ಭವತಿ ॥ ೧೫೨ ॥

**ವಿವರಣೆ-** ಪ್ರಪಂಚವು ಆವಿದ್ಯಕ =ಅವಿದ್ಯಾಜನ್ಯ ಎಂಬ ಮಾತಿನ ಅರ್ಥವನ್ನು ಈ ಶ್ಲೋಕವು ವಿವರಿಸಿದೆ. ಭಗವಂತನು ಈ ಜಗತ್ತಿಗೆ ಸ್ವತಂತ್ರನಿಮಿತ್ತಕಾರಣನಾಗಿದ್ದಾನೆ. ಅವನಿಗಷ್ಟೇ ಅಧೀನಳಾದ ರಮಾದೇವಿಯು ಈ ಜಗತ್ತಿನ ನಿಮಿತ್ತಕಾರಣ. ಅವಳಿಂದ ನಿಯಮ್ಯವಾದ ಜಡಪ್ರಕೃತಿಯೂ ಉಪಾದಾನಕಾರಣ. ಈ ಮೂರಕ್ಕೂ ಅವಿದ್ಯಾ ಎಂದು ಹೆಸರಿದೆ. ಆದ್ದರಿಂದ ಈ ಮೂರರಿಂದ ಜನ್ಯವಾದ ಪ್ರಪಂಚವು ಆವಿದ್ಯಕ ಎನಿಸಿದೆ.

(1) 'ಅಕಾರೋ ವಿಷ್ಣುರುದ್ದಿಷ್ಟ' 'ಅ ಇತಿ ಬ್ರಹ್ಮ'.

(2) 'ತಥೌ ಪ್ರಾಣಾತ್ಮಕೌ ಪ್ರೋಕ್ತೌ' - ಬ್ರಹ್ಮಸೂತ್ರಮಧ್ವಭಾಷ್ಯ 1.1.1.

ತ, ಥ ಕಾರಗಳು ಪ್ರಾಣಾತ್ಮಕಗಳು ಎಂದು ಇದರ ಅರ್ಥ. ಪ್ರಾಣಾಭಿಮನ್ಯಮಾನಗಳು ಎಂದು ಭಾವ. ಇದರಂತೆ ಅವಿದ್ಯಾ= ರಮಾ ಅಭಿಮನ್ಯಮಾನವಾದ ಜಡಪ್ರಕೃತಿಗೆ ಅವಿದ್ಯಾ ಎಂದು ಹೆಸರು.

**ಯನ್ಮಿಥ್ಯಾತ್ವಂ ಪರೋ ವಕ್ತಿ ಸ್ವಾಜ್ಞಾನಸ್ಯ ತಥೈವ ತತ್ ।**
**ಯಸ್ಮಾತ್ ತದಸ್ಮದೀಶಾನೇ ನಾಭೂದಸ್ತಿ ಭವಿಷ್ಯತಿ ॥ ೧೫೩ ॥**

**ಅರ್ಥ-** ಸ್ವಾಜ್ಞಾನಸ್ಯ = ಪರಬ್ರಹ್ಮನಲ್ಲಿ ತಾನು (ಮಾಯಾವಾದಿಯು) ಕಲ್ಪಿಸುವ ಅಜ್ಞಾನಕ್ಕೆ, ಪರಃ= ಪರನು= ಮಾಯಾವಾದಿಯು, ಯತ್ ಮಿಥ್ಯಾತ್ವಂ = ಯಾವ ಮಿಥ್ಯಾತ್ವವನ್ನು ವಕ್ತಿ = ಹೇಳುತ್ತಾನೋ, ತತ್ = ಅದು, ತಥೈವ = ಹಾಗೆಯೇ, ಯಸ್ಮಾತ್ = ಏಕೆಂದರೆ, ತದ್= ಆ ಅಜ್ಞಾನವು, ಅಸ್ಮದೀಶಾನೇ = ನಮ್ಮ ಸ್ವಾಮಿಯಾದ ನಾರಾಯಣನಲ್ಲಿ ನ ಅಭೂತ್ = ಹಿಂದೆ ಇದ್ದಿಲ್ಲ ನಾಸ್ತಿ = ಈಗ ಇಲ್ಲ ನ ಭವಿಷ್ಯತಿ = ಮುಂದೆ ಇರುವುದಿಲ್ಲ

**ಅನುವಾದ-** (ಪೀಠಿಕೆ : ಮಾಯಾವಾದವು ಬ್ರಹ್ಮನಲ್ಲಿ ಅಜ್ಞಾನವನ್ನು ಕಲ್ಪಿಸಿ ಅದನ್ನು ಮಿಥ್ಯಾ ಎಂದು ಅಂಗೀಕರಿಸಿದೆ. ಇದನ್ನು ರಾಜರು ವಿಮರ್ಶಿಸುತ್ತಿದ್ದಾರೆ).

ಪರರು ತಾವು ಬ್ರಹ್ಮನಿಗೆ ಇದೆ ಎಂದು ಕಲ್ಪಿಸುವ ಅಜ್ಞಾನವನ್ನು ಮಿಥ್ಯಾ ಎಂದು ಹೇಳುತ್ತಾರೆ. ಇದು ನಿಜ. ಏಕೆಂದರೆ ನಮ್ಮ ಪ್ರಭು ಪರಬ್ರಹ್ಮನಲ್ಲಿ ಅಜ್ಞಾನವು ಇರಲಿಲ್ಲ. ಇಲ್ಲ ಮತ್ತು ಮುಂದೆಂದೂ ಉಂಟಾಗುವುದಿಲ್ಲ.

**ಭಾವವಿಲಾಸಿನೀ–** ಸ್ವಾಜ್ಞಾನಸ್ಯ ಬ್ರಹ್ಮಣಿ ಸ್ವೇನ ಪರಿಕಲ್ಪ್ಯಮಾನಾಜ್ಞಾನಸ್ಯ ಮಿಥ್ಯಾತ್ವಂ ಪರೋ ವಕ್ತೀತಿ ಯತ್, ತತ್ತಥೈವ, ತದೇಕಂ ಪ್ರಮೇಯಮಸ್ಮಾಕಮಪ್ಯನುಕೂಲಮೇವೇತ್ಯರ್ಥಃ । ಕಥಮ್? ಇತ್ಯತ ಆಹ– **ಯಸ್ಮಾದಿತಿ** ॥ ತದ್ ಅಜ್ಞಾನಂ ಅಸ್ಮದೀಶಾನೇ ನಾರಾಯಣೇ ನಾಸೀತ್, ನಾಪ್ಯಸ್ತಿ, ನ ಭವಿಷ್ಯತಿ ಚ । ಅತಸ್ತ್ರೈಕಾಲಿಕನಿಷೇಧಪ್ರತಿಯೋಗಿತ್ವಾದ್ ಬ್ರಹ್ಮಣ್ಯಜ್ಞಾನಂ ಶಶಶೃಂಗಪ್ರಾಯಮಿತಿ ಭಾವಃ ॥ ೧೫೩ ॥

**ವಿವರಣೆ-** (1) ಮೂರು ಕಾಲದಲ್ಲೂ ಇರದ ವಸ್ತುವು ಮೊಲದ ಕೊಂಬಿನಂತೆ. ಆದ್ದರಿಂದ ಬ್ರಹ್ಮನಲ್ಲಿ ಮೂರು ಕಾಲದಲ್ಲಿ ಇರದ ಅಜ್ಞಾನವೂ ಮೊಲದ ಕೊಂಬಿನಂತೆಯೇ.

(2) ಬ್ರಹ್ಮನಲ್ಲಿ ಅಜ್ಞಾನವು ಮಿಥ್ಯಾ ಎಂಬ ಮಾಯಾವಾದದ ಅಭಿಪ್ರಾಯವು ನಮಗೆ ಸಮ್ಮತ. (ಭಾ.ವಿ)

**ನಿರನಿಷ್ಟೋ ಹಿ ಸೋಽಸಂಗೋ ನಿರವದ್ಯಃ ಪರಃ ಪ್ರಭುಃ ।**
**ಅನೀದೃಗ್‌ಜೀವತಾ ತಸ್ಯ ನಾಜ್ಞಾನೇನ ನ ಕರ್ಮಣಾ ॥ ೧೫೪ ॥**

**ಅರ್ಥ-** ಪರಃ = ಸರ್ವೋತ್ತಮನಾದ, ಪ್ರಭುಃ = ಸ್ವಾಮಿಯಾದ, ಸಃ= ಆ ಶ್ರೀಹರಿಯು, ನಿರನಿಷ್ಟಃ= ಅನಿಷ್ಟಪದಾರ್ಥಗಳ ಸಂಬಂಧರಹಿತ. ನಿರವದ್ಯಃ= ಚಿಂತಾಸಂತಾಪಾದಿ ಸಕಲದೋಷರಹಿತ. ಅಸಂಗೋ ಹಿ= ಕರ್ಮಾದಿಗಳ ಲೇಪರಹಿತ, ಹಿ= ಇದು ಶ್ರುತಿಪ್ರಸಿದ್ಧ ತಸ್ಯ= ಆ ಪರಬ್ರಹ್ಮನಿಗೆ, ಅನೀದೃಗ್ಜೀವತಾ= ಹೀಗಿಲ್ಲದ ಜೀವಭಾವವು, ಅಜ್ಞಾನೇನ=

ಅಜ್ಞಾನದಿಂದ, ನ= ಉಂಟಾಗಲಾರದು. ಕರ್ಮಣಾ= ಕರ್ಮದಿಂದಲೂ, ನ= ಉಂಟಾಗಲಾರದು.

**ಅನುವಾದ-** (ಪೀಠಿಕೆ : ಬ್ರಹ್ಮನಿಗೆ ಅಜ್ಞಾನವನ್ನು ಸಮರ್ಥಿಸಲು ಆಗುವುದಿಲ್ಲ ಎಂದು ಹಿಂದಿನ ಪದ್ಯಗಳಲ್ಲಿ ಸಾಧಿಸಲಾಗಿದೆ. ಇದೇ ನ್ಯಾಯದಿಂದ ಜೀವ-ಬ್ರಹ್ಮೈಕ್ಯವೂ ಉಪಪನ್ನವಲ್ಲ ಎಂದು ಇಲ್ಲಿ ಹೇಳುತ್ತಿದ್ದಾರೆ).

('ನಿರನಿಷ್ಟೋ ನಿರವದ್ಯಃ...'

'ಅಸಂಗೋ ಹ್ಯಯಂ ಪುರುಷಃ' ಬೃಹದಾರಣ್ಯಕ ಈ ಶ್ರುತಿಗಳು ಪರಮಾತ್ಮನನ್ನು ಅನಿಷ್ಟರಹಿತ, ದೋಷರಹಿತ, ಸಂಗರಹಿತ ಎಂದು ಹೇಳುತ್ತವೆ. ಇದರಿಂದ ಪರಮಾತ್ಮನಲ್ಲಿ ದೋಷಲೇಪಗಳೂ, ಕರ್ಮಲೇಪಗಳೂ ಇಲ್ಲ ಎಂದು ಸಿದ್ಧವಾಗುತ್ತದೆ. ಜೀವಾತ್ಮನಿಗೆ ಕರ್ಮಲೇಪವಿದೆ, ದೋಷಲೇಪವಿದೆ. ಇಂತಹ ಜೀವಭಾವವು ಬ್ರಹ್ಮನಿಗೆ ಅಜ್ಞಾನದಿಂದ ಅಥವಾ ಕರ್ಮಸಂಬಂಧದಿಂದ ಉಂಟಾಗಲು ಅವಕಾಶವೇ ಇಲ್ಲ.

**ಭಾವವಿಲಾಸಿನೀ–** ಅಜ್ಞಾನನಿರಾಕರಣನ್ಯಾಯೇನೈವ ಅದ್ವೈತಮಪಿ ನಿರಸ್ತಮಿತ್ಯಾಹ– ನಿರನಿಷ್ಟ ಇತಿ ॥ ಅನೀದೃಗ್ಜೀವತಾ ಸಾನಿಷ್ಟಸಾವದ್ಯಸಸಂಗಜೀವತಾ । ತಸ್ಯ ಬ್ರಹ್ಮಣಃ । ಅಜ್ಞಾನೇನ ಅಜ್ಞಾನವಶಾಜ್ಜೀವಭಾವೋ ನ । ನಿರವದ್ಯತ್ವಶ್ರುತ್ಯಾ ಭಗವತ್ಯಜ್ಞಾನಾಖ್ಯದೋಷಸ್ಯ ದೂರತೋ ನಿರಸ್ತತ್ವಾತ್ । ಕರ್ಮಣಾ ಕರ್ಮವಶಾದಪಿ ನ । ಅಸಂಗಶ್ರುತ್ಯಾ ಕರ್ಮಲೇಪಾಭಾವಸ್ಯ ಕಥನಾದಿತಿ ಭಾವಃ ॥ ೧೫೪ ॥

**ವಿವರಣೆ-** ಬ್ರಹ್ಮನಲ್ಲಿ ಅಜ್ಞಾನವನ್ನು ಸಮರ್ಥಿಸಲಾಗುವುದಿಲ್ಲ ಎಂದು ವಿವರಿಸಲಾಗಿದೆ. ಜೀವಾತ್ಮನಿಗೆ ಅಜ್ಞಾನವಿದೆ. ಆದ್ದರಿಂದಲೇ ಬ್ರಹ್ಮನಿಗೆ ಜೀವಭಾವವು ಉಪಪನ್ನವಲ್ಲ. ಜೀವಾತ್ಮನಿಗೆ ಕರ್ಮಲೇಪವಿದೆ. ಇದಕ್ಕೆ ಮೂಲಕಾರಣ ಅಜ್ಞಾನ. ಬ್ರಹ್ಮನು 'ಅಸಂಗ' ಎಂದು ಶ್ರುತಿಯು ಹೇಳುತ್ತದೆ. ಆದ್ದರಿಂದಲೂ ಬ್ರಹ್ಮನಿಗೆ ಜೀವಭಾವವು ಉಪಪನ್ನವಲ್ಲ.

**ಅಜ್ಞಾನಾಸಂಭವಾದೇವ ನಾಽಧ್ಯಾಸೋಽಪ್ಯಖಿಲೇಶ್ವರೇ ।**
**ಲೇಪಾಯೋಗ್ಯೇ ನಭೋದೇಶೇ ನ ಪಂಕೋ ನಾಪಿ ತನ್ಮಲಮ್॥ ೧೫೫ ॥**

**ಅರ್ಥ-** ಅಖಿಲೇಶ್ವರೇ = ಸಕಲಜಗದೊಡೆಯನಾದ ಪರಮಾತ್ಮನಲ್ಲಿ, ಅಜ್ಞಾನಾ-ಸಂಭವಾದೇವ = ಅಜ್ಞಾನದ ಅಸ್ತಿತ್ವಕ್ಕೆ ಅವಕಾಶವೇ ಇಲ್ಲದಿರುವುದಿರುವುದರಿಂದ, ಅಧ್ಯಾಸೋಽಪಿ = ಪ್ರಪಂಚದ ಆರೋಪವೂ, ನ = ಉಂಟಾಗಲಾರದು. ಲೇಪಾಯೋಗ್ಯೇ = ಯಾವುದೇ ಲೇಪಕ್ಕೆ ಅನರ್ಹವಾದ, ನಭೋದೇಶೇ = ಆಕಾಶದಲ್ಲಿ, ಪಂಕಃ = ಕೆಸರು, ನ = ಅಂಟಿಕೊಳ್ಳಲಾರದು. ತನ್ಮಲಂ = ಅದರ ಕೊಳೆಯೂ, ನ = ಇರಲಾರದು.

**ಅನುವಾದ-** (ಪೀಠಿಕೆ : ಪರಬ್ರಹ್ಮನಲ್ಲಿ ಅಜ್ಞಾನದ ಇರುವಿಕೆಗೆ ಅವಕಾಶವೇ ಇಲ್ಲದಿರುವುದರಿಂದ ಅಜ್ಞಾನನಿಮಿತ್ತಕವಾದ ಜಗತ್ತಿನ ಆರೋಪವೂ ಅವನಲ್ಲಿ ಯುಕ್ತವಾಗಲಾರದೆಂದು ದೃಷ್ಟಾಂತಪೂರ್ವಕವಾಗಿ ಶ್ರೀವಾದಿರಾಜರು ನಿರೂಪಿಸುತ್ತಿದ್ದಾರೆ. - ಭಾ.ವಿ)

ನಿಖಿಲಜಗದಧೀಶನಾದ ನಾರಾಯಣನಲ್ಲಿ ಅಜ್ಞಾನಕ್ಕೆ ಸಂಭವವೇ ಇಲ್ಲ. ಅದರಿಂದ ಉಂಟಾಗುವ ಜಗತ್ತಿನ ಆರೋಪವೂ ಅವನಲ್ಲಿ ಸಂಭವಿಸುವುದಿಲ್ಲ. ಲೇಪರಹಿತವಾದ ಹಾಗೂ ಲೇಪಾಯೋಗ್ಯವಾದ ಆಕಾಶದಲ್ಲಿ ಕೆಸರು ಮೊದಲಾದ ಕಲ್ಮಷಪದಾರ್ಥಗಳ ಸಂಬಂಧವಾಗಲೀ, ಅವುಗಳಿಂದ ಉಂಟಾಗುವ ಮಾಲಿನ್ಯವಾಗಲೀ ಇರುವುದಿಲ್ಲ.

**ಭಾವವಿಲಾಸಿನೀ–** ಅಜ್ಞಾನಾಸಂಭವಾದೇವ ಬ್ರಹ್ಮಣಿ ಜಗದಧ್ಯಾಸೋಽಪಿ ನೇತ್ಯೇತದನೂದ್ಯ ದೃಷ್ಟಾಂತೇನೋಪಪಾದಯತಿ–**ಅಜ್ಞಾನಾಸಂಭವಾದೇವೇತಿ** ॥ ೧೫೫ ॥

**ವಿವರಣೆ–** ಭಗವಂತನು ಅಖಿಲೇಶ್ವರ ಎಂದರೆ ಸಕಲಜಗತ್ತಿಗೆ ಒಡೆಯ. ಆದ್ದರಿಂದ ಎಲ್ಲವೂ ಅವನ ಅಧೀನ. ತನ್ನ ಸ್ವರೂಪಶಕ್ತಿಯಿಂದಲೇ ಸಕಲದೋಷಗಳನ್ನೂ ದೂರೀಕರಿಸಿದ್ದಾನೆಂದು ಈ ಪದದಿಂದ ಧ್ವನಿತವಾಗುವುದು. ಆದ್ದರಿಂದ ಅವನಿಗೆ ಯಾವುದೇ ದೋಷದ ಪ್ರಸಕ್ತಿಯೇ ಇಲ್ಲ. ಆಕಾಶಕ್ಕೆ ಯಾವ ಲೇಪವೂ ಆಗುವುದಿಲ್ಲ. ಪರಬ್ರಹ್ಮನು ಹಾಗೆಯೇ. ಆದ್ದರಿಂದ ಅವನಲ್ಲಿ ಜಗತ್ತಿನ ಆರೋಪವಾಗಲು ಅವಕಾಶವು ಇಲ್ಲವೇ ಇಲ್ಲ.

ತಾನ್ಯಹಂ ವೇದ ಸರ್ವಾಣಿ ನ ತ್ವಂ ವೇತ್ಥ ಪರಂತಪ ।
ಇತಿ ಗೀತಾವಚನತೋ ಯಃ ಸರ್ವಜ್ಞ ಇತಿ ಶ್ರುತೇಃ ॥ ೧೫೬ ॥

ಅಹಮಜ್ಞ ಇತಿ ಪ್ರೋಕ್ತಂ ತ್ವತ್ಪ್ರತ್ಯಕ್ಷಂ ನ ಮತ್ಪ್ರಭೋಃ ।
ಅನುಮಾಯಾಶ್ಚ ಬಾಧೋಽಭೂದಾಗಮೋಽನ್ಯಾರ್ಥಮಾಗಮತ್
॥ ೧೫೭ ॥

**ಅರ್ಥ-** 'ತಾನ್ಯಹಂ ವೇದ ಸರ್ವಾಣಿ ನ ತ್ವಂ ವೇತ್ಥ ಪರಂತಪ' ಇತಿ, 'ತಾನ್ಯಹಂ ವೇದ... ಪರಂತಪ' ಎಂಬ, ಗೀತಾವಚನತಃ = ಗೀತಾವಚನದಿಂದ, 'ಯಃ ಸರ್ವಜ್ಞಃ' ಇತಿ ಶ್ರುತೇಃ= 'ಯಃ ಸರ್ವಜ್ಞಃ' ಎಂಬ ಶ್ರುತಿಗೆ ಅನುಗುಣವಾಗಿ, ಅಹಮಜ್ಞಃ ಇತಿ= ಅಹಮಜ್ಞಃ ಎಂದು, ಪ್ರೋಕ್ತಂ= ಹೇಳಲ್ಪಟ್ಟಿರುವುದು, ತ್ವತ್ಪ್ರತ್ಯಕ್ಷಂ = ನಿನ್ನ ಪ್ರತ್ಯಕ್ಷವೇ, ಮತ್ಪ್ರಭೋಃ = ನನ್ನ ಸ್ವಾಮಿಯಾದ ಶ್ರೀಹರಿಯ ಪ್ರತ್ಯಕ್ಷವು, ನ = ಅಲ್ಲ. ಅನುಮಾಶ್ಚ= ಅಜ್ಞಾನಸಾಧಕವಾದ ಅನುಮಾನಕ್ಕೂ, ಬಾಧಃ = ಬಾಧವು, ಅಭೂತ್ = ಆಯಿತು. ಆಗಮಶ್ಚ = ಜಗತ್ತು ಅವಿದ್ಯಕವೆಂಬ ಆಗಮವಾಕ್ಯವೂ, ಅನ್ಯಾರ್ಥಂ = ಬೇರೆ ಅರ್ಥವನ್ನೂ ಆಗಮತ್ = ಹೊಂದಿತು.

**ಅನುವಾದ-** 'ತಾನ್ಯಹಂ ವೇದ ಸರ್ವಾಣಿ ನ ತ್ವಂ ವೇತ್ಥ ಪರಂತಪ'-ಭಗವದ್ಗೀತಾ ೪.೫, 'ಯಃ ಸರ್ವಜ್ಞಃ ಸ ಸರ್ವವಿದ್ ಯಸ್ಯೈಷ ಮಹಿಮಾ ಭುವಿ'- ಆಥರ್ವಣೋಪನಿಷತ್ ೪-೮. ಈ ಪ್ರಮಾಣಗಳು ಪರಬ್ರಹ್ಮನಿಗೆ ಅಜ್ಞಾನವಿಲ್ಲ ಎಂದು ತಿಳಿಸುತ್ತವೆ. ಆದ್ದರಿಂದ 'ಅಹಮಜ್ಞಃ' ಎಂದು ಅಜ್ಞಾನಪ್ರತ್ಯಕ್ಷದ ವಚನವು ನಿನ್ನ= ಅದ್ವೈತ ಚಿಂತಕನ ಅಜ್ಞಾನದ ಪ್ರತ್ಯಕ್ಷವನ್ನು ಹೇಳುತ್ತದೆ. ನನ್ನ ಪ್ರಭುವಿನ ಅಜ್ಞಾನಪ್ರತ್ಯಕ್ಷವನ್ನು ಹೇಳುವುದಿಲ್ಲ. ಮೇಲೆ ಹೇಳಿದ ಪ್ರಮಾಣದ ವಿರೋಧವಿರುವುದರಿಂದಲೇ ಬ್ರಹ್ಮನಿಗೆ ಅಜ್ಞಾನವನ್ನು ಸಾಧಿಸುವ ಅನುಮಾನಕ್ಕೂ ಬಾಧವಿದೆ. ಬ್ರಹ್ಮನಿಗೆ ಅಜ್ಞಾನವಿದೆ ಎಂದು ಹೇಳುವಂತೆ ಕಾಣುವ ಆಗಮಕ್ಕೂ ಪ್ರಮಾಣವಿರೋಧಿಯಲ್ಲದ ಬೇರೆಯೇ ಅರ್ಥವಿದೆ.

**ಭಾವವಿಲಾಸಿನೀ—** ಭಗವತ್ಯಜ್ಞಾನಾಸಂಭವಾಯೋದೀರಿತಶ್ರುತಿಸ್ಮೃತಿವಿರೋಧೇನ ಜೀವಾಜ್ಞಾನಸಾಧಕ ಪ್ರತ್ಯಕ್ಷವಿರೋಧೇನ ಚ ಪರೇಣ ಬ್ರಹ್ಮಣ್ಯಜ್ಞಾನಸಾಧನಾಯೋದೀರಿತಾ- ನುಮಾನಾನ್ಯಪಿ ಬಾಧಿತವಿಷಯಾಣೀತ್ಯಾಹ- **ತಾನ್ಯಹಮಿತಿ** ॥ **ತ್ವತ್ಪ್ರತ್ಯಕ್ಷಂ** ಜೀವಸ್ಯ ತವ ಪ್ರತ್ಯಕ್ಷಮ್ । ಅನುಮಾಯಾ ಅಜ್ಞಾನಸಾಧಕಾನುಮಾಯಾಃ, ಆಗಮಃ ಅಜ್ಞಾನಸಾಧಕತ್ವೇನಾಭಿಮತ ಆಗಮಃ । ಪ್ರತ್ಯಕ್ಷಾದಿವಿರೋಧೇ ಸತ್ಯಾಗಮಸ್ಯಾನ್ಯಾರ್ಥಕಥನಂ 'ಯಜಮಾನಃ ಪ್ರಸ್ತರಃ' ಇತ್ಯಾದೌ ಸರ್ವಜನಸಂಪ್ರತಿಪನ್ನಮಿತಿ ಭಾವಃ ॥ ೧೫೬–೧೫೭ ॥

**ವಿವರಣೆ-** (1) 'ತಾನ್ಯಹಂ ವೇದ ಸರ್ವಾಣಿ ನ ತ್ವಂ ವೇತ್ಥ ಪರಂ ತಪ' ಭಗವದ್ಗೀತೆ 4-5. 'ಯಸ್ಸರ್ವಜ್ಞಃ ಸರ್ವವಿದ್ .....' - ಆಥರ್ವಣೋಪನಿಷತ್ 4-8

ಈ ಸ್ಮೃತಿ-ಶ್ರುತಿಗಳಿಂದ ಪರಮಾತ್ಮನಿಗೆ ಅಜ್ಞಾನವು ಇಲ್ಲ ಎಂದು ತಿಳಿಯುತ್ತದೆ.

(2) 'ಅಹಮಜ್ಞಃ' - ಈ ಅನುಭವವು ನಮಗೆ ಇದೆ. ಇಲ್ಲಿ ಅಹಂ ಎಂದರೆ ಜೀವಾತ್ಮ, ಪರಮಾತ್ಮ ಅಲ್ಲ. ಆದ್ದರಿಂದ ಈ ಅನುಭವವು ಜೀವಾತ್ಮರ ಅಜ್ಞಾನದ ಸಾಕ್ಷಾತ್ಕಾರ; ಪರಮಾತ್ಮನಿಗೆ ಇದು ಸರ್ವಥಾ ಅನ್ವಯಿಸುವುದಿಲ್ಲ.

(3) ಅದ್ವೈತದರ್ಶನವು ಬ್ರಹ್ಮನಲ್ಲಿ ಅಜ್ಞಾನವನ್ನು ಈ ಕೆಳಗಿನ ಯುಕ್ತಿಯಿಂದ ಸಾಧಿಸುತ್ತದೆ. ಒಬ್ಬನು ಮೂರು ವಿಧಗಳಿಂದ ಸರ್ವಜ್ಞನಾಗಬಹುದು. (1) ಅಂತಃಕರಣವೃತ್ತಿಗಳಿಂದ (2) ಭ್ರಾಂತಿಯಿಂದ, (3) ಸ್ವರೂಪಪ್ರಜ್ಞೆಯಿಂದ.

(1) ಅಂತಃಕರಣವೃತ್ತಿಗಳುಳ್ಳವನು ಪ್ರಮಾತೃ; ಆದ್ದರಿಂದ ಸರ್ವಜ್ಞ ಆಗಬಹುದು. ಬ್ರಹ್ಮನು ತಟಸ್ಥ= ನಿರ್ವಿಕಾರ. ವೃತ್ತಿಗಳನ್ನು ಹೊಂದುವುದು ವಿಕಾರ. ಆದ್ದರಿಂದ ಅವನಲ್ಲಿ ಸ್ವಾಭಾವಿಕವಾದ ಪ್ರಮಾತೃತ್ವವು ಸಂಭವಿಸುವುದಿಲ್ಲ. ಅಜ್ಞಾನದಿಂದ ತಾನು ಪ್ರಮಾತೃ ಎಂದು ತಿಳಿಯಬೇಕಷ್ಟೆ.

(2) ಭ್ರಾಂತಿಗೆ ಅಜ್ಞಾನವೇ ಮೂಲ.

(3) ಸ್ವರೂಪಪ್ರಜ್ಞೆಯಿಂದ ಸರ್ವಜ್ಞನಾಗಲು ಸರ್ವವಸ್ತುಗಳ ಸಂಬಂಧವು ಅವನಿಗೆ ಉಂಟಾಗಬೇಕು. ಆದರೆ ಅವನು ಸಂಗರಹಿತ ಎಂದು 'ಅಸಂಗೋ ಹ್ಯಯಂ ಪುರುಷಃ' ಎಂಬ ಶ್ರುತಿಯು ಹೇಳುತ್ತದೆ. ಆದ್ದರಿಂದ ಸರ್ವವಸ್ತುಗಳ ಸಂಗಾಭಾವದ ಅಜ್ಞಾನದಿಂದ ಬ್ರಹ್ಮನು ಸರ್ವಜ್ಞನಾಗಬೇಕು.

ಈ ಯುಕ್ತಿಗೆ ಗೀತಾವಚನದಿಂದ ಮತ್ತೂ ಆಥರ್ವಣಶ್ರುತಿಯಿಂದ ಬಾಧವಿದೆ.

ಇದೇ ಸೌರಭದ 136, 137 ನೇ ಪದ್ಯಗಳಲ್ಲಿ ಯುಕ್ತಿಬಾಧವನ್ನು ವಿವರಿಸಲಾಗಿದೆ.

175ನೇ ಪದ್ಯದಲ್ಲೂ ಇದರ ವಿವರಣೆಯಿದೆ.

(೪) 'ಮಾಯಾಂ ತು ಪ್ರಕೃತಿಂ ವಿದ್ಯಾತ್ । ಮಾಯಿನಂ ತು ಮಹೇಶ್ವರಮ್' -

ಈ ಆಗಮದಲ್ಲಿರುವ 'ಮಾಯಿನಂ' ಪದದಿಂದ ಬ್ರಹ್ಮನಿಗೆ ಅಜ್ಞಾನವು ಆಗಮಸಿದ್ಧ ಎಂದು ಹೇಳುತ್ತಾರೆ. ಈ ಅರ್ಥವು ಪ್ರಮಾಣಬಾಧಿತ ಎಂದು ತೋರಿಸಿ 'ಮಾಯೀ' ಎಂದರೆ ಪ್ರಕೃತಿಯ ನಿಯಾಮಕ ಎಂಬ ಅರ್ಥವನ್ನು ಹೇಳಲಾಗಿದೆ.

**ಅತೋ ಬ್ರಹ್ಮಾಶ್ರಿತಾಜ್ಞಾನಪಕ್ಷೋ ನಿರ್ಮೂಲ ಏವ ತೇ ।**
**ಅಜ್ಞಾನಂ ಬ್ರಹ್ಮಣಿ ನ ಚೇತ್ ತತ್ರೇದಂ ಕಲ್ಪಿತಂ ಚ ನ ।**
**ಉಪಾದಾನಂ ತವಾಜ್ಞಾನಮುಪಾದೇಯಪ್ರದೇಶಿ ತತ್ ॥ ೧೫೮ ॥**

**ಅರ್ಥ-** ಅತಃ = ಪ್ರತ್ಯಕ್ಷಮುಂತಾದ ಪ್ರಮಾಣಗಳು ಇಲ್ಲದಿರುವುದರಿಂದ ಮತ್ತು ಸಕಲಪ್ರಮಾಣಗಳಿಂದ ಬಾಧಿತವಾದುದರಿಂದ, ತೇ= ನಿನ್ನ, ಬ್ರಹ್ಮಾಶ್ರಿತಾಜ್ಞಾನಪಕ್ಷಃ = ಅಜ್ಞಾನವು ಬ್ರಹ್ಮನಲ್ಲಿದೆ ಎಂಬ ವಾದವು, ನಿರ್ಮೂಲ ಏವ = ಆಧಾರರಹಿತವೇ. ಬ್ರಹ್ಮಣಿ = ಪರಬ್ರಹ್ಮನಲ್ಲಿ, ಅಜ್ಞಾನಂ = ಅಜ್ಞಾನವು, ನ ಚೇತ್ = ಇಲ್ಲವೆಂದಾದರೆ, ತತ್ರ = ಆ ಬ್ರಹ್ಮನಲ್ಲಿ, ಇದಂ = ಈ ಜಗತ್ತು, ಕಲ್ಪಿತಂ ಚ ನ = ಕಲ್ಪಿತವೂ ಅಲ್ಲ. ತವ (ಮತೇ) = ನಿನ್ನ ಮತದಲ್ಲಿ, ಅಜ್ಞಾನಂ = ಅಜ್ಞಾನವು, ಉಪಾದಾನಂ= ಜಗತ್ತಿನ ಉಪಾದಾನಕಾರಣ. ತತ್ = ಆದ್ದರಿಂದ, ಉಪಾದೇಯಪ್ರದೇಶಿ= ಉಪಾದೇಯವು ಇರುವಲ್ಲೇ ಇರಬೇಕು (ಕಲ್ಪಿತವಾದ ಜಗತ್ತಿನಲ್ಲೇ ಇರಬೇಕು).

**ಅನುವಾದ-** ಆದ್ದರಿಂದ ಬ್ರಹ್ಮನಲ್ಲಿ ಅಜ್ಞಾನವಿದೆ ಎಂಬ ನಿಮ್ಮ ವಾದಕ್ಕೆ ಏನೂ ಆಧಾರವಿಲ್ಲ. ಬ್ರಹ್ಮನಲ್ಲಿ ಅಜ್ಞಾನವಿಲ್ಲದಿರುವುದರಿಂದ ಅಲ್ಲಿ ಜಗತ್ತು ಕಲ್ಪಿತವೂ ಅಲ್ಲ. ನಿನ್ನ ಮತದ ಪ್ರಕಾರ ಅಜ್ಞಾನವು ಉಪಾದಾನ, ಜಗತ್ತು ಉಪಾದೇಯ; ಉಪಾದಾನವು ಉಪಾದೇಯವನ್ನು ಬಿಟ್ಟು ಬೇರೆ ಕಡೆ ಇರುವುದೇ ಇಲ್ಲ. ಆದ್ದರಿಂದ ಜಗತ್ತಿನಲ್ಲೇ ಅಜ್ಞಾನವು ಇರಬೇಕು; ಬ್ರಹ್ಮನಲ್ಲಿ ಅಲ್ಲ.

**ಭಾವವಿಲಾಸಿನೀ–** ಅತಃ ಪ್ರತ್ಯಕ್ಷಾದಿಪ್ರಮಾಣಾಭಾವಾತ್ ತದ್ ಬಾಧಿತತ್ವಾಚ್ಚ । ತತ್ರ ಬ್ರಹ್ಮಣಿ । ಇದಂ ಜಗತ್ । ತತ್ರ ಹೇತುಮಾಹ– **ಉಪಾದಾನಮಿತಿ** ॥ ಯದ್ ಯಸ್ಮಾತ್ ತವ ಮತೇ ಅಜ್ಞಾನ-

ಮುಪಾದಾನಮ್, ತತ್ ತಸ್ಮಾದುಪಾದೇಯಪ್ರದೇಶಿ ಉಪಾದೇಯಸ್ಯ ಕಲ್ಪಿತಸ್ಯ ಪ್ರದೇಶ ಏವ ಪ್ರದೇಶೋಽಸ್ಯಾಸ್ತೀತಿ ತತ್, ತಥೋಕ್ತಮ್ । ಉಪಾದಾನೋಪಾದೇಯಯೋಃ ಸಮಾನ-ದೇಶತ್ವನಿಯಮಾತ್ । ಬ್ರಹ್ಮಣಿ ಜಗದಾರೋಪೋಪಾದಾನರೂಪಾಜ್ಞಾನಾಭಾವೇ ತದು-ಪಾದೇಯಾರೋಪೋಽಪಿ ನೇತಿ ಭಾವಃ ॥ ೧೩೮ ॥

**ವಿವರಣೆ-** ಉಪಾದಾನವೇ ಉಪಾದೇಯವಾಗಿ ಪರಿಣಾಮ ಹೊಂದುತ್ತದೆ. ಉದಾ: ಮಡಿಕೆಗೆ ಮಣ್ಣು ಉಪಾದಾನಕಾರಣ. ಮಣ್ಣು ಮಡಿಕೆಯಾಗುತ್ತದೆ. ಮಡಕೆಯು ಇರುವ ಪ್ರದೇಶದಲ್ಲೇ ಮಣ್ಣು ಇರುತ್ತದೆ. ಹಾಗೆಯೇ ಅಜ್ಞಾನವು ಜಗದಾರೋಪಕ್ಕೆ ಉಪಾದಾನಕಾರಣವಾದುದರಿಂದ ಅದು ಜಗತ್ತಿನಲ್ಲಿ ಇರಬೇಕು. ಬ್ರಹ್ಮನಲ್ಲಿ ಅಲ್ಲ. ಆದ್ದರಿಂದ ಪರಬ್ರಹ್ಮನಲ್ಲಿ ಜಗದಾರೋಪವೂ ಯುಕ್ತವಲ್ಲ.

ಅಜ್ಞಾನಾಪಗಮೇ ತತ್ತಚ್ಚೈತನ್ಯಂ ತಸ್ಯತಸ್ಯ ದೃಕ್ ।
ಇತ್ಯಾದಿಪ್ರಕ್ರಿಯಾ ಸರ್ವಾ ವಿಕ್ರಿಯಾಽಭೂತ್ ತವಾಧುನಾ ॥ ೧೩೯ ॥

**ಅರ್ಥ-** ಅಧುನಾ= ಈಗ, ಅಜ್ಞಾನಾಪಗಮೇ= ಅಜ್ಞಾನವೇ ಇಲ್ಲವಾದಾಗ, ತವ= ನಿನ್ನ ಮತದ, 'ತತ್‌ತತ್ ಚೈತನ್ಯಂ'= ಆಯಾಯ ಜೀವ, ತಸ್ಯ ತಸ್ಯ= ಆಯಾಯಾ ಅರ್ಥಗಳ, ದೃಕ್= ಜ್ಞಾನ ಇತ್ಯಾದಿ ಪ್ರಕ್ರಿಯಾ ಸರ್ವಾ= ಮೊದಲಾದ ಪ್ರಕ್ರಿಯೆಗಳೆಲ್ಲವೂ, ವಿಕ್ರಿಯಾ= ಅಪ್ರಯೋಜಕವು, ಅಭೂತ್= ಆಯಿತು.

**ಭಾವವಿಲಾಸಿನೀ–** ಅಜ್ಞಾನಾಸಂಭವೇ ಪ್ರತಿಕರ್ಮವ್ಯವಸ್ಥಾ ನೇತಿ ಪ್ರಾಕ್ಸಾಮಾನ್ಯೇನೋಕ್ತಂ ವಿವಿಚ್ಯ ದರ್ಶಯತಿ– **ಅಜ್ಞಾನಾಪಗಮ ಇತಿ** ॥ ತತ್ತಚ್ಚೈತನ್ಯಂ ತತ್ತದಧಿಷ್ಠಾನಚೈತನ್ಯಮ್ । ತಸ್ಯ ತಸ್ಯ ಘಟಾದೇರ್ದೃಗ್ ಅಪರೋಕ್ಷದರ್ಶನಮ್ ॥ ೧೩೯ ॥

**ವಿವರಣೆ-** 'ಬ್ರಹ್ಮನಲ್ಲಿ ಅಜ್ಞಾನವು ಉಪಪನ್ನವಾಗದಿದ್ದರೆ ಪ್ರತಿಕರ್ಮವ್ಯವಸ್ಥೆಯೂ ಉಪಪನ್ನವಾಗುವುದಿಲ್ಲ' ಎಂದು ಶ್ಲೋಕ 71ರಲ್ಲಿ ಸಾಮಾನ್ಯವಾಗಿ ಹೇಳಲಾಗಿದೆ. ಈಗ ಇದನ್ನು ವಿವೇಚಿಸಿ ತೋರಿಸುತ್ತಾರೆ.

'ಬ್ರಹ್ಮನಲ್ಲಿ ಜಗತ್ತು ಆರೋಪಿತ; 'ಅಹಮ್' ಎಂದು ಅನುಭವವಿರುವವರೆಲ್ಲರೂ ಬ್ರಹ್ಮರೇ' ಎಂದು ಅದ್ವೈತದರ್ಶನ.

ಹೀಗಾಗಿದ್ದರೆ ಎಲ್ಲರಿಗೂ, ಎಲ್ಲ ಕಾಲದಲ್ಲೂ ಎಲ್ಲ ಪದಾರ್ಥಗಳ ಪ್ರತೀತಿಯಾಗಲಿ ಎಂದು ಪ್ರಶ್ನೆಯು ಉದ್ಭವಿಸುತ್ತದೆ. ಅದ್ವೈತದರ್ಶನವು ಈ ಪ್ರಶ್ನೆಗೆ ಉತ್ತರವನ್ನು ಹೇಳಿದೆ. ಅದು ಹೀಗೆ:

'ಆಯಾಯಾ ಜೀವಾತ್ಮರ ಅಂತಃಕರಣವು ಅವರವರ ಇಂದ್ರಿಯಗಳ ಮೂಲಕ ಹೊರಗೆ ಹೋಗಿ ಘಟ, ಪಟ ಮೊದಲಾದ ಪದಾರ್ಥಗಳನ್ನು ತಲುಪಿ ಅವುಗಳ ಆಕಾರವನ್ನು

ಪಡೆಯುತ್ತದೆ. ಈ ಪರಿಣಾಮಕ್ಕೆ ಅಂತಃಕರಣವೃತ್ತಿ ಎಂದು ಹೆಸರು. ಈ ವೃತ್ತಿಯಿಂದ ಆಯಾಯಾ ಪದಾರ್ಥಗಳಿಗೆ ಅಧಿಷ್ಠಾನವಾದ ಬ್ರಹ್ಮನನ್ನು ಆವರಿಸಿರುವ ಅಜ್ಞಾನವು ನಿವೃತ್ತವಾಗುತ್ತದೆ. ಯಾವಯಾವ ಜೀವಚೈತನ್ಯದ ಅಂತಃಕರಣವು ಹೊರಗೆ ಹೋಗಿ ಯಾವ ವಸ್ತುವಿನ ಆಕಾರದ ವೃತ್ತಿಯು ಉಂಟಾಗುವುದೋ. ಆ ಜೀವಚೈತನ್ಯನಿಗೆ ಆ ಅರ್ಥದ ಜ್ಞಾನವು ಉಂಟಾಗುತ್ತದೆ. ಈ ವ್ಯವಸ್ಥೆಗೆ ಪ್ರತಿಕರ್ಮವ್ಯವಸ್ಥೆ ಎಂದು ಹೆಸರು'.

ವಿಮರ್ಶೆ : ಬ್ರಹ್ಮನಿಗೆ ಅಜ್ಞಾನವು ಇರುವುದಾದರೆ, ಅದರಿಂದ ಅವನಲ್ಲಿ ಜಗತ್ತಿನ ಆರೋಪವು ಆಗುವುದಾದರೆ ಈ ಪ್ರಕ್ರಿಯೆಯು ಉಪಪನ್ನವಾದೀತು. ಬ್ರಹ್ಮನಿಗೆ ಅಜ್ಞಾನವು ಇಲ್ಲವೇ ಇಲ್ಲ. ಆದ್ದರಿಂದ ಈ ಯಾವ ಪ್ರಕ್ರಿಯೆಯೂ ಉಪಪನ್ನವಲ್ಲ. ಆದ್ದರಿಂದ ಬೇರೆಬೇರೆ ಚೇತನಗಳು, ಬೇರೆ ಬೇರೆ ಪದಾರ್ಥಗಳು, ಬೇರೆಬೇರೆಯವರಿಗೆ, ಬೇರೆ ಬೇರೆ ಅರ್ಥಗಳ ಜ್ಞಾನ - ಈ ಪ್ರಕ್ರಿಯೆಯೆಲ್ಲವೂ, ವಿಕ್ರಿಯ= ನಿಷ್ಕ್ರಿಯ= ಅಪ್ರಯೋಜಕ.

ಅದ್ವೈತದರ್ಶನದ ಪ್ರಕ್ರಿಯೆಯ ಪ್ರಕಾರವೇ ಬ್ರಹ್ಮನಲ್ಲಿ ಜಗದಾರೋಪವು ಸಂಭವಿಸುವುದಿಲ್ಲ ಎಂದು ಐದು ಶ್ಲೋಕಗಳಿಂದ ವಿವರಿಸುತ್ತಾರೆ-

**ಕಿಂಚಾಹಮಜ್ಞ ಇತ್ಯೇವ ಹ್ಯಜ್ಞಾನಸ್ಯಾಽಕೃತಿಸ್ತವ ।**
**ಮಾಮಹಂ ನ ವಿಜಾನಾಮೀತ್ಯಾಕಾರಶ್ಚ ನಿಗದ್ಯತೇ ॥ ೧೬೦ ॥**

**ಅರ್ಥ-** ಕಿಂಚ = ಇದಲ್ಲದೆ, ತವ (ಮತೆ)= ನಿಮ್ಮ ಮತದಲ್ಲಿ, ಅಹಮಜ್ಞ ಇತ್ಯೇವ,= ನಾನು ಅಜ್ಞ ಎಂದೇ ಅಜ್ಞಾನಸ್ಯ ಆಕೃತಿಃ= ಅಜ್ಞಾನಜ್ಞಾನದ ಆಕಾರವು, ನಿಗದ್ಯತೇ ಹಿ= ಹೇಳಲ್ಪಡುತ್ತದೆ, ಇದು ಪ್ರಸಿದ್ಧ. 'ಮಾಮಹಂ ನ ವಿಜಾನಾಮಿ'= ನಾನು ನನ್ನನ್ನು ತಿಳಿದಿಲ್ಲ, ಇತಿ ಆಕಾರಶ್ಚ= ಈ ಆಕಾರವೂ ಹೇಳಲ್ಪಡುತ್ತದೆ.

**ಅನುವಾದ-** ಅದ್ವೈತ ಮತದಲ್ಲಿ ಭಾವರೂಪ ಅಜ್ಞಾನವನ್ನು ಎರಡು ರೀತಿಯ ಶಬ್ದವಿನ್ಯಾಸ್ಯಗಳಿಂದ ಹೇಳುತ್ತಾರೆ. (೧) ಅಹಮಜ್ಞಃ (೨) ಮಾಮಹಂ (ಅನ್ಯಂ ಚ) ನ ವಿಜಾನಾಮಿ.

**ಭಾವವಿಲಾಸಿನೀ–** ಪ್ರಮಾಣವೈಕಲ್ಯಾದೇವ ತದಗ್ರಹಣೋಪಪತ್ತೇರಿತಿ ವದತಾ ಬ್ರಹ್ಮವಿಷಯ-ಕಾಜ್ಞಾನಶಕ್ತ್ಯೈವ ಜಗನ್ನ ಜಾನಾಮಿ' ಇತ್ಯನುಭವಸ್ಯಾಪ್ಯಂಗೀಕಾರಾದ್ 'ಅಹಂ ಕಿಮಪಿ ನ ಜಾನಾಮಿ' ಇತಿ ವಾ 'ಅಹಂ ಮಾಮನ್ಯಂ ಚ ನ ಜಾನಾಮಿ' ಇತಿ ವಾ ಅಜ್ಞಾನಜ್ಞಾನಸ್ಯಾಕಾರಃ ಪರಮತೇ। ಪ್ರಾತೀತಿಕಮಜ್ಞಾನಂ ನಾಪ್ರತೀತಂ ತಿಷ್ಠತೀತಿ ಚ । ಆರೋಪಶ್ಚ ಸರ್ವಮಹಂ ಜಾನಾಮಿ, ಮಾಂ ಗೌರತ್ವೇನ ಜಾನಾಮಿ, ಅನ್ಯಂ ಜೀವಜಡಾದಿಕಂ ಜೀವತ್ವೇನ ಜಡತ್ವಾದಿನಾ ಜಾನಾಮಿ' ಇತ್ಯಾಕಾರವಾನ್ । ತಥಾಚ ತ್ವದುಕ್ತಪ್ರಾತೀತಿಕಾಜ್ಞಾನೇ ಸತಿ ನಾಯಮಾರೋಪಃ, ವಿರುದ್ಧಾಕಾರಪ್ರತೀತಿದ್ವಯಸ್ಯ ಏಕದಾಽಯೋಗಾತ್ । ಅಜ್ಞಾನಾಭಾವದಶಾಯಾಮೀ-ದೃಶಪ್ರತೀತೌ ನಾರೋಪರೂಪತ್ವಮ್ । ತಸ್ಯಾ ಅಜ್ಞಾನಾನು- ಪಾದಾನಕಪ್ರತೀತಿತ್ವಾದಿತಿ ಭಾವೇನಾಹ– **ಕಿಂಚೇತಿ** ॥ 'ಅಹಮಜ್ಞಃ' 'ಅಹಂ ನ ಜಾನಾಮಿ' । ಅಜ್ಞಾನಸ್ಯ ಅಜ್ಞಾನಜ್ಞಾನಸ್ಯ ।

ಮಾಮಹಮನ್ಯಂ ಚೇತಿ ಶೇಷಃ। ವಿಶ್ವಭ್ರಮಃ ವಿಶ್ವಭ್ರಮರೂಪಮ್। ಚಿತಃ ಬ್ರಹ್ಮ-ಚೈತನ್ಯಸ್ಯ ॥ ೧೬೦–೧೬೩ ॥

ಏವಂ ಚಾಜ್ಞಾನವದ್ಬ್ರಹ್ಮ ನೈವ ವಿಶ್ವಭ್ರಮೋ ಭವೇತ್ ।
ಇದಂ ಜಾನಾಮೀತಿ ಸರ್ವಭ್ರಾಂತಿರ್ಯಸ್ಮಾತ್ ಪ್ರದೃಶ್ಯತೇ ॥ ೧೬೧ ॥

**ಅರ್ಥ-** ಏವಂಚ = ಹೀಗಿರುವುದರಿಂದ, ಬ್ರಹ್ಮ = ಬ್ರಹ್ಮನು, (ಯದಾ= ಯಾವಾಗ), ಅಜ್ಞಾನವದೇವ= ಅಜ್ಞಾನವುಳ್ಳವನೇ, ವಿಶ್ವಭ್ರಮಃ = ಜಗತ್ತಿನ ಭ್ರಮೆಯು, (ಅವನಿಗೆ) ನೈವ ಭವೇತ್= ಸರ್ವಥಾ ಸಂಭವಿಸಲಾರದು, ಯಸ್ಮಾತ್= ಏಕೆಂದರೆ, ಇದಂ = ಇದನ್ನು, ಜಾನಾಮಿ = ತಿಳಿಯುತ್ತೇನೆ, ಇತಿ = ಎಂದೇ, ಸರ್ವಭ್ರಾಂತಿಃ = ಎಲ್ಲರ ಭ್ರಮೆಯು, ಪ್ರದೃಶ್ಯತೇ = ಕಾಣಲ್ಪಡುತ್ತದೆ.

**ಅನುವಾದ-** ಬ್ರಹ್ಮನಅಜ್ಞಾನ ಜ್ಞಾನದಆಕಾರವು ಹೀಗೆ ಇರುವುದರಿಂದ ಅವನಿಗೆ ಅಜ್ಞಾನದ ಜ್ಞಾನವು ಇರುವಾಗ ಅವನಿಗೆ ಜಗದ್‌ಭ್ರಾಂತಿಯು ಇರಲು ಅವಕಾಶವೇ ಇಲ್ಲ. ಲೋಕದಲ್ಲಿ ಭ್ರಾಂತರು ತಮ್ಮ ಭ್ರಾಂತಿಯನ್ನು 'ಇದನ್ನು ತಿಳಿದಿದ್ದೇನೆ' ಎಂಬ ಪದಗಳಿಂದ ವ್ಯಕ್ತಪಡಿಸುವುದು ಕಂಡುಬಂದಿದೆ.

ಸರ್ವಂ ಜಾನಾಮಿ ಸರ್ವಂ ಚ ನ ಜಾನಾಮೀತಿ ಚೈಕದಾ ।
ವಿರುದ್ಧಾಕಾರಸಂಪತ್ತಿರನಾನುಭವಿಕೀ ಚಿತಃ ॥ ೧೬೨ ॥

**ಅರ್ಥ-** ಸರ್ವಂ = ಎಲ್ಲವನ್ನೂ, ಜಾನಾಮಿ =ತಿಳಿದಿದ್ದೇನೆ, ಚ= ಮತ್ತು, ಸರ್ವಂ = ಎಲ್ಲವನ್ನೂ ನ ಜಾನಾಮಿ = (ನಾನು) ತಿಳಿದಿಲ್ಲ, ಇತಿ ಚ = ಹೀಗೆಯೇ, ಚಿತಃ = ಬ್ರಹ್ಮಚೈತನ್ಯಕ್ಕೆ, ಏಕದಾ = ಏಕಕಾಲದಲ್ಲಿ, ವಿರುದ್ಧಾಕಾರಸಂಪತ್ತಿಃ = ಪರಸ್ಪರವಿರುದ್ಧವಾದ ಆಕಾರವನ್ನು ಪಡೆದಿರುವ ಜ್ಞಾನದ ಪ್ರಾಪ್ತಿಯು, ಅನಾನುಭವಿಕೀ= ಅನುಭವವಿರುದ್ಧ.

**ಅನುವಾದ-** 'ಸರ್ವಂ ಜಾನಾಮಿ' ಎಂದು ಭ್ರಾಂತಿಯ ಆಕಾರ. 'ಸರ್ವಂ ನ ಜಾನಾಮಿ' ಎಂದು ಅಜ್ಞಾನಜ್ಞಾನದ ಆಕಾರ. ಸಾಕ್ಷಿಚೈತನ್ಯದಲ್ಲಿ (ಬ್ರಹ್ಮನಲ್ಲಿ) ಏಕಕಾಲದಲ್ಲಿ ಸಕಲ ವಿಷಯಗಳ ಜ್ಞಾನ-ಅಜ್ಞಾನಗಳ ಸಮಾವೇಶವು ಅನುಭವವಿರುದ್ಧ.

ಹಿಂದಿನ ಶ್ಲೋಕದಲ್ಲಿ ಪರಬ್ರಹ್ಮನಲ್ಲಿ ಅಜ್ಞಾನದ ಜ್ಞಾನ ಮತ್ತು ಜಗದ್ವಿಷಯಕವಾದ ಭ್ರಮೆ - ಇವೆರಡು ಒಂದೇ ಕಾಲದಲ್ಲಿ ಇರಲು ಸಾಧ್ಯವಿಲ್ಲವೆಂದು ಹೇಳಲಾಗಿದೆ. ಈ ತೊಂದರೆಯನ್ನು ಪರಿಹರಿಸಲು ಮಾಯಾವಾದಿಯು ಹೀಗೆ ಹೇಳಬಹುದು-

ಅಥಾಜ್ಞಾನಸ್ಯಾಪಗಮೇ ಭ್ರಮತ್ವಂ ಯದಿ ಕಥ್ಯತೇ ।
ಅಜ್ಞಾನಕಲ್ಪಿತತ್ವೋಕ್ತಿರಯುಕ್ತಾಽಭೂತ್ ತದಾ ತವ ॥ ೧೬೩ ॥

**ಅರ್ಥ-** ಅಥ = ಅಥವಾ, ಅಜ್ಞಾನಸ್ಯ = ಅಜ್ಞಾನದ, ಅಪಗಮೇ = ನಿವೃತ್ತಿಯಾದಾಗ, ಭ್ರಮತ್ವಂ = ಬ್ರಹ್ಮನ ಜ್ಞಾನಕ್ಕೆ ಭ್ರಮತ್ವವು, ಯದಿ ಕಥ್ಯತೇ = ಹೇಳಲ್ಪಡುವುದಾದರೆ, ತದಾ = ಆಗ, ತವ (ಮತೇ) = ನಿನ್ನ ಮತದಲ್ಲಿ, ಅಜ್ಞಾನಕಲ್ಪಿತತ್ವೋಕ್ತಿಃ = ಭ್ರಮೆಯು ಅಜ್ಞಾನ ಎಂಬ ಉಪಾದಾನಕಾರಣದಿಂದ ಕಲ್ಪಿತ ಎಂಬ ಹೇಳಿಕೆಯು, ಅಯುಕ್ತಾ = ಯುಕ್ತಿವಿರುದ್ಧವು, ಅಭೂತ್ = ಆಯಿತು.

**ಅನುವಾದ-** ಅಜ್ಞಾನದ ನಿವೃತ್ತಿಯು ಆದ ನಂತರ ಬ್ರಹ್ಮಜ್ಞಾನವನ್ನು ಭ್ರಮೆ ಎಂದು ಹೇಳುತ್ತೇವೆ? ಹೀಗಾದರೆ ನಿಮ್ಮ ದರ್ಶನದಲ್ಲಿ ಭ್ರಮೆಯು ಅಜ್ಞಾನಕಲ್ಪಿತ ಎಂಬ ಹೇಳಿಕೆಯು ತಪ್ಪಾದೀತು.

**ಅಜ್ಞಾನರೂಪಮೇವಾಸ್ಯ ಪ್ರಪಂಚಸ್ಯ ವಿಚಾರಣೇ ।**
**ವಕ್ತ್ಯನಾರೋಪಿತತ್ವಾಖ್ಯಮಹಿಮಾನಂ ತತಃ ಸ್ಫುಟಮ್ ॥ ೧೬೪ ॥**

**ಅರ್ಥ-** ತತಃ= ಆದ್ದರಿಂದ, ವಿಚಾರಣೇ= ವಿಮರ್ಶಿಸಿದರೆ, ಅಜ್ಞಾನರೂಪಮ್ ಏವ= 'ನ ಜಾನಾಮಿ' ಎಂಬ ಅಜ್ಞಾನಜ್ಞಾನದ ಆಕಾರವೇ, ಅಸ್ಯ ಪ್ರಪಂಚಸ್ಯ= ಈ ಪ್ರಪಂಚದ, ಅನಾರೋಪಿತತ್ವಾಖ್ಯಮಹಿಮಾನಂ= ಅನಾರೋಪಿತತ್ವ ಎಂಬ ಮಹಿಮೆಯನ್ನು (ಸತ್ಯತ್ವವನ್ನು) ಸ್ಫುಟಂ= ಸ್ಪಷ್ಟವಾಗಿ, ವಕ್ತಿ= ಹೇಳುತ್ತದೆ.

**ಅನುವಾದ-** ಮೇಲಿನ ಶ್ಲೋಕಗಳಲ್ಲಿ ಹೇಳಿದ ರೀತಿಯಿಂದ, 'ನ ಜಾನಾಮಿ' ಎಂಬ ಅಜ್ಞಾನ ಜ್ಞಾನದ ಆಕಾರವನ್ನು ವಿಮರ್ಶಿಸಿದರೆ ಈ ಅಜ್ಞಾನ ಜ್ಞಾನದ ಆಕಾರವೇ ಈ ಪ್ರಪಂಚಕ್ಕೆ ಅನಾರೋಪಿತತ್ವ (ಸತ್ಯತ್ವ) ಎಂಬ ಮಹಿಮೆಯನ್ನು ಸ್ಫುಟವಾಗಿ ಹೇಳುತ್ತದೆ. ಪ್ರಪಂಚವು ಸತ್ಯ ಎಂದೇ ಸಿದ್ಧವಾಗುತ್ತದೆ.

**ಭಾವವಿಲಾಸಿನೀ–** ತತಸ್ತಸ್ಮಾತ್ ಕಾರಣಾತ್ । ಅಜ್ಞಾನರೂಪಂ ನ ಜಾನಾಮೀತಿ ಪ್ರತೀಯಮಾನಾಜ್ಞಾನಸ್ವರೂಪಮ್ ॥ ೧೬೪ ॥

**ವಿವರಣೆ-** ಇಲ್ಲದವುಗಳನ್ನು ಕುರಿತು 'ನ ಜಾನಾಮಿ' ಎಂದು ಜ್ಞಾನವು ಯಾರಿಗೂ ಬರುವುದಿಲ್ಲ. 'ಮೊಲದ ಕೊಂಬನ್ನು ತಿಳಿದಿಲ್ಲ' ಆಮೆಯ ಕೂದಲನ್ನು ತಿಳಿದಿಲ್ಲ' - ಇಂತಹ ಜ್ಞಾನವು ಯಾರಿಗೂ ಇಲ್ಲ. ಇರುವ ವಸ್ತುಗಳ ಜ್ಞಾನವಿಲ್ಲದಿದ್ದರೆ 'ನ ಜಾನಾಮಿ' ಎಂದು ಹೇಳುತ್ತೇವೆ. ಆದ್ದರಿಂದ 'ನ ಜಾನಾಮಿ' ಎಂಬ ಹೇಳಿಕೆಯೇ, ಅಥವಾ ಅಜ್ಞಾನ ಜ್ಞಾನದ ಆಕಾರವೇ ಜಗತ್ತನ್ನು ಸತ್ಯ ಎಂದು ತಿಳಿಸುತ್ತದೆ.

ಅಜ್ಞಾನವು ಅಜ್ಞಾನಕ್ಕೆ ವಿಷಯವಾಗುವ ವಸ್ತುಗಳಲ್ಲಿ ಇದೆ; ಆದ್ದರಿಂದ ಪ್ರತಿಕರ್ಮವ್ಯವಸ್ಥೆಯು ಉಪಪನ್ನವಾಗುತ್ತದೆ - ಈ ಅಭಿಪ್ರಾಯವನ್ನು ವಿಮರ್ಶಿಸುತ್ತಾರೆ.

**ವಿಷಯಾಶ್ರಿತಮಜ್ಞಾನಂ ಯದ್ಯಾವರಣಮಿಷ್ಯತೇ ।**
**ತರ್ಹ್ಯೇಕವೃತ್ತ್ಯಾ ತನ್ನಾಶೇ ಸರ್ವೈರ್ದೃಶ್ಯೇತ ವಸ್ತು ತತ್ ॥ ೧೬೫ ॥**

**ಅರ್ಥ-** ವಿಷಯಾಶ್ರಿತಂ = ಕಪ್ಪೆ ಚಿಪ್ಪು (ಶುಕ್ತಿ) ಮುಂತಾದ ಅಜ್ಞಾನವಿಷಯಗಳನ್ನು ಆಶ್ರಯಿಸಿದ, ಅಜ್ಞಾನಂ = ಅಜ್ಞಾನವು, ಆವರಣಂ= ಕಪ್ಪೆಚಿಪ್ಪು (ಶುಕ್ತಿ) ಮುಂತಾದ ಪದಾರ್ಥಗಳಿಗೆ ಆವರಣ ಎಂದು, ಯದಿ ಇಷ್ಯತೇ ತರ್ಹಿ= ಅಂಗೀಕರಿಸಲ್ಪಟ್ಟರೆ, ಏಕವೃತ್ತ್ಯಾ= ಇದು ಕಪ್ಪೆಚಿಪ್ಪು ಎಂದು ಒಬ್ಬ ವ್ಯಕ್ತಿಗೆ ಹುಟ್ಟುವ ಪ್ರತ್ಯಕ್ಷದಿಂದ, ತನ್ನಾಶೇ = ಆ ಶುಕ್ತಿಗೆ ಆವರಣವಾದ ಅಜ್ಞಾನವು ನಾಶಹೊಂದಲು, ಸರ್ವೈಃ = ಎಲ್ಲರಿಂದಲೂ, ತತ್ ವಸ್ತು = ಆ ಶುಕ್ತಿಯು, ದೃಶ್ಯೇತ = ನೋಡಲ್ಪಡಬೇಕಾದೀತು.

**ಅನುವಾದ-** ಅಜ್ಞಾನವು ಅಜ್ಞಾತವಾದ ವಿಷಯಗಳಲ್ಲಿ (ವಸ್ತುಗಳಲ್ಲಿ) ಇದೆ ಎಂಬ ಅಭಿಪ್ರಾಯವೂ ಸರಿಯಲ್ಲ. ಹೀಗಿದ್ದರೆ, ಒಬ್ಬ ವ್ಯಕ್ತಿಯ ಅಂತಃಕರಣವೃತ್ತಿಯಿಂದ ವಸ್ತುವಿನಲ್ಲಿರುವ ಅಜ್ಞಾನವು ನಾಶವಾದರೆ ಆ ವಸ್ತು ಎಲ್ಲರಿಗೂ ಕಾಣಬೇಕಾದೀತು.

**ಭಾವವಿಲಾಸಿನೀ–** ಇದಾನೀಂ ವಿಷಯಾಶ್ರಿತಾಜ್ಞಾನಪಕ್ಷಂ ದೂಷಯತಿ– **ವಿಷಯಾಶ್ರಿತಮಿತಿ** ॥ 'ವಿಷಯಾಶ್ರಿತಂ ಇದಂ ರಜತಮ್' ಇತಿ ವಿಪರ್ಯಯೇ ರಜತತಯಾ ಪ್ರತೀಯಮಾನಾ ಯಾ ಶುಕ್ತಿಃ ತದಾವರಕಮಜ್ಞಾನಮ್ । ಶುಕ್ತ್ಯವಚ್ಛಿನ್ನಚೈತನ್ಯಾಶ್ರಿತಂ ತದಾವರಕಮಜ್ಞಾನಮೇವ ಶುಕ್ತ್ಯಾವರಕಮಜ್ಞಾನಂ ವದಂತಿ । ತೇನ ಚ ಶುಕ್ತೇರ್ಜ್ಞಾನಾಭಾವಾತ್ ತತ್ರವಿಪರೀತಜ್ಞಾನಮಿತಿ ಪರಪ್ರಕ್ರಿಯಾ । ವಿಷಯೆ ಶುಕ್ತ್ಯಾದೌ ಏಕಸ್ಯ ವೃತ್ತ್ಯಾ ಇಯಂ ಶುಕ್ತಿರಿತ್ಯಪರೋಕ್ಷಜ್ಞಾನೇನ ತನ್ನಾಶೇ ಶುಕ್ತ್ಯಾವರಕಾಜ್ಞಾನನಾಶೇ । ತತ್ ಶುಕ್ತಿಶಕಲಮ್ ॥ ೧೬೫ ॥

**ವಿವರಣೆ-** ಅಜ್ಞಾನವು ಬ್ರಹ್ಮನಲ್ಲಿ ಇದೆ ಎಂಬ ಪಕ್ಷದಲ್ಲಿ ಪ್ರತಿಕರ್ಮವ್ಯವಸ್ಥೆಯು ಉಪಪನ್ನವಲ್ಲ ಎಂದು ಹೇಳಲಾಯಿತು (ಶ್ಲೋಕ 159). ಅಜ್ಞಾನವು ಅಜ್ಞಾತವಸ್ತುಗಳಲ್ಲಿ ಇದೆ; ಯಾರಿಗೆ ವಸ್ತುವಿನ ಅಂತಃಕರಣವೃತ್ತಿಯು ಉಂಟಾಗುವುದೋ ಅವರಿಗೆ ಆ ವಸ್ತುವಿನ ಜ್ಞಾನ, ಬೇರೆಯವರಿಗೆ ಇಲ್ಲ- ಹೀಗೆ ಪ್ರತಿಕರ್ಮವ್ಯವಸ್ಥೆಯು ಉಪಪನ್ನವಾಗುತ್ತದೆ? ಇಲ್ಲ. ಒಬ್ಬನ ಅಂತಃಕರಣವೃತ್ತಿಯಿಂದ ಒಂದು ವಸ್ತುವಿನಲ್ಲಿರುವ ಅಜ್ಞಾನವು ನಾಶವಾಗುತ್ತದೆ. ಉದಾ : ಒಬ್ಬನಿಗೆ ತನ್ನೆದುರಿಗೆ ಇರುವ ಪುಸ್ತಕದ ಜ್ಞಾನವು ಆಗುತ್ತದೆ. ಅಂದರೆ ಅವನ ಅಂತಃಕರಣವು ಕಣ್ಣಿನ ಮೂಲಕ ಪುಸ್ತಕವನ್ನು ತಲುಪಿ ಪುಸ್ತಕದ ಆಕಾರವನ್ನು ಪಡೆದಿದೆ. ಈ ವೃತ್ತಿಯಿಂದ ಪುಸ್ತಕದಲ್ಲಿರುವ ಅಜ್ಞಾನವು ನಾಶವಾಗುತ್ತದೆ. ಈಗ ಈ ಪುಸ್ತಕದಲ್ಲಿ ಅಜ್ಞಾನವು ಇಲ್ಲದಿರುವುದರಿಂದ ಈ ಪುಸ್ತಕವು ಎಲ್ಲರಿಗೂ ಕಾಣಬೇಕಾಗುತ್ತದೆ. ವಸ್ತುಸ್ಥಿತಿಯು ಹೀಗೆ ಇಲ್ಲ. ಆದ್ದರಿಂದ ಅಜ್ಞಾನವು ವಿಷಯಾಶ್ರಿತ ಎಂಬ ಪಕ್ಷವೂ ಸರಿಯಲ್ಲ.

ವಿಷಯಾವರಕಂ ದೀಪಸ್ತಮಿಸ್ರಂ ನಾಶಯೇದ್ ಯದಾ ।
ತದಾ ತದ್‌ವಸ್ತು ಸರ್ವೈಶ್ಚ ಸುವ್ಯಕ್ತಂ ಕಿಂ ನ ದೃಶ್ಯತೇ ॥ ೧೬೬ ॥

**ಅರ್ಥ-** ವಿಷಯಾವಾರಕಂ = ಪದಾರ್ಥಗಳನ್ನು ಆವರಿಸಿರುವ, ತಮಿಸ್ರಂ = ಕತ್ತಲೆಯನ್ನು, ದೀಪಃ = ದೀಪವು, ಯದಾ = ಯಾವಾಗ, ನಾಶಯೇತ್ =

ನಾಶಪಡಿಸುತ್ತದೆಯೋ, ತದಾ = ಆಗ, ತದ್‌ವಸ್ತು = ಆ ಪದಾರ್ಥವು, ಸರ್ವೈಃ = ಎಲ್ಲರಿಂದ, ಸುವ್ಯಕ್ತಂ= ಸ್ಪಷ್ಟವಾಗಿಯೇ, ದೃಶ್ಯತೇ ನ ಕಿಮ್? = ಕಾಣಲ್ಪಡುವುದಿಲ್ಲವೇ?

**ಅನುವಾದ-** ವಿಷಯವನ್ನು (ಪದಾರ್ಥವನ್ನು) ಆವರಿಸಿರುವ ಕತ್ತಲನ್ನು ದೀಪವು ನಾಶಪಡಿಸಿದಾಗ ಆ ವಸ್ತುವು ಎಲ್ಲರಿಗೂ ಕಾಣುವುದಿಲ್ಲವೇ?

**ಭಾವವಿಲಾಸಿನೀ–** ತತ್ರ ದೃಷ್ಟಾಂತಮಾಹ- **ವಿಷಯಾವರಕಮಿತಿ** ॥ ವಿಷಯಾವರಕಂ ತಮಿಸ್ರಮಿತಿ ಸಂಬಂಧಃ ॥ ೧೬೬ ॥

**ವಿವರಣೆ-** ಹಿಂದೆ ಹೇಳಿದ ಅರ್ಥದಲ್ಲಿ ದೃಷ್ಟಾಂತವನ್ನು ಹೇಳುತ್ತಿದ್ದಾರೆ. ಕತ್ತಲಲ್ಲಿ ಇರುವ ಮಡಿಕೆ ಮುಂತಾದ ಪದಾರ್ಥಗಳಿಗೆ ಆಚ್ಛಾದಕವಾದ ಕತ್ತಲೆಯನ್ನು ದೀಪವು ನಾಶಪಡಿಸಿದಾಗ ಆ ಪದಾರ್ಥಗಳು ಎಲ್ಲರಿಗೂ ಸ್ಪಷ್ಟವಾಗಿಯೇ ಕಾಣುತ್ತವೆ. ಅದರಂತೆ ದೀಪದಂತಿರುವ ಒಬ್ಬ ವ್ಯಕ್ತಿಯ ಅಂತಃಕರಣಪರಿಣಾಮರೂಪವಾದ ವೃತ್ತಿಯಿಂದ ವಸ್ತುವನ್ನು ಆವರಿಸಿದ ಅಜ್ಞಾನವು ನಾಶವಾದಾಗ ಆ ವಸ್ತುವು ಎಲ್ಲರಿಗೂ ಕಾಣಬೇಕು.

**ಯದ್ಯಜ್ಞಾನಾಂತರಂ ತತ್ರ ಪುನರಾವರಣಂ ಭವೇತ್ ।**
**ತರ್ಹಿ ಕೇನಾಪಿ ತದ್ವಸ್ತು ನ ದೃಶ್ಯೇತಾऽವೃತತ್ವತಃ ॥ ೧೬೭ ॥**

**ಅರ್ಥ-** ತತ್ರ = ಆ ಪದಾರ್ಥ(ದಲ್ಲಿ)ಕ್ಕೆ, ಅಜ್ಞಾನಾಂತರಂ = ಬೇರೊಂದು ಅಜ್ಞಾನವು, ಪುನರಾವರಣಂ ಯದಿ ಭವೇತ್ ತರ್ಹಿ= ಮತ್ತೆ ಆವರಣ ಆಗುವುದಾದರೆ, ತದ್‌ವಸ್ತು = ಆ ಪದಾರ್ಥವು, ಆವೃತತ್ವತಃ = ಅಜ್ಞಾನದಿಂದ ಆವರಿಸಲ್ಪಟ್ಟಿರುವುದರಿಂದ, ಕೇನಾಪಿ = ಯಾರಿಂದಲೂ, ನ ದೃಶ್ಯೇತ = ಕಾಣಲ್ಪಡದಿರಬೇಕಾದೀತು.

**ಅನುವಾದ-** ಆ ವಸ್ತುವನ್ನು ಇನ್ನೊಂದು ಅಜ್ಞಾನವು ಆವರಿಸುತ್ತದೆ? ಹೀಗಾದರೆ, ಆ ವಸ್ತುವು ಆವರಿಸಲ್ಪಟ್ಟಿರುವುದರಿಂದ ಯಾರಿಗೂ ಕಾಣಬಾರದು.

**ಭಾವವಿಲಾಸಿನೀ–** ತತ್ರ ಶುಕ್ತಿಶಕಲೇ ಅಜ್ಞಾನಾಂತರಂ ನಿವೃತ್ತಾಜ್ಞಾನಾದಜ್ಞಾನಾಂತರಂ । ಕೇನಾಪಿ ಪ್ರಾಚೀನೇನ ತತೋऽನ್ಯೇನ ಚ ಕೇನಾಪಿ ॥ ೧೬೭ ॥

**ವಿವರಣೆ-** ಒಂದು ಅಜ್ಞಾನವು ಒಬ್ಬನ ವೃತ್ತಿಜ್ಞಾನದಿಂದ ನಷ್ಟವಾದರೂ, ಅಲ್ಲಿ ಮತ್ತೊಂದು ಅಜ್ಞಾನದ ಆವರಣವು ಏರ್ಪಡುತ್ತದೆ; ಆದ್ದರಿಂದ ಎಲ್ಲರಿಗೂ ಕಾಣಿಸುವುದಿಲ್ಲ? ಇದು ಸರಿಯಲ್ಲ. ಆಗ ಆ ವಸ್ತುವು ಅಜ್ಞಾನದಿಂದ ಆವೃತವಾಗಿರುವುದರಿಂದ ಯಾರಿಗೂ ಕಾಣಿಸದಿರಬೇಕಾದೀತು. ಈ ಕಾರಣದಿಂದ ಮೊದಲನೆಯ ವ್ಯಕ್ತಿಗೂ ಆ ವಸ್ತುವಿನ ಯಥಾರ್ಥಜ್ಞಾನವು (ಪ್ರತ್ಯಕ್ಷಜ್ಞಾನ) ಆಗದಿರಬೇಕಾದೀತು.

**ಯದಿ ಜ್ಞಾತೃವಿಭೇದೇನ ಕಲ್ಪ್ಯೇತಾऽವರಣಂ ಘಟೇ ।**
**ತದಾ ಹ್ಯದೃಷ್ಟಸ್ಯ ಬಹೋಃ ಕಲ್ಪ್ಯತ್ವಾದ್ ಗೌರವಂ ಭವೇತ್ ॥ ೧೬೮ ॥**

**ಅರ್ಥ-** ಘಟೇ = ಮಡಕೆಯಲ್ಲಿ, ಜ್ಞಾತೃವಿಭೇದೇನ = ತಿಳಿಯುವ ಪುರುಷರ ಸಂಖ್ಯೆಯಷ್ಟೇ, ಆವರಣಂ = ಅಜ್ಞಾನದ ಆವರಣವು, ಯದಿ ಕಲ್ಪ್ಯೇತ = ಕಲ್ಪಿಸಲ್ಪಟ್ಟರೆ, ತದಾ ಹಿ = ಆಗ, ಅದೃಷ್ಟಸ್ಯ = ಅಪ್ರಾಮಾಣಿಕವಾದ, ಬಹೋಃ = ಬಹಳ ಆವರಣಗಳ, ಕಲ್ಪ್ಯತ್ವಾತ್ = ಕಲ್ಪನೆಯಿಂದ, ಗೌರವಂ = ಕಲ್ಪನಾಗೌರವವು, ಭವೇತ್ = ಉಂಟಾಗುವುದು.

**ಅನುವಾದ-** ಪ್ರತಿಯೊಂದು ವಸ್ತುವಿನಲ್ಲಿ ಬಹಳ ಅಜ್ಞಾನಗಳು. ಎಷ್ಟು? ಎಷ್ಟು ಜನ ಎಷ್ಟು ಸಲ ತಿಳಿಯುತ್ತಾರೋ ಅಷ್ಟು? (ಹೀಗೆ ಅದ್ವೈತದರ್ಶನವು ಹೇಳಬಹುದು). (ಆದರೆ) ಈ ವಿಷಯದಲ್ಲಿ ಏನೂ ಪ್ರಮಾಣವಿಲ್ಲ. ತತ್ವನಿರ್ಣಯಮಾರ್ಗದಲ್ಲಿ ಇದು ಅನಪೇಕ್ಷಿತ ಭಾರ.

**ಭಾವವಿಲಾಸಿನೀ–** ಜ್ಞಾತೃವಿಭೇದೇನ ಏಕಸ್ಯ ಜ್ಞಾತುಃ ಏಕಮಾವರಣಮ್ । ಅನ್ಯಸ್ಯ ಚಾನ್ಯತ್ । ಏಕಸ್ಯಾವರಣನಿವೃತ್ತೌ ಸ ಏವ ತತ್ ಪಶ್ಯತಿ । ಅನ್ಯಸ್ತು ಸ್ವಾವರಣಸದ್ಭಾವಾನ್ನ ಪಶ್ಯತೀತ್ಯೇವಂ ಪ್ರತಿಪುರುಷವೈಚಿತ್ರ್ಯೇಣೈವೇತ್ಯರ್ಥಃ । ಘಟ ಇತ್ಯುಪಲಕ್ಷಣಮ್ । ಶುಕ್ತಾವಿತ್ಯಪಿ ದ್ರಷ್ಟವ್ಯಮ್ । ಅದೃಷ್ಟಸ್ಯ ಘಟಾವರಕಾಂಧಕಾರಾದಾವದೃಷ್ಟಸ್ಯ ॥ ೧೬೮ ॥

**ವಿವರಣೆ-** ಹಿಂದೆ ಹೇಳಿದ ದೋಷಗಳನ್ನು ಪರಿಹರಿಸಲು ಅದ್ವೈತದರ್ಶನವು ಹೀಗೆ ಆಲೋಚಿಸಬಹುದು; 'ಪ್ರತಿಯೊಂದು ವಸ್ತುವಿನಲ್ಲೂ ಬಹಳ ಅಜ್ಞಾನಗಳು; ಎಷ್ಟು? ಎಷ್ಟು ಜನ ಎಷ್ಟು ಸಲ ತಿಳಿಯುತ್ತಾರೋ ಅಷ್ಟು. ಒಬ್ಬನ ಅಂತಃಕರಣವೃತ್ತಿಯಿಂದ ವಸ್ತುವಿನಲ್ಲಿರುವ ಒಂದು ಅಜ್ಞಾನವು ನಾಶವಾಗುತ್ತದೆ. ಅವನಿಗೆ ವಸ್ತುವು ಕಾಣುತ್ತದೆ. ಬೇರೆಯವರಿಗೆ ಕಾಣುವುದಿಲ್ಲ'.

**ವಿಮರ್ಶೆ :** ಈ ವಿಷಯದಲ್ಲಿ ಏನೂ ಪ್ರಮಾಣವಿಲ್ಲ. ಅಪ್ರಾಮಾಣಿಕವಾದ ಬಹುಕಲ್ಪನೆಗಳು ತತ್ವನಿರ್ಣಯಮಾರ್ಗದಲ್ಲಿ ಅನಪೇಕ್ಷಿತ ಭಾರ.

(ಅಪ್ರಾಮಾಣಿಕ ವಿಷಯಗಳ ಅಂಗೀಕಾರವು ಅತಿದೊಡ್ಡ ದಾರ್ಶನಿಕದೋಷ).

ಭಾ.ವಿ. ಘಟ ಮೊದಲಾದ ವಸ್ತುಗಳನ್ನು ಬಹಳ ಅಂಧಕಾರಗಳು ಆವರಿಸುವುದು ಕಂಡುಬಂದಿಲ್ಲ. ಒಂದೇ ಅಂಧಕಾರ. ಒಂದು ದೀಪದಿಂದ ಅದರ ನಾಶವಾದರೆ ಘಟ ಮೊದಲಾದವುಗಳು ಎಲ್ಲರಿಗೂ ಕಾಣುತ್ತವೆ.

**ನಹಿ ತತ್ತದ್ಗೃಹಾಲೋಕೈರ್ನಾಶ್ಯತಾಮಿಸ್ರರಾಶಯಃ ।**
**ಘಟಾದಿಷು ಪ್ರದೃಶ್ಯಂತೇ ತತೋಽಪ್ರಾಮಾಣಿಕಂ ತ್ವಿದಮ್ ॥ ೧೬೯ ॥**

**ಅರ್ಥ-** ತತ್ತದ್ಗೃಹಾಲೋಕೈಃ = ಬೇರೆಬೇರೆ ಮನೆಯ ಬೇರೆಬೇರೆ ದೀಪಗಳಿಂದ, ನಾಶ್ಯತಾಮಿಸ್ರರಾಶಯಃ = ನಾಶವಾಗುವ ಕತ್ತಲೆಗಳ ಸಮೂಹಗಳು, ಘಟಾದಿಷು = ಮಡಕೆ ಮುಂತಾದ ವಸ್ತುಗಳಲ್ಲಿ, ನಹಿ ದೃಶ್ಯಂತೇ = ಕಾಣಲ್ಪಡುವುದಿಲ್ಲವಷ್ಟೇ. ತತಃ = ಆದುದರಿಂದ,

ನಾಶಪಡಿಸುತ್ತದೆಯೋ, ತದಾ = ಆಗ, ತದ್‌ವಸ್ತು = ಆ ಪದಾರ್ಥವು, ಸರ್ವೈಃ = ಎಲ್ಲರಿಂದ, ಸುವ್ಯಕ್ತಂ= ಸ್ಪಷ್ಟವಾಗಿಯೇ, ದೃಶ್ಯತೇ ನ ಕಿಮ್? = ಕಾಣಲ್ಪಡುವುದಿಲ್ಲವೇ?

**ಅನುವಾದ-** ವಿಷಯವನ್ನು (ಪದಾರ್ಥವನ್ನು) ಆವರಿಸಿರುವ ಕತ್ತಲನ್ನು ದೀಪವು ನಾಶಪಡಿಸಿದಾಗ ಆ ವಸ್ತುವು ಎಲ್ಲರಿಗೂ ಕಾಣುವುದಿಲ್ಲವೇ?

**ಭಾವವಿಲಾಸಿನೀ–** ತತ್ರ ದೃಷ್ಟಾಂತಮಾಹ– **ವಿಷಯಾವರಕಮಿತಿ** ॥ ವಿಷಯಾವರಕಂ ತಮಿಸ್ರಮಿತಿ ಸಂಬಂಧಃ ॥ ೧೬೬ ॥

**ವಿವರಣೆ-** ಹಿಂದೆ ಹೇಳಿದ ಅರ್ಥದಲ್ಲಿ ದೃಷ್ಟಾಂತವನ್ನು ಹೇಳುತ್ತಿದ್ದಾರೆ. ಕತ್ತಲಲ್ಲಿ ಇರುವ ಮಡಿಕೆ ಮುಂತಾದ ಪದಾರ್ಥಗಳಿಗೆ ಆಚ್ಛಾದಕವಾದ ಕತ್ತಲೆಯನ್ನು ದೀಪವು ನಾಶಪಡಿಸಿದಾಗ ಆ ಪದಾರ್ಥಗಳು ಎಲ್ಲರಿಗೂ ಸ್ಪಷ್ಟವಾಗಿಯೇ ಕಾಣುತ್ತವೆ. ಅದರಂತೆ ದೀಪದಂತಿರುವ ಒಬ್ಬ ವ್ಯಕ್ತಿಯ ಅಂತಃಕರಣಪರಿಣಾಮರೂಪವಾದ ವೃತ್ತಿಯಿಂದ ವಸ್ತುವನ್ನು ಆವರಿಸಿದ ಅಜ್ಞಾನವು ನಾಶವಾದಾಗ ಆ ವಸ್ತುವು ಎಲ್ಲರಿಗೂ ಕಾಣಬೇಕು.

ಯದ್ಯಜ್ಞಾನಾಂತರಂ ತತ್ರ ಪುನರಾವರಣಂ ಭವೇತ್ ।
ತರ್ಹಿ ಕೇನಾಪಿ ತದ್ವಸ್ತು ನ ದೃಶ್ಯೇತಾಽವೃತತ್ವತಃ ॥ ೧೬೭ ॥

**ಅರ್ಥ-** ತತ್ರ = ಆ ಪದಾರ್ಥ(ದಲ್ಲಿ)ಕ್ಕೆ, ಅಜ್ಞಾನಾಂತರಂ = ಬೇರೊಂದು ಅಜ್ಞಾನವು, ಪುನರಾವರಣಂ ಯದಿ ಭವೇತ್ ತರ್ಹಿ= ಮತ್ತೆ ಆವರಣ ಆಗುವುದಾದರೆ, ತದ್‌ವಸ್ತು = ಆ ಪದಾರ್ಥವು, ಆವೃತತ್ವತಃ = ಅಜ್ಞಾನದಿಂದ ಆವರಿಸಲ್ಪಟ್ಟಿರುವುದರಿಂದ, ಕೇನಾಪಿ = ಯಾರಿಂದಲೂ, ನ ದೃಶ್ಯೇತ = ಕಾಣಲ್ಪಡದಿರಬೇಕಾದೀತು.

**ಅನುವಾದ-** ಆ ವಸ್ತುವನ್ನು ಇನ್ನೊಂದು ಅಜ್ಞಾನವು ಆವರಿಸುತ್ತದೆ? ಹೀಗಾದರೆ, ಆ ವಸ್ತುವು ಆವರಿಸಲ್ಪಟ್ಟಿರುವುದರಿಂದ ಯಾರಿಗೂ ಕಾಣಬಾರದು.

**ಭಾವವಿಲಾಸಿನೀ–** ತತ್ರ ಶುಕ್ತಿಶಕಲೇ ಅಜ್ಞಾನಾಂತರಂ ನಿವೃತ್ತಾಜ್ಞಾನಾದಜ್ಞಾನಾಂತರಂ । ಕೇನಾಪಿ ಪ್ರಾಚೀನೇನ ತತೋಽನ್ಯೇನ ಚ ಕೇನಾಪಿ ॥ ೧೬೭ ॥

**ವಿವರಣೆ-** ಒಂದು ಅಜ್ಞಾನವು ಒಬ್ಬನ ವೃತ್ತಿಜ್ಞಾನದಿಂದ ನಷ್ಟವಾದರೂ, ಅಲ್ಲಿ ಮತ್ತೊಂದು ಅಜ್ಞಾನದ ಆವರಣವು ಏರ್ಪಡುತ್ತದೆ; ಆದ್ದರಿಂದ ಎಲ್ಲರಿಗೂ ಕಾಣಸುವುದಿಲ್ಲ? ಇದು ಸರಿಯಲ್ಲ. ಆಗ ಆ ವಸ್ತುವು ಅಜ್ಞಾನದಿಂದ ಆವೃತವಾಗಿರುವುದರಿಂದ ಯಾರಿಗೂ ಕಾಣಸದಿರಬೇಕಾದೀತು. ಈ ಕಾರಣದಿಂದ ಮೊದಲನೆಯ ವ್ಯಕ್ತಿಗೂ ಆ ವಸ್ತುವಿನ ಯಥಾರ್ಥಜ್ಞಾನವು (ಪ್ರತ್ಯಕ್ಷಜ್ಞಾನ) ಆಗದಿರಬೇಕಾದೀತು.

ಯದಿ ಜ್ಞಾತೃವಿಭೇದೇನ ಕಲ್ಪ್ಯೇತಾಽವರಣಂ ಘಟೇ ।
ತದಾ ಹ್ಯದೃಷ್ಟಸ್ಯ ಬಹೋಃ ಕಲ್ಪ್ಯತ್ವಾದ್ ಗೌರವಂ ಭವೇತ್ ॥ ೧೬೮ ॥

**ಅರ್ಥ-** ಘಟೇ = ಮಡಕೆಯಲ್ಲಿ, ಜ್ಞಾತೃವಿಭೇದೇನ = ತಿಳಿಯುವ ಪುರುಷರ ಸಂಖ್ಯೆಯಷ್ಟೇ, ಆವರಣಂ = ಅಜ್ಞಾನದ ಆವರಣವು, ಯದಿ ಕಲ್ಪ್ಯೇತ = ಕಲ್ಪಿಸಲ್ಪಟ್ಟರೆ, ತದಾ ಹಿ = ಆಗ, ಅದೃಷ್ಟಸ್ಯ = ಅಪ್ರಾಮಾಣಿಕವಾದ, ಬಹೋಃ = ಬಹಳ ಆವರಣಗಳ, ಕಲ್ಪ್ಯತ್ವಾತ್ = ಕಲ್ಪನೆಯಿಂದ, ಗೌರವಂ = ಕಲ್ಪನಾಗೌರವವು, ಭವೇತ್ = ಉಂಟಾಗುವುದು.

**ಅನುವಾದ- ಪ್ರತಿಯೊಂದು ವಸ್ತುವಿನಲ್ಲಿ ಬಹಳ ಅಜ್ಞಾನಗಳು. ಎಷ್ಟು? ಎಷ್ಟು ಜನ ಎಷ್ಟು ಸಲ ತಿಳಿಯುತ್ತಾರೋ ಅಷ್ಟು? (ಹೀಗೆ ಅದ್ವೈತದರ್ಶನವು ಹೇಳಬಹುದು). (ಆದರೆ) ಈ ವಿಷಯದಲ್ಲಿ ಏನೂ ಪ್ರಮಾಣವಿಲ್ಲ. ತತ್ವನಿರ್ಣಯಮಾರ್ಗದಲ್ಲಿ ಇದು ಅನಪೇಕ್ಷಿತ ಭಾರ.**

**ಭಾವವಿಲಾಸಿನೀ– ಜ್ಞಾತೃವಿಭೇದೇನ ಏಕಸ್ಯ ಜ್ಞಾತುಃ ಏಕಮಾವರಣಮ್ । ಅನ್ಯಸ್ಯ ಚಾನ್ಯತ್ । ಏಕಸ್ಯಾವರಣನಿವೃತ್ತೌ ಸ ಏವ ತತ್ ಪಶ್ಯತಿ । ಅನ್ಯಸ್ತು ಸ್ವಾವರಣಸದ್ಭಾವಾನ್ನ ಪಶ್ಯತೀತ್ಯೇವಂ ಪ್ರತಿಪುರುಷವೈಚಿತ್ರ್ಯೇಣೈವೇತ್ಯರ್ಥಃ । ಘಟ ಇತ್ಯುಪಲಕ್ಷಣಮ್ । ಶುಕ್ತಾವಿತ್ಯಪಿ ದ್ರಷ್ಟವ್ಯಮ್ । ಅದೃಷ್ಟಸ್ಯ ಘಟಾವರಕಾಂಧಕಾರಾದಾವದೃಷ್ಟಸ್ಯ ॥ ೧೬೮ ॥**

**ವಿವರಣೆ-** ಹಿಂದೆ ಹೇಳಿದ ದೋಷಗಳನ್ನು ಪರಿಹರಿಸಲು ಅದ್ವೈತದರ್ಶನವು ಹೀಗೆ ಆಲೋಚಿಸಬಹುದು; 'ಪ್ರತಿಯೊಂದು ವಸ್ತುವಿನಲ್ಲೂ ಬಹಳ ಅಜ್ಞಾನಗಳು; ಎಷ್ಟು? ಎಷ್ಟು ಜನ ಎಷ್ಟು ಸಲ ತಿಳಿಯುತ್ತಾರೋ ಅಷ್ಟು. ಒಬ್ಬನ ಅಂತಃಕರಣವೃತ್ತಿಯಿಂದ ವಸ್ತುವಿನಲ್ಲಿರುವ ಒಂದು ಅಜ್ಞಾನವು ನಾಶವಾಗುತ್ತದೆ. ಅವನಿಗೆ ವಸ್ತುವು ಕಾಣುತ್ತದೆ. ಬೇರೆಯವರಿಗೆ ಕಾಣುವುದಿಲ್ಲ'.

**ವಿಮರ್ಶೆ :** ಈ ವಿಷಯದಲ್ಲಿ ಏನೂ ಪ್ರಮಾಣವಿಲ್ಲ. ಅಪ್ರಾಮಾಣಿಕವಾದ ಬಹುಕಲ್ಪನೆಗಳು ತತ್ವನಿರ್ಣಯಮಾರ್ಗದಲ್ಲಿ ಅನಪೇಕ್ಷಿತ ಭಾರ.

(ಅಪ್ರಾಮಾಣಿಕ ವಿಷಯಗಳ ಅಂಗೀಕಾರವು ಅತಿದೊಡ್ಡ ದಾರ್ಶನಿಕದೋಷ).

ಭಾ.ವಿ. ಘಟ ಮೊದಲಾದ ವಸ್ತುಗಳನ್ನು ಬಹಳ ಅಂಧಕಾರಗಳು ಆವರಿಸುವುದು ಕಂಡುಬಂದಿಲ್ಲ. ಒಂದೇ ಅಂಧಕಾರ. ಒಂದು ದೀಪದಿಂದ ಅದರ ನಾಶವಾದರೆ ಘಟ ಮೊದಲಾದವುಗಳು ಎಲ್ಲರಿಗೂ ಕಾಣುತ್ತವೆ.

**ನಹಿ ತತ್ತದ್‌ಗೃಹಾಲೋಕೈರ್ನಾಶ್ಯತಾಮಿಸ್ರರಾಶಯಃ ।**
**ಘಟಾದಿಷು ಪ್ರದೃಶ್ಯಂತೇ ತತೋಽಪ್ರಾಮಾಣಿಕಂ ತ್ವಿದಮ್ ॥ ೧೬೯ ॥**

**ಅರ್ಥ-** ತತ್ತದ್‌ಗೃಹಾಲೋಕೈಃ = ಬೇರೆಬೇರೆ ಮನೆಯ ಬೇರೆಬೇರೆ ದೀಪಗಳಿಂದ, ನಾಶ್ಯತಾಮಿಸ್ರರಾಶಯಃ = ನಾಶವಾಗುವ ಕತ್ತಲೆಗಳ ಸಮೂಹಗಳು, ಘಟಾದಿಷು = ಮಡಕೆ ಮುಂತಾದ ವಸ್ತುಗಳಲ್ಲಿ, ನಹಿ ದೃಶ್ಯಂತೇ = ಕಾಣಲ್ಪಡುವುದಿಲ್ಲವಷ್ಟೇ. ತತಃ = ಆದುದರಿಂದ,

ಇದಂ = ಇದು= ಪುರುಷಭೇದದಿಂದ ಅಜ್ಞಾನಾವರಣವು, ಅಪ್ರಾಮಾಣಿಕಂ = ಪ್ರಮಾಣ ರಹಿತ ಮತ್ತು ಪ್ರಮಾಣವಿರುದ್ಧ.

**ಅನುವಾದ-** **ಆಯಾಯಾ ಮನೆಗಳ ದೀಪಗಳಿಂದ ನಾಶವಾಗುವ ಬೇರೆ ಬೇರೆ ಕತ್ತಲುಗಳು ಘಟ ಮೊದಲಾದ ವಸ್ತುಗಳಲ್ಲಿ ಯಾರಿಗೂ ಕಾಣಿಸಿಲ್ಲ. ಆದ್ದರಿಂದ ಇದು ಅಪ್ರಾಮಾಣಿಕ.**

**ಭಾವವಿಲಾಸಿನೀ–** ತದೇವ ದರ್ಶಯತಿ– **ನಹೀತಿ** ॥ ತತಸ್ತಸ್ಮಾದಿದಂ ಪುರುಷವೈಚಿತ್ರ್ಯೇಣಾವರಣ- ಮಪ್ರಾಮಾಣಿಕಮಿತಿ ಸಂಬಂಧಃ । ಪ್ರಾಮಾಣಿಕತ್ವಾದ್ ಗೌರವಂ ನ ದೋಷ ಇತಿ ಪರಾಶಾಖಂಡನಾಯೇದಮುಕ್ತಮ್ ॥ ೧೬೯ ॥

**ಅತಃ ಪುಂಗತಮೇವೇದಂ ತಮೋ ಮರ್ತ್ಯಾ ಹಿ ತಾಮಸಾಃ ॥ ೧೭೦ ॥**

**ಅರ್ಥ-** ಅತಃ = ಆದ್ದರಿಂದ= ಅಜ್ಞಾನವು ವಿಷಯಾಶ್ರಿತ ಎಂಬ ವಿಚಾರವು ಅಪ್ರಾಮಾಣಿಕವಾದುದರಿಂದ, ಇದಂ = ಈ= ಯಥಾರ್ಥಜ್ಞಾನಕ್ಕೆ ಪ್ರತಿಬಂಧಕವಾದ, ತಮಃ = ಅಜ್ಞಾನವು, ಪುಂಗತಮೇವ = ಜ್ಞಾತೃ ಪುರುಷನಲ್ಲಷ್ಟೇ ಇದೆ, ಹಿ = ಏಕೆಂದರೆ, ಮರ್ತ್ಯಾಃ = ಸಂಸಾರಿ ಚೇತನಗಳು ಮಾತ್ರ, ತಾಮಸಾಃ = ತಮೋಗುಣ ಸಂಬಂಧವುಳ್ಳವರು.

**ಅನುವಾದ-** **ಅಜ್ಞಾನವು ವಿಷಯಾಶ್ರಿತ ಎಂಬ ವಿಚಾರದಲ್ಲಿ ಅನೇಕ ದೋಷ- ಗಳಿರುವುದರಿಂದ ಅಜ್ಞಾನವು ಜ್ಞಾತೃಪುರುಷನಲ್ಲೇ ಇದೆ. ಸಂಸಾರಿಪುರುಷರು ಮಾತ್ರ ತಾಮಸರು, ಅಂದರೆ, ಅಜ್ಞಾನಾಶ್ರಯರೆಂದು ಪ್ರಸಿದ್ಧರಾಗಿದ್ದಾರೆ. ಘಟಪಟಾದಿ ಅಚೇತನಪದಾರ್ಥಗಳು ತಾಮಸಗಳೆಂದು ಪ್ರಸಿದ್ಧಿಯಿಲ್ಲ.**

**ಭಾವವಿಲಾಸಿನೀ–** ಅತಃ ವಿಷಯಾಶ್ರಿತಾಜ್ಞಾನಸ್ಯಾಪ್ರಮಾಣಿಕತ್ವಾತ್ । ಇದಂ ಪ್ರಮಾಪ್ರತಿಬಂಧಕಂ ತಮಃ ಅಜ್ಞಾನಂ ಪುಂಗತಮೇವ ಜ್ಞಾತೃಪುರುಷನಿಷ್ಠಮೇವ । ಅನೇನ 'ಪುಂಗತಮೇವ ಹಿ ತಮಃ' ಇತ್ಯಾಚಾರ್ಯವಚನಂ ಸಂಗೃಹ್ಣಾತಿ । ತಮಸಃ ಪುಂನಿಷ್ಠತ್ವೇ ಯುಕ್ತಿಮಾಹ– **ಮರ್ತ್ಯಾ ಹೀತಿ** ॥ ಹಿ ಯಸ್ಮಾತ್ ಮರ್ತ್ಯಾ ಏವ ತಾಮಸಾ ಇತ್ಯುಚ್ಯಂತೇ, ನತು ಘಟೋ ವಾ ಪಟೋ ವಾ ತಾಮಸ ಇತಿ ಕೇನಾಪ್ಯುಚ್ಯತೇ । ಅತಃ ಪುಂಗತತ್ವಮೇವ ತಮಸೋ ಯುಕ್ತಮಿತಿ ಭಾವಃ ॥ ೧೭೦ ॥

**ವಿವರಣೆ–** ಮರಣಶೀಲಶರೀರವನ್ನು ಹೊಂದಿರುವ ಜೀವಾತ್ಮಗಳು ಮರ್ತ್ಯರು. ಇವರನ್ನು ಕುರಿತು 'ತಾಮಸ' ಎಂಬ ಮಾತು ಬಳಕೆಯಲ್ಲಿದೆ. ಅಚೇತನ ವಸ್ತುಗಳನ್ನು= ಘಟ, ಪಟ ಇತ್ಯಾದಿಗಳನ್ನು 'ತಾಮಸ' ಎಂದು ಜನರು ಹೇಳುವುದಿಲ್ಲ. ತಾಮಸ= ಎಂದರೆ ಅಜ್ಞಾನಕ್ಕೆ ಮೂಲಕಾರಣವಾದ ತಮೋಗುಣವನ್ನು ಹೊಂದಿದವರು ಎಂದು ಅರ್ಥ.

**ಪುಂಸು ಕಾಚಾದಿದೋಷಾಶ್ಚ ಯತಃ ಸಂತಿ ಪೃಥಕ್‌ಪೃಥಕ್ ।**
**ಅತೋ ನಾನಾತ್ವಮಪ್ಯೇಷಾಮನಾಯಾಸೇನ ಸಿದ್ಧ್ಯತಿ ॥ ೧೭೧ ॥**

**ಅರ್ಥ-** ಯತಃ = ಯಾವ ಕಾರಣದಿಂದ, ಪುಂಸು = ಪುರುಷರಲ್ಲಿ, ಪೃಥಕ್‌ಪೃಥಕ್ = ಬೇರೆಬೇರೆಯಾಗಿ, ಕಾಚಾದಿದೋಷಾಶ್ಚ= ಕಾಚ ಮೊದಲಾದ ದೋಷಗಳು, ಸಂತಿ ಚ = ಇವೆಯೋ, ಅತಃ = ಆ ಕಾರಣದಿಂದ, ಏಷಾಂ = ಈ ಅಜ್ಞಾನಗಳಿಗೆ, ನಾನಾತ್ವಮಪಿ = (ಪ್ರತಿಪುರುಷರಲ್ಲಿ ಭೇದವು) ಬಾಹುಲ್ಯವು, ಅನಾಯಾಸೇನ = ಸುಲಭವಾಗಿ, ಸಿದ್ಧ್ಯತಿ= ಸಿದ್ಧಿಸುತ್ತದೆ.

**ಅನುವಾದ- ನೇತ್ರರೋಗ ಮೊದಲಾದ ದೋಷಗಳು ಬೇರೆಬೇರೆ ಪುರುಷರಲ್ಲಿ ಬೇರೆ ಬೇರೆಯಾಗಿ ಇವೆ. ಈ ದೋಷಗಳೇ ಪುರುಷನ ಅಜ್ಞಾನಕ್ಕೆ ಕಾರಣ. ಆದ್ದರಿಂದ ಬೇರೆ ಬೇರೆ ಪುರುಷರಲ್ಲಿ ಬೇರೆಬೇರೆ ಅಜ್ಞಾನಗಳಿವೆ. ಇದನ್ನು ಸಾಧಿಸಲು ಏನೂ ಶ್ರಮವಿಲ್ಲ.**

**ಭಾವವಿಲಾಸಿನೀ– ತಮಸಃ ಪುಂನಿಷ್ಠತ್ವೇ ಚ ಕಾಚಾದಿವತ್ ಪ್ರತಿಪುರುಷವೈಚಿತ್ರ್ಯಂ ಚ ಕಲ್ಪನಾಂ ವಿನೈವ ಸಿದ್ಧ್ಯತೀತ್ಯಾಹ–ಪುಂಸ್ವಿತಿ ॥ ನಾನಾತ್ವಂ ಪ್ರತಿಪುರುಷವೈಚಿತ್ರ್ಯಮ್ । ಏಷಾಂ ತಮಸಾಮ್ । ಏವಂಚ ಮತ್ಪಕ್ಷೇ ನ ಕಿಂಚಿತ್ ಕಲ್ಪ್ಯಮಿತಿ ಭಾವಃ ॥ ೧೭೧ ॥**

**ವಿವರಣೆ-** ನೇತ್ರರೋಗ ಮೊದಲಾದ ದೋಷಗಳು ಪ್ರತಿಪುರುಷನಲ್ಲೂ ಬೇರೆ ಬೇರೆಯಾಗಿಯೇ ಇರುತ್ತದೆ. ಆದ್ದರಿಂದಲೇ ಇವುಗಳಿಂದ ಸಂಭವಿಸುವ ಅಜ್ಞಾನ, ಭ್ರಮ ಇತ್ಯಾದಿಗಳು ಪ್ರತಿಪುರುಷನಲ್ಲಿ ಬೇರೆಬೇರೆಯಾಗಿಯೇ ಇರುತ್ತವೆ. ಇದು ಅನುಭವ ಸಿದ್ಧ. ಇಲ್ಲಿ ಏನನ್ನೂ ಕಲ್ಪಿಸಬೇಕಿಲ್ಲ.

**ನಾಶ್ಯನಾಶಕಯೋರ್ಜ್ಞಾನಾಜ್ಞಾನಯೋರೇಕದೇಶತಾ ।**
**ತಮಃಪ್ರಕಾಶವತ್ ಸಿದ್ಧಾ ನಾಂಧಕಾರೋಽಪಿ ಚೇತನೇ ।**
**ದೀಪೋ ವಾ ಚೇತನಗತಸ್ತತಸ್ತೌ ಯತ್ರ ಕುತ್ರಚಿತ್ ॥ ೧೭೨ ॥**

**ಅರ್ಥ-** ನಾಶ್ಯನಾಶಕಯೋಃ = ನಾಶವಾಗುವ ಹಾಗೂ ನಾಶಪಡಿಸುವ, ಜ್ಞಾನಾಜ್ಞಾನಯೋಃ = ಜ್ಞಾನ ಮತ್ತು ಅಜ್ಞಾನಗಳಲ್ಲಿ, ತಮಃಪ್ರಕಾಶವತ್ = ಕತ್ತಲೆ ಬೆಳಕುಗಳಂತೆ, ಏಕದೇಶತಾ= ಒಂದೇ ಆಶ್ರಯವು, ಸಿದ್ಧಾ = ಸಿದ್ಧವಾಗಿದೆ. ಅಂಧಕಾರೋಽಪಿ = ಕತ್ತಲೆಯು, ಚೇತನೇ = ಚೇತನನಲ್ಲಿ, ನ = ಇಲ್ಲ. ದೀಪೋ ವಾ = ದೀಪವಾದರೂ, ನ ಚೇತನಗತಃ = ಚೇತನನಲ್ಲಿ ಇಲ್ಲ. ತತಃ = ಆದ್ದರಿಂದ, ತೌ = ಆ ಕತ್ತಲೆ ಬೆಳಕುಗಳು, ಯತ್ರ ಕುತ್ರಚಿತ್ = ಚೇತನನನ್ನು ಬಿಟ್ಟು ಬೇರೆ ಕಡೆ ಸಮಾನ ಆಶ್ರಯಗಳಲ್ಲಿ ಇರುತ್ತವೆ.

**ಅನುವಾದ-** ಅಜ್ಞಾನವು ನಾಶ್ಯ. ಜ್ಞಾನವು ನಾಶಕ. ಇವೆರಡೂ ಒಂದೇ ಆಶ್ರಯದಲ್ಲಿ ಇರುತ್ತವೆ. ಕತ್ತಲೆ-ಬೆಳಕುಗಳಂತೆ. ಅಂಧಕಾರವು ಚೇತನದಲ್ಲಿ ಇರುವುದಿಲ್ಲ, ದೀಪವೂ ಅಲ್ಲಿ ಇರುವುದಿಲ್ಲ. ಅವು ಚೇತನವನ್ನು ಬಿಟ್ಟು ಬೇರೆ ಕಡೆ ಸಮಾನ ಆಶ್ರಯಗಳನ್ನು ಹೊಂದಿರುತ್ತವೆ.

**ಭಾವವಿಲಾಸಿನೀ-** ಅಜ್ಞಾನಸ್ಯ ಪುಂನಿಷ್ಠತ್ವೇ ಯುಕ್ತಿಮಪ್ಯಾಹ- **ನಾಶ್ಯನಾಶಕಯೋರಿತಿ** ॥ ಏಕದೇಶತಾ ನಾಶಕಜ್ಞಾನವತಿ ಪುರುಷೇ ನಾಶ್ಯಾಜ್ಞಾನಸ್ಯಾಪಿ ವಿದ್ಯಮಾನತೇತ್ಯರ್ಥಃ। ನಾಶಕೋ ದೀಪೋ ಯಸ್ಮಿನ್ ದೇಶೇ ತತ್ರೈವ ವಿದ್ಯಮಾನಸ್ಯ ತಮಸೋ ನಾಶದರ್ಶನಾತ್ ತಮಃಪ್ರಕಾಶವತ್ ಸಿದ್ಧೇತ್ಯುಕ್ತಮ್ । ನಾಶ್ಯನಾಶಕಯೋರಂಧಕಾರದೀಪಯೋಃ ವಿಷಯಘಟಾದ್ಯಾಶ್ರಯ-ದರ್ಶನಾಜ್ಜ್ಞಾನಾಜ್ಞಾನಯೋರಪಿ ವಿಷಯಾಶ್ರಿತತ್ವಮಸ್ತ್ವಿತ್ಯಾಶಂಕಾಂ ದೃಷ್ಟಾಂತ-ದಾರ್ಷ್ಟಾಂತಿಕಯೋರ್ವೈಷಮ್ಯಂ ದರ್ಶಯನ್ ಪರಿಹರತಿ- **ನಾಂಧಕಾರ ಇತಿ** ॥ ದೀಪೋ ವಾ ಚೇತನಗತೋ ನೇತಿ ಪೂರ್ವೇಣ ಸಂಬಂಧಃ। ತತಃ ನಾಶಕದೀಪಸ್ಯ ಚೇತನಗತತ್ವಾಭಾವೇನ ನಾಶ್ಯತಮಸೋಽಪಿ ಪುಂನಿಷ್ಠತ್ವಸ್ಯಾವಶ್ಯಂಭಾವಾಭಾವಾತ್ ತೌ ಅಂಧಕಾರದೀಪೌ ಯತ್ರ ಕುತ್ರಚಿತ್ ತಮಃಸ್ಥಿತಘಟಪಟಾದಿದರ್ಶನೇ ದ್ವಯೋರಪಿ ತದ್ದೇಶತಾ । ಅಂಧಕಾರಸ್ಥಿತ-ಪುರುಷಾದಿದರ್ಶನೇ ತು ದ್ವಯೋರಪಿ ಪುರುಷದೇಶೀಯತ್ವಮಿತ್ಯರ್ಥಃ॥ ೧೭೨ ॥

**ವಿವರಣೆ-** ಅಜ್ಞಾನ ಮತ್ತು ಜ್ಞಾನಗಳು ನಾಶ್ಯ-ನಾಶಕಗಳು. ಕತ್ತಲು-ಬೆಳಕುಗಳಂತೆ. ಎಲ್ಲಿ ಕತ್ತಲೆಯು ಇರುತ್ತದೆಯೋ ಅಲ್ಲೇ ಬೆಳಕು ಹರಿದು ಕತ್ತಲೆಯ ನಾಶವಾಗುತ್ತದೆ. ಇದು ಕತ್ತಲೆ-ಬೆಳಕುಗಳ ಸಮಾನದೇಶಸ್ಥಿತಿ. ಹೀಗೆಯೇ ಜ್ಞಾನ-ಅಜ್ಞಾನಗಳು ಒಂದೇ ಕಡೆ ಇರಬೇಕು. ಆದರೆ ಒಂದು ವ್ಯತ್ಯಾಸ : ಅಂಧಕಾರ ಮತ್ತು ಬೆಳಕುಗಳು ಚೇತನದಲ್ಲಿ ಇರುವುದಿಲ್ಲ. ಬೇರೆ ಕಡೆ ಇವುಗಳಿಗೆ ಸಮಾನದೇಶಸ್ಥಿತಿ. ಉದಾ : ಘಟ ಮೊದಲಾದ ವಸ್ತುಗಳಲ್ಲಿ ಕತ್ತಲು ಇರುತ್ತದೆ; ಅವುಗಳ ಮೇಲೆ ಬೆಳಕು ಬಿದ್ದು ಅಂಧಕಾರದ ನಿವೃತ್ತಿಯಾಗುತ್ತದೆ. ಆದ್ದರಿಂದ ಕತ್ತಲು-ಬೆಳಕುಗಳು ವಿಷಯಾಶ್ರಿತ ಆಗಬಹುದು.

ಜ್ಞಾನಂ ತು ಜ್ಞಾತೃಪುಂಸ್ಯೇವ ತನ್ನಾಶ್ಯಾಜ್ಞಾನಮಪ್ಯತಃ ।
ವಕ್ತವ್ಯಂ ಜ್ಞಾತೃಪುರುಷೇ ಬ್ರಹ್ಮಣಿ ಸ್ಯಾತ್ ಕಥಂ ವದ ॥ ೧೭೩ ॥

**ಅರ್ಥ-** ಜ್ಞಾನಂ ತು = ಜ್ಞಾನವಾದರೂ, ಜ್ಞಾತೃಪುಂಸ್ಯೇವ = ತಿಳಿಯುವ ವ್ಯಕ್ತಿಯಲ್ಲಷ್ಟೇ ಇದೆ. ಅತಃ = ಆದುದರಿಂದ, ತನ್ನಾಶ್ಯಾಜ್ಞಾನಂ = ಆ ಜ್ಞಾನದಿಂದ ನಾಶವಾಗುವ ಅಜ್ಞಾನವು, ಜ್ಞಾತೃಪುರುಷೇ = ತಿಳಿಯುವ ಪುರುಷನಲ್ಲಿಯೇ, (ಇದೆ ಎಂದು) ವಕ್ತವ್ಯಂ = ಹೇಳಲ್ಪಡಬೇಕು. ಬ್ರಹ್ಮಣಿ = ಪರಬ್ರಹ್ಮನಲ್ಲಿ, ಕಥಂ ಸ್ಯಾತ್ = ಹೇಗೆ ಇದ್ದೀತು? ವದ = ಹೇಳು.

**ಅನುವಾದ-** ಜ್ಞಾನವು ತಿಳಿಯುವ ವ್ಯಕ್ತಿಯಲ್ಲಿಯೇ ಇರುತ್ತದೆ. ಆ ಜ್ಞಾನದಿಂದ ನಾಶವಾಗುವ ಅಜ್ಞಾನವೂ ತಿಳಿಯುವ ವ್ಯಕ್ತಿಯಲ್ಲಿಯೇ ಇರುತ್ತದೆ. ಎಂದು ಹೇಳಬೇಕು. ಪರಬ್ರಹ್ಮನಲ್ಲಿ ಅಜ್ಞಾನವು ಹೇಗೆ ತಾನೆ ಇದ್ದೀತು? ಹೇಳು.

**ಭಾವವಿಲಾಸಿನೀ–** ಜ್ಞಾನಂ ತು ಜ್ಞಾತೃಪುಂಸ್ಯೇವ, ನತು ವಿಷಯೇ ಘಟಾದೌ । ತಸ್ಯ ಜಡತ್ವೇನ ಜ್ಞಾನಾಧಾರತಾಽಯೋಗ್ಯತ್ವಾತ್ । ತುಶಬ್ದಃ ದೀಪಾದ್ ಜ್ಞಾನಸ್ಯ ಉಕ್ತವಿಶೇಷದ್ಯೋತಕಃ । ಅತಃ ನಾಶಕಜ್ಞಾನಸ್ಯ ಜ್ಞಾತೃಪುರುಷನಿಷ್ಠತ್ವನಿಯಮಾತ್ । ನಾಶ್ಯಾಜ್ಞಾನಂ ಜ್ಞಾನನಾಶ್ಯಾಜ್ಞಾನಂ ಜ್ಞಾತೃಪುರುಷ ಏವ ವಕ್ತವ್ಯಮಿತಿ ಸಂಬಂಧಃ । ಉಕ್ತರೀತ್ಯಾ ನಾಶ್ಯನಾಶಕಯೋಃ ಸಮಾನ-ದೇಶತ್ವಾವಶ್ಯಂಭಾವೇನ ನಾಶಕಜ್ಞಾನಸ್ಯ ಪುಂನಿಷ್ಠತ್ವನಿಯಮೇ ನಾಶ್ಯಾಜ್ಞಾನಸ್ಯಾಪಿ ತನ್ನಿಷ್ಠ-ತ್ವಾವಶ್ಯಂಭಾವಾದ್ ಬ್ರಹ್ಮಣಿ ಕಥಂ ಸ್ಯಾತ್? ಬ್ರಹ್ಮಾಶ್ರಿತಾಜ್ಞಾನಪಕ್ಷೋ ಗತ ಇತಿ ಭಾವಃ ॥ ೧೭೩ ॥

**ವಿವರಣೆ-** (1) ಜ್ಞಾನವು ಜ್ಞಾತೃ ಪುರುಷನಲ್ಲಿಯೇ ಇದೆ. ಘಟಪಟಾದಿಪದಾರ್ಥಗಳಲ್ಲಿ ಇಲ್ಲ. ಅವು ಜಡವಾದುದರಿಂದ ಜ್ಞಾನಾಶ್ರಯವಾಗಲು ಸಾಧ್ಯವಿಲ್ಲ. ಹೀಗೆ ಅಜ್ಞಾನಕ್ಕೆ ನಾಶಕವಾದ ಜ್ಞಾನವು ಚೇತನನಲ್ಲೇ ಇರುವುದರಿಂದ ಆ ಜ್ಞಾನದಿಂದ ನಾಶ ಹೊಂದುವ ಅಜ್ಞಾನವೂ ಪುರುಷನಲ್ಲೇ ಇರಬೇಕು. ನಾಶ್ಯನಾಶಕಗಳಿಗೆ ಸಮಾನದೇಶಸ್ಥಿತಿಯು ಆವಶ್ಯಕವಾದುದರಿಂದ. ಆದ್ದರಿಂದ ಪರಬ್ರಹ್ಮನಲ್ಲಿ ಅಜ್ಞಾನವನ್ನು ಹೇಳಲಾಗದು.

(2) ಶ್ಲೋಕದಲ್ಲಿ ತುಶಬ್ದಕ್ಕೆ ವ್ಯತ್ಯಾಸ ಎಂದು ಅರ್ಥ. ಹಿಂದೆ ಹೇಳಿದ ದೀಪದೃಷ್ಟಾಂತ ಮತ್ತು ದಾರ್ಷ್ಟಾಂತಿಕವಾದ ಜ್ಞಾನ ಇವುಗಳಲ್ಲಿ ವ್ಯತ್ಯಾಸವಿದೆ. ಅದು ಹೀಗೆ : ಪದಾರ್ಥಗಳು ದೀಪದ ಪ್ರಕಾಶಕ್ಕೆ ಆಶ್ರಯವಾಗುತ್ತವೆ. ಆದರೆ ಜ್ಞಾನಕ್ಕೆ ಪುರುಷನಷ್ಟೇ ಆಶ್ರಯ. ಜಡ ಘಟಾದಿಗಳು ಎಂದೂ ಜ್ಞಾನಾಶ್ರಯವಲ್ಲ.

**ಜ್ಞಾನಾಜ್ಞಾನೇ ಹಿ ಪುಂಧರ್ಮೌ ಪುಂಸ್ಥಾವೇವಾರ್ಥಸಾಧಕೌ ।**
**ಕಿಂ ನ ಪುಂನೇತ್ರಗಃ ಕಾಚೋ ಬಾಹ್ಯಾರ್ಥಾವರಣಕ್ಷಮಃ ।**
**ಅತಸ್ತವಾನುಮಾನಂ ಚ ಪರಕೈಂಕರ್ಯಮಾಚರೇತ್ ॥ ೧೭೪ ॥**

**ಅರ್ಥ-** ಜ್ಞಾನಾಜ್ಞಾನೇ = ಜ್ಞಾನ ಮತ್ತು ಅಜ್ಞಾನಗಳೆರಡೂ, ಪುಂಧರ್ಮೌ ಹಿ = ನಿಶ್ಚಯವಾಗಿಯೂ ಪುರುಷನಲ್ಲಿರುವ ಧರ್ಮಗಳೇ. ಪುಂಸ್ಥೌ ಏವ = ಪುರುಷನಲ್ಲಿದ್ದೇ, ಅರ್ಥಸಾಧಕೌ = ತಮ್ಮ ಕೆಲಸವನ್ನು ಮಾಡುತ್ತವೆ. ಪುಂನೇತ್ರಗಃ = ಪುರುಷನ ಕಣ್ಣಿನಲ್ಲಿರುವ, ಕಾಚಃ = ಕಾಚವೆಂಬ ದೋಷವು, ಬಾಹ್ಯಾರ್ಥಾವರಣಕ್ಷಮಃ ನ ಕಿಮ್?= ಬಾಹ್ಯಪದಾರ್ಥಗಳನ್ನು ಆವರಿಸಲು ಸಮರ್ಥವಲ್ಲವೇ? ಅತಃ = ಆದ್ದರಿಂದ, ತವ = ನಿನ್ನ ಅನುಮಾನಂ= ಅನುಮಾನವು, ಪರಕೈಂಕರ್ಯಂ= ಪರರ ಸೇವೆಯನ್ನು, ಆಚರೇತ್= ಮಾಡುತ್ತದೆ.

**ಅನುವಾದ- ಜ್ಞಾನ ಮತ್ತು ಅಜ್ಞಾನಗಳು ನಿಶ್ಚಿತವಾಗಿ ಪುರುಷಧರ್ಮಗಳು. ಪುರುಷನಲ್ಲಿದ್ದೇ ತಮ್ಮ ಕೆಲಸಗಳನ್ನು ಮಾಡುತ್ತವೆ. ಪುರುಷನ ಕಣ್ಣಿನಲ್ಲಿರುವ ಕಾಚ ಎಂಬ ರೋಗವು ಹೊರಗಿನ ಪದಾರ್ಥಗಳ ದರ್ಶನಕ್ಕೆ ಅಡ್ಡಿ ಮಾಡುವುದಿಲ್ಲವೇ? ಆದ್ದರಿಂದ ಅದ್ವೈತಿಗಳ ಅನುಮಾನವು ಅವರ ವಿರೋಧಿಗಳಿಗೆ ಅನುಕೂಲವಾಗಿದೆ.**

**ಭಾವವಿಲಾಸಿನೀ**– ಅಜ್ಞಾನಸ್ಯ ಪುಂನಿಷ್ಠತ್ವೇಽಪಿ ಬಾಹ್ಯವಿಷಯಾವರಣತ್ವಂ ದೃಷ್ಟಾಂತಮುಖೇನ ಘಟಯತಿ– **ಜ್ಞಾನಾಜ್ಞಾನೇ ಇತಿ** ।। ಅರ್ಥಸಾಧಕೌ ವಿಷಯಪ್ರಕಾಶನವಿಷಯಾ-ವರಣಾಖ್ಯಸಾಧಕೌ । ಜ್ಞಾನಾಖ್ಯಪ್ರಕಾಶ ಇವ ತತ್ಪ್ರತಿಯೋಗಿತಮೋಽಪೀದಮಂತಃಸ್ಥಮೇವ ಬಹಿಃ ಕಾರ್ಯಕಾರೀತಿ ಸೂಚನಾಯ ಜ್ಞಾನಸ್ಯಾಪಿ ಗ್ರಹಣಮ್ । ಬಾಹ್ಯಾರ್ಥಸ್ಯ ಶುಕ್ತ್ಯಾದೇಃ । ಅತಃ ಜ್ಞಾನಾಜ್ಞಾನಯೋಃ ಪುಂನಿಷ್ಠತ್ವನಿಯಮಾತ್ । ತವಾನುಮಾನಂ ಪ್ರಮಾಣಜ್ಞಾನಂ ಸ್ವಪ್ರಾಗಭಾವವ್ಯತಿರಿಕ್ತಸ್ವವಿಷಯಾವರಣಸ್ವದೇಶಗತಸ್ವನಿವರ್ತ್ಯವಸ್ತ್ವಂತರಪೂರ್ವಕಮ್ । ಅಪ್ರಕಾಶಿತಾರ್ಥಪ್ರಕಾಶಕತ್ವಾತ್ । ಅಂಧಕಾರೇ ಪ್ರಥಮೋತ್ಪನ್ನಪ್ರದೀಪ- ಪ್ರಭಾವಾದಿ-ತ್ಯನುಮಾನಮ್ । ಪರಕೈಂಕರ್ಯಂ ಪರಸ್ಯ ಜೀವನಿಷ್ಠಾಜ್ಞಾನವಾದಿನಃ ಕೈಂಕರ್ಯಂ ಸ್ವದೇಶಗತೇ-ತ್ಯುಕ್ತ್ಯಾಽಜ್ಞಾನಸ್ಯ ಜ್ಞಾನಾಧಾರಜೀವಾಶ್ರಿತತ್ವಸ್ಯೈವ ಸಿದ್ಧ್ಯಾ ತ್ವದಭಿಲಷಿತಬ್ರಹ್ಮಾಶ್ರಿತ-ತ್ವಾಸಿದ್ಧೇರನುಮಾನಸ್ಯ ತತ್ತ್ವವಾದಿನಂ ಪ್ರತಿ ಸಿದ್ಧಸಾಧನತ್ವಾದಿತಿ ಭಾವಃ । ಪರಮತೇಽಪ್ಯಧಿ ಷ್ಠಾನಚೈತನ್ಯಾಖ್ಯಜ್ಞಾನಸ್ಯ ಕಥಂಚಿದಜ್ಞಾನಸಮಾನದೇಶತ್ವಸಂಭವೇಽಪಿ ಪ್ರಮಾಣಜ್ಞಾನಸ್ಯಾಂತಃ-ಕರಣವೃತ್ತಿರೂಪಸ್ಯ ಜೀವನಿಷ್ಠತ್ವಾವಶ್ಯಂಭಾವೇನಾರ್ಥಾಂತರತ್ವಾದಿತಿ ಭಾವಃ ।। ೧೭೪ ।।

**ವಿವರಣೆ**- (1) ಅರ್ಥಸಾಧಕೌ (1) ವಿಷಯಗಳ ಅಭಿವ್ಯಕ್ತಿಯನ್ನು ಉಂಟು ಮಾಡುವುದು ಜ್ಞಾನದ ಕೆಲಸ. (2) ವಿಷಯಗಳ ಅಭಿವ್ಯಕ್ತಿಗೆ ಅಡ್ಡಿಯಾಗುವುದು ಅಜ್ಞಾನದ ಕೆಲಸ.

(2) ಅದ್ವೈತಿಗಳ ಅನುಮಾನ : ಪ್ರಮಾಣಜ್ಞಾನಂ- ಸ್ವಪ್ರಾಗಭಾವವ್ಯತಿರಿಕ್ತ ಸ್ವವಿಷಯಾವರಣ ಸ್ವನಿವರ್ತ್ಯಸ್ವದೇಶಗತ ವಸ್ತ್ವಂತರಪೂರ್ವಕಮ್ ಅಪ್ರಕಾಶಿತಾರ್ಥ ಪ್ರಕಾಶಕತ್ವಾತ್ ।

ಯಾರಲ್ಲಿ ಪ್ರಮಾಣಗಳಿಂದ ಜ್ಞಾನವು ಹುಟ್ಟುವುದೋ ಅವರಲ್ಲಿರುವ ಅಜ್ಞಾನವು ನಿವೃತ್ತವಾಗುತ್ತದೆ; ಅರ್ಥಾತ್ ಎಲ್ಲಿ ಅಜ್ಞಾನವಿರುತ್ತದೋ ಅಲ್ಲಿ ಜ್ಞಾನವು ಹುಟ್ಟುತ್ತದೆ ಎಂದು ಅನುಮಾನದ ಅಭಿಪ್ರಾಯ. ಇದು ನಿಜ. ಆದರೆ ಇದರಿಂದ ಬ್ರಹ್ಮನಲ್ಲಿ ಅಜ್ಞಾನವಿದೆ ಎಂದು ಸಿದ್ಧವಾಗುವುದಿಲ್ಲ. ಪ್ರಮಾಣಗಳಿಂದ ಜೀವನಲ್ಲಿ ಹುಟ್ಟುವ ಜ್ಞಾನದಿಂದ ಜೀವನಲ್ಲಿರುವ ಅಜ್ಞಾನದ ನಿವೃತ್ತಿಯಾಗುತ್ತದೆ ಎಂದೂ ಈ ಅನುಮಾನದಿಂದ ಸಿದ್ಧವಾಗಬಹುದು. ಈ ಪ್ರಮೇಯವು ಅಜ್ಞಾನವು ಜೀವನಲ್ಲಿದೆ ಎಂದು ಹೇಳುವ ತತ್ತ್ವವಾದಿಗಳಿಗೆ ಅನುಕೂಲವೇ ಆಗಿದೆ.

ಸ್ವದೇಶಗತಮಜ್ಞಾನಂ ಪ್ರಮಾಣಜ್ಞಾನತಸ್ತವ ।
ಸಿದ್ಧ್ಯತ್ ಪ್ರಮಾತೃಪುರುಷೇ ಯತಃ ಸಿದ್ಧಮಭೂದ್ ಬಲಾತ್ ।
ಪ್ರಮಾತಾ ಜೀವ ಏವೇತಿ ಜೀವಾಜ್ಞಾನಮಭೂದ್ಧಿ ತತ್ ।। ೧೭೫ ।।

**ಅರ್ಥ**- ಯತಃ= ಏಕೆಂದರೆ, ತವ= ನಿನ್ನ ಮತದಲ್ಲಿ, ಪ್ರಮಾಣಜ್ಞಾನತಃ = ಪ್ರಮಾಣಜ್ಞಾನವನ್ನು ಪಕ್ಷವಾಗಿಸಿ ಪ್ರಯೋಗಿಸಿದ ಅನುಮಾನದಿಂದ, ಸಿದ್ಧ್ಯತ್=

ಸಿದ್ಧವಾಗುವ, ಸ್ವದೇಶಗತಮಜ್ಞಾನಂ= ಸ್ವದೇಶಗತವಾದ ಅಜ್ಞಾನವು, ಪ್ರಮಾತೃಪುರುಷೇ = ಪ್ರಮಾತೃಪುರುಷನಲ್ಲಿಯೇ, ಬಲಾತ್= ಹೇತುವಿನ ಬಲದಿಂದ (ಬೇರೆ ದಾರಿಯಿಲ್ಲದೆ), ಸಿದ್ಧಮ್ ಅಭೂತ್= ಸಿದ್ಧವಾಯಿತು. ಪ್ರಮಾತಾ ಜೀವ ಏವ ಇತಿ= ಪ್ರಮಾಣ ಜ್ಞಾನಾಶ್ರಯನು ಜೀವನೇ ಆದುದರಿಂದ, ತತ್= ಆ ಅಜ್ಞಾನವು ಬಲಾತ್= ಅನುಮಾನಸಾಮರ್ಥ್ಯದಿಂದ, ಜೀವಾಜ್ಞಾನಮಭೂತ್= ಜೀವನಲ್ಲಿ ಆಶ್ರಿತವಾದ ಅಜ್ಞಾನವೇ ಆಯಿತು.

**ಅನುವಾದ-** ಪ್ರಮಾಣಜ್ಞಾನವನ್ನು ಪಕ್ಷವಾಗಿಸಿ ಪ್ರಯೋಗಿಸುವ ನಿನ್ನ ಮತದ ಅನುಮಾನದಿಂದ ಪ್ರಮಾಣಜ್ಞಾನವು ಎಲ್ಲಿ ಹುಟ್ಟುವುದೋ ಅಲ್ಲೇ ಅದರಿಂದ ನಾಶವಾಗುವ ಅಜ್ಞಾನವು ಇದೆ ಎಂದು ಸಿದ್ಧವಾಗುವುದು. ಪ್ರಮಾಣಜ್ಞಾನವು ಜೀವನಲ್ಲಿ ಹುಟ್ಟುತ್ತದೆ, ಬ್ರಹ್ಮನಲ್ಲಿ ಅಲ್ಲ. ಆದ್ದರಿಂದ ಅಜ್ಞಾನಕ್ಕೆ ಆಶ್ರಯ ಜೀವಾತ್ಮ ಎಂದೇ ಸಿದ್ಧವಾಗುತ್ತದೆ.

**ಭಾವವಿಲಾಸಿನೀ– ತದೇವೋಪಪಾದಯತಿ– ಸ್ವದೇಶಗತಮಿತಿ ॥** ಪ್ರಮಾಣಜ್ಞಾನತಃ ಪ್ರಮಾಣಜ್ಞಾನಂ ಪಕ್ಷೀಕೃತ್ಯ । ಸ್ವದೇಶಗತಂ ಪ್ರಮಾಣಜ್ಞಾನಸಮಾನದೇಶಗತಮಿತ್ಯರ್ಥಃ । ಪ್ರಮಾತೃಪುರುಷೇ ಜೀವೇ । ಪ್ರಮಾತೃಪದೇನ ಪ್ರಮಾವಾನ್ ಪ್ರಮಾತಾ ಇತಿ ಪ್ರಮಾಣಜ್ಞಾನಸ್ಯ ಜೀವನಿಷ್ಠತ್ವಂ ಸ್ಫೋರಯತಿ । ತದಜ್ಞಾನಮ್ ॥ ೧೭೫ ॥

**ವಿವರಣೆ-** ಪ್ರಮಾತಾ= ಪ್ರಮಾವುಳ್ಳವನು. ಪ್ರಮಾಣದಿಂದ ಹುಟ್ಟಿದ ಜ್ಞಾನವುಳ್ಳವನು ಎಂದು ತಾತ್ಪರ್ಯ. ಅದ್ವೈತದರ್ಶನದ ಬ್ರಹ್ಮನು ಈ ಅರ್ಥದಲ್ಲಿ ಪ್ರಮಾತಾ ಅಲ್ಲ. ಆದ್ದರಿಂದ ಅದ್ವೈತದರ್ಶನವು ಪ್ರಯೋಗಿಸುವ ಅನುಮಾನ (174 ರ ವಿವರಣೆಯನ್ನು ನೋಡಿ) ದಿಂದ ಸಿದ್ಧವಾಗುವ ಅಜ್ಞಾನವು ಜೀವಾತ್ಮನಲ್ಲೇ ಸಿದ್ಧವಾಗುತ್ತದೆ. ಇದು ತತ್ವವಾದಿಗಳಿಗೆ ಸಮ್ಮತ. ಆದ್ದರಿಂದ ಅನುಮಾನವು ಪರಕೈಂಕರ್ಯವನ್ನೇ ಸಾಧಿಸುತ್ತದೆ ಎಂದು ಹೇಳಲಾಗಿದೆ.

**ಚಕ್ಷುಷಾ ಸನ್ನಿಕೃಷ್ಟಾರ್ಥಜ್ಞಾನಂ ಸ್ಯಾದಂತರೇವ ಹಿ ।**
**ಜಾನಾಮೀತ್ಯಾಂತರತ್ವಸ್ಯ ಸುಖಾದಾವಿವ ಸಿದ್ಧಿತಃ ॥ ೧೭೬ ॥**

**ಅರ್ಥ-** ಚಕ್ಷುಷಾ = ಕಣ್ಣಿನಿಂದ, ಸನ್ನಿಕೃಷ್ಟಾರ್ಥಜ್ಞಾನಂ = ಸನ್ನಿಕರ್ಷವನ್ನು (ಸಂಬಂಧ)ಪಡೆದ ವಸ್ತುವಿನ ಜ್ಞಾನವು, ಅಂತರೇವ = ಒಳಗೇ, ಸ್ಯಾದ್= ಉಂಟಾಗುತ್ತದೆ. ಹಿ = ಪ್ರಸಿದ್ಧ. ಸುಖಾದಾವಿವ= ನಾನು ಸುಖಿ ಎಂಬ ಅನುಭವವಿಷಯವಾದ ಸುಖ ಮುಂತಾದವುಗಳಿಗೆ ಹೇಗೆ ಹಾಗೆ, ಜಾನಾಮಿ ಇತಿ= ನಾನು ತಿಳಿದಿದ್ದೇನೆ ಎಂಬ ಅನುಭವದಿಂದ, ಆಂತರತ್ವಸ್ಯ= ಒಳಗೆ ಇದೆ ಎಂದು, ಸಿದ್ಧಿತಃ= ಸಿದ್ಧಿಸುವುದರಿಂದ.

**ಅನುವಾದ-** ಚಕ್ಷುರಿಂದ್ರಿಯದಿಂದ ಸನ್ನಿಕರ್ಷವನ್ನು ಹೊಂದಿದ ಪದಾರ್ಥದ ಜ್ಞಾನವು ಒಳಗೇ ಆಗುತ್ತದೆ. ಇದು ಅನುಭವ ಸಿದ್ಧ. 'ಜಾನಾಮಿ' ಎಂಬ ಅನುಭವದಿಂದ ಜ್ಞಾನವು ಒಳಗೆ ಇರುತ್ತದೆ ಎಂದು ಸಿದ್ಧವಾಗುವುದರಿಂದ. 'ಸುಖೀ' ಎಂಬ ಅನುಭವದಿಂದ ಸುಖವು ಒಳಗೆ ಇರುತ್ತದೆ ಎಂದು ಸಿದ್ಧವಾಗುವಂತೆ.

**ಭಾವವಿಲಾಸಿನೀ–** ಮನೋವೃತ್ತೇರಪಿ ಚಕ್ಷುರ್ದ್ವಾರಾ ವಿಷಯಪರ್ಯಂತಧಾವನಾತ್ ಸಮಾನಾಶ್ರಯತ್ವಾಶಾಂ ನಿರಾಕರೋತಿ– **ಚಕ್ಷುಷೇತಿ** ॥ 'ಆತ್ಮಾ ಮನಸಾ ಸಂಯುಜ್ಯತೇ, ಮನ ಇಂದ್ರಿಯೇಣ, ಇಂದ್ರಿಯಮರ್ಥೇನ' ಇತಿ ಪ್ರಸಿದ್ಧಿಂ ಹಿಶಬ್ದೇನ ಸೂಚಯತಿ। ತಥಾಚ ಮನಸೋ ಬಹಿರ್ಗಮನಮಪ್ರಾಮಾಣಿಕಮೇವ । ಜ್ಞಾನಸ್ಯಾಂತರತ್ವ ಮನುಭವಾರೂಢಂ ಕರೋತಿ– **ಜಾನಾಮೀತಿ** ॥ 'ಅಹಂ ಸುಖೀ' ಇತಿವದ್ 'ಅಹಂ ಜಾನಾಮಿ' ಇತಿ ಜ್ಞಾನಸ್ಯಾಂತರತ್ವಸ್ಯ ಸರ್ವಾನುಭವಸಿದ್ಧತ್ವಾದಿತಿ ಭಾವಃ ॥ ೧೭೬ ॥

**ವಿವರಣೆ–** ಅದ್ವೈತದರ್ಶನವು ಹೇಳುವ 'ಪ್ರಮಾಣಜ್ಞಾನಂ....' ಇತ್ಯಾದಿ ಅನುಮಾನವು ತತ್ತ್ವವಾದಿಗಳಿಗೆ ಅನುಕೂಲವೇ ಎಂಬ ಅಭಿಪ್ರಾಯವನ್ನು ಅದ್ವೈತದರ್ಶನವು ಹೀಗೆ ನಿರಾಕರಿಸುತ್ತದೆ. ಮನಸ್ಸು ಇಂದ್ರಿಯದ ಮೂಲಕ ಹೊರಗೆ ಹೋಗಿ ವಿಷಯದ ಆಕಾರವನ್ನು ಪಡೆಯುತ್ತದೆ. ಇದೇ ಮನೋವೃತ್ತಿ. ಹೀಗೆ ಜ್ಞಾನವು ವಿಷಯದಲ್ಲಿ ಇದೆ; ಆದ್ದರಿಂದ ಅಜ್ಞಾನವು ವಿಷಯದಲ್ಲೇ ಇರಬೇಕಾಗುತ್ತದೆ. ಆದ್ದರಿಂದ ನಮ್ಮ ಅನುಮಾನದಿಂದ ಅಜ್ಞಾನವು ಪುರುಷಗತ ಎಂದು ಸಿದ್ಧವಾಗುವುದಿಲ್ಲ?

**ವಿಮರ್ಶೆ :** ಇದು ಸರಿಯಲ್ಲ. ಮನಸ್ಸು ಹೊರಗೆ ಹೋಗುವುದಿಲ್ಲ. ಮನಸ್ಸಿಗೆ ಇಂದ್ರಿಯದಿಂದ ಸನ್ನಿಕರ್ಷ. ಇಂದ್ರಿಯಕ್ಕೆ ವಿಷಯದಿಂದ ಸನ್ನಿಕರ್ಷ. ಮನಸ್ಸು ಹೊರಗೆ ಬಾರದೇ ಇಂದ್ರಿಯ ಮೂಲಕ ವಿಷಯಸಂಬಂಧವನ್ನು ಪಡೆಯುತ್ತದೆ. ಇದು ಅನುಭವಸಿದ್ಧ. 'ಅಹಂ ಸುಖೀ' 'ಅಹಂ ದುಃಖೀ' ಎಂದು ಎಲ್ಲರ ಅನುಭವ. ಸುಖ, ದುಃಖಗಳು ಒಳಗೆ ಇವೆ ಎಂದೇ ಎಲ್ಲರ ಅನುಭವ. ಇದರಂತೆ 'ಅಹಂ ಜಾನಾಮಿ' ಎಂಬ ಅನುಭವವಿದೆ. ಇದರಿಂದ ಜ್ಞಾನವು ಒಳಗೆ ಎಂದೇ ಸಿದ್ಧವಾಗುತ್ತದೆ. ಆದ್ದರಿಂದ ಜ್ಞಾನವು ಹೊರಗಿರುವ ವಿಷಯಗಳಲ್ಲಿ ಇದೆ ಎಂಬ ವಿಚಾರವು ಅನುಭವವಿರುದ್ಧ.

**ಪರೋಕ್ಷಜ್ಞಾನಕರಣಾಜ್ಜ್ಞಾನಮಂತರ್ಭವೇದ್ ಯಥಾ ।**
**ತಥಾಽಪರೋಕ್ಷಕರಣಾಜ್ಜ್ಞಾನಮಪ್ಯಂತರೇವ ಹಿ ॥ ೧೭೭ ॥**

**ಅರ್ಥ-** ಪರೋಕ್ಷಜ್ಞಾನಕರಣಾತ್ =ಪರೋಕ್ಷಜ್ಞಾನಕರಣಗಳಿಂದ= ಅನುಮಾನ-ಆಗಮಗಳಿಂದ, ಜ್ಞಾನಂ= ಜ್ಞಾನವು, ಅಂತಃ= ಒಳಗೆ, ಯಥಾ ಭವೇತ್= ಹೇಗೆ ಆಗುತ್ತದೋ, ತಥಾ= ಹಾಗೆಯೇ, ಅಪರೋಕ್ಷಜ್ಞಾನಕರಣಾತ್ = ಅಪರೋಕ್ಷ

ಜ್ಞಾನಸಾಧನಗಳಾದ ಇಂದ್ರಿಯಗಳಿಂದ (ಹುಟ್ಟುವ), ಜ್ಞಾನಂ= ಜ್ಞಾನವು, ಅಂತರೇವ= ಒಳಗೇ, ಭವೇತ್ = ಉಂಟಾಗುತ್ತದೆ. ಹಿ = ಇದು ಅನುಭವಸಿದ್ಧ

**ಅನುವಾದ- ಅನುಮಾನ ಮತ್ತು ಆಗಮಗಳು ಪರೋಕ್ಷಜ್ಞಾನಕರಣಗಳು. ಇವುಗಳಿಂದ ಜ್ಞಾನವು ಒಳಗೇ ಹುಟ್ಟುತ್ತದೆ ಎಂದು ಅದ್ವೈತ ದರ್ಶನವು ಹೇಳುತ್ತದೆ. ಹೀಗೆಯೇ ಅಪರೋಕ್ಷ ಜ್ಞಾನ ಸಾಧನಗಳಾದ ಇಂದ್ರಿಯಗಳಿಂದ ಹುಟ್ಟುವ ಜ್ಞಾನವು ಒಳಗೇ ಹುಟ್ಟುತ್ತದೆ. ಇದು ಪ್ರಸಿದ್ಧ.**

**ಭಾವವಿಲಾಸಿನೀ–** ಬಾಹ್ಯಕರಣಾದಂತರ್ಜ್ಞಾನೋದಯೇಽಂತರಂಗದೃಷ್ಟಾಂತಮಪ್ಯಾಹ– **ಪರೋಕ್ಷೇತಿ** ॥ ತಥಾ ಅಪರೋಕ್ಷಕರಣಾದಿತಿ ಪದಚ್ಛೇದಃ । ಜ್ಞಾನಮಪರೋಕ್ಷಜ್ಞಾನಮ್ । ಪರೋಕ್ಷಜ್ಞಾನ ಇವ ಬಾಹ್ಯಕರಣಾದಂತರೇವಾಪರೋಕ್ಷಜ್ಞಾನಸ್ಯಾಪ್ಯುದಯಸಂಭವೇ ತದ್ವದೇವ ತದಾಕಾರತ್ವಾಭಾವೇಽಪಿ ತಜ್ಜ್ಞಾನತ್ವಸ್ಯಾಪಿ ಸಂಭವೇ ಮನೋವೃತ್ತೇರ್ಬಹಿರ್ಗಮನಕಲ್ಪನಂ ವ್ಯರ್ಥಮಿತಿ ಭಾವಃ ॥ ೧೭೭ ॥

**ವಿವರಣೆ-** ಬಾಹ್ಯಕರಣಗಳಿಂದ ಒಳಗೆ ಜ್ಞಾನವು ಹೇಗೆ ಹುಟ್ಟುತ್ತದೆ? ದೃಷ್ಟಾಂತದಿಂದ ಉತ್ತರಿಸುತ್ತಾರೆ. ಪರೋಕ್ಷಜ್ಞಾನಕರಣಗಳಿಂದ ಹುಟ್ಟುವ ಜ್ಞಾನವು ಒಳಗೇ ಹುಟ್ಟುತ್ತದೆ ಎಂದು ಅದ್ವೈತಮತ. ಇದರಂತೆ ಇಂದ್ರಿಯಗಳಿಂದ ಹುಟ್ಟುವ ಜ್ಞಾನವೂ ಒಳಗೇ ಹುಟ್ಟುತ್ತದೆ. ಪರೋಕ್ಷ ಜ್ಞಾನವು ಒಳಗೆ ಹುಟ್ಟುತ್ತದೆ ಎಂದು ಅಂಗೀಕರಿಸಲು ಕಾರಣ : 'ಪರೋಕ್ಷಜ್ಞಾನ ಪ್ರಕ್ರಿಯೆಯಲ್ಲಿ ಮನಸ್ಸು ಹೊರಗೆ ಹೋಗುವುದಾದರೆ, ಹೊರಗಿನ ವಿಷಯಗಳ ಅಧಿಷ್ಠಾನವಾದ ಚೈತನ್ಯದ ಅಭಿವ್ಯಕ್ತಿಯು ಆಗಬೇಕು. ಈ ಚೈತನ್ಯವು ಕೇವಲ ಅಪರೋಕ್ಷರೂಪ. ಆದ್ದರಿಂದ ವಿಷಯಗಳ ಅಪರೋಕ್ಷವೇ ಆಗಬೇಕಾಗುತ್ತದೆ. ಲೋಕದಲ್ಲಿ ಪರೋಕ್ಷಜ್ಞಾನವೇ ಇಲ್ಲವಾಗುತ್ತದೆ'. ಆದ್ದರಿಂದ ಪರೋಕ್ಷಜ್ಞಾನ ಪ್ರಕ್ರಿಯೆಯಲ್ಲಿ ಮನಸ್ಸು ಹೊರಗೆ ಹೋಗುವುದಿಲ್ಲ.

**ಯದಿ ಶಬ್ದಸಹಾಯೇನ ಮನೋ ವೈಕುಂಠಮಾವಿಶೇತ್ ।**
**ಪುನರ್ನಿವೃತ್ತಿಶೂನ್ಯಂ ಸ್ಯಾದ್ ದೀರ್ಘನಿದ್ರಾ ಭವೇತ್ ತದಾ ॥ ೧೭೮ ॥**

**ಅರ್ಥ-** ಶಬ್ದಸಹಾಯೇನ = ವೇದಾದಿಶಾಸ್ತ್ರಗಳ ಸಹಾಯದಿಂದ, ಮನಃ = ಮನಸ್ಸು ವೈಕುಂಠಂ = ವೈಕುಂಠಲೋಕವನ್ನು, ಯದಿ ಆವಿಶೇತ್ ತರ್ಹಿ= ಪ್ರವೇಶಿಸುವುದಾದರೆ, ಪುನಃ ನಿವೃತ್ತಿಶೂನ್ಯಂ ಸ್ಯಾತ್= (ಮನಸ್ಸು) ಪುನರಾಗಮನರಹಿತವಾದೀತು. ತದಾ = ಆಗ, ದೀರ್ಘನಿದ್ರಾ = ಮರಣವು, ಭವೇತ್ = ಉಂಟಾಗಬೇಕಾದೀತು.

**ಅನುವಾದ- ಆಗಮದ ಸಹಾಯದಿಂದ ಮನಸ್ಸು ವೈಕುಂಠವನ್ನು ಪ್ರವೇಶಿಸಿದರೆ, ಅದು ಪುನಃ ಹಿಂದೆ ಬರುವುದಿಲ್ಲ. ಮನಸ್ಸು ಇಲ್ಲದ ಸ್ಥಿತಿಯಲ್ಲಿ ಜ್ಞಾನ-ನೆನಪುಗಳು ಇರುವುದಿಲ್ಲ; ಇದು ಮರಣಸದೃಶಸ್ಥಿತಿ.**

**ಭಾವವಿಲಾಸಿನೀ–** ಪರೋಕ್ಷಜ್ಞಾನೇಽಪಿ ಮನೋವೃತ್ತೇರ್ವಿಷಯಪರ್ಯಂತಧಾವನಮಸ್ತ್ವಿತಿ ಮಂದಾಶಂಕಾಂ ಪರಿಹರತಿ– **ಯದೀತಿ** ॥ ತರ್ಹೀತಿ ಶೇಷಃ । ಚಕ್ಷುರ್ವಚ್ಛಬ್ದಸ್ಯ ಪುನರಾವೃತ್ತಿ-ಶೂನ್ಯತ್ವಾದಿತ್ಯರ್ಥಃ । ದೀರ್ಘನಿದ್ರಾ ಮರಣಮ್ । ತಥಾಚ ಗ್ರಹಣಸ್ಮರಣಾದೇರ-ಭಾವಾನ್ಮೃತಪ್ರಾಯೋಽಸೀತಿ ಭಾವಃ ॥ ೧೭೮ ॥

**ವಿವರಣೆ–** ಆಗಮವು ಪರೋಕ್ಷಜ್ಞಾನಕರಣ. ಇದರಿಂದ ವೈಕುಂಠದ ಪರಿಚಯವಾಗುತ್ತದೆ. ಅಂದರೆ ಮನಸ್ಸು ವೈಕುಂಠದವರೆಗೆ ಹೋಗುತ್ತದೆ. ವೈಕುಂಠಕ್ಕೆ ಹೋದ ಮನಸ್ಸು ಹಿಂದಿರುಗುವುದಿಲ್ಲ. ಆದ್ದರಿಂದ ವೈಕುಂಠದ ಪರಿಚಯವಾದವರಿಗೆಲ್ಲ ಜ್ಞಾನಸ್ಮರಣೆಗಳು ಇಲ್ಲದೆ ಮರಣಸದೃಶಸ್ಥಿತಿಯು ಉಂಟಾಗಬೇಕಾಗುತ್ತದೆ. ವಸ್ತುಸ್ಥಿತಿ ಹೀಗಿಲ್ಲ. ಆದ್ದರಿಂದ ಪರೋಕ್ಷಜ್ಞಾನಪ್ರಕ್ರಿಯೆಯಲ್ಲಿ ಮನಸ್ಸು ಹೊರಗೆ ಹೋಗುವುದಿಲ್ಲ.

**ಮನೋಯಾತ್ರಾ ತು ಜೀವಸ್ಯ ಯಾತ್ರಾಕಾಲೇ ಪರಂ ಭವೇತ್ ।**
**ಅಂತಃಕರಣಮೇತಸ್ಮಾದಂತಃ ಕಾರ್ಯಪರಂ ಹಿ ತತ್ ॥ ೧೭೯ ॥**

**ಅರ್ಥ–** ಮನೋಯಾತ್ರಾ ತು= ಹೊರಗೆ ಮನಸ್ಸಿನ ಪ್ರಯಾಣವಾದರೂ, ಜೀವಸ್ಯ= ಜೀವನ, ಯಾತ್ರಾಕಾಲೇ ಪರಂ= ಮರಣಕಾಲದಲ್ಲಿ ಮಾತ್ರ, ಭವೇತ್= ಆಗುತ್ತದೆ. ಹಿ= ಯಾವ ಕಾರಣದಿಂದ, ತತ್= ಆ ಮನಸ್ಸು, ಅಂತಃಕಾರ್ಯಕರಂ= ದೇಹದ ಒಳಗೆ ಇದ್ದು ಜ್ಞಾನೋತ್ಪತ್ತ್ಯಾದಿಕಾರ್ಯವನ್ನು ಮಾಡುತ್ತದೆಯೋ, ಏತಸ್ಮಾತ್= ಈ ಕಾರಣದಿಂದ, ಅಂತಃಕರಣಂ= ಅದು ಅಂತಃಕರಣವೆನಿಸಿದೆ.

**ಅನುವಾದ–** ಜೀವಾತ್ಮನು ದೇಹದಿಂದ ಹೊರಗೆ ಹೋಗುವಾಗ ಮಾತ್ರವೇ ಮನಸ್ಸೂ ಹೊರಗೆ ಹೋಗುತ್ತದೆ. ಒಳಗಿದ್ದು ತನ್ನ ಕೆಲಸಗಳನ್ನು ಮಾಡುವುದರಿಂದಲೇ ಇದಕ್ಕೆ ಅಂತಃಕರಣ ಎಂದು ಹೆಸರು.

**ಭಾವವಿಲಾಸಿನೀ–** ತದುಪಪಾದಯತಿ– **ಮನೋಯಾತ್ರೇತಿ** ॥ ಮನಸೋ ಬಹಿರ್ಯಾತ್ರೇ-ತ್ಯರ್ಥಃ । ಜೀವಸ್ಯ ದೇಹಾದ್ಬಹಿರ್ಯಾತ್ರಾಕಾಲೇ । ಹಿ ಯಸ್ಮಾದ್ ಅಂತಃ- ಕಾರ್ಯಕರಮ್ । ಏತಸ್ಮಾತ್ತನ್ಮನಃ ಅಂತಃಕರಣಮಿತಿ ಯೋಜನಾ । ಬಹಿರ್ಗತ್ವಾ ಕಾರ್ಯಕಾರಿ ಚಕ್ಷುರಾದಿ-ವದ್ಬಾಹ್ಯಕರಣಮೇವ ಸ್ಯಾತ್ ನತ್ವಂತಃ ಕರಣಮಿತಿ ಭಾವಃ ॥ ೧೭೯ ॥

**ಅತೋ ಜ್ಞಾನವದಜ್ಞಾನಮಾಂತರಂ ಸಾಕ್ಷಿಣೋ ಬಲಾತ್ ।**
**ಏಕದೇಶತ್ವಮನಯೋರ್ನಾಶ್ಯನಾಶಕಯೋರ್ಧ್ರುವಮ್ ॥ ೧೮೦ ॥**

**ಅರ್ಥ–** ಅತಃ = ಆದ್ದರಿಂದ, ಸಾಕ್ಷಿಣಃ ಬಲಾತ್ = ಅಹಂ ಜಾನಾಮಿ, ಅಹಂ ನ ಜಾನಾಮಿ= (ನಾನು ತಿಳಿಯುತ್ತೇನೆ, ನಾನು ತಿಳಿದಿಲ್ಲ)ಎಂಬ ಜೀವನ ಜ್ಞಾನಾಜ್ಞಾನಗಳನ್ನು ಗ್ರಹಿಸುವ ಸಾಕ್ಷಿ ಪ್ರಮಾಣದಿಂದ, ಜ್ಞಾನವತ್ = ಜ್ಞಾನದಂತೆ, ಅಜ್ಞಾನಂ = ಅಜ್ಞಾನವೂ,

ಆಂತರಂ = ಅಂತರಂಗಧರ್ಮವೇ ಆಗಿದೆ. ನಾಶ್ಯನಾಶಕಯೋಃ = ನಾಶ್ಯನಾಶಕಗಳಾದ, ಅನಯೋಃ = ಈ ಅಜ್ಞಾನ-ಜ್ಞಾನಗಳಿಗೆ, ಧ್ರುವಂ = ನಿಶ್ಚಯವಾಗಿಯೂ, ಏಕದೇಶತ್ವಂ = ಏಕಾಶ್ರಯಸ್ಥಿತಿಯು ಇದೆ.

**ಅನುವಾದ-** ಜ್ಞಾನವು ಅಂತರಂಗಧರ್ಮವೆಂದು ಸಾಕ್ಷಿಯಿಂದ ಸಿದ್ಧವಾಗುತ್ತದೆ. ಹಾಗೆ ಅಜ್ಞಾನವೂ ಅಂತರಂಗಧರ್ಮವೆಂದು ಸಾಕ್ಷಿಯಿಂದ ಸಿದ್ಧವಾಗುತ್ತದೆ. ನಾಶ್ಯವಾದ ಅಜ್ಞಾನವು, ನಾಶಕವಾದ ಜ್ಞಾನವು ಜೀವನಲ್ಲಿ ಇದೆ. ಇದು ನಿಶ್ಚಿತ.

**ಭಾವವಿಲಾಸಿನೀ–** ಅತಃ ಜ್ಞಾನಸ್ಯಾಂತರತ್ವಾತ್ । ಸಾಕ್ಷಿಣಃ ಅಹಂ ಜಾನಾಮೀತಿವದಹಂ ನ ಜಾನಮೀತ್ಯಸ್ಯಾಪಿ ಜೀವನಿಷ್ಠತ್ವಗ್ರಾಹಿಣಃ। ಪ್ರಾಗುಕ್ತಮೇವ ಹೇತುದ್ವಯಂ ಸಂಗೃಹ್ಯ ಸ್ಮಾರಯತಿ– **ಏಕದೇಶತ್ವಮಿತಿ** ॥ ಅನಯೋರ್ಜ್ಞಾನಾಜ್ಞಾನಯೋಃ ॥ ೧೮೦ ॥

**ವಿವರಣೆ-** 'ಅಹಂ ಜಾನಾಮಿ' - ಇದು ಸಾಕ್ಷಿಜ್ಞಾನ. ಇದರಿಂದ ಜ್ಞಾನವು ಒಳಗೆ ಇರುತ್ತದೆ ಎಂದು ತಿಳಿಯುತ್ತದೆ. 'ಅಹಂ ನ ಜಾನಾಮಿ' - ಇದೂ ಸಾಕ್ಷಿಜ್ಞಾನವೇ. ಇದರಿಂದ ಅಜ್ಞಾನವೂ ಒಳಗೆ ಇರುತ್ತದೆ ಎಂದು ತಿಳಿಯುತ್ತದೆ. ಆದ್ದರಿಂದ ನಾಶ್ಯ-ನಾಶಕಗಳಾದ ಅಜ್ಞಾನ-ಜ್ಞಾನಗಳಿಗೆ ಜೀವನೇ ಆಶ್ರಯ ಎಂದು ನಿಶ್ಚಯವಾಗುತ್ತದೆ.

ನ ಚೇದನ್ಯಾಶ್ರಿತಜ್ಞಾನಮನ್ಯಾಜ್ಞಾನಂ ನಿವರ್ತಯೇತ್ ।
ಅಜ್ಞಾನಮಪ್ಯಾಂತರಂ ತನ್ನ ಬಾಹ್ಯವಿಷಯಾಶ್ರಿತಮ್ ॥ ೧೮೧ ॥

**ಅರ್ಥ-** ನಚೇತ್ = ಅಲ್ಲದಿದ್ದರೆ= ಜ್ಞಾನ-ಅಜ್ಞಾನಗಳಿಗೆ ಒಂದೇ ಆಶ್ರಯ ಎಂಬ ನಿಯಮವಿಲ್ಲದಿದ್ದರೆ, ಅನ್ಯಾಶ್ರಿತಜ್ಞಾನಂ = ಒಬ್ಬನಲ್ಲಿರುವ ಜ್ಞಾನವು, ಅನ್ಯಾಜ್ಞಾನಂ = ಇನ್ನೊಬ್ಬನ ಅಜ್ಞಾನವನ್ನು , ನಿವರ್ತಯೇತ್ = ನಿವೃತ್ತಿಗೊಳಿಸಬೇಕಾಗಿತ್ತು. ತತ್= ಆದ್ದರಿಂದ, (ಒಬ್ಬನ ಜ್ಞಾನವು ಮತ್ತೊಬ್ಬನ ಅಜ್ಞಾನವನ್ನು ನಿವಾರಿಸುವುದಿಲ್ಲವಾದ್ದರಿಂದ), ಅಜ್ಞಾನಮಪಿ = ಅಜ್ಞಾನವೂ ಕೂಡ, ಆಂತರಂ = ಒಳಗೆ ಇದೆ. ನ ಬಾಹ್ಯವಿಷಯಾಶ್ರಿತಂ = ಹೊರಗಿನ ವಿಷಯಪದಾರ್ಥವನ್ನು ಆಶ್ರಯಿಸಿಲ್ಲ.

**ಅನುವಾದ-** ಹಿಂದೆ ತಿಳಿಸಿದಂತೆ ಜ್ಞಾನಾಜ್ಞಾನಗಳಿಗೆ ಒಂದೇ ಅಧಿಕರಣದಲ್ಲಿ ಸ್ಥಿತಿಯು ಇಲ್ಲದಿದ್ದಲ್ಲಿ ಒಬ್ಬನಲ್ಲಿರುವ ಜ್ಞಾನವು ಮತ್ತೊಬ್ಬನಲ್ಲಿರುವ ಅಜ್ಞಾನವನ್ನು ನಿವಾರಿಸಬೇಕಿತ್ತು. ಆದರೆ ಮೈತ್ರನ ಜ್ಞಾನವು ಚೈತ್ರನ ಅಜ್ಞಾನವನ್ನು ನಿವಾರಿಸುವುದಿಲ್ಲ. ಆದ್ದರಿಂದ ಅದು ಒಳಗಿದೆ. ಹೊರಗಿನ ವಿಷಯದಲ್ಲಿ ಇಲ್ಲ.

**ಭಾವವಿಲಾಸಿನೀ–** ಅನ್ಯಾಶ್ರಿತಜ್ಞಾನಂ ಚೈತ್ರಾಶ್ರಿತಜ್ಞಾನಮ್ । ಅನ್ಯಾಜ್ಞಾನಂ ಮೈತ್ರಾಶ್ರಿತಾಜ್ಞಾನಮ್ । ಸಾಕ್ಷಿಣೋ ಬಲಾದಿತ್ಯೇತದ್ ವಿಶದಯನ್ನುಪಸಂಹರತಿ–**ಅಜ್ಞಾನಮಿತಿ** ॥ ತತ್ ತಸ್ಮಾತ್ ॥ ೧೮೧ ॥

**ವಿವರಣೆ-** ಜ್ಞಾನ-ಅಜ್ಞಾನಗಳಿಗೆ ಸಮಾನಆಶ್ರಯವು ಇಲ್ಲದಿದ್ದರೆ ಚೈತ್ರನ ಜ್ಞಾನದಿಂದ ಮೈತ್ರನ ಅಜ್ಞಾನವು ನಾಶವಾಗಲಿ ಎಂಬ ಆಪತ್ತಿಯು ಬರುತ್ತದೆ. ಆದ್ದರಿಂದ ಸಾಕ್ಷಿಗನುಗುಣವಾಗಿ ಅಜ್ಞಾನವು ಜೀವಾಶ್ರಿತವೇ, ಬಾಹ್ಯವಿಷಯಾಶ್ರಿತ ಅಲ್ಲ.

**ಅಹಮಜ್ಞ ಇತಿ ಹ್ಯಕ್ಷಂ ಜೀವಾಜ್ಞಾನಸ್ಯ ಸಾಧಕಮ್ ।**
**ಅನಾದಿಮಾಯಯಾ ಸುಪ್ತೋ ಯದಾ ಜೀವಃ ಪ್ರಬುಧ್ಯತೇ ।**
**ಇತಿ ವೇದೇನ ಮಾಯೇಯಂ ಜೀವಗೈವೇತಿ ಗೀಯತೇ ॥ ೧೮೨ ॥**

**ಅರ್ಥ-** 'ಅಹಮಜ್ಞಃ ಇತಿ'= ನಾನು ಅಜ್ಞ ಎಂಬ, ಅಕ್ಷಂ ಹಿ= ಸಾಕ್ಷಿಪ್ರತ್ಯಕ್ಷವೇ, ಜೀವಾಜ್ಞಾನಸ್ಯ = ಜೀವಾಶ್ರಿತವಾದ ಅಜ್ಞಾನಕ್ಕೆ, ಸಾಧಕಂ= ಪ್ರಮಾಣವು, ಅನಾದಿಮಾಯಯಾ ಸುಪ್ತಃ ಯದಾ ಜೀವಃ ಪ್ರಬುಧ್ಯತೇ ಇತಿ 'ಅನಾದಿಮಾಯಾಯಾ... ಪ್ರಬುಧ್ಯತೇ' ಎಂಬ, ವೇದೇನ = ವೇದದಿಂದ, ಇಯಂ= ಈ, ಮಾಯಾ = ಅಜ್ಞಾನವು (ಅವಿದ್ಯೆಯು), ಜೀವಗಾ ಏವ = ಜೀವನಲ್ಲೇ ಇದೆ, ಇತಿ = ಎಂದು, ಗೀಯತೇ = ಹೇಳಲ್ಪಡುತ್ತದೆ.

**ಅನುವಾದ-** 'ಅಹಮಜ್ಞಃ' - ಇದು ಪ್ರತಿಯೊಬ್ಬನ ಸಾಕ್ಷಿಜ್ಞಾನ. ಆದ್ದರಿಂದ ಅಜ್ಞಾನವು ಜೀವನಲ್ಲಿರುತ್ತದೆ ಎಂಬ ವಿಷಯದಲ್ಲಿ ಸಾಕ್ಷಿಯೇ ಪ್ರಮಾಣ. 'ಅನಾದಿಮಾಯಯಾ ಸುಪ್ತೋ ಯದಾ ಜೀವಃ ಪ್ರಬುದ್ಧ್ಯತೇ' ಎಂದು ವೇದವಚನವಿದೆ. ಈ ವಚನವು ಅಜ್ಞಾನವು ಜೀವನಲ್ಲಿದೆ ಎಂದೇ ತಿಳಿಸುತ್ತದೆ.

**ವಿವರಣೆ-** ಅಜ್ಞಾನವು ಜೀವಾಶ್ರಿತವೆನ್ನಲು ಪ್ರತ್ಯಕ್ಷ ಮತ್ತು ಶ್ರುತಿಯು ಪ್ರಮಾಣ. **'ಅಹಮಜ್ಞಃ'** ಇದು ಸಾಕ್ಷಿಪ್ರತ್ಯಕ್ಷ, ಇದರಿಂದ ಅಜ್ಞಾನವು ಜೀವನಲ್ಲಿ ಇದೆ ಎಂದು ತಿಳಿಯುತ್ತದೆ. **'ಅನಾದಿಮಾಯಯಾ ಸುಪ್ತಃ ಯದಾ ಜೀವಃ ಪ್ರಬುಧ್ಯತೇ'**, ಮಾಂಡೂಕೋಪನಿಷತ್ 2-8- ಈ ವೇದವಚನವು ಅಜ್ಞಾನವು ಜೀವನಲ್ಲಿದೆ ಎಂದು ಹೇಳುತ್ತದೆ.

ಶ್ರುತಿಯ ಅರ್ಥ : ಅನಾದಿಮಾಯಯಾ= ಅನಾದಿ ಅಜ್ಞಾನದಿಂದ, ಸುಪ್ತಃ= ಮಲಗಿದ, ಜೀವಃ= ಜೀವಾತ್ಮನು, ಯದಾ= ಯಾವಾಗ, ಪ್ರಬುದ್ಧ್ಯತೆ= ಜ್ಞಾನವನ್ನು ಪಡೆಯುವನೋ... (ಪರಮಾತ್ಮನ ಇಚ್ಛೆಯಂತೆ ಅನಾದಿ ಅಜ್ಞಾನದಿಂದಾಗಿ ತತ್ವಜ್ಞಾನರಹಿತನಾಗಿರುವ ಜೀವಾತ್ಮನು ಪರಮಾತ್ಮನ ಅನುಗ್ರಹದಿಂದ ಪ್ರಬುದ್ಧನಾಗುವನೋ ಆಗ ಪರಮಾತ್ಮನನ್ನು ತಿಳಿದು, ಅವನ ಸಾಕ್ಷಾತ್ಕಾರವನ್ನು ಪಡೆಯುತ್ತಾನೆ).

ಭಾ.ವಿ. ಹಿಂದೆ (ಶುದ್ಧಿಸೌರಭ ಶ್ಲೋಕ 95) 'ಅಜ್ಞಾನವು ಬ್ರಹ್ಮಾಶ್ರಿತ' ಎಂಬ ಅದ್ವೈತದರ್ಶನದ ಅಭಿಪ್ರಾಯಕ್ಕೆ ಈ ಶ್ರುತಿಯು ಬಾಧಕ ಎಂದು ಹೇಳಲಾಗಿದೆ. ಈಗ 'ಅಜ್ಞಾನವು ಜೀವಾಶ್ರಿತ' ಎಂಬ ಅಭಿಪ್ರಾಯಕ್ಕೆ ಈ ಶ್ರುತಿಯು ಸಾಧಕ ಎಂದು ಹೇಳಲಾಗಿದೆ.

**ಭಾವವಿಲಾಸಿನೀ–** ಅಹಂ ಸಾಕ್ಷೀ । ಪ್ರಾಗ್ ಬ್ರಹ್ಮಾಶ್ರಿತಾಜ್ಞಾನಪಕ್ಷೇ ಬಾಧಕತಯೋದಾಹೃತಾಂ ಶ್ರುತಿಂ ಜೀವಾಜ್ಞಾನಪಕ್ಷೇ ಸಾಧಕತ್ವೇನಾಪ್ಯುದಾಹರತಿ– **ಅನಾದೀತಿ** ॥ ೧೮೨ ॥

ಐಕ್ಯೇನ ಚ ಪ್ರಮಾಣಾನಾಮನ್ಯಾರ್ಥೀಕರಣಂ ವೃಥಾ ।
ಐಕ್ಯಾಸಿದ್ಧೇರಯುಕ್ತಂ ಚ ಪ್ರಮಾತಾ ಜೀವ ಏವ ಹಿ ।
ನ ಚೇತ್ ಸರ್ವೈಕ್ಯತಃ ಸರ್ವಮಸ್ತವ್ಯಸ್ತಂ ಭವೇತ್ ತವ ॥ ೧೮೩ ॥

**ಅರ್ಥ–** ಐಕ್ಯೇನ = ಜೀವಬ್ರಹ್ಮರ ಅಭೇದದಿಂದ, ಪ್ರಮಾಣಾನಾಂ = (ಅಜ್ಞಾನವು ಜೀವನಲ್ಲಿ ಇದೆ ಎಂದು ಸಾಧಿಸುವ) ಪ್ರಮಾಣಗಳಿಗೆ, ಅನ್ಯಾರ್ಥೀಕರಣಂ = ಬೇರೆ ಅರ್ಥವನ್ನು ಮಾಡುವುದು, ವೃಥಾ = ವ್ಯರ್ಥ. ಐಕ್ಯಾಸಿದ್ಧೇಃ = ಜೀವಬ್ರಹ್ಮರ ಅಭೇದವು ಸಿದ್ಧವಾಗದಿರುವುದರಿಂದ, ಅಯುಕ್ತಂ ಚ = ಯುಕ್ತಿವಿರುದ್ಧವೂ ಆಗಿದೆ. ಪ್ರಮಾತಾ = ಜ್ಞಾತೃವು (ಜ್ಞಾನಾಶ್ರಯನು) ಜೀವ ಏವ ಹಿ = ಜೀವನೇ (ಬ್ರಹ್ಮನಲ್ಲ) ನ ಚೇತ್ = ಅಲ್ಲದಿದ್ದರೆ, ಸರ್ವೈಕ್ಯತಃ = ಎಲ್ಲವೂ ಒಂದೇ ಆಗುವುದರಿಂದ, ತವ= ನಿನ್ನ ಮತದಲ್ಲಿ, ಸರ್ವಂ= ಎಲ್ಲ ವ್ಯವಹಾರಗಳೂ, ಅಸ್ತವ್ಯಸ್ತಂ ಭವೇತ್= ಅಸ್ತವ್ಯಸ್ತವಾಗುತ್ತವೆ.

**ಅನುವಾದ–** 'ಜೀವನು ಬ್ರಹ್ಮನೇ, ಬೇರೆ ಅಲ್ಲ, ಆದ್ದರಿಂದ ಅಜ್ಞಾನವು ಜೀವಾಶ್ರಿತ ಎಂದರೆ ಬ್ರಹ್ಮಾಶ್ರಿತ ಎಂದೇ ಅರ್ಥ' – ಹೀಗೆ ಹೇಳುತ್ತ ಅದ್ವೈತದರ್ಶನವು ತತ್ತ್ವವಾದವು ಹೇಳುವ ಪ್ರಮಾಣಗಳನ್ನು ವ್ಯತಿರಿಕ್ತವನ್ನಾಗಿಸುತ್ತದೆ. ಜೀವ- ಬ್ರಹ್ಮೈಕ್ಯವು ಪ್ರಮಾಣ ಸಿದ್ಧವಾಗಿದ್ದರೆ ಮಾತ್ರ ಸಂದಿಗ್ಧ ಪ್ರಮಾಣಗಳನ್ನು ತಿರುಗಿಸಬಹುದು. ಆದರೆ ಐಕ್ಯವು ಸಿದ್ಧವಾಗಿಲ್ಲ. 'ಅನಾದಿ ಮಾಯಯಾ ಸುಪ್ತಃ ಯದಾ ಜೀವಃ ಪ್ರಬುಧ್ಯತೆ' ಈ ಶ್ರುತಿಯಲ್ಲಿರುವ ಜೀವಶಬ್ದಕ್ಕೆ ಬ್ರಹ್ಮ ಎಂದು ಅರ್ಥವಲ್ಲ. ಜೀವ ಎಂದೇ ಅರ್ಥ. 'ಪ್ರಬುಧ್ಯತೆ' ಪದದಿಂದ ಹೇಳಲ್ಪಡುವ ಪ್ರಮಾತೃವು ಜೀವನೇ. ಈ ಶ್ರುತಿಯಲ್ಲಿ, ಅಥವಾ ಇಂತಹ ಬೇರೆ ಶ್ರುತಿಗಳಲ್ಲಿ ಜೀವ-ಬ್ರಹ್ಮರ ಭೇದವು ಪ್ರತಿಪಾದ್ಯವಾಗಿಲ್ಲದಿದ್ದರೆ ಎಲ್ಲವೂ- ಪ್ರಮಾಣಗಳ ವಿವೇಚನೆ, ಇದು ಸಾಧಕ, ಇದು ಬಾಧಕ- ಈ ವ್ಯವಸ್ಥೆಗಳೆಲ್ಲವೂ ಅಸ್ತವ್ಯಸ್ತವಾಗುವುದು.

**ಭಾವವಿಲಾಸಿನೀ–** ಜೀವಬ್ರಹ್ಮಣೋರೈಕ್ಯೇನ ಸಮಾಧಾಸ್ಯಾಮೀತ್ಯಾಶಾಂ ನಿರಾಕರ್ತುಂ ಪ್ರಾಗುಕ್ತದೂಷಣಗಣಂ ಬುದ್ಧಾವಾರೋಹಾಯ ಸ್ಮಾರಯತಿ– **ಐಕ್ಯೇನೇತಿ** ॥ ಅನ್ಯಥೀಕರಣಂ ಜೀವ ವಿಷಯಾಣಾಂ ಬ್ರಹ್ಮವಿಷಯತ್ವಕರಣಮ್ । ಹೀತ್ಯನೇನ ಪರಮತೇ ಕರ್ತೃಕರ್ಮಭಾವ- ವಿರೋಧಾಂಗೀಕಾರಾತ್ ಪ್ರಮೇಯೇ ಬ್ರಹ್ಮಣಿ ಪ್ರಮಾತೃತ್ವಂ ನ ಜೀವೈಕ್ಯೇನಾಪಿ ನೇತುಂ ಶಕ್ಯತ ಇತಿ ಸೂಚಯತಿ ॥ ೧೮೩ ॥

**ವಿವರಣೆ– ಪ್ರಶ್ನೆ:** 'ಜೀವಬ್ರಹ್ಮರಿಗೆ ಐಕ್ಯವಿರುವುದರಿಂದ ಜೀವನಲ್ಲಿ ಅಜ್ಞಾನಸಾಧಕಗಳಾದ ಪ್ರಮಾಣಗಳಿಂದ ಬ್ರಹ್ಮಾಶ್ರಿತವಾದ ಅಜ್ಞಾನವೇ ಸಿದ್ಧವಾಗುತ್ತದೆ'?

**ಉತ್ತರ**: ಜೀವಬ್ರಹ್ಮರ ಐಕ್ಯವು ಸಿದ್ಧವಾಗಿಲ್ಲ (ಶ್ಲೋಕ 74, 75). ಆದ್ದರಿಂದ ಪ್ರಮಾಣಗಳಿಗೆ ಬೇರೆ ಅರ್ಥಗಳನ್ನು ಹೇಳಲಾಗದು. ಇದಲ್ಲದೆ, ಮಾಂಡೂಕ್ಯೋಪನಿಷತ್ 2-8 ರಲ್ಲಿ ಪ್ರಸ್ತುತನಾದ ಜೀವನು ಪ್ರಮಾತೃ. ಇದೇ ವಾಕ್ಯದಲ್ಲಿ ಪ್ರಸ್ತುತನಾದ ಆತ್ಮನು ಪ್ರಮೇಯ. ಅದ್ವೈತದರ್ಶನದಲ್ಲಿ ಕರ್ತೃ (ಪ್ರಮಾತೃ) ಮತ್ತು ಕರ್ಮ (ಪ್ರಮೇಯ) ಗಳು ಬೇರೆ ಬೇರೆ. ಇಷ್ಟು ಸ್ಪಷ್ಟವಾಗಿರುವ ಜೀವ-ಬ್ರಹ್ಮ ಭೇದವನ್ನು ಪರಿಗಣಿಸದಿದ್ದರೆ ಪ್ರಮಾಣಗಳು, ಸಾಧಕ-ಬಾಧಕಗಳು- ಈ ವ್ಯವಸ್ಥೆಯೇ ಇಲ್ಲವಾದೀತು; ಜ್ಞಾನಮಾರ್ಗವು ಅಸ್ತವ್ಯಸ್ತವಾದೀತು.

ಅಜ್ಞಾನಂ ಜ್ಞಾತೃಪುಂನಿಷ್ಠಂ ಜ್ಞಾನೇನೈಕಾಶ್ರಯತ್ವತಃ ।
ಸುಖವದ್ ದುಃಖವಚ್ಚೇತಿ ಹ್ಯನುಮಾಽಪ್ಯಸ್ತ್ಯಬಾಧಿತಾ ॥ ೧೮೪ ॥

**ಅರ್ಥ-** ಅಜ್ಞಾನಂ = ಅಜ್ಞಾನವು, ಜ್ಞಾತೃಪುಂನಿಷ್ಠಂ = ಜ್ಞಾತೃಪುರುಷನಲ್ಲಿ ಇದೆ. ಜ್ಞಾನೇನ = ಜ್ಞಾನದಿಂದ, ಏಕಾಶ್ರಯತ್ವತಃ = ಸಮಾನ ಆಶ್ರಯವುಳ್ಳದ್ದಾದುದರಿಂದ, ಸುಖವತ್ = ಸುಖದಂತೆ, ದುಃಖವಚ್ಚ = ಮತ್ತು ದುಃಖದಂತೆ, ಇತಿ = ಈ ರೀತಿಯ, ಅಬಾಧಿತಾ = ಬಾಧವಿಲ್ಲದ, ಅನುಮಾ ಅಪಿ = ಅನುಮಾನವೂ, ಅಸ್ತಿ ಹಿ = ಇದೆಯಷ್ಟೇ.

**ಅನುವಾದ-** ಅಜ್ಞಾನವು ಜೀವನಿಷ್ಠ ಎಂಬ ವಿಷಯದಲ್ಲಿ ಅನುಮಾನಪ್ರಮಾಣವೂ ಇದೆ. ''ವಿವಾದಪದಮ್ ಅಜ್ಞಾನಂ ಜ್ಞಾತೃಪುಂನಿಷ್ಠಂ, ಜ್ಞಾನ-ಸಮಾನಾಶ್ರಯತ್ವಾತ್, ಸುಖವತ್, ದುಃಖವದ್ ವಾ''. ವಿವಾದಕ್ಕೆ ವಿಷಯವಾದ ಅಜ್ಞಾನವು ಜ್ಞಾತೃಪುರುಷನಲ್ಲೇ ಇರುತ್ತದೆ. ಜ್ಞಾನಾಶ್ರಯವೇ ಅದಕ್ಕೆ ಆಶ್ರಯವಾದ್ದರಿಂದ. ಸುಖ ಮತ್ತು ದುಃಖದಂತೆ. ಸುಖ ಮತ್ತು ದುಃಖಗಳು ಸಮಾನಾಶ್ರಯಗಳು. ಈ ಯುಕ್ತಿಯು ಅಬಾಧಿತ. ಆದ್ದರಿಂದ ಇದು ಅಜ್ಞಾನವನ್ನು ಜೀವನಿಷ್ಠ ಎಂದು ಸಾಧಿಸುತ್ತದೆ.

**ಭಾವವಿಲಾಸಿನೀ**– ಅಜ್ಞಾನಸ್ಯ ಜೀವಾಶ್ರಿತತ್ವೇ ಪ್ರತ್ಯಕ್ಷಂ ಶ್ರುತಿಂ ಚೋಕ್ತ್ವಾಽನುಮಾನಮಪ್ಯಾಹ– ಅಜ್ಞಾನಮಿತಿ ॥ ವಿವಾದಪದಮಜ್ಞಾನಂ ಜ್ಞಾತೃಪುಂನಿಷ್ಠಂ ಜ್ಞಾನಸಮಾನಾಶ್ರಯತ್ವಾತ್ । ಸುಖವದ್ ದುಃಖವದ್ವಾ' ಇತಿ ಪ್ರಯೋಗೋ ದ್ರಷ್ಟವ್ಯಃ ॥ ೧೮೪ ॥

**ವಿವರಣೆ-** ಅಜ್ಞಾನವು ಜ್ಞಾತೃಪುರುಷನಲ್ಲೇ ಇರುತ್ತದೆ. ಈ ವಿಷಯದಲ್ಲಿ ಪ್ರತ್ಯಕ್ಷ ಮತ್ತು ಶ್ರುತಿಗಳನ್ನು ಹಿಂದಿನ ಶ್ಲೋಕದಲ್ಲಿ (ಶ್ಲೋಕ 182) ಹೇಳಿದ್ದಾರೆ. ಈ ಶ್ಲೋಕದಲ್ಲಿ ಇದೇ ವಿಷಯದಲ್ಲಿ ಅನುಮಾನಪ್ರಮಾಣವನ್ನು ಹೇಳುತ್ತಾರೆ.

ಮೃದಾದಿಕಮುಪಾದಾನಂ ಕಾರ್ಯೇಕಾರ್ಯೇ ಚ ವಿದ್ಯತೇ ।
ಅತೋ ಜಗತ್ಸರ್ಜನಾರ್ಥಮಪಿ ನಾಜ್ಞಾನಮಿಷ್ಯತೇ ॥ ೧೮೫ ॥

**ಅರ್ಥ-** ಕಾರ್ಯೇಕಾರ್ಯೇ ಚ = ಪ್ರತಿಕಾರ್ಯಕ್ಕೂ, ಮೃದಾದಿಕಂ = ಮಣ್ಣು ಮೂಲಪ್ರಕೃತಿ ಮುಂತಾದ, ಉಪಾದಾನಂ = ಉಪಾದಾನಕಾರಣವು, ವಿದ್ಯತೇ= ಇದೆ. ಅತಃ = ಆದ್ದರಿಂದ, ಜಗತ್ಸರ್ಜನಾರ್ಥಮ್ ಅಪಿ = ಜಗತ್ತಿನ ಸೃಷ್ಟಿಗಾಗಿಯೂ, ಅಜ್ಞಾನಂ = ಅಜ್ಞಾನವು, ನ ಇಷ್ಯತೇ = ಅಪೇಕ್ಷಿತವಾಗಿಲ್ಲ.

**ಅನುವಾದ-** ಉತ್ಪನ್ನವಾಗುವ ಪ್ರತಿಯೊಂದು ವಸ್ತುವಿಗೂ ಮಣ್ಣು ಮೊದಲಾದ ಉಪಾದಾನವು ಇದ್ದೇ ಇದೆ. ಆದ್ದರಿಂದ ಜಗತ್‌ಸೃಷ್ಟಿಗಾಗಿ ಅಜ್ಞಾನವು ಬೇಕಿಲ್ಲ.

**ಭಾವವಿಲಾಸಿನೀ–** ಜಗದುಪಾದಾನತಯಾ ಬ್ರಹ್ಮಣ್ಯಜ್ಞಾನಸಿದ್ಧಿರಿತಿ ಮತಮಪಾಕರೋತಿ– **ಮೃದಾದಿಕಮಿತಿ** ॥ ಆದಿಪದೇನ ಮೂಲಪ್ರಕೃತೇರ್ಗ್ರಹಣಮ್ । ಅತಃ ಆದಿಸೃಷ್ಟೌ ಮೂಲಪ್ರಕೃತೇ-ರವಾಂತರಸೃಷ್ಟೌ ಚ ಮೃದಾದೇರುಪಾದಾನಸ್ಯ ವಿದ್ಯಮಾನತ್ವಾತ್ ॥ ೧೮೫ ॥

**ವಿವರಣೆ-** 'ಪರಬ್ರಹ್ಮನಿಂದ ಜಗತ್ತಿನ ಸೃಷ್ಟಿಯಾಗಲು ಉಪಾದಾನಕಾರಣವು ಬೇಕು. ಅಜ್ಞಾನವೇ ಉಪಾದಾನಕಾರಣ. ಆದ್ದರಿಂದ ಬ್ರಹ್ಮನಲ್ಲಿ ಅಜ್ಞಾನವು ಇರಲೇಬೇಕು'. ಅದ್ವೈತ ಮತದ ಈ ವಿಚಾರವನ್ನು ಇಲ್ಲಿ ನಿರಾಕರಿಸಲಾಗಿದೆ. ಜಗತ್ತಿನ ಸೃಷ್ಟಿಯಲ್ಲಿ ಅಜ್ಞಾನವು ಉಪಾದಾನಕಾರಣವಾಗುವ ಅವಶ್ಯಕತೆಯಿಲ್ಲ. ಏಕೆಂದರೆ ಆದಿಸೃಷ್ಟಿಯಲ್ಲಿ ಮೂಲಪ್ರಕೃತಿಯು, ಮಧ್ಯಕಾಲದ ನಾನಾವಸ್ತುಗಳ ಸೃಷ್ಟಿ (ಅವಾಂತರಸೃಷ್ಟಿ) ಯಲ್ಲಿ ಮಣ್ಣು ಮುಂತಾದ ವಸ್ತುಗಳು ಉಪಾದಾನಕಾರಣಗಳಾಗಿವೆ. ಇದು ಸರ್ವವಿದಿತ.

**ಮಾಯೀ ಮಾಯಾಧೀಶ್ವರತ್ವಾತ್ ಗೋಮಾನ್ ಗೋಪಾಲಕೋ ಯಥಾ ।**
**ತಸ್ಮಾದ್ ಬ್ರಹ್ಮಾಶ್ರಿತಾಜ್ಞಾನಮಜ್ಞಾನಾದೇವ ವರ್ಣಿತಮ್ ॥ ೧೮೬ ॥**

**ಅರ್ಥ-** ಮಾಯಾಧೀಶ್ವರತ್ವಾತ್= ಮಾಯೆಗೆ= ಪ್ರಕೃತಿಗೆ, ಜೀವರಲ್ಲಿರುವ ಅಜ್ಞಾನಕ್ಕೆ, ನಿಯಾಮಕನಾದ್ದರಿಂದ (ಮಹೇಶ್ವರನು) ಮಾಯೀ= ಮಾಯೀ (ಎಂದು ಹೇಳಲ್ಪಟ್ಟಿದ್ದಾನೆ), ಗೋಪಾಲಕಃ= ಗೋವುಗಳ ಪಾಲಕನು, ಗೋಮಾನ್ ಯಥಾ= ಗೋಮಾನ್ (ಗೋವುಗಳ ಯಜಮಾನ) ಎಂದು ಹೇಳಲ್ಪಡುವಂತೆ, ತಸ್ಮಾತ್= ಆದ್ದರಿಂದ, ಬ್ರಹ್ಮಾಶ್ರಿತಾಜ್ಞಾನಂ= ಬ್ರಹ್ಮಾಶ್ರಿತ ಅಜ್ಞಾನವು (ಬ್ರಹ್ಮನಲ್ಲಿ ಅಜ್ಞಾನವಿದೆ ಎಂಬ ವಿಚಾರವು) ಅಜ್ಞಾನಾದೇವ= ಕೇವಲ ಅಜ್ಞಾನದಿಂದ, ವರ್ಣಿತಮ್= ವರ್ಣಿಸಲ್ಪಟ್ಟಿದೆ.

**ಅನುವಾದ- ಪರಮಾತ್ಮನು ಮಾಯೆಗೆ= ಅಜ್ಞಾನಕ್ಕೆ ಅಧೀಶ್ವರ. ಆದ್ದರಿಂದ ಅವನನ್ನು 'ಮಾಯೀ' ಎಂದು ಶ್ರುತಿಯು ಹೇಳಿದೆ. ಗೋಪಾಲಕನನ್ನು 'ಗೊಮಾನ್' ಎಂದು ಹೇಳುವಂತೆ. ಆದ್ದರಿಂದ 'ಅಜ್ಞಾನಕ್ಕೆ ಬ್ರಹ್ಮನು ಆಶ್ರಯ' ಎಂಬ ವರ್ಣನೆಯು ಕೇವಲ ಅಜ್ಞಾನದಿಂದ ಆಗಿದೆ.**

**ಭಾವವಿಲಾಸಿನೀ–** ಪ್ರಾಕ್ 'ಮಾಯಿನಂ ತು ಮಹೇಶ್ವರಮ್' ಇತಿ ಶ್ರೌತಮಾಯಾಪದಸ್ಯ ಪ್ರಕೃತಿಪರತೋಕ್ತಾ । ಇದಾನೀಂ ಮಾಯಾಪರತ್ವೇಽಪಿ ನಾಸ್ಮಾಕಮನಿಷ್ಟಮಿತಿ ದೃಷ್ಟಾಂತ-

**ಮುಖೇನಾಹ– ಮಾಯೀತಿ** ॥ ಉಪಸಂಹರತಿ– **ತಸ್ಮಾದಿತಿ** ॥ ಅಜ್ಞಾನಾತ್ ಪೂರ್ವೋತ್ತ-ರಾಪರಿಜ್ಞಾನಾತ್ ॥ ೧೮೬ ॥

**ವಿವರಣೆ** – ಪ್ರಶ್ನೆ: 'ಮಾಯಾಂ ತು ಪ್ರಕೃತಿಂ ವಿದ್ಯಾತ್ ಮಾಯಿನಂ ತು ಮಹೇಶ್ವರಮ್' ಈ ಶ್ರುತಿಯಲ್ಲಿ ಈಶ್ವರನನ್ನು 'ಮಾಯೀ' ಎಂದು ಹೇಳಲಾಗಿದೆ. 'ಮಾಯಾ' ಎಂದರೆ ಅಜ್ಞಾನ. ಆದ್ದರಿಂದ ಬ್ರಹ್ಮನಲ್ಲಿ ಅಜ್ಞಾನವಿಲ್ಲ ಎಂದು ಹೇಳಲಾಗದು?

ಈ ವಿಚಾರವು ಸರಿಯಲ್ಲ. ಗೋಪಾಲಕನನ್ನು 'ಗೋಮಾನ್' ಎಂದು ಹೇಳುವ ರೂಢಿಯಿದೆ. ಹೀಗೆಯೇ ಮಾಯೆಯ= ಅಜ್ಞಾನದ ನಿಯಾಮಕನನ್ನು, 'ಮಾಯೀ' ಎಂದು ಶ್ರುತಿಯು ಹೇಳಿದೆ. ಬ್ರಹ್ಮನಲ್ಲೇ ಅಜ್ಞಾನವಿದೆ ಎಂದು ಶ್ರುತಿಯ ಅರ್ಥವಲ್ಲ. ಭಾಷೆಯ, ಪ್ರಮೇಯಗಳ ಪರಿಜ್ಞಾನವಿಲ್ಲದವರು ಮಾತ್ರ ಬ್ರಹ್ಮನಲ್ಲೇ ಅಜ್ಞಾನವಿದೆ ಎಂದು ಹೇಳುತ್ತಾರೆ.

**ಜೀವಸ್ತು ಮಾಯಾಸುಪ್ತತ್ವಾನ್ನ ಸ್ವಾನಂದಾದಿ ವೀಕ್ಷತೇ ।**
**ಮಾಯಾಽಭಾವೇ ಸತೀಕ್ಷೇತ ತಸ್ಮಾಜ್ಜೀವಾಶ್ರಿತೈವ ಸಾ ॥ ೧೮೭ ॥**

**ಅರ್ಥ**- ಜೀವಃ= ಜೀವನಾದರೂ, ಮಾಯಾಸುಪ್ತತ್ವಾತ್ = ಮಾಯೆಯ ಕಾರಣದಿಂದ ನಿದ್ರಿಸಿದವನಂತೆ ಇರುವುದರಿಂದ, ಸ್ವಾನಂದಾದಿ = ತನ್ನ ಸ್ವರೂಪವೇ ಆದ ಆನಂದಾದಿಗಳನ್ನು ನ ವೀಕ್ಷತೇ = ತಿಳಿಯುವುದಿಲ್ಲ. ಮಾಯಾಭಾವೇ ಸತಿ = ಮಾಯೆಯು ಇಲ್ಲವಾದಾಗ, ಈಕ್ಷೇತ = ಆನಂದಾದಿಗಳ ಅನುಭವವನ್ನು ಪಡೆಯುವನು. ತಸ್ಮಾತ್ = ಆದ್ದರಿಂದ, ಸಾ = ಆ ಮಾಯೆಯು (ಅಜ್ಞಾನವು) ಜೀವಾಶ್ರಿತಾ ಏವ = ಜೀವನಲ್ಲೇ ಇದೆ.

**ಅನುವಾದ**- ಜೀವನು ಸಂಸಾರಾವಸ್ಥೆಯಲ್ಲಿ ಮಾಯೆಯಿಂದ ಆವೃತನಾಗಿ ಸುಪ್ತನಂತಿರುವುದರಿಂದ ಅವನಿಗೆ ತನ್ನ ಸ್ವರೂಪವೇ ಆದ ಆನಂದಾದಿಗಳ ಅನುಭವವು ಆಗುವುದಿಲ್ಲ. ಆ ಮಾಯೆಯ ಪರಿಹಾರವಾದಾಗ ಅವನು ತನ್ನ ಸ್ವರೂಪವೇ ಆದ ಆನಂದಾದಿಗಳನ್ನು ಅನುಭವಿಸುತ್ತಾನೆ. ಆದ್ದರಿಂದ ಮಾಯೆಯು ಜೀವನನ್ನೇ ಆಶ್ರಯಿಸಿದೆ. ಮಾಯಾ= (೧) ಈಶ್ವರೇಚ್ಛಾ. ಇದು ಜೀವಾತ್ಮರ ಸ್ವರೂಪಾನಂದಾನುಭವಕ್ಕೆ ಅಡ್ಡಿ ಮಾಡುತ್ತದೆ. ಆದ್ದರಿಂದ ಆವರಣ. ಇದು ಮುಖ್ಯ ಆವರಣ. (೨) ಪ್ರಕೃತಿ. ಅವಿದ್ಯೆ ಎಂದು ಇನ್ನೊಂದು ಹೆಸರು. ಇದೂ ಕೂಡ ಸ್ವರೂಪಾನಂದಾನುಭವಕ್ಕೆ ಅಡ್ಡಿ ಮಾಡುತ್ತದೆ. ಆದ್ದರಿಂದ ಆವರಣ. ಇದು ಅಮುಖ್ಯ ಆವರಣ.

**ಭಾವವಿಲಾಸಿನೀ**– ಮಾಯಾಯಾಃ ಜೀವಸ್ವರೂಪಭೂತಾನಂದಾದ್ಯನುಭವ ಪ್ರತಿಬಂಧಕತ್ವ-ಘಟನಾಯ ಜೀವಾಶ್ರಿತತ್ವಮೇವ ಯುಕ್ತಮಿತ್ಯಾಹ– **ಜೀವ ಇತಿ** ॥ ತಸ್ಮಾಜ್ಜೀವಾ- ನಂದಾನನು-ಭವಸ್ಯಾನ್ಯಥಾನುಪಪತ್ತೇಃ । ಸಾ ಮಾಯಾ । ಅನೇನಾಜ್ಞಾನಸ್ಯ ಜೀವಾಶ್ರಿತತ್ವೇಽರ್ಥಾ-ಪತ್ತಿರಪ್ಯುಕ್ತೇತಿ ಜ್ಞಾತವ್ಯಮ್ ॥ ೧೮೭ ॥

**ವಿವರಣೆ** – ಅಜ್ಞಾನವು ಜೀವಾಶ್ರಿತ ಎಂದು ಅರ್ಥಾಪತ್ತಿಯಿಂದಲೂ ತಿಳಿಯುತ್ತದೆ:- ಮಾಯೆಯು ಜೀವಾತ್ಮನಿಗೆ ಆವರಣವಾಗದಿದ್ದರೆ, ಅವನ ಸ್ವರೂಪವೇ ಆದ ಆನಂದಾದಿಗಳ ಅನನುಭವಕ್ಕೆ ಕಾರಣವೇ ಇರುವುದಿಲ್ಲ. ಆದ್ದರಿಂದ ಮಾಯೆಯು ಜೀವಾತ್ಮನಿಗೆ ಆವರಣವೇ. ಪ್ರಕೃತಿ ಮತ್ತು ಈಶ್ವರಾಚಿಂತ್ಯಶಕ್ತಿಗಳು ಜೀವನಿಗೆ ಆವರಣಗಳು ಎಂದು ನ್ಯಾಯಸುಧಾದಲ್ಲಿ ಹೇಳಿದ್ದಾರೆ.

'ಅತಃ ಪರಮೇಶ್ವರ ಏವ ಸತ್ತ್ವಾದಿಗುಣಮಯ್ಯಾ, ವಿದ್ಯಾವಿರೋಧಿತ್ವೇನ ಅವಿದ್ಯಯಾ ಸ್ವಾಧೀನಯಾ ಪ್ರಕೃತ್ಯಾ, ಅಚಿಂತ್ಯಾದ್ಭುತಯಾ ಸ್ವಶಕ್ತ್ಯಾ ಚ ಜೀವಸ್ಯ ಸ್ವಪ್ರಕಾಶಮಪಿ ಸ್ವರೂಪಚೈತನ್ಯಮಾಚ್ಛಾದಯತಿ' - ನ್ಯಾಯಸುಧಾ, ಜಿಜ್ಞಾಸಾಧಿಕರಣ.

ಜೀವಾಶ್ರಿತವಾದ ಅಜ್ಞಾನವು ಜೀವನ ಸ್ವರೂಪವನ್ನು ಮರೆಮಾಡುವುದಾದರೆ ಜೀವನಿಗೆ 'ಅಹಂ' ಎಂದು ತನ್ನ ಸ್ವರೂಪದ ಅರಿವು ಹೇಗೆ ಉಂಟಾಗುತ್ತದೆ? ಈ ಶ್ಲೋಕವು ಉತ್ತರವನ್ನು ಹೇಳುತ್ತದೆ-

ಜೀವಸ್ವರೂಪಾನಂದಾದೀನಾಚ್ಛಾದಯತಿ ಕೇವಲಮ್ ।
ಅಹಮಿತ್ಯೇವ ತದ್ರೂಪಜ್ಞಾನೇ ನ ಪ್ರತಿಬಂಧಿಕಾ ।
ಇಮಂ ತು ನ ದಹೇತ್ಯುಕ್ತಂ ಮಂತ್ರಶಕ್ತ್ಯಾ ಯಥಾಽನಲಃ ॥ ೧೮೮ ॥

**ಅರ್ಥ**- (ಅಜ್ಞಾನವು) ಜೀವಸ್ವರೂಪಾನಂದಾದೀನ್ ಕೇವಲಂ= ಜೀವನ ಸ್ವರೂಪವೇ ಆಗಿರುವ ಆನಂದ ಮುಂತಾದ ಗುಣಗಳನ್ನು ಮಾತ್ರ, ಆಚ್ಛಾದಯತಿ = ಮರೆಮಾಡುತ್ತದೆ. ಅಹಮಿತ್ಯೇವ = ನಾನು ಎಂದಿಷ್ಟೇ, ತದ್ರೂಪಜ್ಞಾನೇ = ಜೀವನ ಸ್ವರೂಪಜ್ಞಾನವಿಷಯದಲ್ಲಿ ನ ಪ್ರತಿಬಂಧಿಕಾ= ಪ್ರತಿಬಂಧಕವಲ್ಲ. ಮಂತ್ರಶಕ್ತ್ಯಾ = ಮಂತ್ರದ ಸಾಮರ್ಥ್ಯದಿಂದ, (ಪ್ರತಿಬದ್ಧಃ = ಪ್ರತಿಬದ್ಧವಾದ) ಅನಲಃ = ಬೆಂಕಿಯು, ಇಮಂ ತು ನ ದಹ= ಇವನನ್ನಷ್ಟೇ (ಮಂತ್ರಿತಪುರುಷನೊಬ್ಬನನ್ನಷ್ಟೇ) ದಹಿಸಬೇಡ, ಇತ್ಯುಕ್ತಂ= ಹೀಗೆ ಹೇಳಲ್ಪಟ್ಟವನನ್ನು ಮಾತ್ರ, ಯಥಾ ನ ದಹತಿ = ದಹಿಸದಿರುವಂತೆ.

**ಅನುವಾದ**- ಅಗ್ನಿಯು ಮಂತ್ರಶಕ್ತಿಯಿಂದಾಗಿ ಮಾಂತ್ರಿಕನು ಹೇಳುವ ಮಂತ್ರಿತ ಮನುಷ್ಯನೊಬ್ಬನನ್ನು ಸುಡುವುದಿಲ್ಲ; ಇತರರೆಲ್ಲರನ್ನೂ ಸುಡುತ್ತದೆ. ಹಾಗೆಯೇ ಈ ಮಾಯೆ (ಅವಿದ್ಯೆ)ಯು ಜೀವನ ಜ್ಞಾನಕ್ಕೆ ಪ್ರತಿಬಂಧಕವಾಗದೇ ಅವನ ಸ್ವರೂಪವೇ ಆದ ಆನಂದಾದಿಗಳನ್ನಷ್ಟೇ ಮರೆ ಮಾಡುತ್ತದೆ.

**ಭಾವವಿಲಾಸಿನೀ**– ಅಜ್ಞಾನಸ್ಯ ಜೀವರೂಪಾಚ್ಛಾದಕತ್ವೇಽಹಮಿತಿ ತದುಲ್ಲೇಖಃ ಕಥಮ್? ಇತ್ಯತ ಆಹ– ಜೀವೇತಿ ॥ ತದ್ರೂಪಜ್ಞಾನೇ ತತ್ಸ್ವರೂಪಜ್ಞಾನೇ ಪ್ರತಿಬಂಧಿಕಾ ನೈವೇತಿ ಸಂಬಂಧಃ । ತತ್ರ ದೃಷ್ಟಾಂತಮಾಹ– ಇಮಮಿತಿ ॥ ಯಥಾ ಮಂತ್ರಶಕ್ತ್ಯಾ ಪ್ರತಿಬದ್ಧೋಽನಲಃ ಮಂತ್ರಿತಮೇಕಂ ಪುರುಷಂ ವಿಹಾಯಾನ್ಯಂ ದಹತಿ । ಏವಮಜ್ಞಾನಮಪ್ಯಾನಂದಾನುಭವಪ್ರತಿಬಂಧಕಮಪ್ಯಹಮಿತಿ ಸ್ವರೂಪಮಾತ್ರಾನುಭವೇ ನ ಪ್ರತಿಬಂಧಕಮಿತಿ ಭಾವಃ ॥೧೮೮ ॥

**ಸಾ ಸತ್ಯಾ ಪ್ರಕೃತೇರಂಶಭೂತಾ ಜೀವೇಷು ತಿಷ್ಠತಿ ॥ ೧೮೯ ॥**

**ಅರ್ಥ-** ಪ್ರಕೃತೇಃ = ಪ್ರಕೃತಿಯ, ಅಂಶಭೂತಾ = ಅಂಶವಾದ (ಆದ್ದರಿಂದಲೇ), ಸತ್ಯಾ= ಸತ್ಯವಾದ, ಸಾ= ಆ ಮಾಯೆಯು, ಜೀವೇಷು = ಜೀವರಲ್ಲಿ ತಿಷ್ಠತಿ = ಇರುತ್ತದೆ.

**ಅನುವಾದ- ಜೀವರಿಗೆ ಆವರಣವಾದ ಈ ಮಾಯೆಯು ಪ್ರಕೃತಿಯ ಅಂಶ. ಆದ್ದರಿಂದ ಸತ್ಯ. ಇದು ಜೀವರಲ್ಲಿ ಇರುತ್ತದೆ.**

**ಭಾವವಿಲಾಸಿನೀ–** ಸಾ ಜೀವಾಚ್ಛಾದಿಕಾ ಪ್ರಕೃತೇರಂಶಭೂತಾ ಮಾಯಾ ಸತ್ಯಾ । ಶಿಲಾ ಕಣಾದಾವರೋಪಿತಮಣ್ಯಾದೇರ್ದಾಹಪ್ರತಿಬಂಧಕತ್ವಾದರ್ಶನೇನ । ಸೋಽಸತ್ಯಃ ಪ್ರತಿಬಂಧಕತ್ವಾದೇವಾಬಾಧ್ಯಾ । ಪ್ರಕೃತ್ಯಂಶತ್ವಮಪಿ ಸತ್ವೇ ಹೇತುಃ । ಸರ್ವಪ್ರಲಯೇಽಪ್ಯುರ್ವರಿತಾ ಹಿ ಪ್ರಕೃತಿರಿತ್ಯುಚ್ಯತೇ । ತಸ್ಯಾಸ್ತು ಕಥಂ ಮಿಥ್ಯಾತ್ವಮ್? ಇತಿ ಭಾವಃ ॥ ೧೮೯ ॥

**ವಿವರಣೆ-** ಹಿಂದೆ ಹೇಳಿದಂತೆ ಜೀವನ ಸ್ವರೂಪವೇ ಆದ ಆನಂದಾದಿಗಳನ್ನು ಆಚ್ಛಾದಿಸುವ ಸಾಮರ್ಥ್ಯವಿರುವ ಮಾಯೆಯು ಸತ್ಯವೇ ಆಗಿದೆ. ಇದಕ್ಕೆ ಎರಡು ಕಾರಣಗಳನ್ನು ಶ್ರೀವಾದಿರಾಜರು ನೀಡಿದ್ದಾರೆಂದು ಶ್ರೀಸುರೋತ್ತಮತೀರ್ಥರು ಹೇಳುವರು.

(1) ಯಾವುದು ಪ್ರತಿಬಂಧಕವಲ್ಲವೋ ಅದು ಅಸತ್. ಉದಾಹರಣೆ : ಬಿಳಿಬಣ್ಣದ ಕಲ್ಲಿನ ತುಣುಕುಗಳನ್ನು ಮಣಿಯೆಂದು ಭ್ರಮಿಸಿದಾಗ ಆ ಆರೋಪಿತವಾದ ಮಣಿಗೆ ನಿಜವಾದ ಮಣಿಗೆ ಇರುವಂತೆ ದಾಹಪ್ರತಿಬಂಧಕತ್ವವು ಇರುವುದಿಲ್ಲ. ಈ ಆರೋಪಿತ ಮಣಿಯು ಅಸತ್. ಆದರೆ ಮಾಯೆಯು ಜೀವಸ್ವರೂಪವೇ ಆದ ಆನಂದಾದಿಗಳ ಅನುಭವಕ್ಕೆ ಪ್ರತಿಬಂಧಕ. ಆದ್ದರಿಂದ ಇದು ಸತ್ಯ.

(2) ಅದು ನಿತ್ಯವಾದ ಪ್ರಕೃತಿಯ ಅಂಶವಾಗಿರುವುದರಿಂದ ಸತ್ಯ. ಮಹಾಪ್ರಲಯಕಾಲದಲ್ಲಿಯೂ ಪ್ರಕೃತಿಯು ಉಳಿಯುತ್ತದೆ, ನಾಶವಾಗದು. ಅಂತಹ ಪ್ರಕೃತಿಯದ್ದೇ ಒಂದಂಶವಾಗಿರುವ ಈ ಜೀವಾಚ್ಛಾದಿಕವಾದ ಮಾಯೆಯು ಹೇಗೆ ಅಸತ್ ಆದೀತು?

ನಾರಾಯಣಪ್ರಸಾದೇನ ಕಾಚಿದಕ್ಷಿಮಲೋಪಮಾ ।
ನಶ್ಯೇದ್ ವಸ್ತ್ರಾವೃತಿಪ್ರಾಯಾ ಕಾಚಿಚ್ಛಾಪಸರೇತ್ ತತಃ ॥ ೧೯೦ ॥

**ಅರ್ಥ-** ಅಕ್ಷಿಮಲೋಪಮಾ = ಕಣ್ಣಿನ ಕೊಳೆಯಂತಿರುವ ಕಾಚಿತ್= ಒಂದು ಆವರಣವು, ನಾರಾಯಣಪ್ರಸಾದೇನ = ವಿಷ್ಣುವಿನ ಅನುಗ್ರಹದಿಂದ, ನಶ್ಯೇತ್ = ನಾಶವಾಗುತ್ತದೆ. ವಸ್ತ್ರಾವೃತಿಪ್ರಾಯಾ = ಬಟ್ಟೆಯ ಪರದೆಯಂತೆ ಇರುವ, ಕಾಚಿತ್= ಮತ್ತೊಂದು ಆವರಣವು, ತತಃ = ಜೀವನ ಕಣ್ಣಿನಿಂದ, ಅಪಸರೇತ್ = ಸರಿಯುತ್ತದೆ.

**ಅನುವಾದ-** ಎರಡು ಆವರಣಗಳು. ಒಂದು ಕಣ್ಣಿನ ಕೊಳೆಯಂತೆ. ಎರಡನೆಯದು ವಸ್ತ್ರದ ಪರದೆಯಂತೆ. ನಾರಾಯಣನ ಅನುಗ್ರಹದಿಂದ ಮೊದಲನೆಯದು ನಾಶವಾಗುತ್ತದೆ. ಎರಡನೆಯದು ಜೀವನಿಂದ ದೂರಸರಿಯುತ್ತದೆ.

**ಭಾವವಿಲಾಸಿನೀ–** ಜೀವಾಚ್ಛಾದಿಕಾ ಪರಮಾಚ್ಛಾದಿಕೇತಿ ದ್ವಿವಿಧಾ ಮಾಯಾ । ತತ್ರೈಕಾ ನಶ್ಯೇತ್ । ಅಪರಾ ಚಾಪಸರೇದಿತ್ಯೇತದ್ ದೃಷ್ಟಾಂತಮುಖೇನ ಘಟಯತಿ– **ನಾರಾಯಣೇತಿ** ॥ ಕಾಚಿಜ್ಜೀವಾ-ಚ್ಛಾದಿಕಾ ಅಕ್ಷಿಮಲೋಪಮಾ । ಯಥಾ ಹಿ ಮಲಂ ಕಾಚಾದಿಕಂ ನಶ್ಯತ್ಯೇವ । ತಥೇಯಮಪಿ ನಶ್ಯೇದಿತಿ ಯೋಜನಾ । ಕಾಚಿತ್ ಪರಮಾಚ್ಛಾದಿಕಾ । ವಸ್ತ್ರಾವೃತ್ತಿಪ್ರಾಯಾ ಮುಖ-ಬದ್ಧವಸ್ತ್ರರೂಪನಯನಾವೃತಿಪ್ರಾಯೇತ್ಯರ್ಥಃ । ತತಃ ಜೀವನಯನಾತ್ ಅಪಸರೇದೇವ । ನತು ನಶ್ಯೇತ್ । ಯಥಾ ನಯನಾವರಣಭೂತಯೋಃ ಕಾಚವಸ್ತ್ರಯೋರೇಕಸ್ಯ ನಾಶೋಽಪರಸ್ಯಾ-ಪಸರಣಂ ಚ ಲೋಕೇ ದೃಷ್ಟಮ್, ತಥೇತಿ ಭಾವಃ ॥ ೧೯೦ ॥

**ವಿವರಣೆ-** ಜೀವನಿಗೆ ಅನಾದಿಯಾದ ಎರಡು ವಿಧವಾದ ಅವಿದ್ಯಾವರಣವು ಇದೆ. ಅವು ಸ್ವಗುಣಾಚ್ಛಾದಿಕಾ ಮತ್ತೂ ಪರಮಾಚ್ಛಾದಿಕಾ. ಅವುಗಳಲ್ಲಿ ಮೊದಲನೆಯದಾದ ಸ್ವಗುಣಾಚ್ಛಾದಿಕೆಯು ಜೀವಸ್ವರೂಪವೇ ಆದ ಆನಂದಾದಿಗುಣಗಳ ಅನುಭವಕ್ಕೆ ಪ್ರತಿಬಂಧಕ. ಪರಮಾಚ್ಛಾದಿಕೆಯು ಭಗವನ್ ವಿಷಯಕಜ್ಞಾನಕ್ಕೆ ಪ್ರತಿಬಂಧಕ. ಈ ಎರಡು (ದುಷ್ಟಪ್ರಕೃತಿಗಳು) ಆವರಣಗಳು ಜೀವರ ಯೋಗ್ಯತೆಗೆ ಅನುಗುಣವಾಗಿ ಪ್ರತಿಪುರುಷರಲ್ಲಿಯೂ ಇರುತ್ತವೆ. ಇದನ್ನೇ ಶ್ರೀಭಾಗವತದಶಮಸ್ಕಂಧತಾತ್ಪರ್ಯದಲ್ಲಿ ಶ್ರೀಮಧ್ವಾಚಾರ್ಯರು ನಿರೂಪಿಸಿದ್ದಾರೆ-

'ಅಥಾನ್ಯೇ ಪ್ರಕೃತೀ ದುಷ್ಟೇ ನೃಷು ಪ್ರಾತಿಸ್ವಿಕಂ ಸ್ಥಿತೇ ।
ಸ್ವಗುಣಾಚ್ಛಾದಿಕಾ ತ್ವೇಕಾ ಪರಮಾಚ್ಛಾದಿಕಾ ಪರಾ ॥

ಸ್ವಗುಣಾಚ್ಛಾದಿಕಾಂ ಹತ್ವಾ ಪರಮಾಚ್ಛಾದಿಕಾಂ ಪರಃ ।
ವ್ಯಾಘುಟ್ಯ ಮೋಕ್ಷಪದವೀಂ ದದಾತಿ ಪುರುಷೋತ್ತಮಃ ॥'

ಸ್ವಗುಣಾಚ್ಛಾದಿಕಾಮಾಯೆಯು ಕಣ್ಣಿನ ಪೊರೆ ಮುಂತಾದ ದೃಷ್ಟಿದೋಷದಂತೆಯೂ,ಪರಮಾಚ್ಛಾದಿಕೆಯು ಕಣ್ಣಿಗೆ ಅಡ್ಡವಾಗಿರುವ ಬಟ್ಟೆಯ ಪರದೆಯಂತೆಯೂ ಇರುತ್ತದೆ. ಜೀವನಿಗೆ ಮುಕ್ತಿಯಾಗುವಾಗ ಶ್ರೀಹರಿಯು ಮೊದಲನೆಯದ್ದನ್ನು ನಾಶಮಾಡುತ್ತಾನೆ. ಎರಡನೆಯದ್ದನ್ನು ಪಕ್ಕಕ್ಕೆ ಸರಿಸಿ ತನ್ನ ದರ್ಶನವು ಜೀವನಿಗೆ ಆಗುವಂತೆ ಮಾಡುತ್ತಾನೆ. ಸ್ವಗುಣಾಚ್ಛಾದಿಕಾಆವರಣಕ್ಕೆ ಜೀವಾಚ್ಛಾದಿಕಾ ಎಂದೂ ಹೆಸರಿದೆ.

ಜೀವಸ್ಯಾಽಽಚ್ಛಾದಿಕಾ ತ್ವೇಕಾ ಪರಸ್ಯಾಽಽಚ್ಛಾದಿಕಾ ಪರಾ ।
ದ್ವಯಂ ಜೀವಗತಂ ನಿತ್ಯಂ ಹರಿಸ್ತೂಭಯಮೋಚಕಃ ॥ ೧೯೧ ॥

**ಅರ್ಥ-** ಏಕಾ ತು= ಒಂದು, ಜೀವಸ್ಯ = ಜೀವನಿಗೆ (ಅವನಲ್ಲಿರುವ ಆನಂದಾದಿ-ಗುಣಗಳಿಗೆ) ಆಚ್ಛಾದಿಕಾ= ಆವರಣ. ಅಪರಾ = ಮತ್ತೊಂದು, ಪರಸ್ಯ = ಭಗವಂತನ ಸ್ವರೂಪಕ್ಕೆ, ಆಚ್ಛಾದಿಕಾ= ಆವರಣ. ದ್ವಯಂ= ಎರಡೂ, ನಿತ್ಯಂ = ಯಾವಾಗಲೂ, ಜೀವಗತಂ = ಜೀವನಲ್ಲಿಯೆ ಇರುತ್ತವೆ. ಹರಿಸ್ತು = ಭಗವಂತನಾದರೂ, ಉಭಯ-ಮೋಚಕಃ= ಎರಡನ್ನೂ ಜೀವರಿಂದ ಬಿಡಿಸುವವನು.

**ಭಾವವಿಲಾಸಿನೀ–** ದ್ವಯಂ ಜೀವಾಚ್ಛಾದಕಪರಮಾಚ್ಛಾದಕಭೇದೇನ ದ್ವಿವಿಧಮ್ । ಜೀವೋऽಪಿ ಪಿಹಿತನಯನಃ ಸ್ವದೇಹಪರದೇಹಾವಿವ ಸ್ವಸ್ವರೂಪಂ ಪರಮಾತ್ಮಾನಂ ಚ ನ ಜಾನಾತಿ । ಅತಸ್ತತ್ಪ್ರತಿಬಂಧಕಮಜ್ಞಾನದ್ವಯಮಪಿ ತದ್ಗತಮೇವ ಭವೇದಿತಿ ಭಾವಃ ॥ ೧೯೧ ॥

**ವಿವರಣೆ-** ಕಣ್ಣುಮುಚ್ಚಿದವನು ತನ್ನ ದೇಹವನ್ನು ಮತ್ತು ಪರರ ದೇಹವನ್ನೂ ನೋಡದಿರುವಂತೆ ಎರಡು ವಿಧ ಆವರಣವುಳ್ಳ ಜೀವನು ತನ್ನ ಸ್ವರೂಪವನ್ನೂ ಭಗವಂತನ ಸ್ವರೂಪವನ್ನೂ ತಿಳಿಯಲಾರ. ಆದ್ದರಿಂದ ಪ್ರತಿಬಂಧರೂಪಕಾರ್ಯವು ಜೀವನಲ್ಲಿ ಆಗುವುದರಿಂದ ಪ್ರತಿಬಂಧಕಗಳಾದ ಎರಡುವಿಧಗಳಾದ ಅಜ್ಞಾನಗಳೂ ಜೀವನಲ್ಲಿಯೇ ಇವೆ. ಶ್ರೀಹರಿಯು ಜೀವನನ್ನು ಈ ಎರಡು ವಿಧ ಆವರಣಗಳಿಂದ ಬಿಡಿಸುತ್ತಾನೆ.

**ಉಭಯೋಶ್ಚಾಪಿ ದೂರಸ್ಥೋ ನ ಚೇತ್ ತೇ ಮೋಚಯೇತ್ ಕಥಮ್ ।**
**ನಿಗಡೇನ ನಿಬದ್ಧಾಂಘ್ರಿರ್ನಹಿ ರಾಜಾ ವಿಮೋಚಕಃ ॥ ೧೯೨ ॥**

**ಅರ್ಥ-** ಹರಿಃ= ಶ್ರೀಹರಿಯು, ಉಭಯೋಃ = ಹಿಂದೆ ಹೇಳಿದ ಎರಡು ವಿಧಗಳಾದ ಅಜ್ಞಾನಗಳಿಂದ, ಅತಿದೂರಸ್ಥಃ ನ ಚೇತ್= ಬಹಳ ದೂರದಲ್ಲಿರದಿದ್ದರೆ, ಕಥಂ = ಹೇಗೆ, ತೇ = ಆ ಎರಡು ವಿಧಗಳಾದ ಅಜ್ಞಾನಗಳನ್ನು, ಮೋಚಯೇತ್ = ಬಿಡಿಸಿಯಾನು? ನಿಗಡೇನ = ಸಂಕೋಲೆಗಳಿಂದ, ನಿಬದ್ಧಾಂಘ್ರಿಃ = ಬಂಧಿಸಲ್ಪಟ್ಟ ಕಾಲುಗಳುಳ್ಳ, ರಾಜಾ = ರಾಜನು, ನ ಹಿ ಮೋಚಕಃ = ಬೇರೆಯವರನ್ನು ಬಿಡಿಸಲಾರನಷ್ಟೆ!

**ಅನುವಾದ-** ಶ್ರೀಹರಿಯು ಹಿಂದೆ ಹೇಳಿದ ಎರಡು ಮಾಯೆಗಳಿಂದ ದೂರದಲ್ಲಿದ್ದಾನೆ. ಅವುಗಳ ಸಂಪರ್ಕವು ಅವನಿಗಿಲ್ಲ. ಅವನೂ ಅವುಗಳ ಸಂಬಂಧವನ್ನು ಪಡೆದಿದ್ದರೆ, ಜೀವರನ್ನು ಈ ಎರಡು ಮಾಯೆಗಳ ಬಂಧನದಿಂದ ಹೇಗೆ ಮುಕ್ತಗೊಳಿಸಿಯಾನು? ರಾಜನು ತಾನೇ ಬಂಧನಕ್ಕೆ ಒಳಪಟ್ಟಿದ್ದರೆ, ಇತರರನ್ನು ಹೇಗೆ ಬಿಡಿಸಿಯಾನು?

**ಭಾವವಿಲಾಸಿನೀ–** ಉಭಯೋಃ ಉಕ್ತದ್ವಿವಿಧಾಜ್ಞಾನಯೋಃ । ಭಗವತೋऽಜ್ಞಾನಾತಿದೂರಸ್ಥತ್ವೇ ಯುಕ್ತಿಮಾಹ– **ನ ಚೇದಿತಿ** ॥ ನ ಚೇದ್, ದ್ವಿವಿಧಮಾಯಾದೂರಸ್ಥೋ ನ ಚೇತ್, ತೇ ದ್ವಿವಿಧಮಾಯೇ । ನಿಗಡಬದ್ಧಪುರುಷಮೋಚಕಸ್ಯ ರಾಜಾದೇಃ ಕಾರ್ವಾದೇರ್ವಾ ತದಬದ್ಧತ್ವಸ್ಯಾವಶ್ಯಂಭಾವಾದಿತಿ ಭಾವಃ । ತದೇವ ದರ್ಶಯತಿ– **ನಿಗಡೇನೇತಿ** ॥ ೧೯೨ ॥

**ಅಸ್ಮಿನ್ನರ್ಥೇ ಶ್ರುತಿರ್ಮಾನಂ ಪುರಾಣಾನಿ ಚ ಭೂರಿಶಃ ।**
**ಅನಿರ್ವಾಚ್ಯಾ ತು ಯಾ ಮಾಯಾ ಸಾऽನಿರ್ವಾಚ್ಯೈವ ಧೀಮತಾಮ್**
**॥ ೧೯೩ ॥**

**ಅರ್ಥ-** ಅಸ್ಮಿನ್ ಅರ್ಥೇ= ಈ ವಿಷಯದಲ್ಲಿ, ಶ್ರುತಿಃ = ಶ್ರುತಿಗಳು, ಭೂರಿಶಃ= ಬಹಳ, ಪುರಾಣಾನಿ= ಪುರಾಣವಾಕ್ಯಗಳೂ, ಮಾನಂ= ಪ್ರಮಾಣಗಳು, ಯಾ ತು= ಯಾವ, ಅನಿರ್ವಾಚ್ಯಾ ಮಾಯಾ= ಅನಿರ್ವಚನೀಯಮಾಯೆಯೋ, ಸಾ= ಅದು, ಧೀಮತಾಂ= ಜ್ಞಾನಿಗಳಿಗೆ, ಅನಿರ್ವಾಚ್ಯಾ ಏವ= ಹೇಳಲಿಕ್ಕೂ ಅಯೋಗ್ಯ.

**ಅನುವಾದ-** ಭಗವಂತನು ಮಾಯಾಮೋಚಕ ಎಂಬ ವಿಷಯದಲ್ಲಿ, 'ಅನಾದಿ-ಮಾಯಯಾ ಸುಪ್ತಃ' ಮುಂತಾದ ಶ್ರುತಿಗಳು, 'ಮಾಯಾಂ ವ್ಯುದಸ್ಯ ಚಿಚ್ಛಕ್ತ್ಯಾ' ಮುಂತಾದ ಪುರಾಣವಾಕ್ಯಗಳು ಪ್ರಮಾಣಗಳು. ಅದ್ವೈತಿಗಳು ಹೇಳುವ ಅನಿರ್ವಚನೀಯ ಮಾಯೆಯ ಜ್ಞಾನಿಗಳಿಗೆ ಹೇಳಲೂ ಅಯೋಗ್ಯ.

**ಭಾವವಿಲಾಸಿನೀ–** ಶ್ರುತಿಃ 'ಅನಾದಿಮಾಯಯಾ' ಇತ್ಯಾದಿಕಾ । ಪುರಾಣಾನಿ ಉಕ್ತಾನಿ ವಕ್ಷ್ಯಮಾಣಾನಿ ಚ । ಅನಿರ್ವಾಚ್ಯಾ ವಕ್ತುಮಪ್ಯಯೋಗ್ಯಾ ॥ ೧೯೩ ॥

ವಿವರಣೆ- ಶ್ರುತಿಗಳು :-

(1) ಅನಾದಿಮಾಯಯಾದ್ಧ್ಯಸುಪ್ತೋ ಯದಾ ಜೀವಃ ಪ್ರಬುಧ್ಯತೇ ।
ಅಜಮನಿದ್ರಮಸ್ವಪ್ನಮದ್ವೈತಂ ಬುದ್ಧ್ಯತೇ ತದಾ ॥ - ಮಾಂಡೂಕ 2-8

(2) ಅಜ್ಞಾನಾಂ ಜ್ಞಾನದೋ ವಿಷ್ಣುಃ ಜ್ಞಾನಿನಾಂ ಮೋಕ್ಷದಶ್ಚ ಸಃ ।
-ಅನುವ್ಯಾಖ್ಯಾನ ಜಿಜ್ಞಾಸಾಧಿಕರಣ

(3) ಯಸ್ಯ ಪ್ರಸಾದಾತ್ ಪರಮಾರ್ತಿರೂಪಾದಸ್ಮಾತ್ ಸಂಸಾರಾತ್ ಮುಚ್ಯತೇ ನಾಪರೇಣ।

ಸ್ಮೃತಿ : 'ಏಕಸ್ಯೈವ ಮಮಾಂಶಸ್ಯ ಜೀವಸ್ಯೈವ ಮಹಾಮತೇ' - ಭಾಗವತ 11.11.4

ಇಲ್ಲಿಯವರೆಗೆ ಪರಬ್ರಹ್ಮನಲ್ಲಿ ಅವಿದ್ಯೆಯನ್ನು ನಿರಾಕರಿಸಲಾಗಿದೆ. ಇನ್ನು ಮಾಯೆಯನ್ನು ನಿರಾಕರಿಸಲು ಈ ಶ್ಲೋಕದಲ್ಲಿ ಅನುಪಪತ್ತಿಗಳನ್ನು ಹೇಳುವರು-

**ಯೋ ಮಾಯಾಂ ವಕ್ಷ್ಯಧೀಶಾನೇ ಸ ಪ್ರಷ್ಟವ್ಯಸ್ತಯೇಶಿತುಃ ।**
**ಭ್ರಮಃ ಸಂಪಾದ್ಯತೇ ನೇತಿ ನ ಚೇದ್ ವಿದ್ಯೈವ ತಾಮಪಿ ॥ ೧೯೪ ॥**

**ನಿರಸ್ತಕುಹಕತ್ವೋಕ್ತ್ಯಾ ನೋರೀಚಕ್ರುಃ ಪರಂ ಹರೌ ।**
**ಆದ್ಯೇ ತ್ವವಿದ್ಯೈವ ತಸ್ಮಾತ್ ಕಲ್ಪೋऽಯಂ ಚ ವಿಕಲ್ಪಭೀಃ ॥ ೧೯೫ ॥**

**ಅರ್ಥ-** ಯಃ = ಯಾರು, ಅಧೀಶಾನೇ= ಸರ್ವೇಶ್ವರನಲ್ಲಿ, ಮಾಯಾಂ = ಮಾಯೆಯನ್ನು ವಕ್ತಿ = ಹೇಳುತ್ತಾನೋ, ಸಃ = ಅವನು, ಪ್ರಷ್ಟವ್ಯಃ= ಕೇಳಲ್ಪಡಬೇಕು, ತಯಾ = ಆ ಮಾಯೆಯಿಂದ, ಈಶಿತುಃ= ಈಶ್ವರನಿಗೆ, ಭ್ರಮಃ = ಭ್ರಾಂತಿಯು, ಸಂಪಾದ್ಯತೇ = ಸಂಪಾದಿಸಲ್ಪಡುತ್ತದೆ? ವಾ= ಅಥವಾ, ನ= ಇಲ್ಲ? ನ ಚೇತ್= ಇಲ್ಲವೆಂದರೆ, ಸಾ = ಆ ಮಾಯೆಯು, ವಿದ್ಯೈವ = ವಿದ್ಯೆಯೇ. ನಿರಸ್ತಕುಹಕತ್ವೋಕ್ತ್ಯಾ = ಭಗವಂತನು ಮಾಯಾರಹಿತ ಎಂಬ ಉಕ್ತಿಯಿಂದ, ತಾಮಪಿ ಪರಂ= ಆ ಕುಹಕವಿದ್ಯಾರೂಪವಾದ ಮಾಯೆಯನ್ನೂ ಹರೌ = ಶ್ರೀಹರಿಯಲ್ಲಿ, ನ ಊರೀಚಕ್ರುಃ = ಒಪ್ಪಿಲ್ಲ (ಶಾಸ್ತ್ರಕಾರರು). ಆದ್ಯೇ = ಮಾಯೆಯು ಭಗವಂತನಲ್ಲಿ ಭ್ರಮೆಯನ್ನು ಉಂಟುಮಾಡುತ್ತದೆ ಎಂಬ ಮೊದಲನೆ ಪಕ್ಷದಲ್ಲಿ, ಸಾ ಅಪಿ= ಆ ಮಾಯೆಯೂ ಕೂಡ, ಅವಿದ್ಯಾ ಏವ = ಸ್ವವ್ಯಾಮೋಹಕರೀ ಎನಿಸಿದ ಅವಿದ್ಯೆಯೇ ಆಗಿದೆ. ತಸ್ಮಾತ್ = ಆದ್ದರಿಂದ, ಅಯಂ ಕಲ್ಪಃ = ಈ ಪಕ್ಷವೂ, ವಿಕಲ್ಪಭೀಃ = (ಬ್ರಹ್ಮಾಶ್ರಿತಾಜ್ಞಾನಪಕ್ಷದಲ್ಲಿ ಹೇಳಿದ) ನಾನಾವಿಕಲ್ಪಗಳ ಭಯವುಳ್ಳದ್ದಾಗಿದೆ.

**ಅನುವಾದ-** ಜಗದೀಶನಾದ ಪರಬ್ರಹ್ಮನಲ್ಲಿ ಮಾಯೆಯನ್ನು ಒಪ್ಪುವ ಮಾಯಾವಾದಿಯನ್ನು ಹೀಗೆ ಪ್ರಶ್ನಿಸಬೇಕು. ಆ ಮಾಯೆಯಿಂದ ಪರಬ್ರಹ್ಮನಿಗೆ ಭ್ರಮೆಯುಂಟಾಗುತ್ತದೆಯೋ? ಇಲ್ಲವೋ? ಭ್ರಮೆಯುಂಟಾಗುವುದಿಲ್ಲವೆಂದರೆ ಅದು ಅವಿದ್ಯೆಯಲ್ಲ. ಅದು ವಿದ್ಯೆಯೇ. ಮೋಹಕವಾದ ವಿದ್ಯೆಯು ಭಗವಂತನಲ್ಲಿಲ್ಲ. 'ಸದಾ ನಿರಸ್ತಕುಹಕಮ್' ಎಂದು ಹೇಳುವ ಮೂಲಕ ಜ್ಞಾನಿಗಳು ಹರಿಯಲ್ಲಿ ಮಾಯೆಯನ್ನೂ ಒಪ್ಪಿಲ್ಲ. ಇನ್ನು ಪರಬ್ರಹ್ಮನಲ್ಲಿರುವ ಮಾಯೆಯಿಂದ ಅವನಿಗೆ ಭ್ರಮೆಯು ಉಂಟಾಗುವುದೆಂಬ ಮೊದಲನೆಯ ಪಕ್ಷದಲ್ಲಿ ಅದು ಅವಿದ್ಯೆಯೇ. ಪರಬ್ರಹ್ಮನಲ್ಲಿ ಅವಿದ್ಯೆಯನ್ನು ಒಪ್ಪಿದರೆ ಹುಟ್ಟಬಹುದಾದ ಯಾವ ಪ್ರಶ್ನೆಗಳಿಗೂ ಉತ್ತರವಿಲ್ಲ.

**ಭಾವವಿಲಾಸಿನೀ–** ಬ್ರಹ್ಮಣ್ಯವಿದ್ಯಾಂ ನಿರಸ್ಯ ಮಾಯಾಮಪಿ ನಿರಾಕರ್ತುಂ ಪೃಚ್ಛತಿ– **ಯೋ ಮಾಯಾಮಿತಿ** ॥ ತಯಾ ಮಾಯಯಾ ಭ್ರಮಃ ಸಂಪಾದ್ಯತೇ ನವೇತಿ ಪ್ರಷ್ಟವ್ಯ ಇತಿ ಪೂರ್ವೇಣಾನ್ವಯಃ । ನೇತಿ ಪಕ್ಷಂ ದೂಷಯತಿ– **ನ ಚೇದಿತಿ** ॥ ನಚೇದ್ ಭ್ರಮಸಂಪಾದಿಕಾ ನ ಭವತಿ ಚೇತ್ । ಐಂದ್ರಜಾಲಿಕಮಾಯೇವೇಶ್ವರನಿಷ್ಠಾಪಿ ಮಾಯಾ ಈಶ್ವರಸ್ಯ ನ ಭ್ರಾಂತಿಕರೀ ಕಿಂತು ದ್ರಷ್ಟೄಣಾಮನ್ಯೇಷಾಮೇವ ಭ್ರಾಂತಿಕರೀತ್ಯರ್ಥಃ । ವಿದ್ಯೈವ ಸಾ ಮಾಯಾ ಭಗವತೋ ವಿದ್ಯೈವ ಪರವ್ಯಾಮೋಹಕಮಂತ್ರೌಷಧಾದಿವಿದ್ಯಾವದ್ವಿದ್ಯೈವ । ನತ್ವಜ್ಞಾನವನ್ಮಹಾದೋಷ ಇತಿ ಭಾವಃ । ತರ್ಹಿ ತಾಮಂಗೀಕೃತ್ಯ ಜಗತೋ ಮಾಯಾಕಲ್ಪಿತತ್ವಂ ಕುತೋ ನಾಂಗೀಕ್ರಿಯತ ಇತ್ಯತ ಆಹ– **ತಾಮಪೀತಿ** ॥ 'ಸದಾ ನಿರಸ್ತಕುಹಕಂ ಸತ್ಯಂ ಪರಂ ಧೀಮಹಿ' ಇತಿ ಭಗವತೇ ನಿರಸ್ತಕುಹಕತ್ವೋಕ್ತ್ಯಾ ಪರಂ ಕೇವಲಂ ತಾಮಪಿ ಕುಹಕವಿದ್ಯಾರೂಪಮಾಯಾಂ ನೋರೀಚಕ್ರುರಿತಿ

ಸಂಬಂಧಃ । ಅಜ್ಞಾನಭ್ರಮಾಖ್ಯಮಹಾದೋಷಾನಾಧಾಯಕತ್ವೇಽಪ್ಯವದ್ಯಗಂಧವಿಧುರೇ ಹರೌ ಕುಹಕತ್ವರೂಪಸ್ವಲ್ಪದೋಷೋಽಪಿ ನ ವಕ್ತುಮುಚಿತ ಇತಿ ನಾಂಗೀಚಕ್ರುರಿತಿ ಭಾವಃ। ಆದ್ಯೇ ಭ್ರಮಸಂಪಾದಕತ್ವಪಕ್ಷೇ ಮಾಯೇತಿ ಶಬ್ದಭೇದಮಾತ್ರಂ ಸಾಽಪ್ಯವಿದ್ಯೈವ । ತಸ್ಮಾದಯಂ ಕಲ್ಪಃ ಪಕ್ಷಶ್ಚ ವಿಕಲ್ಪಾದ್ ಅಜ್ಞಾನಪಕ್ಷೋಕ್ತವಿಕಲ್ಪಾದ್ ಭೀರ್ಯಸ್ಯ ಸಃ ವಿಕಲ್ಪಭೀಃ ॥ ೧೯೪-೧೯೫ ॥

**ವಿವರಣೆ-** (1) ತನಗೆ ಭ್ರಮೆಯನ್ನು ಉಂಟು ಮಾಡದ ಮಾಯೆಯು ಅವಿದ್ಯೆ ಅಲ್ಲ. 'ಸ್ವವ್ಯಾಮೋಹಕರೀ ಅವಿದ್ಯಾ' ಎಂದು ಅದ್ವೈತದರ್ಶನ. ಅವಿದ್ಯೆಯಲ್ಲವಾದ್ದರಿಂದ ಇದನ್ನು ಬ್ರಹ್ಮನಲ್ಲಿ ಅಂಗೀಕರಿಸಬಹುದಲ್ಲವೇ? ಇಲ್ಲ. ಜ್ಞಾನಿಗಳು ಬ್ರಹ್ಮನಲ್ಲಿ 'ಪರವ್ಯಾಮೋಹಕರೀ' ಮಾಯೆಯನ್ನು ಅಂಗೀಕರಿಸಿಲ್ಲ. 'ಸದಾ ನಿರಸ್ತಕುಹಕಂ' - ಈ ಭಾಗವತದ ಮಾತಿನಿಂದ ಈ ವಿಷಯವು ತಿಳಿಯುತ್ತದೆ. ಪದಾರ್ಥಗಳನ್ನು ಸೃಷ್ಟಿಸಲಾಗದವರು ಕಣ್ಕಟ್ಟನ್ನು ಮಾಡುತ್ತಾರೆ. ಪದಾರ್ಥಗಳನ್ನೇ ಸೃಷ್ಟಿಸುವ ಸಾಮರ್ಥ್ಯವುಳ್ಳ ಪರಮಾತ್ಮನು ಕಣ್ಕಟ್ಟನ್ನು ಮಾಡುವುದಿಲ್ಲ ಎಂದು ಪ್ರಾಜ್ಞರ ಅಭಿಪ್ರಾಯ.

(2) ಪರಮಾತ್ಮನಲ್ಲಿ ಅಂಗೀಕರಿಸಲ್ಪಡುವ ಮಾಯೆಯು ಅವನಿಗೆ ಭ್ರಮೆಯನ್ನು ಉಂಟು ಮಾಡುವುದಾದರೆ ಇದು ಅವಿದ್ಯೆಯೇ. ಪರಮಾತ್ಮನಲ್ಲಿ 'ಅವಿದ್ಯೆ'ಯು ಇದೆ ಎಂದರೆ ಉದ್ಭವಿಸುವ ಯಾವ ಪ್ರಶ್ನೆಗೂ ಉತ್ತರವಿಲ್ಲ. ಇದನ್ನು ಹಿಂದಿನ ಪದ್ಯಗಳಲ್ಲಿ ವಿವರಿಸಲಾಗಿದೆ.. ಆದ್ದರಿಂದ ಅದ್ವೈತದರ್ಶನಕ್ಕೆ ಅಪೇಕ್ಷಿತವಾದ ಮಾಯೆಯು ಪರಮಾತ್ಮನಲ್ಲಿ ಇಲ್ಲವೇ ಇಲ್ಲ.

ಸ್ವದೋಷಾಚ್ಛಾದನಾಯಾಲ್ಪೋ ನಿರ್ದೋಷೇಷ್ವಪಿ ತಂ ವದೇತ್ ।
ಜೀವೇ ಸಂಭವದಜ್ಞಾನಂ ಬ್ರಹ್ಮಣ್ಯಪಿ ನ ಕಿಂ ಜಗುಃ ॥ ೧೯೬ ॥

**ಅರ್ಥ-** ಅಲ್ಪಃ = ಮೂರ್ಖನು, ಸ್ವದೋಷಾಚ್ಛಾದನಾಯ = ತನ್ನಲ್ಲಿರುವ ದೋಷಗಳನ್ನು ಮುಚ್ಚಲು, ತಂ = ಆ ದೋಷವನ್ನು, ನಿರ್ದೋಷೇಷು ಅಪಿ = ನಿರ್ದುಷ್ಟರಾದ ಸಜ್ಜನರಲ್ಲಿ, ವದೇತ್ = ಹೇಳುತ್ತಾನೆ. ಜೀವೇ = ಜೀವನಲ್ಲಿ, ಸಂಭವದಜ್ಞಾನಂ = ಪ್ರಮಿತವಾದ ಅಜ್ಞಾನವನ್ನು, ಬ್ರಹ್ಮಣ್ಯಪಿ = ಪರಬ್ರಹ್ಮನಲ್ಲಿಯೂ, ನ ಜಗುಃ ಕಿಂ?= ಹೇಳಲಿಲ್ಲವೇ?

**ಅನುವಾದ-** ಲೋಕದಲ್ಲಿ ಮೂರ್ಖನು ತನ್ನಲ್ಲಿರುವ ದೋಷವನ್ನು ಮುಚ್ಚಿಹಾಕಲು ನಿರ್ದುಷ್ಟರಾದ ಸಜ್ಜನರಲ್ಲಿ ಆ ದೋಷವನ್ನು ಆರೋಪಿಸುತ್ತಾನೆ. ಹೀಗೆಯೇ ಮಾಯಾವಾದಿಗಳು ತಮ್ಮಲ್ಲಿರುವ, ಅಜ್ಞಾನವನ್ನು ಮರೆಮಾಚಲು , ಅದರಿಂದಾಗಿ ತಮಗೆ ನೀಚತ್ವವಿಲ್ಲವೆಂದು ಹೇಳಿಕೊಳ್ಳಲು ಪರಬ್ರಹ್ಮನಲ್ಲಿಯೇ ಅಜ್ಞಾನ- ವಿದೆಯೆಂದು ಆರೋಪಿಸಿದ್ದಾರೆ.

**ಭಾವವಿಲಾಸಿನೀ-** ಲೋಕನೀತ್ಯಾಪಿ ಭಗವತ್ಯಜ್ಞಾನಕಥನಂ ಪರಿಹಸತಿ- **ಸ್ವದೋಷೇತಿ** ॥ ಅಲ್ಪಃ ಮೂರ್ಖಃ ಸ್ವದೋಷಾಚ್ಛಾದನಾಯ ಸ್ವಸ್ಮಿನ್ನಾಗತಜಾರತ್ವಾದಿದೋಷಾಚ್ಛಾದನಾಯ । ತದ್ದೋಷಂ ಜೀವೇ ಸ್ವಸ್ಮಿನ್ ಮಾಯಾವಾದಿನಃ ಬ್ರಹ್ಮಣ್ಯಪಿ ನ ಜಗುಃ ಕಿಮ್? ಇತಿ ಸಂಬಂಧಃ ।

ಸ್ವಾಜ್ಞಾನಿತ್ವೇನಾಗತನೈಚ್ಯಪರಿಹಾರಾಯ ಬ್ರಹ್ಮಣ್ಯಜ್ಞಾನಂ ಜಗುಃ । ನತು ಪ್ರಮಾಣಬಲಾದಿತಿ ಭಾವಃ ॥ ೧೯೬ ॥

**ವಿವರಣೆ**–ಬ್ರಹ್ಮನಲ್ಲಿ ಅಜ್ಞಾನವನ್ನು ಹೇಳುವುದು ಮೂರ್ಖಪದ್ಧತಿ ಎಂದು ಈ ಶ್ಲೋಕದಲ್ಲಿ ಹೇಳಿದ್ದಾರೆ.

**ಕಿಂ ಮಲೈಃ ಸಮಲಸ್ಯಾಸ್ಯ ನಿರ್ಮಲಸ್ಯ ಮಲಂ ಮಲಮ್ ।**
**ನೀಲಿಮಾ ದೂಷಣಂ ಭಾನೋಃ ಸ್ವರ್ಭಾನೋಸ್ತು ಸ ಭೂಷಣಮ್ ॥ ೧೯೭ ॥**

**ಅರ್ಥ**- ಸಮಲಸ್ಯ = ಕರ್ಮಲೇಪ, ದುಃಖ ಮುಂತಾದ ದೋಷಸಹಿತನಾದ, ಅಸ್ಯ = ಈ ಜೀವನಿಗೆ, ಮಲೈಃ = ಅಜ್ಞಾನ, ಭ್ರಮೆ ಮುಂತಾದ ಕಶ್ಮಲಗಳಿಂದ, ಕಿಂ = ಏನು ಅನಿಷ್ಟ? (ಸಂಸಾರಮಲದಿಂದ ದೂಷಿತನಾದ ಜೀವನಲ್ಲಿ ಅಜ್ಞಾನಮುಂತಾದ ದೋಷಗಳನ್ನು ಹೇಳುವುದು ಅಪರಾಧವಲ್ಲ) ನಿರ್ಮಲಸ್ಯ = ದೋಷಗಂಧರಹಿತನಾದ ಪರಬ್ರಹ್ಮನಿಗೆ, ಮಲಂ = ಅಜ್ಞಾನ, ಕುಹಕತ್ವ ಮುಂತಾದ ದೋಷವು= ದೋಷಗಳ ಕಥನವು, ಮಲಂ= ಅಪರಾಧವೇ. ಭಾನೋಃ = ಸೂರ್ಯನಿಗೆ, ನೀಲಿಮಾ = ಕಪ್ಪುಬಣ್ಣವು, ದೂಷಣಂ = ದೋಷವೇ. ಸಃ = ಅದೇ ಕಪ್ಪುಬಣ್ಣವು, ಸ್ವರ್ಭಾನೋಸ್ತು= ರಾಹುವಿಗೆ , ಭೂಷಣಂ = ಅಲಂಕಾರವೇ.

**ಅನುವಾದ**- ದೋಷವಿರುವವನನ್ನು ಕುರಿತು ದೋಷಿ ಎಂದು ಹೇಳುವುದು ಅಪರಾಧವಲ್ಲ. ದೋಷವಿಲ್ಲದವನನ್ನು ಕುರಿತು ದೋಷಿ ಎಂದು ಹೇಳುವುದು ಕೊಳಕು ನಡವಳಿಕೆ. ಸೂರ್ಯನಿಗೆ ಕಪ್ಪುಬಣ್ಣವು ದೋಷ. ರಾಹುವಿಗೆ ಅದೇ ಭೂಷಣ.

**ಭಾವವಿಲಾಸಿನೀ**– ನನು ಪರೋದೀರಿತರೀತ್ಯಾ ಬ್ರಹ್ಮಣ್ಯಜ್ಞಾನಮಸ್ತು, ಭವತಾಂ ಕಿಂ ಗತಮ್? ಇತ್ಯತಸ್ತದಪಿ ಲೋಕನೀತಿವಿರುದ್ಧಮಿತ್ಯಾಹ– **ಕಿಂ ಮಲೈರಿತಿ** ॥ ಸಮಲಸ್ಯ ಕರ್ಮಲೇಪದುಃಖಾದಿ-ಮಲಸಹಿತಸ್ಯ ಜೀವಸ್ಯ ಮಲೈರಜ್ಞಾನಭ್ರಮಾದಿಮಲೈಃ ಕಿಮ್ । ಸಂಸಾರಾಖ್ಯಮಲಮಲಿನಸ್ಯ ಜೀವಸ್ಯ ಸರ್ವಮಪಿ ಮಲಂ ಸಂಭಾವಿತಮಿತಿ ಭಾವಃ । ನಿರ್ಮಲಸ್ಯ ನಿರವದ್ಯತ್ವಶ್ರುತ್ಯಾ ದೋಷ-ಗಂಧವಿಧುರಸ್ಯ ಭಗವತಃ ಮಲಮಜ್ಞಾನಕುಹಕತ್ವರೂಪಮಲಮಪಿ ಮಲಮೇವ । ತತ್ರ ದೃಷ್ಟಾಂತಮಾಹ– **ನೀಲಿಮೇತಿ** ॥ ಭಾನೋಸ್ಸೂರ್ಯಸ್ಯ । ಸ್ವರ್ಭಾನೋಃ ರಾಹೋಃ । ಸಃ ನೀಲಿಮಾ ॥ ೧೯೭॥

**ವಿವರಣೆ**- ಪರರು ಹೇಳುವಂತೆ ಪರಬ್ರಹ್ಮನಲ್ಲಿ ಅಜ್ಞಾನವನ್ನು ಒಪ್ಪಿದರೆ ಏನು ತೊಂದರೆ? ಹೀಗೆ ಮಾಡುವುದು ಲೋಕನೀತಿಗೆ ವಿರುದ್ಧ ಎಂದು ದೃಷ್ಟಾಂತಪೂರ್ವಕವಾಗಿ

ಶ್ರೀವಾದಿರಾಜರು ಸಮರ್ಥಿಸುತ್ತಾರೆ. ಜೀವನಲ್ಲಿ ಅಜ್ಞಾನವನ್ನು ಒಪ್ಪಿದಲ್ಲಿ ಲೋಕನೀತಿಗೆ ವಿರೋಧವಿಲ್ಲ. ಏಕೆಂದರೆ ಜೀವನು ಈಗಾಗಲೇ ಸಾಂಸಾರಿಕಮಲಗಳೆನಿಸಿದ ಕರ್ಮಲೇಪ, ದುಃಖಸಂಬಂಧ ಮುಂತಾದ ದೋಷಗಳನ್ನು ಹೊಂದಿದ್ದಾನೆ. ಇವುಗಳಿಗೆಲ್ಲ ಅಜ್ಞಾನವೇ ಮೂಲ. ಆದ್ದರಿಂದ ಜೀವನಿಗೆ ಅಜ್ಞಾನವಿದೆಯೆಂದರೆ ಏನೂ ಅನಿಷ್ಟವಿಲ್ಲ. ಆದರೆ ನಿರ್ದುಷ್ಟನಾದ ಪರಬ್ರಹ್ಮನಲ್ಲಿ ಅಜ್ಞಾನ ಮುಂತಾದ ದೋಷಗಳನ್ನು ಹೇಳುವುದು ಅಪರಾಧವೇ. ಏಕೆಂದರೆ ಇದು ವಸ್ತುಸ್ಥಿತಿಗೆ ವಿರುದ್ಧವಾದ ವರ್ತನೆ. ಸದಾ ಪ್ರಕಾಶಮಾನನಾದ ಸೂರ್ಯನಿಗೆ ರಾಹುವಿನಗ್ರಹಣದಿಂದ ಉಂಟಾಗುವ ಕಪ್ಪುಬಣ್ಣವು ದೋಷವೇ. ಅದೇ ಕಪ್ಪುಬಣ್ಣವು ತಮೋರೂಪಿಯಾದ ರಾಹುವಿಗೆ ದೋಷವಲ್ಲ.

ಸ್ವಯಂ ಹ್ಯಶಕ್ತಃ ಶಕ್ತಸ್ಯಾಪ್ಯಶಕ್ತಿಂ ಪ್ರಥಯೇತ್ ಖಲಃ ।
ಸ್ವಜ್ಞಾನವದ್ಧರೇರ್ಜ್ಞಾನಂ ಕಿಂ ನಾಜ್ಞಾನಾನುಗಂ ಜಗೌ ॥ ೧೯೮ ॥

**ಅರ್ಥ-** ಸ್ವಯಮ್ ಅಶಕ್ತಃ= ತಾನಾಗಿಯೇ (ಸಹಜವಾಗಿ) ಅಶಕ್ತನಾದ, ಖಲಃ ಹಿ= ಕೆಟ್ಟವನಾದರೂ, ಶಕ್ತಸ್ಯ ಅಪಿ= ಶಕ್ತನ ಬಗ್ಗೆಯೂ, ಅಶಕ್ತಿಂ= ಅಸಾಮರ್ಥ್ಯವನ್ನು, ಪ್ರಥಯೇತ್= ಪ್ರಸಿದ್ಧಿ ಪಡಿಸುವನು (ಮಾಯಾವಾದವು), ಸ್ವಜ್ಞಾನವತ್= ತನ್ನ ಜ್ಞಾನದಂತೆ, ಹರೇಃ ಜ್ಞಾನಂ= ಶ್ರೀಹರಿಯ ಜ್ಞಾನವನ್ನು, ಅಜ್ಞಾನಾನುಗಂ= ಅಜ್ಞಾನದ ಸಹಚರ ಎಂದು, ನ ಜಗೌ ಕಿಮ್= ಹೇಳಲಿಲ್ಲವೇ?

**ಅನುವಾದ-** ಅಸಮರ್ಥರಾದ ಕೆಟ್ಟವರು ಸಮರ್ಥರನ್ನು ಅಸಮರ್ಥರೆಂದು ಪ್ರಚಾರ ಮಾಡುತ್ತಾರೆ. ಜೀವಾತ್ಮರಿಗೆ ಜ್ಞಾನ ಅಜ್ಞಾನಗಳು ಜತೆಯಾಗೇ ಇವೆ. ಇಂತಹ ಜೀವ ವರ್ಗಕ್ಕೆ ಸೇರಿದ ಅದ್ವೈತಚಿಂತಕರು ಬ್ರಹ್ಮನಲ್ಲೂ ಅಜ್ಞಾನವಿದೆ ಎಂದು ಹೇಳುತ್ತಿದ್ದಾರೆ.

**ಭಾವವಿಲಾಸಿನೀ–** ಭಗವಜ್ಜ್ಞಾನಮಜ್ಞಾನಾವಿರೋಧೀತ್ಯೇತದಪಿ ನೀತಿವಿರುದ್ಧಮಿತ್ಯಾಹ– **ಸ್ವಯಮಿತಿ** ॥ ಅಶಕ್ತಃ ಸಮುದ್ರತರಣಾದಾವಶಕ್ತಃ ಖಲೋ ಮರ್ಕಟಃ ಶಕ್ತಸ್ಯ ಹನೂಮತೋಽಪ್ಯಶಕ್ತಿಂ ಪ್ರಥಯೇತ್ । 'ಕಃ ಶಕ್ತೋ ಜಲಧಿಂ ವಿಲಂಘಿತುಮಹೋ ಮಿಥ್ಯೇತಿ ರಾಮಾಯಣಮ್' ಇತಿ ಮರ್ಕಟವಚನಾತ್ । ಏವಂ ಮಾಯಾವಾದ್ಯಪೀತ್ಯಾಹ– **ಸ್ವಜ್ಞಾನವದಿತಿ** ॥ ಸ್ವಸ್ಯ ಜೀವಸ್ಯ ಜ್ಞಾನವತ್ । ಜೀವಸ್ಯ ಜ್ಞಾನಂ ನಿತ್ಯತಯಾ ವಿದ್ಯಮಾನಮಪಿ ಹರೇರಿಚ್ಛಯಾ ಯಥಾಽಜ್ಞಾನಾನುಗತಮ್, ತದ್ವದಿತ್ಯರ್ಥಃ । ಹರೇಃ ಪರನಿಷ್ಠಾಜ್ಞಾನನಿರ್ಹರಣೇ ಸಮರ್ಥಸ್ಯ ಜ್ಞಾನಂ ಸರ್ವವಿಷಯಕಜ್ಞಾನಂ ಅಜ್ಞಾನಾನುಗಮ್ ಅಜ್ಞಾನಾನುಕೂಲಮ್ ಅಜ್ಞಾನಸಹಿತಮಿತಿ ಯಾವತ್ । ನ ಜಗೌ ಕಿಮ್? ಯಥಾ ಸ್ವಸ್ಯಾಶಕ್ತೌ ಪರಸ್ಯಾಪ್ಯಶಕ್ತಿಕಥನಂ ದುರ್ನೀತಿರೂಪತ್ವಾನ್ನೀತಿವಿರುದ್ಧಮ್, ತಥೇದಮಪೀತಿ ಭಾವಃ ॥ ೧೯೮ ॥

**ವಿವರಣೆ –** ಪದ್ಯದಲ್ಲಿ ಅಶಕ್ತಃ, ಖಲಃ- ಈ ಪದಗಳು ಸಮುದ್ರವನ್ನು ದಾಟಲಾಗದ ಕಪಿಯು ಹನುಮಂತನಿಗೂ ಅಸಾಮರ್ಥ್ಯವನ್ನು ಹೇಳಿದ ಪ್ರಸಂಗವನ್ನು ಧ್ವನಿಸುತ್ತವೆ ಎಂದು

ಶ್ರೀಸುರೋತ್ತಮರು ಹೇಳಿದ್ದಾರೆ. ಅಜ್ಞಾನಬದ್ಧನಾದ ಜೀವವರ್ಗಕ್ಕೆ ಸೇರಿದ, ಚಿಂತಕರೆಂದು ಪ್ರಸಿದ್ಧರಾದ ಕೆಲವರು ಬ್ರಹ್ಮನನ್ನು ಅಜ್ಞಾನಾತೀತನಲ್ಲ ಎಂದು ಹೇಳಿದ್ದಾರೆ ಎಂಬ ಭಾವವನ್ನು ಶ್ರೀಸುರೋತ್ತಮರು ಹೇಳಿದ್ದಾರೆ.

**ಅನೃತಂ ವದತೋ ವಾಕ್ಯಮಸಂಬದ್ಧಂ ಭವೇದ್ ಧ್ರುವಮ್ ।**
**ಜ್ಞಾನಸ್ಯ ಸಹಕಾರ್ಯಸ್ಯ ಹಾನಿರ್ನಾವರಣೇ ಕಿಲ ॥ ೧೯೯ ॥**

**ಅರ್ಥ-** ಅನೃತಂ = ಸುಳ್ಳನ್ನು, ವದತಃ = ಹೇಳುವವನ, ವಾಕ್ಯಂ = ಮಾತು, ಧ್ರುವಂ = ನಿಶ್ಚಯವಾಗಿಯೂ, ಅಸಂಬದ್ಧಂ ಭವೇತ್= ಅಸಂಬದ್ಧವಾಗಿ ಇರುತ್ತದೆ. ಸಹಕಾರ್ಯಸ್ಯ =(ವಿಷಯಪ್ರಕಾಶನವೆಂಬ) ಕಾರ್ಯದಿಂದ ಕೂಡಿದ, ಜ್ಞಾನಸ್ಯ= ಜ್ಞಾನಕ್ಕೆ, ಆವರಣೇ ಸತಿ = ಅಜ್ಞಾನರೂಪ ಆವರಣವಿದ್ದಲ್ಲಿ, ಹಾನಿಃ =ನಾಶವಾಗಲೀ, ಕೊರತೆಯಾಗಲೀ, ನ ಕಿಲ = ಆಗಲಾರದೆ? (ಆಗಿಯೇ ಆಗುತ್ತದೆ.)

**ಅನುವಾದ-** ಸುಳ್ಳು ಹೇಳುವವನ ಮಾತು ಅಸಂಬದ್ಧವೇ ಆಗಿರುತ್ತದೆ. ಇದರ ಬಗ್ಗೆ ಸಂಶಯವೇ ಇಲ್ಲ. ಬ್ರಹ್ಮನ ಜ್ಞಾನಕ್ಕೆ ಎಲ್ಲ ಪದಾರ್ಥಗಳನ್ನು ಪ್ರಕಟಿಸುವ ಸಾಮರ್ಥ್ಯವಿದೆ. ಈ ಸಾಮರ್ಥ್ಯವೇ ಅದರ ಕಾರ್ಯ. ಈ ಜ್ಞಾನಕ್ಕೆ ಅಜ್ಞಾನವು ಆವರಣವಾದರೆ, ಜ್ಞಾನದ ಕಾರ್ಯಕ್ಕೆ ತಡೆ= ಹಾನಿ ಆಗುವುದಿಲ್ಲವೇ? ಆಗಿಯೇ ಆಗುತ್ತದೆ. (ಆಗುವುದಿಲ್ಲ ಎಂದು ಅದ್ವೈತದರ್ಶನವು ಹೇಳುತ್ತದೆ).

**ಭಾವವಿಲಾಸಿನೀ–** ಮಾಯಿಮತಾಂತರಮಪಿ ನೀತಿವಿರುದ್ಧಮಿತ್ಯಾಹ– **ಅನೃತಮಿತಿ** ॥ ಅನೃತಂ ವದತಶ್ಚೋರಸ್ಯ । ಅಸಂಬದ್ಧಂ ಪೂರ್ವೋತ್ತರಾಸಂಬದ್ಧಮ್ । ಯಾಮಿಕೈರ್ವಿಚಾರ್ಯಮಾಣಶ್ಚೋರಃ ಪೂರ್ವಮೇಕಂ ವದೇತ್ ಪುನಸ್ತದ್ವಿರುದ್ಧಮನ್ಯದಪಿ ವದೇತ್ । ತದಾಽಯಂ ಚೋರ ಇತಿ ನಿಶ್ಚಿನುಯುಸ್ತಥೇತಿ ಭಾವಃ। ಸಹಕಾರ್ಯಸ್ಯ ಅರ್ಥಪ್ರಕಾಶನಾಖ್ಯಕಾರ್ಯಸಹಿತಸ್ಯ ಜ್ಞಾನಸ್ಯ ಸ್ವರೂಪಭೂತನಿತ್ಯಜ್ಞಾನಸ್ಯ ಆವರಣೇ ಅವಿದ್ಯಾಖ್ಯಾವರಣೇ ಸತ್ಯಪಿ ಹಾನಿರ್ನ ಕಿಲ? ಜ್ಞಾನಪ್ರತಿಬಂಧಕಂ ಹ್ಯಾವರಣಮ್। ತಸ್ಮಿನ್ ಸತ್ಯಪಿ ಜ್ಞಾನಸ್ಯಾನ್ಯೂನತೇತಿ ಯನ್ಮಾಯಿಮತಮ್, ತದಪಿ ದುರ್ನೀತಿರೂಪತ್ವಾನ್ನೀತಿವಿರುದ್ಧಮಿತಿ ಭಾವಃ ॥ ೧೯೯ ॥

**ವಿವರಣೆ-** ಪರಬ್ರಹ್ಮನಿಗೆ ಅಜ್ಞಾನಾವರಣವನ್ನು ಒಪ್ಪುವ ಅದ್ವೈತಮತದ ಒಂದು ಶಾಖೆಯು ಲೋಕನೀತಿಗೆ ವಿರುದ್ಧ ಎಂದು ತೋರಿಸುತ್ತಾರೆ. ಕಳ್ಳತನ ಮಾಡಿದ ವ್ಯಕ್ತಿಯು ವಿಚಾರಣಾಧಿಕಾರಿಗಳ ಸಮ್ಮುಖದಲ್ಲಿ ಸುಳ್ಳನ್ನು ಹೇಳಿದಾಗ ಅವರ ಪ್ರಶ್ನೆಗೆ ಉತ್ತರಿಸಲಾಗದೆ ಪೂರ್ವಾಪರ ವಿರುದ್ಧವಾಗಿ ಮಾತನಾಡುತ್ತಾನೆ. ಬ್ರಹ್ಮನ ಜ್ಞಾನವು ನಿತ್ಯ; ಎಲ್ಲ ಪದಾರ್ಥಗಳೂ ಅದಕ್ಕೆ ವಿಷಯ - ಎಂದರೆ ಸಕಲ ವಸ್ತುಗಳನ್ನು ಪ್ರಕಟಪಡಿಸುತ್ತದೆ. ಇಂತಹ ಅವನ ಜ್ಞಾನಕ್ಕೆ ಅವಿದ್ಯಾವರಣವನ್ನು ಒಪ್ಪಿದರೆ ಅವನ ಜ್ಞಾನಕ್ಕೆ ನ್ಯೂನತೆ ಬರದೇ ಇರುತ್ತದೆಯೇ? ಬಂದೇ

ಬರುತ್ತದೆ. ಆದರೆ ಅದ್ವೈತಮತದಲ್ಲಿ ಬ್ರಹ್ಮನ ಜ್ಞಾನಕ್ಕೆ ಅಜ್ಞಾನಾವರಣವನ್ನು ಒಪ್ಪಿಯೂ ಅದಕ್ಕೆ ಯಾವ ನ್ಯೂನತೆಯೂ ಇಲ್ಲವೆನ್ನಲಾಗುತ್ತದೆ. ಇದು ಕಳ್ಳನ ಹೇಳಿಕೆಯಂತೆ ಅಸಂಬದ್ಧ.

**ಸಕೃದ್ ಭ್ರಷ್ಟಃ ಖಲಃ ಪಶ್ಚಾದ್ ಭ್ರಷ್ಟತಾಯಾ ಭಿಭೇತಿ ಕಿಮ್ ।**
**ಸರ್ವಜ್ಞಾಜ್ಞಾನದೌರ್ಘಟ್ಯಂ ಕಿಂ ನಾಭಾಷತ ಭೂಷಣಮ್ ॥ ೨೦೦ ॥**

**ಅರ್ಥ-** ಸಕೃತ್ = ಒಮ್ಮೆ, ಭ್ರಷ್ಟಃ = ಜಾರಿದ, ಖಲಃ = ದುಷ್ಟನು, ಪಶ್ಚಾತ್ = ಮತ್ತೆ, ಭ್ರಷ್ಟತಾಯಾಃ = ಬೇರೆ ಕೆಟ್ಟ ನಡವಳಿಕೆಗೆ, ಬಿಭೇತಿ ಕಿಮ್?= ಹೆದರುವನೇ? (ಹೆದರುವುದಿಲ್ಲ) ಸರ್ವಜ್ಞಾಜ್ಞಾನದೌರ್ಘಟ್ಯಂ = ಸರ್ವಜ್ಞನಾದ ಪರಬ್ರಹ್ಮನಲ್ಲಿ (ಅಜ್ಞಾನವು ಅಸಂಗತವಾಗಿರುವಾಗ) ಆ ಅಜ್ಞಾನದ ದೌರ್ಘಟ್ಯವನ್ನು, ಭೂಷಣಂ = ಅಲಂಕಾರವೆಂದು, ನ ಅಭಾಷತ ಕಿಂ?= ಹೇಳಲಿಲ್ಲವೇ?

**ಅನುವಾದ-** ಒಮ್ಮೆ ಭ್ರಷ್ಟನಾದ ದುಷ್ಟನು ಮತ್ತೊಮ್ಮೆ ಭ್ರಷ್ಟತನವನ್ನು ಮಾಡಲು ಹೆದರುವನೇ? ಸರ್ವಜ್ಞನಾದ ಬ್ರಹ್ಮನಿಗೆ ಅಜ್ಞಾನವನ್ನು ಹೇಳುವುದೇ ಭ್ರಷ್ಟತನ. ಅದಕ್ಕೆ ದುರ್ಘಟತ್ವವು ಭೂಷಣ ಎಂದು ಹೇಳುವುದು ಮತ್ತೊಂದು ಭ್ರಷ್ಟತನ. ಅಜ್ಞಾನಕ್ಕೆ ದುರ್ಘಟತ್ವವು ಭೂಷಣ ಎಂದು (ಅದ್ವೈತದರ್ಶನವು) ಹೇಳಲಿಲ್ಲವೇ?

**ಭಾವವಿಲಾಸಿನೀ–** ಮತಾಂತರಮಪಿ ನೀತಿವಿರುದ್ಧಮಿತ್ಯಾಹ– **ಸಕೃದಿತಿ** ॥ ಸಕೃದ್ ಭ್ರಷ್ಟಃ ಅನಾಚಾರಾದಿನಾ ಪತಿತಃ ಪಶ್ಚಾದ್ ಭ್ರಷ್ಟತಾಯಾಃ ಅನಾಚಾರಾಂತರೇಣ ಪಾತಿತ್ಯಾದ್ ಬಿಭೇತಿ ಕಿಮ್? ಭಿಕ್ಷೋರ್ಮಾಂಸನಿಷೇವಣಂ ಕಿಮುಚಿತಮ್? ಕಿಂ ತೇನ ಮದ್ಯಂ ವಿನಾ? ಇತಿ ಭ್ರಷ್ಟವಚನಾನ್ನ ಬಿಭೇತ್ಯೇವ । ಯತ ಏವ ಹಿ ಸರ್ವಜ್ಞೇ ಪರಮಾತ್ಮನಿ ಯದಜ್ಞಾನಂ ಕಥಿತಮ್, ತದೇವ ಪ್ರಥಮಾಬದ್ಧಮ್ । ಸರ್ವಜ್ಞೇ ಅಜ್ಞಾನಾಯೋಗಾತ್ । ಪುನಸ್ತಸ್ಯಾಜ್ಞಾನಸ್ಯ ಯದ್ದೌರ್ಘಟ್ಯಂ ದುರ್ಘಟತ್ವಂ ತದ್ಭೂಷಣಂ ನಾಭಾಷತ ಕಿಮ್? ಅಭಾಷತೈವ । ಇದಂ ಚ ದ್ವಿತೀಯಮಬದ್ಧಮ್ । ಅತಃ ಇದಮಪಿ ಮತಂ ಪ್ರಾಗುಕ್ತದುರ್ನೀತೇರುದಾಹರಣಮಿತಿ ಭಾವಃ ॥ ೨೦೦ ॥

**ವಿವರಣೆ-** ಪರಬ್ರಹ್ಮನಲ್ಲಿ ಅವಿದ್ಯೆಯ ಅಸಮರ್ಥನೀಯತೆಯು ಭೂಷಣವೇ, ದೂಷಣವಲ್ಲ (ಅವಿದ್ಯಾಯಾಃ ದುರ್ಘಟತ್ವಂ ಭೂಷಣಂ ನತು ದೂಷಣಂ) - ಎಂದು ಅದ್ವೈತವಾದದಲ್ಲಿ ನಿರೂಪಿಸಲಾಗಿದೆ. ಇದೂ ನೀತಿವಿರುದ್ಧವೆಂದು ಹೇಳುತ್ತಾರೆ. ಸರ್ವಜ್ಞನಿಗೆ ಅಜ್ಞಾನವನ್ನು ಹೇಳುವುದು ಮೊದಲನೆಯ ಭ್ರಷ್ಟತನ. ಇದನ್ನು ಸಮರ್ಥಿಸಲಾರದೆ ಅಸಮರ್ಥನೀಯತೆಯನ್ನು ಭೂಷಣ (ಅಲಂಕಾರ)ವೆಂದು ಹೇಳುವುದು ಇನ್ನೊಂದು ಭ್ರಷ್ಟತನ. ಹೀಗೆ ಮಾಡುವುದು ದುಷ್ಟನ ಸ್ವಭಾವ. ಒಮ್ಮೆ ಪತಿತನಾದ ದುಷ್ಟನು ಮತ್ತೊಂದು ಭ್ರಷ್ಟತೆಗೆ ಹೆದರುವುದಿಲ್ಲ.

**ಮಾಮಹಂ ನ ವಿಜಾನಾಮಿ ಮಾಂ ಜಾನಾಮ್ಯಹಮಿತ್ಯಪಿ ।**
**ಸರ್ವಸ್ಯಾನುಭವಾತ್ ಸ್ವಸ್ಯ ವಿಷಯೋऽಪಿ ಸ್ವಯಂ ಭವೇತ್ ॥ ೨೦೧ ॥**

**ಅರ್ಥ-** ಅಹಂ = ನಾನು, ಮಾಂ = ನನ್ನನ್ನು ನ ವಿಜಾನಾಮಿ = ತಿಳಿಯುವುದಿಲ್ಲ ಅಪಿ = ಮತ್ತು, ಅಹಂ = ನಾನು, ಮಾಂ = ನನ್ನನ್ನು ಜಾನಾಮಿ = ತಿಳಿಯುತ್ತೇನೆ. ಇತಿ = ಎಂದು, ಸರ್ವಸ್ಯ = ಎಲ್ಲರಿಗೂ, ಅನುಭವಾತ್ = ಜ್ಞಾನವಿರುವುದರಿಂದ, ಸ್ವಸ್ಯ = ತನ್ನ ಜ್ಞಾನಕ್ಕೆ, ಸ್ವಯಂ = ತಾನೇ, ವಿಷಯೋऽಪಿ = ವಿಷಯನೂ, ಭವೇತ್ = ಆಗುವನಷ್ಟೇ.

**ಅನುವಾದ-** ಎಲ್ಲರಿಗೂ ಕೂಡ, ನಾನು ನನ್ನನ್ನು ತಿಳಿದುಕೊಂಡಿಲ್ಲ ಎಂದು (ಪೂರ್ಣವಾಗಿ) ಮತ್ತು ನಾನು ನನ್ನನ್ನು ತಿಳಿದಿದ್ದೇನೆ ಎಂದು ಅನುಭವವಿರುವುದರಿಂದ 'ಜ್ಞಾತೃ' ಆತ್ಮನೇ ಜ್ಞಾನಕ್ಕೆ ವಿಷಯನೂ ಆಗುತ್ತಾನೆ.

**ಭಾವವಿಲಾಸಿನೀ–** ಅಧುನಾ ಈಶ್ವರಸ್ಯ ಜ್ಞಾನೇ ಕರ್ತೃಕರ್ಮಭಾವವಿರೋಧಾತ್ ಸ್ವಾವಿಷಯತ್ವಮಿತಿ ಯದ್ದೂಷಣಮುಕ್ತಮ್, ಸ್ವಸ್ವರೂಪಾನಭಿಜ್ಞತ್ವಸ್ಯ ಲೋಕೇ ದೋಷತಯಾ ಪರಿಪಠಿತತ್ವಾತ್ ತತ್ ಪರಿಹರ್ತುಮಾಹ– **ಮಾಮಹಮಿತಿ** ॥ 'ಮಾಮಹಂ ನ ಜಾನಾಮಿ' ಇತ್ಯಜ್ಞಾನಜ್ಞಾನೇ ಸ್ವಸ್ಯೈವ ಕರ್ಮತ್ವಸ್ಯ ಅಜ್ಞಾನಜ್ಞಾತೃತಯಾ ಕರ್ತೃತ್ವಸ್ಯ ಚ ಸರ್ವಸ್ಯಾನುಭವಾತ್ । 'ಮಾಮಹಂ ಜಾನಾಮಿ' ಇತ್ಯನುಭವಸ್ಯಾಪಲಾಪಂ ಕರಿಷ್ಯತೀತ್ಯತಃ ಪ್ರಥಮೋದಾಹರಣಮ್ । ಸ್ವಸ್ಯಾಪ್ಯಭಿಮತತ್ವಾತ್ ॥ ೨೦೧ ॥

**ವಿವರಣೆ-** ಅದ್ವೈತ ದರ್ಶನವು (ಜಗತ್ತು) ದೃಶ್ಯವಾದ್ದರಿಂದ (ಜ್ಞಾನವಿಷಯವಾದ್ದರಿಂದ) ಮಿಥ್ಯೆ ಎಂದು ಹೇಳುತ್ತದೆ. ಅದನ್ನು ಶ್ರೀಮಧ್ವಾಚಾರ್ಯರು ಹೀಗೆ ವಿಮರ್ಶಿಸಿದ್ದಾರೆ. "ಆತ್ಮನು ದೃಶ್ಯನಾದ್ದರಿಂದ (ಜ್ಞಾನಕ್ಕೆ ವಿಷಯನಾದ್ದರಿಂದ) ಅವನೂ ಮಿಥ್ಯಾ ಆಗಬೇಕಾದೀತು ಅಥವಾ ಅವನಂತೆ ಪ್ರಪಂಚವು ಸತ್ಯವಾಗಬೇಕಾದೀತು." ಈ ದೋಷಪರಿಹಾರಕ್ಕಾಗಿ ಅದ್ವೈತ ದರ್ಶನವು ಹೀಗೆ ಹೇಳುತ್ತದೆ: ಆತ್ಮನು ಜ್ಞಾನಕ್ಕೆ ವಿಷಯವೇ ಆಗುವುದಿಲ್ಲ ಏಕೆಂದರೆ ಆತ್ಮನು ಜ್ಞಾನಾಶ್ರಯ, ಅಂದರೆ ಜ್ಞಾನಕರ್ತೃ. ಅಂತಹ ಆತ್ಮನು ಜ್ಞಾನಕ್ಕೆ ವಿಷಯನಾದರೆ ಅವನು ಕರ್ಮ (ವಿಷಯ) ಆಗಬೇಕಾಗುತ್ತದೆ. ಆದರೆ ಇದು ಲೋಕವಿರುದ್ಧ. ಒಬ್ಬ ವ್ಯಕ್ತಿಯು (ಕರ್ತೃವು) ಗ್ರಾಮಕ್ಕೆ (ಕರ್ಮ) ಹೋಗುತ್ತಾನೆ ಎಂದು ಹೇಳಿದಾಗ ಕರ್ತೃಕರ್ಮಗಳು ಬೇರೆಬೇರೆಯಾಗಿವೆ. ಎರಡೂ ಒಂದೇ ಆದರೆ ತನ್ನನ್ನು ಕುರಿತು ತಾನೇ ಹೋಗಬೇಕಾದೀತು. ಇದು ಅಸಂಭವವಷ್ಟೇ. ಅದರಂತೆ ಆತ್ಮಕರ್ತೃಕಜ್ಞಾನಕ್ಕೆ ಆತ್ಮನೇ ವಿಷಯವಾಗುವುದಿಲ್ಲ. ಆದ್ದರಿಂದ ಆತ್ಮನಂತೆ ಜಗತ್ತು ಸತ್ಯವಾಗಬೇಕಾಗಿಲ್ಲ. ಈ ವಿಷಯವನ್ನು ಈ ಶ್ಲೋಕದಲ್ಲಿ ವಿಮರ್ಶಿಸಿದ್ದಾರೆ.

ವಸ್ತುಗಳು ಹೇಗೆ ಇವೆಯೋ ಹಾಗೆ ನಿಯಮಗಳನ್ನು ಕಾಣಬೇಕು. ಜಡವಸ್ತು ಯಾವುದೇ ಒಂದು ಕ್ರಿಯೆಯ ಕರ್ತೃ ಮತ್ತು ಕರ್ಮ ಆಗಿಲ್ಲ. ಚೇತನಗಳು ನಾನಾಕ್ರಿಯೆಗಳಿಗೆ ಕರ್ತೃವೂ,

ಕರ್ಮವೂ ಆಗಿರುವ ಅನುಭವವಿದೆ. ''ಮಾಮ್ ಅಹಂ ನ ಜಾನಾಮಿ'' ''ಮಾಮ್ ಅಹಂ ಜಾನಾಮಿ'' ಇತ್ಯಾದಿ ಅಬಾಧಿತ ಅನುಭವಗಳಿವೆ. ಆದ್ದರಿಂದ ಅದ್ವೈತದರ್ಶನವು ಹೇಳುವ ಕರ್ತೃ-ಕರ್ಮ ವಿರೋಧವು ಚೇತನಗಳಿಗೆ ಅನ್ವಯಿಸುವುದಿಲ್ಲ.

ಆತ್ಮನು ಕರ್ಮವಾಗಲಾರ ಎಂಬ ಶಂಕೆ ಮತ್ತು ಪರಿಹಾರ.

ಪರಸ್ಮಿನ್ ಸಮವೇತಾ ಯಾ ಕ್ರಿಯಾ ತತ್‌ಫಲಶಾಲಿ ಯತ್ ।
ತತ್ ಕರ್ಮೇತಿ ಹಿ ಭಾಟ್ಟೋಕ್ತಲಕ್ಷಣಾನುಪಪತ್ತಿತಃ ॥ ೨೦೨ ॥

ದೃಷ್ಟಾರ್ಥಸ್ಯ ಕಥಂ ತ್ಯಾಗೋ ವಕ್ತವ್ಯಂ ಲಕ್ಷಣಾಂತರಮ್ ।
ಕಿಂನು ಕಿಂಪುರುಷೋ ನಾಸ್ತಿ ಕಿನ್ನರೋ ವಾ ವಿಲಕ್ಷಣಃ ॥ ೨೦೩ ॥

**ಅರ್ಥ-** ಪರಸ್ಮಿನ್ = ಕರ್ಮವಲ್ಲದ ಪುರುಷನಲ್ಲಿ ಅಥವಾ ವಸ್ತುವಿನಲ್ಲಿ, ಸಮವೇತಾ = ಇರುವ, ಯಾ ಕ್ರಿಯಾ = ಯಾವ ಕ್ರಿಯೆಯೋ, ತತ್ಫಲಶಾಲಿ= ಅದರಿಂದಾಗುವ ಫಲವುಳ್ಳದ್ದು ಯತ್ = ಯಾವುದೋ, ತತ್ = ಅದು, ಕರ್ಮ ಇತಿ = ಕರ್ಮವೆಂದು , ಭಾಟ್ಟೋಕ್ತಲಕ್ಷಣಾನುಪಪತ್ತಿತಃ = ಭಾಟ್ಟರು ಹೇಳುವ ಲಕ್ಷಣವು ಉಪಪನ್ನವಾಗುವುದಿಲ್ಲ ಎಂಬ ಕಾರಣದಿಂದ, ದೃಷ್ಟಾರ್ಥಸ್ಯ = ಅನುಭವಸಿದ್ಧವಾದ ವಿಷಯದ, ತ್ಯಾಗಃ = ತ್ಯಾಗವು, ಕಥಂ= ಹೇಗೆ? (ಆದ್ದರಿಂದ ಅನುಭವಕ್ಕೆ ಅನುಸಾರವಾಗಿ), ಲಕ್ಷಣಾಂತರಂ= ಬೇರೆ ಲಕ್ಷಣವು, ವಕ್ತವ್ಯಂ= ಹೇಳಲ್ಪಡಬೇಕು, ಕಿಂಪುರುಷಃ= ಕಿಂಪುರುಷರು, ಕಿನ್ನರೋ ವಾ= ಮತ್ತು ಕಿನ್ನರರು, ನಾಸ್ತಿ ಕಿಂನು= ಇಲ್ಲವೇ?

**ಅನುವಾದ-** ಕರ್ಮವಲ್ಲದ ವ್ಯಕ್ತಿಯಲ್ಲಿ ಅಥವಾ ವಸ್ತುವಿನಲ್ಲಿ ಇರುವ ಕ್ರಿಯೆಯ ಫಲವು ಎಲ್ಲಿ ಇರುವುದೋ ಅದು ಕರ್ಮ ಎಂದು ಭಾಟ್ಟಮೀಮಾಂಸಕರು ಹೇಳುತ್ತಾರೆ. ಒಂದೇ ವ್ಯಕ್ತಿ ಅಥವಾ ವಸ್ತು ಕರ್ತೃವೂ, ಕರ್ಮವೂ ಆದರೆ ಈ ಲಕ್ಷಣದ ಸಮನ್ವಯವಾಗುವುದಿಲ್ಲ. ಆದ್ದರಿಂದ ಒಂದೇ ವ್ಯಕ್ತಿ ಅಥವಾ ವಸ್ತು ಒಂದು ಕ್ರಿಯೆಯ ಕರ್ತೃ ಮತ್ತು ಕರ್ಮ ಎಂಬ ವಿಚಾರವನ್ನು ತ್ಯಜಿಸಬೇಕು ಎಂದು ಅದ್ವೈತದರ್ಶನದ ಅಭಿಪ್ರಾಯ. ಇದು ಸರಿಯಲ್ಲ. ಭಾಟ್ಟರು ಹೇಳುವ ಲಕ್ಷಣದ ಸಮನ್ವಯವಾಗುವುದಿಲ್ಲ ಎಂಬ ಕಾರಣದಿಂದ ಅನುಭವ ಸಿದ್ಧ ಪ್ರಮೇಯವನ್ನು ಬಿಡಬಹುದೇ? ಸರ್ವಥಾ ಇಲ್ಲ. ಹಾಗೆ ಮಾಡುವುದಾದರೆ ಮನುಷ್ಯಲಕ್ಷಣಗಳಿಲ್ಲ ಎಂಬ ಕಾರಣದಿಂದ ಕಿಂಪುರುಷರ-ಕಿನ್ನರರ ಅಸ್ತಿತ್ವವನ್ನೇ ನಿರಾಕರಿಸಬೇಕಾಗುತ್ತದೆ.

ಭಾವವಿಲಾಸಿನೀ– ಕಿಂಚ ಸ್ವಸ್ಯೈವ ಸ್ವವಿಷಯತ್ವಂ ಪರಸಮವೇತಕ್ರಿಯಾಫಲಶಾಲಿತ್ವಂ ಕರ್ಮತ್ವಮಿತಿ ಭಾಟ್ಟೋಕ್ತ ಲಕ್ಷಣಾನುಪಪತ್ತ್ಯಾ ನಾಂಗೀಕರೋಷಿ ಉತ ಕರ್ತೃಕರ್ಮಭಾವವಿರೋಧಾದಿತಿ ವಿಕಲ್ಪಂ ಮನಸಿ ನಿಧಾಯಾದ್ಯಂ ದೂಷಯತಿ– ಪರಸ್ಮಿನ್ನಿತಿ ॥ ತಸ್ಯಾಃ ಕ್ರಿಯಾಯಾ ಯತ್ಫಲಮ್,

ತಚ್ಛಾಲಿ ತತ್ಪರಸಮವೇತಕ್ರಿಯಾಫಲಶಾಲಿ । ದೃಷ್ಟಾರ್ಥಸ್ಯ ಉಕ್ತಾನುಭವದ್ವಯಬಲಾತ್ ಸರ್ವಾನುಭವಸಿದ್ಧಾರ್ಥಸ್ಯ। ಲಕ್ಷಣಾಂತರಂ ಕರ್ತುರೀಪ್ಸಿತತಮಮಿತ್ಯಾದಿಲಕ್ಷಣಾಂತರಮ್ । ಲಕ್ಷಣಾನುಪಪತ್ತ್ಯಾ ದೃಷ್ಟಾರ್ಥಪರಿತ್ಯಾಗೋ ನೇತ್ಯತ್ರ ದೃಷ್ಟಾಂತಮಾಹ– ಕಿನ್ನಿತಿ ॥ ಕಿಂ ಪುರುಷಃ ತುರಂಗವಕ್ತ್ರಾಕಾರವಕ್ತ್ರವಾನನ್ಯತ್ರ ಮನುಷ್ಯಾಕಾರವಾನ್, ಕಿಂನರಃ ಮನುಷ್ಯಮುಖಸದೃಶಮುಖ-ವಾನನ್ಯತ್ರ ಪಕ್ಷ್ಯಾಕಾರಃ । ವಿಲಕ್ಷಣಃದೃಷ್ಟಮನುಷ್ಯವಿರುದ್ಧಲಕ್ಷಣಃ ಸರ್ವಾನುಭೂತಪಕ್ಷಿತುರಂಗ-ಲಕ್ಷಣರಹಿತೋಽಪಿ ಕಿಂಪುರುಷಾದಿಃ ಯಥಾದೃಷ್ಟತ್ವಾದಂಗೀಕಾರ್ಯಃ, ತಥಾ ಭಾಟ್ಟೋಕ್ತ-ಕರ್ಮಲಕ್ಷಣರಹಿತಮಪಿ ಸ್ವಕರ್ಮಕತ್ವಮಂಗೀಕರ್ತವ್ಯಮಿತಿ ಭಾವಃ ॥ ೨೦೨–೨೦೩ ॥

**ವಿವರಣೆ–** (1) ವಸ್ತುಸ್ಥಿತಿಗೆ ಅನುಗುಣವಾಗಿ ಲಕ್ಷಣವನ್ನು ಹೇಳಬೇಕು; 'ಮಾಮಹಂ ನ ಜಾನಾಮಿ' ಇತ್ಯಾದಿಪ್ರತೀತಿಗಳಿಂದ ಆತ್ಮನು ಜ್ಞಾನಕ್ರಿಯೆಯ ಕರ್ತೃವೂ ಕರ್ಮವೂ (ವಿಷಯನೂ) ಆಗಿರುವುದು ಅನುಭವಸಿದ್ಧವಾಗಿದೆ. ಈ ಅನುಭವಕ್ಕೆ ಅನುಗುಣವಾಗಿ ಕರ್ಮದ ಲಕ್ಷಣವನ್ನು ಹೇಳಬೇಕು. ಅದನ್ನು ಹೀಗೆ ಹೇಳಬಹುದು. ಕರ್ತೃವು ತನ್ನ ಕ್ರಿಯೆಯಿಂದ ಯಾವುದನ್ನು ಹೊಂದಲು ಬಯಸುವನೋ ಅದು ಕರ್ಮ. ಗಮನಕ್ರಿಯೆಯಿಂದ ಗ್ರಾಮವನ್ನು ತಲುಪಿದರೆ ಗಮನಕ್ರಿಯೆಯ ಕರ್ಮ ಗ್ರಾಮ. ಅದರಂತೆ ನನ್ನನ್ನು ನಾನು ತಿಳಿಯುತ್ತೇನೆ ಎಂಬ ಅನುಭವವಿರುವುದರಿಂದ ತಾನೇ ತನ್ನ ಜ್ಞಾನಕ್ಕೆ ವಿಷಯವಾಗುವುದು ಇಷ್ಟವಾದ್ದರಿಂದ ಆತ್ಮನು ಕರ್ತೃವೂ-ಕರ್ಮವೂ ಆಗಲು ಯಾವುದೇ ಬಾಧಕವಿಲ್ಲ.

(2) ಕಿಂಪುರುಷ-ಕುದುರೆಯ ಮುಖ ಮತ್ತು ಮನುಷ್ಯದೇಹವುಳ್ಳ ಪ್ರಾಣಿ.

(3) ಕಿನ್ನರ-ಮನುಷ್ಯ ಮುಖ ಮತ್ತು ಪಕ್ಷಿದೇಹವುಳ್ಳ ಪ್ರಾಣಿ.

(4) ಕರ್ತುರೀಪ್ಸಿತತಮಂ ಕರ್ಮ- ಪಾಣಿನೀಯ 1.4.49. ಕರ್ತೃವು ತನ್ನ ಕ್ರಿಯೆಯಿಂದ ಯಾವುದನ್ನು ಹೊಂದಲು ಉದ್ದೇಶಿಸಿರುವನೋ ಅದು ಕರ್ಮ.

ಅದ್ವೈತದರ್ಶನದಲ್ಲಿ ವ್ಯಾಹತಿ-

ಕರ್ಮತ್ವಸ್ಯಾನಿರುಕ್ತ್ಯಾ ಹಿ ದೃಶ್ಯಾಧ್ಯಾಸೋ ದೃಶೀರಿತಃ ।
ಪರೋಕ್ತಲಕ್ಷಣೇ ಭಕ್ತ್ಯಾ ತತ್ ಕುತೋಽದ್ಯ ನಿರುಚ್ಯತೇ ॥ ೨೦೪ ॥

**ಅರ್ಥ–** ಕರ್ಮತ್ವಸ್ಯ = ಕರ್ಮತ್ವದ, ಅನಿರುಕ್ತ್ಯಾ = ನಿರ್ವಚನದ ಅಭಾವದಿಂದ, ದೃಶಿ = (ಅಧಿಷ್ಠಾನ ಚೈತನ್ಯನಲ್ಲಿ) ಬ್ರಹ್ಮನಲ್ಲಿ, ದೃಶ್ಯಾಧ್ಯಾಸಃ = ಕಾಣುವ ಪ್ರಪಂಚದ ಆರೋಪವು, ಈರಿತಃ = (ಅದ್ವೈತಶಾಸ್ತ್ರದಲ್ಲಿ) ಹೇಳಲ್ಪಟ್ಟಿದೆ. (ಆದರೆ), ಅದ್ಯ = ಈಗ, ಪರೋಕ್ತಲಕ್ಷಣೇ = ಪರರಿಂದ (ಭಾಟ್ಟರಿಂದ ಹೇಳಲ್ಪಟ್ಟ) ಲಕ್ಷಣದಲ್ಲಿ, ಭಕ್ತ್ಯಾ = ಭಕ್ತಿಯಿಂದ, ತತ್= ಆ ಕರ್ಮತ್ವವು, ಕುತಃ= ಏಕೆ, ನಿರುಚ್ಯತೇ= ಹೇಳಲ್ಪಡುತ್ತದೆ?

**ಅನುವಾದ-** 'ಕರ್ಮ'ಕ್ಕೆ ಲಕ್ಷಣವೇ ಇಲ್ಲ ಎಂದು ಪ್ರತಿಪಾದಿಸಿ ಜ್ಞಾನದಲ್ಲಿ= ಅಧಿಷ್ಠಾನ ಚೈತನ್ಯದಲ್ಲಿ ದೃಶ್ಯ ಪದಾರ್ಥಗಳ ಆರೋಪವಾಗಿದೆ ಎಂದು ಅದ್ವೈತದರ್ಶನವು ಹೇಳಿದೆ. ಇದೇ ದರ್ಶನವು ಭಾಟ್ಟರು ಹೇಳಿದ ಲಕ್ಷಣದ ಮೇಲೆ ಭಕ್ತಿಯಿಂದ 'ಕರ್ಮ'ಕ್ಕೆ ಲಕ್ಷಣವನ್ನು ಹೇಳುತ್ತಾರೆ! ಏಕೆ? (ವ್ಯಾಹತಿಯು ಕಾಣುವುದಿಲ್ಲವೇ?)

**ಭಾವವಿಲಾಸಿನೀ–** ಕರ್ಮಲಕ್ಷಣಾನಂಗೀಕಾರೇಣ ಕರ್ಮತ್ವಸ್ಯಾನಿರುಕ್ತ್ಯಾ ಜ್ಞಾನಸ್ಯ ಜ್ಞೇಯೇನ ಸಹ ವಿಷಯವಿಷಯಿಭಾವಾನುಪಪತ್ತ್ಯೇತಿ ಯಾವತ್ । ದೃಶ್ಯಸ್ಯ ಘಟಾದೇಃ ಅಧ್ಯಾಸಃ ಆರೋಪಃ ದೃಶಿ ಅಧಿಷ್ಠಾನಚೈತನ್ಯೇ । ತದ್ ವಿಷಯತ್ವಮ್ । ದೃಗ್ ದೃಶ್ಯಯೋಃ ಸಂಬನ್ಧಾನುಪಪತ್ತ್ಯಾ ಹಿ ಬ್ರಹ್ಮಣಿ ಜಗದಾರೋಪೋಽಂಗೀಕೃತಃ । ಅಧುನಾ ಪರೋದೀರಿತವಿಷಯಲಕ್ಷಣೇ ಅಭಿಮಾನಂ ಕುರ್ವತಃ ಕಥಂ ನ ಪೂರ್ವೋತ್ತರವಿರೋಧ ಇತಿ ಭಾವಃ ॥ ೨೦೪ ॥

**ವಿವರಣೆ –** ಜ್ಞಾನರೂಪನಾದ ಬ್ರಹ್ಮನು ಅಸಂಗ; (ಅಸಂಗೋ ಹ್ಯಯಂ ಪುರುಷಃ). ಆದ್ದರಿಂದ ಬ್ರಹ್ಮನಿಗೆ ಯಾವುದೇ ಪದಾರ್ಥಗಳ ಸಂಗವಾಗುವುದಿಲ್ಲ; ಆದ್ದರಿಂದ ವಿಷಯತ್ವವೇ ಪದಾರ್ಥಗಳಲ್ಲಿ ಕೂಡುವುದಿಲ್ಲ; ಆದ್ದರಿಂದ ಅವು ಮಿಥ್ಯಾ; ಕತ್ತಲಿನಲ್ಲಿ ಹಗ್ಗವನ್ನು ನೋಡಿ ಹಾವು ಎಂದು ಭ್ರಮಿಸುತ್ತೇವೆ. ಅದರಂತೆ ಅಜ್ಞಾನವೆಂಬ ಕತ್ತಲಲ್ಲಿ ಬ್ರಹ್ಮನನ್ನು ಸರಿಯಾಗಿ ತಿಳಿಯದೆ ಭ್ರಾಂತಿಯಿಂದ ಅವನನ್ನೇ ಘಟ, ಪಟ ಇತ್ಯಾದಿಯಾಗಿ ವ್ಯವಹರಿಸುತ್ತೇವೆ. ಆದ್ದರಿಂದ ಈ ಘಟ, ಪಟಾದಿಗಳು ಸತ್ಯವಾಗಿರದೆ ಬ್ರಹ್ಮನಲ್ಲಿ ಆರೋಪಿತವಾಗಿವೆ. ಹೀಗೆ ಅದ್ವೈತಶಾಸ್ತ್ರವು ಹೇಳುತ್ತದೆ.

ಭಾಟ್ಟರ ಕರ್ಮಲಕ್ಷಣವು ಸರಿಯಲ್ಲ -

ಅಂತ್ಯಶ್ಚರಣಸಂಯೋಗೋ ಗ್ರಾಮೇಣ ಸಹ ಯೋ ಭವೇತ್ ।
ನ ತತ್ಫಲಮನುದ್ದೇಶಾತ್ ಕ್ರಿಯಾಯಾ ಬಹುದೂರತಃ ॥ ೨೦೫ ॥

**ಅರ್ಥ-** ಗ್ರಾಮೇಣ ಸಹ = ಗ್ರಾಮದೊಂದಿಗೆ, ಯಃ ಅಂತ್ಯಃ ಚರಣಸಂಯೋಗಃ = ಯಾವ ಕೊನೆಯ ಹೆಜ್ಜೆಯ ಸಂಬಂಧವು, ಭವೇತ್= ಆಗುವುದೋ, ತತ್= ಅದು, ನ ಫಲಂ= ಫಲವಲ್ಲ. ಬಹುದೂರತಃ= ಬಹಳ ದೂರದಿಂದ, ಕ್ರಿಯಾಯಾಃ= ಗಮನಕ್ರಿಯೆಯ, ಅನುದ್ದೇಶಾತ್= ಉದ್ದೇಶವಲ್ಲವಾದ್ದರಿಂದ.

**ಅನುವಾದ-** 'ಚೈತ್ರಃ ಗ್ರಾಮಂ ಗಚ್ಛತಿ' - ಈ ವಾಕ್ಯದಲ್ಲಿ ಗಮನಕ್ರಿಯೆಯ ಕರ್ಮ ಗ್ರಾಮ ಎಂದು ಸರ್ವಸಮ್ಮತ. ಆದರೆ ಇಲ್ಲಿ ಭಾಟ್ಟರ ಲಕ್ಷಣದ ಸಮನ್ವಯ-ವಾಗುವುದಿಲ್ಲ. ಪರ= ಚೈತ್ರ. ಅವನಲ್ಲಿ ಸಮವೇತಕ್ರಿಯಾ= ಗಮನಕ್ರಿಯಾ. ಅದರ ಫಲ= ಗ್ರಾಮಕ್ಕೆ ಚೈತ್ರನ ಪಾದಸ್ಪರ್ಶ. ಆದ್ದರಿಂದ ಗ್ರಾಮವು ಫಲ ಎಂದು ಹೇಳಬೇಕು. ಆದರೆ ಬಹಳ ದೂರದಿಂದ ಗ್ರಾಮದವರೆಗೆ ನಡೆದವನಿಗೆ ಗ್ರಾಮವನ್ನು ತಲುಪುವುದು ಉದ್ದೇಶವಲ್ಲ.

**ಭಾವವಿಲಾಸಿನೀ**– ಅಧುನಾ ಪರೋಕ್ತಕರ್ಮಲಕ್ಷಣಂ ದೂಷಯತಿ– ಅಂತ್ಯ ಇತಿ ॥ ಕ್ರಿಯಾಫಲಂ ಕಿಲ ಗ್ರಾಮೇಣ ಸಹ ಅಂತಿಮಶ್ಚರಣಸಂಯೋಗಃ । ಸಃ ಕರ್ತರಿ ಪುರುಷೇಽಪ್ಯಸ್ತೀತಿ ತತ್ರಾತಿ-ವ್ಯಾಪ್ತಿಪರಿಹಾರಾಯ ಹಿ ಪರಸಮವೇತೇತ್ಯುಕ್ತಮ್ । ತತ್ರ ಯಃ ಗ್ರಾಮೇಣ ಸಹಾನ್ತ್ಯಶ್ಚರಣ-ಸಂಯೋಗಃ ತತ್ಫಲಮೇವ ನ । ತತ್ರ ಹೇತುಃ ಬಹುದೂರತಃ ಕ್ರಿಯಾಯಾಃ ಗಮನಕ್ರಿಯಾಯಾಃ ಅನುದ್ದೇಶಾದ್ ಅನುದ್ದೇಶ್ಯತ್ವಾದಿತಿ ಯಾವತ್ ॥ ೨೦೫ ॥

**ವಿವರಣೆ** – ಗ್ರಾಮದೊಂದಿಗೆ ಚೈತ್ರನ ಚರಣಸಂಯೋಗವೇ ಗಮನಕ್ರಿಯೆಯ ಫಲ. ಈ ಸಂಯೋಗವು ಗ್ರಾಮದಲ್ಲಿರುವಂತೆ ಚೈತ್ರನಲ್ಲೂ ಇದೆ. ಆದ್ದರಿಂದ ಭಾಟ್ಟರ ಕರ್ಮಲಕ್ಷಣಕ್ಕೆ ಅತಿವ್ಯಾಪ್ತಿ ದೋಷವಿದೆ. ಈ ಅತಿವ್ಯಾಪ್ತಿಯ ಪರಿಹಾರಕ್ಕಾಗಿ 'ಪರಸಮವೇತಕ್ರಿಯಾ'. ಫಲಶಾಲಿತ್ವಮ್ ಎಂದು ಕರ್ಮಲಕ್ಷಣವನ್ನು ಹೇಳಬೇಕು. ಚೈತ್ರನಿಗೆ ಚೈತ್ರನು ಪರ ಅಲ್ಲ. ಆದ್ದರಿಂದ ಚೈತ್ರನಲ್ಲಿ ಲಕ್ಷಣಸಮನ್ವಯವಾಗುವುದಿಲ್ಲ. ಅತಿವ್ಯಾಪ್ತಿಯ ಪರಿಹಾರವಾಗುತ್ತದೆ. ಆದರೆ ಗ್ರಾಮದೊಂದಿಗೆ ಚೈತ್ರನ ಚರಣಸಂಯೋಗವು ಗಮನಕ್ರಿಯೆಯ ಫಲವಲ್ಲ. ಬಹುದೂರದಿಂದ ನಡೆಸುವ ಗಮನಕ್ರಿಯೆಗೆ ಗ್ರಾಮವನ್ನು ತಲುಪುವುದೇ ಫಲವಲ್ಲ. ಗ್ರಾಮವನ್ನು ತಲುಪುವುದೇ ಉದ್ದೇಶವಲ್ಲವಾದ್ದರಿಂದ. ಭಾಟ್ಟರ ಕರ್ಮಲಕ್ಷಣಕ್ಕೆ 'ಗ್ರಾಮ' ದಲ್ಲಿ ಅವ್ಯಾಪ್ತಿ ದೋಷವಿದೆ.

ಗ್ರಾಮಂ ಪದಾ ಸ್ಪ್ರಷ್ಟುಮೇವ ನಹಿ ಕೋಽಪಿ ವ್ರಜೇತ್ ಪುಮಾನ್ ।
ಗ್ರಾಮಸ್ಥಧನಪೂರ್ವಾರ್ಥಪ್ರಾಪ್ತಿರೇವ ಪ್ರಯೋಜನಮ್ ॥ ೨೦೬ ॥

**ಅರ್ಥ**- ಗ್ರಾಮಂ = ಗ್ರಾಮವನ್ನು, ಪದಾ = ಕಾಲಿನಿಂದ, ಸ್ಪ್ರಷ್ಟುಮೇವ = ಮುಟ್ಟುವುದಕ್ಕಾಗಿಯೇ, ಕೋಽಪಿ ಪುಮಾನ್ = ಯಾವ ಮನುಷ್ಯನು, ನ ವ್ರಜೇತ್ = ಹೋಗುವುದಿಲ್ಲ, ಗ್ರಾಮಸ್ಥಧನಪೂರ್ವಾರ್ಥಪ್ರಾಪ್ತಿರೇವ = ಗ್ರಾಮದಲ್ಲಿರುವ ಹಣಮೊದಲಾದ ವಸ್ತುಗಳನ್ನು ಪಡೆಯುವುದೇ, ಪ್ರಯೋಜನಂ = ಪ್ರಯೋಜನವು.

**ಅನುವಾದ**- ಯಾವ ಮನುಷ್ಯನೂ ಕೂಡ ಕೇವಲ ಗ್ರಾಮವನ್ನು ತಲಪುವ ಉದ್ದೇಶದಿಂದ ಗಮನವನ್ನು ಮಾಡುವುದಿಲ್ಲ, ಗ್ರಾಮದಲ್ಲಿರುವ ಹಣ ಮೊದಲಾದವುಗಳನ್ನು ಪಡೆಯುವುದು ಗಮನದ ಪ್ರಯೋಜನ.

**ಭಾವವಿಲಾಸಿನೀ**– ತದೇವ ವಿಶದಯತಿ– ಗ್ರಾಮಮಿತಿ ॥ ಪದಾ ಗ್ರಾಮಂ ಸ್ಪ್ರಷ್ಟುಮೇವ ಕೋಽಪಿ ಪುಮಾನ್ನಹಿ ವ್ರಜೇತ್ । ಬಹ್ವಾಯಾಸಸಾಧ್ಯಗಮನಕ್ರಿಯಾಯಾಃ ಗ್ರಾಮಚರಣಸಂಯೋಗ ಏವ ನ ಕಸ್ಯಾಪ್ಯುದ್ದೇಶ್ಯ ಇತಿ ಭಾವಃ । ಕಿಂ ತರ್ಹಿ ಪ್ರಯೋಜನಮಿತ್ಯತ ಆಹ– ಗ್ರಾಮಸ್ಥೇತಿ ॥ ಅತಃ ಕ್ರಿಯಾಫಲಶಾಲಿತ್ವಂ ಕರ್ತುರೇವ, ನ ಕರ್ಮಣ ಇತಿ ಕಥಮಿದಂ ಕರ್ಮಲಕ್ಷಣಂ ಸ್ಯಾತ್ । ದೂರೇ ತಸ್ಯಾತಿವ್ಯಾಪ್ತಿಪರಿಹಾರಾಯ ವಿಶೇಷಣದಾನಮ್ ॥ ೨೦೬ ॥

**ವಿವರಣೆ** – ಈ ಶ್ಲೋಕವು 'ಗ್ರಾಮವನ್ನು ತಲುಪುವುದೇ ಗಮನಕ್ರಿಯೆಯ ಉದ್ದೇಶವಲ್ಲ' ಎಂಬುದನ್ನು ವಿಶದೀಕರಿಸುತ್ತದೆ. ದೂರದಿಂದ ಗ್ರಾಮದವರೆಗೆ ನಡೆಯುವುದು ಬಹಳ ಆಯಾಸಕರ. ಕೇವಲ ಗ್ರಾಮವನ್ನು ಮುಟ್ಟುವುದಕ್ಕಾಗಿ ಯಾರೂ ಆಯಾಸಕರಕೆಲಸವನ್ನು ಮಾಡುವುದಿಲ್ಲ. ಗ್ರಾಮದಲ್ಲಿರುವ ಧನ ಮೊದಲಾದ ವಸ್ತುಗಳನ್ನು ಪಡೆಯುವುದಕ್ಕಾಗಿ, ಬಂಧು-ಮಿತ್ರರ ದರ್ಶನಕ್ಕಾಗಿ ಹೋಗುತ್ತಾರೆ. ಆದ್ದರಿಂದ ಗಮನಕ್ರಿಯೆಯ ಫಲದ ಗಮನ ಕರ್ತೃವಿಗೇ ಆಗುತ್ತದೆ. ಗ್ರಾಮಕ್ಕೆ ಅಲ್ಲ. ಆದ್ದರಿಂದ ಭಾಟ್ಟರ ಕರ್ಮಲಕ್ಷಣಕ್ಕೆ ಲಕ್ಷ್ಯದಲ್ಲಿ ಸಮನ್ವಯವೇ ಆಗುವುದಿಲ್ಲ.

ಇನ್ನೊಂದು ದೋಷ -

**ನ ಚೇತ್ ಪದೇಪದೇ ಪುಂಸಃ ಕ್ರಿಯಯಾ ಸ್ಯಾತ್ ವಿಭಾಗವಾನ್ ।**
**ಪೂರ್ವಃ ಪ್ರದೇಶಸ್ಸಂಯೋಗಶಾಲೀ ಸ್ಯಾದುತ್ತರೋಽಪಿ ಚ ॥ ೨೦೭ ॥**

**ಅರ್ಥ**- ನ ಚೇತ್ = ಹೀಗಲ್ಲದಿದ್ದರೆ, ಪುಂಸಃ = ಮನುಷ್ಯನ, ಪದೇಪದೇ = ಪ್ರತಿಹೆಜ್ಜೆಯಲ್ಲಿಯೂ, ಕ್ರಿಯಯಾ = ಗಮನಕ್ರಿಯೆಯಿಂದ, ಪೂರ್ವಪ್ರದೇಶಃ = ಪೂರ್ವಪ್ರದೇಶವು, ವಿಭಾಗವಾನ್ ಸ್ಯಾತ್ = ವಿಭಾಗವುಳ್ಳದ್ದಾಗುತ್ತದೆ. ಉತ್ತರೋಽಪಿ ಚ= ಮುಂದಿನ ಪ್ರದೇಶವು, ಸಂಯೋಗಶಾಲೀ ಸ್ಯಾತ್ = ಸಂಯೋಗವುಳ್ಳದ್ದಾಗುತ್ತದೆ.

**ಅನುವಾದ**- ಅಲ್ಲದಿದ್ದರೆ= ಧನ ಮೊದಲಾದವುಗಳ ಪ್ರಾಪ್ತಿಯೇ ಗಮನಕ್ರಿಯೆಯ ಉದ್ದೇಶವಾದುದರಿಂದ, ಅದೇ ಫಲವಲ್ಲದಿದ್ದರೆ, ಮನುಷ್ಯನು ಗ್ರಾಮವನ್ನು ತಲುಪಲು ಅನೇಕ ಹೆಜ್ಜೆಗಳನ್ನು ಇಡುತ್ತಾನೆ. ಪ್ರತಿ ಹೆಜ್ಜೆಹೆಜ್ಜೆಯಿಂದಲೂ ಹಿಂದಿನ ಜಾಗದಿಂದ ಬೇರ್ಪಡುವಿಕೆ ಮತ್ತು ಮುಂದಿನ ಸ್ಥಳದ ಸಂಯೋಗವು ಆಗುತ್ತದೆ.

**ಭಾವವಿಲಾಸಿನೀ**– ನನು ಮಾಸ್ತೂದ್ದೇಶ್ಯತ್ವಮ್, ಕ್ರಿಯಾಜನ್ಯತ್ವೇನೈವ ಚರಣಸಂಯೋಗಸ್ಯ ಫಲತ್ವಮಸ್ತ್ವಿತ್ಯತ ಆಹ– **ನ ಚೇದಿತಿ** ॥ ನಚೇದ್ ಧನಾದಿಪ್ರಾಪ್ತಿರೇವೋದ್ದೇಶ್ಯತಯಾ ಫಲಂ ನ ಚೇತ್, ಕ್ರಿಯಯಾ ಗಮನಕ್ರಿಯಯಾ ಪೂರ್ವಃ ಪ್ರದೇಶಃ ವಿಭಾಗವಾನ್ ಕ್ರಿಯಾಜನ್ಯ-ವಿಭಾಗವಾನಿತಿ ಯಾವತ್ । ಸ್ಯಾತ್ । ಉತ್ತರಪ್ರದೇಶೋಽಪಿ ಸಂಯೋಗಶಾಲೀ ಸ್ಯಾತ್ ಕ್ರಿಯಾಜನ್ಯಸಂಯೋಗವಾನಿತಿ ಯಾವತ್। ಕ್ರಿಯಾಂ ಕ್ರಿಯಾತಃ ಪೂರ್ವದೇಶವಿಭಾಗಃ ಉತ್ತರ-ದೇಶಸಂಯೋಗಶ್ಚೇತಿ ಸರ್ವೈರನುಭೂಯಮಾನತ್ವಾತ್ ॥ ೨೦೭ ॥

**ವಿವರಣೆ** – ಗಮನಕ್ರಿಯೆಯ ಉದ್ದೇಶವೇ ಅದರ ಫಲವಲ್ಲದಿದ್ದರೆ ಕ್ರಿಯಾಜನ್ಯವಾದ ಸಂಯೋಗವೇ ಫಲವಾದರೆ ಗಮನಕ್ರಿಯೆಯನ್ನು ಮಾಡುವ ಪುರುಷನ ಪ್ರತಿ ಹೆಜ್ಜೆಯಿಂದಲೂ ಅವನಿಗೆ ಹಿಂದಿನ ಜಾಗದಿಂದ ವಿಭಾಗ ಮತ್ತು ಮುಂದಿನ ಜಾಗದ ಸಂಯೋಗವು ಆಗುತ್ತದೆ.

ಕರ್ಮತ್ವವು ಸ್ವರೂಪಸಂಬಂಧವಿಶೇಷ -

**ತ್ವದುಕ್ತಲಕ್ಷಣೇನ ಸ್ಯಾತ್ ವಿಷಯತ್ವಂ ತಯೋರಪಿ ।**
**ಅತಃ ಸ್ವರೂಪಸಂಬಂಧವಿಶೇಷಸ್ಸಹಿ ಕಶ್ಚನ ॥ ೨೦೮ ॥**

**ಅರ್ಥ-** ತ್ವದುಕ್ತಲಕ್ಷಣೇನ = ನೀವು ಹೇಳಿದ ಕರ್ಮದ ಲಕ್ಷಣದಿಂದ, ತಯೋರಪಿ = ಪೂರ್ವ ಹಾಗೂ ಉತ್ತರ ಸ್ಥಳಗಳಿಗೂ, ವಿಷಯತ್ವಂ = ವಿಷಯತ್ವವು, ಸ್ಯಾತ್ = ಆಗಬೇಕಾದೀತು. ಅತಃ = ಆದ್ದರಿಂದ, ಸಃ= ಆ ವಿಷಯ-ವಿಷಯಿಭಾವವು, ಕಶ್ಚನ ಸ್ವರೂಪಸಂಬಂಧವಿಶೇಷಃ= ಒಂದು ಸ್ವರೂಪಸಂಬಂಧವೇ.

**ಅನುವಾದ-** ನೀವು ಹೇಳುವ ಲಕ್ಷಣದಿಂದ ಹಿಂದಿನ, ಮುಂದಿನ ಜಾಗಗಳೂ ಕರ್ಮವಾಗಬೇಕಾದೀತು. ಆದರೆ ಹೀಗೆ ಯಾರೂ ಹೇಳುವುದಿಲ್ಲ. ಆದ್ದರಿಂದ ಆ ವಿಷಯ-ವಿಷಯಿಭಾವವು ಒಂದು ಸ್ವರೂಪಸಂಬಂಧವೇ.

**ಭಾವವಿಲಾಸಿನೀ–** ಅಸ್ತ್ವೇವಮ್, ಪ್ರಕೃತೇ ಕಿಮ್? ಇತ್ಯತ ಆಹ– **ತ್ವದುಕ್ತೇತಿ** ॥ ತ್ವದುಕ್ತಲಕ್ಷಣೇನ ಪರಸಮವೇತಕ್ರಿಯಾಜನ್ಯಫಲಶಾಲಿತ್ವಲಕ್ಷಣೇನ । ತಯೋಃ ಪೂರ್ವೋತ್ತರದೇಶಯೋಃ । ಅನುದ್ದೇಶ್ಯತ್ವಾದನಯೋಸ್ಸಂಯೋಗವಿಭಾಗಯೋರಫಲತ್ವಂ ಚೇತ್ ಅನ್ಯಚರಣ-ಸಂಯೋಗಸ್ಯಾಪಿ ನ ಸ್ಯಾದಿತಿ ಪುನರವ್ಯಾಪ್ತಿರೇವ । ಅತಃ ಉಕ್ತಲಕ್ಷಣಸ್ಯಾತಿವ್ಯಾಪ್ತತ್ವಾದ್ ಅವ್ಯಾಪ್ತತ್ವಾದ್ವಾ । ಸಃ ವಿಷಯವಿಷಯಿಭಾವಃ ಸ್ವರೂಪಸಂಬಂಧವಿಶೇಷಃ ॥ ೨೦೮ ॥

**ವಿವರಣೆ –** ಪ್ರತಿ ಹೆಜ್ಜೆಯಿಂದಲೂ ಆಗುವ ಪೂರ್ವದೇಶವಿಭಾಗ ಮತ್ತು ಉತ್ತರದೇಶ ಸಂಯೋಗಗಳು ಗಮನಕ್ರಿಯೆಯ ಉದ್ದೇಶ್ಯವಲ್ಲ. ಆದ್ದರಿಂದ ಅವುಗಳು ಕರ್ಮಗಳಲ್ಲ ಎಂದೇ ಹೇಳಬೇಕು. ಇದೇ ಕಾರಣದಿಂದ ಗ್ರಾಮಪ್ರಾಪ್ತಿಯೂ ಗಮನಕ್ರಿಯೆಯ ಕರ್ಮವಲ್ಲ. ಹೀಗೆ ಭಾಟ್ಟರು ಹೇಳುವ ಕರ್ಮಲಕ್ಷಣಕ್ಕೆ ಅತಿವ್ಯಾಪ್ತಿ ಮತ್ತು ಅವ್ಯಾಪ್ತಿದೋಷಗಳು ಇರುವುದರಿಂದ ಬೇರೆ ಕರ್ಮಲಕ್ಷಣವನ್ನು ಅನ್ವೇಷಿಸಬೇಕು. ವಿಷಯಿಭಾವವು ಕ್ರಿಯೆಯ ಸ್ವರೂಪ. ವಿಷಯಭಾವವು ಗಮ್ಯ ಮೊದಲಾದವುಗಳ ಸ್ವರೂಪ ವಿಷಯಭಾವವು ಕರ್ಮದ ಲಕ್ಷಣ.

ಜ್ಞಾನ-ಜ್ಞೇಯಗಳಿಗೆ ವಿಷಯಿ-ವಿಷಯಭಾವವೇ ಸಂಬಂಧ. ವಿಷಯಿಭಾವ ಜ್ಞಾನದ ಸ್ವರೂಪ. ವಿಷಯಭಾವವು ಜ್ಞೇಯದ ಸ್ವರೂಪ. ಆದ್ದರಿಂದ ವಿಷಯಿ-ವಿಷಯಭಾವವು ಸ್ವರೂಪಸಂಬಂಧ. ಕರ್ಮ ಎಂದರೆ ವಿಷಯ. ವಿಷಯತ್ವ ಕರ್ಮದ ಲಕ್ಷಣ.

**ಇತ್ಯೇವ ಸರ್ವಥಾ ವಾಚ್ಯಂ ನ ಚೇತ್ ಜ್ಞಾನಕ್ರಿಯಾಫಲಮ್ ।**
**ಅರ್ಥಾಭಿಲಪನಂ ಪುಂಸಿ ತಚ್ಛಾಲಿತ್ವಂ ಕಥಂ ಘಟೇ ॥ ೨೦೯ ॥**

**ಅರ್ಥ-** ಇತ್ಯೇವ = ಸ್ವರೂಪಸಂಬಂಧವಿಶೇಷವೆಂದೇ, ಸರ್ವಥಾ ವಾಚ್ಯಂ = ಹೇಳಲೇಬೇಕು. ನ ಚೇತ್ = ಹೀಗೆ ಹೇಳದಿದ್ದರೆ, ಕ್ರಿಯಾಫಲಂ = ಜ್ಞಾನರೂಪಕ್ರಿಯೆಯ ಫಲವಾದ, ಅರ್ಥಾಭಿಲಪನಂ = ವಸ್ತುಗಳನ್ನು ಕುರಿತ ವ್ಯವಹಾರವು, ಪುಂಸಿ = ಪುರುಷನಲ್ಲಿ ತಚ್ಛಾಲಿತ್ವಂ = ವ್ಯವಹಾರರೂಪಫಲಾಶ್ರಯತ್ವವು, ಘಟೇ = ಘಟದಲ್ಲಿ, ಕಥಂ = ಹೇಗೆ?

**ಅನುವಾದ-** ಕರ್ಮತ್ವವನ್ನು ಸ್ವರೂಪಸಂಬಂಧವಿಶೇಷವೆನ್ನದೆ, ಕ್ರಿಯಾಜನ್ಯ-ಫಲಾಶ್ರಯತ್ವಂ ಎಂದೇ ಹೇಳಿದರೆ ಒಂದು ವಸ್ತುವಿನ ಜ್ಞಾನವು ಉಂಟಾದಾಗ ಆ ವಸ್ತುವಿನ ಬಗ್ಗೆ ಮಾತನಾಡುತ್ತೇವೆ. ಈ ಮಾತು ಇತ್ಯಾದಿಗಳು ಜ್ಞಾನದ ಫಲ. ಇದು ಪುರುಷನಲ್ಲಿದೆ. ಆದ್ದರಿಂದ ಘಟಾದಿವಸ್ತುಗಳ ಕರ್ಮವೇ ಆಗುವುದಿಲ್ಲ. ಆದ್ದರಿಂದ ಅವ್ಯಾಪ್ತಿದೋಷ. ಈ ದೋಷದ ಪರಿಹಾರಕ್ಕಾಗಿ ವಿಷಯತ್ವವೆಂದರೆ ಸ್ವರೂಪಸಂಬಂಧ ವಿಶೇಷವೆಂದೇ ಹೇಳಬೇಕು. ಈಗ ವಿಷಯತ್ವವು ವಿಷಯ-ಸ್ವರೂಪಗಳಾದ ಘಟಪಟಾದಿಗಳಲ್ಲಿ ಇದೆ, ಇದರಂತೆ ಜ್ಞಾನಕರ್ತೃವಾದ ಆತ್ಮನಲ್ಲಿಯೂ ಇದೆ. ಆದ್ದರಿಂದ ಜ್ಞಾನಕ್ರಿಯೆಯ ಕರ್ತೃವೇ ಕರ್ಮವೂ ಆಗಬಹುದು.

**ಭಾವವಿಲಾಸಿನೀ–** ನಚೇತ್ ಸ್ವರೂಪಸಂಬಂಧವಿಶೇಷ ಏವ ವಿಷಯತ್ವಂ ನ ಚೇತ್, ಜ್ಞಾನಂ ಕ್ರಿಯಾಫಲಂ ಜ್ಞಾನರೂಪಕ್ರಿಯಾಫಲಂ ಅರ್ಥಾಭಿಲಪನಂ ಅರ್ಥಾಭಿಲಪನರೂಪವ್ಯವಹಾರಃ ಪುಂಸಿ । ತಚ್ಛಾಲಿತ್ವಂ ಕಥಂ ಘಟೇ ವಿಷಯರೂಪಘಟೇ । ತಥಾಚ ಪರಸಮವೇತ-ಕ್ರಿಯಾಫಲಶಾಲಿತ್ವಂ ಘಟೇ ಅವ್ಯಾಪ್ತತ್ವಾತ್ ನ ವಿಷಯಲಕ್ಷಣಮಿತ್ಯರ್ಥಃ । ಅತಸ್ಸ್ವರೂಪ-ಸಂಬಂಧವಿಶೇಷ ಏವ ವಿಷಯತ್ವಂ ಸರ್ವಥಾವಾಚ್ಯಮ್। ಸ ಚ ಸ್ವರೂಪೇ ಸುತರಾಂ ಘಟತ ಇತಿ ಕುತೋ ನ ಜ್ಞಾನಸ್ಯ ಸ್ವಕರ್ಮಕತ್ವಮ್ ॥ ೨೦೯ ॥

ಜ್ಞಾತತಾ ಫಲವಾಗಲು ಸಾಧ್ಯವಿಲ್ಲ -

ಅತೀತಾನಾಗತೇಽಭಾವಾನ್ನಾರ್ಥಸ್ಥಾ ಜ್ಞಾತತಾ ಫಲಮ್ ।
ಜ್ಞಾನಸ್ಯ ವಿಷಯತ್ವಂ ತಜ್ಜ್ಞಾತತಾ ಸ್ಯಾನ್ನಚಾಪರಾ ॥ ೨೧೦ ॥

**ಅರ್ಥ-** ಅತೀತಾನಾಗತೇ = ಭೂತಕಾಲದ ಮತ್ತು ಭವಿಷ್ಯತ್‌ಕಾಲದ ವಸ್ತುಗಳಲ್ಲಿ, ಅಭಾವಾತ್ = ಇಲ್ಲದಿರುವುದರಿಂದ, ಅರ್ಥಸ್ಥಾ = ವಸ್ತುವಿನಲ್ಲಿ ಇರುವ, ಜ್ಞಾತತಾ = ಜ್ಞಾತತಾವು, ನ ಫಲಂ= ಫಲವಲ್ಲ. ಆದ್ದರಿಂದ, ಜ್ಞಾನಸ್ಯ ವಿಷಯತ್ವಂ = ಜ್ಞಾನಕ್ಕೆ ವಿಷಯತ್ವವೇ, ಜ್ಞಾತತಾ= ಜ್ಞಾತತಾ, ಅಪರಾ ನ ಸ್ಯಾತ್ = ಬೇರೆ ಯಾವುದೂ ಆಗುವುದಿಲ್ಲ.

**ಅನುವಾದ-** ಭೂತಕಾಲದ ಮತ್ತು ಭವಿಷ್ಯತ್ಕಾಲದ ಪದಾರ್ಥಗಳಲ್ಲಿ 'ಜ್ಞಾತತಾ' ಇಲ್ಲ. ಆದ್ದರಿಂದ 'ಜ್ಞಾತತಾ' ಜ್ಞಾನದ ಫಲವಲ್ಲ. ಆದ್ದರಿಂದ ಸರ್ವತ್ರ ಪ್ರಸಿದ್ಧವಾದ ವಿಷಯತ್ವವೇ ಜ್ಞಾತತಾ. ಬೇರೆ ಯಾವುದೂ ಉಪಪನ್ನವಾಗುವುದಿಲ್ಲ.

**ಭಾವವಿಲಾಸಿನೀ**– ನನು ಜ್ಞಾನರೂಪಕ್ರಿಯಾಫಲಂ ಜ್ಞಾತತೈವ ಸಾ ಚ ವಿಷಯೇ ಘಟೇಽಸ್ತೀತಿ ಕಥಂ ಲಕ್ಷಣಸ್ಯ ತತ್ರಾವ್ಯಾಪ್ತಿರಿತ್ಯತ ಆಹ– **ಅತೀತಾನಾಗತ ಇತಿ** ॥ ಅತೀತಂ ಚಾನಾಗತಂ ಚೇತಿ ದ್ವಂದ್ವೈಕವದ್ಭಾವಃ। ತಸ್ಮಿನ್ ಜ್ಞಾತತಾಯಾ ಅಭಾವಾತ್। ಪ್ರಧ್ವಂಸಪ್ರತಿಯೋಗಿನಿ ಪ್ರಾಗಭಾವ-ಪ್ರತಿಯೋಗಿನಿ ಜ್ಞಾತತಾಯಾ ಅಯೋಗಾದಿತ್ಯರ್ಥಃ। ಫಲಂ ಜ್ಞಾನಫಲಂ ನೇತಿ ಸಂಬಂಧಃ। ಜ್ಞಾತತಾಧಾರತ್ವೇನ ಜ್ಞಾನಜ್ಞೇಯತ್ವಕಥನೇ ಅತೀತಾನಾಗತಯೋರ್ಜ್ಞೇಯತ್ವಲಕ್ಷಣ-ಸ್ಯಾವ್ಯಾಪ್ತಿರಿತಿ ಭಾವಃ। ತತ್ ತಸ್ಮಾದ್ ವಿಷಯಾಶ್ರಿತಜ್ಞಾತತಾಯಾ ಅಸಂಭವಾತ್ ಜ್ಞಾತತಾ ಜ್ಞಾನಸ್ಯ ವಿಷಯತ್ವಮ್। ಅಪರಾ ನ ॥ ೨೧೦ ॥

**ವಿವರಣೆ** – ಪ್ರಮಾವಿಷಯವಾಗುವ ವಸ್ತುಗಳಲ್ಲಿರುವ 'ಪ್ರಕಾಶವಿಶೇಷ' ವನ್ನು ಜ್ಞಾತತಾ ಎಂದು ಹೇಳುತ್ತಾರೆ. ಭೂತ-ಭವಿಷ್ಯದ್ ವಸ್ತುಗಳಲ್ಲಿ ಈ ಜ್ಞಾತತಾ ಇಲ್ಲ ಎಂದು ಹೇಳುತ್ತಾರೆ. ಆದರೆ ಭೂತ-ಭವಿಷ್ಯತ್ ವಸ್ತುಗಳ ಜ್ಞಾನವು ಹುಟ್ಟುತ್ತದೆ. ಆದ್ದರಿಂದ ಜ್ಞಾತತಾವು ಜ್ಞಾನದ ಫಲವಲ್ಲ. ಆದ್ದರಿಂದ ವಿಷಯತ್ವವೇ ಜ್ಞಾತತಾ. ಬೇರೆ ಯಾವುದೂ ಯುಕ್ತವಲ್ಲ. ವಿಷಯತ್ವವು ಜ್ಞಾನಕರ್ತೃವಿನಲ್ಲೂ ಇದೆ.

ಸಾ ಚ ನಾತ್ಮಾಶ್ರಯಾತ್ ಕರ್ಮಲಕ್ಷಣಾಂತರ್ಗತಾ ಭವೇತ್ ।
ಕ್ಷುದ್ರರಜ್ಜೋರಭಾವೇನ ಲಬ್ಧಾ ಗೌಃ ಕಿಂ ವಿಸೃಜ್ಯತೇ ॥ ೨೧೧ ॥

**ಅರ್ಥ**- ಸಾ ಚ = ಆ ಜ್ಞಾನವಿಷಯತ್ವರೂಪಜ್ಞಾತತಾವು, ಕರ್ಮಲಕ್ಷಣಾಂತರ್ಗತಾ ನ ಭವೇತ್= ಕರ್ಮದ ಲಕ್ಷಣದಲ್ಲಿ ಸೇರುವುದಿಲ್ಲ. ಆತ್ಮಾಶ್ರಯಾತ್ = ಆತ್ಮಾಶ್ರಯದೋಷವಿರುವುದರಿಂದ. ಕ್ಷುದ್ರರಜ್ಜೋಃ = ಅಲ್ಪಬೆಲೆಯ ಹಗ್ಗದ, ಅಭಾವೇನ = ಅಭಾವದಿಂದಾಗಿ, ಲಬ್ಧಾ = (ಸುಲಭೋಪಾಯದಿಂದ) ಪ್ರಾಪ್ತವಾದ, ಗೌಃ = ಹಸುವು, ಕಿಂ ವಿಸೃಜ್ಯತೇ? = ತ್ಯಾಗಮಾಡಲ್ಪಡುತ್ತದೆಯೇ?

**ಅನುವಾದ**- ಆ 'ಜ್ಞಾತತಾ'ವು ಕರ್ಮದ ಲಕ್ಷಣದಲ್ಲಿ ಸೇರಬಾರದು. (ಲಕ್ಷಣವು) ಆತ್ಮಾಶ್ರಯದೋಷಕ್ಕೆ ಒಳಗಾಗುವುದರಿಂದ. ಅಲ್ಪಬೆಲೆಯ ಹಗ್ಗವು ಇಲ್ಲ ಎಂಬ ಕಾರಣದಿಂದ ಸುಲಭವಾಗಿ ಲಭಿಸಿದ ಬಹೂಪಕಾರಿಯಾದ ಹಸುವನ್ನು ಯಾರಾದರೂ ಬಿಡುತ್ತಾರೆಯೇ?

**ಭಾವವಿಲಾಸಿನೀ**– ಸಾ ಚ ಜ್ಞಾನವಿಷಯತ್ವರೂಪಜ್ಞಾತತಾ। ಕರ್ಮಣೋ ವಿಷಯಸ್ಯ ಲಕ್ಷಣಾಂತರ್ಗತಾ। ತತ್ರ ಹೇತುಃ– **ಆತ್ಮಾಶ್ರಯಾದಿತಿ** ॥ ಜ್ಞಾನವಿಷಯತ್ವಲಕ್ಷಣೇ ಜ್ಞಾನ-ವಿಷಯತ್ವರೂಪಜ್ಞಾತತಾಯಾಃ ಪ್ರವೇಶನೇ ಕಥಂ ನಾತ್ಮಾಶ್ರಯಃ। ಲಕ್ಷಣಾಯೋಗೇನಾನುಭವ-ಸಿದ್ಧಾರ್ಥತ್ಯಾಗಿನಮುಪಹಸತಿ– **ಕ್ಷುದ್ರೇತಿ** ॥ ಕ್ಷುದ್ರರಜ್ಜೋಃ ಗೋಬಂಧಕರಜ್ಜೋರಭಾವೇನ ದಾನಾದಿನಾ ಲಬ್ಧಾ ಗೌರ್ವಿಸೃಜ್ಯತೇ ಕಿಮ್? ಪ್ರತ್ಯುತ ಬಹಿರ್ವಸ್ತ್ರೇಣಾಪಿ ಬಧ್ವಾ ಗಾಂ ನ

ಮುಂಚಸಿ । ಏವಮೇವ ಲಕ್ಷಣಾಯೋಗಾದನುಭೂತಸ್ವಕರ್ಮಕತ್ವಮಪಿ ನ ಮುಂಚ ಇತಿ ಭಾವಃ ॥ ೨೧೧ ॥

**ವಿವರಣೆ** – 'ಜ್ಞಾತತಾ'ವನ್ನು ಅಂಗೀಕರಿಸುವವರು 'ಕ್ರಿಯಾಜನ್ಯಜ್ಞಾತತಾಶ್ರಯತ್ವ' ವು ಜ್ಞಾನಕರ್ಮದ ಲಕ್ಷಣ ಎಂದು ಹೇಳಬೇಕು. ಜ್ಞಾನವಿಷಯತ್ವವೇ ಜ್ಞಾತತಾ (ಶ್ಲೋಕ 210). ಆದ್ದರಿಂದ 'ಕ್ರಿಯಾಜನ್ಯಜ್ಞಾನವಿಷಯತಾಶ್ರಯತ್ವ' ವು ಜ್ಞಾನಕರ್ಮದ ಲಕ್ಷಣವಾಗುತ್ತದೆ. ಯಾವುದರ ಲಕ್ಷಣವನ್ನು ಹೇಳಬೇಕಾಗಿದೆಯೋ ಅದೇ ಲಕ್ಷಣದಲ್ಲಿ ಸೇರಿದೆ. ಇದಕ್ಕೆ 'ಆತ್ಮಾಶ್ರಯ' ಎಂದು ಹೆಸರು. ಈ ಸ್ಥಿತಿಯಲ್ಲಿ ಲಕ್ಷಣದ ಜ್ಞಾನವೇ ಆಗುವುದಿಲ್ಲ. ಆದ್ದರಿಂದ ಇದು ದೋಷ.

206-211 (ಪೂರ್ವಾರ್ಧ) ಶ್ಲೋಕಗಳಲ್ಲಿ ವಿವರಿಸಿದಂತೆ ಕರ್ಮದ ಲಕ್ಷಣವನ್ನು ಹೇಳಲು ಸಾಧ್ಯವಿಲ್ಲ; ಆದ್ದರಿಂದ ಆತ್ಮನಿಗೆ 'ಜ್ಞಾನಕರ್ಮತ್ವ'ವು ಇಲ್ಲ ಎಂದು ಅದ್ವೈತದರ್ಶನವು ನಿರ್ಣಯಿಸಿದೆ. ಈ ನಿರ್ಣಯವು ಸರಿಯಲ್ಲ. ಈಶ್ವರನು ತನ್ನನ್ನು ತಾನೇ ತಿಳಿಯುತ್ತಾನೆ ಎಂದು ಆಗಮಗಳು ಹೇಳುತ್ತವೆ. ಜೀವಾತ್ಮನು ತನ್ನನ್ನು ತಾನು ತಿಳಿಯುತ್ತಾನೆ ಎಂದು ಅನುಭವವಿದೆ. ಆದ್ದರಿಂದ ಭಾಟ್ಟ-ಅದ್ವೈತದರ್ಶನಗಳು ಹೇಳುವ ಲಕ್ಷಣಗಳು ಉಪಪನ್ನವಾಗದಿದ್ದರೆ ಉಪಪನ್ನವಾಗುವ ಬೇರೆ ಲಕ್ಷಣವನ್ನು ಅನ್ವೇಷಿಸಬೇಕು. ಪದಾರ್ಥವು ಸಿದ್ಧವಾಗಿರುವಾಗ, ಅದರ ಲಕ್ಷಣವನ್ನು ಗುರುತಿಸಲು ಅಸಮರ್ಥರಾದವರು ಅದರ ಅಸ್ತಿತ್ವವನ್ನೇ ನಿರಾಕರಿಸುವುದು ಯಾವ ನ್ಯಾಯ?

ಬಹೂಪಕಾರಿಯಾದ ಗೋವು ಲಭಿಸುವ ಸಂದರ್ಭದಲ್ಲಿ, ಅದನ್ನು ಕಟ್ಟಲು ಹಗ್ಗವಿಲ್ಲ ಎಂಬ ಕಾರಣದಿಂದ ವಿವೇಕಿಗಳು ಹಸುವನ್ನು ತ್ಯಜಿಸುವುದಿಲ್ಲ. ಯಾವುದಾದರೂ ಸಾಧನದಿಂದ ಕಟ್ಟಿ ಕರೆದೊಯ್ಯುತ್ತಾರೆ.

ಗೀತಾವಚನದಿಂದಲೂ ಆತ್ಮಜ್ಞಾನಕ್ಕೆ ಆತ್ಮವಿಷಯಕತ್ವವು ಸಿದ್ಧವಾಗುತ್ತದೆ-

ನಹಿ ತೇ ಭಗವನ್ ವ್ಯಕ್ತಿಂ ವಿದುರ್ದೇವಾ ನ ದಾನವಾಃ ।
ಸ್ವಯಮೇವಾತ್ಮನಾತ್ಮಾನಂ ವೇತ್ಥ ತ್ವಂ ಪುರುಷೋತ್ತಮ ।
ಇತಿ ಗೀತಾವಿರೋಧಶ್ಚ ಸ್ವಾವೇದ್ಯತ್ವಮತೇ ಭವೇತ್ ॥ ೨೧೨ ॥

**ಅರ್ಥ**- ಸ್ವಾವೇದ್ಯತ್ವಮತೇ= 'ನಾನು' ಎಂಬ ಜ್ಞಾನಕ್ಕೆ ಸ್ವಾತ್ಮನು ವಿಷಯನಲ್ಲ ಎಂಬ ಮತದಲ್ಲಿ, 'ನಹಿ ತೇ ಭಗವನ್.... ಪುರುಷೋತ್ತಮ' ಇತಿ= 'ನಹಿ ತೇ... ಪುರುಷೋತ್ತಮ' ಎಂಬ, ಗೀತಾವಿರೋಧಶ್ಚ ಭವೇತ್= ಭಗವದ್ಗೀತಾವಚನದ ವಿರೋಧವೂ ಉಂಟಾಗುತ್ತದೆ.

**ಅನುವಾದ**- ಸ್ವಾತ್ಮನು 'ನಾನು' ಎಂಬ ಜ್ಞಾನಕ್ಕೆ ವಿಷಯನಲ್ಲ ಎಂಬ ಅಭಿಪ್ರಾಯಕ್ಕೆ 'ನ ಹಿ ತೇ ಭಗವನ್...ಪುರುಷೋತ್ತಮ' ಎಂಬ ಭಗವದ್ಗೀತಾವಚನದ ವಿರೋಧವೂ ಇದೆ

**ಭಾವವಿಲಾಸಿನೀ–** ಸ್ಪಷ್ಟಗೀತಾವಚನೇನಾಪಿ ಭಗವತಸ್ಸ್ವರೂಪಜ್ಞಾನಸ್ಯ ಸ್ವವಿಷಯಕತ್ವಮುಪಪಾದಯತಿ– **ನಹೀತಿ** ॥ ವ್ಯಕ್ತಿಂ ಮಹಿಮಾನಮ್ । ಪುರುಷೋತ್ತಮ ತ್ವಂ ಸ್ವಯಮೇವ ಆತ್ಮನಾ ಸ್ವಸ್ವರೂಪಜ್ಞಾನೇನಾತ್ಮಾನಂ ಸ್ವಸ್ವರೂಪಂ ವೇತ್ಥೇತಿ ಸಂಬಂಧಃ। ಅತ್ರ ಸ್ವಯಮೇವೇತ್ಯುಕ್ತ್ಯಾ ಸ್ವಸ್ಯೈವ ಕರ್ತೃತ್ವಂ ಆತ್ಮಾನಮಿತ್ಯುಕ್ತ್ಯಾ ಸ್ವಸ್ಯೈವ ಕರ್ಮತ್ವಮ್ । ಆತ್ಮನಾತ್ಮಾನಮಿತ್ಯುಕ್ತ್ಯಾ ಸ್ವರೂಪಭೂತಜ್ಞಾನಸ್ಯ ಸ್ವವಿಷಯತ್ವಂ ಚ ಪ್ರತೀಯತ ಇತಿ ಭಾವಃ ॥ ೨೧೨ ॥

**ವಿವರಣೆ –** ಉದಾಹೃತಭಗವದ್ಗೀತೆಯ ಶ್ಲೋಕದಲ್ಲಿ (10.14) ಕೃಷ್ಣನು ತನ್ನನ್ನು ತಾನು ತಿಳಿದಿದ್ದಾನೆ ಎಂದು ವರ್ಣಿಸಲಾಗಿದೆ. ಇದರಿಂದ ತನ್ನ ಜ್ಞಾನಕ್ಕೆ ತಾನು ವಿಷಯ ಎಂದು ಸ್ಪಷ್ಟ. ಒಬ್ಬನೇ ಜ್ಞಾನದ ಕರ್ತೃ ಮತ್ತು ಕರ್ಮ ಆಗುವುದಿಲ್ಲ ಎನ್ನುವವರಿಗೆ ಈ ಗೀತಾವಚನದ ವಿರೋಧವಿದೆ.

**ಶ್ಲೋಕದ ಅರ್ಥ:-** ಭಗವನ್ ಪುರುಷೋತ್ತಮ! ಪೂಜ್ಯ ಪುರುಷೋತ್ತಮನೇ, ತೇ= ನಿನ್ನ, ವ್ಯಕ್ತಿಂ= ಮಹಿಮೆಯನ್ನು, ದೇವಾಃ= ದೇವತೆಗಳು, ದಾನವಾಃ= ದಾನವರು, ನ ವಿದುಃ= ತಿಳಿಯಲಾರರು. ಹಿ= ಇದು ಪ್ರಸಿದ್ಧ. ತ್ವಂ ಸ್ವಯಮೇವ= ನೀನೇ (ಪರಾವಲಂಬನೆಯಿಲ್ಲದೆ), ಆತ್ಮನಾ= ಸ್ವರೂಪಜ್ಞಾನದಿಂದ, ಆತ್ಮಾನಂ= ನಿನ್ನ ಸ್ವರೂಪವನ್ನು, ವೇತ್ಥ= ತಿಳಿಯುವಿ.

ಇನ್ನೊಂದು ಯುಕ್ತಿಯಿಂದ ಸಮರ್ಥನೆ -

> ಯತೋಽತ್ರ ವಚನೈಃ ಸರ್ವೈಃ ಕರ್ತೃಕರ್ಮಕ್ರಿಯೈಕತಾ ।
> ವಿಭಕ್ತೀನಾಂ ವಿಭಾಗೇನ ವ್ಯಕ್ತಮೇವ ಪ್ರದೃಶ್ಯತೇ ॥ ೨೧೩ ॥

**ಅರ್ಥ–** ಯತಃ = ಏಕೆಂದರೆ, ಅತ್ರ = ಈ ಭಗವದ್‌ಗೀತೆಯಲ್ಲಿ, ವಿಭಕ್ತೀನಾಂ = ಪ್ರಥಮಾದಿವಿಭಕ್ತಿಗಳ, ವಿಭಾಗೇನ = ವಿಭಾಗದಿಂದ, ಸರ್ವೈಃ ವಚನೈಃ = ಎಲ್ಲಾ ಪದಗಳಿಂದ, ಕರ್ತೃಕರ್ಮಕ್ರಿಯೈಕತಾ = ಕರ್ತೃಕರ್ಮಮತ್ತು ಕ್ರಿಯೆಗಳ ಐಕ್ಯವು, ವ್ಯಕ್ತಮೇವ = ಸ್ಪಷ್ಟವಾಗಿಯೇ, ಪ್ರದೃಶ್ಯತೇ = ಕಾಣಲ್ಪಡುತ್ತದೆ.

**ಅನುವಾದ–** ಈ ಗೀತಾಶ್ಲೋಕದಲ್ಲಿ ವಿಭಕ್ತಿಗಳ ವಿಭಾಗದಿಂದ (ಬೇರೆ ಬೇರೆ ವಿಭಕ್ತಿಯ ಪದಗಳಿಂದ). ಎಲ್ಲ ಪದಗಳಿಂದ ಕರ್ತೃ-ಕರ್ಮ-ಕ್ರಿಯೆಗಳ ಏಕತ್ವವು ಸ್ಪಷ್ಟವಾಗಿಯೇ ಕಾಣಲ್ಪಡುತ್ತದೆ.

**ಭಾವವಿಲಾಸಿನೀ –** ಕರ್ತೃಕರ್ಮಕ್ರಿಯೈಕತಾ ಕರ್ತುಃ ಕರ್ಮಣಃ ಕ್ರಿಯಾಯಾಶ್ಚೈಕತಾ। ಕರ್ತುರೇವ ಕರ್ಮತ್ವಂ ಜ್ಞಾನಕ್ರಿಯಾಯಾ ಏವ ವಿಷಯತ್ವಮಿತ್ಯರ್ಥಃ । ವಿಭಕ್ತೀನಾಂ ಪ್ರಥಮಾದ್ವಿತೀಯಾತೃತೀಯಾವಿಭಕ್ತೀನಾಂ ವಿಭಾಗೇನ ಭಿನ್ನಭಿನ್ನಪದನಿಷ್ಠತ್ವೇನ ॥ ೨೧೩ ॥

**ವಿವರಣೆ**– ಶ್ಲೋಕದಲ್ಲಿ(ತ್ವಂ) ಪ್ರಥಮಾವಿಭಕ್ತಿ. 'ಆತ್ಮಾನಂ' ದ್ವಿತೀಯಾವಿಭಕ್ತಿ. 'ಆತ್ಮನಾ' ತೃತೀಯಾ ವಿಭಕ್ತಿ. ಪ್ರಥಮಾವಿಭಕ್ತಿಯು ಕರ್ತೃಬೋಧಕ. ದ್ವಿತೀಯಾವಿಭಕ್ತಿಯು ಕರ್ಮಬೋಧಕ. ತೃತೀಯಾವಿಭಕ್ತಿಯು ಸಾಧನ (ಕರಣ) ಬೋಧಕ.

ಈ ಮೂರು ವಿಭಕ್ತಿಯ ಪದಗಳು ಕೃಷ್ಣನನ್ನೇ ಹೇಳುತ್ತವೆ. ಜ್ಞಾನದ ಕರ್ತೃ, ಜ್ಞಾನದ ಕರ್ಮ ಮತ್ತು ಜ್ಞಾನಕರಣ- ಈ ಮೂರೂ ಕೃಷ್ಣನೇ ಎಂದು ಇವುಗಳಿಂದ ತಿಳಿಯುತ್ತದೆ. ಜ್ಞಾನಕರ್ತೃವೇ ಜ್ಞಾನಕರ್ಮವೂ ಆಗಬಹುದು ಎಂದು ತಿಳಿಯಲು ಈ ಶ್ಲೋಕವು ಸ್ಪಷ್ಟ ಪ್ರಮಾಣ.

**ಕಥಂ ಪುಂಕಲ್ಪನಾಮಾತ್ರಮೂಲಂ ಲಕ್ಷಣಮೇವ ತೇ ।**
**ಅನ್ಯಥೀಕುರುತೇ ಸರ್ವಸಮ್ಮತಂ ಸ್ಪಷ್ಟಮಾಗಮಮ್ ॥ ೨೧೪ ॥**

**ಅರ್ಥ**– ಸರ್ವಸಮ್ಮತಂ= ಸರ್ವಸಮ್ಮತವಾದ, ಸ್ಪಷ್ಟಂ= ಸ್ಪಷ್ಟವಾಗಿರುವ, ಆಗಮಂ= ಭಗವದ್ಗೀತೆ ಎಂಬ ಆಗಮವನ್ನು, ಪುಂಕಲ್ಪನಾಮಾತ್ರಮೂಲಂ= ಕೇವಲ ಪುರುಷ ಕಲ್ಪನೆಯೇ ಮೂಲವಾಗಿರುವ, ತೇ= ನಿನ್ನ, ಲಕ್ಷಣಂ= ಲಕ್ಷಣವು, ಕಥಮ್ ಅನ್ಯಥೀಕುರುತೇ= ಹೇಗೆ ತಾನೇ ವ್ಯತಿರಿಕ್ತಗೊಳಿಸುತ್ತದೆ?

**ಅನುವಾದ**– ಭಗವದ್ಗೀತೆಯು ಸರ್ವಮತಸಂಮತವಾದ ಆಗಮ. 'ಪರಸಮವೇತ ಕ್ರಿಯಾಜನ್ಯಫಲಾಶ್ರಯತ್ವಂ ಕರ್ಮತ್ವಂ' ಎಂದು ಯಾರೋ ಒಬ್ಬಪುರುಷ ಕಲ್ಪಿತ ಲಕ್ಷಣ. ಸರ್ವಸಮ್ಮತ ಭಗವದ್ಗೀತೆಯ ಅಭಿಪ್ರಾಯವನ್ನು ಸಾಮಾನ್ಯ ಪುರುಷನು ಕಲ್ಪಿಸಿದ ಲಕ್ಷಣವು ಹೇಗೆ ತಾನೇ ವ್ಯತಿರಿಕ್ತಗೊಳಿಸುತ್ತದೆ.

**ಭಾವವಿಲಾಸಿನೀ** – ಸ್ಪಷ್ಟಗೀತಾವಚನವಿರೋಧಾದ್ ಭಾಟ್ಟೋಕ್ತಲಕ್ಷಣಮೇವೋಪೇಕ್ಷಣೀಯ-ಮಿತ್ಯಾಹ– **ಕಥಮಿತಿ** ॥ ಆಗಮಂ ಗೀತಾವಚನಮ್ ॥ ೨೧೪ ॥

**ವಿವರಣೆ** – ಸ್ಪಷ್ಟಗೀತಾವಚನವಿರೋಧವಿರುವುದರಿಂದ ಭಾಟ್ಟರ ಕರ್ಮಲಕ್ಷಣವನ್ನು ಉಪೇಕ್ಷಿಸಬೇಕು.

ಕರ್ತೃಕರ್ಮಭೇದವು ಪದಾರ್ಥವು ಹೊರಗಿದ್ದಾಗ ಮಾತ್ರ -

**ಜ್ಞಾನಂ ಪ್ರತ್ಯಗ್ ಪರಾಗ್ ಜ್ಞೇಯಮಿತಿ ಬಾಹ್ಯಾರ್ಥಧೀಸ್ಥಲೇ ।**
**ನಾಂತರಂ ಯನ್ಮನೋಜ್ಞಾನೇ ಜ್ಞೇಯಃ ಪ್ರತ್ಯಕ್ ಪರಸ್ತವ ॥ ೨೧೫ ॥**

**ಅರ್ಥ**– ಜ್ಞಾನಂ = ಜ್ಞಾನವು, ಪ್ರತ್ಯಕ್ = ಒಳಗಿರುವ ಅರ್ಥ, ಜ್ಞೇಯಂ = ತಿಳಿಯಲ್ಪಡುವ ಪದಾರ್ಥಗಳು, ಪರಾಕ್ = ಹೊರಗಿನವುಗಳು, ಇತಿ= ಈ ವ್ಯವಸ್ಥೆಯು, ಬಾಹ್ಯಾರ್ಥಧೀಸ್ಥಲೆ = ಹೊರಪದಾರ್ಥಗಳ ಜ್ಞಾನಗಳಿಗೆ ಅನ್ವಯಿಸುತ್ತದೆ, ಆಂತರಂ=

ಒಳವಸ್ತುಗಳ ಜ್ಞಾನಕ್ಕೆ ಸಂಬಂಧಿಸಿದಂತೆ, ನ= ಇಲ್ಲ, ಯತ್= ಏಕೆಂದರೆ, ತವ= ನಿನ್ನ ಮತದಲ್ಲಿ, ಮನೋಜ್ಞಾನೇ = ಮನಸ್ಸಿನಿಂದ ಬರುವ ಜ್ಞಾನಕ್ಕೆ, ಪ್ರತ್ಯಕ್ = ಒಳಗಿರುವ, ಪರಃ = ಪರಬ್ರಹ್ಮನು, ಜ್ಞೇಯಃ= ವಿಷಯ.

**ಅನುವಾದ– ಜ್ಞಾನವು ಒಳಗಿರುವ ಪದಾರ್ಥ; ಜ್ಞೇಯವು ಹೊರಗಿನ ಪದಾರ್ಥ - ಈ ವ್ಯವಸ್ಥೆಯು ಹೊರಗಿನ ಪದಾರ್ಥಗಳ ಜ್ಞಾನಗಳಿಗೆ ಮಾತ್ರ ಅನ್ವಯಿಸುತ್ತದೆ. ಒಳಗಿನ ಪದಾರ್ಥಗಳ ಜ್ಞಾನಕ್ಕೆ ಅನ್ವಯಿಸುವುದಿಲ್ಲ. ಏಕೆಂದರೆ ಒಳಗಿನ ಪರಬ್ರಹ್ಮನ ಜ್ಞಾನವು ಮನಸ್ಸಿನಿಂದ ಆಗುತ್ತದೆ ಎಂದು ನಿಮ್ಮ ಮತ.**

**ಭಾವವಿಲಾಸಿನೀ–**ವಿಷಯವಿಷಯಿಣೋಃ ಪರಾಕ್ತ್ವಪ್ರತ್ಯಕ್ತ್ವನಿಯಮಾತ್ ಕಥಮೇಕಸ್ಯೈವ ವಿಷಯ- ವಿಷಯಿಭಾವ ಇತ್ಯತ ಆಹ– **ಜ್ಞಾನಮಿತಿ** ॥ ಜ್ಞಾನಂ ಪ್ರತ್ಯಗ್ ಅಂತಸ್ಸ್ಥಿತ್ವಾ ಬಹಿ- ರ್ಮುಖಮಿತ್ಯರ್ಥಃ । ಜ್ಞೇಯಂ ಪರಾಗ್ ಬಹಿಃ ಸ್ಥಿತ್ವಾಽಂತರ್ಮುಖಮಿತ್ಯರ್ಥ ಇತ್ಯಯಂ ನಿಯಮಃ ಬಾಹ್ಯಾರ್ಥಧೀಸ್ಥಲೇ ಘಟಾದಿಜ್ಞಾನಸ್ಥಲ ಇತ್ಯರ್ಥಃ । ತತ್ರ ಹಿ ಮನೋರೂಪಂ ಜ್ಞಾನಮಾಂತರಂ ಸದ್ ಬಾಹ್ಯವಿಷಯೋಲ್ಲೇಖನಾಯ ತದಭಿಮುಖಮ್ । ಘಟಶ್ಚ ಬಹಿಃಸ್ಥಃ ಸನ್ ಜ್ಞಾನವಿಷಯೀಕರಣಯೋಗ್ಯತಯಾ ತದಭಿಮುಖ ಇತಿ ಬಾಹ್ಯಾರ್ಥಸ್ಯ ತಜ್ಜ್ಞಾನಸ್ಯ ಚ ಪರಾಕ್ತ್ವಪ್ರತ್ಯಕ್ತ್ವನಿಯಮೋ ನತ್ವಾಂತರೇ ಜ್ಞಾನೇ ವಿಷಯೇ ಚ । ಯದ್ ಯಸ್ಮಾನ್ಮನೋಜ್ಞಾನೇ ಮನೋವೃತ್ತಿರೂಪಜ್ಞಾನೇ ಆತ್ಮಾಪೇಕ್ಷಯಾ ಬಾಹ್ಯತಯಾ ಪರಾಚಿ । ಪ್ರತ್ಯಕ್ ಪ್ರತ್ಯಕ್ ಪದಾರ್ಥರೂಪಃ। ಮನಸೋಽಪ್ಯಂತರ್ವಿದ್ಯಮಾನತ್ವಾತ್ ಪ್ರತ್ಯಗ್ಭೂತ ಇತ್ಯರ್ಥಃ । ಪರಃ ಪರಮಾತ್ಮಾ ಜ್ಞೇಯಃ। ತಸ್ಮಾಜ್ಜ್ಞಾನಸ್ಯ ಪ್ರತ್ಯಕ್ತ್ವಮ್, ಜ್ಞೇಯಸ್ಯ ಪರಾಕ್ತ್ವಮಿತಿ ನಿಯಮಃ ಆಂತರಂ ನೇತಿ ಪೂರ್ವೇಣಾನ್ವಯಃ । ನಿಯಮಭಂಗೇ ಮನೋವೃತ್ತಿರೂಪಜ್ಞಾನೇ ಭೇದಘಟಿತಃ ಪರಾಕ್ತ್ವಪ್ರತ್ಯಕ್ತ್ವೋಽಪ್ಯಸ್ತಿ । ಏಕಸ್ಯೈವ ಜ್ಞಾನತ್ವೇ ಜ್ಞೇಯತ್ವೇ ಚ ಸೋಽಪಿ ನಾಪೇಕ್ಷ್ಯತೇ । ಬಹಿಃ ಕ್ಲೃಪ್ತನಿಯಮಸ್ಯಾಂತರ್ಭಂಗವದ್ ಅಂತರಪಿ ಭಿನ್ನೇ ಕ್ಲೃಪ್ತಸ್ವಭಾವಸ್ಯ ಭೇದರಹಿತೇ ಸ್ವಸ್ವರೂಪೇ ಭಂಗ ಇತಿ ಭಾವಃ । ಯದ್ಯಪಿ ವಿಶೇಷಬಲಾತ್ ಪರಾಕ್ತ್ವಪ್ರತ್ಯಕ್ತ್ವೋ ನಿರ್ವೋಢುಂ ಶಕ್ಯತೇ, ತಥಾಪಿ ಪರಸ್ಯಾಯೇನೈವ ಪರಂ ಪರಾಭಾವಯಿತುಮಿದಮೇವೋಕ್ತಮ್ ॥ ೨೧೫ ॥

**ವಿವರಣೆ– ಪ್ರಶ್ನೆ :** ಜ್ಞಾನದ ಕರ್ತೃ ಚೇತನ ದೇಹದ ಒಳಗಿದ್ದಾನೆ. ಜ್ಞಾನದ ವಿಷಯಗಳು - ಘಟ, ಪಟ ಇತ್ಯಾದಿಗಳು ಹೊರಗಿವೆ. ಆದ್ದರಿಂದ ಜ್ಞಾನದ ಕರ್ತೃ ಮತ್ತು ಕರ್ಮಗಳು ಒಂದೇ ಆಗಲು ಸಾಧ್ಯವಿಲ್ಲ?

**ಉತ್ತರ :** ಹೊರಗಿನ ಪದಾರ್ಥಗಳ ಜ್ಞಾನಕ್ಕೆ ಸಂಬಂಧಿಸಿದಂತೆ ಜ್ಞಾನ-ಜ್ಞೇಯಗಳು ಒಂದೇ ಅಲ್ಲ ಎಂಬ ವಿಚಾರವು ಸರಿ. ಆದರೆ ಜ್ಞೇಯವು ಹೊರಗಿನ ಪದಾರ್ಥವೇ ಆಗಿರುತ್ತದೆ ಎಂಬ ನಿಯಮವಿಲ್ಲ. ಮನಸ್ಸಿನಿಂದ ಒಳಗಿನ ಪದಾರ್ಥಗಳ ಸುಖ, ದುಃಖ ಮೊದಲಾದವುಗಳ ಜ್ಞಾನವೂ ಆಗುತ್ತದೆ. ಆತ್ಮನಿಂದಲೇ ಆತ್ಮಸ್ವರೂಪದ ಜ್ಞಾನವೂ ಆಗುತ್ತದೆ. ಈ ನಿದರ್ಶನದಲ್ಲಿ ಕರ್ತೃ-ಕರ್ಮಗಳು ಒಂದೇ. ಅದ್ವೈತದರ್ಶನವು ಹೇಳುವ

ಕರ್ತೃ-ಕರ್ಮಭೇದದ ವ್ಯವಸ್ಥೆಯು ಇಲ್ಲಿ ಇಲ್ಲ. ಆದ್ದರಿಂದ ಆತ್ಮನು ಜ್ಞಾನಕರ್ತೃವೂ, ಜ್ಞಾನಕರ್ಮವೂ ಆಗಿರಲು ಏನೂ ಬಾಧಕವಿಲ್ಲ. ತತ್ತ್ವವಾದದಲ್ಲಿ ಆತ್ಮಸ್ವರೂಪವೇ ಆದ ಆತ್ಮಧರ್ಮಗಳಿಗೆ ಆತ್ಮನೊಂದಿಗೆ ಸವಿಶೇಷಾಭೇದವಿದೆ. ವಿಶೇಷವು ಭೇದಪ್ರತಿನಿಧಿ. ಆದ್ದರಿಂದ ಆತ್ಮಾ ಕರ್ತೃ, ಅದರ ಧರ್ಮಗಳು ಕರ್ಮ ಎಂಬ ಭೇದವ್ಯವಹಾರವು ಉಪಪನ್ನವಾಗುತ್ತದೆ. ಅದ್ವೈತದರ್ಶನದ ಚಿಂತನೆಗಳ ತಪ್ಪನ್ನು ತೋರಿಸಲು ಮಾತ್ರ ಜ್ಞಾನ ಮತ್ತು ಜ್ಞೇಯಗಳಿಗೆ ಪ್ರತ್ಯಕ್-ಪರಾಗ್‌ಭಾವದ ನಿಯಮವು ಸಾರ್ವತ್ರಿಕವಲ್ಲ ಎಂದು ಈ ಶ್ಲೋಕದಲ್ಲಿ ಹೇಳಲಾಗಿದೆ.

ಆತ್ಮನು ಜ್ಞಾನರೂಪಿಯಾದ್ದರಿಂದ ಅವನೇ ಕರ್ತೃ, ಅವನೇ ಕರ್ಮ-

**ಜಡೇ ಜ್ಞಾನಾಸ್ವರೂಪತ್ವಾಜ್ಜ್ಞಾನಜ್ಞೇಯವಿಭಿನ್ನತಾ ।**
**ಜ್ಞಾನರೂಪೇ ತು ಕಿಂ ನ ಸ್ಯಾಜ್ಜ್ಞಾನತಾ ಜ್ಞೇಯತಾಪಿ ಚ ॥ ೨೧೬ ॥**

**ಅರ್ಥ–** ಜಡೇ = ಜಡವಾದ ಘಟಾದಿಪದಾರ್ಥಗಳಿಗೆ ಸಂಬಂಧಿಸಿದಂತೆ, ಜ್ಞಾನಾಸ್ವರೂಪತ್ವಾತ್= ಅವು ಜ್ಞಾನರೂಪವಾಗದಿರುವುದರಿಂದ, ಜ್ಞಾನಜ್ಞೇಯವಿಭಿನ್ನತಾ = ಜ್ಞಾನ-ಜ್ಞೇಯಗಳಿಗೆ ಭೇದವಿದೆ. ಜ್ಞಾನರೂಪೇ ತು = ಜ್ಞಾನರೂಪವಾದ ವಸ್ತುಗಳಲ್ಲಿ ಜ್ಞಾನತಾ ಜ್ಞೇಯತಾಪಿ ಚ= ಜ್ಞಾನತ್ವ `ಮತ್ತು ಜ್ಞೇಯತ್ವಗಳು, ಕಿಂ ನ ಸ್ಯಾತ್= ಏಕೆ ಇರಬಾರದು?

**ಅನುವಾದ–** ಜಡ ಪದಾರ್ಥಗಳು ಜ್ಞಾನರೂಪ ಅಲ್ಲ. ಆದ್ದರಿಂದ ಅವುಗಳು ಮತ್ತು ಅವುಗಳ ಜ್ಞಾನವು ಬೇರೆ ಬೇರೆಯೇ. ಜ್ಞಾನರೂಪವೇ ಆದ ಪದಾರ್ಥಗಳ ವಿಚಾರದಲ್ಲಿ ಜ್ಞಾನ ಮತ್ತು ಜ್ಞೇಯಗಳು ಏಕೆ ಅಭಿನ್ನವಾಗಿರಬಾರದು? ಆಗಿರಬಹುದು.

**ಭಾವವಿಲಾಸಿನೀ–** ನನು ಜ್ಞಾನಜ್ಞೇಯಭಾವಸ್ಯ ಘಟತಜ್ಜ್ಞಾನಾದೌ ಭೇದೇ ಸತ್ಯೇವ ದರ್ಶನಾದೇಕಸ್ಯೈವ ಜ್ಞಾನತ್ವಂ ಜ್ಞೇಯತ್ವಂ ಚ ಕಥಮ್? ಇತ್ಯತ ಆಹ– **ಜಡ ಇತಿ** ॥ ಜಡೇ ಘಟಪಟಾದೌ । ಜ್ಞಾನಾಸ್ವರೂಪತ್ವಾತ್ ಜ್ಞಾನರೂಪತ್ವಾಭಾವಾತ್ । ಜ್ಞಾನರೂಪೇ ತು ವಸ್ತುನ್ಯಾತ್ಮಾದೌ ಸ್ವಸ್ಯೈವ ಜ್ಞಾನತಾ ಜ್ಞೇಯತಾ ಚ ಏಕಸ್ಯೈವ ಕಿಂ ನ ಸ್ಯಾದಿತಿ ಸಂಬಂಧಃ । ಘಟಾದೌ ಜ್ಞಾನಜ್ಞೇಯವಿಭೇದಸ್ಯ ಜ್ಞಾನಾಸ್ವರೂಪತ್ವಮೇವ ತನ್ತ್ರಮ್ । ಜ್ಞಾನಸ್ವರೂಪವಸ್ತುನಿ ಉಕ್ತನಿಯಮಸ್ಯಾಪಿ ಭಂಗ ಇತಿ ಭಾವಃ ॥ ೨೧೬ ॥

**ವಿವರಣೆ–** ಘಟ ಮೊದಲಾದ ಪದಾರ್ಥಗಳು ಮತ್ತು ಅವುಗಳ ಜ್ಞಾನ ಭಿನ್ನಭಿನ್ನವೇ ಆಗಿದೆ. ಆದ್ದರಿಂದ ಆತ್ಮನು, ಜ್ಞಾನವೂ, ಜ್ಞೇಯವೂ ಹೇಗೆ ಆಗುತ್ತದೆ? ಘಟ ಮೊದಲಾದ ಪದಾರ್ಥಗಳು ಜ್ಞಾನಸ್ವರೂಪ ಅಲ್ಲ. ಆದ್ದರಿಂದ ಅವುಗಳು ಮತ್ತು ಅವುಗಳ ಜ್ಞಾನಗಳು ಭಿನ್ನಭಿನ್ನ. ಆತ್ಮನು ಜ್ಞಾನರೂಪ. ಆದ್ದರಿಂದ ಆತ್ಮಾ ಮತ್ತು ಅದರ ಜ್ಞಾನವು ಬೇರೆ ಬೇರೆ ಆಗಬೇಕಿಲ್ಲ.

ವ್ಯಭಿಚಾರ ದೋಷ -

**ಮನೋಽನುಮಿತ್ಯಾ ಮಾನಸ್ಯಾ ಕಿಂ ನಾನುಮಿಮತೇ ಬುಧಾಃ ।**
**ಜ್ಞಾನರೂಪಂ ತು ಯದ್ವಸ್ತು ಸ್ವೇನಾಪಿ ಜ್ಞೇಯಮೇವ ತತ್ ।**
**ಅತಃಸ್ವರೂಪವಿಜ್ಞಾನೇ ಸ್ವಯಮಾತ್ಮಾ ಪ್ರಕಾಶತಾಮ್ ॥ ೨೧೭ ॥**

**ಅರ್ಥ–** ಬುಧಾಃ = ಪಂಡಿತರು, ಮಾನಸ್ಯಾ = ಮನಃಪರಿಣಾಮರೂಪವಾದ, ಅನುಮಿತ್ಯಾ = ಪ್ರತಿಜ್ಞಾಹೇತುಗಳ ಅನುಸಂಧಾನದಿಂದ, ಮನಃ = ಮನಸ್ಸನ್ನು ಕಿಂ ನ ಅನುಮಿಮತೇ = ಅನುಮಾನ ಪ್ರಕ್ರಿಯೆಯಿಂದ ತಿಳಿಯುವುದಿಲ್ಲವೆ? ತತ್ = ಆದ್ದರಿಂದ, ಜ್ಞಾನರೂಪಂ = ಜ್ಞಾನರೂಪವಾದ, ಯದ್ವಸ್ತು = ಯಾವ ಪದಾರ್ಥವೋ (ಆತ್ಮಾದಿಗಳು) ತತ್= ಅದು, ಸ್ವೇನ ಅಪಿ= ತನ್ನಿಂದಲೇ, ಜ್ಞೇಯಮೇವ= ನಿಶ್ಚಿತವಾಗಿಯೂ ತಿಳಿಯಲ್ಪಡುತ್ತದೆ. ಅತಃ= ಆದ್ದರಿಂದ, ಸ್ವರೂಪವಿಜ್ಞಾನೇ = ಆತ್ಮಸ್ವರೂಪವಾದ ಜ್ಞಾನದಲ್ಲಿ ಸ್ವಯಂ ಆತ್ಮಾ =ಆತ್ಮನೇ, ಪ್ರಕಾಶತಾಂ = ವಿಷಯನಾಗಲಿ.

**ಅನುವಾದ–** ತಿಳಿದವರು ಮನೋವೃತ್ತಿಯಾದ ಪ್ರತಿಜ್ಞಾ-ಹೇತುಗಳ ಅನುಸಂಧಾನದಿಂದ ಮನಸ್ಸನ್ನು ತಿಳಿಯುವುದಿಲ್ಲವೇ? ಆದ್ದರಿಂದ ಜ್ಞಾನರೂಪವಸ್ತುವು ತನ್ನಿಂದಲೇ ತಿಳಿಯಲ್ಪಡಬಹುದು. ಆದ್ದರಿಂದ ಆತ್ಮಸ್ವರೂಪದ ಜ್ಞಾನಕ್ಕೆ ಆತ್ಮನೇ ವಿಷಯನಾಗಲಿ.

ಈ ಶ್ಲೋಕದಲ್ಲಿ 'ಮಾನಸೀ ಅನುಮಿತಿ' ಎಂದರೆ ಪ್ರತಿಜ್ಞಾ ಮತ್ತು ಹೇತುಗಳ ಮಾನಸ ಅನುಸಂಧಾನ.

**ಭಾವವಿಲಾಸಿನೀ –** ಜ್ಞಾನರೂಪೇ ಜ್ಞಾನಜ್ಞೇಯಯೋರ್ಭೇದಘಟಿತತತ್ವನಿಯಮಸ್ಯ ವ್ಯಭಿಚಾರಮಪಿ ದರ್ಶಯತಿ– ಮನ ಇತಿ ॥ ಮಾನಸ್ಯಾ ಮನಃಪರಿಣಾಮತಯಾ ಮನೋರೂಪಯಾ ಅನುಮಿತ್ಯಾ ಸುಖಾದಿಜ್ಞಾನಂ ಸಕರಣಕಂ ಕ್ರಿಯಾತ್ವಾದ್ ರೂಪಾದಿಜ್ಞಾನವದಿತ್ಯನುಮಿತ್ಯಾ ಮನಃ ಬುಧಾಃ ನಾನುಮಿಮತೇ ಕಿಮ್? ಅನುಮಿಮತ ಏವ । ತತ್ ತಸ್ಮಾತ್ ಜ್ಞಾನರೂಪಸ್ಯ ಮನಸಃ ಮನೋರೂಪಜ್ಞಾನೇನೈವ ವೇದ್ಯತ್ವಾತ್ । ಅತಃ ಜ್ಞಾನರೂಪೇ ವಸ್ತುನಿ ಜ್ಞಾನಜ್ಞೇಯವಿಭೇದನಿಯಮಸ್ಯ ಭಗ್ನತ್ವಾತ್ ॥ ೨೧೭ ॥

**ವಿವರಣೆ–** 'ಸುಖಾದಿಜ್ಞಾನಂ ಸಕರಣಕಂ ಕ್ರಿಯಾತ್ವಾತ್ ರೂಪಾದಿಜ್ಞಾನವತ್' - ಇದು ಅನುಮಾನ. ವಸ್ತುಗಳಲ್ಲಿರುವ ರೂಪ ಮೊದಲಾದವುಗಳ ಜ್ಞಾನವು ಚಕ್ಷುಷ್ ಮೊದಲಾದ ಕರಣಗಳಿಂದ ಹುಟ್ಟುತ್ತದೆ. ಹೀಗೆ ಸುಖ-ದುಃಖ ಮೊದಲಾದವುಗಳ ಜ್ಞಾನವೂ ಒಂದು ಕರಣದಿಂದ ಹುಟ್ಟಬೇಕು. ಅದು ಮನಸ್ಸು. ಇಲ್ಲಿ ಪ್ರತಿಜ್ಞಾ ಮತ್ತು ಹೇತುಗಳ ಅನುಸಂಧಾನವು ಮನೋವೃತ್ತಿ. ಈ ಅನುಸಂಧಾನದಿಂದ 'ಮನಸ್' ಎಂಬ ಇಂದ್ರಿಯವು ಇದೆ ಎಂಬ ನಿರ್ಣಯವನ್ನು ಪ್ರಾಜ್ಞರು ಮಾಡಿದ್ದಾರೆ. ಈ ನಿರ್ಣಯವು ಮನೋವೃತ್ತಿಯಿಂದ ಮನಸ್ಸಿನ

ಜ್ಞಾನವು ಆಗಿದೆ. ಇದರಂತೆ ಆತ್ಮವು, ಜ್ಞಾನರೂಪವಾದ್ದರಿಂದ, ಅದರ ಜ್ಞಾನಕ್ಕೆ ಅದೇ ವಿಷಯವಾಗಬಹುದು. ಏನೂ ಬಾಧಕವಿಲ್ಲ.

**ಶ್ರುತಿಸ್ಮೃತಿಗಳಿಗೆ ಬಾಧವಿಲ್ಲ-**

**ಶ್ರುತೇಃ ಸ್ಮೃತೇಃ ಕುತೋ ಬಾಧಃ ಕ್ರಿಯತೇऽನುಭವಸ್ಯ ಚ ।**
**ಯತಸ್ತದಾತ್ಮಾನಮೇವಾವೇದಿತ್ಯುಪನಿಷಜ್ಜಗೌ ॥ ೨೧೮ ॥**

**ಅರ್ಥ–** ಶ್ರುತೇಃ = ವೇದವಾಣಿಗೆ, ಸ್ಮೃತೇಃ = ಸ್ಮೃತಿಗೆ (ಸ್ವಯಮೇವಾತ್ಮನಾತ್ಮಾನಂ ಎಂಬ ಗೀತೆಗೆ) ಅನುಭವಸ್ಯ = ನಾನು ನನ್ನನ್ನು ತಿಳಿಯುತ್ತೇನೆ ಎಂಬ ಅನುಭವಕ್ಕೆ, ಬಾಧಃ = ವಿರೋಧವು, ಕುತಃ ಕ್ರಿಯತೇ = ಹೇಗೆ ಏಕೆ ಮಾಡಲ್ಪಡುತ್ತದೆ? ಯತಃ = ಏಕೆಂದರೆ 'ತದ್ ಆತ್ಮಾನಮೇವ ಆವೇತ್' ಇತಿ= (ತದ್= ಬ್ರಹ್ಮವು, ಆತ್ಮಾನಮೇವ= ತನ್ನನ್ನೇ, ಅವೇತ್= ತಿಳಿದನು) ಎಂದು, ಉಪನಿಷತ್= (ಬೃಹದಾರಣ್ಯಕ) ಉಪನಿಷತ್, ಜಗೌ= ಹೇಳಿದೆ.

**ಅನುವಾದ–** ಶ್ರುತಿ, ಸ್ಮೃತಿ, ಅನುಭವಗಳಿಗೆ ಏಕೆ ವಿರೋಧ ಮಾಡುತ್ತೀರಿ. ಏಕೆಂದರೆ 'ತದಾತ್ಮಾನಮೇವಾವೇದ್' ಎಂದು ಉಪನಿಷತ್ತು ಹೇಳಿದೆ.

**ಭಾವವಿಲಾಸಿನೀ–** ಶ್ರುತೇರಿತ್ಯಾದೇಃ ಸ್ವಪ್ರಕಾಶತ್ವಪ್ರತಿಪಾದಕಶ್ರುತಿಸ್ಮೃತ್ಯನುಭಾವಾನಾಮಿತ್ಯರ್ಥಃ । ಬಾಧ ಅಪಲಾಪಃ । ಅನ್ಯಾರ್ಥಕಥನಂ ವಾ । ಸ್ಮೃತೇರನುಭವಸ್ಯ ಚ ಪ್ರಾಗೇವೋಕ್ತತ್ವಾತ್ ಸ್ವಪ್ರಕಾಶತ್ವಪ್ರತಿಪಾದಿಕಾಂ ಶ್ರುತಿಮಾಹ– ಯತ ಇತಿ ॥ ತದಾತ್ಮಾನಮೇವಾವೇದ್' ಇತ್ಯುಪನಿಷತ್ ತದ್ ಬ್ರಹ್ಮ ಆತ್ಮಾನಮೇವ ಸ್ವಸ್ವರೂಪಮೇವ ಆವೇತ್ ಆವೇದೇತಿ ಸ್ವಪ್ರಕಾಶತ್ವಂ ಯತಃ ಜಗೌ । ಅತಃ ಶ್ರುತೇರ್ಬಾಧಃ ಕುತಃ? ಇತಿ ಪೂರ್ವೇಣಾನ್ವಯಃ ॥ ೨೧೮ ॥

**ವಿವರಣೆ–** ಶ್ರುತಿ-ಸ್ಮೃತಿ-ಅನುಭವಗಳು ಆತ್ಮನಿಗೆ ಸ್ವಪ್ರಕಾಶತ್ವವನ್ನು ಪ್ರತಿಪಾದಿಸುತ್ತವೆ. ಸ್ಮೃತಿ ಮತ್ತು ಅನುಭವಗಳನ್ನು ಹಿಂದೆಯೇ ಉಲ್ಲೇಖಿಸಲಾಗಿದೆ. (ಶ್ಲೋಕ 212, 201) ಬೃಹದಾರಣ್ಯಕಶ್ರುತಿಯನ್ನು ಇಲ್ಲಿ ಉದಾಹರಿಸಲಾಗಿದೆ. ಬಾಧಃ= ಅಪಲಾಪ= ಇದ್ದದ್ದನ್ನು ಇಲ್ಲ ಎಂದು ಹೇಳುವುದು.

**ನ ಚೇದೇವಮಸಂಬದ್ಧಂ ವದತೋ ಮರಣೇ ಕಥಮ್ ।**
**ವಿಲಪೇತ್ ಪಟ್ಟಮಹಿಷೀ ಸ್ವೋರಸ್ತಾಡನಪೂರ್ವಕಮ್ ॥ ೨೧೯ ॥**

**ಅರ್ಥ–** ನ ಚೇತ್= ಒಬ್ಬನಿಗೇ ಕರ್ತೃಕರ್ಮಭಾವವು ಇಲ್ಲವಾದರೆ, ಏವಮ್ ಅಸಂಬದ್ಧಂ= ಹೀಗೆ ಅಸಂಬದ್ಧವಾಗಿ, ವದತಃ= ಮಾತನಾಡುವವನ, ಮರಣೇ= ಮರಣ ಕಾಲದಲ್ಲಿ, ಪಟ್ಟಮಹಿಷೀ= ಪಟ್ಟದ ರಾಣಿಯು, ಸ್ವೋರಸ್ತಾಡನಪೂರ್ವಕಂ = ತನ್ನ ಎದೆಯನ್ನು ಹೊಡೆದುಕೊಳ್ಳುತ್ತಾ, ಕಥಂ ವಿಲಪೇತ್ = ಹೇಗೆ ಗೋಳಾಡುವಳು?

**ಅನುವಾದ–** ಒಬ್ಬನಿಗೆ ಕರ್ತೃತ್ವ-ಕರ್ಮಗಳು ಇಲ್ಲವಾದರೆ ಒಬ್ಬನ ಮರಣವಾದಾಗ ಅವನ ಪತ್ನಿಯು ತನ್ನ ಎದೆಗೆ ಹೊಡೆದುಕೊಳ್ಳುತ್ತಾ ಗೋಳಾಡಲು ಹೇಗೆ ಸಾಧ್ಯ?

**ಭಾವವಿಲಾಸಿನೀ–** ಏಕಸ್ಯೈವ ಕರ್ತೃಕರ್ಮಭಾವಾನಂಗೀಕಾರಿಣಂ ಪ್ರತಿ ಸೋಪಹಾಸಮುತ್ತರ-ಮಾಹ- ನ **ಚೇದಿತಿ** ॥ ನ ಚೇದೇಕಸ್ಯೈವ ಕರ್ತೃಕರ್ಮಭಾವೋ ನ ಚೇತ್ । ಏವಮಸಂಬದ್ಧಂ ವದತಸ್ತವ ಮರಣೇ ಸತಿ ಪಟ್ಟಮಹಿಷೀ ಸ್ವೋರಸ್ತಾಡನಪೂರ್ವಕಂ ಕಥಂ ವಿಲಪೇತ್? ಸ್ವೋರ-ಸ್ತಾಡನೇ ಹಿ ಸ್ವಸ್ಯಾ ಏವ ತಾಡ್ಯಮಾನತ್ವಂ ತಾಡಯಿತೃತ್ವಂ ಚ ಕಥಂ ಸ್ಯಾತ್? ಇತಿ ಭಾವಃ॥೨೧೯॥

ವಿಶೇಷದಿಂದ ಒಬ್ಬನಲ್ಲಿಯೇ ಕರ್ತೃತ್ವಕರ್ಮತ್ವದ ವ್ಯವಹಾರ -

ಅವಾಂತರವಿಶೇಷೇಣ ಯದ್ಯೇಕತ್ರಾಪಿ ತದ್ ಭವೇತ್ ।
ಆತ್ಮಾ ಕರ್ಮ ಕ್ರಿಯಾ ಜ್ಞಾನಮಿತ್ಯತ್ರಾಪಿ ವಿಶೇಷಣೇ ।
ಅವಕಾಶೋಽಸ್ತಿ ಯಚ್ಛಬ್ದಾ ಅಪರ್ಯಾಯಾಸ್ತಯೋಃ ಸದಾ ॥ ೨೨೦ ॥

**ಅರ್ಥ–** ಏಕತ್ರ ಅಪಿ= ಒಂದೇ ದೇಹದಲ್ಲೂ, ಅವಾಂತರ ವಿಶೇಷೇಣ= ಅವಯವಗಳ ಒಳ ವಿಭಾಗದಿಂದ, ತತ್= ಅದು= ಕರ್ತೃ-ಕರ್ಮಭಾವವು, ಯದಿ ಭವೇತ್= ಉಪಪನ್ನವಾಗುವುದಾದರೆ, ಅತ್ರಾಪಿ= ಬ್ರಹ್ಮವಿಷಯದಲ್ಲೂ, ಆತ್ಮಾ = ಪರಮಾತ್ಮನು, ಕರ್ಮ= ವಿಷಯವನ್ನು, ಜ್ಞಾನಂ ಕ್ರಿಯಾ= ಜ್ಞಾನವು ಕ್ರಿಯೆ, ಇತಿ= ಎಂದು, ವಿಶೇಷಣೇ= ಒಳ ವಿಭಾಗಕ್ಕೆ, ಅವಕಾಶಃ ಅಸ್ತಿ= ಅವಕಾಶವು ಇದೆ, ಯತ್= ಏಕೆಂದರೆ, ತಯೋಃ= ಆತ್ಮಾ ಮತ್ತು ಜ್ಞಾನಗಳ, ಶಬ್ದಾಃ= ವಾಚಕ ಶಬ್ದಗಳು (ಬ್ರಹ್ಮನ್, ಆತ್ಮನ್ ಮೊದಲಾದ ಶಬ್ದಗಳು ಮತ್ತೂ ಜ್ಞಾನ, ಜ್ಞಪ್ತಿ ಮೊದಲಾದ ಶಬ್ದಗಳು) ಸದಾ= ಯಾವಾಗಲೂ, ಅಪರ್ಯಾಯಾಃ= ಸಮಾನಾರ್ಥಗಳಲ್ಲ.

**ಅನುವಾದ–** ತಾಡನಕ್ರಿಯೆಯ ಕರ್ತೃ ಮತ್ತು ಕರ್ಮ ಒಂದೇ ವ್ಯಕ್ತಿಯಾಗಿದ್ದರೂ, ಆ ವ್ಯಕ್ತಿಯಲ್ಲಿ ಕೈ, ಎದೆ ಮೊದಲಾದ ಒಳವಿಭಾಗಗಳಿವೆ; ಈ ಒಳವಿಭಾಗದಿಂದ ಕರ್ತೃ ಮತ್ತು ಕರ್ಮಗಳು ಬೇರೆ ಬೇರೆಯೂ ಆಗಬಹುದು? ಸರಿ. ಜ್ಞಾನಕ್ರಿಯೆ, ಅದರ ಕರ್ತೃ, ಕರ್ಮಗಳು ಆತ್ಮನೇ. ಆದರೆ ಆತ್ಮಸ್ವರೂಪವೇ ಆಗಿರುವ ಜ್ಞಾನ ಮತ್ತು ಜ್ಞಾನ ಕರ್ಮವಾದ ಆತ್ಮಾ - ಇವುಗಳಲ್ಲಿ ಒಳವಿಭಾಗವಿದೆ. ಜ್ಞಾನ-ಜ್ಞಪ್ತಿ ಶಬ್ದಗಳು ಜ್ಞಾನ ವಾಚಕಗಳು. ಆತ್ಮನ್-ಬ್ರಹ್ಮನ್ ಶಬ್ದಗಳು ಬ್ರಹ್ಮವಾಚಕಗಳು. ಜ್ಞಾನವಾಚಕ ಮತ್ತು ಬ್ರಹ್ಮವಾಚಕ ಶಬ್ದಗಳು ಪರ್ಯಾಯಗಳಲ್ಲ. ಈ ಶಬ್ದಗಳು ಅಪರ್ಯಾಯ-ಗಳಾಗಿರುವುದೇ ಅವುಗಳಲ್ಲಿ ಒಳವಿಭಾಗವಿದೆ ಎಂದು ತಿಳಿಯಲು ಸಮರ್ಥನೆ.

**ಭಾವವಿಲಾಸಿನೀ–** ಅವಾಂತರವಿಶೇಷೇಣ ಹಸ್ತೋರಃಸ್ಥಲಾದಿವಿಶೇಷೇಣ ಏಕತ್ರ ಏಕಸ್ಮಿನ್ ದೇಹೇಽಪಿ ತತ್ಕರ್ತೃತ್ವಂ ಕರ್ಮತ್ವಂ ಚ । ಅತ್ರಾಪಿ ಬ್ರಹ್ಮಣ್ಯಪಿ ಆತ್ಮಾ ಪರಮಾತ್ಮಾ ಕರ್ಮವಿಷಯಃ ।

ತಸ್ಯ ಜ್ಞಾನಂ ಕ್ರಿಯೇತಿ ವಿಶೇಷಣೇऽವಕಾಶೋऽಸ್ತಿ । ತಯೋರ್ಬ್ರಹ್ಮಜ್ಞಾನಯೋಃ ಶಬ್ದಾಃ ಬ್ರಹ್ಮಾತ್ಮಾದಿಬ್ರಹ್ಮವಾಚಕಶಬ್ದಾಃ ಜ್ಞಾನಜ್ಞಪ್ತ್ಯಾದಿಜ್ಞಾನವಾಚಕಶಬ್ದಾಃ ಅಪರ್ಯಾಯಾಃ ಘಟಕಶರೀರಾದಿವತ್ ಪರ್ಯಾಯಪ್ರಯೋಜ್ಯಾಃ ನ, ಕಿಂತು ಘಟಪಟಾದಿಶಬ್ದವತ್ ಸಹಪ್ರಯೋಜ್ಯಾ ಏವ। ಅತಃ ಬ್ರಹ್ಮಣಿ ತಜ್ಜ್ಞಾನಸ್ಯ ಸವಿಶೇಷಾಭೇದ ಏವ ವಕ್ತವ್ಯಃ। ನತ್ವತ್ಯಂತಾಭೇದಃ। ಅತಸ್ತವೇವ ಮವರ್ಜಾಪ್ಯವಾಂತರವಿಶೇಷೇಣ ಏಕಸ್ಯ ಕ್ರಿಯಾಕರ್ಮಭಾವಘಟನೇತಿ ಭಾವಃ । ಏವಮೇಕಸ್ಯೈವಾತ್ಮನಃ ಸ್ವಜ್ಞಾನಪ್ರಯತ್ನದಶಾಯಾಂ ಕರ್ತೃತ್ವಂ ಜ್ಞಾನದಶಾಯಾಂ ಕರ್ಮತ್ವಂ ಚೇತಿ ದ್ರಷ್ಟವ್ಯಮ್ ॥ ೨೨೦ ॥

**ವಿವರಣೆ–** ಪ್ರಶ್ನೆ: ಜ್ಞಾನವು ಆತ್ಮಸ್ವರೂಪ ಎಂದರೆ ಜ್ಞಾನ ಮತ್ತು ಆತ್ಮಗಳಿಗೆ ಅತ್ಯಂತಾಭೇದ ಎಂದು ಅರ್ಥ; ಹೀಗಿರುವಾಗ ಅವುಗಳಿಗೆ ಒಳವಿಭಾಗ ಹೇಗೆ?

ಉತ್ತರ: ಜ್ಞಾನ ಮತ್ತು ಆತ್ಮಗಳಿಗೆ ಅತ್ಯಂತಾಭೇದವಿಲ್ಲ. ಪ್ರಮಾಣಸಿದ್ಧ ಭೇದವ್ಯವಹಾರಗಳನ್ನು ನಡೆಸುವ ಒಂದು ಶಕ್ತಿಯು ಆತ್ಮನಲ್ಲಿ ಇದೆ; ಈ ಶಕ್ತಿಗೆ 'ವಿಶೇಷ' ಎಂದು ಹೆಸರು. ಇದು ಅಭೇದವಿರುವ ಕಡೆ ಪ್ರಮಾಣಸಿದ್ಧ ಭೇದವ್ಯವಹಾರಗಳನ್ನು ನಡೆಸುವ ಶಕ್ತಿಯಾದ್ದರಿಂದ ಭೇದಪ್ರತಿನಿಧಿ. ಜ್ಞಾನ-ಆತ್ಮಗಳಿಗೆ ಈ ವಿಶೇಷದ ಜೊತೆಗೆ ಅಭೇದವಿದೆ. ಈ ಅಭೇದಕ್ಕೆ ಸವಿಶೇಷಾಭೇದ ಎಂದು ಹೆಸರು. ಆತ್ಮ ಮತ್ತು ಜ್ಞಾನಕ್ಕೆ ಅಭೇದವಿದ್ದರೂ ಅದರ ಜೊತೆಗೇ ಇರುವ 'ವಿಶೇಷ'ದಿಂದ ಜ್ಞಾನವು ಕ್ರಿಯೆ, ಆತ್ಮನು ಕರ್ಮ, ಕರ್ತೃ ಎಂದು ವಿಭಾಗವೂ ಇದೆ.

ಮಾಮಹಂ ನ ವಿಜಾನಾಮೀತ್ಯತ್ರ ಕರ್ತೃತ್ವಕರ್ಮತೇ ।
ಯಥೈಕಸ್ಯ ತಥಾ ಕ್ವಾಪಿ ಕ್ರಿಯಾಕರ್ಮೈಕ್ಯಮುಚ್ಯತಾಮ್ ॥ ೨೨೧ ॥

**ಅರ್ಥ–** ಮಾಮಹಂ ನ ವಿಜಾನಾಮಿ= ನಾನು ನನ್ನನ್ನು ತಿಳಿದಿಲ್ಲ, ಇತ್ಯತ್ರ = ಈ ಅನುಭವದಲ್ಲಿ, ಯಥಾ = ಹೇಗೆ, ಏಕಸ್ಯ = ಒಬ್ಬನಿಗೇ, ಕರ್ತೃತ್ವಕರ್ಮತೇ = ಕರ್ತೃತ್ವಕರ್ಮತ್ವಗಳು ಇವೆಯೋ, ತಥಾ = ಹಾಗೆಯೇ, ಕ್ವಾಪಿ = ಬೇರೊಂದು ಅನುಭವದಲ್ಲಿ, (ಒಬ್ಬನಲ್ಲಿಯೇ) ಕ್ರಿಯಾಕರ್ಮೈಕ್ಯಂ = ಕ್ರಿಯೆ ಮತ್ತು ಕರ್ಮಗಳ ಐಕ್ಯವು, ಉಚ್ಯತಾಂ = ಹೇಳಲ್ಪಡಲಿ.

**ಅನುವಾದ–** 'ಮಾಮಹಂ ನ ವಿಜಾನಾಮಿ' - ಈ ಅನುಭವದಲ್ಲಿ ಕರ್ತೃತ್ವ ಮತ್ತು ಕರ್ಮತ್ವಗಳು ಒಬ್ಬನಿಗೇ ಗೋಚರವಾಗಿವೆ. ಹೀಗೆಯೇ ಬೇರೆ ಅನುಭವದಲ್ಲಿ= 'ಮಾಮಹಂ ಜಾನಾಮಿ' ಎಂಬ ಅನುಭವದಲ್ಲಿ ಕ್ರಿಯಾ ಮತ್ತು ಕರ್ಮಗಳು ಒಂದೇ ಆಗಿರಬಹುದು. ಏನೂ ಬಾಧಕವಿಲ್ಲ.

**ಭಾವವಿಲಾಸಿನೀ–** ನನು ಮನೋऽನುಮಿತೌ ಮನಸೋ ಜ್ಞೇಯತ್ವಂ ಜ್ಞಾನತ್ವಂ ಚಾಸ್ತಿ । ಕರ್ತೃತ್ವಂ ತು ಆತ್ಮನ ಏವ। ಉರಸ್ತಾಡನೇऽಪಿ ಕರ್ತೃತ್ವಂ ಕರ್ಮತ್ವಂ ಚೈಕಸ್ಯ ದೇಹಸ್ಯಾಸ್ತಿ । ಕ್ರಿಯಾತ್ವಂ ತು ನ

ದೇಹಸ್ಯ। ಬ್ರಹ್ಮಣಿ ಕರ್ತೃತ್ವಂ ಕ್ರಿಯಾತ್ವಂ ಕರ್ಮತ್ವಂ ಚ ಕಥಮೇಕತ್ರ ಸ್ಯಾದಿತ್ಯತಃ ಪ್ರಾಗುಕ್ತದೃಷ್ಟಾಂತಾಂತರಮಪಿ ಸ್ಮಾರಯನುತ್ತರಮಾಹ– ಮಾಮಹಮಿತಿ ॥ ಕರ್ತೃತ್ವ-ಕರ್ಮತೇ ಇತ್ಯುಪಲಕ್ಷಣಮ್। ಕ್ರಿಯಾತ್ವಂ ಚ ಗ್ರಾಹ್ಯಮ್। ಏಕಸ್ಯಾತ್ಮನ ಏವ 'ಮಾಮ್' ಇತಿ ಕರ್ಮತ್ವಮ್, 'ಅಹಮ್' ಇತಿ 'ಕರ್ತೃತ್ವಂ ನ ಜಾನಾಮಿ' ಇತಿ ಅಜ್ಞಾನಜ್ಞಾನರೂಪತ್ವಂ ಚ ಯಥಾ, ತಥಾ ಕ್ವಾಪಿ ಮಾಮಹಂ ಜಾನಾಮಿ' ಇತ್ಯತ್ರಾಪೀತ್ಯರ್ಥಃ । ಕ್ರಿಯಾಕರ್ಮೈಕ್ಯಮಿತ್ಯುಪಲಕ್ಷಣಮ್ । ಕ್ರಿಯಾಕರ್ಮಕರ್ತ್ರೈಕ್ಯಂ ಚೇತ್ಯರ್ಥಃ । ಅಥವಾ ಯುಷ್ಮದಸ್ಮತ್ಪ್ರತ್ಯಯಗೋಚರಯೋಃ ವಿಷಯವಿಷಯಿಣೋಸ್ತಮಃಪ್ರಕಾಶವದ್ ವಿರುದ್ಧಸ್ವಭಾವಯೋರಿತರೇತರಭಾವಾನುಪ-ಪತ್ತಾವಿತ್ಯಾದಿ ಭಾಷ್ಯಕಾರವಚನೇನ ಪ್ರತ್ಯಗ್ಭೂತಮಾತ್ಮತತ್ವಂ ಕಥಂ ಪರಾಗ್ಭೂತಂ ವಿಷಯತತ್ವಂ ಸ್ಯಾದಿತಿ ವಿವರಣೋಕ್ತ್ಯಾ ಚ ಕರ್ತೃಕರ್ಮಭಾವವಿರೋಧಾದಿತಿ ವದತೋಽಪಿ ಕ್ರಿಯಾ-ಕರ್ಮಭಾವವಿರೋಧ ಏವ ತಾತ್ಪರ್ಯಮ್ । ಅತಸ್ತದುಪಪಾದನಾಯೈವಂ ದೃಷ್ಟಾಂತಾಃ ಕಥ್ಯಂತೇ। ತತ್ರ ಕೇಚಿತ್ ಸಾಕ್ಷಾತ್ ಕ್ರಿಯಾಕರ್ಮೈಕ್ಯಘಟಕಾಃ ಸಾಕ್ಷಾದೇವ ಸಂಬಧ್ಯಂತೇ। ಕೇಚಿತ್ತು ಕರ್ತೃಕರ್ಮೈಕ್ಯಘಟಕಾ ಅಪಿ ಯಥಾ ವಿರುದ್ಧಯೋಃ ಕರ್ತೃತ್ವಕರ್ಮತ್ವಯೋರೇಕತ್ರ ಘಟನಾ, ತಥಾ ವಿರುದ್ಧಯೋಃ ಕ್ರಿಯಾಕರ್ಮಣೋರಪಿ ಏಕತ್ರ ಘಟನಾಽಸ್ತ್ವಿತಿ ಪರಂಪರಯಾ ಸಂಬಧ್ಯಂತೇ। ಅಸ್ಮಿನ್ ಪಕ್ಷೇ ಮಾಮಹಂ ನ ವಿಜಾನಾಮಿ' ಇತಿ ಶ್ಲೋಕೇ ಯಥಾಸ್ಥಿತೈವ ಯೋಜನಾ। ಕರ್ತೃತ್ವಕರ್ಮತ್ವೇ ಪರಸ್ಪರವಿರುದ್ಧೇ ಅಪಿ ಯಥೈಕತ್ರ, ಅಜ್ಞಾನಜ್ಞಾನದಶಾಯಾಂ 'ಮಾಮಹಮ್' ಇತ್ಯಾತ್ಮನ ಏವ ಕರ್ಮತ್ವಾತ್ ಕರ್ತೃತ್ವಾಚ್ಚ। ತಥಾ ಕ್ವಾಪ್ಯಾತ್ಮನ ಏವ ಸ್ವಜ್ಞಾನೇನೈವ ಸ್ವಸ್ಯ ಜ್ಞೇಯ-ತ್ವಸ್ಥಲೇ ಕ್ರಿಯಾಕರ್ಮೈಕ್ಯಮುಚ್ಯತಾಮ್ । ವಿರೋಧಸ್ಯೋಭಯತ್ರ ಸಾಮ್ಯಾದಿತ್ಯರ್ಥಃ। ಏವಮೇವೋರಸ್ತಾಡನದೃಷ್ಟಾಂತಸ್ಯಾಪಿ ಪ್ರಕೃತೋಪಯೋಗೋ ದ್ರಷ್ಟವ್ಯಃ ॥ ೨೨೧ ॥

**ವಿವರಣೆ–** ಪ್ರಶ್ನೆ : 217 ಶ್ಲೋಕದಲ್ಲಿ ಹೇಳಿದಂತೆ ಮನೋವೃತ್ತಿರೂಪವಾದ ಅನುಮಿತಿಯಿಂದ ಮನಸ್ಸನ್ನು ತಿಳಿಯುವಾಗ ಮನಸ್ಸು ಜ್ಞಾನ ಮತ್ತು ಜ್ಞೇಯ ಆಗುತ್ತದೆ. ಕರ್ತೃ ಅಲ್ಲ. ಆತ್ಮನೇ ಕರ್ತೃ.

ಎದೆಯನ್ನು ಹೊಡೆದುಕೊಳ್ಳುವ ನಿದರ್ಶನದಲ್ಲಿ ದೇಹವೇ ಕರ್ತೃ ಮತ್ತು ಕರ್ಮ. ದೇಹವು ಕ್ರಿಯೆ ಅಲ್ಲ. ಬ್ರಹ್ಮನಿಗೆ ಕರ್ತೃತ್ವ, ಕರ್ಮತ್ವ ಮತ್ತು ಕ್ರಿಯಾತ್ವಗಳು ಹೇಗೆ?

ಉತ್ತರ : 'ಮಾಮಹಂ ನ ವಿಜಾನಾಮಿ' - ಈ ಅನುಭವಕಥನದಲ್ಲಿ ಒಬ್ಬನಿಗೆ 'ಮಾಮ್' ಎಂದು ಕರ್ಮತ್ವವು 'ಅಹಮ್' ಎಂದು ಕರ್ತೃತ್ವವು 'ನ ಜಾನಾಮಿ' ಎಂದು ಅಜ್ಞಾನದ ಜ್ಞಾನರೂಪತ್ವವು ಸಿದ್ಧವಾಗಿದೆ. ಇದರಂತೆ 'ಮಾಮಹಂ ಜಾನಾಮಿ' ಎಂಬ ಅನುಭವದಲ್ಲಿ ಕರ್ತೃತ್ವ, ಕರ್ಮತ್ವ ಕ್ರಿಯಾತ್ವಗಳು ಒಬ್ಬನಿಗೇ ಸಿದ್ಧವಾಗಿದೆ. ಹೀಗೆಯೇ ಬ್ರಹ್ಮನಲ್ಲಿ ಕರ್ತೃತ್ವ, ಕರ್ಮತ್ವ ಮತ್ತು ಕ್ರಿಯಾತ್ವಗಳು ಇರಬಹುದು.

**ವಿಶೇಷವಿಚಾರ**(ಸುರೋತ್ತಮೀಯ): ಶಾಂಕರಬ್ರಹ್ಮಸೂತ್ರಭಾಷ್ಯ ಮತ್ತು ವಿಮುಕ್ತಾತ್ಮ ಯತಿಯ ವಿವರಣಗ್ರಂಥಗಳಲ್ಲಿ ಜ್ಞಾನಕ್ರಿಯೆ ಮತ್ತು ವಿಷಯಗಳ ಐಕ್ಯದ ಅನುಪಪತ್ತಿಯನ್ನು ಹೇಳಿದ್ದಾರೆ.

ಈ ಶ್ಲೋಕದಲ್ಲಿ ಶ್ರೀವಾದಿರಾಜರು ಉಪಪತ್ತಿಯನ್ನು ಹೇಳಿದ್ದಾರೆ. 'ಮಾಮಹಂ ನ ವಿಜಾನಾಮಿ' - ಈ ಅನುಭವಕಥನದಲ್ಲಿ ಒಬ್ಬನಲ್ಲೇ ಕರ್ತೃತ್ವ ಮತ್ತು ಕರ್ಮತ್ವಗಳಿರುವುದು ಸಿದ್ಧ. ಹೀಗೆ 'ಮಾಮಹಂ ಜಾನಾಮಿ' ಎಂದು ಅನುಭವವಿರುವುದರಿಂದ ತನ್ನ ಜ್ಞಾನದಿಂದ ತನ್ನನ್ನೇ ತಿಳಿಯುವ ಸಂದರ್ಭದಲ್ಲಿ ಕ್ರಿಯಾ ಮತ್ತು ಕರ್ಮಗಳೂ ಒಂದೇ ಆಗಬಹುದು.

**ಅಭಿಧಾಖ್ಯಾಭಿಧೇಯತ್ವಮಭಿಧಾನಾಮ್ನಿ ಕಿಂ ನ ತೇ ।**
**ಪ್ರಮಾಣಸದಸತ್ತ್ವಾಭ್ಯಾಂ ವ್ಯವಸ್ಥಾ ಚ ಭವಿಷ್ಯತಿ ॥ ೨೨೨ ॥**

**ಅರ್ಥ–** ಅಭಿಧಾನಾಮ್ನಿ = ಅಭಿಧಾ ಎಂಬ ನಾಮಪದದಲ್ಲಿ, ಅಭಿಧಾಖ್ಯಾ= ಅಭಿಧಾ ಎಂಬ ನಾಮದಿಂದ, ಅಭಿಧೇಯತ್ವಂ = ವಾಚ್ಯತ್ವವು, ತೇ = ನಿನ್ನ ಪ್ರಕಾರ, ಕಿಂ ನ = ಇಲ್ಲವೇನು? ಪ್ರಮಾಣಸದಸತ್ತ್ವಾಭ್ಯಾಂ = ಪ್ರಮಾಣದ ಭಾವ ಅಭಾವಗಳಿಂದ, ವ್ಯವಸ್ಥಾ = ಭೇದ-ಅಭೇದ ವ್ಯವಸ್ಥೆಯು, ಭವಿಷ್ಯತಿ = ಇರುತ್ತದೆ.

**ಅನುವಾದ–** ನಿನ್ನ ಪ್ರಕಾರ 'ಅಭಿಧಾ' ಎಂಬ ನಾಮವು 'ಅಭಿಧಾ' ನಾಮದ ಅರ್ಥವಲ್ಲವೇ? ಪ್ರಮಾಣಕ್ಕನುಗುಣವಾಗಿ ಭೇದ, ಅಭೇದ ವ್ಯವಸ್ಥೆಯು ಇದೆ.

**ಭಾವವಿಲಾಸಿನೀ–** ದೃಷ್ಟಾಂತಾಂತರಂ ಚಾಹ– **ಅಭಿಧೇತಿ** ॥ ಅಭಿಧಾಖ್ಯಯಾ ಅಭಿಧೇತಿ ನಾಮ್ನಾ ಅಭಿಧೇಯತ್ವಮ್, ವಾಚ್ಯತ್ವಂ ಅಭಿಧಾನಾಮ್ನಿ ಅಭಿಧೇತಿ ನಾಮ್ನಿ ತೇ ಮತೇ ಕಿಂ ನ? ಭವತ್ಯೇವ ಇತ್ಯರ್ಥಃ। ಯಥಾಭಿಧಾನಾಮ್ನ್ಯೈವಾಭಿಧೇಯಮ್, ಅಭಿಧಾ ಚಾಭೂತ್, ತಥಾ ಪ್ರಕೃತೇಽಪಿ ಬ್ರಹ್ಮೈವ ಜ್ಞಾನಂ ಜ್ಞೇಯಂ ಚಾಸ್ತ್ವಿತಿ ಭಾವಃ। ನನ್ವೇವಂ ಕರ್ಮತ್ವಕ್ರಿಯಾತ್ವಯೋರೇಕತ್ವೇ ಭಿದಿಕ್ರಿಯಾಯಾಶ್ಛಿದ್ಯಮಾನದಾರುಣಶ್ಚೈಕ್ಯಂ ಸ್ಯಾದಿತ್ಯತ ಆಹ– **ಪ್ರಮಾಣೇತಿ** ॥ ೨೨೨ ॥

**ವಿವರಣೆ–** ನಾಮವು 'ಅಭಿಧಾ' ಮತ್ತು 'ಅಭಿಧೇಯ' ಎರಡೂ ಆಗಿದೆ. ಹೀಗೆಯೇ ಬ್ರಹ್ಮನು ಜ್ಞಾನವೂ, ಜ್ಞೇಯವೂ ಆಗಬಹುದು.

**ಪ್ರಶ್ನೆ :** ಛೇದನಕ್ರಿಯೆ ಮತ್ತು ಮರ ಒಂದೇ ಆಗುವುದೇ?

**ಉತ್ತರ** - ಇಲ್ಲ. 'ಅಭಿಧಾ' ಅಭಿಧೇಯ ಆಗಿರುವ ವಿಷಯದಲ್ಲಿ, ಬ್ರಹ್ಮನು ಜ್ಞಾನವೂ-ಜ್ಞೇಯವೂ ಆಗಿರುವ ವಿಷಯದಲ್ಲಿ ಪ್ರಮಾಣವಿದೆ. ಛೇದನಕ್ರಿಯೆಯು ಮರದಿಂದ ಭಿನ್ನ ಎಂದು ತಿಳಿಸುವ ಪ್ರಮಾಣವಿದೆ. ಪ್ರಮಾಣಕ್ಕೆ ಅನುಗುಣವಾಗಿ ಪ್ರಮೇಯದ ವ್ಯವಸ್ಥೆ. ಪ್ರಕೃತ ಭೇದ, ಅಭೇದಗಳ ವ್ಯವಸ್ಥೆ.

ಕ್ರಿಯಾಕರ್ಮಗಳ ಐಕ್ಯಕ್ಕೆ ಇನ್ನೊಂದು ದೃಷ್ಟಾಂತ -

**ಕಿಂ ಜ್ಞಾನಪದಜನ್ಯಂ ಯಜ್ಜ್ಞಾನಂ ಸ್ವವಿಷಯಂ ನ ತತ್ ।**
**ನಹಿ ತಸ್ಯಾಪ್ಯವೇದ್ಯಸ್ಯ ವ್ಯವಹಾರೋ ಭವನ್ಮತೇ ॥ ೨೨೩ ॥**

**ಅರ್ಥ–** ಜ್ಞಾನಪದಜನ್ಯಂ = ಜ್ಞಾನವೆಂಬ ಪದದಿಂದ ಹುಟ್ಟಿದ, ಯತ್ ಜ್ಞಾನಂ = ಯಾವ ಜ್ಞಾನವಿದೆಯೋ, ತತ್ = ಅದು, ಸ್ವವಿಷಯಂ = ಜ್ಞಾನವಿಷಯಕವು, ಕಿಂ ನ = ಅಲ್ಲವೇ? ಅವೇದ್ಯಸ್ಯ= ಜ್ಞಾನವಿಷಯವಾಗದ, ತಸ್ಯಾಪಿ = ಜ್ಞಾನಪದದಿಂದ ಹುಟ್ಟಿದ ಆ ಜ್ಞಾನದ ಬಗ್ಗೆ, ವ್ಯವಹಾರಃ = ವ್ಯವಹಾರವು, ಭವನ್ಮತೇ = ನಿಮ್ಮ ಸಿದ್ಧಾಂತದಲ್ಲಿ, ನಹಿ = ಇಲ್ಲವಷ್ಟೇ!

**ಅನುವಾದ–** 'ಜ್ಞಾನ' ಪದದಿಂದ ಜ್ಞಾನವು ಹುಟ್ಟುತ್ತದೆ. ಈ ಜ್ಞಾನಕ್ಕೆ ಎಲ್ಲ ಜ್ಞಾನಗಳಂತೆ 'ಜ್ಞಾನ' ಪದದ ಅರ್ಥವಾದ ಜ್ಞಾನವೂ ವಿಷಯ. ಆ ಜ್ಞಾನದ ಅರಿವೇ ಇಲ್ಲದೆ ಅದರ ಬಗ್ಗೆ ವ್ಯವಹಾರವು ನಿನ್ನ ಮತದ ಪ್ರಕಾರವೂ ಆಗುವುದಿಲ್ಲ.

**ಭಾವವಿಲಾಸಿನೀ–** ಸ್ಥಲಾಂತರೇಽಪಿ ಕ್ರಿಯಾಕರ್ಮಣೋರೈಕ್ಯಂ ಪ್ರದರ್ಶಯತಿ– ಕಿಂ ಜ್ಞಾನೇತಿ ॥ ಜ್ಞಾನಪದಜನ್ಯಂ ಯಜ್ಜ್ಞಾನಂ ತತ್ಸ್ವವಿಷಯಂ ನ ಕಿಮ್ ಭವತ್ಯೇವ । ಜ್ಞಾನಸಾಮಾನ್ಯವಾಚಕಸ್ಯ ಜ್ಞಾನಪದಸ್ಯ ಜ್ಞಾನಮಾತ್ರವಿಷಯಕಜ್ಞಾನಜನಕತ್ವನಿಯಮೇನ ತಜ್ಜನ್ಯಜ್ಞಾನಜ್ಞಾನರೂಪ-ಸ್ವವಿಷಯತ್ವಸ್ಯಾಪಿ ಸರ್ವೈರಂಗೀಕೃತತ್ವಾದಿತಿ ಭಾವಃ। ಬಹುಪುಂಸಹಾಯೇಽಪಿ ಕ್ಲೀಬಸ್ಯ ಪುಂಸ್ತ್ವಾದರ್ಶನಾತ್ ಸ್ವಾವಿಷಯಬಹುಸಹಾಯೇ ಏಕಾಂಶೇನ ಸ್ವವಿಷಯತ್ವಮಿತ್ಯಪಿ ರಿಕ್ತಂ ವಚಃ । ಅಭಿಧಾದೃಷ್ಟಾಂತೇ ಕುಚೋದ್ಯಾನವಕಾಶಾಚ್ಚ। ಅವೇದ್ಯತ್ವೇ ಸತ್ಯಪರೋಕ್ಷವ್ಯವಹಾರಯೋಗ್ಯತ್ವಂ ಸ್ವಪ್ರಕಾಶತ್ವಮಿತಿ ವದತಾಪಿ ಜ್ಞಾನೇ ಸ್ವವಿಷಯತ್ವಮೇವ ವಕ್ತವ್ಯಮ್ । ತಥಾಚ ಸರ್ವತ್ರ ಸ್ವವಿಷಯತ್ವಮೇವ ಸ್ವಪ್ರಕಾಶತ್ವಮ್ ಅನನುಗಮಪರಿಹಾರಾಯ ತ್ವಯಾಪಿ ವಕ್ತವ್ಯಮಿತ್ಯಾಶಯೇನಾಹ– ನಹೀತಿ ॥ ತಸ್ಯ ಜ್ಞಾನಪದಜನ್ಯಜ್ಞಾನಸ್ಯ ಅವೇದ್ಯಸ್ಯ ಬ್ರಹ್ಮವದವೇದ್ಯಸ್ಯೈವ ವ್ಯವಹಾರೋ ನಹಿ । ಕಿಂತು ಸ್ವವಿಷಯತ್ವಮೇವಾತ್ರ ಸ್ವಪ್ರಕಾಶತ್ವಮಿತಿ ತವಾಪ್ಯಭಿಮತ- ಮಿತಿ ॥೨೨೩॥

**ವಿವರಣೆ–** 'ಜ್ಞಾನ' ಪದದಿಂದ ಜ್ಞಾನ ಎಂದು ಜ್ಞಾನವು ಆಗುತ್ತದೆ. ಅಂದರೆ; ಜ್ಞಾನ ಎಂಬ ಪದವನ್ನು ಕೇಳಿದಾಗ ಜ್ಞಾನ ಎಂಬ ಅರ್ಥದ ಅರಿವು ಆಗುತ್ತದೆ. ಈ ಅರಿವಿಗೆ ಎಲ್ಲ ಜ್ಞಾನಗಳೂ ವಿಷಯ. 'ಜ್ಞಾನ' ಪದವಾಚ್ಯವಾದ ಜ್ಞಾನವೂ ವಿಷಯ. ಅಂದರೆ 'ಜ್ಞಾನ' ಪದದಿಂದ ಹುಟ್ಟಿದ ಜ್ಞಾನಕ್ಕೆ 'ಜ್ಞಾನ' ಪದದ ಅರ್ಥವಾದ ಜ್ಞಾನವೂ ವಿಷಯ. ಯಾವ ಜ್ಞಾನವು ಕ್ರಿಯೆಯೋ ಅದೇ ಜ್ಞಾನವು ವಿಷಯವೂ ಆಗಿದೆ. ಹೀಗೆಯೇ ಜ್ಞಾನರೂಪನಾದ ಬ್ರಹ್ಮನು ಜ್ಞಾನವಿಷಯನೂ ಆಗಬಹುದು. ಬ್ರಹ್ಮನು ಪ್ರಮಾಣಗಳಿಂದ ಅವೇದ್ಯ. ಅವೇದ್ಯಬ್ರಹ್ಮನ ಬಗ್ಗೆಯೇ ಶಾಸ್ತ್ರಗಳು ವ್ಯವಹರಿಸುತ್ತವೆ ಎಂದು ಅದ್ವೈತದರ್ಶನ. ಇದರಂತೆ ಜ್ಞಾನಪದದಿಂದ ಹುಟ್ಟುವ ಜ್ಞಾನವು ಅವೇದ್ಯವಾಗಿಯೇ ವ್ಯವಹಾರವಿಷಯ ಎಂದು ಹೇಳುವಂತಿಲ್ಲ. ಅದ್ವೈತದರ್ಶನವು ಹೀಗೆ ಅಂಗೀಕರಿಸದಿರುವುದರಿಂದ.

ಜಡವೂ ಕ್ವಚಿತ್ ಸ್ವಪ್ರಕಾಶವಾಗುತ್ತದೆ -

ತತ್ರ ಸ್ವವಿಷಯತ್ವಂ ತತ್ ಸ್ವಪ್ರಕಾಶತ್ವಮಾಗತಮ್ ।
ಜಡೇಽಪಿ ಕ್ವಚಿದೇವಂ ಚೇತ್ ಚೇತನೇಷು ಕುತೋ ನ ತತ್ ॥ ೨೨೪ ॥

**ಅರ್ಥ–** ತತ್ = ಆದ್ದರಿಂದ, ತತ್ರ = ಜ್ಞಾನದಲ್ಲಿ ಸ್ವವಿಷಯತ್ವಂ = ಸ್ವವಿಷಯತ್ವರೂಪವಾದ, ಸ್ವಪ್ರಕಾಶತ್ವಂ = ಸ್ವಪ್ರಕಾಶತ್ವವು, ಆಗತಂ = ಬಂದಿದೆ. ಜಡೇऽಪಿ ಕ್ವಚಿತ್ = ಜಡವಾದ ಕೆಲವು ಜ್ಞಾನದಲ್ಲಿ, ಏವಂ ಚೇತ್ = ಸ್ವವಿಷಯತ್ವರೂಪ-ಸ್ವಪ್ರಕಾಶತ್ವವು ಇರುವುದಾದರೆ, ಚೇತನೇಷು= ಜ್ಞಾನರೂಪನಾದ ಆತ್ಮನಲ್ಲಿ, ಕುತಃ= ಏಕೆ, ತತ್ = ಸ್ವಪ್ರಕಾಶತ್ವವು, ನ= ಇಲ್ಲ?

**ಅನುವಾದ–** ಆದ್ದರಿಂದ ಜ್ಞಾನದಲ್ಲಿ 'ಸ್ವವಿಷಯತ್ವ' ಎಂಬ ಅರ್ಥದ ಸ್ವಪ್ರಕಾಶತ್ವವು ಅನಿವಾರ್ಯವಾಗಿ ಸಿದ್ಧವಾಗಿದೆ. ಜಡವಾದ ಕೆಲವು ಜ್ಞಾನಗಳಲ್ಲೇ ಹೀಗೆ ಸ್ವಪ್ರಕಾಶತ್ವವು ಇರುವುದಾದರೆ ಚೇತನಸ್ವರೂಪವಾದ ಜ್ಞಾನಗಳಲ್ಲಿ ಸ್ವಪ್ರಕಾಶತ್ವವು ಏಕೆ ಇಲ್ಲ?

**ಭಾವವಿಲಾಸಿನೀ–** ತತ್ ತಸ್ಮಾತ್ । ತತ್ರ ಜ್ಞಾನೇ ಸ್ವವಿಷಯತ್ವಮೇವ ಸ್ವಪ್ರಕಾಶತ್ವಮಾಗತಂ ಬಲಾದಾಗತ- ಮಿತ್ಯರ್ಥಃ । ತತ್ಸ್ವವಿಷಯತ್ವರೂಪಸ್ವಪ್ರಕಾಶತ್ವಂ ಜಡೇ ಜಡತ್ವಾಕ್ರಾಂತೇ ಕ್ವಚಿಜ್ಞಾನೇ । ಚೇತನೇಷು ಕುತೋ ನೇತಿ ಸಂಬಂಧಃ ॥ ೨೨೪ ॥

**ವಿವರಣೆ–** 'ಸುಖಾದಿ ಜ್ಞಾನಂ ಸಕರಣಕಂ ಕ್ರಿಯಾತ್ವಾತ್ ರೂಪಾದಿಜ್ಞಾನವತ್' - ಈ ಪ್ರತಿಜ್ಞಾ ಮತ್ತು ಹೇತುಗಳ ಅನುಸಂಧಾನದಿಂದ 'ಮನಸ್' ಎಂಬ ಇಂದ್ರಿಯವು ಇದೆ ಎಂದು ಅನುಮಿತಿರೂಪ ನಿರ್ಣಯವನ್ನು ಪ್ರಾಜ್ಞರು ಮಾಡುತ್ತಾರೆ ಎಂದು 217ನೇ ಶ್ಲೋಕದಲ್ಲಿ ಹೇಳಲಾಗಿದೆ. ಇಲ್ಲಿ ಹೇತುವಿನ ಅನುಸಂಧಾನ (ಅನುಮಿತಿ)ವು ಮನೋವೃತ್ತಿರೂಪ. ಈ ವೃತ್ತಿಯಿಂದ 'ಮನಸ್' ನ ಜ್ಞಾನವು ಆಗುತ್ತದೆ. ಆದ್ದರಿಂದ ಈ ಮನೋವೃತ್ತಿಯು ಸ್ವಪ್ರಕಾಶ. ಇದು ಜಡ. ಹೀಗೆ ಜಡಜ್ಞಾನವೇ ಸ್ವಪ್ರಕಾಶವಾಗಿರುವಾಗ ಚೇತನಸ್ವರೂಪವಾದ ಜ್ಞಾನವು ಏಕೆ ಸ್ವಪ್ರಕಾಶವಲ್ಲ. ಸ್ವಪ್ರಕಾಶವೇ.

ಯದಿ ಸ್ವಾವೇದ್ಯತಾ ಸ್ವಪ್ರಕಾಶತ್ವಮಿತಿ ಮನ್ಯಸೇ ॥ ೨೨೫ ॥

ತದಾ ವದಾಮಶ್ಶಬ್ದಸ್ಯ ವಿರುದ್ಧಾರ್ಥಪರಿಗ್ರಹೇ ।
ಕೋ ಹೇತುರಿತಿ ಯದ್ಯೇಕಸ್ಯೈವ ಕರ್ತೃತ್ವಕರ್ಮತೇ ॥ ೨೨೬ ॥

ವಿರುದ್ಧೇ ಇತಿ ಭೀತೋऽಸಿ ಶಬ್ದಾಯೋಗ್ಯಾರ್ಥಕಲ್ಪನಾತ್ ।
ಕುತೋ ನ ಭೀಃ ಕಿಂಚ ಸಾ ಭೀಃ ಧಾವಂತಂ ತ್ವಾನುಧಾವತಿ ॥ ೨೨೭ ॥

**ಅರ್ಥ–** ತದಾ = ಆಗ, ಶಬ್ದಸ್ಯ = ಸ್ವಪ್ರಕಾಶವೆಂಬ ಶಬ್ದಕ್ಕೆ, ವಿರುದ್ಧಾರ್ಥಪರಿಗ್ರಹೇ = ತನ್ನ ಜ್ಞಾನಕ್ಕೆ ವಿಷಯವಾಗದಿರುವಿಕೆ ಎಂಬ ವಿಪರೀತ ಅರ್ಥವನ್ನು ಸ್ವೀಕರಿಸಲು, ಕೋ ಹೇತುಃ?= ಏನು ಕಾರಣ? ಇತಿ = ಎಂದು, ವದಾಮಃ= ಹೇಳುತ್ತೇವೆ. ಏಕಸ್ಯ = ಒಬ್ಬನಿಗೇ,

ಕರ್ತೃತ್ವಕರ್ಮತೇ = ಕರ್ತೃತ್ವ ಮತ್ತು ಕರ್ಮತ್ವಗಳು, ವಿರುದ್ಧೇ ಇತಿ= ವಿರುದ್ಧ ಎಂದು, ಯದಿ ಭೀತಃ ಅಸಿ = ಹೆದರಿಕೆವುಳ್ಳವನಾದರೆ, ಶಬ್ದಾಯೋಗ್ಯಾರ್ಥಕಲ್ಪನಾತ್ = ಶಬ್ದದ ವೃತ್ತಿಗೆ ವಿರುದ್ಧವಾದ ಅರ್ಥವನ್ನು ಕಲ್ಪನೆಮಾಡಲು, ಕುತಃ = ಏಕೆ, ನ ಭೀಃ?= ಭಯವಿಲ್ಲ? ಕಿಂಚ = ಮತ್ತು, ಸಾ ಭೀಃ= ಆ ಭಯವು, ಧಾವಂತಂ = ಭಯದಿಂದ ಓಡುತ್ತಿರುವ, ತ್ವಾ = ನಿನ್ನನ್ನು, ಅನುಧಾವತಿ= ಬೆನ್ನು ಹತ್ತುತ್ತದೆ. ಸ್ವಾವೇದ್ಯತಾ = ತನ್ನ ಜ್ಞಾನಕ್ಕೆ ವಿಷಯವಾಗದೆ ಇರುವಿಕೆಯು, ಸ್ವಪ್ರಕಾಶತ್ವಮ್ ಇತಿ= ಸ್ವಪ್ರಕಾಶತ್ವ ಎಂದು, ಯದಿ ಮನ್ಯಸೇ = ತಿಳಿದಿದ್ದರೆ.

**ಅನುವಾದ–** ತನ್ನ ಜ್ಞಾನಕ್ಕೆ ತಾನು ವಿಷಯನಾಗದಿರುವುದೇ ಸ್ವಪ್ರಕಾಶತ್ವ ಎಂದು ನೀನು ತಿಳಿಯುವುದಾದರೆ, ಆಗ ಶಬ್ದಕ್ಕೆ ವಿರುದ್ಧಾರ್ಥವನ್ನು ಸ್ವೀಕರಿಸುವುದಕ್ಕೆ ಏನು ಕಾರಣ ಎಂದು ಕೇಳುತ್ತೇವೆ. ಒಂದೇ ವಸ್ತುವಿಗೆ ಒಂದೇ ಕ್ರಿಯೆಯನ್ನು ಕುರಿತು ಕರ್ತೃತ್ವ ಮತ್ತು ಕರ್ಮತ್ವ ಇವೆರಡನ್ನೂ ಅಂಗೀಕರಿಸುವುದು ವಿರುದ್ಧ ಎಂಬ ಕಾರಣದಿಂದ ನಿನಗೆ ಭಯವಿದ್ದರೆ ಶಬ್ದಕ್ಕೆ ಅಯೋಗ್ಯವಾದ ಅರ್ಥವನ್ನು ಕಲ್ಪನೆ ಮಾಡಲು ನಿನಗೆ ಏಕೆ ಭಯವಿಲ್ಲ? ಆದ್ದರಿಂದ ಆ ಭಯವು ಹೆದರಿ ಓಡುವ ನಿನ್ನನ್ನು ಹಿಂದಿನಿಂದ ಅಟ್ಟಿಸಿಕೊಂಡು ಬರುತ್ತದೆ.

**ಭಾವವಿಲಾಸಿನೀ–** ಶಬ್ದಸ್ಯ ಸ್ವಪ್ರಕಾಶಶಬ್ದಸ್ಯ ವಿರುದ್ಧಾರ್ಥಪರಿಗ್ರಹೇ ಸ್ವಾಪ್ರಕಾಶ್ಯತ್ವರೂಪ-ವಿರುದ್ಧಾರ್ಥಪರಿಗ್ರಹೇ । ಸ್ವಾವೇದ್ಯತ್ವಂ ಸ್ವಾಪ್ರಕಾಶ್ಯತ್ವಮಿತಿ ಚ ಪರ್ಯಾಯಃ । ಕೋ ಹೇತುರಿತಿ ವದಾಮ ಇತಿ ಸಂಬಂಧಃ । ಪರಾಭಿಮತಮನುವದತಿ– **ಯದ್ಯೇಕಸ್ಯೇತಿ** ॥ **ಕರ್ತೃತ್ವಕರ್ಮತೇ** ಇತ್ಯುಪಲಕ್ಷಣಮ್ । ಕ್ರಿಯಾತ್ವಕರ್ಮತೇ ಇತ್ಯಪಿ ದ್ರಷ್ಟವ್ಯಮ್ । ಉತ್ತರಮಾಹ– **ಶಬ್ದಾಯೋಗ್ಯೇತಿ** ॥ ದೋಷಾಂತರಂ ಚಾಹ– **ಕಿಂಚೇತಿ** ॥ ೨೨೬–೨೨೭ ॥ ಸ್ವಾಭಿಮತಸ್ವಪ್ರಕಾಶತ್ವಂ ಪ್ರಸಾಧ್ಯ ಪರಾಭಿಮತಸ್ವಪ್ರಕಾಶತ್ವಂ ದೂಷಯತಿ– **ಯದೀತಿ** ॥ ೨೨೫ ॥

**ದೋಷೋಽಯಂ ಪರವೇದ್ಯತ್ವೇ ಸಮೋ ಯಸ್ಮಾತ್ ವಿಚಾರಣೇ ।**
**ಆತ್ಮನೋ ವೃತ್ತಿವೇದ್ಯತ್ವೇ ಕರ್ತೃಕರ್ಮೈಕ್ಯಮಾಗತಮ್ ॥ ೨೨೮ ॥**

**ಅರ್ಥ–** ವಿಚಾರಣೇ= ವಿಮರ್ಶಿಸಿದರೆ, ಅಯಂ ದೋಷಃ = ಒಬ್ಬನಲ್ಲಿಯೇ ಕರ್ತೃತ್ವ ಮತ್ತು ಕರ್ಮತ್ವಗಳ ಸಮಾವೇಶ ಎಂಬ ದೋಷವು, ಪರವೇದ್ಯತ್ವೇ = ಆತ್ಮಭಿನ್ನವಾದ ಮಾನಸ ಜ್ಞಾನಕ್ಕೆ ಆತ್ಮನು ವಿಷಯ ಎಂದು ಹೇಳಿದರೂ, ಸಮಃ= ಸಮಾನ. (ಹೇಗೆಂದರೆ) ಆತ್ಮನಃ = ಬ್ರಹ್ಮನಿಗೆ, ವೃತ್ತಿವೇದ್ಯತ್ವೇ = ಮನೋಜನ್ಯಜ್ಞಾನವಿಷಯತ್ವವು ಇದ್ದರೆ (ಆಗಲೂ) ಕರ್ತೃಕರ್ಮೈಕ್ಯಂ= ಕರ್ತೃ-ಕರ್ಮಗಳಿಗೆ ಏಕತ್ವವು, ಆಗತಮ್= ಇದ್ದೇ ಇದೆ.

**ಅನುವಾದ–** ಆತ್ಮನಿಗೆ ಪರವೇದ್ಯತ್ವವನ್ನು ಅಂಗೀಕರಿಸಿದರೂ ಈ ದೋಷವು ಬಂದೇ ಬರುತ್ತದೆ. ಆತ್ಮನು ವೃತ್ತಿವೇದ್ಯನೆಂದು ಅಂಗೀಕರಿಸಿದರೂ ಕರ್ತೃತ್ವ, ಕರ್ಮತ್ವಗಳು ಒಂದೇ ವಸ್ತುವಿನಲ್ಲಿಯೇ ಬರುತ್ತವೆ.

**ಭಾವವಿಲಾಸಿನೀ–** ಅಯಂ ದೋಷಃ ಏಕಸ್ಯೈವ ಕರ್ತೃಕರ್ಮತ್ವಾಖ್ಯದೋಷಃ । ಪರವೇದ್ಯತ್ವೇ ಮನೋವೃತ್ತಿವೇದ್ಯತ್ವೇ । ಮನೋವೃತ್ತಿರೂಪಕ್ರಿಯಾಯಾ ಭಿನ್ನತ್ವೇಽಪಿ ಮನಸಾ ಅಹಂ ಮಾಂ ಜಾನಾಮಿ' ಇತ್ಯಾತ್ಮನ ಏವ ಕರ್ತೃತ್ವಾತ್ ಕರ್ಮತ್ವಾಚ್ಚ। ಆತ್ಮನಃ ಬ್ರಹ್ಮಣಃ ॥ ೨೨೮ ॥

**ವಿವರಣೆ–** ಆತ್ಮನು ಮನೋವೃತ್ತಿಗೆ ವಿಷಯನಾದರೂ 'ಮನಸಾ ಅಹಂ ಮಾಮ್ ಜಾನಾಮಿ' ಎಂದೇ ಅನುಭವ. ಮನಸ್ಸು ಜ್ಞಾನದ ಕರಣ. ಕರ್ತೃ ಮತ್ತು ಕರ್ಮ ಆತ್ಮವೇ. ಆದ್ದರಿಂದ ಕರ್ತೃ ಮತ್ತು ಕರ್ಮಗಳ ಏಕತ್ವವು ಇದ್ದೇ ಇದೆ.

**ಸುಖಾದೇಃ ಸಾಕ್ಷಿವೇದ್ಯತ್ವೇ ಕ್ರಿಯಾಕರ್ತ್ರೈಕ್ಯಮಾಪತೇತ್ ।**
**ಕ್ರಿಯಾಕರ್ಮೈಕ್ಯಮಪ್ಯೇವಂ ನ್ಯಾಯಸಾಮ್ಯಾತ್ ಕುತೋ ನ ತೇ ॥ ೨೨೯ ॥**

**ಅರ್ಥ–** ಸುಖಾದೇಃ = ಸುಖ ಮೊದಲಾದವುಗಳು, ಸಾಕ್ಷಿವೇದ್ಯತ್ವೇ = ಸಾಕ್ಷಿಯಿಂದ ತಿಳಿಯಲ್ಪಡುವುದಾದರೆ, ಕ್ರಿಯಾಕರ್ತ್ರೈಕ್ಯಂ = ಸುಖಾನುಭವರೂಪಕ್ರಿಯೆ ಮತ್ತು ಕರ್ತೃ (ಆತ್ಮನು) ಇವುಗಳಿಗೆ ಐಕ್ಯವು, ಆಪತೇತ್ = ಉಂಟಾಗುತ್ತದೆ. ಏವಂ = ಹೀಗೆಯೇ, ಕ್ರಿಯಾಕರ್ಮೈಕ್ಯಮಪಿ = ಕ್ರಿಯೆ ಮತ್ತು ಕರ್ಮಗಳಿಗೆ ಐಕ್ಯವೂ, ತೇ= ನಿನಗೆ, ಕುತಃ ನ?= ಏಕೆ ಸಮ್ಮತವಲ್ಲ?, ನ್ಯಾಯಸಾಮ್ಯಾತ್= ಕ್ರಿಯೆ ಮತ್ತು ಕರ್ತೃಗಳು ಯಾವ ಯುಕ್ತಿಯಿಂದ ಒಂದೇ ಆಗುತ್ತವೆಯೋ, ಅದೇ ಯುಕ್ತಿಯೇ ಕ್ರಿಯಾ ಮತ್ತು ಕರ್ಮಗಳಿಗೂ ಇರುವುದರಿಂದ.

**ಅನುವಾದ–** ಸುಖ ಮೊದಲಾದವುಗಳು ಸಾಕ್ಷಿಯಿಂದ ತಿಳಿಯಲ್ಪಡುವುದಾದರೆ ಕ್ರಿಯಾ ಮತ್ತು ಕರ್ತೃಗಳು ಒಂದೇ ಆಗುತ್ತವೆ. ಇದೇ ನ್ಯಾಯದಿಂದ ಕ್ರಿಯಾ ಮತ್ತು ಕರ್ಮಗಳಿಗೆ ಐಕ್ಯವು ನಿನಗೆ ಏಕೆ ಸಮ್ಮತವಲ್ಲ?

**ಭಾವವಿಲಾಸಿನೀ–** ಸಾಕ್ಷಿವೇದ್ಯತ್ವೇ 'ಸುಖಮಹಂ ಜಾನಾಮಿ' ಇತಿ ಸಾಕ್ಷಿವೇದ್ಯತ್ವೇ ಕ್ರಿಯಾಕರ್ಮೈಕ್ಯಂ ಅಹಮಿತ್ಯಾತ್ಮನ ಏವ ಕರ್ತೃತ್ವಾತ್ । ಸುಖಾನುಭವಸ್ಯ ಸಾಕ್ಷಿರೂಪತ್ವೇನ ಕ್ರಿಯಾತ್ವಾಚ್ಚ। ಅತಃ ಸಾಭೀಃ ಏಕಸ್ಯೈವ ವಿರುದ್ಧಾಕಾರದ್ವಯತ್ವಭೀಃ ಧಾವಂತಂ ತ್ವಾನುಧಾವತೀತಿ ಪೂರ್ವೇಣಾನ್ವಯಃ । ನನ್ವೇವಮಪಿ ಕರ್ತೃಕರ್ಮೈಕ್ಯಂ ಕರ್ತೃಕ್ರಿಯೈಕ್ಯಂ ಚಾಗತಮ್ । ನತು ಕ್ರಿಯಾಕರ್ಮೈಕ್ಯಮಿತ್ಯತ ಆಹ– ಕ್ರಿಯಾಕರ್ಮೈಕ್ಯಮಿತಿ ॥ ನ್ಯಾಯಸಾಮ್ಯಾತ್ ತತ್ರೋಕ್ತವಿರುದ್ಧಾಕಾರದ್ವಯವತ್ತ್ವಂ ಯೇನ ನ್ಯಾಯೇನ ಸಂಪಾದ್ಯತೇ। ತಸ್ಯ ನ್ಯಾಯಸ್ಯ ಕ್ರಿಯಾಕರ್ಮೈಕ್ಯೇಽಪಿ ಸಾಮ್ಯಾದಿತ್ಯರ್ಥಃ। ಇಯಮಪಿ ಸ್ವಪ್ರಕಾಶತ್ವಪ್ರತಿಬಂದೀರೂಪಾ ಯುಕ್ತಿರಿತಿ ಜ್ಞಾತವ್ಯಮ್ ॥ ೨೨೯ ॥

**ವಿವರಣೆ–** ಸುಖ-ದುಃಖಗಳ ಅನುಭವವು ಎಲ್ಲರಿಗೂ ಇದೆ. ಈ ಅನುಭವವು ಸಾಕ್ಷಿರೂಪ, ಅಂದರೆ, ಸಾಕ್ಷಿಯು ಸುಖ-ದುಃಖಗಳನ್ನು ವಿಷಯೀಕರಿಸುತ್ತದೆ. ಸಾಕ್ಷಿರೂಪ ಅನುಭವವು ಕ್ರಿಯೆ. ಸುಖವನ್ನು ಅನುಭವಿಸುವ ಆತ್ಮನು ಕರ್ತೃ. ಈ ಆತ್ಮನೇ ಸಾಕ್ಷಿ. ಸುಖ-ದುಃಖಗಳ

ಅನುಭವದ ವ್ಯವಸ್ಥೆಯಲ್ಲಿ ಕ್ರಿಯಾ ಮತ್ತು ಕರ್ತೃ= ಸುಖಾನುಭವ ಮತ್ತು ಆತ್ಮಾ ಒಂದೇ ಆಗಿದೆ. ಹೀಗೆಯೇ 'ಮಾಮಹಂ ಜಾನಾಮಿ' ಎಂಬ ಅನುಭವದಲ್ಲೂ ಸಾಕ್ಷಿರೂಪಜ್ಞಾನವು ಕ್ರಿಯೆ. ಆತ್ಮನು ಕರ್ಮ. ಒಂದು ಕಡೆ ಕ್ರಿಯೆ ಮತ್ತು ಕರ್ತೃಗಳು ಆತ್ಮ. ಇನ್ನೊಂದು ಕಡೆ ಕ್ರಿಯೆ ಮತ್ತು ಕರ್ಮಗಳು ಆತ್ಮಾ. ಆದ್ದರಿಂದ ಕ್ರಿಯಾ-ಕರ್ತೃಗಳಿಗೆ ಐಕ್ಯವನ್ನು ಅಂಗೀಕರಿಸುವವರು ಕ್ರಿಯಾ-ಕರ್ಮಗಳ ಐಕ್ಯವನ್ನು ಏಕೆ ಅಂಗೀಕರಿಸಬಾರದು?

ಕಿಂಚ ಸಾಕ್ಷ್ಯೇವ ವಿಷಯಾವಚ್ಛಿನ್ನಾಽಜ್ಞಾನದೃಕ್ ತ್ವಯಾ ।
ವಾಚ್ಯಾವಶ್ಯಂ ಯತೋ ವೃತ್ತಿನಾಶ್ಯಸ್ಯಾನ್ಯಾತ್ರ ನೈವ ದೃಕ್ ॥ ೨೩೦ ॥

**ಅರ್ಥ–** ಕಿಂ ಚ = ಅಷ್ಟೇ ಅಲ್ಲದೆ, ಸಾಕ್ಷೀ ಏವ = ಸಾಕ್ಷೀಂದ್ರಿಯವೇ, ವಿಷಯಾವಚ್ಛಿನ್ನ ಅಜ್ಞಾನದೃಕ್= (ಮಾಮಹಂ ನ ಜಾನಾಮಿ ಎಂಬ ಪ್ರತೀತಿಸಿದ್ಧವಾದ) ಅಜ್ಞಾನವನ್ನು ಅದರ ವಿಷಯವಾದ ಆತ್ಮನೊಂದಿಗೆ ವಿಷಯೀಕರಿಸುತ್ತದೆ ಎಂದು, ತ್ವಯಾ = ನಿನ್ನಿಂದ, ಅವಶ್ಯಂ ವಾಚ್ಯಾ = ಹೇಳಲ್ಪಡಲೇಬೇಕು. ಯತಃ = ಏಕೆಂದರೆ, ವೃತ್ತಿನಾಶ್ಯಸ್ಯ = ಮನೋವೃತ್ತಿಯಿಂದ ನಾಶಾರ್ಹವಾದ ಅಜ್ಞಾನಕ್ಕೆ, ಅತ್ರ = ವಿಷಯನಾದ ಆತ್ಮನಲ್ಲಿ(ಆತ್ಮನನ್ನು ಕುರಿತು), ಅನ್ಯಾ ದೃಕ್ = ಸಾಕ್ಷಿಗಿಂತ ಭಿನ್ನವಾದ ಮನೋವೃತ್ತಿರೂಪವಾದ ಜ್ಞಾನವು, ನೈವ = ಇಲ್ಲವೇ ಇಲ್ಲ.

**ಅನುವಾದ–** ಸಾಕ್ಷಿಯೇ ವಿಷಯಾವಚ್ಛಿನ್ನ ಅಜ್ಞಾನವನ್ನು ಅಂದರೆ, ಅಜ್ಞಾನವನ್ನು ಮತ್ತೂ ಅದಕ್ಕೆ ವಿಷಯವಾದ ಶುದ್ಧಚಿತ್ (ಆತ್ಮಾ) ಅನ್ನೂ, ವಿಷಯೀಕರಿಸುತ್ತದೆ ಎಂದು ನಿನ್ನಿಂದಲೂ ಹೇಳಲ್ಪಡಲೇಬೇಕು. ಏಕೆಂದರೆ ವೃತ್ತಿನಾಶ್ಯವಾದ ಅಜ್ಞಾನಕ್ಕೆ ವಿಷಯವಾದ ಚೈತನ್ಯದ (ಆತ್ಮದ) ಬೇರೆ ಜ್ಞಾನವು= ಚೈತನ್ಯಾತಿರಿಕ್ತವಾದ ವೃತ್ತಿಜ್ಞಾನವು ಇಲ್ಲವೇ ಇಲ್ಲ. ಆತ್ಮನು ಜ್ಞಾನಕ್ಕೆ ವಿಷಯನಾಗುವುದಿಲ್ಲವೆಂದು ಹೇಳಿದರೆ ಆತ್ಮವಿಷಯಕವಾದ ಅಜ್ಞಾನವೇ ಸಿದ್ಧಿಸಲಾರದು. ಅಜ್ಞಾನಕ್ಕೆ ಆತ್ಮವು ವಿಶೇಷಣ. ಅಜ್ಞಾನವು ವಿಶಿಷ್ಟ, ವಿಶಿಷ್ಟದ ಜ್ಞಾನವು ಹುಟ್ಟಲು ವಿಶೇಷಣದ ಜ್ಞಾನವು ಆವಶ್ಯಕ. ದಂಡದ(ಕೋಲಿನ) ಜ್ಞಾನವಿಲ್ಲದವನಿಗೆ ಅದನ್ನು ಹಿಡಿದವನ ಬಗ್ಗೆ 'ದಂಡೀ' ಎಂದು ಜ್ಞಾನವು ಬರುವುದಿಲ್ಲ. ಆದ್ದರಿಂದ ಆತ್ಮನು ಜ್ಞಾನವಿಷಯನಾಗದಿದ್ದರೆ, ಆತ್ಮವಿಷಯಕ ಅಜ್ಞಾನದ ಜ್ಞಾನವೇ ಇಲ್ಲವಾಗಬೇಕಾದೀತು.

**ಭಾವವಿಲಾಸಿನೀ–** ಪರಮುಖೇನೈವ ಚಿತಃ ಸ್ವವಿಷಯತ್ವಮಾನೇತುಮಾಹ– ಕಿಂಚೇತಿ ॥ ಸಾಕ್ಷ್ಯೇವ ವಿಷಯಾವಚ್ಛಿನ್ನಾಜ್ಞಾನದೃಕ್ 'ಮಾಂ ನ ಜಾನಾಮಿ' ಇತ್ಯಜ್ಞಾನವಿಷಯೀಭೂತೇನ ಬ್ರಹ್ಮಣಾಽವಚ್ಛಿನ್ನಂ ವಿಶಿಷ್ಟಂ ಯದಜ್ಞಾನಂ ತಸ್ಯ ದೃಕ್ । ತ್ವಯಾ ಮಾಯಾವಾದಿನಾ ಅವಶ್ಯಂ ವಾಚ್ಯೇತಿ ಸಂಬಂಧಃ। ಅಜ್ಞಾನಂ ವಿಷಯತಯಾ ತದವಚ್ಛೇದಕಾತ್ಮಾ ಚೇತಿ ದ್ವಯಮಪಿ ಸಾಕ್ಷಿಣೈವ ವಿಷಯೀಕಾರ್ಯಮಿತ್ಯರ್ಥಃ । ನನ್ವಜ್ಞಾನಮಾತ್ರಂ ಸಾಕ್ಷಿವಿಷಯಃ ವಿಷಯತಯಾ ಅವಚ್ಛೇದಕ

ಆತ್ಮಾ ತು ಮನೋವೃತ್ತಿವಿಷಯ ಏವ । ಅತಃ ಕಥಂ ಸ್ವವಿಷಯತ್ವಮಿತ್ಯತ ಆಹ– ಯತ ಇತಿ ॥ ವೃತ್ತಿನಾಶ್ಯಸ್ಯಾಜ್ಞಾನಸ್ಯಾತ್ರ ವಿಷಯತಯಾ ಅವಚ್ಛೇದಕೇ ಆತ್ಮನಿ । ಅನ್ಯಾ ಸಾಕ್ಷಿಣೋಽನ್ಯಾ ಮನೋವೃತ್ತಿರೂಪೇತಿ ಯಾವತ್ । ದೃಗ್ ದರ್ಶನಂ ನೈವೇತಿ ಸಂಬಂಧಃ । ಅಜ್ಞಾನಾವಚ್ಛೇದಕಸ್ಯಾತ್ಮನಃ ಮನೋವೃತ್ತಿವೇದ್ಯತ್ವಾಂಗೀಕಾರೇ ತಸ್ಮಿನ್ನಾತ್ಮನಿ ಪುನರ್ಮನೋವೃತ್ತಿನಾಶ್ಯಸ್ಯಾಜ್ಞಾನಸ್ಯ ಜ್ಞಾನಮೇವ ನ ಘಟತ ಇತಿ ಭಾವಃ ॥ ೨೩೦ ॥

**ವಿವರಣೆ**– 'ಮಾಮಹಂ ನ ಜಾನಾಮಿ' - ಇದು ಅಜ್ಞಾನವನ್ನು ವಿಷಯೀಕರಿಸುವ ಸಾಕ್ಷಿಜ್ಞಾನ. ಇದರಿಂದ ಅಜ್ಞಾನ ಮತ್ತು ಅದಕ್ಕೆ ವಿಷಯವಾದ ಆತ್ಮಾ- ಈ ಎರಡೂ ಸಾಕ್ಷಿಗೆ ವಿಷಯ ಎಂದು ತಿಳಿಯುತ್ತದೆ.

**ಪ್ರಶ್ನೆ** : ಅಜ್ಞಾನವು ಮಾತ್ರ ಸಾಕ್ಷಿಗೆ ವಿಷಯ, ವಿಷಯವಾದ ಆತ್ಮವು ಮನೋವೃತ್ತಿಗೆ ವಿಷಯ. ಆದ್ದರಿಂದ ಅಜ್ಞಾನ ಮತ್ತು ಆತ್ಮ- ಇವೆರಡೂ ಸಾಕ್ಷಿವಿಷಯ ಅಲ್ಲ?

**ಉತ್ತರ**: ಅದ್ವೈತದರ್ಶನದ ಪ್ರಕಾರ ಅಜ್ಞಾನವು ವೃತ್ತಿಜ್ಞಾನನಾಶ್ಯ; ಅಜ್ಞಾನಕ್ಕೆ ವಿಷಯವಾದ ಆತ್ಮನ ಜ್ಞಾನವು ಮನೋವೃತ್ತಿಯಾದರೆ, ಈ ವೃತ್ತಿಯಿಂದ ಆತ್ಮವಿಷಯಕಅಜ್ಞಾನದ ನಾಶವಾಗುವುದರಿಂದ, ಆತ್ಮನ ಅಜ್ಞಾನವನ್ನು ವಿಷಯೀಕರಿಸುವ 'ಮಾಮಹಂ ನ ಜಾನಾಮಿ' ಎಂಬ ಅನುಭವವು ಹುಟ್ಟಲು ಸಾಧ್ಯವೇ ಇಲ್ಲ. ಈ ಅನುಭವವು ಇದೆ. ಆದ್ದರಿಂದ ಸಾಕ್ಷಿರೂಪವಲ್ಲದ ಮನೋವೃತ್ತಿರೂಪವಾದ ಆತ್ಮಜ್ಞಾನವು ಇಲ್ಲವೇ ಇಲ್ಲ.

ವಿಷಯಶ್ಚ ಸ್ವಯಂ ತಸ್ಯ ಸ್ವಾವೇದ್ಯತ್ವೇ ಚ ಕೀರ್ತಿತೇ ।
ಅಜ್ಞಾನವೇದನಸ್ಯೈವ ಭವೇದತ್ಯಂತವೇದನಾ ।
ಅವಚ್ಛೇದಕದೃಗ್ವ್ಯಾಪ್ತಂ ಯತೋಽವಚ್ಛಿನ್ನದರ್ಶನಮ್ ॥ ೨೩೧ ॥

**ಅರ್ಥ**– ಸ್ವಯಂ= ಆತ್ಮನೇ (ಚಿತ್), ವಿಷಯ= ಅಜ್ಞಾನಕ್ಕೆ ವಿಷಯ. ತಸ್ಯ ಚ= ಆ ಆತ್ಮನಿಗೆ, ಸ್ವಾವೇದ್ಯತ್ವೇ= ಸ್ವ (ಸಾಕ್ಷಿ) ವಿಷಯತ್ವಾಭಾವವು, ಕೀರ್ತಿತೇ= ಹೇಳಲ್ಪಟ್ಟರೆ, ಅಜ್ಞಾನ ವೇದನಸ್ಯ ಏವ= ಅಜ್ಞಾನದ (ವನ್ನು ವಿಷಯೀಕರಿಸುವ) ಜ್ಞಾನಕ್ಕೆ, ಅತ್ಯಂತವೇದನಾ= ಅತಿ ಸಂಕಟವು, ಭವೇತ್= ಆಗುವುದು. ಯತಃ= ಏಕೆಂದರೆ, ಅವಚ್ಛಿನ್ನದರ್ಶನಂ= ಅವಚ್ಛಿನ್ನದ ಜ್ಞಾನವು, ಅವಚ್ಛೇದಕ ದೃಗ್ವ್ಯಾಪ್ತಂ= ಅವಚ್ಛೇದಕದ ಜ್ಞಾನದೊಂದಿಗೆ ವ್ಯಾಪ್ತಿಯನ್ನು ಹೊಂದಿದೆ.

**ಅನುವಾದ**– ('ಮಾಮಹಂ ನ ಜಾನಾಮಿ' - ಈ ಅನುಭವದಲ್ಲಿ) ಅಜ್ಞಾನಕ್ಕೆ ಆತ್ಮನೇ (ಚಿತ್) ವಿಷಯ. ಈ ಆತ್ಮನು ಸಾಕ್ಷಿಜ್ಞಾನಕ್ಕೆ (ಚಿತ್‌ಗೆ) ವಿಷಯನಲ್ಲ ಎಂದು ಹೇಳಿದರೆ, ಅಜ್ಞಾನದ ಜ್ಞಾನವೇ (ಮಾಮಹಂ ನ ಜಾನಾಮಿ) ಆಗಲಿಕ್ಕಿಲ್ಲ. ಏಕೆಂದರೆ, 'ಮಾಮಹಂ ನ ಜಾನಾಮಿ' ಇದು ತನ್ನ (ಆತ್ಮನ) ಅಜ್ಞಾನದ

**ಅನುಸಂಧಾನ. ಈ ಅಜ್ಞಾನಕ್ಕೆ ಆತ್ಮನು ಅವಚ್ಛೇದಕ, ಎಂದರೆ, ವಿಷಯ. ಆದ್ದರಿಂದ, ಇದು ಆತ್ಮಾವಚ್ಛಿನ್ನ ಅಜ್ಞಾನದ ಜ್ಞಾನ. ಅವಚ್ಛಿನ್ನದ (ಆತ್ಮಾವಚ್ಛಿನ್ನ ಅಜ್ಞಾನದ) ಜ್ಞಾನವು ಹುಟ್ಟಲು ಅವಚ್ಛೇದಕದ ಜ್ಞಾನವು ಬೇಕೇಬೇಕು ಎಂದು ನಿಯಮವಿದೆ.**

**ಭಾವವಿಲಾಸಿನೀ–** ವಿಷಯಃ ಅಜ್ಞಾನವಿಷಯಃ । ಸ್ವಯಮ್ ಆತ್ಮಾ । ತಸ್ಯಾತ್ಮನಃ ಸ್ವಾವೇದ್ಯತ್ವ ಕೀರ್ತಿತೇ ಉಕ್ತರೀತ್ಯಾ ಪರವೇದ್ಯತ್ವಾಸಂಭವಾತ್ । ಅಜ್ಞಾನವೇದನಸ್ಯ ಅಜ್ಞಾನಜ್ಞಾನಸ್ಯಾತ್ಯಂತ ವೇದನಾ ಅತಿಸಂಕಟಂ ಭವೇದಿತಿ ಸಂಬಂಧಃ । ಅವಚ್ಛೇದಕಾತ್ಮಜ್ಞಾನಾಭಾವೇ ತದವಚ್ಛಿನ್ನಾಜ್ಞಾನಜ್ಞಾನಮಪಿ ಸುತರಾಂ ನ ಸ್ಯಾದಿತಿ ಭಾವಃ । ತದೇವೋಪಪಾದಯತಿ– **ಅವಚ್ಛೇದಕೇತಿ** ॥೨೩೦॥

**ವಿವರಣೆ–** ಈಗ ಚರ್ಚಿಸಲ್ಪಡುತ್ತಿರುವ ಆತ್ಮಾಜ್ಞಾನದ ಜ್ಞಾನವು ಸಾಕ್ಷಿರೂಪ. ಈ ಅಜ್ಞಾನಕ್ಕೆ ಆತ್ಮನು ವಿಷಯ. ವಿಷಯವನ್ನು ಅವಚ್ಛೇದಕ ಎಂದು ಹೇಳುತ್ತಾರೆ. ಆತ್ಮನು ವೃತ್ತಿಜ್ಞಾನಕ್ಕೆ ವಿಷಯ ಅಲ್ಲ ಎಂದು ಹಿಂದೆ ಹೇಳಲಾಗಿದೆ. ಸಾಕ್ಷಿಗೂ ವಿಷಯ ಅಲ್ಲ ಎಂದರೆ ಅವನ ಅಜ್ಞಾನದ ಜ್ಞಾನವೇ ಇಲ್ಲವಾಗುವುದು. ಏಕೆಂದರೆ ಅವಚ್ಛಿನ್ನದ ಜ್ಞಾನಕ್ಕೆ ಅವಚ್ಛೇದಕದ ಜ್ಞಾನವು ಕಾರಣ ಎಂದು ನಿಯಮವಿದೆ. 'ಮಾಮಹಂ ನ ಜಾನಾಮಿ' - ಇದು ಆತ್ಮಾಜ್ಞಾನದ ಅನುಸಂಧಾನ (ಜ್ಞಾನ). ಇದು ಅವಚ್ಛಿನ್ನದ ಜ್ಞಾನ. ಆತ್ಮಾಜ್ಞಾನವು ಅವಚ್ಛಿನ್ನ. ಆತ್ಮವು ಅವಚ್ಛೇದಕ.

ಜ್ಞಾನರೂಪತ್ವತಃ ಕಿಂ ಸ್ಯಾತ್ ತತ್ತದ್ಗೋಚರತಾಂ ವಿನಾ ।
ಘಟಜ್ಞಾನಂ ಜ್ಞಾನಮಿತಿ ಕಿಮನ್ಯವ್ಯವಹಾರಕೃತ್ ॥ ೨೩೨ ॥

**ಅರ್ಥ–** ತತ್ತದ್‌ಗೋಚರತಾಂ ವಿನಾ = ಆಯಾ ವಸ್ತುಗಳನ್ನು ವಿಷಯೀಕರಿಸದೆ, ಜ್ಞಾನರೂಪತ್ವತಃ = ಜ್ಞಾನರೂಪನಾದ ಮಾತ್ರಕ್ಕೆ, ಕಿಂ ಸ್ಯಾತ್ = ಏನು ಪ್ರಯೋಜನ? ಘಟಜ್ಞಾನಂ = ಘಟಜ್ಞಾನವು, ಜ್ಞಾನಮಿತಿ = ಜ್ಞಾನ ಎಂಬ ಕಾರಣದಿಂದ, ಅನ್ಯವ್ಯವಹಾರಕೃತ್ ಕಿಮ್ = ಪಟಾದಿವಿಷಯಕವ್ಯವಹಾರಜನಕವೇ?

**ಅನುವಾದ–** **ಆಯಾಯಾ ವಸ್ತುಗಳನ್ನು ವಿಷಯೀಕರಿಸದೆ ಜ್ಞಾನರೂಪವಾಗುವುದರಿಂದ** ಏನು ಪ್ರಯೋಜನ? ಘಟಜ್ಞಾನವು ಜ್ಞಾನ ಎಂಬ ಕಾರಣದಿಂದ ಪಟ **ಮೊದಲಾದ ವಸ್ತುಗಳ ವ್ಯವಹಾರಕ್ಕೆ ಕಾರಣವಾಗುವುದೇ?**

**ಭಾವವಿಲಾಸಿನೀ–** ನನ್ವಾತ್ಮನೋ ಜ್ಞಾನಾಭಾವೇಽಪಿ ಜ್ಞಾನರೂಪತ್ವಾದೇವ ತದವಚ್ಛಿನ್ನಾಜ್ಞಾನಸ್ಯ ಜ್ಞಾನ- ವ್ಯವಹಾರಾದಿ ಸಂಭವತೀತ್ಯತ ಆಹ– **ಜ್ಞಾನರೂಪತ್ವತ ಇತಿ** ॥ ತತ್ತದ್ಗೋಚರತಾಂ ತತ್ತಜ್ಜ್ಞಾನವಿಷಯತಾಂ ವಿನಾ ಜ್ಞಾನರೂಪತ್ವತಃ ಕಿಂ ಸ್ಯಾತ್? ನ ಕಿಮಪೀತಿ ಸಂಬಂಧಃ । ಕುತಃ? ಇತ್ಯತ ಆಹ–**ಘಟಜ್ಞಾನಮಿತಿ** ॥ ಘಟಜ್ಞಾನಂ ಜ್ಞಾನಮಿತಿ ಜ್ಞಾನಸ್ವರೂಪಮಿತ್ಯೇತಾವತೇತ್ಯರ್ಥಃ । ಅನ್ಯಸ್ಯ ಜ್ಞಾನವಿಷಯಘಟಾದನ್ಯಸ್ಯ ಪಟಾದೇರ್ವ್ಯವಹಾರಕೃತ್ ಕಿಮ್

ವ್ಯವಹಾರಕೃದಿತ್ಯುಪಲಕ್ಷಣಮ್ । ಅವಚ್ಛೇದಕತ್ವಕೃದಿತ್ಯಪಿ ಗ್ರಾಹ್ಯಮ್ । ಯಥಾ ಜ್ಞಾನರೂಪತ್ವೇಽಪಿ ಘಟಜ್ಞಾನಸ್ಯ ಘಟವ್ಯವಹಾರಹೇತುತ್ವಮೇವ, ನತು ಸ್ವಾವಿಷಯಪಟಾದಿ-ವ್ಯವಹಾರಹೇತುತ್ವಮ್ ತಥಾ ಜ್ಞಾನರೂಪತ್ವೇಽಪಿ ಬ್ರಹ್ಮಣಃ ಸ್ವಾವಿಷಯತ್ವೇ ಸ್ವಾವಚ್ಛಿನ್ನಾಜ್ಞಾನ-ವ್ಯವಹಾರಾದೌ ನೈವೋಪಯೋಗಿತ್ವಮಿತಿ ಭಾವಃ ॥ ೨೩೨ ॥

**ವಿವರಣೆ**– ಪ್ರಶ್ನೆ: ಆತ್ಮನು ಜ್ಞಾನರೂಪ. ಆದ್ದರಿಂದ ಅವನ ಜ್ಞಾನವಿಲ್ಲದಿದ್ದರೂ ಅವನ ಅಜ್ಞಾನದ ಜ್ಞಾನವು ಹುಟ್ಟುತ್ತದೆ; ಅಜ್ಞಾನ, ಆತ್ಮಗಳ ಬಗ್ಗೆ ವ್ಯವಹಾರವೂ ನಡೆಯುತ್ತದೆ?

ಉತ್ತರ: ಆತ್ಮಾಜ್ಞಾನದ ಜ್ಞಾನಕ್ಕೆ ವಿಷಯನಾಗದೆ, ಜ್ಞಾನರೂಪವಾಗಿರುವ ಕಾರಣದಿಂದಲೇ ಆತ್ಮನು 'ಮಾಮಾಹಂ ನ ಜಾನಾಮಿ' - ಇತ್ಯಾದಿವ್ಯವಹಾರಕ್ಕೆ ಕಾರಣನಾಗುವುದಿಲ್ಲ. ಹೀಗೆ ಆಗುವುದಾದರೆ ಘಟಜ್ಞಾನವು ಜ್ಞಾನ ಎಂಬ ಕಾರಣದಿಂದ ತನಗೆ ವಿಷಯವಾಗದ ಪಟ ಇತ್ಯಾದಿಗಳ ವ್ಯವಹಾರ ಜನಕವಾಗ ಬೇಕಾದೀತು. ಲೋಕದಲ್ಲಿ ಹೀಗೆ ಇಲ್ಲ. ಆದ್ದರಿಂದ 'ಜ್ಞಾನ' ವಿಷಯವಾದ ವಸ್ತುವಿನ ವ್ಯವಹಾರವೇ ಜ್ಞಾನದಿಂದ ಆಗುತ್ತದೆ, ಜ್ಞಾನವಿಷಯವಾಗದ ವಸ್ತುವಿನ ವ್ಯವಹಾರವು ಜ್ಞಾನದಿಂದ ಆಗುವುದಿಲ್ಲ' ಎಂಬ ನಿಯಮವಿದೆ ಎಂದು ತಿಳಿಯುತ್ತದೆ. ಈ ನಿಯಮಕ್ಕನುಗುಣವಾಗಿ ಆತ್ಮಾಜ್ಞಾನದ ಜ್ಞಾನಕ್ಕೆ ಆತ್ಮನು ವಿಷಯನಾಗದಿದ್ದರೆ, ಅಜ್ಞಾನ ಮತ್ತು ಆತ್ಮಗಳ ಬಗ್ಗೆ ವ್ಯವಹಾರವು ನಡೆಯುವುದಿಲ್ಲ.

**ಅತೋಽಜ್ಞಾನಂ ಸ್ವವಿಜ್ಞಪ್ತ್ಯೈ ಕ್ಷಿಪೇತ್ ತತ್‌ಸ್ವಪ್ರಕಾಶತಾಮ್ ।**
**ಚಿತ್ರಮತ್ರಾಪಿ ತೇ ಬಾಣಸ್ತವ ಪ್ರಾಣಾಪಹಾರಕಃ ॥ ೨೩೩ ॥**

**ಅರ್ಥ**– ಅತಃ = ಆದ್ದರಿಂದ ಅವಚ್ಛೇದಕದ ಜ್ಞಾನವು ಅನಿವಾರ್ಯವಾದ್ದರಿಂದ, ಅಜ್ಞಾನಂ = ಭಾವರೂಪ ಅಜ್ಞಾನವು, ಸ್ವವಿಜ್ಞಪ್ತ್ಯೈ= ತನ್ನ ಜ್ಞಾನಕ್ಕಾಗಿ, ತತ್ = ಸಾಕ್ಷಿರೂಪವಾದ ಜ್ಞಾನಕ್ಕೆ, (೧) ಸ್ವಪ್ರಕಾಶತಾಂ= ಸ್ವವಿಷಯತ್ವವನ್ನು, ಕ್ಷಿಪೇತ್ = ಅರ್ಥಾಪತ್ತಿಯಿಂದ ಸಾಧಿಸುತ್ತದೆ. (೨) ಚೈತನ್ಯವು ವಿಷಯವಲ್ಲ ಎಂಬ ವಿಚಾರವನ್ನು ಕ್ಷಿಪೇತ್= ನಿರಾಸ ಮಾಡುತ್ತದೆ. ಅತ್ರಾಪಿ = ಸ್ವಪ್ರಕಾಶತ್ವದ ವಿಷಯದಲ್ಲೂ, ತೇ= ನಿನ್ನ, ಬಾಣಃ = ಭಾವರೂಪವಾದ ಅಜ್ಞಾನವೆಂಬ ಬಾಣವು, ತವ = ನಿನ್ನ ಪ್ರಾಣಾಪಹಾರಕಃ = ಪ್ರಾಣವನ್ನು (ಸಿದ್ಧಾಂತವನ್ನು) ಅಪಹರಿಸುತ್ತದೆ, ಚಿತ್ರಮ್= ವಿಚಿತ್ರ!

**ಅನುವಾದ**– ಅವಚ್ಛೇದಕ ಜ್ಞಾನವಿಲ್ಲದೆ ಅವಚ್ಛಿನ್ನದ ಜ್ಞಾನವು ಆಗುವುದಿಲ್ಲವಾದ್ದರಿಂದ ಭಾವರೂಪಾಜ್ಞಾನವು ಅದಕ್ಕೆ ಅವಚ್ಛೇದಕವಾದ ಸಾಕ್ಷಿಚೈತನ್ಯದ ಸ್ವಪ್ರಕಾಶತ್ವವನ್ನು = (೧) ಸಾಕ್ಷಿರೂಪಜ್ಞಾನಕ್ಕೆ ಸಾಕ್ಷಿಚೈತನ್ಯವೇ ವಿಷಯ ಎಂಬ ಸ್ಥಿತಿಯನ್ನು ಸಮರ್ಥಿಸುತ್ತದೆ, (೨) ಅದ್ವೈತದರ್ಶನವು ಹೇಳುವ ಸಾಕ್ಷಿಚೈತನ್ಯಾವಿಷಯತ್ವವನ್ನು ನಿರಾಸ ಮಾಡುತ್ತದೆ. ಸ್ವಪ್ರಕಾಶತ್ವದ ವಿಷಯದಲ್ಲೂ ನಿನ್ನ ಬಾಣವು ನಿನ್ನ ಪ್ರಾಣವನ್ನು ಅಪಹರಿಸುತ್ತದೆ. ವಿಚಿತ್ರ! (ನೋಡಿ ಶ್ಲೋಕ ೧೩೫)

**ಅನುಸಂಧಾನ. ಈ ಅಜ್ಞಾನಕ್ಕೆ ಆತ್ಮನು ಅವಚ್ಛೇದಕ, ಎಂದರೆ, ವಿಷಯ. ಆದ್ದರಿಂದ, ಇದು ಆತ್ಮಾವಚ್ಛಿನ್ನ ಅಜ್ಞಾನದ ಜ್ಞಾನ. ಅವಚ್ಛಿನ್ನದ (ಆತ್ಮಾವಚ್ಛಿನ್ನ ಅಜ್ಞಾನದ) ಜ್ಞಾನವು ಹುಟ್ಟಲು ಅವಚ್ಛೇದಕದ ಜ್ಞಾನವು ಬೇಕೇಬೇಕು ಎಂದು ನಿಯಮವಿದೆ.**

**ಭಾವವಿಲಾಸಿನೀ–** ವಿಷಯಃ ಅಜ್ಞಾನವಿಷಯಃ । ಸ್ವಯಮ್ ಆತ್ಮಾ । ತಸ್ಯಾತ್ಮನಃ ಸ್ವಾವೇದ್ಯತ್ವ ಕೀರ್ತಿತೇ ಉಕ್ತರೀತ್ಯಾ ಪರವೇದ್ಯತ್ವಾಸಂಭವಾತ್ । ಅಜ್ಞಾನವೇದನಸ್ಯ ಅಜ್ಞಾನಜ್ಞಾನಸ್ಯಾತ್ಯಂತ ವೇದನಾ ಅತಿಸಂಕಟಂ ಭವೇದಿತಿ ಸಂಬಂಧಃ । ಅವಚ್ಛೇದಕಾತ್ಮಜ್ಞಾನಾಭಾವೇ ತದವಚ್ಛಿನ್ನಾ-ಜ್ಞಾನಜ್ಞಾನಮಪಿ ಸುತರಾಂ ನ ಸ್ಯಾದಿತಿ ಭಾವಃ । ತದೇವೋಪಪಾದಯತಿ- **ಅವಚ್ಛೇದಕೇತಿ** ॥೨೩೧॥

**ವಿವರಣೆ–** ಈಗ ಚರ್ಚಿಸಲ್ಪಡುತ್ತಿರುವ ಆತ್ಮಾಜ್ಞಾನದ ಜ್ಞಾನವು ಸಾಕ್ಷಿರೂಪ. ಈ ಅಜ್ಞಾನಕ್ಕೆ ಆತ್ಮನು ವಿಷಯ. ವಿಷಯವನ್ನು ಅವಚ್ಛೇದಕ ಎಂದು ಹೇಳುತ್ತಾರೆ. ಆತ್ಮನು ವೃತ್ತಿಜ್ಞಾನಕ್ಕೆ ವಿಷಯ ಅಲ್ಲ ಎಂದು ಹಿಂದೆ ಹೇಳಲಾಗಿದೆ. ಸಾಕ್ಷಿಗೂ ವಿಷಯ ಅಲ್ಲ ಎಂದರೆ ಅವನ ಅಜ್ಞಾನದ ಜ್ಞಾನವೇ ಇಲ್ಲವಾಗುವುದು. ಏಕೆಂದರೆ ಅವಚ್ಛಿನ್ನದ ಜ್ಞಾನಕ್ಕೆ ಅವಚ್ಛೇದಕದ ಜ್ಞಾನವು ಕಾರಣ ಎಂದು ನಿಯಮವಿದೆ. 'ಮಾಮಹಂ ನ ಜಾನಾಮಿ' - ಇದು ಆತ್ಮಾಜ್ಞಾನದ ಅನುಸಂಧಾನ (ಜ್ಞಾನ). ಇದು ಅವಚ್ಛಿನ್ನದ ಜ್ಞಾನ. ಆತ್ಮಾಜ್ಞಾನವು ಅವಚ್ಛಿನ್ನ. ಆತ್ಮವು ಅವಚ್ಛೇದಕ.

ಜ್ಞಾನರೂಪತ್ವತಃ ಕಿಂ ಸ್ಯಾತ್ ತತ್ತದ್ಗೋಚರತಾಂ ವಿನಾ ।
ಘಟಜ್ಞಾನಂ ಜ್ಞಾನಮಿತಿ ಕಿಮನ್ಯವ್ಯವಹಾರಕೃತ್ ॥ ೨೩೨ ॥

**ಅರ್ಥ–** ತತ್ತದ್‌ಗೋಚರತಾಂ ವಿನಾ = ಆಯಾ ವಸ್ತುಗಳನ್ನು ವಿಷಯೀಕರಿಸದೆ, ಜ್ಞಾನರೂಪತ್ವತಃ = ಜ್ಞಾನರೂಪನಾದ ಮಾತ್ರಕ್ಕೆ, ಕಿಂ ಸ್ಯಾತ್ = ಏನು ಪ್ರಯೋಜನ? ಘಟಜ್ಞಾನಂ = ಘಟಜ್ಞಾನವು, ಜ್ಞಾನಮಿತಿ = ಜ್ಞಾನ ಎಂಬ ಕಾರಣದಿಂದ, ಅನ್ಯವ್ಯವಹಾರ-ಕೃತ್ ಕಿಮ್ = ಪಟಾದಿವಿಷಯಕವ್ಯವಹಾರಜನಕವೇ?

**ಅನುವಾದ–** ಆಯಾಯಾ ವಸ್ತುಗಳನ್ನು ವಿಷಯೀಕರಿಸದೆ ಜ್ಞಾನರೂಪವಾಗುವುದರಿಂದ ಏನು ಪ್ರಯೋಜನ? ಘಟಜ್ಞಾನವು ಜ್ಞಾನ ಎಂಬ ಕಾರಣದಿಂದ ಪಟ ಮೊದಲಾದ ವಸ್ತುಗಳ ವ್ಯವಹಾರಕ್ಕೆ ಕಾರಣವಾಗುವುದೇ?

**ಭಾವವಿಲಾಸಿನೀ–** ನನ್ವಾತ್ಮನೋ ಜ್ಞಾನಾಭಾವೇಽಪಿ ಜ್ಞಾನರೂಪತ್ವಾದೇವ ತದವಚ್ಛಿನ್ನಾಜ್ಞಾನಸ್ಯ ಜ್ಞಾನ- ವ್ಯವಹಾರಾದಿ ಸಂಭವತೀತ್ಯತ ಆಹ– **ಜ್ಞಾನರೂಪತ್ವತ ಇತಿ** ॥ ತತ್ತದ್ಗೋಚರತಾಂ ತತ್ತಜ್ಜ್ಞಾನವಿಷಯತಾಂ ವಿನಾ ಜ್ಞಾನರೂಪತ್ವತಃ ಕಿಂ ಸ್ಯಾತ್? ನ ಕಿಮಪೀತಿ ಸಂಬಂಧಃ । ಕುತಃ? ಇತ್ಯತ ಆಹ–**ಘಟಜ್ಞಾನಮಿತಿ** ॥ ಘಟಜ್ಞಾನಂ ಜ್ಞಾನಮಿತಿ ಜ್ಞಾನಸ್ವರೂಪಮಿತ್ಯೇತಾವತೇತ್ಯರ್ಥಃ । ಅನ್ಯಸ್ಯ ಜ್ಞಾನವಿಷಯಘಟಾದನ್ಯಸ್ಯ ಪಟಾದೇರ್ವ್ಯವಹಾರಕೃತ್ ಕಿಮ್

ವ್ಯವಹಾರಕೃದಿತ್ಯುಪಲಕ್ಷಣಮ್ । ಅವಚ್ಛೇದಕತ್ವಕೃದಿತ್ಯಪಿ ಗ್ರಾಹ್ಯಮ್ । ಯಥಾ ಜ್ಞಾನರೂಪತ್ವೇಽಪಿ ಘಟಜ್ಞಾನಸ್ಯ ಘಟವ್ಯವಹಾರಹೇತುತ್ವಮೇವ, ನತು ಸ್ವಾವಿಷಯಪಟಾದಿ-ವ್ಯವಹಾರಹೇತುತ್ವಮ್ ತಥಾ ಜ್ಞಾನರೂಪತ್ವೇಽಪಿ ಬ್ರಹ್ಮಣಃ ಸ್ವಾವಿಷಯತ್ವೇ ಸ್ವಾವಚ್ಛಿನ್ನಾಜ್ಞಾನ-ವ್ಯವಹಾರಾದೌ ನೈವೋಪಯೋಗಿತ್ವಮಿತಿ ಭಾವಃ ॥ ೨೩೨ ॥

**ವಿವರಣೆ–** ಪ್ರಶ್ನೆ : ಆತ್ಮನು ಜ್ಞಾನರೂಪ. ಆದ್ದರಿಂದ ಅವನ ಜ್ಞಾನವಿಲ್ಲದಿದ್ದರೂ ಅವನ ಅಜ್ಞಾನದ ಜ್ಞಾನವು ಹುಟ್ಟುತ್ತದೆ; ಅಜ್ಞಾನ, ಆತ್ಮಗಳ ಬಗ್ಗೆ ವ್ಯವಹಾರವೂ ನಡೆಯುತ್ತದೆ?

ಉತ್ತರ: ಆತ್ಮಾಜ್ಞಾನದ ಜ್ಞಾನಕ್ಕೆ ವಿಷಯನಾಗದೆ, ಜ್ಞಾನರೂಪವಾಗಿರುವ ಕಾರಣದಿಂದಲೇ ಆತ್ಮನು 'ಮಾಮಾಹಂ ನ ಜಾನಾಮಿ' - ಇತ್ಯಾದಿವ್ಯವಹಾರಕ್ಕೆ ಕಾರಣನಾಗುವುದಿಲ್ಲ. ಹೀಗೆ ಆಗುವುದಾದರೆ ಘಟಜ್ಞಾನವು ಜ್ಞಾನ ಎಂಬ ಕಾರಣದಿಂದ ತನಗೆ ವಿಷಯವಾಗದ ಪಟ ಇತ್ಯಾದಿಗಳ ವ್ಯವಹಾರ ಜನಕವಾಗ ಬೇಕಾದೀತು. ಲೋಕದಲ್ಲಿ ಹೀಗೆ ಇಲ್ಲ. ಆದ್ದರಿಂದ 'ಜ್ಞಾನ' ವಿಷಯವಾದ ವಸ್ತುವಿನ ವ್ಯವಹಾರವೇ ಜ್ಞಾನದಿಂದ ಆಗುತ್ತದೆ, ಜ್ಞಾನವಿಷಯವಾಗದ ವಸ್ತುವಿನ ವ್ಯವಹಾರವು ಜ್ಞಾನದಿಂದ ಆಗುವುದಿಲ್ಲ' ಎಂಬ ನಿಯಮವಿದೆ ಎಂದು ತಿಳಿಯುತ್ತದೆ. ಈ ನಿಯಮಕ್ಕನುಗುಣವಾಗಿ ಆತ್ಮಾಜ್ಞಾನದ ಜ್ಞಾನಕ್ಕೆ ಆತ್ಮನು ವಿಷಯನಾಗದಿದ್ದರೆ, ಅಜ್ಞಾನ ಮತ್ತು ಆತ್ಮಗಳ ಬಗ್ಗೆ ವ್ಯವಹಾರವು ನಡೆಯುವುದಿಲ್ಲ.

**ಅತೋಽಜ್ಞಾನಂ ಸ್ವವಿಜ್ಞಪ್ತ್ಯೈ ಕ್ಷಿಪೇತ್ ತತ್‌ಸ್ವಪ್ರಕಾಶತಾಮ್ ।**
**ಚಿತ್ರಮತ್ರಾಪಿ ತೇ ಬಾಣಸ್ತವ ಪ್ರಾಣಾಪಹಾರಕಃ ॥ ೨೩೩ ॥**

**ಅರ್ಥ–** ಅತಃ = ಆದ್ದರಿಂದ ಅವಚ್ಛೇದಕದ ಜ್ಞಾನವು ಅನಿವಾರ್ಯವಾದ್ದರಿಂದ, ಅಜ್ಞಾನಂ = ಭಾವರೂಪ ಅಜ್ಞಾನವು, ಸ್ವವಿಜ್ಞಪ್ತ್ಯೈ= ತನ್ನ ಜ್ಞಾನಕ್ಕಾಗಿ, ತತ್ = ಸಾಕ್ಷಿರೂಪವಾದ ಜ್ಞಾನಕ್ಕೆ, (೧) ಸ್ವಪ್ರಕಾಶತಾಂ= ಸ್ವವಿಷಯತ್ವವನ್ನು ಕ್ಷಿಪೇತ್ = ಅರ್ಥಾಪತ್ತಿಯಿಂದ ಸಾಧಿಸುತ್ತದೆ. (೨) ಚೈತನ್ಯವು ವಿಷಯವಲ್ಲ ಎಂಬ ವಿಚಾರವನ್ನು ಕ್ಷಿಪೇತ್= ನಿರಾಸ ಮಾಡುತ್ತದೆ. ಅತ್ರಾಪಿ = ಸ್ವಪ್ರಕಾಶತ್ವದ ವಿಷಯದಲ್ಲೂ, ತೇ= ನಿನ್ನ, ಬಾಣಃ = ಭಾವರೂಪವಾದ ಅಜ್ಞಾನವೆಂಬ ಬಾಣವು, ತವ = ನಿನ್ನ ಪ್ರಾಣಾಪಹಾರಕಃ = ಪ್ರಾಣವನ್ನು (ಸಿದ್ಧಾಂತವನ್ನು) ಅಪಹರಿಸುತ್ತದೆ, ಚಿತ್ರಮ್= ವಿಚಿತ್ರ!

**ಅನುವಾದ–** ಅವಚ್ಛೇದಕ ಜ್ಞಾನವಿಲ್ಲದೆ ಅವಚ್ಛಿನ್ನದ ಜ್ಞಾನವು ಆಗುವುದಿಲ್ಲವಾದ್ದರಿಂದ ಭಾವರೂಪಾಜ್ಞಾನವು ಅದಕ್ಕೆ ಅವಚ್ಛೇದಕವಾದ ಸಾಕ್ಷಿಚೈತನ್ಯದ ಸ್ವಪ್ರಕಾಶತ್ವವನ್ನು = (೧) ಸಾಕ್ಷಿರೂಪಜ್ಞಾನಕ್ಕೆ ಸಾಕ್ಷಿಚೈತನ್ಯವೇ ವಿಷಯ ಎಂಬ ಸ್ಥಿತಿಯನ್ನು ಸಮರ್ಥಿಸುತ್ತದೆ, (೨) ಅದ್ವೈತದರ್ಶನವು ಹೇಳುವ ಸಾಕ್ಷಿಚೈತನ್ಯಾವಿಷಯತ್ವವನ್ನು ನಿರಾಸ ಮಾಡುತ್ತದೆ. ಸ್ವಪ್ರಕಾಶತ್ವದ ವಿಷಯದಲ್ಲೂ ನಿನ್ನ ಬಾಣವು ನಿನ್ನ ಪ್ರಾಣವನ್ನು ಅಪಹರಿಸುತ್ತದೆ. ವಿಚಿತ್ರ! (ನೋಡಿ ಶ್ಲೋಕ ೧೩೫)

**ಭಾವವಿಲಾಸಿನೀ–** ಅತಃ ಅವಚ್ಛೇದಕವಿಷಯಜ್ಞಾನಾವಶ್ಯಂಭಾವಾತ್ । ಅಜ್ಞಾನಂ ಭವದಭಿಮತಭಾವರೂಪಾಜ್ಞಾನಮ್ । ತತ್ಸ್ವಪ್ರಕಾಶತಾ । ತಸ್ಯ ಸಾಕ್ಷಿಣಃ ಸ್ವಾವಿಷಯತಾಮ್ । ಅತ್ರಾಪಿ ಸ್ವಪ್ರಕಾಶತ್ವವಿಷಯೇಽಪಿ । ತೇ ಬಾಣಃ ತವಾಭಿಮತಭಾವರೂಪಾಜ್ಞಾನಮೇವ । ತವ ಪ್ರಾಣಾಪಹಾರಕಃ ತವ ಪ್ರಾಣಸಮಸ್ವಾವೇದ್ಯತ್ವಾಪಹಾರಕಃ । ಅತೋಽತ್ರಾಪ್ಯಾತ್ಮೀಯ ಏವ ಬಾಣೋ ಭವಂತಂ ಪ್ರಹರತೀತಿ ನ್ಯಾಯೇ (ಸ್ವಶರಪಾತಸ್ಯ ಸ್ವವಕ್ಷೋಲಕ್ಷ್ಯಮಿತಿ-ಶ್ಲೋಕ ೧೩೫, ಯೋಜನೀಯಮ್) ಪತಿತೋಽಸೀತಿ ಭಾವಃ ॥ ೨೩೩ ॥

**ವಿವರಣೆ–** ತನ್ನ ಅಜ್ಞಾನದ ಜ್ಞಾನವು ಬರುವಾಗ ಅಜ್ಞಾನಕ್ಕೆ ಅವಚ್ಛೇದಕವಾದ ಆತ್ಮಾ ಅಥವಾ ಸಾಕ್ಷಿಚೈತನ್ಯದ ಜ್ಞಾನವೂ ಇದ್ದೇ ಇರುತ್ತದೆ. ಸಾಕ್ಷಿರೂಪವಾದ ಜ್ಞಾನಕ್ಕೆ ಸಾಕ್ಷಿರೂಪವಾದ ಆತ್ಮನೇ ವಿಷಯವಾಗುವುದರಿಂದ ಆತ್ಮನಿಗೆ ಸ್ವವಿಷಯತ್ವವು ಇದೆ. ಆತ್ಮನಿಗೆ ಸ್ವವಿಷಯತ್ವವು ಇಲ್ಲ ಎಂದು ಅದ್ವೈತಸಿದ್ಧಾಂತವಿದೆ. ಅಜ್ಞಾನದ ಜ್ಞಾನವು ಚೈತನ್ಯರೂಪ ಎಂದೂ ಈ ದರ್ಶನವು ಅಂಗೀಕರಿಸಿದೆ. ಈ ಅಂಗೀಕಾರವು ಆತ್ಮನಿಗೆ ಸ್ವವಿಷಯತ್ವವಿಲ್ಲದೆ ಉಪಪನ್ನವಾಗುವುದಿಲ್ಲ. ಆದ್ದರಿಂದ ಅದ್ವೈತದರ್ಶನ ಸಮ್ಮತವಾದ ಭಾವರೂಪ ಅಜ್ಞಾನವು, ಆ ದರ್ಶನಕ್ಕೆ ಸಮ್ಮತವಾದ ಆತ್ಮನ ಅವೇದ್ಯತ್ವಕ್ಕೆ ಭಂಗವುಂಟುಮಾಡಿದೆ. ಭಾವರೂಪ ಅಜ್ಞಾನವು ಅದ್ವೈತದರ್ಶನವು ಪ್ರಯೋಗಿಸಿದ ಬಾಣ. ಆದರಿಂದ ಅವರ ಸಿದ್ಧಾಂತಕ್ಕೇ ಭಂಗವುಂಟಾಗಿದೆ. ಅದ್ವೈತದರ್ಶನದ ಪ್ರಕಾರ ಸ್ವಪ್ರಕಾಶತಾ ಎಂದರೆ ಸ್ವಾವೇದ್ಯತಾ. ಆದ್ದರಿಂದ ಸ್ವಪ್ರಕಾಶತಾನಿರಾಸ ಎಂದರೆ ಸ್ವಾವೇದ್ಯತಾನಿರಾಸ.

ಕಿಂಚ ಪ್ರಾಗುಕ್ತದೃಷ್ಟಾಂತತ್ರಿತಯಂ ಚ ನ ವಿಸ್ಮರ ।
ಯತ್ರ ಕರ್ಮಕ್ರಿಯೈಕ್ಯಂ ಚ ಸಾಕ್ಷಾದೇವ ನಿದರ್ಶಿತಮ್ ॥ ೨೩೪ ॥

**ಅರ್ಥ–** ಕಿಂಚ = ಇದಲ್ಲದೆ, ಪ್ರಾಗುಕ್ತದೃಷ್ಟಾಂತತ್ರಿತಯಂ = ಹಿಂದೆ ಹೇಳಲ್ಪಟ್ಟ ಮೂರು ದೃಷ್ಟಾಂತಗಳನ್ನು ನ ವಿಸ್ಮರ = ಮರೆಯಬೇಡ. ಯತ್ರ = ಯಾವ ದೃಷ್ಟಾಂತಗಳಲ್ಲಿ, ಕರ್ಮಕ್ರಿಯೈಕ್ಯಂ = ಕರ್ಮ ಮತ್ತು ಕ್ರಿಯೆಗಳಿಗೆ ಐಕ್ಯವು, ಸಾಕ್ಷಾದೇವ = ನೇರವಾಗಿ, ನಿದರ್ಶಿತಮ್= ತೋರಿಸಲ್ಪಟ್ಟಿದೆ.

**ಅನುವಾದ–** ಮತ್ತು ನಾವು ಹಿಂದೆ ಹೇಳಿದ (೧) ಮನಸ್ಸಿಗೆ ಅನುಮಿತಿತ್ವ ಮತ್ತು ಅನುಮೇಯತ್ವ (೨) ಅಭಿಧಾ ಎಂಬ ನಾಮಕ್ಕೆ ಅಭಿಧೇಯತ್ವ ಮತ್ತು ಅಭಿಧಾತ್ವ (೩) ಜ್ಞಾನ ಪದ ಜನ್ಯವಾದ ಜ್ಞಾನಕ್ಕೆ ಜ್ಞಾನತ್ವ ಮತ್ತು ಜ್ಞೇಯತ್ವ- ಈ ಮೂರು ದೃಷ್ಟಾಂತಗಳನ್ನು ಮರೆಯಬೇಡ. ಆ ಮೂರು ನಿದರ್ಶನಗಳಲ್ಲೂ ಕರ್ಮ ಮತ್ತು ಕ್ರಿಯೆಗಳ ಐಕ್ಯವನ್ನು ನೇರವಾಗಿಯೇ ತೋರಿಸಲಾಗಿದೆ.

**ಭಾವವಿಲಾಸಿನೀ–** ಪ್ರಾಗುಕ್ತದೃಷ್ಟಾಂತತ್ರಿತಯಂ ಮನಸೋಽನುಮಿತಿರೂಪತ್ವಮನುಮೇಯತ್ವಂ ಚಾಭಿಧಾನಾಮ್ನಃ ಅಭಿಧೇಯತ್ವಮಭಿಧಾತ್ವಂ ಚ ಜ್ಞಾನಪದಜನ್ಯಜ್ಞಾನಸ್ಯ ಸ್ಪಸ್ಯೈವ ಜ್ಞಾನತ್ವಂ ಜ್ಞೇಯತ್ವಂ ಚೇತಿ ತ್ರಿತಯಮಿತ್ಯರ್ಥಃ ॥ ೨೩೪ ॥

**ವೃಥಾ ವಾಗರ್ಥದಂಪತ್ಯೋರ್ನಾಯೋಗಾಯ ಮತಿಂ ಕುರು॥ ೨೩೫ ॥**

**ಅರ್ಥ–** ವಾಗರ್ಥದಂಪತ್ಯೋಃ = ವಾಕ್ ಮತ್ತು ಅರ್ಥವೆಂಬ ದಂಪತಿಗಳ, ಅಯೋಗಾಯ= ವಿಯೋಗಕ್ಕೆ, ಮತಿಂ = ಬುದ್ಧಿಯನ್ನು ವೃಥಾ = ವ್ಯರ್ಥವಾಗಿ, ನ ಕುರು = ಮಾಡಬೇಡ.

**ಅನುವಾದ– ವಾಕ್ (ಶಬ್ದ) ಮತ್ತು ಅರ್ಥಗಳು ದಂಪತಿಗಳು. ಅವುಗಳಿಗೆ ವಿಯೋಗವನ್ನು ಉಂಟು ಮಾಡಬಾರದು. ಅರ್ಥಾತ್ ಸ್ವಪ್ರಕಾಶ ಶಬ್ದಕ್ಕೆ ತನ್ನ ಪ್ರಕಾಶಕ್ಕೆ= ಜ್ಞಾನಕ್ಕೆ ತಾನೇ ವಿಷಯ= ಕರ್ಮ ಎಂದು ಅರ್ಥ. ಈ ಅರ್ಥವನ್ನು ನಿರಾಕರಿಸಬೇಡ.**

**ಭಾವವಿಲಾಸಿನೀ– ವಾಗರ್ಥದಂಪತ್ಯೋಃ ವಾಕ್ ಚಾರ್ಥಶ್ಚ ವಾಗರ್ಥೌ । ತಾವೇವ ದಂಪತೀ ಏಕಸ್ಯ ಸ್ತ್ರೀಲಿಂಗತ್ವಾದಪರಸ್ಯ ಪುಲ್ಲಿಂಗತ್ವಾದಿತಿ ಭಾವಃ । ಅಯೋಗಾಯ ಮತಿಂ ಮಾ ಕುರ್ವಿತಿ ಸಂಬಂಧಃ । ಸ್ವಪ್ರಕಾಶಶಬ್ದಸ್ಯ ಸ್ವವಿಷಯತ್ವಾಖ್ಯಸ್ವಾರಸಿಕಾರ್ಥಂ ಮಾ ವಿಘಟಯೇತಿ ಭಾವಃ ॥೨೩೫॥**

**ವಿವರಣೆ–** 'ವಾಕ್' ಶಬ್ದ ಸ್ತ್ರೀಲಿಂಗ 'ಅರ್ಥ' ಶಬ್ದ ಪುಲ್ಲಿಂಗ. ಅವುಗಳಿಗೆ ವಿಯೋಗವೇ ಇಲ್ಲ. ಅಂದರೆ, ಅರ್ಥರಹಿತ ಶಬ್ದವಿಲ್ಲ. ವಾಚಕ ಶಬ್ದವಿಲ್ಲದ ವಸ್ತುವಿಲ್ಲ. ಆದ್ದರಿಂದ ವಾಕ್ ಮತ್ತು ಅರ್ಥಗಳು ದಂಪತಿಗಳು. 'ಸ್ವಪ್ರಕಾಶ' ಶಬ್ದಕ್ಕೆ ತಾನೇ ವಿಷಯ ಅಥವಾ ಕರ್ಮವಾಗಿರುವ ಪ್ರಕಾಶ ಎಂದು ಅರ್ಥ. ಅಂದರೆ, ಪ್ರಕಾಶಕ್ರಿಯೆಯ ಕರ್ತೃ ಮತ್ತು ಕರ್ಮಗಳು ಒಂದೇ ಎಂದು ಅರ್ಥ. 'ಸ್ವಪ್ರಕಾಶ' ಶಬ್ದಕ್ಕೆ ಈ ಅರ್ಥವನ್ನು ನಿರಾಕರಿಸುವುದು ದಂಪತಿಗಳನ್ನು ಬೇರ್ಪಡಿಸಿದಂತೆ.

**ಅತಃ ಸ್ವಾವೇದ್ಯತಾ ತ್ಯಾಜ್ಯಾ ಸ್ವವೇದ್ಯೋಽಪಿ ಭವೇತ್ ಪ್ರಭುಃ ।**
**ನ ಚೇತ್ ಸ್ವಾನಂದಾನುಭವೋ ಮುಕ್ತೌ ಮುಕ್ತಸ್ಯ ಕಿಂಬಲಾತ್ ॥ ೨೩೬ ॥**

**ಅರ್ಥ–** ಅತಃ = ಆದ್ದರಿಂದ (ಶಬ್ದದ ಸಹಜವಾದ ಅರ್ಥವನ್ನು ನಿರಾಕರಿಸುವುದು ದೋಷಕರವಾದ್ದರಿಂದ), (ಪರಮಾತ್ಮನಿಗೆ) ಸ್ವಾವೇದ್ಯತಾ = ತನ್ನ ಜ್ಞಾನಕ್ಕೆ ಅವಿಷಯತ್ವವು, ತ್ಯಾಜ್ಯಾ = ಬಿಡಲ್ಪಡಬೇಕು. ಪ್ರಭುಃ = ಸಮರ್ಥನಾದ ಪರಮಾತ್ಮನು, ಸ್ವವೇದ್ಯಃ ಭವೇತ್= ತನ್ನ ಜ್ಞಾನಕ್ಕೆ ತಾನೇ ವಿಷಯನು ಆಗುತ್ತಾನೆ. ಅಪಿ= ಜೀವಾತ್ಮನೂ, (ತನ್ನ ಜ್ಞಾನಕ್ಕೆ ತಾನೇ ವಿಷಯನು ಆಗುತ್ತಾನೆ), ನ ಚೇತ್ = ಅಲ್ಲದಿದ್ದರೆ, ಮುಕ್ತೌ= ಮುಕ್ತಿಯಲ್ಲಿ, ಮುಕ್ತಸ್ಯ = ಮುಕ್ತ ಜೀವನಿಗೆ, ಸ್ವಾನಂದಾನುಭವಃ = ತನ್ನ ಸ್ವರೂಪವೇ ಆದ ಆನಂದದ ಅನುಭವವು, ಕಿಂಬಲಾತ್= ಯಾವ ಇಂದ್ರಿಯದ ಬಲದಿಂದ (ಆಗುತ್ತದೆ?)

**ಅನುವಾದ– ವಾಕ್ ಮತ್ತು ಅರ್ಥಗಳನ್ನು ಬೇರ್ಪಡಿಸುವುದು ದೋಷಕರವಾದ್ದರಿಂದ 'ಸ್ವಪ್ರಕಾಶ' ಶಬ್ದಕ್ಕೆ ಸ್ವಾವೇದ್ಯ ಎಂಬ ಅರ್ಥವನ್ನು ಬಿಡಬೇಕು. ಪರಮಾತ್ಮನು ತನ್ನನ್ನು**

ತಾನು ತಿಳಿಯುತ್ತಾನೆ. ಜೀವಾತ್ಮನು ಹೀಗೆಯೇ. ಸ್ವವೇದ್ಯತ್ವವು ಚೇತನಗಳಿಗೆ ಇಲ್ಲದಿದ್ದರೆ ಮುಕ್ತಜೀವನಿಗೆ ಸ್ವರೂಪಾನಂದದ ಅನುಭವವು ಯಾವ ಸಾಧನದಿಂದ ಆಗುತ್ತದೆ?

**ಭಾವವಿಲಾಸಿನೀ–** ಅತ: ಶಬ್ದಾರ್ಥವಿಘಟನಾಯಾ ದೋಷಹೇತುತ್ವಾತ್ । ವಿಪಕ್ಷೇ ಬಾಧಕಮಾಹ– **ನ ಚೇದಿತಿ** ॥ ಸ್ವಾನಂದಾನುಭವಃ ಸ್ವಸ್ವರೂಪಾನಂದಾನುಭವಃ । ಕಿಂಬಲಾತ್ ಕಸ್ಯ ಬಲಾತ್ । ಸಾಕ್ಷ್ಯತಿರಿಕ್ತೇಂದ್ರಿಯಾಣಾಂ ತತ್ರಾಭಾವತ್ ॥ ೨೩೬ ॥

**ವಿವರಣೆ–** ಮೇಲೆ ವಿವರಿಸಿರುವ ಕಾರಣಗಳಿಂದ 'ಸ್ವಪ್ರಕಾಶ' ಶಬ್ದಕ್ಕೆ 'ಸ್ವಾವೇದ್ಯ' ಎಂಬ ಅರ್ಥವನ್ನು ಹೇಳಬಾರದು. ಪರಮಾತ್ಮನು ತನ್ನನ್ನು ತಾನು ತಿಳಿಯುತ್ತಾನೆ. ಜೀವಾತ್ಮನೂ ತನ್ನನ್ನು ತಾನು ತಿಳಿಯುತ್ತಾನೆ. ಈ ಸ್ವವೇದ್ಯತ್ವವು ಇಲ್ಲದಿದ್ದರೆ ಮುಕ್ತಜೀವನು ಸ್ವರೂಪಾನಂದದ ಅನುಭವವನ್ನು ಯಾವ ಹೊರಗಿನ ಸಾಧನದಿಂದ ಪಡೆಯಬೇಕು? ಮುಕ್ತರಿಗೆ ಸಾಕ್ಷಿಯೇ ಇಂದ್ರಿಯ. ಬೇರೆ ಇಂದ್ರಿಯಗಳಿಲ್ಲ. ಮುಕ್ತರ ಸ್ವಾನಂದಾನುಭವ ಪ್ರಕ್ರಿಯೆಯಲ್ಲಿ ಮುಕ್ತಚೇತನ ಕರ್ತೃ, ಅನುಭವವು ಕ್ರಿಯೆ, ಮುಕ್ತನ ಸ್ವರೂಪವೇ ಆದ ಆನಂದವು ಕರ್ಮ. ಇಲ್ಲಿ ಕರ್ತೃ ಚೇತನನೇ ಕ್ರಿಯೆಯೂ, ಕರ್ಮವೂ ಆಗಿರುವುದು ಸ್ಪಷ್ಟ. ಇದನ್ನು ನಿರಾಕರಿಸುವವರ ಪ್ರಕಾರ ಮುಕ್ತರಿಗೆ ಸ್ವರೂಪಾನಂದದ ಅನುಭವವೇ ಇಲ್ಲವಾದೀತು.

ಅತಃ ಸ್ವವಿಷಯೋ ಯಸ್ಯ ಪ್ರಕಾಶೋ ವಿದ್ಯತೇ ಸದಾ ।
ಸ ಏವ ಸ್ವಪ್ರಕಾಶಾಖ್ಯ ಇತಿ ಸರ್ವಂ ಸಮಂಜಸಮ್ ॥ ೨೩೭ ॥

**ಅರ್ಥ–** ಅತಃ = ಆದ್ದರಿಂದ, ಯಸ್ಯ = ಯಾರಿಗೆ, ಸ್ವವಿಷಯಃ= ತನ್ನದೇ ಅಥವಾ ತನ್ನನ್ನೇ ವಿಷಯೀಕರಿಸುವ, ಪ್ರಕಾಶಃ= ಜ್ಞಾನವು, ವಿದ್ಯತೇ= ಇದೆಯೋ, ಸ ಏವ= ಅವನೇ, ಸ್ವಪ್ರಕಾಶಾಖ್ಯಃ= ಸ್ವಪ್ರಕಾಶಶಬ್ದವಾಚ್ಯನು. ಇತಿ= ಹೀಗೆ, ಸರ್ವಂ= ಎಲ್ಲವೂ, ಸಮಂಜಸಂ= ಸಮಂಜಸ.

**ಅನುವಾದ–** ಸ್ವಾವೇದ್ಯತ್ವವು ಸ್ವಪ್ರಕಾಶಶಬ್ದದ ಅರ್ಥವಲ್ಲ ಎಂದು ವಿವರಿಸಲಾಗಿದೆ. ಆದ್ದರಿಂದ ಯಾರಿಗೆ ತನ್ನದೇ ಜ್ಞಾನವು ಇದೆಯೋ ಅದು ಸ್ವಪ್ರಕಾಶ. ಯಾವುದು ತನ್ನನ್ನೇ ಬೆಳಗಿಸುವುದೋ ಅದೂ ಸ್ವಪ್ರಕಾಶ. ಆದ್ದರಿಂದ ಎಲ್ಲವೂ ಸಮಂಜಸ.

**ಭಾವವಿಲಾಸಿನೀ–** ಸ್ವಪ್ರಕಾಶಶಬ್ದಾರ್ಥಂ ವದನ್ ಸ್ವಪ್ರಕಾಶವಾದಮುಪಸಂಹರತಿ– **ಅತ ಇತಿ** ॥ ಅತಃ ಸ್ವಾವೇದ್ಯತ್ವಸ್ಯಾಶಬ್ದಾರ್ಥತ್ವಾದ್ ಅಸಾರ್ವಜ್ಞ್ಯಾಖ್ಯದೋಷಾಪಾದಕತ್ವಾಚ್ಚ । 'ಸರ್ವಂ ಸಮಂಜಸಮ್' ಇತ್ಯನೇನ 'ಯಃ ಸರ್ವಜ್ಞಃ' ಇತ್ಯಾದಿಶ್ರುತೇರಪಿ ಸಾಮಂಜಸ್ಯಮುಭೂದಿತ್ಯಭಿಪ್ರೈತಿ । ಬ್ರಹ್ಮಜ್ಞಾನಸ್ಯ ಬ್ರಹ್ಮಾಗೋಚರತ್ವೇ ಶ್ರುತೇಸ್ಸಂಕೋಚಾಖ್ಯಾಸಾಮಂಜಸ್ಯಂ ಸ್ಯಾತ್। ತತ್ಪರಿಹಾರಾಯಾಪಿ ಸ್ವಪರಾಖ್ಯಸರ್ವವಿಷಯತ್ವಮಂಗೀಕಾರ್ಯಮಿತಿ ಭಾವಃ ॥ ೨೩೭ ॥

**ವಿವರಣೆ–** 'ಸ್ವವಿಷಯಪ್ರಕಾಶತ್ವ'ವೇ ಸ್ವಪ್ರಕಾಶ' ಶಬ್ದದ ಅರ್ಥವಾದ್ದರಿಂದ ಬ್ರಹ್ಮನಿಗೆ ಸರ್ವಜ್ಞತ್ವವನ್ನು ಹೇಳುವ 'ಯಃ ಸರ್ವಜ್ಞ ಸರ್ವವಿತ್' ಮೊದಲಾದ ಎಲ್ಲ ಶ್ರುತಿಗಳಿಗೂ ಅಸಂಕುಚಿತಅರ್ಥವನ್ನು ಹೇಳುವ ಸಾಮಂಜಸ್ಯವು ಸಿದ್ಧವಾಗುತ್ತದೆ. 'ಬ್ರಹ್ಮನು ಸರ್ವಜ್ಞ' ಎಂದರೆ ಸಕಲವನ್ನು ತಿಳಿದವನು ಎಂದು ಅರ್ಥ. ಬ್ರಹ್ಮನು ತನ್ನನ್ನು ತಿಳಿದಿಲ್ಲ ಎಂದು ಹೇಳಿದರೆ ಅವನ ಸರ್ವಜ್ಞತ್ವಕ್ಕೇ ಸಂಕೋಚವುಂಟಾಗುವ ಪ್ರಸಂಗ. ಆದ್ದರಿಂದ 'ಸ್ವಪ್ರಕಾಶ' ಶಬ್ದಕ್ಕೆ ಮಧ್ವದರ್ಶನವು ಹೇಳುವ ಅರ್ಥವೇ ಸಮಂಜಸ.

**ಮುಖೇನಾತಿಪ್ರಸನ್ನೋऽಪಿ ಹೃದಿ ಹಾಲಾಹಲೀ ಖಲಃ ।**
**ಜಲ್ಪತಃ ಸ್ವಪ್ರಕಾಶತ್ವಂ ಸ್ವಾವೇದ್ಯತ್ವಂ ಯತೋ ಹೃದಿ ॥ ೨೩೮ ॥**

**ಅರ್ಥ–** ಖಲಃ = ದುಷ್ಟನು, ಮುಖೇನ = ಮುಖದಿಂದ, ಅತಿಪ್ರಸನ್ನೋऽಪಿ = ಅತ್ಯಂತ ಪ್ರಸನ್ನನಾಗಿದ್ದರೂ, ಹೃದಿ = ಮನಸ್ಸಿನಲ್ಲಿ, ಹಾಲಾಹಲೀ = ಹಾಲಾಹಲವುಳ್ಳವನು. ಯತಃ = ಏಕೆಂದರೆ (ಬ್ರಹ್ಮನಿಗೆ) ಸ್ವಪ್ರಕಾಶತ್ವಂ = ಸ್ವಪ್ರಕಾಶತ್ವವನ್ನು, ಜಲ್ಪತಃ = ಹೇಳುವವನ, ಹೃದಿ = ಮನಸ್ಸಿನಲ್ಲಿ ಸ್ವಾವೇದ್ಯತ್ವಂ = ಸ್ವಕರ್ತೃಕಜ್ಞಾನವಿಷಯತ್ವಾಭಾವವು (ಇದೆ).

**ಅನುವಾದ–** ದುಷ್ಟರು ಮೇಲ್ನೋಟಕ್ಕೆ ಪ್ರಸನ್ನರಾಗಿರುವಂತೆ ತೋರಿಸಿಕೊಂಡರೂ, ಮನಸ್ಸಿನಲ್ಲಿ ದ್ವೇಷ, ಅಸೂಯೆ ಮೊದಲಾದ ದುರ್ಗುಣಗಳನ್ನು ತುಂಬಿ ಕೊಂಡಿರುತ್ತಾರೆ. ಅದರಂತೆ, ಮಾಯಾವಾದವೂ ಬ್ರಹ್ಮನನ್ನು ಸ್ವಪ್ರಕಾಶ ಎಂದು ಹೇಳುತ್ತಾ, ಬ್ರಹ್ಮಜ್ಞಾನವು ತನ್ನನ್ನು ವಿಷಯೀಕರಿಸುವುದಿಲ್ಲವೆಂದು (ಬ್ರಹ್ಮನು ಸರ್ವಜ್ಞನಲ್ಲವೆಂದು) ಹೇಳುತ್ತದೆ. ಇದು ದುರ್ಜನರ ನೀತಿ.

**ಭಾವವಿಲಾಸಿನೀ–** ಪರಾಭಿಮತಸ್ವಪ್ರಕಾಶಂ ನೀತಿವಿರುದ್ಧಂ ಚೇತ್ಯಾಹ– **ಮುಖೇನೇತಿ** ॥ ಹಾಲಾಹಲಪದೇನ ದ್ವೇಷೇರ್ಷ್ಯಾದಿದೋಷಾ ಲಕ್ಷ್ಯಂತೇ । ತದ್ವಾನಿತ್ಯರ್ಥಃ । ಏತದ್ದುರ್ನೀತೇ-ರ್ನಿದರ್ಶನಂ ಮಾಯಾವಾದ್ಯೇವೇತ್ಯಾಹ–**ಜಲ್ಪತ** ಇತಿ ॥ ಸ್ವಾವೇದ್ಯತ್ವಕಥನೇನ ಹರೇರಸಾರ್ವ-ಜ್ಞ್ಯಸ್ಯೈವ ನಿರೂಪಣಾದ್ ಭಗವನ್ಮಹಿಮ್ನಿ ದ್ವೇಷೇರ್ಷ್ಯಾದಿದೋಷವಾನಿತಿ ಭಾವಃ ॥ ೨೩೮ ॥

**ವಿವರಣೆ–** ಬ್ರಹ್ಮನನ್ನು 'ಸ್ವಪ್ರಕಾಶ' ಎಂದು ಹೇಳಿದಾಗ ಬ್ರಹ್ಮನಿಗೆ ತನ್ನ ಮತ್ತು ಇತರ ಎಲ್ಲ ವಿಷಯಗಳ ಜ್ಞಾನವಿದೆ ಎಂದು ಹೇಳುತ್ತಿದ್ದಾರೆ ಎಂದು ತಿಳಿಯುತ್ತದೆ. ಇದು ಬ್ರಹ್ಮನ ಸರ್ವಜ್ಞತ್ವದ ಚಿಂತನೆ. ಗುಣಪೂರ್ಣತ್ವದ ಚಿಂತನೆ. ಈ ಚಿಂತನೆಯೇ ಪ್ರಸನ್ನತೆ. ತಾನು ಹೇಳಿದ 'ಸ್ವಪ್ರಕಾಶ' ಶಬ್ದಕ್ಕೆ 'ಸ್ವಾವೇದ್ಯ' ಎಂದು ಅರ್ಥವನ್ನು ಹೇಳಿದರೆ ಬ್ರಹ್ಮನಿಗೆ ತನ್ನ ಜ್ಞಾನವಿಲ್ಲ ಎಂದು ಹೇಳಿದಂತಾಗಿ ಅವನ ಸರ್ವಜ್ಞತ್ವದ ಅನುಸಂಧಾನವಿಲ್ಲ ಎಂದು ತೋರಿಸಿದಂತಾಗುತ್ತದೆ. 'ಸ್ವಪ್ರಕಾಶ' ಎಂದು ಉಚ್ಚಾರಣೆ ಮುಖ (ಬಾಯಿಯ)ದ ಕೆಲಸ. 'ಸ್ವಾವೇದ್ಯ' ಎಂದು ವಿವರಣೆ ಹೃದಯದ= ತಾತ್ಪರ್ಯದ ಆವಿಷ್ಕಾರ. ಇದು ಮುಖದಲ್ಲಿ ಪ್ರಸನ್ನತೆಯನ್ನು ಧರಿಸಿ ಹೃದಯದಲ್ಲಿ ಹಾಲಾಹಲವನ್ನು ಇಟ್ಟುಕೊಂಡವರ ನಡವಳಿಕೆ.

ಕುರುಡನಿಗೂ ತನ್ನ ಜ್ಞಾನವಿದೆ-

ಅನ್ಯಾನಜಾನನ್ನಪ್ಯಂಧೋ ಜಾನಾತ್ಯಹಮಿತಿ ಸ್ಫುಟಮ್ ।
ಸ್ವಪರಜ್ಞಾನಶೂನ್ಯೋಽಸೌ ಘಟಃ ಸ್ಯಾದಥವಾ ಪಟಃ ॥ ೨೩೯ ॥

**ಅರ್ಥ–** ಅನ್ಯಾನ್ = ಇತರರನ್ನು, ಅಜಾನನ್= ತಿಳಿಯದ, ಅಂಧಃ ಅಪಿ= ಕುರುಡನೂ, ಅಹಮ್ ಇತಿ = ನಾನು ಎಂದು, ಸ್ಫುಟಂ = ಸ್ಪಷ್ಟವಾಗಿ, ಜಾನಾತಿ = ತಿಳಿಯುತ್ತಾನೆ. (ಆದರೆ) ಸ್ವಪರಜ್ಞಾನಶೂನ್ಯಃ = ತನ್ನ ಹಾಗೂ ಪರರ ಜ್ಞಾನಶೂನ್ಯನಾದ, ಅಸೌ= ಈ ಅದ್ವೈತದರ್ಶನದ ಬ್ರಹ್ಮನು, ಘಟಃ = ಮಡಕೆ, ಅಥವಾ = ಅಥವಾ, ಪಟಃ = ಬಟ್ಟೆಯು, ಸ್ಯಾತ್= ಆದಾನು.

**ಅನುವಾದ–** ಬೇರೆ ವಸ್ತುಗಳನ್ನು ಕಾಣದ ಕುರುಡನಿಗೂ, ನಾನು ಎಂದು ಜ್ಞಾನವಿದೆ. ಆದರೆ ಮಾಯಾವಾದಿಗಳ ಪ್ರಕಾರ ಬ್ರಹ್ಮನು ಸ್ವಾವೇದ್ಯನಾದರೆ ಅವನಿಗೆ ತನ್ನ ಜ್ಞಾನವು ಇಲ್ಲ. ಅವನು ನಿತ್ಯಮುಕ್ತನಾದ್ದರಿಂದ ಅವನಿಗೆ ಬೇರೆ ವಸ್ತುಗಳ ಜ್ಞಾನವೂ ಇಲ್ಲ. ಅವು ಅಸತ್ ಆದ್ದರಿಂದ. ಆದ್ದರಿಂದ ಬ್ರಹ್ಮನು ಘಟಪಟಗಳಂತೆ ಜಡನೇ ಸರಿ.

**ಭಾವವಿಲಾಸಿನೀ–** ಪೂರ್ವಮಸಾರ್ವಜ್ಞಾಪಾದನಾದ್ ದೋಷೀತ್ಯುಕ್ತಮ್ । ಅಧುನಾ ಘಟವಜ್ಜಡತ್ವಾ- ಪಾದನಾತ್ ತತೋಽಪ್ಯತಿಶಯಿತದೋಷೀತ್ಯಾಹ– **ಅನ್ಯಾನಿತಿ** ॥ ಅಸೌ ಮುಕ್ತಿದಶಾಯಾಂ ವಿದ್ಯಮಾನಃ ಪರಮಾತ್ಮಾ ಸ್ವಪರಜ್ಞಾನಶೂನ್ಯಃ ಮುಕ್ತತ್ವಾದೇವ ಪರಜ್ಞಾನಶೂನ್ಯಃ ಸ್ವಾವೇದ್ಯತ್ವಾದೇವ ಸ್ವಜ್ಞಾನಶೂನ್ಯಶ್ಚ ಜಾತ ಇತಿ ಘಟಃ ಸ್ಯಾದಥವಾ ಪಟ ಇತಿ ಸಂಬಂಧಃ ॥ ೨೩೯ ॥

**ವಿವರಣೆ–** ಹಿಂದಿನ ಶ್ಲೋಕದಲ್ಲಿ ಅದ್ವೈತದರ್ಶನದ ಪ್ರಕಾರ ಬ್ರಹ್ಮನು ಅಸರ್ವಜ್ಞನಾಗ ಬೇಕಾಗುತ್ತದೆ ಎಂದು ಹೇಳಲಾಗಿದೆ. ಈ ಶ್ಲೋಕದಲ್ಲಿ ತನ್ನ ಜ್ಞಾನವೂ, ಇತರ ವಸ್ತುಗಳ ಜ್ಞಾನವೂ ಇಲ್ಲದ ಬ್ರಹ್ಮನು ಜಡ ಎಂದು ಹೇಳಿದಂತಾಗುತ್ತದೆ ಎಂದು ಹೇಳಲಾಗಿದೆ. ಬ್ರಹ್ಮನನ್ನು ಅಸರ್ವಜ್ಞನನ್ನಾಗಿ ತೋರಿಸಿದರೆ ಎಷ್ಟು ದೋಷವೋ, ಅದಕ್ಕಿಂತ ಹೆಚ್ಚು ದೋಷಕ್ಕೆ ಅವನನ್ನು ಜಡ ಎಂದು ತೋರಿಸುವವರು ಭಾಗಿಯಾಗುತ್ತಾರೆ.

ಮುಕ್ತಿದೆಶೆಯಲ್ಲಿರುವ ಬ್ರಹ್ಮನು 'ಸ್ವಾವೇದ್ಯ'ನಾದರೆ ತನ್ನ ಜ್ಞಾನವಿಲ್ಲದವನು ಎಂದು ಅರ್ಥ. ಮುಕ್ತಿಯಲ್ಲಿ ಬ್ರಹ್ಮನಿಗೆ ಪರವಸ್ತುಗಳ ಜ್ಞಾನವೂ ಇಲ್ಲವೆಂದು ಅದ್ವೈತದರ್ಶನವು ಹೇಳುತ್ತದೆ. ಆದ್ದರಿಂದ ಜ್ಞಾನವೇ ಇಲ್ಲದ ಬ್ರಹ್ಮನು ಜಡವಸ್ತುಗಳಿಗೆ ಸಮಾನ.

ಮೋಕ್ಷವು ಪುರುಷಾರ್ಥವಾಗದಿರಬೇಕಾದೀತು -

ಕಿಂ ಸ್ವಾದುನಾ ಗುಡೇನಾಪಿ ಯದ್ರಸೋ ನಾನುಭೂಯತೇ ।
ಕಿಂ ಸ್ವರೂಪಸುಖೇನ ಸ್ಯಾದ್ ಯದಿ ತನ್ನಾನುಭೂಯತೇ ॥ ೨೪೦ ॥

**ಅರ್ಥ–** ಯದ್ರಸಃ= ಯಾವುದರ ರಸವು, ನ ಅನುಭೂಯತೇ= ಅನುಭವಿಸಲ್ಪಡುವುದಿಲ್ಲವೋ (ಅಂತಹ), ಸ್ವಾದುನಾ= ರುಚಿಯಾದ, ಗುಡೇನ ಅಪಿ= ಬೆಲ್ಲದಿಂದಾದರೂ, ಕಿಮ್= ಏನು ಪ್ರಯೋಜನ? ಸ್ವರೂಪಸುಖೇನ= ಸ್ವರೂಪ ಸುಖದಿಂದ, ಕಿಂ ಸ್ಯಾತ್?= ಏನು ಉಪಯೋಗ? , ತದ್= ಅದು, ಯದಿ ನಾನು-ಭೂಯತೇ= ಅನುಭವಿಸಲ್ಪಡದಿದ್ದರೆ.

**ಅನುವಾದ–** ಬೆಲ್ಲದ ರಸವನ್ನು ಅನುಭವಿಸದಿದ್ದರೆ ಅದು ಎಷ್ಟೇ ರುಚಿಯಾಗಿದ್ದರೂ ಏನು ಪ್ರಯೋಜನ? ಸ್ವರೂಪಸುಖವನ್ನು ಅನುಭವಿಸದಿದ್ದರೆ, ಆ ಸುಖದಿಂದ ಏನು ಪ್ರಯೋಜನ?

**ಭಾವವಿಲಾಸಿನೀ–** ಬ್ರಹ್ಮಣಃ ಸ್ವಾವೇದ್ಯತ್ವೇ ಮುಕ್ತೇರಮುಕ್ತಿತ್ವಪ್ರಸಂಗ ಇತಿ ಸದೃಷ್ಟಾಂತಮಾಹ– **ಕಿಂ ಸ್ವಾದುನೇತಿ** ।। **ತತ್ ಸ್ವರೂಪಸುಖಮ್** । **ಅನನುಭೂಯಮಾನಗುಡರಸವದನ-ನುಭೂಯಮಾನಸುಖಮಪಿ ನ ಪ್ರಯೋಜನಮಿತಿ ಭಾವಃ ।। ೨೪೦।।**

**ವಿವರಣೆ–** ಬ್ರಹ್ಮನು ಸ್ವಾವೇದ್ಯನಾದರೆ ಮುಕ್ತಿಯು ಪುರುಷಾರ್ಥವಾಗುವುದಿಲ್ಲ ಎಂದು ದೃಷ್ಟಾಂತ ಪೂರ್ವಕವಾಗಿ ಹೇಳುತ್ತಿದ್ದಾರೆ : ಸ್ವಾದು ಬೆಲ್ಲವೇ ಪುರುಷಾರ್ಥವಲ್ಲ. ಅದರ ರಸಾನುಭವವು ಪುರುಷಾರ್ಥ. ಹೀಗೆಯೇ ಸುಖಸ್ವರೂಪನಾಗಿರುವುದೇ ಪುರುಷಾರ್ಥವಲ್ಲ; ಸ್ವರೂಪಸುಖದ ಅನುಭವವು ಪುರುಷಾರ್ಥ. ಸುಖಿಯಾಗಬೇಕು ಎಂದು ಬಯಸುವಂತೆ ಸುಖವೇ ಆಗಬೇಕು ಎಂದು ಯಾರೂ ಬಯಸುವುದಿಲ್ಲ.

'ಸುಖೀ ಸ್ಯಾಮಿತಿವತ್ ಸುಖಂ ಸ್ಯಾಮಿತೀಚ್ಛಾಯಾ ಅದರ್ಶನಾದ್'- ನ್ಯಾಯಾಮೃತ.

ಕಳ್ಳನ ರೀತ್ಯಾ ಎಲ್ಲರೂ ಕಳ್ಳರೇ-

**ಚೋರಸ್ಯ ಚೋರಃ ಶಿಷ್ಟೋಽಪಿ ಶಿಷ್ಟಶಿಷ್ಟಸ್ಯ ಕೇವಲಮ್ ।**
**ಸ್ವಾಜ್ಞಂ ತತ್ ಕಿಲ ಸರ್ವಜ್ಞಂ ಮುಕ್ತಂ ಸ್ವಾನಂದಭೋಕ್ತೃ ಚ ।। ೨೪೧ ।।**

**ಅರ್ಥ–** ಶಿಷ್ಟೋಽಪಿ = ಒಳ್ಳೆಯ ನಡತೆಯವನೂ ಕೂಡ, ಚೋರಸ್ಯ = ಕಳ್ಳನ (ದೃಷ್ಟಿಯಲ್ಲಿ), ಚೋರಃ = ಕಳ್ಳನಾಗಿರುತ್ತಾನೆ, ಶಿಷ್ಟಸ್ಯ ಕೇವಲಂ= ಒಳ್ಳೆಯವನ ದೃಷ್ಟಿಯಲ್ಲಿ ಮಾತ್ರ, ಶಿಷ್ಟಃ = ಒಳ್ಳೆಯವನು, ಸರ್ವಜ್ಞಂ= ಎಲ್ಲವನ್ನೂ ಬಲ್ಲ ಮುಕ್ತಂ = ನಿತ್ಯಮುಕ್ತನಾದ, ಸ್ವಾನಂದಭೋಕ್ತೃ ಚ = ಸ್ವರೂಪಭೂತವಾದ ಆನಂದವನ್ನು ಅನುಭವಿಸುವ, ತತ್= ಆ ಬ್ರಹ್ಮನು, ಸ್ವಾಜ್ಞಂ ಕಿಲ= (ಮಾಯಾವಾದಿಗಳ ರೀತ್ಯಾ) ತನ್ನ ಜ್ಞಾನವೇ ಇಲ್ಲದವನಂತೆ!

**ಅನುವಾದ–** ಕಳ್ಳನಿಗೆ ಶಿಷ್ಟರೂ ಕಳ್ಳರಾಗಿ ಕಾಣುತ್ತಾರೆ. ಶಿಷ್ಟರಿಗೆ ಮಾತ್ರ ಶಿಷ್ಟರು ಶಿಷ್ಟರಾಗಿ ಕಾಣುತ್ತಾರೆ. ಬ್ರಹ್ಮನು, ವಾಸ್ತವಿಕವಾಗಿ, ಸರ್ವಜ್ಞ, ಮುಕ್ತ ಮತ್ತು

**ಸ್ವರೂಪಾನಂದವನ್ನು ಅನುಭವಿಸುವವನು. ಈ ಬ್ರಹ್ಮನಿಗೆ ತನ್ನ ಜ್ಞಾನವೇ ಇಲ್ಲ ಎಂದು ಅದ್ವೈತದರ್ಶನವು ಹೇಳುತ್ತದೆ.**

**ಭಾವವಿಲಾಸಿನೀ– ಶಿಷ್ಯೋऽಪಿ ಚೋರಸ್ಯ ಚೋರ ಇವ ಚೋರಃ ಶಿಷ್ಯಮಪಿ ಸ್ವಾತ್ಮವಚ್ಚೋರಂ ಮನ್ಯತೇ । ಏತದಪಿ ಮಾಯಿನ್ಯೇವ ದೃಷ್ಟಮಿತ್ಯಾಹ– ಸ್ವಾಜ್ಞಮಿತಿ ॥ ಸರ್ವಜ್ಞಂ ಮುಕ್ತ-ಸ್ವಾನಂದಭೋಕ್ತೃ ಯತ್ತದ್ಬ್ರಹ್ಮ ಸ್ವಾಜ್ಞಂ ಕಿಲ ಜ್ಞಾನೇನಾಪಿ ಶೂನ್ಯಂ ಕಿಲ । ಅತಃ ಶಿಷ್ಯಸ್ಯ ಸ್ವಾತ್ಮ-ವಚ್ಚೋರತ್ವಾಪಾದಕಚೋರವದಯಮಪಿ ವಾದೀತಿ ಭಾವಃ ॥ ೨೪೧ ॥**

**ವಿವರಣೆ–** ಬ್ರಹ್ಮನು ಸರ್ವಜ್ಞ, ಮುಕ್ತ, ಸ್ವರೂಪಾನಂದವನ್ನು ಅನುಭವಿಸುವವನು ಎಂದು ಶ್ರುತಿಗಳು ಹೇಳುತ್ತವೆ. ಇಂತಹ ಬ್ರಹ್ಮನು 'ಅವೇದ್ಯ'= ತನ್ನ ಜ್ಞಾನವೇ ಇಲ್ಲದವನು ಎಂದು ಮಾಯಾವಾದವು ಹೇಳುತ್ತದೆ.

ಈ ನಿಲುವು ಶಿಷ್ಯನನ್ನು ಕಳ್ಳ ಎನ್ನುವ ಕಳ್ಳನ ಸ್ವಭಾವಕ್ಕೆ ಸದೃಶ. ಶಾಸ್ತ್ರಸಿದ್ಧವಾದ ಬ್ರಹ್ಮನ ಮಹಿಮೆಯನ್ನು ಅಪಹರಿಸಿ ಚೋರನಂತಿರುವ ಜ್ಞಾನಶೂನ್ಯನಾದ ಮಾಯಾವಾದಿಯು ತನ್ನಂತೆ ಪರಬ್ರಹ್ಮನೂ ತನ್ನ ಜ್ಞಾನವೇ ಇಲ್ಲದವನು ಎಂದು ಹೇಳುತ್ತಿದ್ದಾನೆ. ಬ್ರಹ್ಮನನ್ನು 'ನಿರ್ವಿಶೇಷ' ಎಂದು ಹೇಳಿ ಸ್ವಾನಂದಾನುಭವರಹಿತ ಎಂದೂ ಹೇಳುತ್ತಿದ್ದಾನೆ.

ಬ್ರಹ್ಮವಿಷಯಕವ್ಯವಹಾರವೇ ಇಲ್ಲದಿರಬೇಕಾದೀತು –

**ಯದಿ ಸ್ವರೂಪವಿಜ್ಞಾನಂ ನೈವ ಸ್ವವಿಷಯಂ ಭವೇತ್ ।**
**ತದಾ ಸ್ವವ್ಯವಹಾರಶ್ಚ ಕಥಂ ತಸ್ಮಾದುದೀರ್ಯತಾಮ್ ॥ ೨೪೨ ॥**

**ಅರ್ಥ–** ಸ್ವರೂಪವಿಜ್ಞಾನಂ = ಬ್ರಹ್ಮನ ಸ್ವರೂಪವೇ ಆದ ಜ್ಞಾನವು, ಸ್ವವಿಷಯಂ= ತನ್ನನ್ನೇ (ಬ್ರಹ್ಮನನ್ನೇ) ವಿಷಯೀಕರಿಸುವ ಜ್ಞಾನವು, ಯದಿ ನೈವ ಭವೇತ್= ಆಗದಿದ್ದರೆ, ತಸ್ಮಾತ್ = ಅಂತಹ ಜ್ಞಾನದಿಂದ, ಸ್ವವ್ಯವಹಾರಶ್ಚ = ಬ್ರಹ್ಮವಿಷಯಕವಾದ ವ್ಯವಹಾರ-ವಾದರೂ, ಕಥಂ = ಹೇಗೆ ಆಗಲು ಸಾಧ್ಯ?, ಉದೀರ್ಯತಾಂ = ಹೇಳಲ್ಪಡಲಿ.

**ಅನುವಾದ–** ಸ್ವರೂಪ ವಿಜ್ಞಾನಕ್ಕೆ (ಬ್ರಹ್ಮಸ್ವರೂಪವೇ ಆದ ವಿಜ್ಞಾನಕ್ಕೆ) 'ಸ್ವ' (ಬ್ರಹ್ಮನು) ವಿಷಯವಾಗದಿದ್ದರೆ 'ಸ್ವ' ದ ಬಗ್ಗೆ (ಬ್ರಹ್ಮನ ಬಗ್ಗೆ) ವ್ಯವಹಾರವಾದರೂ ಹೇಗೆ ನಡೆಯುತ್ತದೆ? ಹೇಳಿ.

**ಭಾವವಿಲಾಸಿನೀ–** ಅಧುನಾ ಸ್ವಾವೇದ್ಯತ್ವಸ್ವವ್ಯವಹಾರಜನಕತ್ವಯೋರೇಕತ್ರಾಸಂಭವೇನ ಪರೋದೀರಿತ- ಸ್ವಪ್ರಕಾಶತ್ವಲಕ್ಷಣಮನುಪಪನ್ನಮಿತ್ಯಾಹ– **ಯದೀತಿ** ॥ ತಸ್ಮಾತ್ ಸ್ವಾವಿಷಯಕ-ಜ್ಞಾನಾತ್ । ಅತಃ ಸ್ವಾವಿಷಯಕತ್ವಂ ಸ್ವವ್ಯವಹಾರಹೇತುತ್ವಮಿತಿ ವಿಶೇಷಣದ್ವಯಮೇಕತ್ರ ನ ಸಂಭವತೀತಿ ಭಾವಃ ॥ ೨೪೨ ॥

ಜ್ಞಾನಸ್ವರೂಪವಾದ ಮಾತ್ರಕ್ಕೆ ವ್ಯವಹಾರಕಾರಣವಾಗಲಾರದು -

**ಘಟಜ್ಞಾನಂ ಮನೋರೂಪಂ ನ ಮನೋವ್ಯವಹಾರಕೃತ್ ।**
**ವಿಷಯಸ್ಯ ಘಟಸ್ಯೈವ ವ್ಯವಹಾರಕೃದಿಷ್ಯತೇ ॥ ೨೪೩ ॥**

**ಅರ್ಥ–** ಮನೋರೂಪಂ = ಮನಸ್ಸಿನ ಪರಿಣಾಮರೂಪವಾದ, ಘಟಜ್ಞಾನಂ = ಘಟವಿಷಯಕವಾದ ಜ್ಞಾನವು, ನ ಮನೋವ್ಯವಹಾರಕೃತ್ = ಮನಸ್ಸಿನ ವ್ಯವಹಾರಕ್ಕೆ ಕಾರಣವಲ್ಲ, ವಿಷಯಸ್ಯ = ಜ್ಞಾನಕ್ಕೆ ವಿಷಯವಾದ, ಘಟಸ್ಯೈವ = ಕೇವಲ ಘಟದ, ವ್ಯವಹಾರಕೃತ್ = ವ್ಯವಹಾರಕ್ಕೆ ಕಾರಣ (ಎಂದು), ಇಷ್ಯತೇ = ಪ್ರಾಮಾಣಿಕರಿಂದ ಅಂಗೀಕರಿಸಲ್ಪಟ್ಟಿದೆ.

**ಅನುವಾದ–** 'ಘಟ' ಜ್ಞಾನವು ಮನಸ್ಸಿನ ಪರಿಣಾಮ. ಆದ್ದರಿಂದ ಇದು ಮನೋರೂಪ. ಆದರೆ ಈ ಜ್ಞಾನದಿಂದ ಮನಸ್ಸಿನ ಬಗ್ಗೆ ವ್ಯವಹಾರವು ನಡೆಯುವುದಿಲ್ಲ. ಜ್ಞಾನಕ್ಕೆ ವಿಷಯವಾದ ಘಟದ ವ್ಯವಹಾರವೇ ಈ ಜ್ಞಾನದಿಂದ ಆಗುತ್ತದೆ. ಪ್ರಮಾಣಗಳನ್ನು ಬಲ್ಲವರು ಹೀಗೆಯೇ ಅಂಗೀಕರಿಸಿದ್ದಾರೆ.

**ಭಾವವಿಲಾಸಿನೀ–** ಸ್ವಾವೇದ್ಯತ್ವೇಽಪಿ ಜ್ಞಾನರೂಪತ್ವಾತ್ ಸ್ವವ್ಯವಹಾರಹೇತುತ್ವಮಿತ್ಯತ ಆಹ- **ಘಟಜ್ಞಾನಮಿತಿ** ॥ ನ ಮನೋವ್ಯವಹಾರಕೃತ್ ಮನೋವ್ಯವಹಾರಕೃನ್ನ। ಕಿಂತು ವಿಷಯಸ್ಯೇತ್ಯಾದಿ ಯೋಜನಾ ॥ ೨೪೩ ॥

**ವಿವರಣೆ–**ಪ್ರಶ್ನೆ: ಆತ್ಮಜ್ಞಾನವು ಆತ್ಮವಿಷಯಕವಲ್ಲ. ಆತ್ಮಸ್ವರೂಪ. ಆತ್ಮಸ್ವರೂಪ ಆದ್ದರಿಂದ ಆ ಜ್ಞಾನದಿಂದ ಆತ್ಮವ್ಯವಹಾರವು ನಡೆಯುತ್ತದೆ?

ಉತ್ತರ : ಇಲ್ಲ. ಘಟಜ್ಞಾನವು ಮನೋವೃತ್ತಿರೂಪ. ಆದ್ದರಿಂದ ಈ ಘಟಜ್ಞಾನವು ಮನೋರೂಪವೇ. ಆದರೂ ಈ ಜ್ಞಾನದಿಂದ ಮನಸ್ಸಿನ ಬಗ್ಗೆ ವ್ಯವಹಾರವು ನಡೆಯುವುದಿಲ್ಲ. ಜ್ಞಾನಕ್ಕೆ ವಿಷಯವಾದ ಘಟದ ಬಗ್ಗೆ ವ್ಯವಹಾರವು ನಡೆಯುತ್ತದೆ. ಜ್ಞಾನ ವಿಷಯವಾಗದ ವಸ್ತುವಿನ ಬಗ್ಗೆ ವ್ಯವಹಾರವು ಜ್ಞಾನದಿಂದ ನಡೆಯುವುದಿಲ್ಲ.

ಬ್ರಹ್ಮವಿಷಯಕಜ್ಞಾನವೇ ಬ್ರಹ್ಮವ್ಯವಹಾರಕ್ಕೆ ಕಾರಣ -

**ಅತಸ್ತದ್ವಿಷಯಜ್ಞಾನಮೇವ ತದ್ವ್ಯವಹಾರಕೃತ್।**
**ಜ್ಞಾನಸ್ವರೂಪತಾಮಾತ್ರಂ ವ್ಯವಹಾರೇಽಪ್ರಯೋಜಕಮ್ ॥ ೨೪೪ ॥**

**ಅರ್ಥ–** ಅತಃ = ಆದ್ದರಿಂದ, ತದ್ವಿಷಯಜ್ಞಾನಮೇವ = ಆಯಾ ವಸ್ತುವನ್ನು ವಿಷಯೀಕರಿಸುವ ಜ್ಞಾನವೇ, ತದ್ ವ್ಯವಹಾರಕೃತ್ = ಆಯಾ ವಸ್ತುವ್ಯವಹಾರಕ್ಕೆ ಕಾರಣವಾಗುತ್ತದೆ. ಜ್ಞಾನಸ್ವರೂಪತಾಮಾತ್ರಂ = ಜ್ಞಾನವು ವಸ್ತುಸ್ವರೂಪ ಎಂಬ

ಕಾರಣದಿಂದಲೇ, ವ್ಯವಹಾರೇ = ನಿರ್ದಿಷ್ಟವಾದ ವ್ಯವಹಾರಕ್ಕೆ, ಅಪ್ರಯೋಜಕಮ್= ಕಾರಣವಾಗಲಾರದು.

**ಅನುವಾದ–** ಆದ್ದರಿಂದ ಜ್ಞಾನಕ್ಕೆ ಯಾವುದು ವಿಷಯವೋ ಅದರ ವ್ಯವಹಾರವು ಆ ಜ್ಞಾನದಿಂದ ಆಗುತ್ತದೆ. ಯಾವುದೇ ಜ್ಞಾನವು ವಸ್ತುಸ್ವರೂಪ ಎಂಬ ಕಾರಣದಿಂದ ಆ ಅರ್ಥದ ಬಗ್ಗೆ ವ್ಯವಹಾರಕ್ಕೆ ಆ ಜ್ಞಾನವು ಕಾರಣವಾಗುವುದಿಲ್ಲ.

**ಭಾವವಿಲಾಸಿನೀ–** ಅತಃ ಮನೋವಿಷಯತ್ವರಹಿತಂ ಮನೋರೂಪಘಟಜ್ಞಾನಸ್ಯ ಮನೋ-ವ್ಯವಹಾರಾಜನಕತ್ವದರ್ಶನಾತ್ । ವ್ಯವಹಾರೇ ಅಪ್ರಯೋಜಕಮಿತಿ ಪದಚ್ಛೇದಃ ॥ ೨೪೪ ॥

**ಮೋಕ್ಷ ಪುರುಷಾರ್ಥವಾಗದೇ ಹೋದೀತು–**

**ಸುಖರೂಪತ್ವಮಪ್ಯೇವಂ ಮನಸಿ ವ್ಯಭಿಚಾರತಃ ।**
**ನ ಫಲಂ ಕಿಂತು ನಿರ್ದುಃಖಸುಖಸ್ಯಾನುಭವಃ ಫಲಮ್ ॥ ೨೪೫ ॥**

**ಅರ್ಥ–** ಏವಂ= ಹೀಗೆಯೇ, ಸುಖರೂಪತ್ವಮಪಿ = (ಮೋಕ್ಷದ) ಸುಖರೂಪತ್ವವೂ, ಮನಸಿ = (ಸುಖರೂಪವಾದ) ಮನಸ್ಸಿನಲ್ಲಿ ವ್ಯಭಿಚಾರತಃ= ವ್ಯಭಿಚಾರವಿರುವುದರಿಂದ, ನ ಫಲಂ= ಫಲವಲ್ಲ, ಕಿಂತು= ಆದರೆ, ನಿರ್ದುಃಖಸುಖಸ್ಯ = ದುಃಖಸ್ಪರ್ಶವಿಲ್ಲದ ಸುಖದ, ಅನುಭವಃ = ಅನುಭವವೇ, ಫಲಂ = ಫಲವು.

**ಅನುವಾದ–** ಮುಕ್ತಿಯು ಸುಖರೂಪ, ಆದ್ದರಿಂದ ಅದು ಫಲ ಎಂದು ಹೇಳುವುದು ತಪ್ಪು. ಮನೋವೃತ್ತಿರೂಪವಾದ ಸುಖವು ಮನಸ್ಸಿನ ಸ್ವರೂಪವೇ. ಆದರೆ ಮನಸ್ಸನ್ನು ಫಲ= ಪುರುಷಾರ್ಥ ಎಂದು ಯಾರೂ ಪರಿಗಣಿಸಿಲ್ಲ. ಆದ್ದರಿಂದ ದುಃಖಲೇಶವಿಲ್ಲದ ಸುಖದ ಅನುಭವವೇ ಫಲ.

**ಭಾವವಿಲಾಸಿನೀ–** ನನು ಸುಖಾನುಭವಾಭಾವೇಽಪಿ ಸುಖರೂಪತ್ವಾನ್ಮುಕ್ತಿಃ ಫಲಂ ಭವಿಷ್ಯತೀತ್ಯತ ಆಹ– **ಸುಖರೂಪತ್ವಮಿತಿ** ॥ ವ್ಯಭಿಚಾರತಃ ಫಲತ್ವವ್ಯಭಿಚಾರಾತ್ । ನ ಫಲಂ ಮುಕ್ತೌ ನ ಫಲಮಿತ್ಯರ್ಥಃ । ಕಿಂ ತರ್ಹಿ ಫಲಮ್? ಇತ್ಯತ ಆಹ– **ಕಿಂತ್ವಿತಿ** ॥ ೨೪೫ ॥

**ವಿವರಣೆ–** ಸುಖಾನುಭವವು ಮುಕ್ತಿಯಲ್ಲಿ ಇರುವುದಿಲ್ಲ. ಮುಕ್ತಿಯು ಸುಖರೂಪ; ಆದ್ದರಿಂದ ಅದು ಫಲ ಎಂದು ಅದ್ವೈತದರ್ಶನವು ಹೇಳುತ್ತದೆ. ಅಂದರೆ **ಮುಕ್ತಿಃ ಫಲಂ, ಸುಖರೂಪತ್ವಾತ್** ಎಂದು ಹೇಳಿದಂತೆ. ಫಲತ್ವವು ಸಾಧ್ಯ. ಸುಖರೂಪತ್ವ ಹೇತು. ಇದು ಸರಿಯಲ್ಲ. ಮನೋವೃತ್ತಿರೂಪವಾದ ಸುಖವು ಜನರಿಗೆ ಆಗುತ್ತದೆ. ಅಂದರೆ ಮನಸ್ಸಿನಲ್ಲಿ ಸುಖರೂಪತ್ವವು ಇದೆ. ಆದರೆ ಸುಖರೂಪವಾದ ಮನಸ್ಸನ್ನು ಪುರುಷಾರ್ಥ= ಫಲ ಎಂದು ಯಾರೂ ಪರಿಗಣಿಸುವುದಿಲ್ಲ. ಆದ್ದರಿಂದ ಮನಸ್ಸಿನಲ್ಲಿ ಫಲತ್ವವು ಇಲ್ಲ. 'ಸಾಧ್ಯ'ವು ಇಲ್ಲದ ಸ್ಥಳದಲ್ಲಿ ಹೇತುವು ಇದೆ. ಆದ್ದರಿಂದ ಈ ಹೇತುವು ವ್ಯಭಿಚಾರಿ. ಈ ಹೇತುವಿನಿಂದ

ಮುಕ್ತಿಯನ್ನು ಫಲ ಎಂದು ಸಾಧಿಸಲು ಆಗುವುದಿಲ್ಲ. ಫಲ ಯಾವುದು? ದುಃಖಲೇಶವಿಲ್ಲದ ಸುಖದ ಅನುಭವವು ಫಲ.

ಆತ್ಮನು ಸುಖಸ್ವರೂಪಿ ಹಾಗೂ ಜ್ಞಾನಸ್ವರೂಪಿಯಾಗಿದ್ದರೂ ಪ್ರಯೋಜನವಿಲ್ಲ -

**ತಥೈವ ಸುಖರೂಪತ್ವಂ ಜ್ಞಾನರೂಪತ್ವಮಾತ್ಮನಿ ।**
**ನ ಫಲಂ ಯನ್ಮನೋ ಬಾಹ್ಯಜ್ಞಾನರೂಪಂ ಸುಖಾತ್ಮಕಮ್ ॥ ೨೪೬ ॥**

**ಅರ್ಥ–** ಆತ್ಮನಿ= ಮುಕ್ತಾತ್ಮನಲ್ಲಿ, ತಥೈವ= ಹಾಗೆಯೇ (ಕೇವಲ ಸುಖರೂಪತ್ವವು ಪ್ರಯೋಜನವಾಗದಿರುವಂತೆ), ಸುಖರೂಪತ್ವಂ ಜ್ಞಾನರೂಪತ್ವಂ = ಸುಖಸ್ವರೂಪತ್ವ ಮತ್ತು ಜ್ಞಾನರೂಪತ್ವಗಳು ಜೊತೆಯಾಗಿ, ನ ಫಲಂ = ಪುರುಷಾರ್ಥವಲ್ಲ. ಯತ್ = ಏಕೆಂದರೆ, ಮನಃ = ಮನಸ್ಸು ಬಾಹ್ಯಜ್ಞಾನರೂಪಂ = ಬಾಹ್ಯಜ್ಞಾನರೂಪವೂ, ಸುಖಾತ್ಮಕಂ= ಸುಖರೂಪವೂ ಆಗಿದೆ.

**ಅನುವಾದ–** ಮುಕ್ತಾತ್ಮನಲ್ಲಿ ಸುಖರೂಪತ್ವ ಮತ್ತು ಜ್ಞಾನರೂಪತ್ವಗಳು ಜೊತೆಯಾಗಿಯೂ ಪುರುಷಾರ್ಥವಲ್ಲ. ಏಕೆಂದರೆ ಮನಸ್ಸೂ ಕೂಡ ಬಾಹ್ಯ ಜ್ಞಾನರೂಪವೂ, ಸುಖರೂಪವೂ ಆಗಿದೆ. (ಆದರೂ ಇಂತಹ ಮನಸ್ಸು ಪುರುಷಾರ್ಥವಲ್ಲ).

**ಭಾವವಿಲಾಸಿನೀ–** ತಥೈವ ಸುಖರೂಪತ್ವವದೇವ । ಆತ್ಮನಿ ಮುಕ್ತಚೈತನ್ಯೇ । ಸುಖರೂಪತ್ವಂ ಜ್ಞಾನರೂಪತ್ವಂ ಚೇತಿ ಮಿಲಿತಮಪಿ ನ ಫಲಮ್ । ಯದ್ ಯಸ್ಮಾನ್ಮನಃ ಬಾಹ್ಯಘಟಾದಿಜ್ಞಾನ-ರೂಪಂ ಸುಖಾತ್ಮಕಂ ವಿಷಯಜನ್ಯಸುಖಸ್ಯ ಮನಃಪರಿಣಾಮರೂಪತ್ವಾತ್ ಸುಖರೂಪಂ ಚ ಭವತಿ । ತಸ್ಮಾನ್ಮುಕ್ತೇರಪಿ ಸುಖರೂಪತ್ವಂ ಜ್ಞಾನರೂಪತ್ವಂ ನ ಫಲಮಿತಿ ಪೂರ್ವೇಣಾನ್ವಯಃ । ಬಾಹ್ಯ-ಜ್ಞಾನರೂಪಮಿತ್ಯುಕ್ತ್ಯಾ ಯಥಾ ತಸ್ಯ ಜ್ಞಾನಸ್ಯ ಸುಖವಿಷಯತ್ವಾಭಾವಾನ್ನ ಫಲತಾ, ತಥಾ ಬ್ರಹ್ಮ-ಸ್ವರೂಪಭೂತಜ್ಞಾನಸ್ಯಾಪಿ ಸ್ವರೂಪಭೂತಸುಖಾವಿಷಯತ್ವೇ ಕಥಂ ಫಲತೇತಿ ಸೂಚಯತಿ ॥ ೨೪೬॥

**ವಿವರಣೆ–** ಆತ್ಮನು ಸುಖರೂಪನಾದರೂ ಆ ಸ್ಥಿತಿಯು ಪುರುಷಾರ್ಥವಲ್ಲ ಎಂದು ಹೇಳಲಾಯಿತು.

**ಪ್ರಶ್ನೆ:** ಆತ್ಮನಲ್ಲಿ ಸುಖರೂಪತ್ವ ಮತ್ತು ಜ್ಞಾನರೂಪತ್ವಗಳು ಇವೆ. ಇವೆರಡರ ಸಮಾವೇಶವು ಪುರುಷಾರ್ಥ?

**ಉತ್ತರ :** ಇಲ್ಲ. ಮನಸ್ ಕೂಡ ಸುಖರೂಪ ಮತ್ತು ಜ್ಞಾನರೂಪವೇ. ಇವೆರಡರ ಸಮಾವೇಶವಿದ್ದರೂ ಮನಸ್ ಪುರುಷಾರ್ಥವಲ್ಲ. ಆದ್ದರಿಂದ ಸುಖರೂಪತ್ವ-ಜ್ಞಾನರೂಪತ್ವಗಳ

ಸಮಾವೇಶದಿಂದ ಆತ್ಮಸ್ವರೂಪವಾದ ಮುಕ್ತಿಯು ಪುರುಷಾರ್ಥ ಎಂದು ಸಾಧಿಸಲು ಆಗುವುದಿಲ್ಲ.

**ಯಥಾ ಮಾನಸಸೌಖ್ಯಸ್ಯ ಸಾಕ್ಷಿಣಾನುಭವಃ ಫಲಮ್ ।**
**ಸಂಸಾರೇ ಮುಕ್ತಿಕಾಲೇ ಚ ಫಲಂ ವಾಚ್ಯಂ ತಥೈವ ಹಿ ॥ ೨೪೭ ॥**

**ಅರ್ಥ–** ಸಂಸಾರೇ = ಸಂಸಾರಾವಸ್ಥೆಯಲ್ಲಿ, ಮಾನಸಸೌಖ್ಯಸ್ಯ = ಮಾನಸಿಕಸುಖದ, ಸಾಕ್ಷಿಣಾ = ಸಾಕ್ಷೀಂದ್ರಿಯದಿಂದ, ಅನುಭವಃ= ಅನುಭವವು, ಯಥಾ ಫಲಂ= ಹೇಗೆ ಫಲವೋ, ತಥೈವ= ಹಾಗೆಯೇ, ಮುಕ್ತಿಕಾಲೇ ಚ= ಮುಕ್ತಿಯ ಸಮಯದಲ್ಲೂ, ಸಾಕ್ಷಿಣಾ ಅನುಭವಃ = ಸಾಕ್ಷೀಂದ್ರಿಯದಿಂದ ಆಗುವ (ಸ್ವರೂಪ ಸುಖದ) ಅನುಭವವೇ, ಫಲಂ = ಫಲವು.

**ಅನುವಾದ–** ಸಂಸಾರಾವಸ್ಥೆಯಲ್ಲಿ ಸಾಕ್ಷೀಂದ್ರಿಯದಿಂದ ಮಾನಸ ಸುಖದ ಅನುಭವವೇ ಫಲ. ಹೀಗೆಯೇ ಮುಕ್ತಿಕಾಲದಲ್ಲೂ ಸಾಕ್ಷೀಂದ್ರಿಯದಿಂದ ಸ್ವರೂಪಸುಖದ ಅನುಭವವು ಫಲ ಎಂದೇ ಹೇಳಬೇಕು.

**ಭಾವವಿಲಾಸಿನೀ- ತರ್ಹಿ ಕಥಂ ಸುಖಸ್ಯ ಫಲತೇತ್ಯತಸ್ಸದೃಷ್ಟಾಂತಂ ಫಲತ್ವಪ್ರಕಾರಂ ದರ್ಶಯತಿ- ಯಥೇತಿ । ಸಂಸಾರೇ ಮಾನಸಸೌಖ್ಯಸ್ಯ ಸಾಕ್ಷಿಣಾನುಭವಃ ಮಾನಸಸುಖವಿಷಯಕಸಾಕ್ಷ್ಯನುಭವ ಇತಿ ಯಾವತ್ । ಯಥಾ ಫಲಂ ತಥೈವ ಸ್ವರೂಪಭೂತ ಸುಖವಿಷಯಕಾನುಭವ ಏವ ಫಲಂ ವಾಚ್ಯಮಿತಿ ಸಂಬಂಧಃ ॥ ೨೪೭ ॥**

**ವಿವರಣೆ–** ಸಂಸಾರದೆಶೆಯಲ್ಲಿ ಮನಸ್ಸಿಗೆ ಭೋಗವಸ್ತುಗಳ ಸಂಬಂಧದಿಂದ ಅದರಲ್ಲಿ ಪರಿಣಾಮವಾಗುತ್ತದೆ. ಈ ಪರಿಣಾಮಕ್ಕೆ ಮನೋವೃತ್ತಿ ಎಂದು ಹೆಸರು. ಈ ಮನೋವೃತ್ತಿಯೇ ಸುಖ. ಈ ಸುಖದ ಅನುಭವವು ಸುಖಾನುಭವಕ್ಕಾಗಿ ಮಾಡುವ ಎಲ್ಲ ಪ್ರಯತ್ನಗಳ ಫಲ. ಸುಖದ ಉತ್ಪತ್ತಿಯೇ ಫಲವಲ್ಲ. ಹೀಗೆಯೇ ಮುಕ್ತಿದೆಶೆಯಲ್ಲಿ ಮುಕ್ತಜೀವನಿಗೆ ತನ್ನ ಸ್ವರೂಪ ಸುಖದ ಅನುಭವವು ಫಲ. ಸುಖದ ಇರುವಿಕೆಯೇ ಫಲವಲ್ಲ.

**ನ ಚೇದಪುರುಷಾರ್ಥತ್ವಂ ಮುಕ್ತೇಃ ಸ್ಯಾದುಕ್ತವರ್ತ್ಮನಾ ।**
**ತಸ್ಮಾತ್ ಸ್ವರೂಪಾನಂದಸ್ಯ ನಾನುಭೂತಿಃ ಕಥಂ ತದಾ ॥ ೨೪೮ ॥**

**ಅರ್ಥ–** ನ ಚೇತ್ = ಸುಖಾನುಭವವು ಇಲ್ಲದಿದ್ದರೆ, ಉಕ್ತವರ್ತ್ಮನಾ = ಹಿಂದಿನ ಶ್ಲೋಕಗಳಲ್ಲಿ ಹೇಳಿದಂತೆ, ಮುಕ್ತೇಃ = ಮುಕ್ತಿಗೆ, ಅಪುರುಷಾರ್ಥತ್ವಂ = ಪುರುಷಾರ್ಥತ್ವದ ಅಭಾವವು, ಸ್ಯಾತ್ = ಉಂಟಾದೀತು. ತಸ್ಮಾತ್ = ಆದ್ದರಿಂದ, ತದಾ= ಆಗ (ಮುಕ್ತಿಯಲ್ಲಿ), ಸ್ವರೂಪಾನಂದಸ್ಯ = ಸ್ವರೂಪಸುಖದ, ಅನುಭೂತಿಃ = ಅನುಭವವು, ಕಥಂ ನ= ಹೇಗೆ ತಾನೆ ಆಗುವುದಿಲ್ಲ?

**ಅನುವಾದ–** ಮೋಕ್ಷದಲ್ಲಿ ಸ್ವರೂಪ ಸುಖದ ಅನುಭವವಿಲ್ಲದಿದ್ದರೆ, ಹಿಂದಿನ ಶ್ಲೋಕಗಳಲ್ಲಿ ಹೇಳಿದಂತೆ ಮೋಕ್ಷವು ಪುರುಷಾರ್ಥವೇ ಆಗಲಾರದು. ಆದ್ದರಿಂದ ಮೋಕ್ಷದಲ್ಲಿ ಸ್ವರೂಪಸುಖದ ಅನುಭವ ಆತ್ಮನಿಗೆ ಹೇಗೆ ತಾನೇ ಆಗುವುದಿಲ್ಲ.

**ಭಾವವಿಲಾಸಿನೀ–** ಏತದನಂಗೀಕಾರೇ ಮುಕ್ತೇರಪುರುಷಾರ್ಥತ್ವಂ ಸ್ಯಾದಿತ್ಯಾಹ- **ನ ಚೇದಿತಿ**। ತದಾ ಮುಕ್ತೌ ॥ ೨೪೮ ॥

ಸ್ವಪ್ರಕಾಶತ್ವವೆಂದರೆ ಸ್ವವಿಷಯಪ್ರಕಾಶತ್ವವೇ -

ಸ್ವಗೋಚರತ್ವಮೇವಾತೋ ವಕ್ತವ್ಯಾ ಸ್ವಪ್ರಕಾಶತಾ ।
ಆನರ್ಥಕ್ಯಂ ನ ಚೇತ್ ಮುಕ್ತೇಃ ಸ್ವಪ್ರಕಾಶಪದಸ್ಯ ಚ ॥ ೨೪೯ ॥

**ಅರ್ಥ–** ಅತಃ = ಮುಕ್ತಿಯು ಪುರುಷಾರ್ಥವಾದ್ದರಿಂದ, ಸ್ವಪ್ರಕಾಶತಾ = ಸ್ವಪ್ರಕಾಶತ್ವವೆಂದರೆ, ಸ್ವಗೋಚರತ್ವಮೇವ = ತನ್ನ ಜ್ಞಾನಕ್ಕೆ ತಾನು ವಿಷಯವಾಗುವಿಕೆ ಎಂದೇ, ವಕ್ತವ್ಯಾ = ಹೇಳಲ್ಪಡಬೇಕು. ನ ಚೇತ್ = ಸುಖ ಮತ್ತು ಜ್ಞಾನಗಳು ಸ್ವರೂಪಜ್ಞಾನಕ್ಕೆ ವಿಷಯವಾಗದೇ ಹೋದರೆ, ಮುಕ್ತೇಃ = ಮೋಕ್ಷಕ್ಕೆ, ಚ = ಮತ್ತು, ಸ್ವಪ್ರಕಾಶಪದಸ್ಯ = ಸ್ವಪ್ರಕಾಶಪದಕ್ಕೆ, ಆನರ್ಥಕ್ಯಂ = (ಕ್ರಮವಾಗಿ) ಅಪುರುಷಾರ್ಥತ್ವ ಮತ್ತು ಅರ್ಥ-ಶೂನ್ಯತ್ವವು ಭವೇತ್= ಉಂಟಾದೀತು.

**ಅನುವಾದ–** ಆದ್ದರಿಂದ 'ಸ್ವಪ್ರಕಾಶತಾ' ಎಂದರೆ ತಾನೇ ವಿಷಯವಾಗಿರುವ ಜ್ಞಾನ ಎಂದೇ ಹೇಳಬೇಕು. ಹೀಗೆ ಹೇಳದಿದ್ದರೆ ಮುಕ್ತಿಯು ಪುರುಷಾರ್ಥವಾಗಲಿಕ್ಕಿಲ್ಲ. 'ಸ್ವಪ್ರಕಾಶ' ಪದಕ್ಕೆ ಯೋಗ್ಯವಾದ ಅರ್ಥವು ಇಲ್ಲವಾದೀತು.

**ಭಾವವಿಲಾಸಿನೀ–** ಅತಃ ಮುಕ್ತೇಃ ಪುರುಷಾರ್ಥತಾಯಾ ಆವಶ್ಯಕತ್ವಾತ್ । ಸ್ವಗೋಚರತ್ವಂ ಸ್ವವಿಷ-ಯಕತ್ವಮ್ । ಆನರ್ಥಕ್ಯಮ್ ಅಪುರುಷಾರ್ಥತ್ವಂ ಪದಯೋಗ್ಯಾರ್ಥಶೂನ್ಯತ್ವಂ ಚ ॥೨೪೯॥

**ವಿವರಣೆ–** (1) ಅದ್ವೈತದರ್ಶನವು ಹೇಳುವ ಸುಖ ಮತ್ತು ಜ್ಞಾನಗಳು ಆತ್ಮನ ಜ್ಞಾನಕ್ಕೆ ವಿಷಯವಾಗದೇ ಹೋದರೆ, ಹಿಂದಿನ ಶ್ಲೋಕಗಳಲ್ಲಿ ಹೇಳಿದಂತೆ ಮೋಕ್ಷದಲ್ಲಿ ಸ್ವರೂಪಾನಂದದ ಅನುಭವವೇ ಇಲ್ಲವಾದ್ದರಿಂದ ಅದು ಪುರುಷಾರ್ಥವಾಗದೇ ಹೋದೀತು. ಮತ್ತು ಸ್ವಪ್ರಕಾಶಪದವು ಸ್ವವಿಷಯಕಪ್ರಕಾಶವೆಂಬ ಪದಲಬ್ಧವಾದ ಯೋಗ್ಯವಾದ ಅರ್ಥರಹಿತವಾಗಬೇಕಾದೀತು. ಆದ್ದರಿಂದ ಸ್ವಪ್ರಕಾಶತ್ವವೆಂದರೆ, ಸ್ವವಿಷಯಪ್ರಕಾಶತ್ವ ಎಂದೇ ಹೇಳಬೇಕು.

(2) ತನ್ನನ್ನೇ ವಿಷಯೀಕರಿಸುವ ಜ್ಞಾನವುಳ್ಳವನು ಸ್ವಪ್ರಕಾಶ. ಇವನ ಭಾವವು ಸ್ವಪ್ರಕಾಶತಾ 'ಸ್ವಪ್ರಕಾಶ'ನ ಭಾವ ಜ್ಞಾನವೇ.

ಸ್ವಸ್ಯ ಪ್ರಕಾಶೋ ಯಸ್ಯ ಸ್ಯಾತ್ ಸ್ವಪ್ರಕಾಶಂ ತದೇವ ಹಿ ।
ಗೀತಾವಾಕ್ಯೇ ಕರ್ಮತಾಯಾ ವ್ಯಕ್ತೋಕ್ತಿಶ್ಚ ವಿರುಧ್ಯತೇ ।
ಹಾರ್ದಂ ಹಾಲಾಹಲಂ ತಸ್ಮಾತ್ ಸ್ವಸ್ಯೈವ ಕ್ಲೇಶಕಾರಕಮ್
॥ ೨೫೦ ॥

**ಅರ್ಥ–** ಯಸ್ಯ= ಯಾರಿಗೆ, ಸ್ವಸ್ಯ= ತನ್ನ, ಪ್ರಕಾಶಃ = ಜ್ಞಾನವು, ಸ್ಯಾತ್= ಆಗುವುದೋ, ತದೇವ= ಅದೇ, ಸ್ವಪ್ರಕಾಶಂ= ಸ್ವಪ್ರಕಾಶ ಶಬ್ದದಿಂದ ವಾಚ್ಯವು. ಹಿ= ಇದು ಶಾಸ್ತ್ರಸಿದ್ಧವು (ಅಷ್ಟೇ ಅಲ್ಲದೆ), ಗೀತಾವಾಕ್ಯೇ= ಭಗವದ್‌ಗೀತೆಯ ವಾಕ್ಯದಲ್ಲಿ, ಕರ್ಮತಾಯಾಃ= (ಆತ್ಮನಿಗೆ) ಕರ್ಮತ್ವದ, ವ್ಯಕ್ತೋಕ್ತಿಃ ಚ= ಸ್ಪಷ್ಟವಾದ ಉಕ್ತಿಯು, ವಿರುಧ್ಯತೇ= ವಿರುದ್ಧವಾಗುತ್ತದೆ. ತಸ್ಮಾತ್= ಆದ್ದರಿಂದ ತನ್ನ ಸುಖ ಮತ್ತು ಜ್ಞಾನಗಳನ್ನು ವಿಷಯೀಕರಿಸುವುದು ಅವಶ್ಯವಾದ್ದರಿಂದ, ಹಾರ್ದಂ= ಹೃದಯದಲ್ಲಿರುವ, ಹಾಲಾಹಲಂ= ಹಾಲಾಹಲವಿಷವು, ಸ್ವಸ್ಯೈವ= ತನಗೇ, ಕ್ಲೇಶಕಾರಕಂ= ಕ್ಲೇಶಕರ.

**ಅನುವಾದ–** ಯಾರಿಗೆ ತನ್ನ ಜ್ಞಾನವು ಆಗುವುದೋ ಅವನು 'ಸ್ವಪ್ರಕಾಶ'. ಭಗವದ್ಗೀತೆ (೧೦.೧೫) ಯಲ್ಲಿ ಕರ್ತೃವಿಗೇ ಕರ್ಮತ್ವವನ್ನು ಸ್ಪಷ್ಟವಾಗಿ ಹೇಳಲಾಗಿದೆ. ಇದನ್ನು ನಿರಾಕರಿಸುವವರಿಗೆ ಈ ಗೀತಾವಾಕ್ಯದ ವಿರೋಧವೂ ಇದೆ. ಆದ್ದರಿಂದ ತನ್ನ ಹೃದಯದಲ್ಲಿರುವ ಹಾಲಾಹಲವು ತನಗೇ ಕ್ಲೇಶಕರ.

**ಭಾವವಿಲಾಸಿನೀ–** ಕೋऽಸೌ ಪದಲಭ್ಯಾರ್ಥ ಇತ್ಯತಸ್ತಂ ಸ್ಮಾರಯನ್ ತದನಂಗೀಕಾರೇ ಪ್ರಾಗುಕ್ತಗೀತಾವಿರೋಧಂ ಚ ಸ್ಮಾರಯತಿ– **ಸ್ವಸ್ಯೇತಿ** ॥ ತಸ್ಮಾನ್ಮುಕ್ತಾನಂದಸ್ಯ ಸ್ವಸಾಕ್ಷಿಣಾ ವಿಷಯೀಕರಣಾವಶ್ಯಂಭಾವಾತ್ । ಹಾರ್ದಂ ಹೃದಿಸ್ಥಮ್ । ಹಾಲಾಹಲಂ ಹಾಲಾಹಲಪ್ರಾಯಮ್ । ಸ್ವಾವಿಷಯತ್ವಂ ಸ್ವಸ್ಯೈವ ಕ್ಲೇಶಸ್ಯ ಮುಕ್ತೇರಮುಕ್ತಿತ್ವಸಂಪಾದನಕ್ಲೇಶಸ್ಯ ಕಾರಕಮಭೂದಿತ್ಯರ್ಥಃ । ಯಥಾ ಸ್ವೋದರಸ್ಥವಿಷೇಣ ಸ್ವಸ್ಯೈವ ಹಾನಿರ್ಭವತಿ ತಥೇತಿ ಭಾವಃ ॥ ೨೫೦ ॥

**ವಿವರಣೆ –** 'ಸ್ವಪ್ರಕಾಶ' ಪದದ ಅರ್ಥವನ್ನು ನೆನಪಿಸುತ್ತಾ, ಅದನ್ನು ಅಂಗೀಕರಿಸದಿದ್ದರೆ ಹಿಂದೆ ಹೇಳಿದ ಭಗವದ್ಗೀತಾ (10.15) ಶ್ಲೋಕದ ವಿರೋಧವನ್ನೂ ನೆನಪಿಸಿದ್ದಾರೆ. ಮುಕ್ತಾತ್ಮನಿಗೆ ತನ್ನ ಸ್ವರೂಪವೇ ಆದ ಆನಂದದ ಅನುಭವವು ಆಗುತ್ತದೆ ಎಂದು ಅಂಗೀಕರಿಸದಿದ್ದರೆ ಮುಕ್ತಿಯು ಅಮುಕ್ತಿಯಾಗುವ ಪ್ರಸಂಗವು ಉಂಟಾಗುತ್ತದೆ. ಒಬ್ಬನ ಹೊಟ್ಟೆಯಲ್ಲಿರುವ ವಿಷವು ಅವನಿಗೇ ಹಾನಿಯನ್ನು ಮಾಡುತ್ತವೆ. 'ಮುಕ್ತಾತ್ಮನಿಗೆ ಆನಂದಾನುಭವವು ಇಲ್ಲ' ಎಂಬ ಚಿಂತನೆಯೂ ಹೀಗೆ ಚಿಂತಿಸುವವನ ಮನಸ್ಸಿನಲ್ಲಿರುವ ಹಾಲಾಹಲವೇ. ಇದರಿಂದ ತನ್ನ ಮುಕ್ತಿಯೇ ಅಮುಕ್ತಿಯಾಗುವ ಪ್ರಸಂಗ.

ಶಬಲಬ್ರಹ್ಮನ ನಿರಾಕರಣೆ -

**ನಿತ್ಯಶುದ್ಧಂ ತು ಯದ್ ಬ್ರಹ್ಮ ಪರಬ್ರಹ್ಮ ತದೇವ ಹಿ ।**
**ನಿತ್ಯಶುದ್ಧಶ್ಚ ಭಗವಾನ್ ನಿತ್ಯಮುಕ್ತೋ ಮಮ ಪ್ರಭುಃ ।**
**ಬಂಧಮೂಲೋ ಯತೋ ದೋಷೋ ಬಂಧಾಭಾವೇ ನ ಕಶ್ಚನ**
**॥ ೨೫೧ ॥**

**ಅರ್ಥ–** ಯದ್ ಬ್ರಹ್ಮ= ಯಾವ ಬ್ರಹ್ಮವು, ನಿತ್ಯಶುದ್ಧಂ= ಯಾವಾಗಲೂ ಶುದ್ಧವೋ, ತದ್ ಏವ= ಅದೇ, ಪರಬ್ರಹ್ಮ= ಪರಬ್ರಹ್ಮ, ಹಿ= ಇದು ಪ್ರಸಿದ್ಧ. ಮಮ ಪ್ರಭುಃ= ನನ್ನ ಪ್ರಭು (ಸ್ವಶಕ್ತಿಯಿಂದಲೇ ದೋಷದೂರನಾದ)ವಾದ, ಭಗವಾನ್= ಗುಣಪೂರ್ಣನಾದ ಹರಿಯು, ನಿತ್ಯಶುದ್ಧಃ= ಯಾವಾಗಲೂ ಶುದ್ಧ, ಚ= ಮತ್ತು, ನಿತ್ಯಮುಕ್ತಃ= ನಿತ್ಯಮುಕ್ತನು. ಯತಃ= ಏಕೆಂದರೆ, ದೋಷಃ= ದೋಷವು, ಬಂಧಮೂಲಃ= ಬಂಧದಿಂದ ಉಂಟಾಗುತ್ತದೆ. ಬಂಧಾಭಾವೇ= ಬಂಧವಿಲ್ಲದಿದ್ದರೆ, ನ ಕಶ್ಚನ= ಯಾವ ದೋಷವೂ ಇಲ್ಲ.

**ಅನುವಾದ–** ಯಾವ ಬ್ರಹ್ಮವು ನಿತ್ಯಶುದ್ಧವೋ ಅದೇ ಪರಬ್ರಹ್ಮ. ಇದು ಪ್ರಮಾಣಸಿದ್ಧ. ನನ್ನ ಪ್ರಭುವಾದ, ಗುಣಪೂರ್ಣನಾದ ಶ್ರೀಹರಿಯು ನಿತ್ಯಶುದ್ಧ ಮತ್ತು ನಿತ್ಯಮುಕ್ತ. ಏಕೆಂದರೆ ದೋಷಗಳಿಗೆ ಬಂಧವೇ ಮೂಲಕಾರಣ. ಬಂಧವಿಲ್ಲದಿದ್ದರೆ ಯಾವ ದೋಷವೂ ಇಲ್ಲ.

**ಭಾವವಿಲಾಸಿನೀ–** ಇದಾನೀಂ ವಿಷ್ಣ್ವಾಖ್ಯಪರಬ್ರಹ್ಮಣಃ ಪರೋದೀರಿತಂ ಯಚ್ಛಬಲತ್ವಾಖ್ಯಾ ಪರಬ್ರಹ್ಮತ್ವಮ್, ತದಪಿ ಯುಕ್ತ್ಯಾ ನಿರಾಕರೋತಿ– ನಿತ್ಯಶುದ್ಧಮಿತಿ ॥ ಯದ್ ಬ್ರಹ್ಮ ನಿತ್ಯಶುದ್ಧಮ್ ಅಜ್ಞಾನಸಂಸಾರಾದಿದೋಷಾಶಬಲಿತಮ್, ತದೇವ ಪರಬ್ರಹ್ಮ । ಹೀತ್ಯನೇನ ಶ್ರುತ್ಯಾದಿಪ್ರಸಿದ್ಧಿಂ ಸೂಚಯತಿ । ಮಮ ಪ್ರಭುರ್ಭಗವಾನ್ನಿತ್ಯಮುಕ್ತ ಇತಿ ಕೃತ್ವಾ ನಿತ್ಯಶುದ್ಧಶ್ಚ ವ್ಯತಿರೇಕೇಣ ದೇವದತ್ತವತ್। ನಿತ್ಯಶುದ್ಧತ್ವಾಚ್ಚ ವ್ಯತಿರೇಕೇಣ ತದ್ವದೇವ ಪರಬ್ರಹ್ಮ ಚೇತಿ ಯಾವತ್ । ನಿತ್ಯಮುಕ್ತತ್ವಂ ಚ ಸರ್ವದಾ ಸಂಸಾರರಹಿತಚೇತನತ್ವಮ್ । ನಿತ್ಯಶುದ್ಧತ್ವಂ ಚಾಜ್ಞಾನಭ್ರಮಾದಿ-ದೋಷರಹಿತಚೇತನತ್ವಮಿತಿ ನ ಕಶ್ಚಿತ್ ಕ್ಷುದ್ರೋಪದ್ರವಃ। ಮುಕ್ತಸ್ಯಾಜ್ಞಾನಾದಿದೋಷಶೂನ್ಯತ್ವಂ ಸರ್ವವಾದಿಸಂಪ್ರತಿಪನ್ನಮಿತಿ ನಾಪ್ರಯೋಜಕತ್ವಶಂಕಾ ಚ । ತದೇವ ಸ್ಪಷ್ಟಯತಿ– ಬಂಧಮೂಲ ಇತಿ ॥ ೨೫೧ ॥

**ವಿವರಣೆ–** ನಿತ್ಯಶುದ್ಧಂ= ಸ್ವಸಾಮರ್ಥ್ಯದಿಂದಲೇ ಅಜ್ಞಾನ, ಪ್ರಕೃತಿಬಂಧ ಮೊದಲಾದ ದೋಷ ಸಂಬಂಧವಿಲ್ಲದ, ಹಿ= ಪ್ರಸಿದ್ಧ.

'ನಿರ್ದೋಷಂ ಹಿ ಸಮಂ ಬ್ರಹ್ಮ' - ಭಗವದ್ಗೀತೆ ೫.೧೯.

'ನಿರನಿಷ್ಟೋ ನಿರವದ್ಯಃ'

ನಿತ್ಯಮುಕ್ತಃ ಸ್ವಸಾಮರ್ಥ್ಯದಿಂದಲೇ ಹುಟ್ಟು-ಸಾವುಗಳಿಗೆ ಒಳಗಾಗದ ಚೇತನ.

ವಿಷ್ಣುವನ್ನು ಅಪರಬ್ರಹ್ಮ(ಶಬಲಬ್ರಹ್ಮ) ಎಂದು ಅದ್ವೈತದರ್ಶನವು ಹೇಳುತ್ತದೆ. 251-260 ರವರೆಗೆ ಇದನ್ನು ವಿಮರ್ಶಿಸುತ್ತಾರೆ.

**ದೋಷವಿಶಿಷ್ಟನು ಪರಬ್ರಹ್ಮನಾಗಲಾರ -**

**ತವ ಬ್ರಹ್ಮತ್ವವಿದ್ಯಾಖ್ಯದೋಷೇಣ ಕಲಿಲಂ ಸದಾ ।**
**ಅನಾದಿಕಾಲಮಾರಭ್ಯ ದೇಹೇದೇಹೇ ಚ ಸಂಸರತ್ ॥ ೨೫೨ ॥**

**ಅರ್ಥ**–ತವ = ನಿಮ್ಮ(ಅದ್ವೈತಿಗಳ) ಬ್ರಹ್ಮತು = ಬ್ರಹ್ಮನಾದರೂ, ಅವಿದ್ಯಾಖ್ಯದೋಷೇಣ = ಅಜ್ಞಾನವೆಂಬ ದೋಷದಿಂದ, ಸದಾ = ಯಾವಾಗಲೂ, ಕಲಿಲಂ = ಕೊಳೆಯಾಗಿದ್ದಾನೆ. ಅನಾದಿಕಾಲಮ್ ಆರಭ್ಯ= ಅನಾದಿಕಾಲದಿಂದ, ದೇಹೇದೇಹೇ = ಪ್ರತಿದೇಹದಲ್ಲಿ, ಸಂಸರತ್= ಹೋಗುವವನು. (ದೋಷದಿಂದ ಕೂಡಿರುವನು).

**ಅನುವಾದ**– ನಿಮ್ಮ (ಅದ್ವೈತದರ್ಶನದ) ಬ್ರಹ್ಮನು ಯಾವಾಗಲೂ ಅವಿದ್ಯಾ ಎಂಬ ದೋಷಕ್ಕೆ ಒಳಗಾಗಿ ಕೊಳೆಯಾಗಿದ್ದಾನೆ. ಅನಾದಿಯಿಂದಲೂ ಎಲ್ಲ ದೇಹಗಳಲ್ಲಿ ಸಂಸಾರಿಯಾಗಿದ್ದಾನೆ.

**ಭಾವವಿಲಾಸಿನೀ**– ಸ್ವಾಭಿಮತಬ್ರಹ್ಮಣಃ ಪರಬ್ರಹ್ಮತಾಂ ಪ್ರಸಾಧ್ಯ ಪರಾಭಿಮತಬ್ರಹ್ಮಣಸ್ತದಭಾವಂ ಪರಪ್ರಕ್ರಿಯಯೈವೋಪಪಾದಯತಿ– **ತವ ಬ್ರಹ್ಮ ತ್ವಿತಿ**॥ ಬಹುಜೀವವಾದಿಪಕ್ಷಮಭಿಪ್ರೇತ್ಯ ಸದೇತ್ಯುಕ್ತಮ್ । ಏಕಸ್ಯಾಜ್ಞಾನನಿವೃತ್ತ್ಯಾಖ್ಯಮುಕ್ತಾವಪ್ಯಪರಸ್ಮಿನ್ನಜ್ಞಾನಾನುವರ್ತನಾದಿತಿ ಭಾವಃ । ಅತ ಏವ ಭವಪಂಕೇನ ಮಲಿನಮ್ । ನನು ಸಂಸಾರಸ್ಯ ಪರಿಚ್ಛಿನ್ನತ್ವೇನಾಪರಿಚ್ಛಿನ್ನಸ್ಯ ಬ್ರಹ್ಮಣಃ ಕ್ವಚಿದಂಶೇ ಶುದ್ಧತಾಽಪ್ಯಸ್ತೀತಿ ಚೇತ್, ಕಿಮನೇನ? ನಹಿ ಪಾದೇ ವೇದನವಾನನ್ಯತ್ರ ತದಭಾವವಾನ್ ಪುರುಷೋ ವೇದನಾಮುಕ್ತ ಇತ್ಯುಚ್ಯತೇ । ಅನ್ಯಥಾ ತಾರ್ಕಿಕಮತೇ ವ್ಯಾಪ್ತತ್ವೇನಾಭಿಮತಜೀವಾನಾಂ ಕ್ವಚಿದ್ದೇಹವತ್ತ್ವಮಾತ್ರೇಣ ಕಥಂ ಬದ್ಧತಾ? ತದ್ ಬ್ರಹ್ಮತ್ವೇನ ಪರಾಭಿಪ್ರೇತಚೈತನ್ಯಮ್ ॥ ೨೫೨-೨೫೩ ॥

**ವಿವರಣೆ** – (1) ಅದ್ವೈತದರ್ಶನವನ್ನು ಎತ್ತಿಹಿಡಿಯುವ ಕೆಲವರು ಒಂದೇ ಜೀವವನ್ನು ಅಂಗೀಕರಿಸುತ್ತಾರೆ. ಕೆಲವರು ಬಹುಜೀವಗಳನ್ನು ಅಂಗೀಕರಿಸುತ್ತಾರೆ. ಬಹುಜೀವಗಳಿದ್ದರೆ, ಒಬ್ಬನಿಗೆ ಮುಕ್ತಿಯಾದರೂ ಬೇರೆ ಜೀವಗಳು ಇರುತ್ತವೆ. ಜೀವ ಎಂದರೆ ಅವಿದ್ಯೆಯನ್ನು ಹೊಂದಿರುವ ಬ್ರಹ್ಮನೇ. ಎಲ್ಲ ಕಾಲದಲ್ಲೂ ಜೀವಗಳು ಇದ್ದೇ ಇರುತ್ತವೆ; ಆದ್ದರಿಂದ ಬ್ರಹ್ಮನಿಗೆ 'ಸದಾ' ಅವಿದ್ಯಾ ದೋಷವಿರುತ್ತದೆ.

(2) ಬ್ರಹ್ಮ ಅಪರಿಮಿತ. ಸಂಸಾರಕ್ಕೆ ಮಿತಿ ಇದೆ. ಆದ್ದರಿಂದ ಸಂಸಾರಕ್ಕೆ ಒಳಗಾಗದ ಬ್ರಹ್ಮನ ಭಾಗವೂ ಇರುತ್ತದೆ. ಈ ಭಾಗವು ಯಾವಾಗಲೂ ಶುದ್ಧ? ಇಲ್ಲ. ಪಾದದಲ್ಲಿ ಮಾತ್ರ ನೋವು ಇರುವ ವ್ಯಕ್ತಿಯನ್ನು ವೇದನಾರಹಿತ ಎಂದು ಯಾರೂ ಪರಿಗಣಿಸುವುದಿಲ್ಲ.

**ಭವಪಂಕೇನ ಮಲಿನಂ ಕಥಂ ಶುದ್ಧಂ ಭವೇದ್ ವದ ।**
**ಬ್ರಹ್ಮತ್ವಮಾಗ್ರಹಾದೇವ ಜೀವಚೈತನ್ಯಮೇವ ತತ್ ॥ ೨೫೩ ॥**

**ಅರ್ಥ–** ಭವಪಂಕೇನ = ಸಂಸಾರ ಎಂಬ ಕೆಸರಿನಿಂದ, ಮಲಿನಂ = ಕೊಳೆಯಾದ (ಬ್ರಹ್ಮ ಚೇತನವು), ಕಥಂ = ಹೇಗೆ, ಶುದ್ಧಂ ಭವೇತ್? = ಪರಿಶುದ್ಧವಾದೀತು? ವದ = ಹೇಳು. ಆಗ್ರಹಾದೇವ = ನಿನ್ನ ಸಿದ್ಧಾಂತದ ಮೇಲಿನ ಆಗ್ರಹದಿಂದಷ್ಟೇ, ಬ್ರಹ್ಮತ್ವಂ = ಬ್ರಹ್ಮತ್ವವು. ತತ್ = ಅದು, ಜೀವಚೈತನ್ಯಮೇವ = ಜೀವಚೇತನವೇ.

**ಅನುವಾದ–** ಸಂಸಾರವೆಂಬ ಕೆಸರಿನಿಂದ ಮಲಿನನಾದವನು ಹೇಗೆ ತಾನೆ ಶುದ್ಧ? ಇಂತಹ ಚೇತನವನ್ನು ಬ್ರಹ್ಮ ಎಂದು ಪರಿಗಣಿಸುವುದು ಬರೀ ಆಗ್ರಹ. ಅದು ಜೀವಾತ್ಮವೇ.

ಜೀವ-ಬ್ರಹ್ಮರಿಗೆ ಎಂದಿಗೂ ಐಕ್ಯವಿಲ್ಲ -

**ಬಂಧಸ್ಯಾವಾಸ್ತವತ್ವೇನ ಬದ್ಧಂ ಶುದ್ಧಂ ತದೇವ ಚೇತ್ ।**
**ತವಾಶೇಯಂ ಶ್ರುತಿಸ್ತ್ವಾಹ ಸಖಾಯೌ ಸಯುಜೌ ಸದಾ ॥ ೨೫೪ ॥**

**ಖಗಾವಶ್ನದನಶ್ನಂತೌ ದೇಹೇದೇಹೇ ಕೃತಾಸ್ಪದೌ ।**
**ದ್ವಾಸುಪರ್ಣೇತ್ಯಾದಿರೂಪಾ ಸಾ ತವಾಶಾಲತಾಂ ದಹೇತ್ ॥ ೨೫೫ ॥**

**ಅರ್ಥ–** ಬಂಧಸ್ಯ ಅವಾಸ್ತವತ್ವೇನ = ಬಂಧವು ಕಾಲ್ಪನಿಕವಾದ್ದರಿಂದ, ಯದ್= ಯಾವುದು, ಬದ್ಧಂ= ಸಂಸಾರಬದ್ಧವೋ, ತದೇವ = ಆ ಚೇತನವೇ, ಶುದ್ಧಂ= ಶುದ್ಧಬ್ರಹ್ಮನು, ಇತಿ ಚೇತ್= ಹೀಗೆ ಹೇಳಿದರೆ, ಇಯಂ= ಇದು, ತವ ಆಶಾ= ನಿನ್ನ ಆಸೆಯಷ್ಟೇ!, ದ್ವಾಸುಪರ್ಣಾ ಇತ್ಯಾದಿರೂಪಾ= 'ದ್ವಾಸುಪರ್ಣಾ' ಮೊದಲಾದ, ಶ್ರುತಿಸ್ತು= ಶ್ರುತಿಯಾದರೂ, ಸದಾ= ಯಾವಾಗಲೂ, ದೇಹೇದೇಹೇ= ಪ್ರತಿದೇಹದಲ್ಲೂ, ಕೃತಾಸ್ಪದೌ= ಮಾಡಲ್ಪಟ್ಟ ಅವಕಾಶವುಳ್ಳ (ವಾಸಿಸುತ್ತಿರುವ) ಅಶ್ನದನಶ್ನಂತೌ= ತಿನ್ನುತ್ತಿರುವ ಮತ್ತು ತಿನ್ನದ, ಸಖಾಯೌ= ಮಿತ್ರರಾಗಿರುವ, ಸಯುಜೌ= ಜೊತೆಗೇ ಇರುವ, ಖಗೌ= ಎರಡು ಹಕ್ಕಿಗಳನ್ನು ಕುರಿತು (ಎರಡು ಚೇತನಗಳನ್ನು ಕುರಿತು), ಆಹ= ಹೇಳುತ್ತದೆ. ಸಾ= ಆ ಶ್ರುತಿಯು, ತವ= ನಿನ್ನ, ಆಶಾಲತಾಂ= ಆಸೆ ಎಂಬ ಬಳ್ಳಿಯನ್ನು, ದಹೇತ್= ಸುಟ್ಟು ಬಿಡುತ್ತದೆ.

**ಅನುವಾದ–** ಸಂಸಾರಬಂಧವು ವಾಸ್ತವ ಅಲ್ಲ. ಕಲ್ಪಿತ. ಯಾವ ಚೇತನಕ್ಕೆ ಅವಾಸ್ತವ ಬಂಧನವಿದೆಯೋ ಅದೇ ಶುದ್ಧ ಬ್ರಹ್ಮ? ಇಲ್ಲ. ಇದು ಕೇವಲ ನಿನ್ನ ಆಸೆ. 'ದ್ವಾಸುಪರ್ಣಾ ಸಯುಜಾ ಸಖಾಯಾ' ಮೊದಲಾದ ಶ್ರುತಿಯು ಪ್ರತಿದೇಹದಲ್ಲೂ ಇರುವ ತಿನ್ನುತ್ತಿರುವ ಮತ್ತು ತಿನ್ನದಿರುವ, ಯಾವಾಗಲೂ

ವಿಷ್ಣುವನ್ನು ಅಪರಬ್ರಹ್ಮ (ಶಬಲಬ್ರಹ್ಮ) ಎಂದು ಅದ್ವೈತದರ್ಶನವು ಹೇಳುತ್ತದೆ. 251-260 ರವರೆಗೆ ಇದನ್ನು ವಿಮರ್ಶಿಸುತ್ತಾರೆ.

**ದೋಷವಿಶಿಷ್ಟನು ಪರಬ್ರಹ್ಮನಾಗಲಾರ -**

**ತವ ಬ್ರಹ್ಮತ್ವವಿದ್ಯಾಖ್ಯದೋಷೇಣ ಕಲಿಲಂ ಸದಾ ।**
**ಅನಾದಿಕಾಲಮಾರಭ್ಯ ದೇಹೇದೇಹೇ ಚ ಸಂಸರತ್ ॥ ೨೫೨ ॥**

**ಅರ್ಥ**—ತವ = ನಿಮ್ಮ (ಅದ್ವೈತಿಗಳ) ಬ್ರಹ್ಮ ತು = ಬ್ರಹ್ಮನಾದರೂ, ಅವಿದ್ಯಾಖ್ಯದೋಷೇಣ = ಅಜ್ಞಾನವೆಂಬ ದೋಷದಿಂದ, ಸದಾ = ಯಾವಾಗಲೂ, ಕಲಿಲಂ = ಕೊಳೆಯಾಗಿದ್ದಾನೆ. ಅನಾದಿಕಾಲಮ್ ಆರಭ್ಯ= ಅನಾದಿಕಾಲದಿಂದ, ದೇಹೇದೇಹೇ = ಪ್ರತಿದೇಹದಲ್ಲಿ, ಸಂಸರತ್= ಹೋಗುವವನು. (ದೋಷದಿಂದ ಕೂಡಿರುವನು).

**ಅನುವಾದ**— ನಿಮ್ಮ (ಅದ್ವೈತದರ್ಶನದ) ಬ್ರಹ್ಮನು ಯಾವಾಗಲೂ ಅವಿದ್ಯಾ ಎಂಬ ದೋಷಕ್ಕೆ ಒಳಗಾಗಿ ಕೊಳೆಯಾಗಿದ್ದಾನೆ. ಅನಾದಿಯಿಂದಲೂ ಎಲ್ಲ ದೇಹಗಳಲ್ಲಿ ಸಂಸಾರಿಯಾಗಿದ್ದಾನೆ.

**ಭಾವವಿಲಾಸಿನೀ**— ಸ್ವಾಭಿಮತಬ್ರಹ್ಮಣಃ ಪರಬ್ರಹ್ಮತಾಂ ಪ್ರಸಾಧ್ಯ ಪರಾಭಿಮತಬ್ರಹ್ಮಣಸ್ತದಭಾವಂ ಪರಪ್ರಕ್ರಿಯಯೈವೋಪಪಾದಯತಿ— **ತವ ಬ್ರಹ್ಮ ತ್ವಿತಿ॥** ಬಹುಜೀವವಾದಿಪಕ್ಷಮಭಿಪ್ರೇತ್ಯ ಸದೇತ್ಯುಕ್ತಮ್ । ಏಕಸ್ಯಾಜ್ಞಾನನಿವೃತ್ತ್ಯಾಖ್ಯಮುಕ್ತಾವಪ್ಯಪರಸ್ಮಿನ್ನಜ್ಞಾನಾನುವರ್ತನಾದಿತಿ ಭಾವಃ । ಅತ ಏವ ಭವಪಂಕೇನ ಮಲಿನಮ್ । ನನು ಸಂಸಾರಸ್ಯ ಪರಿಚ್ಛಿನ್ನತ್ವೇನಾಪರಿಚ್ಛಿನ್ನಸ್ಯ ಬ್ರಹ್ಮಣಃ ಕ್ವಚಿದಂಶೇ ಶುದ್ಧತಾಽಪ್ಯಸ್ತೀತಿ ಚೇತ್, ಕಿಮನೇನ? ನಹಿ ಪಾದೇ ವೇದನವಾನನ್ಯತ್ರ ತದಭಾವ-ವಾನ್ ಪುರುಷೋ ವೇದನಾನ್ಮುಕ್ತ ಇತ್ಯುಚ್ಯತೇ । ಅನ್ಯಥಾ ತಾರ್ಕಿಕಮತೇ ವ್ಯಾಪ್ತತ್ವೇನಾಭಿಮತ-ಜೀವಾನಾಂ ಕ್ವಚಿದ್ದೇಹವತ್ತ್ವಮಾತ್ರೇಣ ಕಥಂ ಬದ್ಧತಾ? ತದ್ ಬ್ರಹ್ಮತ್ವೇನ ಪರಾಭಿಪ್ರೇತ-ಚೈತನ್ಯಮ್ ॥ ೨೫೨-೨೫೩ ॥

**ವಿವರಣೆ** – (1) ಅದ್ವೈತದರ್ಶನವನ್ನು ಎತ್ತಿಹಿಡಿಯುವ ಕೆಲವರು ಒಂದೇ ಜೀವವನ್ನು ಅಂಗೀಕರಿಸುತ್ತಾರೆ. ಕೆಲವರು ಬಹುಜೀವಗಳನ್ನು ಅಂಗೀಕರಿಸುತ್ತಾರೆ. ಬಹುಜೀವಗಳಿದ್ದರೆ, ಒಬ್ಬನಿಗೆ ಮುಕ್ತಿಯಾದರೂ ಬೇರೆ ಜೀವಗಳು ಇರುತ್ತವೆ. ಜೀವ ಎಂದರೆ ಅವಿದ್ಯೆಯನ್ನು ಹೊಂದಿರುವ ಬ್ರಹ್ಮನೇ. ಎಲ್ಲ ಕಾಲದಲ್ಲೂ ಜೀವಗಳು ಇದ್ದೇ ಇರುತ್ತವೆ; ಆದ್ದರಿಂದ ಬ್ರಹ್ಮನಿಗೆ 'ಸದಾ' ಅವಿದ್ಯಾ ದೋಷವಿರುತ್ತದೆ.

(2) ಬ್ರಹ್ಮ ಅಪರಿಮಿತ. ಸಂಸಾರಕ್ಕೆ ಮಿತಿ ಇದೆ. ಆದ್ದರಿಂದ ಸಂಸಾರಕ್ಕೆ ಒಳಗಾಗದ ಬ್ರಹ್ಮನ ಭಾಗವೂ ಇರುತ್ತದೆ. ಈ ಭಾಗವು ಯಾವಾಗಲೂ ಶುದ್ಧ? ಇಲ್ಲ. ಪಾದದಲ್ಲಿ ಮಾತ್ರ ನೋವು ಇರುವ ವ್ಯಕ್ತಿಯನ್ನು ವೇದನಾರಹಿತ ಎಂದು ಯಾರೂ ಪರಿಗಣಿಸುವುದಿಲ್ಲ.

**ಭವಪಂಕೇನ ಮಲಿನಂ ಕಥಂ ಶುದ್ಧಂ ಭವೇದ್ ವದ ।**
**ಬ್ರಹ್ಮತ್ವಮಾಗ್ರಹಾದೇವ ಜೀವಚೈತನ್ಯಮೇವ ತತ್ ॥ ೨೫೩ ॥**

**ಅರ್ಥ–** ಭವಪಂಕೇನ = ಸಂಸಾರ ಎಂಬ ಕೆಸರಿನಿಂದ, ಮಲಿನಂ = ಕೊಳೆಯಾದ (ಬ್ರಹ್ಮ ಚೇತನವು), ಕಥಂ = ಹೇಗೆ, ಶುದ್ಧಂ ಭವೇತ್? = ಪರಿಶುದ್ಧವಾದೀತು? ವದ = ಹೇಳು. ಆಗ್ರಹಾದೇವ = ನಿನ್ನ ಸಿದ್ಧಾಂತದ ಮೇಲಿನ ಆಗ್ರಹದಿಂದಷ್ಟೇ, ಬ್ರಹ್ಮತ್ವಂ = ಬ್ರಹ್ಮತ್ವವು. ತತ್ = ಅದು, ಜೀವಚೈತನ್ಯಮೇವ = ಜೀವಚೇತನವೇ.

**ಅನುವಾದ–** ಸಂಸಾರವೆಂಬ ಕೆಸರಿನಿಂದ ಮಲಿನನಾದವನು ಹೇಗೆ ತಾನೆ ಶುದ್ಧ? ಇಂತಹ ಚೇತನವನ್ನು ಬ್ರಹ್ಮ ಎಂದು ಪರಿಗಣಿಸುವುದು ಬರೀ ಆಗ್ರಹ. ಅದು ಜೀವಾತ್ಮವೇ.

ಜೀವ-ಬ್ರಹ್ಮರಿಗೆ ಎಂದಿಗೂ ಐಕ್ಯವಿಲ್ಲ -

**ಬಂಧಸ್ಯಾವಾಸ್ತವತ್ವೇನ ಬದ್ಧಂ ಶುದ್ಧಂ ತದೇವ ಚೇತ್ ।**
**ತವಾಶೇಯಂ ಶ್ರುತಿಸ್ತ್ವಾಹ ಸಖಾಯೌ ಸಯುಜೌ ಸದಾ ॥ ೨೫೪ ॥**

**ಖಗಾವಶ್ನದನಶ್ನಂತೌ ದೇಹೇದೇಹೇ ಕೃತಾಸ್ಪದೌ ।**
**ದ್ವಾಸುಪರ್ಣೇತ್ಯಾದಿರೂಪಾ ಸಾ ತವಾಶಾಲತಾಂ ದಹೇತ್ ॥ ೨೫೫ ॥**

**ಅರ್ಥ–** ಬಂಧಸ್ಯ ಅವಾಸ್ತವತ್ವೇನ = ಬಂಧವು ಕಾಲ್ಪನಿಕವಾದ್ದರಿಂದ, ಯದ್= ಯಾವುದು, ಬದ್ಧಂ= ಸಂಸಾರಬದ್ಧವೋ, ತದೇವ = ಆ ಚೇತನವೇ, ಶುದ್ಧಂ= ಶುದ್ಧಬ್ರಹ್ಮನು, ಇತಿ ಚೇತ್= ಹೀಗೆ ಹೇಳಿದರೆ, ಇಯಂ= ಇದು, ತವ ಆಶಾ= ನಿನ್ನ ಆಸೆಯಷ್ಟೇ!, ದ್ವಾಸುಪರ್ಣಾ ಇತ್ಯಾದಿರೂಪಾ= 'ದ್ವಾಸುಪರ್ಣಾ' ಮೊದಲಾದ, ಶ್ರುತಿಸ್ತು= ಶ್ರುತಿಯಾದರೂ, ಸದಾ= ಯಾವಾಗಲೂ, ದೇಹೇದೇಹೇ= ಪ್ರತಿದೇಹದಲ್ಲೂ, ಕೃತಾಸ್ಪದೌ= ಮಾಡಲ್ಪಟ್ಟ ಅವಕಾಶವುಳ್ಳ (ವಾಸಿಸುತ್ತಿರುವ) ಅಶ್ನದನಶ್ನಂತೌ= ತಿನ್ನುತ್ತಿರುವ ಮತ್ತು ತಿನ್ನದ, ಸಖಾಯೌ= ಮಿತ್ರರಾಗಿರುವ, ಸಯುಜೌ= ಜೊತೆಗೇ ಇರುವ, ಖಗೌ= ಎರಡು ಹಕ್ಕಿಗಳನ್ನು ಕುರಿತು (ಎರಡು ಚೇತನಗಳನ್ನು ಕುರಿತು), ಆಹ= ಹೇಳುತ್ತದೆ. ಸಾ= ಆ ಶ್ರುತಿಯು, ತವ= ನಿನ್ನ, ಆಶಾಲತಾಂ= ಆಸೆ ಎಂಬ ಬಳ್ಳಿಯನ್ನು, ದಹೇತ್= ಸುಟ್ಟುಬಿಡುತ್ತದೆ.

**ಅನುವಾದ–** ಸಂಸಾರಬಂಧವು ವಾಸ್ತವ ಅಲ್ಲ. ಕಲ್ಪಿತ. ಯಾವ ಚೇತನಕ್ಕೆ ಅವಾಸ್ತವ ಬಂಧನವಿದೆಯೋ ಅದೇ ಶುದ್ಧ ಬ್ರಹ್ಮ? ಇಲ್ಲ. ಇದು ಕೇವಲ ನಿನ್ನ ಆಸೆ. 'ದ್ವಾಸುಪರ್ಣಾ ಸಯುಜಾ ಸಖಾಯಾ' ಮೊದಲಾದ ಶ್ರುತಿಯು ಪ್ರತಿದೇಹದಲ್ಲೂ ಇರುವ ತಿನ್ನುತ್ತಿರುವ ಮತ್ತು ತಿನ್ನದಿರುವ, ಯಾವಾಗಲೂ

ಮಿತ್ರಭಾವದಿಂದ ಇರುವ ಮತ್ತು ಜೊತೆಗೇ ಇರುವ ಎರಡು ಹಕ್ಕಿಗಳನ್ನು (ಚೇತನಗಳನ್ನು) ಕುರಿತು ಹೇಳುತ್ತದೆ. ಆ ಶ್ರುತಿಯು ನಿನ್ನ ಆಸೆಯನ್ನು ಸುಟ್ಟು ಬಿಡುತ್ತದೆ.

**ಭಾವವಿಲಾಸಿನೀ– ಶಂಕತೇ– ಬಂಧಸ್ಯೇತಿ ॥** ಬದ್ಧಂ ಮಿಥ್ಯಾಭೂತಬನಾಶ್ರಯತ್ವಾದ್ ಬದ್ಧಮ್ । ವಸ್ತುಸ್ಥಿತಿಮಪೇಕ್ಷ್ಯ ಶುದ್ಧಂ ಚೇತ್ಯರ್ಥಃ । ತದೇವ ಸಂಸಾರಿಚೈತನ್ಯಮೇವ । ಉತ್ತರಮಾಹ– **ತವೇತಿ॥** ಇಯವುಕ್ ಏಕಸ್ಯೈವ ಬದ್ಧತ್ವಶುದ್ಧತ್ವಸಂಪಾದನರೂಪಾ ತವಾಶಾ । ಆಶೇತ್ಯನೇನಾಶಾಮಾತ್ರಮಿದಮ್ । ವಸ್ತುಗತ್ಯಾ ಬಂಧಸ್ಯಾತ್ಯಂತಾಭಾವಪ್ರತಿಯೋಗಿತ್ವ-ರೂಪಮಿಥ್ಯಾತ್ವೇನ ರಜತತ್ವೇನ ಭ್ರಾಂತಿವಿಷಯಶುಕ್ತೇಃ ಶುಕ್ತಿತ್ವವತ್ ಶುದ್ಧತ್ವಮೇವ ಸ್ಯಾತ್ । ನತು ಶುದ್ಧತ್ವಬದ್ಧತ್ವರೂಪವಿರುದ್ಧಾಕಾರದ್ವಯಮ್ । ನಹಿ ಶುಕ್ತಿಃ ಶುಕ್ತೀ ರಜತಂ ಚೇತಿ ಕೇನಾಪಿ ವ್ಯವಹ್ರಿಯತ ಇತಿ ಸೂಚಯತಿ । ಶ್ರುತಿಸ್ತ್ವಾಹ ಇತಿ ತು ಸ್ಪಷ್ಟೋತ್ತರಮಿತಿ ಜ್ಞಾತವ್ಯಮ್ । 'ದ್ವಾ ಸುಪರ್ಣಾ' ಇತ್ಯಾದಿರೂಪಾ ಶ್ರುತಿರಿತಿ ಸಂಬಂಧಃ । ಸಯುಜೌ ಸಮಾನದೇಶೇ ಸಂಬದ್ಧ್ಯ ಸ್ಥಿತೌ । ಸದೇತ್ಯನೇನ ಮುಕ್ತಾವಪೀಯಮೇವ ಶ್ರುತಿರ್ಜೀವಬ್ರಹ್ಮಣೋರ್ಭೇದಂ ಬೋಧಯತಿ ಇತಿ ಸೂಚಯತಿ । ಸಾಯುಜ್ಯಸ್ಯ ಸಖ್ಯಸ್ಯ ಚ ತತ್ರೈವ ಸಂಭವಾತ್ । ಮುಕ್ತಾವಪಿ ಮುಕ್ತಾನಾಂ ಲೀಲಾವಿಗ್ರಹಗ್ರಹಣಸದ್ಭಾವಾತ್ ಸಮಾನಂ ವೃಕ್ಷಮಿತ್ಯಪಿ ಘಟತೇ । ಜ್ಞಾನೋತ್ತರಕಾಲೀನ-ನಿವೃತ್ತಕರ್ಮಣಾಂ ಮುಕ್ತಾವಾನಂದಾಭಿವೃದ್ಧಿಹೇತುತ್ವಸ್ಯ 'ನ ಹಾಸ್ಯ ಕರ್ಮ ಕ್ಷೀಯತೇ' 'ಅಸ್ಮಾದ್ಧ್ಯೇವಾತ್ಮನೋ ಯದ್‌ಯತ್ ಕಾಮಯತೇ ತತ್ತತ್ ಸೃಜತೇ' ಇತ್ಯಾದಿನಾ ಶ್ರುತತ್ವಾತ್ 'ಪಿಪ್ಪಲಂ ಸ್ವಾದ್ವತ್ತಿ' ಇತ್ಯಪಿ ಘಟತೇ । ಕೇವಲಂ ಸುಖರೂಪತ್ವಾತ್ ಸ್ವಾದ್ವಿತ್ಯಪಿ ತತ್ರೈವ ಘಟತೇ । ಸಂಸಾರೇ ತು ಅಸ್ವಾದುನ ಏವ ದುಃಖಮಿಶ್ರಸುಖಸ್ಯಾಭಿಮಾನಿಕಮೇವ ಹಿ ಸ್ವಾದುತ್ವಂ ವಕ್ತವ್ಯಮ್ । ಸುಪರ್ಣಪದೋಕ್ತಪೂರ್ಣತ್ವಂ ಚ ತತ್ರೈವೋಭಯೋರ್ಜೀವಪರಯೋರ್ಮುಖ್ಯಂ ಸಂಭವತಿ॥ ತತಶ್ಚ ವ್ಯಾವಹಾರಿಕಭೇದಪರತಾಽಸ್ಯಾಃ ಶ್ರುತೇರ್ದೂರಾಪಾಸ್ತೇತಿ ಭಾವಃ । ಸಾ ದ್ವಾವಿತಿ ಬದ್ಧಮುಕ್ತಯೋರ್ದ್ವಿತ್ವಪ್ರತಿಪಾದಿಕಾ ॥ ೨೫೪–೨೫೫ ॥

**ವಿವರಣೆ–** (1) 'ಬಂಧವು ಅವಾಸ್ತವ, ಅಂದರೆ ಮಿಥ್ಯಾ. ಬ್ರಹ್ಮನಿಗೆ ಮಿಥ್ಯಾಬಂಧವು ಇದೆ. ಆದ್ದರಿಂದ ಅದು ಬದ್ಧ. ವಸ್ತುತಃ ಶುದ್ಧ. ಹೀಗೆ ಒಂದೇ ಬ್ರಹ್ಮವೇ ಬದ್ಧವೂ ಶುದ್ಧವೂ ಆಗಿದೆ' - ಇದು ಅದ್ವೈತದರ್ಶನ.

ಇದು ಕೇವಲ ಅದ್ವೈತಚಿಂತಕರ ಆಶೆ. ಶ್ರುತಿಯು 'ಸದಾ ಜೊತೆಗೆ ಇರುವ, ಮಿತ್ರಭಾವವನ್ನು ಹೊಂದಿರುವ ಇಬ್ಬರನ್ನು' ಕುರಿತು ಹೇಳುತ್ತದೆ.

ದ್ವಾಸುಪರ್ಣಾ ಸಯುಜಾ ಸಖಾಯಾ ಸಮಾನಂ ವೃಕ್ಷಂ ಪರಿಷಸ್ವಜಾತೇ ।

ತಯೋರನ್ಯಃ ಪಿಪ್ಪಲಂ ಸ್ವಾದ್ವತ್ತಿ ಅನಶ್ನನ್ನನ್ಯೋಽಭಿಚಾಕಶೀತಿ ॥

– ಆಥರ್ವಣೋಪನಿಷತ್

(2) ಬಂಧವು ಮಿಥ್ಯಾ ಆದರೆ ಬ್ರಹ್ಮನಿಗೆ ಬದ್ಧತ್ವವು ಇಲ್ಲ ಎಂದೇ ಅರ್ಥ. ಆದ್ದರಿಂದ ಅವನಿಗೆ ಶುದ್ಧತ್ವಮಾತ್ರವೇ ಇದೆ. ವಿರುದ್ಧವಾದ ಬದ್ಧತ್ವ-ಶುದ್ಧತ್ವಗಳು ಬ್ರಹ್ಮನಿಗೆ ಇಲ್ಲ. ಶುಕ್ತಿಯನ್ನು ಶುಕ್ತಿ ಎಂದೂ, ರಜತ ಎಂದೂ ಯಾರೂ ವ್ಯವಹರಿಸುವುದಿಲ್ಲ.

(3) 254ನೇ ಶ್ಲೋಕದಲ್ಲಿರುವ 'ಸದಾ' ಶಬ್ದವು ಮುಕ್ತಿಯಲ್ಲೂ ಜೀವ-ಬ್ರಹ್ಮನಿಗೆ ಭೇದವೇ ಇರುತ್ತದೆ ಎಂದು ಸೂಚಿಸುತ್ತದೆ. ಜೀವ-ಬ್ರಹ್ಮರಿಗೆ ಸಾಯುಜ್ಯ ಮತ್ತು ಸಖ್ಯಗಳು ಮುಕ್ತಿಯಲ್ಲಿ ಮಾತ್ರ ಉಪಪನ್ನವಾಗುತ್ತದೆ.

(4) ಮುಕ್ತಿಯಲ್ಲೂ ಮುಕ್ತಚೇತನರು ವಿಹಾರಕ್ಕಾಗಿ ಅನಾಯಾಸವಾಗಿ ದೇಹವನ್ನು ಪಡೆಯುತ್ತಾರೆ. ಆ ದೇಹವು ಪರಮಾತ್ಮ ಮತ್ತೂ ಜೀವಾತ್ಮಾ ಎಂಬ ಹಕ್ಕಿಗಳು ವಾಸಮಾಡುವ ವೃಕ್ಷ.

(5) ಅಪರೋಕ್ಷಜ್ಞಾನದ ಅನಂತರ ಮಾಡುವ ನಿವೃತ್ತಕರ್ಮಗಳು ಮುಕ್ತಿಯಲ್ಲಿ ಆನಂದಾಭಿವೃದ್ಧಿಗೆ ಕಾರಣವಾಗುತ್ತವೆ. ಆದ್ದರಿಂದ ಮುಕ್ತಿಯಲ್ಲೂ 'ಪಿಪ್ಪಲಂ ಸ್ವಾದು ಅತ್ತಿ' - ಈ ಮಾತು ಯುಕ್ತ. ಮುಕ್ತಿಯಲ್ಲಿ ದುಃಖಾಮಿಶ್ರಿತ ಸುಖವೇ ಆಗುತ್ತದೆ. ಆದ್ದರಿಂದ 'ಸ್ವಾದುः ಬಹಳ ರಸಮಯವಾದ ಪಿಪ್ಪಲಂ= ಕರ್ಮಫಲವನ್ನು, ಅತ್ತಿ= ಆಸ್ವಾದಿಸುತ್ತಾನೆ' - ಈ ಮಾತು ಮುಕ್ತಿದೆಶೆಯ ಅನುಭವಕ್ಕೆ ಹೆಚ್ಚು ಸಮಂಜಸವಾಗಿ ಅನ್ವಯಿಸುತ್ತದೆ.

(6) 'ಸುಪರ್ಣಾ' - ಈ ಪದಕ್ಕೆ ಪೂರ್ಣಾನಂದವುಳ್ಳವನು ಎಂದು ಅರ್ಥ. ಮುಕ್ತಿಯಲ್ಲಿ ಈ ಮಾತು ಜೀವ-ಪರಮಾತ್ಮರಿಬ್ಬರಿಗೂ ಅನ್ವಯಿಸುತ್ತದೆ.

3, 4, 5, 6ನೇ ಅಂಶಗಳು ''ಜೀವ-ಪರಮಾತ್ಮರಿಗೆ ಮುಕ್ತಿಯಲ್ಲೂ ಭೇದವಿರುತ್ತದೆ ಎಂದು 'ದ್ವಾಸುಪರ್ಣಾ...' ಶ್ರುತಿಯಿಂದ ತಿಳಿಯುತ್ತದೆ'' ಎಂದು ಸ್ಪಷ್ಟಪಡಿಸಿವೆ. ಆದ್ದರಿಂದ ಈ ಶ್ರುತಿಯು ವ್ಯಾವಹಾರಿಕ ಭೇದಪ್ರತಿಪಾದಕ ಎಂಬ ಅದ್ವೈತಚಿಂತಕರ ಆಸೆಗೆ ಅವಕಾಶವೇ ಇಲ್ಲ.

**ಬಂಧಮಿಥ್ಯಾತ್ವತೋ ಮುಕ್ತಮಸ್ತು ಬದ್ಧಂ ಕಥಂ ಭವೇತ್ ।**
**ಶುಕ್ತೌ ರೂಪ್ಯತ್ವಮಿಥ್ಯಾತ್ವೇ ಶುಕ್ತಿತೈವ ನ ರೂಪ್ಯತಾ ॥ ೨೫೬ ॥**

**ಅರ್ಥ–** ಬಂಧಮಿಥ್ಯಾತ್ವತಃ = ಬಂಧವು ಮಿಥ್ಯೆ ಆದ್ದರಿಂದ, (ಬ್ರಹ್ಮನು) ಮುಕ್ತಮಸ್ತು = ಮುಕ್ತನಾಗಲಿ (ಆದರೆ), ಬದ್ಧಂ = ಬದ್ಧನು, ಕಥಂ ಭವೇತ್= ಹೇಗೆ ಆದಾನು? ಶುಕ್ತೌ = ಕಪ್ಪೆಚಿಪ್ಪಿನಲ್ಲಿ, ರೂಪ್ಯತ್ವಮಿಥ್ಯಾತ್ವೇ = ರಜತತ್ವವು ಮಿಥ್ಯಾ ಆದರೆ, ಶುಕ್ತಿತಾ ಏವ = ಶುಕ್ತಿತ್ವವೇ ಇರುತ್ತದೆ, ನ ರೂಪ್ಯತಾ = ರಜತತ್ವವಲ್ಲ.

**ಅನುವಾದ–** ಬಂಧವು ಮಿಥ್ಯಾ ಆದ್ದರಿಂದ ಬ್ರಹ್ಮನು ಸದಾ ಮುಕ್ತನೇ. ಹೇಗೆ ತಾನೇ ಬದ್ಧನಾದಾನು? ಶುಕ್ತಿಯಲ್ಲಿ ರಜತತ್ವವು ಮಿಥ್ಯಾ; ಆದ್ದರಿಂದ ಅಲ್ಲಿ ಶುಕ್ತಿತ್ವವೇ ಸದಾ ಇರುತ್ತದೆ; ರಜತತ್ವವು ಎಂದೂ ಇರುವುದಿಲ್ಲ.

**ಭಾವವಿಲಾಸಿನೀ–** ಅಧುನಾ ಪ್ರಾಗಾಶೇತ್ಯನೇನ ಸೂಚಿತಮರ್ಥಂ ಸ್ಪಷ್ಟಮಾಹ– **ಬಂಧಮಿಥ್ಯಾತ್ವತ ಇತಿ** ॥ ಅಸ್ಯಾರ್ಥಸ್ತು ಪ್ರಾಗುಕ್ತ ಏವ ॥ ೨೫೬ ॥

ಮರಣವು ಸಮಾನ-

ವ್ಯಾವಹಾರಿಕತಾ ಯಾ ತೇ ರಾಜಖಡ್ಗಕ್ಷತಿರ್ಹಿ ಸಾ ।
ಮರಣೇ ನ ವಿಶೇಷೋಽಸ್ತಿ ಬದ್ಧತ್ವಂ ಗತಮೇವ ತೇ ॥ ೨೫೭ ॥

**ಅರ್ಥ–** ತೇ= ನಿನ್ನ ದರ್ಶನದ, ಯಾ = ಯಾವ, ವ್ಯಾವಹಾರಿಕತಾ = (ಬಂಧಕ್ಕೆ) ವ್ಯಾವಹಾರಿಕ ಸತ್ಯತ್ವವೋ, ಸಾ= ಅದು, ರಾಜಖಡ್ಗಕ್ಷತಿಃ = ರಾಜನ ಕೈಯಲ್ಲಿರುವ ಖಡ್ಗದಿಂದ ಉಂಟಾದ ಗಾಯ (ಏಕೆಂದರೆ), ಮರಣೆ = ಬಾಧ ಎಂಬ ಮರಣದಲ್ಲಿ, ನ ವಿಶೇಷಃ ಅಸ್ತಿ = ಯಾವುದೇ ವಿಶೇಷವಿಲ್ಲ, ತೇ = ನಿನ್ನ ಬದ್ಧತ್ವಂ = ಬದ್ಧತ್ವವು, ಗತಮೇವ = ಇಲ್ಲವೇ ಇಲ್ಲ.

**ಅನುವಾದ–** ನಿಮ್ಮ ದರ್ಶನವು ಬಂಧಕ್ಕೆ ವ್ಯಾವಹಾರಿಕ ಸತ್ಯತ್ವವನ್ನು ಹೇಳಿ ಬ್ರಹ್ಮನಿಗೆ ಬದ್ಧತ್ವವನ್ನು ಹೇಳಲು ಪ್ರಯತ್ನಿಸುತ್ತದೆ. ಇದು ತಪ್ಪು. ವ್ಯಾವಹಾರಿಕ ಸತ್ಯತಾ ರಾಜನ ಖಡ್ಗದಿಂದ ಆಗುವ ಮರಣವಷ್ಟೇ. ಹೇಗಾದರೂ ಮರಣವಾಗಲಿ, ಬ್ರಹ್ಮನಿಗೆ ಬದ್ಧತ್ವವು ತ್ರಿಕಾಲದಲ್ಲೂ ಇಲ್ಲ ಎಂದೇ ಸಿದ್ಧವಾಗುವುದು.

**ಭಾವವಿಲಾಸಿನೀ–** ನನು ಬಂಧಸ್ಯ ಮಿಥ್ಯಾತ್ವೇಽಪಿ ವ್ಯಾವಹಾರಿಕತ್ವಾದ್ ಬದ್ಧತ್ವವ್ಯವಸ್ಥಾಪಕಂ ಭವಿಷ್ಯತೀತ್ಯತ ಆಹ– **ವ್ಯವಹಾರಿಕತೇತಿ** ॥ ರಾಜಖಡ್ಗಕ್ಷತಿಃ ರಾಜಕರಧೃತಖಡ್ಗಾಜ್ಜಾತವ್ರಣಮಿ-ತ್ಯರ್ಥಃ । ಬ್ರಹ್ಮಜ್ಞಾನಾದ್ ಬಾಧೋ ಹಿ ವ್ಯಾವಹಾರಿಕತಾ ನಾಮ । ತಸ್ಮಾದ್ರಾಜಖಡ್ಗ-ಕ್ಷತಿರಿತ್ಯುಕ್ತಮ್ । ಮರಣೇ ನಾಸೀದಸ್ತಿ ಭವಿಷ್ಯತೀತ್ಯುಕ್ತಬಾಧರೂಪಮರಣೇ । ತೇ ಬಂಧಮಿಥ್ಯಾತ್ವವಾದಿನಃ ॥ ೨೫೭ ॥

**ವಿವರಣೆ–** ಬಹುಕಾಲಾನಂತರ ಬ್ರಹ್ಮಜ್ಞಾನವಾದ ಮೇಲೆ ಈ ಪ್ರಪಂಚವು ಮಿಥ್ಯಾ ಎಂದು ಜ್ಞಾನವು ಬರುವುದು, ಈ ಜ್ಞಾನಕ್ಕೆ ವಿಷಯವಾದ ಪ್ರಪಂಚವು ವ್ಯಾವಹಾರಿಕ. ಶುಕ್ತಿಯನ್ನು ನೋಡಿ ರಜತವೆಂಬ ಜ್ಞಾನವು ಬಂದರೂ ಈ ಭ್ರಾಂತಿಯು ಬ್ರಹ್ಮಜ್ಞಾನಕ್ಕಿಂತ ಮೊದಲೇ 'ಇಯಂ ಶುಕ್ತಿಃ' ಎಂಬ ಜ್ಞಾನದಿಂದ ನಿವೃತ್ತವಾಗುತ್ತದೆ. ರಜತತ್ವವು ಮಿಥ್ಯಾ ಎಂದು ಜ್ಞಾನವು ಬರುತ್ತದೆ. ಮಾಯಾವಾದಿಗಳ ಪ್ರಕಾರ ಎರಡೂ ಮಿಥ್ಯೆಯೇ ಆಗಿದೆ. ಮನುಷ್ಯನು ರಾಜನ ಖಡ್ಗದಿಂದ ಸತ್ತರೂ, ಭಟನ ಖಡ್ಗದಿಂದ ಸತ್ತರೂ ಮರಣವು ಸಮಾನವೇ. ಅದರಂತೆ ವ್ಯಾವಹಾರಿಕ ಎಂಬ ಹೆಸರಿನಿಂದ ಸಂಸಾರಬಂಧನದಲ್ಲಿ ಯಾವ ವ್ಯತ್ಯಾಸವೂ ಆಗುವುದಿಲ್ಲ. ಅದು ಮಿಥ್ಯೆಯೇ ಆಗಿರುತ್ತದೆ. ಹೀಗೆ ಮಿಥ್ಯಾ ಬದ್ಧತ್ವದಿಂದ ಬ್ರಹ್ಮ ಎಂದಿಗೂ ಬದ್ಧ ಎನಿಸಲಾರ.

ಅತೋ ಬದ್ಧೋಽಪರಸ್ತಸ್ಮಾತ್ ನಿತ್ಯಮುಕ್ತೋಽಪಿ ಚಾಪರಃ ।
ಇತ್ಯೇವ ಸರ್ವಥಾ ವಾಚ್ಯಮಿತ್ಥಂ ಸೂತ್ರಕೃದಾಹ ಹಿ ॥ ೨೫೮ ॥

**ಅರ್ಥ–** ಅತಃ = ಆದ್ದರಿಂದ, ಬದ್ಧಃ= ಬದ್ಧನು, ಅಪರಃ= ಬೇರೆ. ತಸ್ಮಾತ್= ಆ ಬದ್ಧನಿಂದ, ಅಪರಃ = ಬೇರೆಯಾದ ಬ್ರಹ್ಮನು, ನಿತ್ಯಮುಕ್ತಃ = ನಿತ್ಯಮುಕ್ತನು, ಇತ್ಯೇವ = ಹೀಗೆಯೇ, ಸರ್ವಥಾ ವಾಚ್ಯಂ = ಹೇಳಲೇಬೇಕು. ಇತ್ಥಂ = ಹೀಗೆಯೇ, ಸೂತ್ರಕೃತ್ = ಬ್ರಹ್ಮಸೂತ್ರಕಾರರು, ಆಹ ಹಿ = ಹೇಳಿದರಷ್ಟೇ.

**ಅನುವಾದ–** ಆದ್ದರಿಂದ ಬದ್ಧನೇ ಬೇರೆ. ನಿತ್ಯಮುಕ್ತನು ಅವನಿಗಿಂತ ಬೇರೆಯೇ ಚೇತನ ಎಂದೇ ಹೇಳಬೇಕು. ಬ್ರಹ್ಮಸೂತ್ರಕಾರರು ಹೀಗೆಯೇ ಹೇಳಿದ್ದಾರೆ.

**ಭಾವವಿಲಾಸಿನೀ–** ಅತಃ ಉಕ್ತರೀತ್ಯಾ ಏಕಸ್ಯೈವ ಪರಾಭಿಮತಬದ್ಧತ್ವಮುಕ್ತತ್ವಾಯೋಗಾತ್ । ಅಪರಃ ಜೀವಃ । ಮುಕ್ತೋಽಪಿ ಚಾಪರ ಇತ್ಯತ್ರಾಪರಃ ಪರಮಾತ್ಮಾ ॥ ೨೫೮ ॥

**ವಿವರಣೆ–** ಒಬ್ಬನೇ ಚೇತನ ಬದ್ಧ ಮತ್ತು ಮುಕ್ತ ಎರಡೂ ಆಗಲು ಸಾಧ್ಯವಿಲ್ಲವಾದ್ದರಿಂದ ಜೀವಾತ್ಮನು ಬದ್ಧ, ಅವನಿಗಿಂತ ಭಿನ್ನನಾದ ಪರಮಾತ್ಮನು ನಿತ್ಯಮುಕ್ತ ಎಂದೇ ಹೇಳಬೇಕು. ಬ್ರಹ್ಮಸೂತ್ರಕಾರರೂ ಹೀಗೆಯೇ ಹೇಳಿದ್ದಾರೆ.

ಬ್ರಹ್ಮಸೂತ್ರ : 'ಸ್ಥಿತ್ಯದನಾಭ್ಯಾಂ ಚ' ೧.೩.೭

ಅದ್ವೈತಿಯ ಸಮ್ಮತಿ-

ಆವಯೋಶ್ಚ ಮತೌ ದ್ವೌ ಸ್ಥಿತ್ಯದನಾಭ್ಯಾಮಿತೀರಿತೌ ॥ ೨೫೯ ॥

**ಅರ್ಥ–** ಸ್ಥಿತ್ಯದನಾಭ್ಯಾಮ್ ಇತಿ ಈರಿತೌ= 'ಸ್ಥಿತ್ಯದನಾಭ್ಯಾಂ ಚ' ಈ ಸೂತ್ರದಿಂದ ಹೇಳಲ್ಪಟ್ಟ, ದ್ವೌ= ಇಬ್ಬರು (ಜೀವ-ಪರಮಾತ್ಮರು), ಆವಯೋಃ ಚ= ನಮ್ಮಿಬ್ಬರಿಗೂ, ಮತೌ= ಸಮ್ಮತರು.

**ಅನುವಾದ–** 'ಸ್ಥಿತ್ಯದನಾಭ್ಯಾಂ ಚ' ಈ ಸೂತ್ರದಿಂದ ಹೇಳಲ್ಪಟ್ಟವರು ಇಬ್ಬರು ಎಂದು ನಮ್ಮಿಬ್ಬರ ಅಭಿಪ್ರಾಯ.

**ಭಾವವಿಲಾಸಿನೀ–** ಸ್ಥಿತ್ಯದನಾಭ್ಯಾವ್' ಇತಿ ಸೂತ್ರೇಣೋದಿತೌ ದ್ವೌ ಜೀವಪರವೌ । ಆವಯೋಃ ತವ ಚ ಮಮ ಚ । ತತ್ಸೂತ್ರವ್ಯಾಖ್ಯಾನಾವಸರೇ ಉಭಾಭ್ಯಾಮೇವಂ ವಕ್ತವ್ಯತ್ವಾದಿತಿ ಭಾವಃ ॥ ೨೫೯॥

**ವಿವರಣೆ–** 'ಸ್ಥಿತ್ಯದನಾಭ್ಯಾಂ ಚ' 1.3.7

ಸ್ಥಿತಿ= ತಿನ್ನದೆ ಇರುವಿಕೆ. ಅದನ= ತಿನ್ನುವಿಕೆ, ಇವೆರಡನ್ನು 'ದ್ವಾಸುಪರ್ಣಾ' - ಶ್ರುತಿಯು ಹೇಳುತ್ತದೆ. ತಿನ್ನುವವನು ಜೀವ. ತಿನ್ನದವನು ಈಶ್ವರ.

'ಈಶಜೀವಯೋಃ ಸ್ಥಿತ್ಯದನೋಕ್ತೇಃ' - ಮಧ್ವಭಾಷ್ಯ.

ಸ್ಥಿತ್ಯದನಾಭ್ಯಾಮ್ ಈಶ್ವರಕ್ಷೇತ್ರಜ್ಞೌ ಗೃಹ್ಯೇತೇ- ಶಂಕರಭಾಷ್ಯ

**ಗುಹಾಂ ಪ್ರವಿಷ್ಟಾವಾತ್ಮಾನೌ ಹಿ ತದ್ದರ್ಶನತಸ್ತ್ವಿತಿ ।**
**ಸೂತ್ರಂ ವ್ಯಾಕುರ್ವತೋ ಜೀವಪರೌ ದ್ವೌ ಹೃದಿ ತೇ ಮತೇ॥ ೨೬೦ ॥**

**ಅರ್ಥ–** ಗುಹಾಂ ಪ್ರವಿಷ್ಟಾವಾತ್ಮಾನೌ ಹಿ ತದ್ದರ್ಶನತಃ ಇತಿ= 'ಗುಹಾಂ ಪ್ರವಿಷ್ಟಾವಾತ್ಮಾನೌ ಹಿ ತದ್ದರ್ಶನಾತ್' ಎಂಬ, ಸೂತ್ರಂ = ಬ್ರಹ್ಮಸೂತ್ರವನ್ನು ವ್ಯಾಕುರ್ವತಃ = ವ್ಯಾಖ್ಯಾನಿಸುವ, ತೇ ಮತೇ = ನಿನ್ನ ಮತದಲ್ಲಿ, ಹೃದಿ = ಹೃದಯಾಕಾಶದಲ್ಲಿ, ಜೀವಪರೌ ದ್ವೌ= ಜೀವಪರಮಾತ್ಮರಿಬ್ಬರು (ಅಂಗೀಕರಿಸಲ್ಪಟ್ಟಿದ್ದಾರೆ.)

**ಅನುವಾದ– ಗುಹಾಂ ಪ್ರವಿಷ್ಟಾವಾತ್ಮಾನೌ ಹಿ ತದ್ದರ್ಶನಾತ್ (೧-೨-೧೧) ಎಂಬ ಸೂತ್ರವನ್ನು ವ್ಯಾಖ್ಯಾನಿಸುವ ಸಂದರ್ಭದಲ್ಲಿ ಅದ್ವೈತದರ್ಶನವೇ ಜೀವಬ್ರಹ್ಮರು ಹೃದಯವೆಂಬ ಗುಹೆಯಲ್ಲಿ ವಾಸವಾಗಿರುವರು ಎಂದು ಒಪ್ಪಿದೆ.**

**ಭಾವವಿಲಾಸಿನೀ–** ಸೂತ್ರಾಂತರಂ ಚಾಹ– **ಗುಹಾಮಿತಿ** ॥ ಅನೇನ 'ಗುಹಾಂ ಪ್ರವಿಷ್ಟಾವಾತ್ಮಾನೌ ಹಿ ತದ್ದರ್ಶನಾದ್' ಇತಿ ಸೂತ್ರಂ ಸಂಗೃಹ್ಣಾತಿ । ಸೂತ್ರಮುಕ್ತಸೂತ್ರಮ್ । ತೇ ಮಾಯಾವಾದಿನಃ । ಜೀವಪರೌ ದ್ವೌ ಹೃದಿ ಬುದ್ಧಿಜೀವಾವಿತಿ ಸಾಂಖ್ಯಪಕ್ಷಂ ನಿರಾಕೃತ್ಯ ಜೀವಪರಮಾತ್ಮಾನಾವಿತಿ ಸಿದ್ಧಾಂತೀಕರಣಾದ್ ಹೃದೀತ್ಯುಕ್ತಮ್ ॥ ೨೬೦ ॥

**ವಿವರಣೆ–** ಕಠೋಪನಿಷತ್ ಹೇಳುವ (1.3.1) ಗುಹಾಪ್ರವಿಷ್ಟರು ಬುದ್ಧಿ ಮತ್ತು ಜೀವ ಎಂದು ಸಾಂಖ್ಯರ ಅಭಿಪ್ರಾಯ. ಶಾಂಕರಭಾಷ್ಯವು ಇದನ್ನು ನಿರಾಕರಿಸಿ ಗುಹಾಪ್ರವಿಷ್ಟರು ಜೀವ ಮತ್ತು ಪರಮಾತ್ಮಾ ಎಂದು ಹೇಳಿದೆ. ಶ್ಲೋಕದಲ್ಲಿ 'ತೇ ಹೃದಿ' ಎಂದು ಹೇಳುವ ಮೂಲಕ ಜೀವ-ಪರಮಾತ್ಮರು ಹೃದಯಗುಹಾನಿವಿಷ್ಟರು ಎಂದು ನಿನ್ನ ಹೃದಯದಲ್ಲಿದೆ ಎಂದು ಯುಕ್ತಿಮಲ್ಲಿಕಾಕಾರರು ತಿಳಿಸಿದ್ದಾರೆ.

ಶ್ಲೋಕ ೨೬೧-೨೬೯ ರವರೆಗೆ ಭಾಗವತ ೧೧ನೆಯ ಸ್ಕಂಧದ ೧೧ನೆಯ ಅಧ್ಯಾಯದ ೧ ಮತ್ತು ೪ನೆಯ ಪದ್ಯಗಳ ಭಾವವನ್ನು ವಿವರಿಸಿ ಜೀವಾತ್ಮರಿಗೆ ಮಾತ್ರ ಬಂಧ ಮತ್ತು ಮೋಕ್ಷಗಳು ಪರಮಾತ್ಮನಿಗೆ ಎರಡೂ ಇಲ್ಲ ಎಂದು ಪ್ರತಿಪಾದಿಸುತ್ತಾರೆ -

ಸತ್ತ್ವಂ ರಜಸ್ತಮ ಇತಿ ಗುಣಾ ಜೀವಸ್ಯ ನೈವ ಮೇ ।
ಇತಿ ತ್ರಿಗುಣಶೂನ್ಯತ್ವಂ ಸ್ವಸ್ಯೋಕ್ತ್ವಾ ಹರಿರಂಜಸಾ ।
ಸ್ವಾಧೀನಗುಣತೋ ಬಂಧೋ ಜೀವಸ್ಯೈವೇತಿ ಶಂಸತಿ ॥ ೨೬೧ ॥

**ಅರ್ಥ–** 'ಸತ್ವಂ ರಜಸ್ತಮ ಇತಿ ಗುಣಾ ಜೀವಸ್ಯ ನೈವ ಮೇ' ಇತಿ= 'ಸತ್ವಂ...... ನೈವ ಮೇ' ಎಂದು (ಭಾಗವತ ೧೧.೧೩.೧), ಹರಿಃ= ಪರಮಾತ್ಮನು (ಶ್ರೀಕೃಷ್ಣನು), ಸ್ವಸ್ಯ= ತನಗೆ, ತ್ರಿಗುಣಶೂನ್ಯತ್ವಂ= ತ್ರಿಗುಣರಾಹಿತ್ಯವನ್ನು, ಅಂಜಸಾ= ಅವಧಾರಣ ಪೂರ್ವಕವಾಗಿ, ಉಕ್ತ್ವಾ=ಹೇಳಿ (೧೧.೧೧.೧ ಮತ್ತು೧೧.೧೧.೪ನೆಯ ಪದ್ಯಗಳಿಂದ), ಸ್ವಾಧೀನಗುಣತಃ=

ತನಗೆ ಅಧೀನವಾದ, ಸತ್ತ್ವ-ರಜಸ್-ತಮೋಗುಣಗಳಿಂದ, ಜೀವಸ್ಯ ಏವ= ಜೀವನಿಗೆ ಮಾತ್ರ, ಬಂಧಃ= ಸಂಸಾರಬಂಧವು, ಇತಿ= ಎಂದು, ಶಂಸತಿ= ಹೇಳುತ್ತಾನೆ.

**ಅನುವಾದ–**'ಸತ್ವಂ ರಜಸ್ತಮ ಇತಿ ಗುಣಾ ಜೀವಸ್ಯ ನೈವ ಮೇ' ಈ ಭಾಗವತ ಪದ್ಯದಲ್ಲಿ (೧೧.೧೩.೧) ಶ್ರೀಕೃಷ್ಣನು ತನಗೆ ತ್ರಿಗುಣಗಳಿಲ್ಲವೆಂದು ಸ್ಪಷ್ಟವಾಗಿ ಹೇಳಿದ್ದಾನೆ. ಭಾಗವತ ೧೧.೧೧.೧ ಮತ್ತು ೧೧.೧೧.೪ ನೆಯ ಪದ್ಯಗಳಿಂದ ತನಗೆ ಅಧೀನವಾದ ತ್ರಿಗುಣಗಳಿಂದ ಜೀವಾತ್ಮರಿಗೆ ಮಾತ್ರವೇ ಸಂಸಾರಬಂಧವಿದೆ ಎಂದು ಹೇಳಿದ್ದಾನೆ.

**ಭಾವವಿಲಾಸಿನೀ–** ಬದ್ಧೋ ಮುಕ್ತ ಇತಿ ಹ್ಯಾಖ್ಯಾ ಗುಣತೋ ಮೇ ನ ವಸ್ತುತಃ ಇತಿ ಭಾಗವತೇ ಕೃಷ್ಣೇನ ಸ್ವಸ್ಯೈವ ಬದ್ಧತ್ವಮುಕ್ತತ್ವಕಥನಾತ್ ಕಥಂ ನಿತ್ಯಮುಕ್ತತ್ವಮ್? ಇತ್ಯಾಶಂಕಾಂ ಪರಿಹರ್ತುಮಾಹ– **ಸತ್ವಂ ರಜಸ್ತಮ ಇತ್ಯಾದಿನಾ** ॥ ಇತಿ ತಸ್ಮಿನ್ನೇವ ಪ್ರಕರಣೇ ಭಗವದ್ವಚನೇನ ಸ್ವಸ್ಯಾಂಜಸಾ ತ್ರಿಗುಣಶೂನ್ಯತ್ವಮುಕ್ತ್ವಾ। ನೈವೇತ್ಯವಧಾರಣಾಽಭಿಪ್ರಾಯಃ ॥ **ಅಂಜಸೇತಿ** ॥ ಅನೇನ ವ್ಯಾವಹಾರಿಕಗುಣಾಃ ಸಂತಿ ಪರಮಾರ್ಥತೋ ನ ಸಂತೀತ್ಯಾದಿಕುತ್ಸಿತಯೋಜನಾ ನಿರಸ್ತಾ ವೇದಿತವ್ಯಾ। ಕಥಂಚಿದ್ ಗುಣಸದ್ಭಾವೇ ನೈವೇತ್ಯವಧಾರಣಾಯೋಗಾದಿತಿ ಭಾವಃ । ತತಃ ಕಿಂ ಪ್ರಕೃತೇ? ಇತ್ಯತ ಆಹ– **ಸ್ವಾಧೀನೇತಿ** ॥ ಪೂರ್ವೋಕ್ತವಾಕ್ಯೇನ ಸ್ವಸ್ಮಿನ್ ಗುಣಾಭಾವಾವಧಾರಣಾನ್ಮೇ ಗುಣತ ಇತಿ ವಾಕ್ಯೇಽಪಿ ಮದಧೀನಗುಣತ ಇತ್ಯರ್ಥೋ ವಕ್ತವ್ಯ ಇತಿ ಭಾವಃ। 'ಸತ್ವಂ ರಜಸ್ತಮ ಇತಿ ಗುಣಾ ಜೀವಸ್ಯ' ಇತಿ ವಚನೇ ಗುಣಾಧಾರತಯಾ ಜೀವಸ್ಯೈವ ಶ್ರವಣಾದ್ 'ಬದ್ಧೋ ಮುಕ್ತಃ' ಇತ್ಯಸ್ಮಿನ್ನೇವ ಶ್ಲೋಕೇ 'ನ ಮೇ ಬನ್ಧೋ ನ ಮೋಕ್ಷಣಮ್' ಇತಿ ಸ್ವಸ್ಯ ಬಂಧಾಭಾವಶ್ರವಣಾಚ್ಚ। ಬಂಧ ಇತ್ಯುಪಲಕ್ಷಣಮ್ । ಮುಕ್ತಿರಿತ್ಯಪಿ ದ್ರಷ್ಟವ್ಯಮ್ । ಬಂಧಸ್ಯೌಪಾಧಿಕತ್ವೇ ತನ್ನಿವೃತ್ತಿಲಕ್ಷಣಮುಕ್ತಿರಪ್ಯೌಪಾಧಿಕೀ ಜ್ಞಾನಾನಂದರೂಪತಯಾ ಸ್ವಾಭಾವಿಕಮುಕ್ತೇಃ ಪೂರ್ವಮಪಿ ವಿದ್ಯಮಾನತ್ವಾತ್ । ಅತ ಉಭಯೋರಪಿ ಗುಣಾಧೀನತ್ವಮಿತಿ ಬೋಧ್ಯಮ್ । ಜೀವಸ್ಯೈವೇತಿ ಪದಮನುವರ್ತನೀಯಮಿತಿ ಭಾವೇನೋಕ್ತಮ್– **ಜೀವಸ್ಯೈವೇತಿ** ॥ ೨೬೧ ॥

**ವಿವರಣೆ–** (1) ಅದ್ವೈತ ಚಿಂತಕರ ಪ್ರಶ್ನೆ: 'ಬದ್ಧೋ ಮುಕ್ತ ಇತಿ ಹ್ಯಾಖ್ಯಾ ಗುಣತೋ ಮೇ ನ ವಸ್ತುತಃ' (ಭಾಗವತ 11.11.1) ಈ ಶ್ಲೋಕದಲ್ಲಿ ಕೃಷ್ಣನು ತನಗೇ ಬಂಧ, ತನಗೇ ಮೋಕ್ಷ ಎಂದು ಹೇಳಿದ್ದಾನೆ. ಆದ್ದರಿಂದ ಅವನು ನಿತ್ಯಮುಕ್ತ ಹೇಗೆ?

ಈ ಪ್ರಶ್ನೆಗೆ ಉತ್ತರವನ್ನು 261-269 ಪದ್ಯಗಳಲ್ಲಿ ಹೇಳುತ್ತಾರೆ. ಭಾಗವತ 11.13.1 ರಲ್ಲಿ ಶ್ರೀಕೃಷ್ಣನು ಜೀವರಿಗೆ ಮಾತ್ರ ತ್ರಿಗುಣಸಂಬಂಧ, ತನಗೆ ಇಲ್ಲ ಎಂದು ಸ್ಪಷ್ಟವಾಗಿ ಹೇಳಿ ಭಾಗವತ 11.11.1 ಮತ್ತು 11.11.4 ರಲ್ಲಿ ತನಗೆ ಬಂಧವೂ ಇಲ್ಲ, ಮೋಕ್ಷವೂ ಇಲ್ಲ, ಜೀವಾತ್ಮರಿಗೆ ಎರಡೂ ಇದೆ ಎಂದು ಹೇಳಿದ್ದಾನೆ.

(2) 11.13.1 ರಲ್ಲಿ 'ಬುದ್ಧೇರ್ನಚಾತ್ಮನಃ' ಎಂದು ಇದೆ. ಇದನ್ನು ಶ್ರೀವಾದಿರಾಜರು ಶ್ಲೋಕ 261ರಲ್ಲಿ 'ಜೀವಸ್ಯ ನೈವ ಮೇ' ಎಂದು ವ್ಯಾಖ್ಯಾನಿಸಿದ್ದಾರೆ. 'ನೈವ ಮೇ' - ಈ ಅವಧಾರಣದಿಂದ ಅದ್ವೈತ ಸಮ್ಮತವಾದ ವ್ಯಾವಹಾರಿಕ ತ್ರಿಗುಣಗಳೂ ಶ್ರೀಕೃಷ್ಣನಲ್ಲಿ ಇಲ್ಲ ಎಂದು ತಿಳಿಯುತ್ತದೆ.

(3) 11.13.1 ನೆಯ ಶ್ಲೋಕದಲ್ಲಿ ಕೃಷ್ಣನಲ್ಲಿ ತ್ರಿಗುಣಗಳಿಲ್ಲ ಎಂದು ಸ್ಪಷ್ಟವಿರುವುದರಿಂದ 11.11.1 ನೆಯ ಶ್ಲೋಕದಲ್ಲಿರುವ 'ಮೇ ಗುಣತಃ' ಈ ಪದಗಳಿಗೆ ನನ್ನ ಅಧೀನವಾದ ಗುಣಗಳಿಂದ ಎಂದೇ ಅರ್ಥ ಎಂದು ತಿಳಿಯುತ್ತದೆ.

(4) 11.11.1 ನೆಯ ಪದ್ಯದಲ್ಲಿ 'ನ ಮೇ ಬಂಧೋ, ನ ಮೋಕ್ಷಣಮ್' - ಈ ಪದಗಳಿಂದ ಶ್ರೀಕೃಷ್ಣನು ತನಗೆ ಬಂಧವೂ ಇಲ್ಲ, ಮೋಕ್ಷವೂ ಇಲ್ಲ ಎಂದು ಹೇಳಿದ್ದಾನೆ. ಇದರಿಂದ ಶ್ರೀಕೃಷ್ಣನಿಗೆ ತ್ರಿಗುಣಸಂಬಂಧವಿಲ್ಲ ಎಂದು ಸ್ಪಷ್ಟ. ಆದ್ದರಿಂದ ಇದೇ ಶ್ಲೋಕದ ''ಮೇ ಗುಣತಃ'' - ಈ ಪದಗಳಿಗೆ 'ನನಗೆ ಅಧೀನವಾದ ತ್ರಿಗುಣಗಳಿಂದ' ಎಂದೇ ಅರ್ಥ.

**ಬಂಧಮೋಕ್ಷಗಳು ಸ್ವಾಭಾವಿಕವಲ್ಲ-**

**ಬದ್ಧೋ ಮುಕ್ತ ಇತಿ ಹ್ಯಾಖ್ಯಾ ಗುಣತೋ ಮೇ ನ ವಸ್ತುತಃ ।**
**ಗುಣಸ್ಯ ಮಾಯಾಮೂಲತ್ವಾತ್ ನ ಮೇ ಬಂಧೋ ನ ಮೋಕ್ಷಣಮ್**
**॥ ೨೬೨ ॥**

**ಅರ್ಥ–** (೧) (ಜೀವಸ್ಯ = ಜೀವನಿಗೆ) ಬದ್ಧಃ = ಬದ್ಧನು, ಮುಕ್ತಃ = ಮುಕ್ತನು, ಇತಿ ಆಖ್ಯಾ = ಎಂಬ ಹೇಳಿಕೆಯು, ಮೇ = ನನ್ನ ಅಧೀನವಾದ, ಗುಣತಃ = ಗುಣಪ್ರಯುಕ್ತವಾಗಿದೆ. ವಸ್ತುತಃ = ಸ್ವಾಭಾವಿಕವಾಗಿ, ನ = ಅಲ್ಲ. ಗುಣಸ್ಯ = ಗುಣಕ್ಕೆ, ಮಾಯಾಮೂಲತ್ವಾತ್ = ಪ್ರಕೃತಿ ಅಜ್ಞಾನವು ಮೂಲಕಾರಣವಾದ್ದರಿಂದ, ಮೇ = ನನಗೆ, ನ ಬಂಧಃ = ಬಂಧವು ಇಲ್ಲ, ನ ಮೋಕ್ಷಣಂ = ಮೋಕ್ಷವೂ ಇಲ್ಲ.

(೨) ಮೇ= ನನಗೆ ಅಧೀನನಾದ, ಗುಣತಃ= ಅಪ್ರಧಾನನಾದ ಜೀವನಿಗೆ, ಗುಣತಃ= ರಜಸ್-ತಮಸ್‌ಗಳ ಸಂಬಂಧದಿಂದ, ಬದ್ಧ ಇತಿ ಆಖ್ಯಾ (ಭವತಿ)= 'ಬದ್ಧ' ಎಂದು ವ್ಯವಹಾರವು ಇದೆ.

**ಅನುವಾದ–** ನನಗೆ ಅಧೀನವಾದ ಗುಣಗಳಿಂದಲೇ ಜೀವನಿಗೆ ಬದ್ಧ ಮತ್ತು ಮುಕ್ತ ಎಂಬ ವ್ಯವಹಾರ. ಸ್ವಾಭಾವಿಕವಾಗಿ ಜೀವ ಬದ್ಧನೂ ಅಲ್ಲ. ಮುಕ್ತನೂ ಅಲ್ಲ. ಈ ಗುಣಗಳ ಸಂಬಂಧಕ್ಕೆ ಪ್ರಕೃತಿ ಎಂಬ ಹೆಸರಿನ ಅಜ್ಞಾನವೇ ಕಾರಣ. ಆದ್ದರಿಂದ ನನಗೆ ಬಂಧವೂ ಇಲ್ಲ, ಮೋಕ್ಷವೂ ಇಲ್ಲ.

ಮದಧೀನಗುಣಾಜ್ಜೀವೇ ಬದ್ಧಾಖ್ಯಾ ನ ಸ್ವಭಾವತಃ ।
ಇತಿ ಪೂರ್ವಾರ್ಧವಾಕ್ಯಾರ್ಥೋ ಮೇ ಧನಾತ್ ಜೀವತೀತಿವತ್
॥ ೨೬೩ ॥

**ಅರ್ಥ**– ಮೇ = ನನ್ನ ಧನಾತ್ = ಧನದಿಂದ, ಜೀವತಿ = ಜೀವಿಸುತ್ತಾನೆ, ಇತಿವತ್ = ಈ ರೀತಿಯ ವ್ಯವಹಾರದಂತೆ, ಮದಧೀನಗುಣಾತ್ = ನನ್ನ ಅಧೀನವಾದ ಗುಣಗಳಿಂದ, ಜೀವೇ = ಜೀವನಲ್ಲಿ ಬದ್ಧಾಖ್ಯಾ = ಬದ್ಧನೆಂಬ ವ್ಯವಹಾರವು, ನ ಸ್ವಭಾವತಃ = ಸ್ವಭಾವಪ್ರಯುಕ್ತವಲ್ಲ, ಇತಿ = ಎಂದು, ಪೂರ್ವಾರ್ಧವಾಕ್ಯಾರ್ಥಃ = ಭಾಗವತ ಶ್ಲೋಕದ ಪೂರ್ವಾರ್ಧವಾಕ್ಯದ ಅರ್ಥ.

**ಅನುವಾದ**– 'ಮೇ ಧನಾತ್ ಜೀವತಿ' ಎಂದು ಹೇಳಿದರೆ ನನಗೆ ಅಧೀನವಾದ ಧನದಿಂದ ಜೀವಿಸುತ್ತಾನೆ ಎಂದೇ ಅರ್ಥ. ಹೀಗೆಯೇ ಭಾಗವತ ೧೧.೧೧.೧ ನೆಯ ಪದ್ಯದ ಪೂರ್ವಾರ್ಧವಾಕ್ಯಕ್ಕೆ ನನಗೆ ಅಧೀನವಾದ ರಜಸ್-ತಮೋ ಗುಣಗಳಿಂದ ಜೀವನನ್ನು ಕುರಿತು 'ಬದ್ಧ' ಎಂಬ ವ್ಯವಹಾರವು (ಶಾಸ್ತ್ರಗಳಲ್ಲಿ) ಇದೆ. ಜೀವನ ಸ್ವಭಾವಕ್ಕನುಗುಣವಾಗಿ ಈ ವ್ಯವಹಾರವಿಲ್ಲ.

**ಭಾವವಿಲಾಸಿನೀ**– ಉಪಯುಕ್ತಪ್ರಮೇಯಮುಕ್ತ್ವಾ ಶ್ಲೋಕಾರ್ಥಮಾಹ– ಮದಧೀನೇತಿ ॥ ಮೇ ಮಮ ಧನಾಜ್ಜೀವತೀತಿವತ್ । ಯಥಾ ಮದಧೀನ ಧನಾಜ್ಜೀವತೀತ್ಯೇವಾರ್ಥೋ ಲಭ್ಯತೇ ನತು ಮದಂಗಾಶ್ರಿತಧನಾದಿತಿ । ತಥಾ ಮೇ ಗುಣತ ಇತ್ಯುಕ್ತೇಽಪಿ ಮದಧೀನಗುಣಾದಿತ್ಯರ್ಥೋ ಲಭ್ಯತೇ। ಅನ್ಯಥಾ ಪ್ರಾಗುಕ್ತವಚನವಿರೋಧಾದಿತಿ ಭಾವಃ। ನ ವಸ್ತುತ ಇತ್ಯಸ್ಯಾರ್ಥಃ– ನ ಸ್ವಭಾವತ ಇತಿ ॥ ಸದಾ ವಸ್ತುಂ ಶೀಲಮಸ್ಯಾಸ್ತೀತಿ ವಸ್ತು ಇತಿ ವ್ಯುತ್ಪತ್ತ್ಯಾ ವಸ್ತುಪದೇನ ಸ್ವಭಾವ ಏವೋಚ್ಯತ ಇತಿ ಭಾವಃ। ಸತ್ತ್ವಾದಿಗುಣವಶಾದ್ ಬದ್ಧಾಖ್ಯೇತ್ಯುಕ್ತೇ ಬಂಧಸ್ಯೌಪಾಧಿಕತ್ವಮೇವ ಲಭ್ಯತೇ, ನ ಮಿಥ್ಯಾತ್ವಮಿತಿ ಭಾವಃ । ಪೂರ್ವಾರ್ಧವಾಕ್ಯಾರ್ಥಃ ಪೂರ್ವಾರ್ಧರೂಪವಾಕ್ಯಸ್ಯಾರ್ಥಃ । ಇದಮುಕ್ತಂ ಭವತಿ। ಮೇ ಗುಣತಃ ಮದಧೀನಸತ್ತ್ವಾದಿಗುಣತಃ ಜೀವಸ್ಯ ಬದ್ಧೋ ಮುಕ್ತ ಇತ್ಯಾಖ್ಯಾ ಹಿ । ನ ವಸ್ತುತಃ ನ ಸ್ವಭಾವತ ಇತಿ ಪೂರ್ವಾರ್ಧಸ್ಯಾರ್ಥೋ ನತು 'ಮೇ ಮಮೈವ ಗುಣತಸ್ಸತ್ತ್ವಾದಿಗುಣವಶಾದ್ ಬದ್ಧೋ ಮುಕ್ತ ಇತ್ಯಾಖ್ಯಾ ನತು ವಸ್ತುತಃ ತತ್ತ್ವತ' ಇತಿ ಮಾಯಾವಾದ್ಯಭಿಲಷಿತಾರ್ಥ ಇತಿ । ಕಥಂಚಿದ್ ಬಂಧಮಾತ್ರಸ್ಯ ಮಿಥ್ಯಾತ್ವಸಂಭವೇಽಪಿ ಬಂಧನಿವೃತ್ತಿರೂಪಮುಕ್ತತ್ವಸ್ಯ ಮಿಥ್ಯಾತ್ವಾಸಂಭವೇನ ನ ವಸ್ತುತ ಇತ್ಯಸ್ಯಾಸ್ಮದುಕ್ತ-ರೀತ್ಯೈವಾರ್ಥಸ್ತ್ವಯಾ ವಕ್ತವ್ಯ ಇತಿ ಪರೋಕ್ತಾರ್ಥೇ ದೂಷಣಾಂತರಂ ಚ ದ್ರಷ್ಟವ್ಯಮ್ । ಅಸ್ಮನ್ಮತೇ ತು ಬಂಧಸ್ಯ ಬಂಧಧ್ವಂಸದಶಾಯಾಮಭಾವೇನ ಬಂಧಧ್ವಂಸಸ್ಯ ಚ ಬಂಧ-ದಶಾಯಾಮಭಾವೇನ ಉಭಯೋರಪ್ಯಸದಾತನತ್ವಾದಸ್ವಾಭಾವಿಕತ್ವಮಿತಿ ನ ಕಶ್ಚಿತ್ ಕ್ಷುದ್ರೋಪದ್ರವಃ ॥ ೨೬೨-೬೩ ॥

**ವಿವರಣೆ–** (1) ಲೋಕದಲ್ಲಿ 'ನನ್ನ ಧನದಿಂದ ಇವನು ಜೀವಿಸುತ್ತಾನೆ' ಎಂಬ ಮಾತು ಇದೆ. ಇಲ್ಲಿ 'ನನ್ನ ಧನ' ಎಂದರೆ ನನಗೆ ಅಧೀನವಾದ ಎಂದೇ ಅರ್ಥ.

ಹೀಗೆಯೇ 'ಮೇ ಗುಣತಃ ಬದ್ಧೋ ಮುಕ್ತ ಇತಿ ಹ್ಯಾಖ್ಯಾ'- ಈ ಮಾತಿಗೆ ನನ್ನ ಅಧೀನವಾದ ಗುಣಗಳಿಂದ ಜೀವನಿಗೆ ಬದ್ಧ, ಮುಕ್ತ ಎಂಬ ಹೆಸರು ಎಂದೇ ಅಭಿಪ್ರಾಯ.

(2) 'ವಸ್ತು' ಶಬ್ದಕ್ಕೆ ಸ್ವಭಾವ ಎಂದು ಅರ್ಥ. (ಯಾವಾಗಲೂ ಇರುವ ಸ್ವಭಾವವುಳ್ಳ ಪದಾರ್ಥಕ್ಕೆ 'ವಸ್ತು' ಎಂದು ಹೆಸರು).

(3) ಅದ್ವೈತದರ್ಶನವು ಭಾಗವತಶ್ಲೋಕದಲ್ಲಿರುವ 'ನ ವಸುತ್ತ' ಪದಗಳಿಗೆ 'ಮಿಥ್ಯಾ' ಎಂದು ಅರ್ಥ; ಆದ್ದರಿಂದ ಬಂಧಮೋಕ್ಷಗಳು ಮಿಥ್ಯಾ ಎಂದು ವ್ಯಾಖ್ಯಾನಿಸುತ್ತದೆ. ಇದು ಸರಿಯಲ್ಲ. ಬಂಧವು ಹೇಗಾದರೂ 'ಮಿಥ್ಯಾ' ಆಗಬಹುದು. ಅದಕ್ಕೆ ನಿವೃತ್ತಿಯಾಗುವುದರಿಂದ. ಮೋಕ್ಷವು ಯಾವ ದೃಷ್ಟಿಯಿಂದಲೂ ಮಿಥ್ಯಾ ಆಗುವುದಿಲ್ಲ. ಆ ದರ್ಶನದ ಪ್ರಕಾರ ಬಂಧವು ನಿವರ್ತ್ಯ, ಮುಕ್ತಿಯು ನಿವೃತ್ತಿ; ನಿವರ್ತ್ಯದ 'ಸತ್ತಾ' ಕ್ಕಿಂತ ನಿವೃತ್ತಿಯ 'ಸತ್ತಾ' ಹೆಚ್ಚು.

(4) 'ತತ್ವವಾದ' ವುತ್ರಿಕಾಲದಲ್ಲೂ ಇರುವ ವಸ್ತುವನ್ನು ಸ್ವಾಭಾವಿಕ ಎಂದು ಪರಿಗಣಿಸುತ್ತದೆ. ಬಂಧಕಾಲದಲ್ಲಿ ಮೋಕ್ಷವು ಇರುವುದಿಲ್ಲ; ಮೋಕ್ಷಕಾಲದಲ್ಲಿ ಬಂಧವು ಇರುವುದಿಲ್ಲ. ಆದ್ದರಿಂದ ಎರಡೂ ಸ್ವಾಭಾವಿಕ ಅಲ್ಲ ಎಂಬ ಅಭಿಪ್ರಾಯವು ಉಪಪನ್ನ.

**ಸ್ವಸ್ಯೈವ ಗುಣತೋ ಬಂಧ ಇತ್ಯರ್ಥಸ್ತೂಕ್ತವಾಕ್ಯತಃ ।**
**ಉತ್ತರಾರ್ಧೋತ್ತರಶ್ಲೋಕಪರ್ಯಾಲೋಚನಯಾ ಚ ನ ॥ ೨೬೪ ॥**

**ಅರ್ಥ–** ಸ್ವಸ್ಯ ಏವ= ತನಗೇ (ಕೃಷ್ಣನಿಗೇ), ಗುಣತಃ= ತ್ರಿಗುಣಪ್ರಯುಕ್ತ, ಬಂಧಃ= ಬಂಧವು, ಇತಿ ಅರ್ಥಃ ತು= ಎಂದು ಅರ್ಥವು, ಉಕ್ತವಾಕ್ಯತಃ= ಹೇಳಲ್ಪಟ್ಟ (ಶ್ಲೋಕ ೨೬೧ ಭಾಗ ೧೧.೧೩..೧) ವಾಕ್ಯಕ್ಕೆ ಅನುಗುಣವಾಗಿ, ಉತ್ತರಾರ್ಧ (ಭಾಗ ೧೧.೧೧.೧ ರ) ಉತ್ತರಾರ್ಧದ ಮತ್ತು ಉತ್ತರ ಶ್ಲೋಕ = ಮುಂದಿನ (ಭಾಗ ೧೧.೧೧.೪) ಶ್ಲೋಕದ, ಪರ್ಯಾಲೋಚನಯಾ ಚ= ವಿಮರ್ಶೆಯಿಂದಲೂ, ನ= ಅಲ್ಲ.

**ಅನುವಾದ–** ಭಾಗ. ೧೧.೧೧.೧ ನೆಯ ಶ್ಲೋಕದಲ್ಲಿರುವ 'ಬದ್ಧೋ ಮುಕ್ತ ಇತಿ ಹ್ಯಾಖ್ಯಾ ಮೇ ಗುಣತಃ' ಈ ಪದಗಳಿಗೆ ''ತನಗೆ= ಕೃಷ್ಣನಿಗೆ ಗುಣಸಂಬಂಧದಿಂದ ಬಂಧ'' ಎಂಬ ಅರ್ಥವು ಅಲ್ಲವೇ ಅಲ್ಲ. ಈ ಅರ್ಥಕ್ಕೆ ಭಾಗ. ೧೧.೧೩.೧, ೧೧.೧೧.೧ ರ ಉತ್ತರಾರ್ಧ ಮತ್ತು ೧೧.೧೧.೪ನೇ ಶ್ಲೋಕಗಳ ವಿರೋಧ-ವಿರುವುದರಿಂದ.

**ಭಾವವಿಲಾಸಿನೀ–** ಪರೋಕ್ತಾರ್ಥೇ ಪ್ರಾಗುಕ್ತದೂಷಣಮನುವದನ್ ಪುನರಪಿ ದೋಷದ್ವಯಮಾಹ– ಸ್ವಸ್ಯೈವೇತಿ ॥ ಉಕ್ತವಾಕ್ಯತಃ 'ಸತ್ತ್ವಂ ರಜಸ್ತಮ ಇತಿ ಗುಣಾ ಜೀವಸ್ಯ ನೈವ ಮೇ' ಇತ್ಯುಕ್ತವಾಕ್ಯತಃ ಗುಣಸ್ಯ ಮಾಯಾಮೂಲತ್ವಾತ್ 'ನ ಮೇ ಮೋಕ್ಷೋ ನ ಬಂಧನಮ್' ಇತಿ ಉತ್ತರಾರ್ಧಸ್ಯ 'ಏಕಸ್ಯೈವ ಮಮಾಂಶಸ್ಯ' ಇತ್ಯುತ್ತರಶ್ಲೋಕಸ್ಯ ಚ ಪರ್ಯಾಲೋಚನಯಾ ॥ ೨೬೪ ॥

**ಮಾಯಾಮೂಲಗುಣಾಭಾವಾತ್ ನ ಮೇ ಮೋಕ್ಷೋ ನ ಬಂಧನಮ್ ।**
**ಇತ್ಯುತ್ತರಾರ್ಧೇ ಯತ್ ಕೃಷ್ಣಸ್ಸ್ವಸ್ಯ ಬಂಧಂ ನಿಷೇಧತಿ ॥ ೨೬೫ ॥**

**ಅರ್ಥ–** ಯತ್= ಏಕೆಂದರೆ, ಮಾಯಾ = ಪ್ರಕೃತಿ, ಮೂಲ = ಮೂಲಕವಾದ, ಗುಣ= ಸತ್ತ್ವಾದಿಗುಣಗಳ, ಅಭಾವಾತ್ = ಅಭಾವದಿಂದ, ಮೇ = ನನಗೆ, ಮೋಕ್ಷಃ = ಮುಕ್ತಿಯು, ನ = ಇಲ್ಲ, ಬಂಧನಂ = ಬಂಧನವೂ, ನ = ಇಲ್ಲ, ಇತಿ = ಎಂದು, ಉತ್ತರಾರ್ಧೇ = ಶ್ಲೋಕದ ಉತ್ತರಾರ್ಧದಲ್ಲಿ, ಕೃಷ್ಣಃ= ಕೃಷ್ಣನು, ಸ್ವಸ್ಯ = ತನಗೆ, ಬಂಧಂ = ಬಂಧವನ್ನು, ನಿಷೇಧತಿ = ನಿಷೇಧಿಸಿದ್ದಾನೆ.

**ಅನುವಾದ–** ೧೧.೧೧.೧೮ 'ನ ಮೇ ಮೋಕ್ಷೋ ನ ಬಂಧನಮ್' - ಈ ಉತ್ತರಾರ್ಧದಲ್ಲಿ ಕೃಷ್ಣನು ತನಗೆ ಬಂಧವನ್ನು ನಿಷೇಧಿಸಿದ್ದಾನೆ. ಗುಣಗಳಿಗೆ ಮೂಲ ಮಾಯೆ ಎಂದು ಹೇಳಿ, ತನಗೆ ಪ್ರಕೃತಿ ಮೂಲವಾದ ಗುಣಗಳು ಇಲ್ಲವೆಂದು ಸೂಚಿಸಿ, ನಿಷೇಧಕ್ಕೆ ಕಾರಣವನ್ನು ಕೊಟ್ಟಿದ್ದಾನೆ.

**ಭಾವವಿಲಾಸಿನೀ–** ಉತ್ತರಾರ್ಧಪರ್ಯಾಲೋಚನಾಪ್ರಕಾರಮಾಹ– **ಮಾಯಾಮೂಲೇತಿ** ॥ 'ಮಾಯಾಮೂಲಗುಣಾಭಾವಾದ್' ಇತ್ಯನೇನ ಗುಣಸ್ಯ ಸತ್ತ್ವಾದಿಗುಣಸ್ಯ ಮಾಯಾಮೂಲತ್ವಾತ್ ಮಾಯೈವ ಪ್ರಕೃತಿರೇವ ಮೂಲಂ ಯಸ್ಯ ಸಃ ತತ್ತ್ವಾತ್ । ತಸ್ಯ ಚ ಗುಣಸ್ಯ ಮಾಯಾರಹಿತೇ ಮಯ್ಯಭಾವಾದಿತ್ಯರ್ಥ ಉಕ್ತೋ ಭವತಿ । ಯದ್ಯಪಿ ಮೂಲೇ ಗುಣಸ್ಯ ಮಾಯಾಮೂಲತ್ವಮಾತ್ರಮುಕ್ತಮ್, ನತು ತಸ್ಯ ಗುಣಸ್ಯ ಸ್ವಸ್ಮಿನ್ನಭಾವಃ । ತಥಾಪಿ 'ನ ಬಂಧನಮ್' ಇತ್ಯುಕ್ತಬಂಧಾಭಾವಘಟಕತಯಾ ಗುಣಾಭಾವೋಽಪ್ಯರ್ಥತ ಉಕ್ತ ಏವೇತಿ ದ್ರಷ್ಟವ್ಯಮ್ । ಮೇ ಮಮ ಬಂಧನಂ ಬಂಧೋಽಪಿ ನ, ಮೋಕ್ಷೋಽಪಿ ನ । ಪ್ರಕೃತಿಮೂಲಾ ಹಿ ಗುಣಾಃ । ಅಪ್ರಾಕೃತೇ ಮಯಿ ಪ್ರಕೃತಿಮೂಲಗುಣಾಭಾವೇನ ಬಂಧೋ ಬಂಧಾನ್ಮೋಕ್ಷಶ್ಚ ಕಥಂ ಸ್ಯಾತ್? ಇತ್ಯರ್ಥಃ । ಮಾಯಾಮೂಲತ್ವಾದಿತಿ ಹೇತುಗರ್ಭಂ ವಿಶೇಷಣಮ್ । ಗುಣಸ್ಯ ಮಾಯಾಮೂಲತ್ವಾತ್ ಮಾಯಾಯಾಶ್ಚ 'ಮಾಯಾಂ ವ್ಯುದಸ್ಯ ಚಿಚ್ಛಕ್ತ್ಯಾ' ಇತಿ ಸ್ಮೃತ್ಯಾ ಮಯ್ಯಭಾವಾತ್ ತನ್ಮೂಲಗುಣಾಭಾವಃ। ಗುಣಾಭಾವೇ ತನ್ಮೂಲಬಂಧಾಭಾವಃ। ಬಂಧಾಭಾವೇ ಚ ಪ್ರತಿಯೋಗಿಸತ್ತಾಪೂರ್ವಕಬಂಧಧ್ವಂಸಾಖ್ಯಮೋಕ್ಷಾಭಾವಶ್ಚ । ಅತೋ ನಿತ್ಯಮುಕ್ತ ಏವಾಹಮ್, ಜೀವಸ್ತು ಬದ್ಧ ಇತಿ ಭಾವಃ । ಅನ್ಯಥಾ 'ನಿತ್ಯಮುಕ್ತೋ ನಿತ್ಯಬದ್ಧ ಏಕ

ಏವೇತಿ ಮೇ ಮತಿಃ ಇತಿ ಪೂರ್ವಾಧ್ಯಾಯಾಂತೇ ಉದ್ದವೇನೋಕ್ತಪೂರ್ವಪಕ್ಷಸ್ಯೇದಮುತ್ತರಂ ಕಥಂ ಸ್ಯಾತ್? ಮಮ ಪಕ್ಷೇ ತು ಮುಕ್ತಾವಪಿ ಸ್ವಾಮಿಭೃತ್ಯಭಾವಸದ್ಭಾವೇನ ಭಕ್ತ್ಯಾದಿ-ಬಂಧಸದ್ಭಾವಾನ್ನಿತ್ಯಬದ್ಧತ್ವಂ ಜೀವಸ್ಯ, ಕೃಷ್ಣಸ್ಯ ತು ನಿತ್ಯಮುಕ್ತತ್ವಮೇವ। ಅತಸ್ತ್ವದುಕ್ತಪೂರ್ವಪಕ್ಷೋ ನ ಘಟತ ಇತಿ ಯೋಜನಾಸಂಭವಾತ್ । ಅತ ಏವ ವಕ್ಷ್ಯತಿ' ಅಥ ಬದ್ಧಸ್ಯ ಮುಕ್ತಸ್ಯ ವೈಲಕ್ಷಣ್ಯಂ ವದಾಮಿ ತೇ । ವಿರುದ್ಧಧರ್ಮಿಣೋಸ್ತಾತ ಸ್ಥಿತಯೋರೇಕಧರ್ಮಿಣಿ' ಇತಿ । ಏವಂ ಚೋತ್ತರಾರ್ಧೇ ಸ್ವಸ್ಯ ಭಗವತಾ ಸ್ಪಷ್ಟಂ ಬಂಧಮೋಕ್ಷಾಭಾವಕಥನಾತ್ ಪೂರ್ವಾರ್ಧೇ ಬದ್ಧಮುಕ್ತಾಖ್ಯಾ ಭಗವದಧೀನಗುಣವಶಾಜ್ಜೀವಸ್ಯೇತ್ಯುಚ್ಯತೇ, ನತು ಸ್ವಸ್ಯೈವ । ತಥಾ ಸತಿ ಪೂರ್ವಾರ್ಧಸ್ಯ ಉತ್ತರಾರ್ಧೇನ ಸಹ ವಿರೋಧಾದಿತಿ ಭಾವಃ । ಗುಣಸ್ಯ ಮಾಯಾ-ಮೂಲತ್ವಾತ್ ಮಾಯಿಕತ್ವಾತ್ ಮಿಥ್ಯಾತ್ವಾತ್ । ಮೇ ಪರಮಾರ್ಥತೋ ಬಂಧಮೋಕ್ಷಾದಿಕಂ ನಾಸ್ತೀತಿ ಪರಾಭಿಪ್ರೇತಾರ್ಥಸ್ತು ವಸ್ತುತಃ ಪರಮಾರ್ಥತೋ ಮೇ ಬದ್ಧೋ ಮುಕ್ತ ಇತ್ಯಾಖ್ಯಾ ನೇತಿ ಪೂರ್ವಾರ್ಧೇಽಪಿ ಕಥಿತತ್ವಾತ್ ಪುನರುಕ್ತಂ ಸ್ಯಾತ್ । ಏತಾದೃಶಬಂಧಮೋಕ್ಷಾಭಾವಸ್ಯ ಜೀವೇಽಪಿ ಸಂಭವಾತ್ ಸ್ಥಲದ್ವಯೇಽಪಿ ಮೇ ಇತ್ಯಸ್ಯ ವೈಯರ್ಥ್ಯಾಪತ್ತೇಶ್ಚಾಯುಕ್ತಃ । ಗುಣಸ್ಯ ಮಿಥ್ಯಾತ್ವೇ ಗುಣತೋ ಮೇ ಬದ್ಧೋ ಮುಕ್ತ ಇತ್ಯಾಖ್ಯೇತಿ ಗುಣನಿಮಿತ್ತಕಬಂಧಾದಿಶಬ್ದಾನಾಂ ಸ್ವಸ್ಮಿನ್ನನುಶಾಸನಾಯೋಗಾಚ್ಚ । ಗುಣತಃ ಗುಣಭ್ರಾಂತಿತಃ ಆಖ್ಯಾಮಾತ್ರಮಿತ್ಯರ್ಥಕಥನೇ ಶ್ರುತಹಾನ್ಯಶ್ರುತಕಲ್ಪನಾಪ್ರಸಂಗಃ । ಅತ ಏವ ಪರಮಾರ್ಥತೋ ಬಂಧಮೋಕ್ಷಾಭಾವಃ ಅಪರಮಾರ್ಥತೋ ಬದ್ಧತ್ವಮುಕ್ತತ್ವಾಖ್ಯೇತ್ಯಪಿ ಪರಾಸ್ತಮ್ । ಪರಮಾರ್ಥತಃ ಅಪರಮಾರ್ಥತ ಇತಿ ಪದದ್ವಯಸ್ಯಾಶ್ರುತತ್ವಾತ್ । ಅಪಾರಮಾರ್ಥಿಕರಜತತ್ವೇನ ಶುಕ್ತೇ ರಜತಾಖ್ಯಾಯಾ ಅದರ್ಶನೇನಾಯುಕ್ತಂ ಚ । ವ್ಯಾವಹಾರಿಕತ್ವಮಾದಾಯ ಬದ್ಧತ್ವಾದಿಘಟನಾಯಾಂ ಚ ಬಂಧಶೂನ್ಯತ್ವಾದ್ಯುಕ್ತೇರಯೋಗಾತ್ । ನಹಿ ವ್ಯಾವಹಾರಿಕಘಟತ್ವವತಿ ಘಟೇ ಘಟತ್ವಶೂನ್ಯತಾಪಿ ಕಥ್ಯತೇ । ವ್ಯವಹಾರತ ಇತ್ಯಸ್ಯಾಶ್ರುತತ್ವೇನಾಶ್ರುತಕಲ್ಪನಾಯಾ ಅಪರಿಹಾರಾಚ್ಚ । ಏಕಸ್ಯೈವ ವ್ಯಾವಹಾರಿಕತ್ವಪಾರಮಾರ್ಥಿಕತ್ವಾಭ್ಯಾಂ ಗುಣಭಾವಾಭಾವಕಲ್ಪನಾ 'ಗುಣಾ ಜೀವಸ್ಯ ನೈವ ಮೇ' ಇತಿ ವದತೋ ಗ್ರಂಥಕಾರಸ್ಯಾನಭಿಪ್ರೇತಾ ಚ । ಅತೋ ಯತ್ಕಿಂಚಿದೇತತ್ । ಯದ್ ಯಸ್ಮಾತ್ ॥ ೨೬೫ ॥

**ವಿವರಣೆ–** ಶ್ಲೋಕದ ಉತ್ತರಾರ್ಧದಲ್ಲಿ ಗುಣಗಳು ಪ್ರಕೃತ್ಯಧೀನವೆಂದು ಮಾತ್ರ ಹೇಳಲಾಗಿದೆ. ಆದರೆ ಬಂಧನ- ಮೋಕ್ಷಗಳು ತನಗೆ ಇಲ್ಲವೆಂದು ಹೇಳಿದ್ದರಿಂದ ಅದಕ್ಕೆ ಕಾರಣವಾದ ಗುಣತ್ರಯದ ಸಂಬಂಧವು ಈಶನಲ್ಲಿ ಇಲ್ಲವೆಂದು ಅರ್ಥಾತ್ ಸಿದ್ಧವಾಗುತ್ತದೆ. ಪರಮಾತ್ಮನಿಗೆ ಪ್ರಕೃತಿಯ ಸಂಬಂಧವಿಲ್ಲವಾದ್ದರಿಂದ ಸತ್ವಾದಿಗುಣಗಳಿಲ್ಲ. ಆದ್ದರಿಂದ ಬಂಧನವಿಲ್ಲ. ಬಂಧನವಿಲ್ಲವಾದ್ದರಿಂದ ಬಂಧಧ್ವಂಸವೆಂಬ ಮೋಕ್ಷವೂ ಇಲ್ಲ. ಆದ್ದರಿಂದ ಈಶನು ನಿತ್ಯಮುಕ್ತ. ಮುಕ್ತಜೀವರು, ಭಕ್ತರೂ, ಉಪಾಸಕರೂ, ಅಸ್ವತಂತ್ರರೂ ಆಗಿರುತ್ತಾರೆ. ಭಕ್ತಿ-ಉಪಾಸನೆ-ಅಸ್ವಾತಂತ್ರ್ಯಗಳು ಬಂಧ. ಆದ್ದರಿಂದ ಜೀವಾತ್ಮರೆಲ್ಲರೂ ನಿತ್ಯಬದ್ಧರು. ಅಷ್ಟೇ ಅಲ್ಲದೆ, ಕೃಷ್ಣನೇ-

'ಅಥ ಬದ್ಧಸ್ಯ ಮುಕ್ತಸ್ಯ ವೈಲಕ್ಷಣ್ಯಂ ವದಾಮಿ ತೇ ।
ವಿರುದ್ಧಧರ್ಮಿಣೋಸ್ತಾತ ಸ್ಥಿತಯೋರೇಕಧರ್ಮಿಣಿ ॥ - ಭಾಗ. ೧೧.೧೧.೪

ಈ ಶ್ಲೋಕದಿಂದ ಜೀವ ಮತ್ತು ಈಶರಲ್ಲಿ ವಿರುದ್ಧ ಧರ್ಮಗಳನ್ನು ತೋರಿಸಿ ತನಗೆ ಮೋಕ್ಷವಿಲ್ಲ ಮತ್ತು ತನ್ನ ಅಧೀನ ಗುಣಗಳಿಂದ ಜೀವನು ಬದ್ಧ ಎಂದು ಹೇಳಿದ್ದಾನೆ.

ಅದ್ವೈತಿಗಳು 'ಗುಣಸ್ಯ ಮಾಯಾಮಯತ್ವಾತ್' ಎಂಬುದಕ್ಕೆ ಗುಣಗಳನ್ನು ಮಿಥ್ಯೆ ಎಂದು ಅಂಗೀಕರಿಸಿ ಪಾರಮಾರ್ಥಿಕವಾಗಿ ಈಶನಿಗೆ ಬಂಧ ಮತ್ತು ಮೋಕ್ಷಗಳು ಇಲ್ಲವೆಂದು ವ್ಯಾಖ್ಯಾನಮಾಡಿದ್ದಾರೆ. ಅದು ಸರಿಯಲ್ಲ. ಏಕೆಂದರೆ, ಆ ಶ್ಲೋಕದ ಪೂರ್ವಾರ್ಧದಲ್ಲಿಯೇ 'ವಸ್ತುತಃ ಮೇ ನ' (ನನಗೆ ಬಂಧನ ಮತ್ತು ಮೋಕ್ಷಗಳಿಲ್ಲ) ಎಂದು ಹೇಳಿರುವುದರಿಂದ ಪೌನರುಕ್ತ್ಯದೋಷವು ಬರುತ್ತದೆ. ಮಿಥ್ಯೆಯಾದ ಬಂಧಮೋಕ್ಷಗಳ ಅಭಾವ ಜೀವನಲ್ಲಿಯೂ ಇರುವುದರಿಂದ ನನಗೆ ಎಂದು ಶ್ಲೋಕದಲ್ಲಿ ಎರಡು ಸಲ ಕೃಷ್ಣನು ಹೇಳಿದ್ದೂ ತಪ್ಪಾದೀತು. ಅಷ್ಟೇ ಅಲ್ಲದೆ ಗುಣಗಳು ಮಿಥ್ಯೆಯಾದರೆ, ನನ್ನ ಅಧೀನವಾದ ಗುಣಗಳಿಂದ ಜೀವನು ಬದ್ಧ ಎಂದು ಹೇಳಿದ್ದು ಅನುಚಿತವಾಗುತ್ತದೆ.

ಗುಣತಃ ಎಂಬುದಕ್ಕೆ ಗುಣದ ಭ್ರಾಂತಿಯಿಂದ ಜೀವನು ಬದ್ಧ ಮತ್ತು ಮುಕ್ತನೆಂಬ ವ್ಯಾಖ್ಯಾನವೂ ಸರಿಯಲ್ಲ. ಏಕೆಂದರೆ ಇರುವ ಅರ್ಥವನ್ನು ಬಿಟ್ಟು ಇಲ್ಲದೇ ಇರುವ ಅರ್ಥವನ್ನು ಗ್ರಹಿಸುವುದು ಶಾಸ್ತ್ರವಿರುದ್ಧ.

ಇನ್ನು ಪಾರಮಾರ್ಥಿಕವಾಗಿ ಬಂಧ-ಮೋಕ್ಷಗಳ ಅಭಾವ, ಅಪಾರಮಾರ್ಥಿಕವಾಗಿ ಬಂಧ ಮೋಕ್ಷಗಳು ಎಂಬ ವ್ಯಾಖ್ಯಾನವೂ ಸರಿಯಲ್ಲ. ಏಕೆಂದರೆ ಶ್ಲೋಕದಲ್ಲಿ ಎಲ್ಲಿಯೂ ಪಾರಮಾರ್ಥಿಕ ಮತ್ತು ಅಪಾರಮಾರ್ಥಿಕ ಎಂಬ ಪದವಿಲ್ಲ. ಅಷ್ಟೇ ಅಲ್ಲದೆ ಶುಕ್ತಿಯು ಅಪಾರಮಾರ್ಥಿಕರಜತವಾದ್ದರಿಂದ ಅದಕ್ಕೆ ರಜತ ಎಂದು ಹೆಸರಿಲ್ಲ. ಒಬ್ಬನೇ ಬ್ರಹ್ಮನಿಗೆ ವ್ಯಾವಹಾರಿಕವಾಗಿ ಗುಣವಿದೆ. ಪಾರಮಾರ್ಥಿಕವಾಗಿ ಗುಣಾಭಾವವಿದೆ ಎಂಬ ಕಲ್ಪನೆಯೂ ಸರಿಯಲ್ಲ. ಏಕೆಂದರೆ ಕೃಷ್ಣನು ಜೀವನಿಗೇ ಗುಣ, ನನಗೆ ಇಲ್ಲ ಎಂದು ಹೇಳಿದ್ದಾನೆ. ಆದ್ದರಿಂದ ಗ್ರಂಥಕಾರರಿಗೆ (ವ್ಯಾಸರಿಗೆ) ಮಾಯಾವಾದಿಯ ವ್ಯಾಖ್ಯಾನವು ಸಮ್ಮತವಲ್ಲ.

ಜೀವನೇ ಬಂಧಮೋಕ್ಷವುಳ್ಳವನು -

ಏಕಸ್ಯೈವ ಮಮಾಂಶಸ್ಯ ಜೀವಸ್ಯೈವಂ ಮಹಾಮತೇ ।
ಬಂಧೋಽಸ್ಯಾವಿದ್ಯಯಾಽನಾದಿರ್ವಿದ್ಯಯಾ ಚ ತಥೇತರತ್ ॥ ೨೬೬ ॥

**ಅರ್ಥ–** ಮಹಾಮತೇ = ಮಹಾಜ್ಞಾನಿ ಉದ್ಧವನೇ!, ಮಮ= ನನ್ನ, ಅಂಶಸ್ಯ= ಭಿನ್ನ ಅಂಶನಾದ, ಏಕಸ್ಯ ಜೀವಸ್ಯೈವ= ಜೀವನಿಗೆ ಮಾತ್ರ, ಏವಂ= ಹೀಗೆ= ಬಂಧಮೋಕ್ಷಗಳು, ಅಸ್ಯ= ಈ ಜೀವನಿಗೆ, ಅವಿದ್ಯಯಾ= ಅಜ್ಞಾನದಿಂದ, ಅನಾದಿಃ ಬಂಧಃ= ಅನಾದಿಯಾದ ಬಂಧವು, ವಿದ್ಯಯಾ ಚ= ತತ್ತ್ವಜ್ಞಾನದಿಂದ, ಇತರತ್= ಬಂಧ ಭಿನ್ನವಾದ ಮುಕ್ತಿಯು.

**ಅನುವಾದ–** ಮಹಾಜ್ಞಾನಿ ಉದ್ಧವನೇ! ನನ್ನ ಭಿನ್ನಾಂಶರಾದ ಜೀವಾತ್ಮರಿಗೆ ಮಾತ್ರ ಬಂಧ ಮತ್ತು ಮೋಕ್ಷಗಳು. ಈ ಜೀವಾತ್ಮರಿಗೆ ಅವಿದ್ಯೆಯಿಂದಾಗಿ ಅನಾದಿ ಬಂಧ; ವಿದ್ಯೆಯಿಂದ ಮುಕ್ತಿ.

**ಭಾವವಿಲಾಸಿನೀ–** ಅಧುನಾ ಉತ್ತರಶ್ಲೋಕಪರ್ಯಾಲೋಚನಾಪ್ರಕಾರಮಾಹ- **ಏಕಸ್ಯೈವೇತಿ** ॥

**ವಿವರಣೆ–** 'ಉತ್ತರಶ್ಲೋಕಪರ್ಯಾಲೋಚನೆಯಾ' ಎಂದು ಶ್ಲೋಕ 264ರಲ್ಲಿ ಹೇಳಲಾಗಿದೆ. ಈಗ ಈ ಪರ್ಯಾಲೋಚನೆಯ ರೀತಿಯನ್ನು ಹೇಳುತ್ತಿದ್ದಾರೆ.

ಪ್ರಶ್ನೆ : 'ಪಾದೋಽಸ್ಯ ವಿಶ್ವಾ ಭೂತಾನಿ' - ಪುರುಷಸೂಕ್ತ.
'ಮಮೈವಾಂಶೋ ಜೀವಲೋಕೇ' - ಭಗವದ್ಗೀತೆ.

ಈ ಪ್ರಮಾಣಗಳಿಂದ ಜೀವಾತ್ಮರು ಪರಮಾತ್ಮನ ಅಂಶ ಎಂದು ತಿಳಿಯುತ್ತದೆ. ಆದ್ದರಿಂದ ಜೀವಾತ್ಮರಿಗೆ ಬಂಧ-ಮೋಕ್ಷಗಳಿದ್ದರೆ ಪರಬ್ರಹ್ಮನಿಗೂ ಇದ್ದೇ ಇದೆ?

ಉತ್ತರ : ಇಲ್ಲ. 'ಅಂಶ' ಶಬ್ದಕ್ಕೆ ಭಿನ್ನಾಂಶ ಎಂದು ಅರ್ಥ.

'ಭಿನ್ನಾಂಶಂಸ್ಯೈವ ಜೀವಸ್ಯ ಬಂಧಮೋಕ್ಷೌ ನ ಮೇ ಕ್ವಚಿತ್' - ಇದು ಮಧ್ವಾಚಾರ್ಯರು ತಮ್ಮ ಶ್ರೀಭಾಗವತತಾತ್ಪರ್ಯದಲ್ಲಿ ಉದಾಹರಿಸಿರುವ ಪ್ರಮಾಣ.

ಸ್ವಭಿನ್ನಾಂಶಸ್ಯ ಜೀವಾಖ್ಯಖಗಸ್ಯೈಕಸ್ಯ ಕೇವಲಂ ।
ಬಂಧಶ್ಚ ಬಂಧಾನ್ಮೋಕ್ಷಶ್ಚ ನ ಸ್ವಸ್ಯೇತ್ಯಾಹ ಸ ಪ್ರಭುಃ ॥ ೨೬೭ ॥

**ಅರ್ಥ–**ಸ್ವ = ತನ್ನ, ಭಿನ್ನಾಂಶಸ್ಯ= ಭಿನ್ನಾಂಶನಾದ, ಏಕಸ್ಯ ಜೀವಾಖ್ಯಖಗಸ್ಯ ಕೇವಲಮ್= ಜೀವ ಎಂಬ ಹೆಸರಿನ ಹಕ್ಕಿಗೆ ಮಾತ್ರ, ಬಂಧಃ= ಬಂಧನವು, ಬಂಧಾತ್= ಬಂಧನದಿಂದ, ಮೋಕ್ಷಶ್ಚ= ಮುಕ್ತಿಯೂ ಆಗುತ್ತದೆ. ನ ಸ್ವಸ್ಯ= ತನಗಲ್ಲ, ಇತಿ = ಎಂದು, ಸಃ ಪ್ರಭುಃ = ಶ್ರೀಕೃಷ್ಣಪರಮಾತ್ಮನು, ಆಹ = ಹೇಳಿದ್ದಾನೆ.

**ಅನುವಾದ–** ಜೀವನು ನನ್ನ ಭಿನ್ನಾಂಶ. ಅಂತಹ ಜೀವನೆಂಬ ಪಕ್ಷಿಗೆ ಮಾತ್ರ ಬಂಧನ ಮತ್ತು ಆ ಬಂಧನದಿಂದ ಮೋಕ್ಷವು ಆಗುತ್ತದೆ. ನನಗೆ ಅಲ್ಲ ಎಂದು ಕೃಷ್ಣನೇ ಭಾಗವತ (೧೧.೧೧.೪) ಶ್ಲೋಕದಲ್ಲಿ ಹೇಳಿದ್ದಾನೆ.

**ಭಾವವಿಲಾಸಿನೀ–** ಶ್ಲೋಕಾರ್ಥಮಾಹ- **ಸ್ವಭಿನ್ನಾಂಶಸ್ಯೇತಿ** ॥ ಮಮಾಂಶಸ್ಯೇತ್ಯರ್ಥಕಥನಮ್- **ಸ್ವಭಿನ್ನಾಂಶಸ್ಯೇತಿ** ॥ ಜೀವಾನಾಂ ಬಹುತ್ವಾದೇಕಸ್ಯೇತ್ಯೇತತ್ ಕಥಮುಪಪದ್ಯತೇ? ಇತ್ಯತ ಉಕ್ತಮ್- **ಜೀವಾಖ್ಯಖಗಸ್ಯೇತಿ** ॥ 'ಸುಪರ್ಣಾವೇತೌ ಸಯುಜೌ ಸಖಾಯೌ' ಇತ್ಯುತ್ತರಪದ್ಯೇ ಖಗದ್ವಯಿತಯಾ ವರ್ಣಿತಯೋರ್ಜೀವಪರಯೋರ್ಮಧ್ಯೇ ಏಕಸ್ಯ ಜೀವಾಖ್ಯಖಗಸ್ಯೇತ್ಯರ್ಥಃ । ಪರಮಾತ್ಮಾಖ್ಯಖಗಭಿನ್ನಖಗತ್ವೇನ ಜೀವಾನಾಮೇಕೀಕರಣಾದೇಕಸ್ಯೇತ್ಯುಕ್ತಮಿತಿ ಭಾವಃ ।' ಅಥ

ಬದ್ಧಸ್ಯ ಮುಕ್ತಸ್ಯ ವೈಲಕ್ಷಣ್ಯಂ ವದಾಮಿ ತೇ । ವಿರುದ್ಧಧರ್ಮಿಣೋಸ್ತಾತ ಸ್ಥಿತಯೋರೇಕ-ಧರ್ಮಿಣಿ ॥' ಇತಿ ಉತ್ತರಶ್ಲೋಕೇ (೧೧.೧೧.೫) 'ಸುಪರ್ಣಾವೇತೌ ಸಯುಜೌ ಸಖಾಯೌ' ಇತ್ಯುತ್ತರಶ್ಲೋಕೇ (೧೧.೧೧.೬) ಚ ಸ್ಪಷ್ಟಂ ಜೀವಪರಯೋರ್ಭೇದಕಥನಾದಸ್ಮಿನ್ ಪದ್ಯೇ ಚ ಮಮಾಂಶಸ್ಯೇತ್ಯಂಶತ್ವಕಥನಾದ್ ವಾಕ್ಯದ್ವಯಪರ್ಯಾಲೋಚನಯಾ ಭಿನ್ನಾಂಶಸ್ಯೇತ್ಯು-ಕ್ತಮ್ । ಅಸ್ಮಿಂಶ್ಚ ಪದ್ಯೇ ಏಕಸ್ಯ ಜೀವಸ್ಯೈವೇತಿ ಬಂಧಮೋಕ್ಷಯೋರ್ಜೀವೇಽವಧಾರಣಾತ್ ಸ್ವಸ್ಮಿನ್ನಿವಾರಣಾಚ್ಚ ಭಿನ್ನಾಂಶಸ್ಯೇತ್ಯುಕ್ತಮ್ । ಸ್ವರೂಪಾಂಶತ್ವೇ ತು 'ಜೀವಸ್ಯೈವ ನ ಮೇ' ಇತಿ ಕಥಂ ವಿಭಾಗಃ? ಇತಿ ಭಾವಃ । ಇದಂ ಚ ವಿಶೇಷಣಂ ಬಂಧಸ್ಯೈವೌಪಾಧಿಕತ್ವೇ ಹೇತುಗರ್ಭಮ್ । ಸಾರ್ವಕಾಲೀನಸ್ವ- ಭಿನ್ನಾಂಶತ್ವಘಟಕಸ್ಯಾನಂದಾದಿಸಾದೃಶ್ಯಸ್ಯೈವ ಸ್ವಾಭಾವಿಕತ್ವಾದಿತಿ ಹೇತೋಃ ಸೂಚನಾತ್ । ಏಕೇತ್ಯಸ್ಯಾರ್ಥಃ- **ಕೇವಲಮಿತಿ** ॥ ಕೇವಲಂ ಜೀವಸ್ಯೈವ ನ ಸ್ವಸ್ಯೇತ್ಯರ್ಥಃ । ಅತ ಏವೋಕ್ತಮ್- **ಸ ಪ್ರಭುರ್ನ ಸ್ವಸ್ಯೇತ್ಯಾಹೇತಿ** ॥ ತಥಾಚೋತ್ತರಶ್ಲೋಕೇ ಜೀವಸ್ಯೈವಾವಿದ್ಯಯಾ ಬಂಧಃ ವಿದ್ಯಯಾ ಮೋಕ್ಷ ಇತ್ಯುಭಯೋರಪಿ ಸ್ಪಷ್ಟಂ ಜೀವನಿಷ್ಠತ್ವಕಥನಾತ್ ಪೂರ್ವ-ಶ್ಲೋಕೇಽಪಿ ಬಂಧಮೋಕ್ಷಯೋರ್ಜೀವನಿಷ್ಠತ್ವೈವ ಯಥಾ ಭವತಿ, ತಥಾ ಯೋಜನೀಯಮಿತಿ ಭಾವಃ ॥ ೨೬೭ ॥

**ವಿವರಣೆ–** (1) ಭಾಗವತ 11.11.6 ಮತ್ತು 11.11.7 ರಲ್ಲಿ ಜೀವ-ಪರಮಾತ್ಮರಿಗೆ ಭೇದವನ್ನು ಸ್ಪಷ್ಟವಾಗಿ ಹೇಳಿರುವುದರಿಂದ 11.11.4 ರಲ್ಲಿ 'ಮಮಾಂಶಸ್ಯ' ಎಂಬ ಪದಗಳಿಗೆ 'ನನ್ನ ಭಿನ್ನಾಂಶನಾದ' ಎಂದೇ ಅರ್ಥ. ಇದನ್ನು ಸಮರ್ಥಿಸುವ ಪ್ರಮಾಣವನ್ನೂ ಆಚಾರ್ಯ ಮಧ್ವರು ತಮ್ಮ ಶ್ರೀಭಾಗವತತಾತ್ಪರ್ಯನಿರ್ಣಯದಲ್ಲಿ ಹೇಳಿದ್ದಾರೆ.

ಈ ಪದ್ಯದಲ್ಲಿ (11.11.4) ಜೀವಾತ್ಮರುಗಳಿಗೆ ಮಾತ್ರ ಬಂಧ ಮತ್ತು ಮೋಕ್ಷಗಳು; ತನಗೆ ಅಲ್ಲ ಎಂದು ಶ್ರೀಕೃಷ್ಣನು ಹೇಳಿದ್ದಾನೆ. ಜೀವಾತ್ಮರು ಪರಮಾತ್ಮನ ಸ್ವರೂಪಾಂಶರಾದರೆ ಈ ಹೇಳಿಕೆ ಉಪಪನ್ನವಾಗುವುದಿಲ್ಲ. ಆದ್ದರಿಂದಲೂ 'ಮಮಾಂಶಸ್ಯ' - ಈ ಮಾತಿಗೆ 'ಭಿನ್ನಾಂಶರಾದ' ಎಂದೇ ಅರ್ಥ.

(2) ಭಾಗವತ 11.11.4 ರಲ್ಲಿರುವ 'ಏಕಸ್ಯ' ಪದಕ್ಕೆ ಕೇವಲಸ್ಯ ಎಂದು ಅರ್ಥ.

(3) ಭಾಗವತ 11.11.4 ನೆಯ ಶ್ಲೋಕದಲ್ಲಿ ಜೀವನಿಗೇ ಅವಿದ್ಯೆಯಿಂದ ಬಂಧ ಮತ್ತು ವಿದ್ಯೆಯಿಂದ ಮುಕ್ತಿ ಎಂದು ಸ್ಪಷ್ಟವಾಗಿ ಹೇಳಿರುವುದರಿಂದ 11.11.4 ನೇ ಶ್ಲೋಕವೂ ಬಂಧ- ಮೋಕ್ಷಗಳನ್ನು ಜೀವಾತ್ಮನಿಗೆ ಮಾತ್ರವೇ ಹೇಳುತ್ತಿದೆ ಎಂದು ವ್ಯಾಖ್ಯಾನಿಸಬೇಕು.

**ಏವಮಿತ್ಯನುವಾದೇನ ಯಥಾ ಜೀವಸ್ಯ ಬದ್ಧತಾ ।**
**ಪೂರ್ವಶ್ಲೋಕೇಽಪಿ ಭವತಿ ತಥೈವಾರ್ಥಂ ವದೇದ್ ಬುಧಃ ॥ ೨೬೮ ॥**

**ಅರ್ಥ–** 'ಏವಮ್' ಇತಿ= 'ಏವಮ್' ಎಂದು ಅನುವಾದೇನ= ಅನುವಾದವನ್ನು ಮಾಡಿರುವುದರಿಂದ (೧೧.೧೧.೪), ಪೂರ್ವಶ್ಲೋಕೇಽಪಿ 'ಬದ್ಧೋ ಮುಕ್ತ ಇತಿ

ಹ್ಯಾಖ್ಯಾ...' (೧೧.೧೧.೧) ಎಂಬ ಹಿಂದಿನ ಶ್ಲೋಕದಲ್ಲೂ ಜೀವಸ್ಯ= ಜೀವಾತ್ಮನಿಗೇ, ಬದ್ಧತಾ= ಬಂಧನವು (ಎಂಬ ಅರ್ಥವು) ಯಥಾ ಭವತಿ= ಹೇಗೆ ಆಗುವುದೋ, ತಥಾ ಏವ= ಹಾಗೆಯೇ, ಬುಧಃ= ತಿಳಿದವನು, ಅರ್ಥಂ= ಅರ್ಥವನ್ನು, ವದೇತ್= ಹೇಳಬೇಕು.

**ಅನುವಾದ–** ಭಾಗವತ ೧೧.೧೧.೪ ರಲ್ಲಿ 'ಏಕಸ್ಯೈವ ಮಮಾಂಶಸ್ಯ ಜೀವಸ್ಯೈವಂ..' ಎಂದು ಇದೆ. ಇಲ್ಲಿ 'ಏವಮ್' ಇದೆ. 'ಹಿಂದೆ ಹೇಳಿದಂತೆ' ಎಂದು ಇದರ ಅರ್ಥ. ಆದ್ದರಿಂದ ಹಿಂದೆ, ಅಂದರೆ ೧೧.೧೧.೧ ರಲ್ಲಿ ಹೇಳಿದ ವಿಚಾರವನ್ನು ೧೧.೧೧.೪ನೆಯ ಪದ್ಯವು 'ಏವಂ' ಪದದಿಂದ ಅನುವಾದಿಸಿದೆ. ೧೧.೧೧.೪ ರಲ್ಲಿ ಜೀವನಿಗೆ ಮಾತ್ರವೇ ಬಂಧ ಮತ್ತು ಮೋಕ್ಷಗಳು ಎಂದು ಸ್ಪಷ್ಟವಿದೆ. ಆದ್ದರಿಂದ ೧೧.೧೧.೧ ಶ್ಲೋಕವೂ ಜೀವನಿಗೇ ಬದ್ಧತ್ವ ಮತ್ತು ಮುಕ್ತತ್ವಗಳನ್ನು ಹೇಳುತ್ತಿದೆ ಎಂದು ತಿಳಿದವರು ವ್ಯಾಖ್ಯಾನಿಸಬೇಕು.

**ಭಾವವಿಲಾಸಿನೀ–** ಉತ್ತರಪದ್ಯಾದಸ್ಮಾತ್ ಪೂರ್ವಪದ್ಯೇ ಜೀವಸ್ಯೇತಿ ವಿಶೇಷಣಾಕರ್ಷಣಾಯ ಯುಕ್ತ್ಯಂತರಮಪ್ಯಾಹ– ಏವಮಿತ್ಯನುವಾದೇನೇತಿ ॥ ಉತ್ತರಪದ್ಯೇ ಜೀವಸ್ಯೇತಿ ವಿಶೇಷಣಾತ್ ಪೂರ್ವಪದ್ಯೇಽಪಿ ಜೀವಸ್ಯೈವ ಬಂಧಮೋಕ್ಷಾವಿತ್ಯಸ್ಯಾರ್ಥಸ್ಯಾಕಥನೇ ಉತ್ತರಶ್ಲೋಕೇ ಏವ-ಮಿತಿ ಪರಾಮರ್ಶಾಯೋಗಾತ್ । ಅತ ಏವಾಸ್ಮಾತ್ ಪೂರ್ವಪದ್ಯೇ ಜೀವಸ್ಯೇತಿ ವಿಶೇಷಣಸ್ಯಾಕರ್ಷಣಮಪಿ ನ್ಯಾಯ್ಯಮಿತಿ ಭಾವಃ ॥ ೨೬೮ ॥

**ವಿವರಣೆ–** 'ಬದ್ಧೋ ಮುಕ್ತ ಇತಿ ಹ್ಯಾಖ್ಯಾ ಗುಣತೋ ಮೇ ನ ವಸ್ತುತಃ'

– ಭಾಗವತ ೧೧.೧೧.೧

'ಏಕಸ್ಯೈವ ಮಮಾಂಶಸ್ಯ ಜೀವಸ್ಯೈವಂ ಮಹಾಮತೇ' – ಭಾಗವತ ೧೧.೧೧.೪

ಉತ್ತರಪದ್ಯದಲ್ಲಿ 'ಏವಮ್' ಎಂದು ಇದೆ. ಮೊದಲು ಹೇಳಿದ ವಿಷಯವನ್ನು ಈ ಅವ್ಯಯವು 'ಹೀಗೆಯೇ' ಎಂದು ಅನುವಾದಿಸಿದೆ. ಈ ಉತ್ತರಪದ್ಯವು ಜೀವಾತ್ಮರಿಗೆ ಮಾತ್ರವೇ ಬಂಧ ಮತ್ತು ಮೋಕ್ಷ ಎಂದು ಹೇಳಿದೆ. ಪೂರ್ವಶ್ಲೋಕದಲ್ಲೂ ಜೀವರಿಗೆ ಮಾತ್ರವೇ ಬಂಧ ಮತ್ತು ಮೋಕ್ಷಗಳನ್ನು ಹೇಳಿದ್ದರೆ ಮಾತ್ರ 'ಏವಮ್' – ಈ ಅವ್ಯಯವು ಉಪಪನ್ನವಾಗುತ್ತದೆ. ಆದ್ದರಿಂದ ಪೂರ್ವಶ್ಲೋಕಕ್ಕೆ ಉತ್ತರಶ್ಲೋಕ (11.11.4) ದಿಂದ 'ಜೀವಸ್ಯ' ಪದವನ್ನು ತಂದುಕೊಂಡು 'ಬದ್ಧೋ ಮುಕ್ತ ಇತಿ ಹ್ಯಾಖ್ಯಾ ಜೀವಸ್ಯ..' ಎಂದು ತಿಳಿದವರು ವ್ಯಾಖ್ಯಾನಿಸಬೇಕು.

ಜೀವ ಬದ್ಧ ಈಶ ಮುಕ್ತ-

**ಅತೋ ಜೀವಸ್ಯ ಬದ್ಧತ್ವಂ ಮುಕ್ತತ್ವಂ ಚ ಪರಾತ್ಮನಃ ।**
**ನಿತ್ಯಮುಕ್ತತ್ವಮೇವೇತಿ ಪದ್ಯದ್ವಂದ್ವೇನ ಸಿದ್ಧ್ಯತಿ ॥ ೨೬೯ ॥**

**ಅರ್ಥ–** ಅತಃ = ಆದ್ದರಿಂದ, ಜೀವಸ್ಯ= ಜೀವನಿಗೆ, ಬದ್ಧತ್ವಂ ಮುಕ್ತತ್ವಂ ಚ= ಬಂಧ ಮತ್ತು ಮುಕ್ತಿಗಳು, ಪರಾತ್ಮನಃ= ಪರಮಾತ್ಮನಿಗೆ, ನಿತ್ಯಮುಕ್ತತ್ವಮೇವ= ನಿತ್ಯಮುಕ್ತತ್ವವೇ, ಇತಿ= ಎಂದು, ಪದ್ಯದ್ವಂದ್ವೇನ= ಎರಡು ಪದ್ಯಗಳಿಂದ (೧೧.೧೧.೧ ಮತ್ತು ೧೧.೧೧.೪), ಸಿದ್ಧ್ಯತಿ= ಸಿದ್ಧವಾಗುತ್ತದೆ.

**ಅನುವಾದ–** ಆದ್ದರಿಂದ ಜೀವಾತ್ಮನಿಗೇ ಬದ್ಧತ್ವ ಮತ್ತು ಮುಕ್ತತ್ವಗಳು, ಪರಮಾತ್ಮನಿಗೆ ನಿತ್ಯಮುಕ್ತತ್ವವೇ ಎಂದು ಎರಡು ಪದ್ಯಗಳಿಂದ ಸಿದ್ಧವಾಗುತ್ತದೆ.

**ಭಾವವಿಲಾಸಿನೀ–** ಏತೇನಾನ್ಯದಪಿ ಲಬ್ಧಮಿತ್ಯಾಹ– **ಅತ ಇತಿ** ॥ ಅತೋ ಬಂಧಸ್ಯ ಕಾದಾಚಿತ್ಕ-ಮೋಕ್ಷಸ್ಯ ಚ ಜೀವೈಕನಿಷ್ಠತ್ವಕಥನಾತ್ ಬದ್ಧತ್ವಂ ಮುಕ್ತತ್ವಂ ಬಂಧಾನ್ಮುಕ್ತತ್ವಂ ಚ ಜೀವಸ್ಯ ಜೀವಸ್ಯೈವ, ನ ಪರಮಾತ್ಮನಃ । ಪರಮಾತ್ಮನಃ ನಿತ್ಯಮುಕ್ತತ್ವಮೇವ । ಪದ್ಯದ್ವನ್ದ್ವೇನ ಉಕ್ತಶ್ಲೋಕದ್ವಯ-ಬಲೇನೇತ್ಯರ್ಥಃ । ಕಾದಾಚಿತ್ಕಮೋಕ್ಷಸ್ಯ ಜೀವೈಕನಿಷ್ಠತ್ವಕಥನಾದ್ ಉತ್ತರಶ್ಲೋಕೇ ಪರಿಶೇಷಾತ್ ಪರಮಾತ್ಮನೋ ನಿತ್ಯಮುಕ್ತತ್ವಮ್ । ಪೂರ್ವಶ್ಲೋಕೇ ತು 'ನ ಮೇ ಮೋಕ್ಷೋ ನ ಬಂಧನಮ್' ಇತಿ ಸ್ಪಷ್ಟಂ ನಿತ್ಯಮುಕ್ತತ್ವಕಥನೇನ ಪದ್ಯದ್ವಂದ್ವಬಲಾತ್ ಪರಮಾತ್ಮನೋ ನಿತ್ಯಮುಕ್ತತ್ವಂ ಚ ಸಿದ್ಧ್ಯತೀತಿ ಭಾವಃ ॥ ೨೬೯ ॥

**ವಿವರಣೆ–** ಭಾಗವತ 11.11.1 ಮತ್ತು 11.11.4 ಶ್ಲೋಕಗಳ ಅಧ್ಯಯನದಿಂದ, ಅವಿರುದ್ಧವಾದ ಅರ್ಥವನ್ನುಗ್ರಹಿಸುವವರಿಗೆ ಜೀವಾತ್ಮರಿಗೆ ಮಾತ್ರ ಬಂಧ ಮತ್ತು ಮೋಕ್ಷಗಳು, ಪರಮಾತ್ಮನಿಗೆ ನಿತ್ಯಮುಕ್ತತ್ವ ಎಂಬ ಅರ್ಥಗಳೇ ಸಿದ್ಧವಾಗುತ್ತವೆ.

ಕರ್ಮದ ಫಲಉಣ್ಣುವವನು ಜೀವ -

ಸಖಾಯೌ ದ್ವೌ ಸುಪರ್ಣೌ ಚ ದೇಹನೀಡಕೃತಾಸ್ಪದೌ ।
ಖಾದತ್ಯೇಕಃ ಪಿಪ್ಪಲಾನ್ನಂ ನಿರನ್ನೋಽಪ್ಯನ್ಯ ಈಶ್ವರಃ ॥ ೨೭೦ ॥

ಬಲೇನ ಭೂಯಾನ್ ಸ ವಿಭುರ್ನಿತ್ಯಮುಕ್ತಸ್ತತೋಽಪರಃ ।
ಜೀವೋ ಬದ್ಧೋ ವಿದ್ಯಯಾಂಧಃ ಪೂರ್ವೋ ವಿದ್ಯಾಮಯಃ ಕಿಲ ॥ ೨೭೧ ॥

ಇತಿ ಪೂರ್ವೋಕ್ತಮೇವಾರ್ಥಂ ಸ್ಪಷ್ಟಮಾಹ ಪುನಃ ಪ್ರಭುಃ ।
ಅತಃ ಪೂರ್ವೋಕ್ತವಾಕ್ಯಾರ್ಥೋಽಪ್ಯಸ್ಮದುಕ್ತೋ ನಚಾಪರಃ ॥ ೨೭೨ ॥

**ಅರ್ಥ–** ಸುಪರ್ಣೌ ದ್ವೌ = ಈಶ ಮತ್ತು ಜೀವರೆಂಬ ಎರಡು ಹಕ್ಕಿಗಳು, ಸಖಾಯೌ = ಜೊತೆಯಾಗಿ, ದೇಹನೀಡಕೃತಾಸ್ಪದೌ = ಶರೀರವೆಂಬ ಗೂಡಿನಲ್ಲಿ ಆಶ್ರಯಹೊಂದಿವೆ. ಏಕಃ = ಅದರಲ್ಲಿ ಜೀವನೆಂಬ ಹಕ್ಕಿಯು, ಪಿಪ್ಪಲಾನ್ನಂ = ಕರ್ಮಫಲರೂಪವಾದ ಅನ್ನವನ್ನು ಖಾದತಿ = ತಿನ್ನುತ್ತಾನೆ. ಅನ್ಯಃ = ಮತ್ತೊಂದು, ಈಶ್ವರಃ = ಈಶನೆಂಬ ಹಕ್ಕಿ, ನಿರನ್ನೋಽಪಿ = ಕರ್ಮಫಲರೂಪವಾದ ಆಹಾರರಹಿತವಾದರೂ,

ಬಲೇನ= ಶಕ್ತಿಯಿಂದ, ಭೂಯಾನ್= ಪೂರ್ಣ. ಸಃ ವಿಭುಃ= ಆ ಪೂರ್ಣನು, ನಿತ್ಯಮುಕ್ತಃ= ನಿತ್ಯಮುಕ್ತನು. ತತಃ= ಅವನಿಂದ, ಅಪರಃ= ಭಿನ್ನನಾದ, ಅವಿದ್ಯಯಾ= ಅಜ್ಞಾನದಿಂದ, ಅಂಧಃ= ಕುರುಡನಾದ, ಜೀವಃ= ಜೀವನು, ಬದ್ಧಃ= ಬದ್ಧನು. ಪೂರ್ವಃ= ಮೊದಲನೆಯವನು, ವಿದ್ಯಾಮಯಃ ಕಿಲ= ಪೂರ್ಣಜ್ಞಾನರೂಪ.

ಇತಿ= ಹೀಗೆ, ಪೂರ್ವೋಕ್ತಮ್= ೧೧.೧೧.೧ ಮತ್ತು ೧೧.೧೧.೪ ರಲ್ಲಿ ಹೇಳಲ್ಪಟ್ಟ, ಅರ್ಥಮ್ ಏವ= ಅರ್ಥವನ್ನೇ, ಪುನಃ= ಮತ್ತೆ, ಪ್ರಭುಃ= ಕೃಷ್ಣನು, ಸ್ಪಷ್ಟಂ= ಸ್ಪಷ್ಟವಾಗಿ, ಆಹ= ಹೇಳಿದ್ದಾನೆ. ಅತಃ= ಆದ್ದರಿಂದ, ಪೂರ್ವೋಕ್ತವಾಕ್ಯಾರ್ಥಃ= ಹಿಂದೆ ಹೇಳಲ್ಪಟ್ಟ ವಾಕ್ಯಗಳ ಅರ್ಥವು ಅಸ್ಮದುಕ್ತಃ= ನಮ್ಮಿಂದ ಹೇಳಲ್ಪಟ್ಟಿದ್ದೇ. ಅಪರಃ ನ= ಬೇರೆ ಅಲ್ಲ.

**ಅನುವಾದ–** ಗೆಳೆಯರಾದ ಎರಡು ಹಕ್ಕಿಗಳು, ದೇಹವೆಂಬ ಗೂಡಿನಲ್ಲಿ ವಾಸಿಸುವರು. ಒಂದು ಹಕ್ಕಿ ಪಿಪ್ಪಲದ ಹಣ್ಣನ್ನು (ಕರ್ಮಫಲವನ್ನು) ತಿನ್ನುತ್ತಾನೆ. ಇನ್ನೊಬ್ಬನು ಈಶ್ವರ; ತಿನ್ನುವುದಿಲ್ಲ.

ಆದರೂ ಬಲಪೂರ್ಣ; ಅವನು ವಿಭು; ನಿತ್ಯಮುಕ್ತ. ಅವನಿಂದ ಭಿನ್ನನಾದ ಜೀವನು ಅವಿದ್ಯೆಯಿಂದ ಕುರುಡ. ಬದ್ಧ. ಮೊದಲಿನವನು ಪೂರ್ಣಜ್ಞಾನರೂಪ. ಇದು ಶಾಸ್ತ್ರಪ್ರಸಿದ್ಧ.

ಹೀಗೆ ಮೊದಲು (ಭಾಗ ೧೧.೧೧.೧ ಮತ್ತು ೪ರಲ್ಲಿ) ಹೇಳಲ್ಪಟ್ಟ ವಿಷಯವನ್ನೇ ಪ್ರಭು ಶ್ರೀಕೃಷ್ಣನು ಪುನಃ ಸ್ಪಷ್ಟವಾಗಿ ಹೇಳಿದ್ದಾನೆ. ಆದ್ದರಿಂದ ನಾವು ಹೇಳಿದ್ದೇ ಪೂರ್ವವಾಕ್ಯಗಳ ಅರ್ಥ. ಬೇರೆ ಅಲ್ಲ.

**ಭಾವವಿಲಾಸಿನೀ–** ಅಧುನಾ ಪೂರ್ವೋಕ್ತಾರ್ಥದೃಢೀಕರಣಾಯ 'ಸುಪರ್ಣಾವೇತೌ ಸಯುಜೌ ಸಖಾಯೌ ಯದೃಚ್ಛಯಾ ಕೃತನೀಡೌ ಚ ವೃಕ್ಷೇ । ಏಕಸ್ತಯೋಃ ಖಾದತಿ ಪಿಪ್ಪಲಾನ್ನಮನ್ಯೋ ನಿರನ್ನೋಽಪಿ ಬಲೇನ ಭೂಯಾನ್ ॥' 'ಆತ್ಮಾನಮನ್ಯಂ ಚ ಸ ವೇದ ವಿದ್ವಾನಪಿಪ್ಪಲಾದೋ ನತು ಪಿಪ್ಪಲಾದಃ । ಯೋಽವಿದ್ಯಯಾಂಧಸ್ತತು ನಿತ್ಯಬದ್ಧೋ ವಿದ್ಯಾಮಯೋ ಯಸ್ತತು ನಿತ್ಯಮುಕ್ತಃ ॥' ಇತ್ಯುತ್ತರಶ್ಲೋಕದ್ವಯಾರ್ಥಂ ಸಂಗೃಹ್ಯಾಹ– ಸಖಾಯೌ ದ್ವಾವಿತಿ ॥ ಸ ವಿಭುಃ ನಿತ್ಯಮುಕ್ತ ಇತ್ಯುತ್ತರೇಣಾನ್ವಯಃ । ತತೋ ನಿತ್ಯಮುಕ್ತಾತ್ಪರಮಾತ್ಮನಃ ಅಪರಃ ಅನ್ಯಃ । ಬದ್ಧ ಅವಿದ್ಯಯಾ ಅಂಧ ಇತಿ ಪದಚ್ಛೇದಃ । 'ಯೋಽವಿದ್ಯಯಾಂಧಸ್ತತು ನಿತ್ಯಬದ್ಧಃ' ಇತ್ಯಸ್ಯ ಪ್ರತಿಪದಮಿದಮ್ । ಪೂರ್ವಃ ಪರಮಾತ್ಮಾ ವಿದ್ಯಾಮಯಃ ನಿರವಧಿಕಜ್ಞಾನಸ್ವರೂಪಃ । 'ವಿದ್ಯಾಮಯೋ ಯಸ್ತತು ನಿತ್ಯಮುಕ್ತಃ' ಇತ್ಯಸ್ಯಾರ್ಥಕಥನಮಿದಮ್ । ಪ್ರಭುಃ ಕೃಷ್ಣಃ । ಪೂರ್ವೋಕ್ತಂ 'ಬದ್ಧೋ ಮುಕ್ತ ಇತಿ ವ್ಯಾಖ್ಯಾ' ಇತಿ ಪೂರ್ವಪದ್ಯೋಕ್ತಂ ಜೀವಸ್ಯ ಬದ್ಧತ್ವಮುಕ್ತತ್ವಂ ಸ್ವಸ್ಯ ನಿತ್ಯಮುಕ್ತತ್ವಂ ಚ । 'ಯೋಽವಿದ್ಯಯಾಂಧಸ್ತ ತು ನಿತ್ಯಬದ್ಧಃ' ಇತಿ ಜೀವಸ್ಯ ವಿಭಜ್ಯ ನಿತ್ಯಬದ್ಧತ್ವಕಥನಾದ್ 'ವಿದ್ಯಾಮಯೋ ಯಸ್ತತು ನಿತ್ಯಮುಕ್ತಃ' ಇತಿ ಪರಮಾತ್ಮನೋ

ನಿತ್ಯಮುಕ್ತತ್ವಸ್ಯ ಚ ವಿವಿಚ್ಯ ಕಥನಾತ್ ಸ್ಪಷ್ಟಮಿತ್ಯುಕ್ತಮ್ । ಅತಸ್ಸ್ಪಷ್ಟತಯಾ ಜೀವಪರಯೋ-ರ್ಬದ್ಧತ್ವಮುಕ್ತತ್ವಕಥನಾತ್ । ಪೂರ್ವೋಕ್ತವಾಕ್ಯಾರ್ಥಃ 'ಬದ್ಧೋ ಮುಕ್ತ ಇತಿ ವ್ಯಾಖ್ಯಾ' ಇತಿ ಪೂರ್ವೋಕ್ತವಾಕ್ಯಾರ್ಥಃ ಅಸ್ಮದುಕ್ತಃ ಜೀವಸ್ಯ ಬದ್ಧಮುಕ್ತತಾ ಪರಮಾತ್ಮನೋ ನಿತ್ಯಮುಕ್ತತಾ ಯಥಾ ಭವತಿ ತಥಾ ಅಸ್ಮದುಕ್ತಃ । ಅಪರಃ ಪರಮಾತ್ಮನ ಏವ ಬದ್ಧತ್ವಂ ಚ ಮುಕ್ತತ್ವಂ ಚ ಯಥಾ ಭವತಿ, ತಥಾ ಪರೋದೀರಿತಃ ಪ್ರತಿವಾದ್ಯುಕ್ತಃ । ಅಸ್ಮದುಕ್ತಾರ್ಥಸ್ಯ ಪೂರ್ವೋತ್ತರಾನುಗುಣತ್ವಾತ್ । ಪರೋದೀರಿತಸ್ಯ ಚ ಪೂರ್ವೋತ್ತರವಿರುದ್ಧತ್ವಾದಿತಿ ಭಾವಃ ॥ ೨೭೦-೨೭೨ ॥

**ವಿವರಣೆ–**

ಸುಪರ್ಣಾವೇತೌ ಸಯುಜೌ ಸಖಾಯೌ ಯದೃಚ್ಛಯಾ ಕೃತನೀಡೌ ಚ ವೃಕ್ಷೇ ।
ಏಕಸ್ತಯೋಃ ಖಾದತಿ ಪಿಪ್ಪಲಾನ್ನಮನ್ಯೋ ನಿರನ್ನೋಽಪಿ ಬಲೇನ ಭೂಯಾನ್ ।
- ಭಾಗವತ ೧೧.೧೧.೬

ಆತ್ಮಾನಮನ್ಯಂ ಚ ಸ ವೇದ ವಿದ್ವಾನಪಿಪ್ಪಲಾದೋ ನತು ಪಿಪ್ಪಲಾದಃ ।
ಯೋ ವಿದ್ಯಯಾಂಧಃ ಸ ತು ನಿತ್ಯಬದ್ಧೋ ವಿದ್ಯಾಮಯೋ ಯಸ್ಸತು ನಿತ್ಯಮುಕ್ತಃ ।
- ಭಾಗವತ ೧೧.೧೧.೭

ಮೇಲಿನ ಎರಡು ಭಾಗವತ ಶ್ಲೋಕಗಳು ಭಾಗವತ 11.11.1 ಮತ್ತು 4ನೆಯ ಶ್ಲೋಕಗಳಿಗೆ ಶ್ರೀರಾಜರು ಹೇಳಿದ ಅರ್ಥಕ್ಕೆ ಅನುಗುಣವಾಗಿವೆ. ಆದ್ದರಿಂದ ತಾವು ಹೇಳುವ ಅರ್ಥಕ್ಕೆ ಭಾಗವತದ ಅದೇ ಅಧ್ಯಾಯದ ಮುಂದಿನ ಶ್ಲೋಕಗಳಿಂದ ದೃಢೀಕರಣವಿದೆ ಎಂದು ತೋರಿಸಲು ಆ ಶ್ಲೋಕಗಳ ಅರ್ಥವನ್ನು ಸಂಗ್ರಹಿಸಿ ಹೇಳುತ್ತಿದ್ದಾರೆ.

(1) ಅಸ್ಮದುಕ್ತಃ ಅರ್ಥ= ನಮ್ಮಿಂದ ಹೇಳಲ್ಪಟ್ಟ ಅರ್ಥ:- ಜೀವಾತ್ಮನಿಗೆ ಮಾತ್ರ ಬದ್ಧತ್ವ ಮತ್ತು ಮುಕ್ತತ್ವಗಳು, ಪರಮಾತ್ಮನಿಗೆ ನಿತ್ಯಮುಕ್ತತ್ವ.

**ಅದ್ವೈತದರ್ಶನವು ಹೇಳುವ ಅರ್ಥ:-** ಪರಬ್ರಹ್ಮನಿಗೇ ಬದ್ಧತ್ವ ಮತ್ತು ಮುಕ್ತತ್ವಗಳು.

ಯುಕ್ತಿಮಲ್ಲಿಕಾಕಾರರು ಹೇಳುವ ಅರ್ಥಕ್ಕೆ ಭಾಗವತದ ಪೂರ್ವೋತ್ತರ ಶ್ಲೋಕಾರ್ಥಗಳ ವಿರೋಧವಿಲ್ಲ. ಅದ್ವೈತದರ್ಶನವು ಹೇಳುವ ಅರ್ಥಕ್ಕೆ ಇದೆ.

(2) ಭಾಗವತ 11.11.6 ನೇ ಶ್ಲೋಕವು ಎರಡು ವಿಧ ಚೇತನಗಳನ್ನು ಪ್ರಸ್ತಾವಿಸಿ ಅವೆರಡರ ವಿರುದ್ಧ ಧರ್ಮಗಳನ್ನು ಹೇಳಿದೆ. 11.11.7ನೇ ಶ್ಲೋಕವು ಪಿಪ್ಪಲವನ್ನು ತಿನ್ನದವನ ಪೂರ್ಣತೆಯನ್ನು ತಿನ್ನುವವನ ಅವಿದ್ಯೆಯನ್ನು ಕುರಿತು ಹೇಳಿದೆ. ಆದ್ದರಿಂದ ನಿತ್ಯಬದ್ಧ ಚೇತನಗಳು ಮತ್ತೂ ನಿತ್ಯಮುಕ್ತ ಚೇತನ ಪರಸ್ಪರ ಭಿನ್ನ.

11.11.1 ಮತ್ತು 11.11.4 ಶ್ಲೋಕಗಳನ್ನು ರಾಜರು ಹೀಗೆಯೇ ವ್ಯಾಖ್ಯಾನಿಸಿದ್ದಾರೆ.

**ನಿತ್ಯಮುಕ್ತೋ ನಿತ್ಯಬದ್ಧ ಏಕ ಏವೇತಿ ಮೇ ಮತಿಃ ।**
**ಇತ್ಥಂ ಬದ್ಧಸ್ಯ ಮುಕ್ತಸ್ಯ ಚೈಕ್ಯಶಂಕಾಕೃದುದ್ಧವಮ್ ॥ ೨೭೩ ॥**

**ಮುಹುಃ ಪ್ರಬೋಧಯನ್ ಕೃಷ್ಣಃ ಕಥಂ ವಕ್ತಿ ತದೈಕತಾಮ್ ।**
**ಅತಃ ಸಿದ್ಧಾಂತಪದ್ಯೇಽಸ್ಮಿನ್ ದ್ವಿತಾಮೇವ ವದೇತ್ ಕೃತೀ ॥ ೨೭೪ ॥**

**ಅರ್ಥ–** ನಿತ್ಯಮುಕ್ತಃ = ನಿತ್ಯಮುಕ್ತನು, ನಿತ್ಯಬದ್ಧಃ = ನಿತ್ಯಬದ್ಧನು, ಏಕ ಏವ = ಒಬ್ಬನೇ. ಇತಿ = ಎಂದು, ಮೇ = ನನ್ನ, ಮತಿಃ = ಅಭಿಪ್ರಾಯವು. ಇತ್ಥಂ = ಹೀಗೆ, ಬದ್ಧಸ್ಯ = ಬದ್ಧನಿಗೂ, ಚ = ಮತ್ತು, ಮುಕ್ತಸ್ಯ = ಮುಕ್ತನಿಗೂ, ಐಕ್ಯಶಂಕಾ = ಐಕ್ಯದ ಶಂಕೆಯನ್ನು ಕೃತ್ = ಮಾಡಿದ, ಉದ್ಧವಂ = ಉದ್ಧವನಿಗೆ,

ಮುಹುಃ= ಮತ್ತೆ ಮತ್ತೆ, ಪ್ರಬೋಧಯನ್= ಉಪದೇಶ ಮಾಡುತ್ತಿರುವ, ಕೃಷ್ಣಃ= ಕೃಷ್ಣನು, ತದೇಕತಾಂ= ನಿತ್ಯಬದ್ಧ ಮತ್ತು ನಿತ್ಯಮುಕ್ತರ ಐಕ್ಯವನ್ನು, ಕಥಂ ವಕ್ತಿ= ಹೇಗೆ ತಾನೆ ಹೇಳುತ್ತಾನೆ? ಅತಃ= ಆದ್ದರಿಂದ, ಅಸ್ಮಿನ್ ಸಿದ್ಧಾಂತಪದ್ಯೇ= ಈ ಸಿದ್ಧಾಂತವನ್ನು ಹೇಳುವ ಶ್ಲೋಕದಲ್ಲಿ, ಕೃತೀ= ಕುಶಲನು, ದ್ವಿತಾಮೇವ= ಭೇದವನ್ನೇ, ವದೇತ್= ಹೇಳಬೇಕು.

**ಅನುವಾದ–** 'ನಿತ್ಯಮುಕ್ತ ಮತ್ತು ನಿತ್ಯಬದ್ಧನು ಒಬ್ಬನೇ ಎಂದು ನನ್ನ ಅಭಿಪ್ರಾಯ'. ಹೀಗೆ ಬದ್ಧ ಮತ್ತು ಮುಕ್ತರ ಐಕ್ಯವನ್ನು ಶಂಕಿಸಿರುವ ಉದ್ಧವನಿಗೆ ಪುನಃಪುನಃ ಬೋಧನೆಯನ್ನು ಉಂಟು ಮಾಡುತ್ತಿರುವ ಶ್ರೀಕೃಷ್ಣನು ನಿತ್ಯಬದ್ಧ ಮತ್ತು ನಿತ್ಯಮುಕ್ತನಿಗೆ ಐಕ್ಯವನ್ನು ಹೇಗೆ ತಾನೇ ಹೇಳಿಯಾನು? ಆದ್ದರಿಂದ ಈ ಸಿದ್ಧಾಂತಪದ್ಯದಲ್ಲಿ (ಭಾಗ ೧೧.೧೧.೧, ೪, ೬, ೭) ಇಬ್ಬರ ಭೇದವನ್ನೇ ಕುಶಲಚಿಂತಕರು ಹೇಳಬೇಕು.

**ಭಾವವಿಲಾಸಿನೀ–** ಉದ್ಧವಕೃತಪೂರ್ವಪಕ್ಷಸ್ಯ ಪರಿಹಾರತಯಾ ಕೃಷ್ಣಸ್ಯ ಸಿದ್ಧಾಂತೋಽಪಿ ಅಸ್ಮದುಕ್ತಾರ್ಥ ಏವ ಸ್ಯಾತ್ । ನಾನ್ಯಥೇತ್ಯಾಹ– ನಿತ್ಯಮುಕ್ತ ಇತಿ ॥ ಐಕ್ಯಶಂಕಾಂ ಕರೋತೀತ್ಯೈಕ್ಯಶಂಕಾಕೃತ್ । ಸ ಚಾಸಾವುದ್ಧವಶ್ಚ ತಮ್ । ತದೇಕತಾಂ ನಿತ್ಯಬದ್ಧನಿತ್ಯ-ಮುಕ್ತಯೋರೇಕತಾಮ್ । ಅತಃ ಸಿದ್ಧಾಂತಪೂರ್ವಪಕ್ಷಯೋರೇಕ ಪ್ರಕಾರತಾಽಯೋಗಾತ್ । ದ್ವಯೋರ್ಭಾವಃ ದ್ವಿತಾ ತಾಂ ನಿತ್ಯಮುಕ್ತನಿತ್ಯ ಬದ್ಧಯೋರ್ಭೇದಮಿತ್ಯರ್ಥಃ ॥೨೭೩–೨೭೪॥

**ವಿವರಣೆ–**

'ನಿತ್ಯಮುಕ್ತೋ ನಿತ್ಯಬದ್ಧಃ ಏಕ ಏವೇತಿ ಮೇ ಮತಿಃ' - ಭಾಗವತ ೧೧.೧೦.೩೭

ಎಂದು ಉದ್ಧವನು ಬದ್ಧ ಮತ್ತು ಮುಕ್ತ ಒಬ್ಬನೇ ಎಂದು ಶಂಕಿಸಿದ್ದಾನೆ. ಉತ್ತರವನ್ನು ಹೇಳುವ ಕೃಷ್ಣನು ಐಕ್ಯವನ್ನೇ ಬೋಧಿಸುವುದು ಸಮಂಜಸವಲ್ಲ. ಪೂರ್ವಪಕ್ಷವೇ ಸಿದ್ಧಾಂತವಲ್ಲ.

ಈ ಕಾರಣದಿಂದಲೂ ಶ್ರೀಕೃಷ್ಣನು ನಿತ್ಯಮುಕ್ತ ಮತ್ತು ನಿತ್ಯಬದ್ಧರ ಭೇದವನ್ನೇ ಬೋಧಿಸಿದ್ದಾನೆ ಎಂದು ತಿಳಿಯುತ್ತದೆ.

**ಏತಾವಿತ್ಯತಿದೇಶೇನ ಪೂರ್ವಂ ಚ ಪ್ರಸ್ತುತಿರ್ದ್ವಯೋಃ ।**
**ಅಬದ್ಧಬದ್ಧಯೋರ್ವಾಚ್ಯಾ ತಚ್ಛೋಚ್ಯಾ ಕೃಷ್ಣಬದ್ಧವಾಕ್ ॥ ೨೭೫ ॥**

**ಅರ್ಥ–** ಏತೌ ಇತಿ= 'ಏತೌ' (ಈ ಇಬ್ಬರು) ಎಂದು, ಅತಿದೇಶೇನ = ಹಿಂದೆ ಪ್ರಸ್ತುತವಾದವನ್ನು ಉಲ್ಲೇಖಿಸಿರುವುದರಿಂದ, ಪೂರ್ವಂ ಚ = ಹಿಂದಿನ ಶ್ಲೋಕದಲ್ಲೂ (೧೧.೧೧.೧) ಅಬದ್ಧಬದ್ಧಯೋಃ = ನಿತ್ಯಮುಕ್ತ ಹಾಗೂ ನಿತ್ಯಬದ್ಧರಾದ, ದ್ವಯೋಃ = ಇಬ್ಬರ, ಪ್ರಸ್ತುತಿಃ = ಪ್ರಸ್ತಾವವು, ವಾಚ್ಯಾ = ಹೇಳಲ್ಪಡಬೇಕು. ತತ್ = ಆದ್ದರಿಂದ, ಕೃಷ್ಣಬದ್ಧವಾಕ್ = ಶ್ರೀಕೃಷ್ಣನು ಬದ್ಧನೆಂಬ ಮಾತು, ಶೋಚ್ಯಾ = ಶೋಚನೀಯ.

**ಅನುವಾದ–** ಭಾಗವತ ೧೧.೧೧.೬ ರಲ್ಲಿ 'ಸುಪರ್ಣಾವೇತೌ' ಎಂದಿದೆ. ಇಲ್ಲಿ 'ಏತೌ' (ಈ ಇಬ್ಬರು) ಪದವು ಹಿಂದಿನ ಶ್ಲೋಕದಲ್ಲಿ ಪ್ರಸ್ತುತವಾದದ್ದನ್ನು ಹೇಳುತ್ತದೆ. ಆದ್ದರಿಂದ ಹಿಂದಿನ ಶ್ಲೋಕಗಳಲ್ಲೂ (೧೧.೧೧.೧ ಮತ್ತು ೪) ಅಬದ್ಧ ಮತ್ತು ಬದ್ಧರ ಪ್ರಸ್ತಾವವೇ ಇರಬೇಕು. ಆದ್ದರಿಂದ ಕೃಷ್ಣನು ಬದ್ಧ ಎಂಬ ಮಾತು ಶೋಚನೀಯ.

**ಭಾವವಿಲಾಸಿನೀ–** ಯುಕ್ತ್ಯಂತರಂ ಚಾಹ– ಏತಾವಿತಿ ॥ ಸುಪರ್ಣಾವೇತೌ' ಇತ್ಯುತ್ತರಪದ್ಯೇ ಪೂರ್ವೋಕ್ತಾವಿತ್ಯತಿದೇಶೇನ । ಪೂರ್ವಂ ಪೂರ್ವಶ್ಲೋಕೇಽಪಿ । ಅಬದ್ಧಬದ್ಧಯೋರ್ನಿತ್ಯ-ಮುಕ್ತನಿತ್ಯಬದ್ಧಯೋಃ । ಅಸ್ಮಿನ್ ಪದ್ಯೇ (೧೧.೧೧.೭) ನಿತ್ಯಬದ್ಧನಿತ್ಯಮುಕ್ತೌ ವಿವಿಚ್ಯ ಕಥಯಿತ್ವಾ ಏತಾವಿತ್ಯಸ್ಯೈವಾರ್ಥಸ್ಯ ಪೂರ್ವಪದ್ಯೇಽತಿದೇಶಾತ್ ತತ್ರಾಪಿ ನಿತ್ಯಬದ್ಧನಿತ್ಯಮುಕ್ತಯೋ-ರ್ವಿಭಾಗೇನೈವ ಪ್ರಸ್ತುತಿರವಶ್ಯಂ ವಾಚ್ಯೇತಿ ಭಾವಃ । ತತ್ ತಸ್ಮಾದ್ ಉಕ್ತನಿಮಿತ್ತಾತ್। ಕೃಷ್ಣಬದ್ಧವಾಕ್ ಕೃಷ್ಣೋ ಬದ್ಧ ಇತಿ ವಾಕ್ ॥ ೨೭೫ ॥

**ವಿವರಣೆ–** ಭಾಗವತ 11.11.7ನೇ ಶ್ಲೋಕವು ನಿತ್ಯಬದ್ಧ ಮತ್ತು ನಿತ್ಯಮುಕ್ತರು ಅತ್ಯಂತ ಭಿನ್ನ ಎಂದು ವಿವೇಚಿಸಿ ಹೇಳಿದೆ. 11.11.6ನೇ ಶ್ಲೋಕವು 'ಏತೌ' ಎಂದು ಹಿಂದೆ ಹೇಳಿದ ವಿಷಯವನ್ನು ಉಲ್ಲೇಖಿಸುತ್ತದೆ. 'ಏತೌ'- ದ್ವಿವಚನ. ಆದ್ದರಿಂದ 11.11.1 ಮತ್ತು 4 ರಲ್ಲಿ ಇಬ್ಬರನ್ನು ಕುರಿತು ಹೇಳಿರಬೇಕು. ಇಲ್ಲದಿದ್ದರೆ 'ಏತೌ' ಎಂಬ ಪದ ಮತ್ತು 11.11.7 ರ ವಿಶ್ಲೇಷಣೆಗಳು ತಪ್ಪಾಗುತ್ತವೆ. ಆದ್ದರಿಂದ ಯಾರು ಬದ್ಧನೋ, ಅವನೇ ಮುಕ್ತ, ಅರ್ಥಾತ್ ಕೃಷ್ಣನೇ ಬದ್ಧ ಎಂಬ ವ್ಯಾಖ್ಯಾನವು ಸರ್ವಥಾ ಸರಿಯಲ್ಲ. ಅಷ್ಟೇ ಅಲ್ಲ, ಇದು ಭಾಗವತ ಪದ್ಯಗಳ ಶೋಚನೀಯ ವ್ಯಾಖ್ಯಾನ.

**ದ್ವಯೋರೇಕಸ್ಯೇತಿ ಚಾರ್ಥಃ ಸುಸ್ಥೋಽಭೂತ್ ತತ ಏವ ಮೇ ।**
**ಭಿನ್ನಾಂಶತಾ ಚ ತದ್ಭೇದಸ್ಯಾಂತೇ ಸ್ವೇನೈವ ಕೀರ್ತನಾತ್ ॥ ೨೭೬ ॥**

**ಅರ್ಥ–** ತತಃ ಏವ= ಆದ್ದರಿಂದಲೇ= ಸುಪರ್ಣಾವೇತೌ ಇತ್ಯಾದಿ ಎರಡು ಶ್ಲೋಕಗಳ ಅರ್ಥವೇ ಹಿಂದೆ ಬಂದಿರುವುದರಿಂದ, ದ್ವಯೋಃ= ಎರಡು ಹಕ್ಕಿಗಳಲ್ಲಿ, ಏಕಸ್ಯ= ಒಂದು ಹಕ್ಕಿಗೆ, ಇತಿ= ಎಂಬ, ಮೇ ಅರ್ಥಃ= ನನ್ನ ವ್ಯಾಖ್ಯಾನವು, ಚ= ಮತ್ತು, ಭಿನ್ನಾಂಶತಾ= ಜೀವಾತ್ಮನು ಭಿನ್ನಾಂಶ ಎಂಬ ವ್ಯಾಖ್ಯಾನವೂ, ಸುಸ್ಥಃ ಅಭೂತ್ = ಸ್ಥಿರವಾಯಿತು. ತದ್ಭೇದಸ್ಯ = ಜೀವ-ಈಶರ ಭೇದವೇ, ಅಂತೇ = ಮುಂದಿನ **ಅಥ ಬದ್ಧಸ್ಯ ಮುಕ್ತಸ್ಯ** ಮತ್ತು **ಸುಪರ್ಣಾವೇತೌ** ಎಂಬ ಎರಡು ಶ್ಲೋಕಗಳಲ್ಲಿ, ಸ್ವೇನೈವ= ತನ್ನಿಂದಲೇ= ಕೃಷ್ಣನಿಂದಲೇ, ಕೀರ್ತನಾತ್= ಹೇಳಲ್ಪಟ್ಟಿರುವುದರಿಂದ.

**ಅನುವಾದ–** 'ಸುಪರ್ಣಾವೇತೌ..' ಮೊದಲಾದ ಎರಡು ಶ್ಲೋಕಗಳ ಅರ್ಥವು ೧೧.೧೧.೧ ಮತ್ತು ೫ ರಲ್ಲಿ ಪ್ರಸ್ತುತವಾಗಿರುವುದರಿಂದ ೧೧.೧೧.೪ ನೇ ಶ್ಲೋಕದ 'ಏಕಸ್ಯ' ಪದಕ್ಕೆ ಎರಡು ಹಕ್ಕಿಗಳಲ್ಲಿ ಜೀವ ಎಂಬ ಹಕ್ಕಿಗೆ ಎಂಬ ನನ್ನ ವ್ಯಾಖ್ಯಾನವು ಸಮಂಜಸವಾಗಿದೆ. ಮತ್ತು 'ಮಮಾಂಶಸ್ಯ' ಪದಕ್ಕೆ 'ನನ್ನ ಭಿನ್ನಾಂಶನಿಗೆ' ಎಂಬ ನನ್ನ ವ್ಯಾಖ್ಯಾನವೂ ಸಮಂಜಸವಾಗಿದೆ; ಜೀವ-ಈಶರ ಭೇದವನ್ನೇ ೧೧.೧೧.೫ ಮತ್ತು ೧೧.೧೧.೬ ಮತ್ತು ೧೧.೧೧.೭ ರಲ್ಲಿ ಹೇಳಿರುವುದರಿಂದ.

**ಭಾವವಿಲಾಸಿನೀ–** ತತಃ 'ಸುಪರ್ಣಾವೇತೌ' ಇತಿ ಶ್ಲೋಕಾರ್ಥಸ್ಯ ಪೂರ್ವಪ್ರಸ್ತುತತ್ವಾದೇವ । ಏಕಸ್ಯೈವ ಮಮಾಂಶಸ್ಯೇತಿ ಶ್ಲೋಕೇ ದ್ವಯೋಃ ಖಗಯೋರೇಕಸ್ಯ ಜೀವಾಖ್ಯಖಗಸ್ಯೇತ್ಯರ್ಥಃ ಪ್ರಾಗುಕ್ತೋಽರ್ಥಃ । 'ಭಿನ್ನಾಂಶತಾ ಮಮಾಂಶಸ್ಯ' ಇತ್ಯತ್ರೋಕ್ತಭಿನ್ನಾಂಶತಾ । ಅಂತೇ ಉತ್ತರಪದ್ಯದ್ವಯೇ । 'ಅಥ ಬದ್ಧಸ್ಯ ಮುಕ್ತಸ್ಯ' 'ಸುಪರ್ಣಾವೇತೌ' ಇತಿ ಚ ಪದ್ಯದ್ವಯ ಇತ್ಯರ್ಥಃ । ತೇನೈವ ಕೃಷ್ಣೇನೈವ । ಪ್ರಾಗಂಶತ್ವಮುಕ್ತ್ವಾ ತಸ್ಯೈವಾಂಶಸ್ಯಾಂಶಿನಾ ಸ್ವೇನ ಸಹ ಭೇದಸ್ಯಾಪಿ ಕಥನಾದ್ ಭಿನ್ನಾಂಶತ್ವಂ ಲಭ್ಯತ ಇತಿ ಭಾವಃ ॥ ೨೭೬ ॥

**ವಿವರಣೆ–** ಭಾಗವತ 11.11.4 ರಲ್ಲಿ 'ಏಕಸ್ಯ' ಮತ್ತು 'ಮಾಮಾಂಶಸ್ಯ' ಪದಗಳು ಇವೆ. ಶ್ರೀವಾದಿರಾಜರು 'ಏಕಸ್ಯ' ಪದವನ್ನು 267ನೇ ಶ್ಲೋಕದಲ್ಲಿ 'ಜೀವಾಖ್ಯಖಗಸ್ಯ ಏಕಸ್ಯ' ಎಂದು 'ಮಾಮಾಂಶಸ್ಯ' ಪದವನ್ನು 'ಸ್ವಭಿನ್ನಾಂಶಸ್ಯ' ಎಂದು ವ್ಯಾಖ್ಯಾನಿಸಿದ್ದಾರೆ. 'ಸುಪರ್ಣಾವೇತೌ..' ಮೊದಲಾದ ಎರಡು ಶ್ಲೋಕಗಳ ಅರ್ಥವೇ 11.11.1 ಮತ್ತು 5ರಲ್ಲಿ ಪ್ರಸ್ತುತವಾಗಿರುವುದರಿಂದ ಗುರುರಾಜರ ವ್ಯಾಖ್ಯಾನವು ಪೂರ್ವ ಉತ್ತರ ಶ್ಲೋಕಗಳ ಅರ್ಥಕ್ಕೆ ಅನುಗುಣವಾಗಿದೆ.

ಕೃಷ್ಣನೇ ನಿತ್ಯಮುಕ್ತ-

ಅತ್ರೋಕ್ತೋ ನಿತ್ಯಮುಕ್ತಶ್ಚ ನ ಮೇ ಮೋಕ್ಷೋ ನ ಬಂಧನಂ ।
ಇತ್ಯಾಹ ಯಃ ಪುರಾ ಯುಕ್ತ್ಯಾ ಸ ಏವ ಸ್ಯಾನ್ನ ಸಂಶಯಃ ॥ ೨೭೭ ॥

**ಅರ್ಥ–** ಅತ್ರ = ಈ ಶ್ಲೋಕದಲ್ಲಿ (೧೧.೧೧.೭), ಉಕ್ತಃ = ಹೇಳಲ್ಪಟ್ಟ ನಿತ್ಯಮುಕ್ತಃ= ನಿತ್ಯಮುಕ್ತನು, ಯಃ = ಯಾರು, ಪುರಾ = ಹಿಂದಿನ ಶ್ಲೋಕದಲ್ಲಿ (೧೧.೧೧.೧), ಮೇ = ನನಗೆ, ನ ಮೋಕ್ಷಃ = ಮೋಕ್ಷವಿಲ್ಲ ನ ಬಂಧನಂ = ಬಂಧನವೂ ಇಲ್ಲ ಇತಿ = ಎಂದು, ಯುಕ್ತ್ಯಾ= ಯುಕ್ತಿಯಿಂದ, ಆಹ = ಹೇಳಿರುವನೋ, ಸ ಏವ ಸ್ಯಾತ್= ಅವನೇ ಆಗಬೇಕು. ನ ಸಂಶಯಃ = ಸಂಶಯವಿಲ್ಲ.

**ಅನುವಾದ– ಭಾಗವತ ೧೧.೧೧.೭ ರಲ್ಲಿ 'ವಿದ್ಯಾಮಯೋ ಯಃ ಸ ತು ನಿತ್ಯಮುಕ್ತ' - ಈ ಪದಗಳಿಂದ ಹೇಳಲ್ಪಟ್ಟ ನಿತ್ಯಮುಕ್ತನು ೧೧.೧೧.೧ ರಲ್ಲಿ 'ನ ಮೇ ಬಂಧೋ ನ ಮೋಕ್ಷಣಮ್' ಎಂದು ಯುಕ್ತಿಪೂರ್ವಕವಾಗಿ ಯಾರು ಹೇಳಿದನೋ ಅವನೇ. ಸಂಶಯವಿಲ್ಲ.**

**ಭಾವವಿಲಾಸಿನೀ–** 'ವಿದ್ಯಾಮಯೋ ಯಸ್ಸ ತು ನಿತ್ಯಮುಕ್ತಃ' ಇತಿ ಸಾಮಾನ್ಯೇನೋಕ್ತಂ ನಿತ್ಯಮುಕ್ತತ್ವಂ ಕೃಷ್ಣಸ್ಯ ಕಥಂ ಲಭ್ಯತ ಇತ್ಯತ ಆಹ– **ಅತ್ರೋಕ್ತ ಇತಿ** ॥ **ಅತ್ರಾಸ್ಮಿನ್ ಪದ್ಯೇ । ಯಃ** ಪುರಾ ಪೂರ್ವಶ್ಲೋಕೇ ನ ಮೇ ಮೋಕ್ಷೋ ನ ಬಂಧನಮ್' ಇತಿ ಕಾದಾಚಿತ್ಕ-ಬಂಧಮೋಕ್ಷರಹಿತತಯಾ ನಿತ್ಯಮುಕ್ತತಾಂ ಮ ಇತಿ ಸ್ವಸ್ಯಾಹ ಸ ಚ ಕೃಷ್ಣ ಏವೇತಿ । ಅತ್ರಾಪಿ ನಿತ್ಯಮುಕ್ತತಯಾ ಸಾಮಾನ್ಯೇನೋಚ್ಯಮಾನಃ ಸ ಏವ ಕೃಷ್ಣ ಏವ । ಯುಕ್ತ್ಯಾ ನಿತ್ಯಮುಕ್ತ-ದ್ವಯಸ್ಯಾಪ್ರಾಮಾಣಿಕತ್ವಯುಕ್ತ್ಯಾ ॥ ೨೭೭ ॥

**ವಿವರಣೆ–** 'ವಿದ್ಯಾಮಯೋ ಯಃ ಸತು ನಿತ್ಯಮುಕ್ತಃ' (11.11.7) ಎಂದು ಶ್ರೀಕೃಷ್ಣನು ಹೇಳಿದ್ದಾನೆ. ಈ ನಿತ್ಯಮುಕ್ತ ಯಾರು? (1) 11.11.1ರಲ್ಲಿ ಶ್ರೀಕೃಷ್ಣನು ತನಗೆ ಪ್ರಕೃತಿಬಂಧವಿಲ್ಲವಾದ್ದರಿಂದ 'ಬಂಧವೂ ಇಲ್ಲ, ಮುಕ್ತಿಯೂ ಇಲ್ಲ' ಎಂದು ಹೇಳಿದ್ದಾನೆ. 'ಪ್ರಕೃತಿಬಂಧರಾಹಿತ್ಯ' ಎಂಬ ಯುಕ್ತಿಯಿಂದ ಕೃಷ್ಣನೇ ನಿತ್ಯಮುಕ್ತ ಎಂದು ತಿಳಿಯುತ್ತದೆ.

(2) 11.11.1 ರ ವಿವರಣೆಯಂತೆ ಶ್ರೀಕೃಷ್ಣನು ನಿತ್ಯಮುಕ್ತ ಎಂದು ಸ್ಪಷ್ಟ. 11.11.7 ರಲ್ಲಿ ಹೇಳಲ್ಪಟ್ಟ ನಿತ್ಯಮುಕ್ತನು ಶ್ರೀಕೃಷ್ಣನಲ್ಲದಿದ್ದರೆ, ಇಬ್ಬರು ನಿತ್ಯಮುಕ್ತರು ಇರಬೇಕಾಗುತ್ತದೆ. ಇದು ಅಸಂಭವ ಮತ್ತು ಅಪ್ರಾಮಾಣಿಕ. ಆದ್ದರಿಂದ 11.11.7 ರಲ್ಲಿ ಹೇಳಲ್ಪಟ್ಟ ನಿತ್ಯಮುಕ್ತನು ಶ್ರೀಕೃಷ್ಣನೇ.

ಬಂಧನ ಸುಳ್ಳಲ್ಲ-

**ಬಂಧಸ್ಯ ನಿತ್ಯತೋಕ್ತಿಶ್ಚ ತಥಾ ಮುಕ್ತೇಶ್ಚ ನಿತ್ಯತಾ ।**
**ಪುರಾ ಪರೋಕ್ತತನ್ಮಿಥ್ಯಾರ್ಥತ್ವಂ ಯುಕ್ತ್ಯಾ ನ್ಯವಾರಯತ್ ॥ ೨೭೮ ॥**

**ಅರ್ಥ–** ಬಂಧಸ್ಯ = ಬಂಧಕ್ಕೆ, ನಿತ್ಯತೋಕ್ತಿಶ್ಚ= ನಿತ್ಯತ್ವದ ಉಕ್ತಿಯು, ತಥಾ = ಹಾಗೆಯೇ. ಮುಕ್ತೇಶ್ಚ= ಮುಕ್ತಿಗೂ, ನಿತ್ಯತಾ = ನಿತ್ಯತ್ವವು, ಪುರಾ = ಹಿಂದೆ, (ನ ವಸ್ತುತಃ ೧೧.೧೧.೧)

ಪರೋಕ್ತ = ಮಾಯಾವಾದಿಗಳಿಂದ ಹೇಳಲ್ಪಟ್ಟ, ತನ್ಮಿಥ್ಯಾರ್ಥತ್ವಂ = ಅವುಗಳು ಮಿಥ್ಯಾ ಎಂಬ ಅರ್ಥವನ್ನು, ಯುಕ್ತ್ಯಾ= ಯುಕ್ತಿಯಿಂದ, ನ್ಯವಾರಯತ್ = ತಡೆಯಿತು.

**ಅನುವಾದ–** ಭಾಗವತ ೧೧.೧೧.೭ ರಲ್ಲಿ 'ನಿತ್ಯಬದ್ಧಃ' ಮತ್ತು 'ನಿತ್ಯಮುಕ್ತಃ' - ಈ ಪದಗಳಿಂದ ಬಂಧ ಮತ್ತು ಮುಕ್ತಿಗಳಿಗೆ ನಿತ್ಯತ್ವವು ಹೇಳಲ್ಪಟ್ಟಿದೆ. ಈ ನಿತ್ಯತ್ವದ ಉಕ್ತಿಯು ೧೧.೧೧.೧ ರಲ್ಲಿ 'ನ ವಸ್ತುತಃ' ಈ ಪದಗಳಿಗೆ ಬಂಧ ಮತ್ತು ಮುಕ್ತಿಗಳು ಮಿಥ್ಯಾ ಎಂದು ಅರ್ಥ ಎಂಬ ಅದ್ವೈತಚಿಂತಕರ ವ್ಯಾಖ್ಯಾನವನ್ನು ಯುಕ್ತಿಯಿಂದ ನಿರಾಕರಿಸಿದೆ.

**ಭಾವವಿಲಾಸಿನೀ–** ಪೂರ್ವಂ ನ ವಸ್ತುತ ಇತಿ ಬಂಧಸ್ಯ ಮಿಥ್ಯಾತ್ವಮುಕ್ತಮ್, ತದಪ್ಯುತ್ತರಶ್ಲೋಕೇ ಮುಕ್ತತ್ವೇನ ಸಹೋಕ್ತಬಂಧಂ ನಿತ್ಯತ್ವಾಖ್ಯಯುಕ್ತಿವಿರುದ್ಧಮಿತ್ಯಾಹ– **ಬಂಧಸ್ಯೇತಿ** ॥ ತಥಾ ಬಂಧಸಮಾನಯೋಗಕ್ಷೇಮತಯಾ ಮುಕ್ತೇರ್ನಿತ್ಯತಾ ಪರಸ್ಯಾಪಿ ನ ಬಹುಕಾಲೀನತ್ವಾಪೇಕ್ಷಯಾ । ಅತಸ್ತಯಾ ಸಹ ಪಠಿತಾ ಬಂಧಸ್ಯ ನಿತ್ಯತಾಪಿ ನಾಪೇಕ್ಷಿಕೀ ಕಿಂತು ಬ್ರಹ್ಮವತ್ ಸಾರ್ವಕಾಲೀನತ್ವಾಪೇಕ್ಷಯೈವ । ಅತಃ ಯುಕ್ತ್ಯಾ ನಿತ್ಯಸ್ಯ ಮಿಥ್ಯಾತ್ವಾಸಂಭವಾಖ್ಯಯುಕ್ತ್ಯಾ ತಸ್ಯ ಬಂಧಸ್ಯ ಪರೋಕ್ತಮಿಥ್ಯಾರ್ಥತ್ವಂ ಮಿಥ್ಯಾತ್ವಮಿತಿ ಯಾವತ್ ॥ ೨೭೮ ॥

**ವಿವರಣೆ–** 'ಬದ್ಧೋ ಮುಕ್ತ ಇತಿ ವ್ಯಾಖ್ಯಾ... ನ ವಸ್ತುತಃ' (11.11.1) ಇಲ್ಲಿಯ 'ನ ವಸ್ತುತಃ' ಪದಗಳನ್ನು ಅದ್ವೈತದಾರ್ಶನಿಕರು 'ಮಿಥ್ಯಾ' ಎಂದು ವ್ಯಾಖ್ಯಾನಿಸಿ ಬಂಧ ಮತ್ತು ಮೋಕ್ಷಗಳು ಮಿಥ್ಯಾ ಎಂದು ಹೇಳಿದ್ದಾರೆ. ಈ ವ್ಯಾಖ್ಯಾನವು 11.11.7 ರಲ್ಲಿ ಹೇಳಿರುವ ಬಂಧ ಮತ್ತು ಮೋಕ್ಷಗಳ ನಿತ್ಯತ್ವಕ್ಕೆ ವಿರುದ್ಧವಾಗಿವೆ. ಯಾವುದು ನಿತ್ಯವೋ ಅದು ಮಿಥ್ಯಾ ಅಲ್ಲ. ಬ್ರಹ್ಮನಂತೆ. ಈ ಯುಕ್ತಿಯಿಂದ 11.11.7 ನೇ ಪದ್ಯವು ಅದ್ವೈತದರ್ಶನವು ಹೇಳುವ ಬಂಧ- ಮೋಕ್ಷಗಳ ಮಿಥ್ಯಾತ್ವವನ್ನು ನಿರಾಕರಿಸುತ್ತದೆ.

ಮೋಕ್ಷವೂ ಸುಳ್ಳಾದೀತು -

> ತವಾಪಿ ಮುಕ್ತೇರ್ಮಿಥ್ಯಾತ್ವಂ ಕಥಮರ್ಥೋ ಭವೇದ್ವದ ।
> ಪದದ್ವಯನಿಬದ್ಧೈಕರಜ್ವಾ ಪ್ರಾಪ್ತಿರ್ದ್ವಯೋರಪಿ ॥ ೨೭೯ ॥

**ಅರ್ಥ–** ತವ ಅಪಿ = ನಿನ್ನ ಮತದಲ್ಲೂ, ಮುಕ್ತೇಃ= ಮುಕ್ತಿಗೆ, ಮಿಥ್ಯಾತ್ವಂ= ಮಿಥ್ಯಾತ್ವವು, ಕಥಂ= ಹೇಗೆ, ಅರ್ಥಃ ಭವೇತ್= ಅರ್ಥವು ಆದೀತು? ವದ= ಹೇಳು. ಪದದ್ವಯ= ಎರಡು ಕಾಲುಗಳಿಗೆ (ಪದಗಳಿಗೆ), ನಿಬದ್ಧ= ಕಟ್ಟಲ್ಪಟ್ಟ ಅನ್ವಯಿಸುವ, ಏಕರಜ್ವಾ= ಒಂದು ಹಗ್ಗದಿಂದ, (ವಸ್ತುತಃ ಎಂಬ ಪದದಿಂದ), ದ್ವಯೋರಪಿ= ಎರಡಕ್ಕೂ, ಬಂಧ= ಮೋಕ್ಷಗಳಿಗೂ, ಪ್ರಾಪ್ತಿಃ= (ಮಿಥ್ಯಾತ್ವದ) ಪ್ರಾಪ್ತಿಯು ಇದೆ.

**ಅನುವಾದ–** ನಿನ್ನ ವ್ಯಾಖ್ಯಾನದ ಪ್ರಕಾರವೂ ಮುಕ್ತಿಗೆ ಮಿಥ್ಯಾತ್ವವು ಹೇಗೆ ಉಪಪನ್ನವಾಗುತ್ತದೆ? 'ಬದ್ಧ' ಮತ್ತು 'ಮುಕ್ತ' ಈ ಎರಡೂ ಪದಗಳಿಗೆ 'ನ ವಸ್ತುತಃ'

- ಈ ಪದಗಳ ಅನ್ವಯವಾಗುತ್ತದೆ. 'ನ ವಸ್ತುತಃ' - ಈ ಪದಗಳು ಒಂದು ಹಗ್ಗ. ಇದನ್ನು ಬದ್ಧ-ಮುಕ್ತ ಈ ಎರಡು ಪದಗಳಿಗೂ ಕಟ್ಟಲಾಗಿದೆ. ಇದು ಎರಡೂ ಪದಗಳನ್ನು ಎಳೆಯುತ್ತದೆ.

**ಭಾವವಿಲಾಸಿನೀ–** ನ ವಸ್ತುತಃ ನ ಪರಮಾರ್ಥತ ಇತ್ಯರ್ಥಃ ಪರೇಣಾಪಿ ವಕ್ತುಂ ನ ಶಕ್ಯತ ಇತ್ಯಾಹ– **ತವಾಪೀತಿ** ।। ಪರಮತೇಽಪಿ ಮುಕ್ತೇಸ್ಸತ್ಯತ್ವಾದಿತಿ ಭಾವಃ । ಪದದ್ವಯೇ ಪಾದಯುಗೇ ನಿಬದ್ಧೈಕರಜ್ಜ್ವಾ ದ್ವಯೋಃ ಪಾದಯೋಃ । ಏವಂಚ ಬಂಧಮುಕ್ತಿರೂಪಾರ್ಥದ್ವಯಸಂಬದ್ಧೇನ ನ ವಸ್ತುತ ಇತ್ಯನೇನೋಭಯೋರಪಿ ಮಿಥ್ಯಾತ್ವಪ್ರಾಪ್ತಿರ್ಭವೇದಿತಿ ಭಾವಃ ।। ೨೭೯ ।।

**ವಿವರಣೆ–** 'ಬದ್ಧೋ ಮುಕ್ತ ಇತಿ ಹ್ಯಾಖ್ಯಾ ಗುಣತೋ ಮೆ ನ ವಸ್ತುತಃ' **ಈ ಶ್ಲೋಕದ** 'ನ ವಸ್ತುತಃ' - ಈ ಪದಗಳಿಗೆ ಮಿಥ್ಯಾ ಎಂದು ಅರ್ಥವನ್ನು ಅದ್ವೈತದರ್ಶನವು ಹೇಳುತ್ತದೆ. ಇದರಿಂದ ಬಂಧ ಮತ್ತು ಮುಕ್ತಿ- ಇವೆರಡೂ ಮಿಥ್ಯಾ ಎಂದು ಅರ್ಥವಾಗುತ್ತದೆ. ಎರಡು ಕಾಲುಗಳಿಗೆ ಕಟ್ಟಲ್ಪಟ್ಟ ಒಂದು ಹಗ್ಗವು ಎರಡು ಕಾಲುಗಳನ್ನು ಎಳೆಯುತ್ತದೆಯಷ್ಟೇ.

ಆದರೆ ಅದ್ವೈತದರ್ಶನದ ಪ್ರಕಾರ 'ಮುಕ್ತಿ'ಯು ಮಿಥ್ಯಾ ಅಲ್ಲ. ಆ ದರ್ಶನದ **'ನ ವಸ್ತುತಃ'** ಪದಗಳ ವ್ಯಾಖ್ಯಾನವು ಹೀಗೆ ಅರ್ಥವನ್ನು ಕೊಡುತ್ತದೆ. ಹೇಗೆ? ಹೇಳು ಎಂದು ರಾಜರು ಅದ್ವೈತದಾರ್ಶನಿಕರನ್ನು ಕೇಳಿದ್ದಾರೆ. ಅವರ ವ್ಯಾಖ್ಯಾನ ಉಪಪನ್ನವಲ್ಲ ಎಂದು ತಾತ್ಪರ್ಯ.

ಈಶನೇ ಬಂಧಕ ಮತ್ತು ಮೋಚಕ-

ಯಾದೃಚ್ಛಿಕಸ್ಯ ಪಂಕಸ್ಯ ಕ್ಷಾಲನಂ ಚ ಯದೃಚ್ಛಯಾ ।
ವಸ್ತುಸ್ವಭಾವತೋ ನೇತಿ ಮಮ ತ್ವರ್ಥೋ ನಿರಾಕುಲಃ ।। ೨೮೦ ।।

**ಅರ್ಥ–** ಯಾದೃಚ್ಛಿಕಸ್ಯ = ಭಗವದಿಚ್ಛೆಯಿಂದ ಉಂಟಾದ, ಪಂಕಸ್ಯ = ಕೆಸರಿನ, ಕ್ಷಾಲನಂ ಚ = ತೊಳೆಯುವಿಕೆಯೂ, ಯದೃಚ್ಛಯಾ = ಭಗವದಿಚ್ಛೆಯಿಂದ, ವಸ್ತುಸ್ವಭಾವತಃ ನ= ವಸ್ತುವಿನ ಸ್ವಭಾವದಿಂದ ಅಲ್ಲ, ಇತಿ = ಎಂದು, ಮಮ ತು = ನನ್ನ, ಅರ್ಥಃ = ಅರ್ಥವು, ನಿರಾಕುಲಃ = ಯಾವಬಾಧಕವೂ ಇಲ್ಲದ್ದು.

**ಅನುವಾದ–** ಶ್ರೀಹರಿಯ ಇಚ್ಛೆಯಿಂದ ಇರುವ ಬಂಧವು ಅವನ ಇಚ್ಛೆಯಿಂದಲೇ ನಿವೃತ್ತವಾಗುತ್ತದೆ. ಬಂಧವೂ ಸ್ವಾಭಾವಿಕ ಅಲ್ಲ. ಅದರ ನಿವೃತ್ತಿಯೂ ಸ್ವಾಭಾವಿಕ ಅಲ್ಲ. ೧೧.೧೧.೧ ನೇ ಶ್ಲೋಕದ ಮೊದಲನೆಯ ಅರ್ಥಕ್ಕೆ ನಾನು ಹೇಳುವ ಅರ್ಥಕ್ಕೆ ಯಾವ ಬಾಧಕವೂ ಇಲ್ಲ.

**ಭಾವವಿಲಾಸಿನೀ–** ನ ವಸ್ತುತಃ ಅಸ್ವಭಾವತ ಇತ್ಯರ್ಥೇ ನಾಯಂ ದೋಷ ಇತ್ಯಾಹ– ಯಾದೃಚ್ಛಿಕಸ್ಯೇತಿ।। ಯಾದೃಚ್ಛಿಕಸ್ಯ ಯದೃಚ್ಛಯಾ ಧವಲವಸ್ತ್ರೇ ಪತಿತಸ್ಯ । ಏವಂ ಅಸ್ವಾಭಾವಿಕಬಂಧ- ಮೋಚನಮಪ್ಯಸ್ವಾಭಾವಿಕಮಿತಿ ಭಾವಃ ।। ೨೮೦ ।।

**ವಿವರಣೆ–** ಪಂಕ= ಬಂಧ. ಕ್ಷಾಲನ= ಮುಕ್ತಿ. ಎರಡೂ ಸ್ವಾಭಾವಿಕ ಅಲ್ಲ. ಭಗವದಿಚ್ಛೆಯಿಂದಲೇ ಬಂಧವು ಇದೆ; ಮುಕ್ತಿಯೂ ಆಗುತ್ತದೆ.

ನಮ್ಮ ಪ್ರಯತ್ನವಿಲ್ಲದೆ ನಮ್ಮ ಬಟ್ಟೆಗೆ ಅಂಟಿದ ಕೆಸರು ನಮ್ಮ ಪ್ರಯತ್ನವಿಲ್ಲದೆ ಪರಿಹಾರವಾಗುವ ಘಟನೆಯು ದೃಷ್ಟಾಂತ. ವೇದಾಂತಶಾಸ್ತ್ರದ ಪ್ರಕಾರ ಕೆಸರಿನ ಲೇಪ ಮತ್ತು ಪರಿಹಾರವು ಭಗವದಿಚ್ಛೆಯಿಂದಲೇ ಆಗಿರುತ್ತದೆ.

ಪರಮಾತ್ಮನಿಗೆ ಬಂಧನವಿಲ್ಲ -

**ಯತ್ ಪ್ರಾಙ್ನೈವ ಮ ಇತ್ಯಾಹ ತೇನ ಸೋಽವಾಸ್ತವಂ ತತ್ ।**
**ಸ್ವಸ್ಮಿನ್ನಿಷೇಧತೀಶಾನೇ ಸ್ವಸ್ಯ ಜೀವಸ್ಯ ಚೇತ್ಯಪಿ ॥ ೨೮೧ ॥**

**ನೇತಿ ಬ್ರವೀತಿ ಸ್ವಾನಿಷ್ಟಂ ಜೀವೋ ಮಚ್ಛಕ್ತಿತೋಽಗ್ರಹೀತ್ ।**
**ಇತಿ ವಕ್ತುಂ ಸ ಪದ್ಯೇಽಸ್ಮಿನ್ ಪ್ರಾಹ ಮೇ ಗುಣತಸ್ತ್ವಿತಿ ॥ ೨೮೨ ॥**

**ಅರ್ಥ–** ಯತ್ = ಯಾವಕಾರಣದಿಂದ, ಪ್ರಾಕ್ = ಹಿಂದೆ ಉದಾಹರಿಸಲ್ಪಟ್ಟ ಭಾಗವತ ಶ್ಲೋಕದಲ್ಲಿ (೨೬೧), ಮೇ = ನನಗೆ, (ಕೃಷ್ಣನಿಗೆ) ನೈವ = (ಬಂಧನವು) ಇಲ್ಲ ಇತಿ = ಎಂದು, ಆಹ =ಹೇಳಿರುವನೋ, ತೇನ = ಆದ್ದರಿಂದ, ಅವಾಸ್ತವಂ ತತ್= ಅವಾಸ್ತವವಾದ ಆ ಬಂಧನವನ್ನು ಈಶಾನೇ = ಸ್ವಾಮಿಯಾದ, ಸ್ವಸ್ಮಿನ್ = ತನ್ನಲ್ಲಿ ನಿಷೇಧತಿ = ನಿರಾಕರಿಸುತ್ತಾನೆ, ಸ್ವಸ್ಯ = ತನ್ನ (ಪರಮಾತ್ಮನ) ಸ್ವರೂಪನಾದ, ಜೀವಸ್ಯ = ಜೀವನಿಗೆ, ಇತ್ಯಪಿ = ಎಂಬ ವಿಚಾರವನ್ನು, ನೇತಿ = ಇಲ್ಲವೆಂದು, ಬ್ರವೀತಿ = ಹೇಳುತ್ತಾನೆ. (ಆದರೆ) ಜೀವಃ = ಜೀವನು, ಮಚ್ಛಕ್ತಿತಃ = ನನ್ನ ಇಚ್ಛೆಯಿಂದ, ಸ್ವಾನಿಷ್ಟಂ= ತನಗೆ ಇಷ್ಟವಲ್ಲದ ಬಂಧವನ್ನು, ಅಗ್ರಹೀತ್ = ಪಡೆದಿದ್ದಾನೆ. ಇತಿ = ಎಂದು, ವಕ್ತುಂ = ಹೇಳಲು, ಸಃ = ಕೃಷ್ಣನು, ಅಸ್ಮಿನ್ ಪದ್ಯೇ = ಈ **ಬದ್ಧೋ ಮುಕ್ತ** ಎಂಬ ಶ್ಲೋಕದಲ್ಲಿ, ಮೇ ಗುಣತಃ = ನನ್ನ ಅಧೀನವಾದ ಗುಣಗಳಿಂದ, ಇತಿ = ಎಂದು, ಪ್ರಾಹ = ಹೇಳಿದ್ದಾನೆ.

**ಅನುವಾದ–** **'ಸತ್ವಂ ರಜಸ್ತಮ ಇತಿ ಗುಣಾ ಜೀವಸ್ಯ ನೈವ ಮೇ' ಎಂಬ ಭಾಗವತ ಶ್ಲೋಕವನ್ನು (೧೧.೧೩.೧) ಯುಕ್ತಿಮಲ್ಲಿಕಾದಲ್ಲಿ ಹಿಂದೆ (೨೬೧) ಉದಾಹರಿಸಿದ್ದಾರೆ. ಈ ಭಾಗವತ ಶ್ಲೋಕದಲ್ಲಿ 'ನೈವ ಮೇ' ಎಂದು ಶ್ರೀಕೃಷ್ಣನು ಹೇಳಿದ್ದಾನೆ. ಈ ಹೇಳಿಕೆಯಿಂದ ನಿಯಾಮಕನಾದ ತನ್ನಲ್ಲಿ ಆ ಅಸ್ವಾಭಾವಿಕ ಬಂಧನವನ್ನು ನಿಷೇಧಿಸಿದ್ದಾನೆ. ಅದಲ್ಲದೆ, ತನ್ನ ಸ್ವರೂಪವೇ ಆಗಿರುವ ಜೀವಾತ್ಮನಿಗೂ ಬಂಧವಿಲ್ಲವೆಂದು ಹೇಳಿದ್ದಾನೆ. (ವಿವರಣೆ ೨ ನೋಡಿ) ಜೀವನು ತನಗೆ ಇಷ್ಟವಲ್ಲದ ಬಂಧವನ್ನು ನನ್ನ ಶಕ್ತಿಯಿಂದ ಪಡೆದಿದ್ದಾನೆ ಎಂದು ಹೇಳಲು ಈ ಪದ್ಯದಲ್ಲಿ (ಭಾಗ ೧೧.೧೧.೧) 'ಮೇ ಗುಣತಃ' ಎಂದು ಹೇಳಿದ್ದಾನೆ.**

**ಭಾವವಿಲಾಸಿನೀ–** ಯದ್ ಯಸ್ಮಾತ್ ಪ್ರಾಕ್ ಪ್ರಾಗುಕ್ತ ಸತ್ತ್ವಂ ರಜಃ ಇತಿ ಶ್ಲೋಕಾರ್ಧೇ ಮೇ ನೈವೇತ್ಯಾಹ ತೇನ ಕಾರಣೇನ ಅವಾಸ್ತವಂ ಚ ತದ್ ಭವಬಂಧನಮ್ । ಈಶಾನೇ ಸ್ವಸ್ಮಿನ್ನಿಷೇಧತಿ । ಅತಃ ಔಪಾಧಿಕಬಂಧಮಾದಾಯಾಪಿ 'ಬದ್ಧೋ ಮುಕ್ತ' ಇತಿ ಶ್ಲೋಕಾರ್ಧೇ ಜೀವ ಏವ ಪ್ರತಿಪಾದ್ಯೋ ನ ಭಗವಾನ್। ನೈವೇತ್ಯವಧಾರಣೇನ ಸ್ವಾಭಾವಿಕಸ್ಯ ವಾ ಅಸ್ವಾಭಾವಿಕಸ್ಯ ವಾ ಬಂಧಸ್ಯ ಭಗವತೋ ವ್ಯಾವರ್ತನಾತ್। ಸ್ವಸ್ಯ ಸ್ವಾತ್ಮಕಸ್ಯ ಜೀವಸ್ಯ। ಸ್ವತೋ ಗುಣನಿಮಿತ್ತಕಬಂಧರಹಿತಮಪಿ ಬ್ರಹ್ಮ ಜೀವಭಾವಂ ಪ್ರಾಪ್ಯ ಬಂಧಮನುಭವತಿ ಇತಿ ಯನ್ಮಾಯಿನೋಚ್ಯತೇ ತದಪಿ ನೇತ್ಯರ್ಥಃ । ಯೇನ ಕೇನಾಪಿ ಪ್ರಕಾರೇಣ ಬಂಧೇಽಂಗೀಕ್ರಿಯಮಾಣೇ ಸತಿ ಮೇ ನೈವೇತಿ ಸಾವಧಾರಣನಿಷೇಧಾಯೋಗಾತ್ । ಅತಃ ಬ್ರಹ್ಮಣೋಽತ್ಯಂತಭಿನ್ನೋ ಜೀವ ಏವಾಸ್ವಾಭಾವಿಕಬಂಧಾದ್ಯಾಧಾರತಯಾ ಪ್ರತಿಪಾದ್ಯ ಇತಿ ಭಾವಃ । ಇತೋಽಪ್ಯೇಕತ್ರ ಐಕ್ಯಮರ್ಥೋ ನೇತಿ ಸೂಚಿತಮ್ । ಸ್ವಾನಿಷ್ಟಂ ಬಂಧನಮ್ । ಮಚ್ಛಕ್ತಿತಃ ಮದಧೀನಗುಣಸಾಮರ್ಥ್ಯಾತ್ । ಸ ಕೃಷ್ಣಃ । ಅಸ್ಮಿನ್ ಪದ್ಯೇ ॥ ೨೮೧–೨೮೨ ॥

**ವಿವರಣೆ–** (1) ಭಾಗವತ 11.13.1 ರ ಪೂರ್ವಾರ್ಧವನ್ನು ಶುದ್ಧಿಸೌರಭದಲ್ಲಿ 261ನೇ ಶ್ಲೋಕದಲ್ಲಿ ಉದಾಹರಿಸಲಾಗಿದೆ. ಈ ಶ್ಲೋಕದಲ್ಲಿ ಶ್ರೀಕೃಷ್ಣನು 'ನೈವ ಮೇ' ಎಂದು ಹೇಳಿ ತನಗೆ ಅವಾಸ್ತವಬಂಧವಿಲ್ಲವೆಂದು ಹೇಳಿದ್ದಾನೆ.

(2) ಬ್ರಹ್ಮನು ಸ್ವಯಂ ಬಂಧರಹಿತ, ಆದರೂ ಜೀವಭಾವವನ್ನು ಹೊಂದಿ ಬಂಧವನ್ನು ಅನುಭವಿಸುತ್ತಾನೆ ಎಂದು ಅದ್ವೈತಚಿಂತಕರು ಹೇಳಿಯಾರು. ಇದು ಸರಿಯಲ್ಲ. ತನಗೆ ಬಂಧವಿಲ್ಲ ಎಂದು ಅವಧಾರಣ ಪೂರ್ವಕವಾಗಿ ಹೇಳಿದ್ದಾನೆ. ಯಾವುದೇ ರೀತಿಯಿಂದ ಬಂಧವಿದ್ದರೂ ಅವಧಾರಣವು ಉಪಪನ್ನವಾಗುವುದಿಲ್ಲ.

(3) ಬ್ರಹ್ಮನಿಂದ ಅತ್ಯಂತ ಭಿನ್ನನಾದ ಜೀವಾತ್ಮನು ತನಗೆ ಇಷ್ಟವಲ್ಲದ ಬಂಧವನ್ನು ಪರಮಾತ್ಮನಿಗೆ (ಕೃಷ್ಣನಿಗೆ) ಅಧೀನವಾದ ತ್ರಿಗುಣ ಸಂಬಂಧದಿಂದ ಪಡೆದಿದ್ದಾನೆ ಎಂದು ಭಾಗವತ 11.11.1 ರಲ್ಲಿ ಹೇಳಿದ್ದಾನೆ.

ಅಸುರಮೋಹಕ್ಕಾಗಿ ಅಸ್ಪಷ್ಟವಾಣಿ -

**ತೇನೈವ ವಕ್ತಿ ಸ್ವಾಧೀನಮನಿಷ್ಟಂ ಸ್ವಸ್ಯ ನೇತ್ಯಪಿ ।**
**ಮೋಹಂ ಚಾಸುರಜೀವಾನಾಂ ಸಮ್ಮುಗ್ಧೋಕ್ತ್ಯಾಽಕರೋತ್ ಪ್ರಭುಃ**
**॥ ೨೮೩ ॥**

**ಅರ್ಥ–** ತೇನೈವ = ಆದರಿಂದಲೇ= ಬಂಧಕವಾದ ಗುಣಗಳು ನನ್ನ ಅಧೀನವೆಂಬ ಹೇಳಿಕೆಯಿಂದಲೇ, ಸ್ವಾಧೀನಂ= ತನಗೆ ಆಧೀನವಾದ, ಅನಿಷ್ಟಂ = ಅನಿಷ್ಟವು= ಬಂಧನವು, ಸ್ವಸ್ಯ = ತನಗೆ, ನ = ಇಲ್ಲ, ಇತ್ಯಪಿ = ಎಂದೂ, ವಕ್ತಿ = ಹೇಳಿದ್ದಾನೆ. ಪ್ರಭುಃ = ಕೃಷ್ಣನು,

ಸಮ್ಮುಗ್ಧೋಕ್ತ್ಯಾ = ಅಸ್ಪಷ್ಟವಾದ ಮಾತಿನಿಂದ, ಅಸುರಜೀವಾನಾಂ = ಅಸುರಜೀವರಿಗೆ, ಮೋಹಂ = ಭ್ರಮೆಯನ್ನು ಅಕರೋತ್ = ಉಂಟುಮಾಡಿದ್ದಾನೆ.

**ಅನುವಾದ– (ಪ್ರಶ್ನೆ : ನನಗೆ ಬಂಧನವಿಲ್ಲ, ನನ್ನ ಅಧೀನವಾದ ಗುಣಗಳಿಂದ ಜೀವನು ಬದ್ಧನಾಗಿದ್ದಾನೆ ಎಂಬ ಅಭಿಪ್ರಾಯ ಕೃಷ್ಣನಿಗೆ ಇದ್ದರೆ 'ಮದಧೀನಗುಣಾತ್ ಜೀವಸ್ಯ ಬದ್ಧಾಖ್ಯಾ' ಎಂದು ಸ್ಪಷ್ಟವಾಗಿ ಏಕೆ ಹೇಳಲಿಲ್ಲ? 'ಮೇ ಗುಣತಃ' ಎಂದು ಹೇಳಿದ್ದರಿಂದ ಬಂಧಕಾರಣವಾದ ಗುಣನಿಯಾಮಕನು ತಾನು; ಆದ್ದರಿಂದ ಆ ಗುಣಪ್ರಯುಕ್ತವಾದ ಬಂಧನವು ತನಗೆ ಇರಲು ಅವಕಾಶವೇ ಇಲ್ಲ ಎಂದು ಹೇಳಿದ್ದಾನೆ. ಅನರ್ಹರಿಗೆ ತಿಳಿಯದಿರಲಿ ಎಂಬ ಉದ್ದೇಶದಿಂದ ಕೃಷ್ಣನು ಅಸ್ಪಷ್ಟವಾದ ಮಾತುಗಳಿಂದ ಅಸುರಜೀವರಿಗೆ ಮೋಹವನ್ನು ಉಂಟುಮಾಡಿದ್ದಾನೆ.**

**ಭಾವವಿಲಾಸಿನೀ–** ತೇನೈವ ಜೀವಸ್ಯಾನಿಷ್ಟದಾಯಕಸತ್ವಾದಿಗುಣಾನಾಂ ಸ್ವಾಧೀನತ್ವೇನೈವ । ಸ್ವಾಧೀನಮನಿಷ್ಟಂ ಬಂಧರೂಪಮ್ । ಅಸ್ವತಂತ್ರಸ್ಯ ಜೀವಸ್ಯ ಭಗವದಧೀನಗುಣನಿಮಿತ್ತಕದುಃಖಂ ಸ್ಯಾತ್ । ಸ್ವತಂತ್ರಸ್ಯ ದುಃಖದಾಯಕಗುಣಾನಾಮಪಿ ನಿಯಾಮಕಸ್ಯ ಕಥಂ ತದ್ದುಃಖಂ ಸ್ಯಾದಿತಿ ಭಾವಃ। ನನ್ವೇವಂ ಚೇನ್ಮದಧೀನಗುಣಾಜ್ಜೀವಸ್ಯ ಬದ್ಧಾದ್ಯಾಖ್ಯೇತಿ ಸ್ಪಷ್ಟಂ ಕಿಮಿತಿ ನಾವಾದೀದಿತ್ಯತ ಆಹ– **ಮೋಹಂ ಚೇತಿ** ॥ ೨೮೩ ॥

**ವಿವರಣೆ–** (1) ಇಷ್ಟವಲ್ಲದ ಬಂಧವನ್ನು ಉಂಟುಮಾಡುವ ತ್ರಿಗುಣಗಳು ತನಗೆ ಅಧೀನ ಎಂದು ಶ್ರೀಕೃಷ್ಣನು ಹೇಳಿದ್ದಾನೆ. ಇದರಿಂದ ನನಗೆ ಅಧೀನವಾದ ತ್ರಿಗುಣಗಳು ನನಗೆ ಅನಿಷ್ಟವನ್ನು ಮಾಡಲಾರವು ಎಂದು ಹೇಳಿದಂತೆಯೇ.

(2) 'ಮದಧೀನಗುಣತಃ' ಎಂದು ಶ್ರೀಕೃಷ್ಣನು ಸ್ಪಷ್ಟವಾಗಿ ಏಕೆ ಹೇಳಲಿಲ್ಲ?

ಅಸುರ ಮೋಹಕ್ಕಾಗಿ.

'ಬದ್ಧೋ ಮುಕ್ತ ಇತಿಹ್ಯಾಖ್ಯಾ ಗುಣತೋ ಮೇ ನ ವಸ್ತುತಃ' ೧೧.೧೧.೧ ಈ ಶ್ಲೋಕದಲ್ಲಿ ಕೃಷ್ಣನು 'ಮೇ ಗುಣತೋ ಬದ್ಧೋ ಮುಕ್ತ ಇತಿ ಹಿ ಆಖ್ಯಾ, ನ ವಸ್ತುತಃ' ಎಂದು ಹೇಳಿದ್ದಾನೆ ಎಂದು ಪರಿಗಣಿಸಿ ವಿವರಿಸುತ್ತಿದ್ದಾರೆ-

**ಸ್ವಾತಂತ್ರ್ಯಗುಣತೋ ಬದ್ಧಾಖ್ಯಾಂ ವ್ಯಾಖ್ಯಾಂತಿ ಮೇ ಬುಧಾಃ ।**
**ಬಂಧಾದಿವಸ್ತುತಸ್ತನ್ನಾಮ ಬಂಧೋಽಜ್ಞತಸ್ಯ ಮೇ ।**
**ನೇತಿ ವಿದ್ವತ್ಪ್ರಸಿದ್ಧಿಂ ಚ ಸೂಚಯನ್ ಶಂಸತಿ ಪ್ರಭುಃ ॥ ೨೮೪ ॥**

**ಅರ್ಥ–** ಬುಧಾಃ = ಜ್ಞಾನಿಗಳು, ಮೇ= ನನ್ನ, ಸ್ವಾತಂತ್ರ್ಯಗುಣತಃ = ಶಬ್ದಪ್ರವೃತ್ತಿನಿಮಿತ್ತದ ಮೇಲೆ ಸ್ವಾತಂತ್ರ್ಯ ಎಂಬ ಗುಣದಿಂದ, ಮೇ= ನನಗೆ, ಬದ್ಧಾದಿ ಆಖ್ಯಾಂ= ಬದ್ಧ ಮೊದಲಾದ ನಾಮಗಳನ್ನು, ವ್ಯಾಖ್ಯಾಂತಿ = ವ್ಯಾಖ್ಯಾನಮಾಡುತ್ತಾರೆ.

ಬಂಧೋಜ್ಞಿತಸ್ಯ = ಬಂಧರಹಿತನಾದ, ಮೇ = ನನಗೆ, ಬಂಧಾದಿವಸ್ತುತಃ = ಬಂಧಮೊದಲಾದ ಅರ್ಥಗಳು ಇರುವ ಕಾರಣದಿಂದ, ತತ್ತನ್ನಾಮ = ಬದ್ಧ ದುಃಖಿ ಮೊದಲಾದ ನಾಮಗಳು, ನ ಇತಿ = ಇಲ್ಲವೆಂದು, ವಿದ್ವತ್ಪ್ರಸಿದ್ಧಿಂ= ಪ್ರಾಜ್ಞರ ಪ್ರಸಿದ್ಧಿಯನ್ನು ಪ್ರಭುಃ = ಪ್ರಭು ಶ್ರೀಕೃಷ್ಣನು, ಶಂಸತಿ = (೧೧.೧೧.೧೮), ಹಿ ಶಬ್ದದಿಂದ ಹೇಳುತ್ತಾನೆ.

**ಅನುವಾದ–** ನನಗೆ ಎಲ್ಲದರ ಮೇಲೆ ಸ್ವಾತಂತ್ರ್ಯವಿದೆ; ಇದು ನನ್ನ ಗುಣ. ಆದ್ದರಿಂದ ನನಗೆ ಬದ್ಧ ಮೊದಲಾದ ನಾಮಗಳು ಉಪಪನ್ನ ಎಂದು ಪ್ರಾಜ್ಞರು ವ್ಯಾಖ್ಯಾನಿಸುತ್ತಾರೆ. ಬಂಧರಹಿತನಾದ ನನಗೆ ಬಂಧ ಮೊದಲಾದವುಗಳ ಸಂಬಂಧದಿಂದ ಆ ನಾಮಗಳಲ್ಲ; ಈ ವಿಷಯವು ಪ್ರಾಜ್ಞರಿಗೆ ತಿಳಿದಿದೆ ಎಂದು ಪ್ರಭು ಶ್ರೀಕೃಷ್ಣನು ಹೇಳಿದ್ದಾನೆ.

**ಭಾವವಿಲಾಸಿನೀ–** 'ಬದ್ಧೋ ಮುಕ್ತ' ಇತಿ ಶ್ಲೋಕಸ್ಯ ಪ್ರಕಾರಾಂತರೇಣ ವ್ಯಾಖ್ಯಾನಂ ಕರೋತಿ– **ಸ್ವಾತಂತ್ರ್ಯಗುಣತ ಇತಿ** ॥ ಸ್ವಾತಂತ್ರ್ಯಗುಣತಃ ಜೀವನಿಷ್ಠಬಂಧಾದೌ ಯದ್ ಭಗವತಸ್ಸ್ವಾತಂತ್ರ್ಯಮ್, ತದಾಖ್ಯಗುಣತಃ ಮೇ ಬುಧಾಃ ಬದ್ಧದುಃಖ್ಯಾದ್ಯಾಖ್ಯಾಂ ವ್ಯಾಖ್ಯಾಂತಿ । 'ತದಧೀನತ್ವಾದರ್ಥವದ್' ಇತ್ಯಾದಿಸೂತ್ರೇಷು । ಬಂಧವಾನ್ ಬದ್ಧಃ ದುಃಖವಾನ್ ದುಃಖೀತಿ ಬಂಧಾದಿಸಂಬಂಧಮಾತ್ರವಾಚಕಾಃ ಖಲ್ವಿಮೇ ಶಬ್ದಾಃ । ತೇ ಚ ಜೀವೇ ಚೇದ್ ಬಂಧಾದಿನಾಽಽಧಾರಾಧೇಯಭಾವಸಂಬಂಧಂ ಬ್ರೂಯುಃ । ಪರಮಾತ್ಮನಿ ಚೇತ್ ಬಂಧಾದಿನಾ ನಿಯಮ್ಯನಿಯಾಮಕಭಾವಸಂಬಂಧಂ ಬ್ರೂಯುಃ । ಯಥಾ ರಾಜಾ ಜಯೀತ್ಯತ್ರ ಭಟನಿಷ್ಠಜಯನಿಯಾಮಕತಯಾ ರಾಜ್ಞಿ ಜಯಿಶಬ್ದಪ್ರಯೋಗಃ ಏವಂ ಜೀವನಿಷ್ಠಬಂಧಾದಿನಿಯಾಮಕತಯಾ ಭಗವತಿ ಬದ್ಧದುಃಖ್ಯಾದಿಶಬ್ದಪ್ರಯೋಗಾದಿತಿ ಭಾವಃ । ಬಂಧಾದಿವಸ್ತುತಃ ಬಂಧಾದಿವಸ್ತ್ವಾಧಾರತಯೇತಿ ಯಾವತ್ । ತತ್ತನ್ನಾಮ ಬದ್ಧದುಃಖ್ಯಾದಿನಾಮ ನೇತಿ ಶಂಸತೀತಿ ಸಂಬಂಧಃ । ಹ್ಯಾಖ್ಯೇತಿ ಮೂಲಸ್ಥಿತಹಿಶಬ್ದಸ್ಯಾರ್ಥಂ ವಿದ್ವತ್ಪ್ರಸಿದ್ಧಿಂ ವಿದುಷಾಂ ವ್ಯಾಸಾದೀನಾಂ ಪ್ರಸಿದ್ಧಿಂ ಸೂಚಯನ್ ॥ ೨೮೪ ॥

**ವಿವರಣೆ–** ಸ್ವಾತಂತ್ರ್ಯ ಎಲ್ಲರಿಗೂ ಇಷ್ಟವಾದ ಗುಣ. ಯಾರಿಗೆ ಯಾವುದರ ಮೇಲೆ ಸ್ವಾತಂತ್ರ್ಯವಿದೆಯೋ ಅವನು ಆ ವಸ್ತುವಿನ ಒಡೆಯ. ಶ್ರೀಕೃಷ್ಣನು ಜಗತ್ಪ್ರಭು. ಅವನಿಗೆ ಸಕಲ ವಸ್ತುಗಳ ಮೇಲೆ ಸ್ವಾತಂತ್ರ್ಯವಿದೆ. ಜೀವಾತ್ಮರ ಬಂಧ, ಮುಕ್ತಿ ದುಃಖ ಮೊದಲಾದವುಗಳ ಮೇಲೂ ಅವನಿಗೆ ಸ್ವಾತಂತ್ರ್ಯವಿದೆ. ಆದ್ದರಿಂದ ಅವನು ಜೀವಾತ್ಮರ ಬಂಧ ಮೊದಲಾದವುಗಳ ಒಡೆಯ. ಬದ್ಧ= ಬಂಧದ ಒಡೆಯ, ಮುಕ್ತ= ಮುಕ್ತಿಯ ಒಡೆಯ, ದುಃಖಿ= ದುಃಖದ ಒಡೆಯ - ಈ ಅರ್ಥಗಳನ್ನು ಪರಿಗಣಿಸಿ ನನಗೂ (ಕೃಷ್ಣನಿಗೂ) ಬದ್ಧ, ಮುಕ್ತ ಶಬ್ದಗಳು ಅನ್ವಯಿಸುತ್ತವೆ. ಬಂಧ, ಮುಕ್ತಿ, ದುಃಖಗಳ ಸಂಬಂಧದಿಂದ ಅಲ್ಲ. ಈ ವಿಷಯವನ್ನು ಜ್ಞಾನಿಗಳಾದ ಬ್ರಹ್ಮಸೂತ್ರಕಾರರು ಹೇಳಿದ್ದಾರೆ. ಆದ್ದರಿಂದ ಇದು ವಿದ್ವತ್‌ಪ್ರಸಿದ್ಧ. ಈ ಪ್ರಸಿದ್ಧಿಯನ್ನು ಶ್ರೀಕೃಷ್ಣನು 'ಹಿ' ಶಬ್ದದಿಂದ (ಹಿ, ಆಖ್ಯಾ) ಹೇಳಿದ್ದಾನೆ.

'ತದಧೀನತ್ವಾದರ್ಥವತ್' 1.4.3 ಬ್ರಹ್ಮಸೂತ್ರದ ತಾತ್ಪರ್ಯವನ್ನು ತಿಳಿದಿರುವ ಜ್ಞಾನಿಗಳಿಗೂ ಇದು ತಿಳಿದಿದೆ.

**ಆಖ್ಯಾಪದಸ್ಯ ಚಾಖ್ಯಾನಮೇವಂ ಸತ್ಯೇವ ಶೋಭತೇ ।**
**ಮೋಕ್ಷೋ ಬಂಧನಮಿತ್ಯೇವ ನೋಚೇದೂಚೇ ಕುತೋಽಂತತಃ॥ ೨೮೫ ॥**

**ಅರ್ಥ–** ಆಖ್ಯಾಪದಸ್ಯ = (೧೧.೧೧.೧ ರಲ್ಲಿ) ಆಖ್ಯಾಪದದ, ಆಖ್ಯಾನಂ ಚ = ಪ್ರಯೋಗವಾದರೂ, ಏವಂ ಸತ್ಯೇವ = ಮೇಲೆ ತಿಳಿಸಿದ ರೀತಿಯಲ್ಲಿ ವ್ಯಾಖ್ಯಾನಿಸಿದರೆ ಮಾತ್ರ (ನನ್ನ ಸ್ವಾತಂತ್ರ್ಯಗುಣದ ಕಾರಣದಿಂದ ಎಂದು ವ್ಯಾಖ್ಯಾನಿಸಿದರೆ ಮಾತ್ರ) ಶೋಭತೇ = ಸಮಂಜಸವಾಗುತ್ತದೆ, ನೋ ಚೇತ್ = ಇಲ್ಲದಿದ್ದರೆ , ಅಂತತಃ = ಉತ್ತರಾರ್ಧದಲ್ಲಿ ಮೋಕ್ಷೋ ಬಂಧನಮಿತ್ಯೇವ = 'ಮೋಕ್ಷೋ' ಹಾಗೂ 'ಬಂಧನಮ್' ಎಂದೇ, ಕುತಃ= ಏಕೆ, ಊಚೇ= ಹೇಳಿದನು?

**ಅನುವಾದ– ೧೧.೧೧.೧ ರಲ್ಲಿ 'ಬದ್ಧೋ ಮುಕ್ತ ಇತಿ ಹಿ ಆಖ್ಯಾ ಮೇ ಗುಣತಃ' ಎಂದಿದೆ. ಇಲ್ಲಿ 'ಗುಣತಃ' ಪದಕ್ಕೆ 'ಸ್ವಾತಂತ್ರ್ಯ ಎಂಬ ಗುಣದ ಕಾರಣದಿಂದ' ಎಂದು ಅರ್ಥವಿದ್ದರೆ ಮಾತ್ರ, 'ಆಖ್ಯಾ' ಪದದ ಪ್ರಯೋಗವು ಸಮಂಜಸವಾಗುತ್ತದೆ. ಈ ಅಭಿಪ್ರಾಯವಿಲ್ಲದಿದ್ದರೆ ಉತ್ತರಾರ್ಧದಲ್ಲಿ 'ಆಖ್ಯಾ' ಪದವಿಲ್ಲದ 'ಮೋಕ್ಷೋ' 'ಬಂಧನಮ್' ಎಂದೇ ಏಕೆ ಹೇಳಿದನು?**

**ಭಾವವಿಲಾಸಿನೀ–** ಆಖ್ಯಾಪದಸ್ಯ ನಾಮಧೇಯಪರ್ಯಾಯಾಖ್ಯಾಪದಸ್ಯಾಖ್ಯಾನಂ ಪ್ರಯೋಗಃ। ಬದ್ಧಾದಿನಾಮವಾಚ್ಯವಿಚಾರಾರ್ಥಕತ್ವೇ ಆಖ್ಯಾಪದಂ ಸಾರ್ಥಕಮ್, ಅನ್ಯಥಾ ವ್ಯರ್ಥ-ಮಿತ್ಯರ್ಥಃ। ನೋ ಚೇತ್ ನಾಮವಿಚಾರೋ ನೋ ಚೇತ್ । ಅರ್ಥಾಭಾವಕಥನ ಏವ ತಾತ್ಪರ್ಯಂ ಚೇದಿತ್ಯರ್ಥಃ। ಅಂತತಃ ಬಂಧಾದಿವಸ್ತ್ವಭಾವಕಥನೋತ್ತರಾರ್ಧೇ। ಮೋಕ್ಷೋ ಬಂಧನಮಿತ್ಯೇವ ಆಖ್ಯಾಪದಂ ವಿನೇತ್ಯರ್ಥಃ ॥ ೨೮೫ ॥

**ವಿವರಣೆ–** (1) 'ಮೇ ಗುಣತಃ'= ನನ್ನ ಸ್ವಾತಂತ್ರ್ಯಗುಣದ ಕಾರಣದಿಂದಲೇ 'ಮೇ ಬದ್ಧೋ ಮುಕ್ತ ಇತಿ ಹಿ ಆಖ್ಯಾ'= ನನಗೆ ಬದ್ಧ, ಮುಕ್ತ ಎಂಬ ನಾಮಗಳು. ಹೀಗೆ ಕೃಷ್ಣನು ಹೇಳುತ್ತಿದ್ದಾನೆ. ಈ ಅಭಿಪ್ರಾಯವು ಕೃಷ್ಣನಿಗೆ ಇಲ್ಲದಿದ್ದರೆ 'ನಾನು ಬದ್ಧ, ಮುಕ್ತ' ಎಂಬ ಅಭಿಪ್ರಾಯವಿದ್ದಿದ್ದರೆ 'ಆಖ್ಯಾ' ಪದದ ಪ್ರಯೋಗವು ವ್ಯರ್ಥವಾಗುತ್ತದೆ.

(2) ಶ್ಲೋಕದ ಉತ್ತರಾರ್ಧದಲ್ಲಿ 'ನ ಮೇ ಮೋಕ್ಷೋ, ನ ಬಂಧನಮ್' ಎಂದು ಇದೆ. ನನಗೆ ಬಂಧ ಮತ್ತು ಮೋಕ್ಷಗಳು ಇವೆ ಎಂದು ಕೃಷ್ಣನ ಅಭಿಪ್ರಾಯವಾಗಿದ್ದಿದ್ದರೆ ಅವುಗಳನ್ನು ನಿರಾಕರಿಸುವ, 'ಆಖ್ಯಾ' ಪದವಿಲ್ಲದ ಪದಗಳನ್ನು ಹೇಳಲು ಕಾರಣವೇ ಇಲ್ಲ.

(3) ನನ್ನ ಸ್ವಾತಂತ್ರ್ಯ ಗುಣದ ಕಾರಣದಿಂದ ನನಗೆ 'ಬದ್ಧ' 'ಮುಕ್ತ' ಎಂಬ ಹೆಸರುಗಳಿವೆ; ಬಂಧನ ಮತ್ತು ಮೋಕ್ಷಗಳು ಇಲ್ಲ ಎಂದು 11.11.1 ರ ಅಭಿಪ್ರಾಯ.

೧೧.೧೧.೧ ರಲ್ಲಿ 'ವಸ್ತುತಃ' ಪದದ ಭಾಗವಾದ 'ವಸ್ತು' ಶಬ್ದಕ್ಕೆ ಬಂಧನ, ಮುಕ್ತಿ, ದುಃಖ ಮೊದಲಾದವುಗಳು ಅರ್ಥ. ಸಂಸ್ಕೃತಭಾಷೆಯಲ್ಲಿ ಶಬ್ದಗಳ ಅರ್ಥವೇ ವಸ್ತು. 'ತಃ' ಎಂದರೆ ಇರುವ ಕಾರಣದಿಂದ ಎಂದು ಅರ್ಥ-

**ಅಸ್ವತಂತ್ರಸ್ಯ ಜೀವಸ್ಯ ಬದ್ಧಾದ್ಯಾಖ್ಯಾ ತು ವಸ್ತುತಃ ।**
**ಇತಿ ಸೂಚಯತಾ ಚಾತ್ರ ಮುಕ್ತಾಮುಕ್ತದ್ವಿತೋದಿತಾ ॥ ೨೮೬ ॥**

**ಅರ್ಥ–** ಅಸ್ವತಂತ್ರಸ್ಯ = ಅಸ್ವತಂತ್ರನಾದ, ಜೀವಸ್ಯ = ಜೀವನಿಗೆ, ಬದ್ಧಾದ್ಯಾಖ್ಯಾ ತು = ಬದ್ಧ ಮೊದಲಾದ ಹೆಸರಾದರೂ, ವಸ್ತುತಃ = ವಸ್ತುವು ಇರುವ ಕಾರಣದಿಂದ, ಇತಿ = ಎಂದು, ಸೂಚಯತಾ = ಸೂಚಿಸಿದ ಶ್ರೀಕೃಷ್ಣನಿಂದ, ಅತ್ರ = ಪೂರ್ವಾರ್ಧದಲ್ಲಿ, ಮುಕ್ತಾಮುಕ್ತದ್ವಿತಾ = ನಿತ್ಯಮುಕ್ತ ಮತ್ತು ನಿತ್ಯಬದ್ಧರ ಭೇದವು, ಉದಿತಾ = ಜ್ಞಾಪಿಸಲ್ಪಟ್ಟಿತು.

**ಅನುವಾದ–** ಅಸ್ವತಂತ್ರನಾದ ಜೀವನಿಗೆ, ಅವನಲ್ಲಿ ಬಂಧ-ಮುಕ್ತಿ- ಈ ವಸ್ತುಗಳು ಇರುವುದರಿಂದ, 'ಬದ್ಧ' ಮೊದಲಾದ ನಾಮಗಳು ಎಂದೂ ಸೂಚಿಸಿದ ಕೃಷ್ಣನಿಂದ ಈ ಶ್ಲೋಕದಲ್ಲಿ ಮುಕ್ತ- ಅಮುಕ್ತರ ಭೇದವು ಸೂಚಿತವಾಗಿದೆ.

**ಭಾವವಿಲಾಸಿನೀ–** ಸ್ವತಂತ್ರಸ್ಯ ಮೇ ವಸ್ತ್ವಾಧಾರತ್ವನಿಮಿತ್ತಾಖ್ಯಾ ನೇತ್ಯುಕ್ತೇ ಅರ್ಥಾಜ್ಜೀವಸ್ಯ ತದಾಧಾರನಿಮಿತ್ತಾಽಖ್ಯೇತಿ ಲಾಭಾತ್ ಸೂಚಯತೇತ್ಯುಕ್ತಮ್ । ಅತ್ರ ಪೂರ್ವಾರ್ಧೇ। ಅಸ್ವತಂತ್ರಜೀವಸ್ಯ ಬಂಧಾಧಾರತ್ವಕಥನಾತ್ ಸ್ವತಂತ್ರಸ್ಯ ಪರಮಾತ್ಮನಃ ಕದಾಪಿ ತದಭಾವ-ಕಥನಾಚ್ಚೇತಿ ಭಾವಃ ॥ ೨೮೬ ॥

**ವಿವರಣೆ–** (1) 'ಬದ್ಧೋ ಮುಕ್ತ ಇತಿಹ್ಯಾಖ್ಯಾ ಗುಣತೋ ಮೇ ನ ವಸ್ತುತಃ' ಈ ಶ್ಲೋಕಕ್ಕೆ 'ಮೇ ಗುಣತೋ ಬದ್ಧೋ ಮುಕ್ತ ಇತಿ ಹ್ಯಾಖ್ಯಾ, ನ ವಸ್ತುತಃ' ಎಂದು ಕೃಷ್ಣನ ಅಭಿಪ್ರಾಯ. ಇದರಿಂದ ಸ್ವತಂತ್ರನಾದ ತನ್ನಲ್ಲಿ ಬಂಧ-ಮುಕ್ತಿ ಈ ವಸ್ತುಗಳು ಇಲ್ಲ ಎಂದು ಹೇಳಿದ್ದಾನೆ. ಈ ಹೇಳಿಕೆಯಿಂದ ಅಸ್ವತಂತ್ರನಾದ ಜೀವನಲ್ಲಿ ಬಂಧ-ಮುಕ್ತಿಗಳು ಇವೆ ಎಂದು ಸೂಚಿತವಾಗಿದೆ. ಈ ಸೂಚನೆಯಿಂದ ಬಂಧ-ಮುಕ್ತಿಗಳನ್ನು ತನ್ನಲ್ಲಿ ಹೊಂದಿರುವ ಜೀವಾತ್ಮ ಮತ್ತು ಇವುಗಳನ್ನು ಹೊಂದಿರದ ಪರಮಾತ್ಮ (ಅಮುಕ್ತ-ಮುಕ್ತ) ಇವರ ಭೇದವೂ ಸೂಚಿತವಾಗಿದೆ.

**ಮಾಯಾಯಾ ಅಪಿ ಮೂಲಂ ಮೇ ಸ್ವಾತಂತ್ರ್ಯಾಖ್ಯಗುಣೋ ಯತಃ ।**
**ಅತೋ ಮಾಯಾಮಯೋ ಬಂಧಸ್ತದ್ಧ್ವಂಸೋ ವಾ ಕಥಂ ಮಮ ।**
**ಇತಿ ತತ್ರೈವ ಹೇತುಂ ಚ ವ್ಯನಕ್ತೀತಿ ಮತಿರ್ಮಮ ॥ ೨೮೭ ॥**

**ಅರ್ಥ–** ಯತಃ = ಯಾವ ಕಾರಣದಿಂದ, ಮೇ = ನನ್ನ, ಸ್ವಾತಂತ್ರ್ಯಾಖ್ಯಗುಣಃ = ಸ್ವಾತಂತ್ರ್ಯ ಎಂಬ ಗುಣವು, ಮಾಯಾಯಾಃ ಅಪಿ = ಬಂಧಕವಾದ ಪ್ರಕೃತಿಗೂ, ಮೂಲಂ =

ಮೂಲವ್ರೋ, ಅತಃ = ಆದ್ದರಿಂದ, ಮಾಯಾಮಯೋ ಬಂಧಃ = ಪ್ರಕೃತಿವಿಕಾರವಾದ ಬಂಧವು, ತದ್ಧ್ವಂಸೋ ವಾ = ಅಥವಾ ಅದರ ನಾಶವು, ಮಮ ಕಥಮ್ = ನನಗೆ ಹೇಗೆ?, ಇತಿ= ಹೀಗೆ, ತತ್ರೈವ= ಅಲ್ಲೇ ಪೂರ್ವಾರ್ಧದಲ್ಲಿ ಹೇಳಲ್ಪಟ್ಟ ವಿಷಯದಲ್ಲೇ, ಹೇತುಂ ಚ= ಕಾರಣವನ್ನು, ವ್ಯನಕ್ತಿ= ವ್ಯಕ್ತಪಡಿಸಿದ್ದಾನೆ, ಇತಿ= ಎಂದು, ಮಮ= ನನ್ನ, ಮತಿಃ= ಅಭಿಪ್ರಾಯವು.

**ಅನುವಾದ–** ನನ್ನ ಸ್ವಾತಂತ್ರ್ಯಗುಣವು ಬಂಧಕಪ್ರಕೃತಿಗೂ ನಿಯಾಮಕ. ಬಂಧಕವಾದ ಮಾಯೆಯು ನನ್ನ ಸ್ವಾತಂತ್ರ್ಯಗುಣಾಧೀನವಾದ್ದರಿಂದ ಬಂಧವು ನನ್ನಲ್ಲಿ ಇರುವುದು ಹೇಗೆ? ಬಂಧ ಮತ್ತು ಬಂಧನಾಶವೆಂಬ ವಸ್ತುಗಳು ಇಲ್ಲವೆಂದು ಹೇಳಿದ ಪೂರ್ವಾರ್ಧದ ವಿಷಯದಲ್ಲೇ 'ಗುಣಸ್ಯ ಮಾಯಾಮೂಲತ್ವಾತ್' ಎಂದು ಕಾರಣವನ್ನು ಉತ್ತರಾರ್ಧದಲ್ಲಿ ಶ್ರೀಕೃಷ್ಣನು ಸ್ಪಷ್ಟಪಡಿಸಿದ್ದಾನೆ ಎಂದು ನನ್ನ ಅಭಿಪ್ರಾಯ.

**ಭಾವವಿಲಾಸಿನೀ–** ಯತೋ ಮೇ ಸ್ವಾತಂತ್ರ್ಯಾಖ್ಯಗುಣಃ ಮಾಯಾಯಾ ಅಪಿ ಮೂಲಂ ನಿಯಾಮಕ- ಮಿತ್ಯರ್ಥಃ । ಏವಂ ವದತಾ ಗುಣಸ್ಯ ಸ್ವಾತಂತ್ರ್ಯಗುಣಸ್ಯ ಮಾಯಾಮೂಲತ್ವಾತ್, ಮಾಯಾನಿಯಾಮಕತ್ವಾದಿತ್ಯರ್ಥ ಉಕ್ತೋ ಭವತಿ । ಅತಃ ಬಂಧಕಮಾಯಾಯಾ ಅಪಿ ಸ್ವಾತಂತ್ರ್ಯಾಖ್ಯಮದ್ಗುಣಾಧೀನತ್ವಾತ್ । ತತ್ರ ಬಂಧಧ್ವಂಸಾಖ್ಯ ವಸ್ತುಕೃತತ್ವಾಭಾವೇನ ವಸ್ತುತ ಇತಿ ಪೂರ್ವಾರ್ಧೋಕ್ತಾರ್ಥೇ ಹೇತುತಯಾ ಉತ್ತರಾರ್ಧಸ್ಯ ಸಂಬಂಧ ಇತಿ ಭಾವಃ ॥೨೮೭॥

**ವಿವರಣೆ–** ನನ್ನ ಸ್ವಾತಂತ್ರ್ಯಗುಣವು ಮಾಯೆಗೂ ನಿಯಾಮಕ. ಆದ್ದರಿಂದ ನನ್ನ ಮೇಲೆ ಮಾಯೆಯ ಪ್ರಭಾವವಿಲ್ಲ. ಆದ್ದರಿಂದ ಮಾಯೆಯಿಂದ ಉಂಟಾಗುವ ಬಂಧವು ನನಗೆ ಇಲ್ಲ. ಆದ್ದರಿಂದಲೇ ಅದರ ಧ್ವಂಸವೂ ಇಲ್ಲ. ಹೀಗೆ ಹೇಳಿದ ಕೃಷ್ಣನು 'ನ ವಸ್ತುತಃ' ಎಂದು ಪೂರ್ವಾರ್ಧದಲ್ಲಿ ಹೇಳಿದ ಪ್ರಮೇಯಕ್ಕೆ 'ಗುಣಸ್ಯಮಾಯಾಮೂಲತ್ವಾತ್= ಸ್ವಾತಂತ್ರ್ಯ ಗುಣವು ಮಾಯೆಗೆ ಮೂಲವಾದ್ದರಿಂದ' ಎಂದು ಸಮರ್ಥನೆಯನ್ನು ಹೇಳಿದ್ದಾನೆ.

**ಸ್ವಸ್ಯೈವ ನಿತ್ಯಮುಕ್ತತ್ವಂ ವಕ್ಷ್ಯನ್ನಾದೌ ಶ್ರುತೀರಿತಾಮ್ ।**
**ಬದ್ಧಾದ್ಯಾಖ್ಯಾಮಾತ್ಮನೀತ್ಥಮನ್ವರ್ಥಾಮಕರೋದ್ ಧ್ರುವಮ್ ॥ ೨೮೮ ॥**

**ಅರ್ಥ–** ಸ್ವಸ್ಯೈವ= ತನಗೆ ಮಾತ್ರ, ನಿತ್ಯಮುಕ್ತತ್ವಂ= ನಿತ್ಯಮುಕ್ತತ್ವವನ್ನು, ವಕ್ಷ್ಯನ್= ಮುಂದೆ (೧೧.೧೧.೭) ಹೇಳುವವನಾಗಿ, ಆದೌ= ಮೊದಲು (೧೧.೧೧.೧) ಶ್ರುತೀರಿತಾಮ್= ಶ್ರುತಿಯಲ್ಲಿ ಹೇಳಲ್ಪಟ್ಟಿರುವ, ಬದ್ಧಾದ್ಯಾಖ್ಯಾಂ= ಬದ್ಧ ಮೊದಲಾದ ನಾಮಗಳನ್ನು, ಆತ್ಮನಿ= ತನ್ನಲ್ಲಿ, ಇತ್ಥಂ= ಹೀಗೆ, ಅನ್ವರ್ಥಾಮ್= ಅನುಗುಣವಾದ ಅರ್ಥವುಳ್ಳದ್ದನ್ನಾಗಿ, ಅಕರೋತ್= ಮಾಡಿದನು, ಧ್ರುವಮ್= ನಿಶ್ಚಯ.

**ಅನುವಾದ–** ಶ್ರೀಕೃಷ್ಣನು ಭಾಗವತ ೧೧.೧೧.೭ ರಲ್ಲಿ ತನಗೆ ಮಾತ್ರ ನಿತ್ಯಮುಕ್ತತ್ವವು ಉಪಪನ್ನ ಎಂದು ಹೇಳುತ್ತಾನೆ. ಹೀಗೆ ಹೇಳಿದಾಗ, 'ಶ್ರುತಿಗಳು ಪರಮಾತ್ಮನಿಗೆ ಬದ್ಧ, ದುಃಖೀ ಮೊದಲಾದ ನಾಮಗಳಿವೆ ಎಂದು ಹೇಳುತ್ತವೆ; ನಿತ್ಯಮುಕ್ತನಲ್ಲಿ ಈ ನಾಮಗಳು ಹೇಗೆ? ಎಂದು ಪ್ರಶ್ನೆಗೆ ಅವಕಾಶವಿದೆ. ಈ ಪ್ರಶ್ನೆಗೆ 'ತನಗೆ ಬದ್ಧ ಮೊದಲಾದ ನಾಮಗಳು ತನ್ನ ಸ್ವಾತಂತ್ರ್ಯಗುಣದಿಂದ ಅನ್ವರ್ಥವಾಗುತ್ತವೆ' ಎಂದು ಮೊದಲೇ (೧೧.೧.೧) ಸಂಶಯಕ್ಕೆ ಅವಕಾಶವಿಲ್ಲದಂತೆ ಶ್ರೀಕೃಷ್ಣನು ಪ್ರತಿಪಾದಿಸಿದ್ದಾನೆ.

**ಭಾವವಿಲಾಸಿನೀ–** ನನು ಸ್ವಸ್ಮಿನ್ ಬದ್ಧಾದ್ಯಾಖ್ಯಾಯಾಸ್ಸ್ವಾತಂತ್ರ್ಯನಿಮಿತ್ತಕತ್ವಕಥನೇ ಕೋ ಹೇತುರಿತ್ಯತ ಆಹ– **ಸ್ವಸ್ಯೈವೇತಿ** ॥ ವಕ್ಷ್ಯನ್ ವಿದ್ಯಾಮಯೋ ಯಃ ಸ ತು ನಿತ್ಯ ಇತಿ ವಕ್ಷ್ಯನ್ ಶ್ರುತೀರಿತಾಂ ಸ ಬದ್ಧಸ್ಸ ದುಃಖೀ', ನಾಮಾನಿ ಸರ್ವಾಣಿ ಯಮಾವಿಶಂತಿ' ಇತ್ಯಾದಿಶ್ರುತ್ಯುಕ್ತಾಮ್ । ಅನ್ವರ್ಥಾಮ್ ಅನುಕೂಲಾರ್ಥಾಮ್ । ನಿತ್ಯಮುಕ್ತಸ್ಯ ಶ್ರುತ್ಯುಕ್ತಾ ಬದ್ಧಾದ್ಯಾಖ್ಯಾ ಕಥಮಿತ್ಯತೋ ಬಂಧಾದಿನಿಯಾಮಕತ್ವಮಾದಾಯೇತ್ಯನುಕೂಲಾರ್ಥ ಕಥನಾಯ 'ಬದ್ಧೋ ಮುಕ್ತಃ' ಇತಿ ಪದ್ಯಮುಪೋದ್ ಘಾತೇನ ಪ್ರವೃತ್ತಮಿತಿ ಭಾವಃ ॥ ೨೮೮ ॥

**ವಿವರಣೆ–** ಭಾಗವತ 11.11.7 ರಲ್ಲಿ 'ವಿದ್ಯಾಮಯೋ ಯಃ ಸ ತು ನಿತ್ಯಮುಕ್ತಃ' ಎಂದು ಶ್ರೀಕೃಷ್ಣನೇ ತನಗೆ ಮಾತ್ರ ನಿತ್ಯಮುಕ್ತತ್ವವು ಎಂದು ಹೇಳುತ್ತಾನೆ. ಆಗ - 'ಸ ಬದ್ಧಃ, ಸ ದುಃಖೀ', 'ನಾಮಾನಿ ಸರ್ವಾಣಿ ಯಮಾವಿಶಂತಿ' ಮೊದಲಾದ ಶ್ರುತಿಗಳು ಪರಮಾತ್ಮನಿಗೆ, ಬದ್ಧ, ದುಃಖೀ ಮೊದಲಾದ ನಾಮಗಳಿವೆ ಎಂದು ಹೇಳುತ್ತವೆ; ನಿತ್ಯಮುಕ್ತನಿಗೆ ಬಂಧ, ದುಃಖ ಇತ್ಯಾದಿಗಳು ಹೇಗೆ? ಎಂದು ಪ್ರಶ್ನೆಯು ಉದ್ಭವಿಸುತ್ತದೆ. ಈ ಪ್ರಶ್ನೆಯನ್ನೇ ನಿರೀಕ್ಷಿಸಿ, ಮೊದಲೇ (11.11.1) ಉತ್ತರವನ್ನು ಹೇಳಿದ್ದಾನೆ. ಇದನ್ನು ಶ್ರೀರಾಜರು 284, 285, 286, 287 ರಲ್ಲಿ ವಿವರಿಸಿದ್ದಾರೆ.

**ಭ್ರಾಂತತ್ವೇ ದೋಷಮೂಲತ್ವಂ ವದೇನ್ನಗುಣಮೂಲತಾಮ್ ।**
**ಬದ್ಧಾಖ್ಯಾಂ ಗುಣತಃ ಶಂಸಂಸ್ತದ್ಧಿಯಂ ತ್ವಗುಣೋದ್ಭವಾಮ್ ।**
**ಅಭಿಪ್ರೈತಿ ನ ದೋಷೋತ್ಥಾಂ ಗುಣಜನ್ಯಾ ಚ ಧೀಃ ಪ್ರಮಾ ॥ ೨೮೯ ॥**

**ಅರ್ಥ–** ಭ್ರಾಂತತ್ವೇ= ಬಂಧವು ಭ್ರಾಂತಿಕಲ್ಪಿತವಾಗಿದ್ದರೆ, ದೋಷಮೂಲತ್ವಂ= ದೋಷಮೂಲತ್ವವನ್ನು, ವದೇತ್= ಹೇಳಬೇಕು, ಗುಣಮೂಲತಾಮ್= ಗುಣಮೂಲತ್ವ ವನ್ನು, ನ ವದೇತ್= ಹೇಳಬಾರದು, ಬದ್ಧಾಖ್ಯಾಂ= ಬದ್ಧ ಎಂದು ಹೆಸರನ್ನು, ಗುಣತಃ= ಗುನಿಮಿತ್ತವೆಂದು, ಶಂಸನ್= ಹೇಳುತ್ತಾ, ತದ್ಧಿಯಂ ತು= ಬದ್ಧ ಎಂದು ಜ್ಞಾನವನ್ನಾದರೂ, ಅಗುಣೋದ್ಭವಾಂ= ದೋಷಾಭಾವದಿಂದ ಜನ್ಯ ಎಂದು, ನ ದೋಷೋತ್ಥಾಮ್= ದೋಷಜನ್ಯವಲ್ಲ ಎಂದೂ, ಅಭಿಪ್ರೈತಿ= ಅಭಿಪ್ರಾಯಪಟ್ಟಿದ್ದಾನೆ, ಗುಣಜನ್ಯಾ ಚ ಧೀಃ= ಗುಣದಿಂದ= ದೋಷಾಭಾವವಿದ್ದಾಗ ಹುಟ್ಟಿದ ಜ್ಞಾನವು, ಪ್ರಮಾ= ಯಥಾರ್ಥ.

**ಅನುವಾದ–** ಭ್ರಾಂತಿಗೆ ದೋಷವೇ ಕಾರಣ. ಭ್ರಾಂತಿಕಲ್ಪಿತವಾದರೆ ಗುಣಮೂಲವಾಗುವುದು ಹೇಗೆ? ಶ್ರೀಕೃಷ್ಣನು ತನಗೆ ಬಂಧನವು, ಗುಣಮೂಲವೆಂದು, ಅಂದರೆ, ಸ್ವಾತಂತ್ರ್ಯಗುಣಪ್ರಯುಕ್ತ ಎಂದು ಹೇಳಿದ್ದಾನೆ. ಇದರಿಂದ ತಾನು 'ಬದ್ಧ' ಎಂದು ಜ್ಞಾನವೂ, ಈ ಗುಣದಿಂದಲೇ= ದೋಷಾಭಾವದಿಂದಲೇ ಜನ್ಯ ಎಂದು ಅಭಿಪ್ರಾಯಪಟ್ಟಿದ್ದಾನೆ.

**ಭಾವವಿಲಾಸಿನೀ–** ನ ವಸ್ತುತ ಇತ್ಯಸ್ಯ ಪರೋಕ್ತಮಿಥ್ಯಾತ್ವಾರ್ಥಕತ್ವೇ ದೂಷಣಾಂತರಮಾಹ– **ಭ್ರಾಂತತ್ವ ಇತಿ** ॥ ಭ್ರಾಂತತ್ವೇ ಬಂಧಸ್ಯ ಭ್ರಾಂತಿಕಲ್ಪಿತತ್ವೇ ದೋಷಮೂಲತ್ವಂ ವದೇತ್ । ನತು ಗುಣತ ಇತಿ ಗುಣಮೂಲತಾಮ್ । ಬಂಧಸ್ಯ ಗುಣಮೂಲತ್ವೇ ತತ್ಪ್ರತೀತೇರಪಿ ಪರಂಪರಯಾ ಗುಣಮೂಲತ್ವಾಪರಿಹಾರಾದಿತಿ ಭಾವಃ । ಬದ್ಧಾಖ್ಯಾಂ ಬದ್ಧ ಇತ್ಯಾಖ್ಯಾಮ್ । ತದ್ಧಿಯಂ ಬದ್ಧ ಇತಿ ಧಿಯಮ್ । ಬಂಧಸ್ಯ ಬದ್ಧಾಖ್ಯಾಯಾಶ್ಚ ಗುಣಮೂಲತ್ವೇ ಸಮಾನನ್ಯಾಯಾತ್ ಪರಂಪರಯಾ ತದ್‌ಬುದ್ಧೇರಪಿ ಗುಣಮೂಲತ್ವಮಿತಿ ಭಾವಃ । ಗುಣಜನ್ಯಾ ಚ ಧೀಃ ಪ್ರಮಾ । ತಾರ್ಕಿಕರೀತ್ಯಾ ಗುಣಜನ್ಯಾ, ಅಸ್ಮಾಕಂ ತು ದೋಷಾಭಾವಾದಿಗುಣೇ ಸತ್ಯೇವ ಪ್ರಾಯೋ ಜಾಯಮಾನೇತ್ಯತಃ ಗುಣಜನ್ಯೇತ್ಯುಕ್ತಮ್ ॥ ೨೮೯ ॥

**ವಿವರಣೆ–** (1) 'ಬದ್ಧೋ ಮುಕ್ತ ಇತಿ ವ್ಯಾಖ್ಯಾ ಗುಣತೋ ಮೇ ನ ವಸ್ತುತಃ' (11.11.1) - ಇಲ್ಲಿಯ 'ನ ವಸ್ತುತಃ'- ಪದಗಳನ್ನು 'ಮಿಥ್ಯಾ' ಆದ್ದರಿಂದ ಎಂದು ಅದ್ವೈತದರ್ಶನವು ವ್ಯಾಖ್ಯಾನಿಸುತ್ತದೆ. 'ನನ್ನ ಬಂಧ ಮತ್ತು ಮುಕ್ತಿಗಳು ಮಿಥ್ಯಾ' ಎಂದು ಶ್ರೀಕೃಷ್ಣನ ಅಭಿಪ್ರಾಯ ಎಂದು ಅದ್ವೈತಚಿಂತಕರ ಅಭಿಪ್ರಾಯ. ಈ ಅಭಿಪ್ರಾಯದಲ್ಲಿರುವ ದೋಷಗಳನ್ನು ಈ ಶ್ಲೋಕದಲ್ಲಿ ಹೇಳಿದ್ದಾರೆ.

(2) ಬಂಧವು 'ಮಿಥ್ಯಾ', ಅಂದರೆ, ಭ್ರಾಂತಿಕಲ್ಪಿತ ಆಗಿದ್ದರೆ 'ಮೇ ಗುಣತಃ' ಎಂದು ಹೇಳುತ್ತಿರಲಿಲ್ಲ. 'ಮೇ ದೋಷತಃ' ಎಂದು ಹೇಳುತ್ತಿದ್ದನು. ಭ್ರಾಂತಿಯು ಗುಣದಿಂದ ಹುಟ್ಟುವುದಿಲ್ಲ.

(3) 'ಬದ್ಧ ಎಂಬ ಹೆಸರು ಗುಣತಃ' ಎಂದು ಹೇಳಿದ್ದಾನೆ. ಆದ್ದರಿಂದ ನಾನು ಬದ್ಧ ಎಂಬ ಜ್ಞಾನವೂ ಗುಣದಿಂದಲೇ ಹುಟ್ಟಬೇಕು, ದೋಷದಿಂದ ಅಲ್ಲ. ದೋಷ ಮೂಲಕವಲ್ಲದ ಜ್ಞಾನವು ಯಥಾರ್ಥವೇ.

(4) ಶ್ಲೋಕದಲ್ಲಿ ಶ್ರೀಕೃಷ್ಣನು 'ಮೇ ಗುಣತಃ' ಎಂದು ಹೇಳಿರುವುದರಿಂದ (1) ಬಂಧ (2) ಬದ್ಧ ಎಂಬ ಹೆಸರು ಭ್ರಾಂತಿಕಲ್ಪಿತವಲ್ಲ ಎಂದೇ ತಿಳಿಯುತ್ತದೆ. ಆದ್ದರಿಂದಲೇ 'ನಾನು ಬದ್ಧ' ಎಂಬ ಜ್ಞಾನವೂ ಭ್ರಾಂತಿಯಲ್ಲ ಎಂದು ತಿಳಿಯುತ್ತದೆ.

ಇತ್ಥಂ ಪ್ರಮಾಯಾ ವಿಷಯಃ ಪ್ರಮಿನಂತೀತಿ ಚ ಶ್ರುತೌ ।
ಶ್ರುತೋ ಬಂಧಃ ಕಥಂ ಮಿಥ್ಯಾ ಸತ್ತ್ವಂ ಹಿ ಜ್ಞಾನದೋ ಗುಣಃ ॥ ೨೯೦ ॥

**ಸಾತ್ತ್ವಿಕಾಶ್ಚ ಸುರರ್ಷ್ಯಾದ್ಯಾಸ್ತದ್ಬಂಧೋ ನ ಭ್ರಮೋದ್ಭವಃ ।**
**ಏವಂಚ ತದ್ವದ್ ದುಃಖಾತ್ಮಾ ಬಂಧೋऽನ್ಯತ್ರ ಕಥಂ ಭ್ರಮಃ ॥ ೨೯೧ ॥**

**ಅರ್ಥ–** ಇತ್ಥಂ = ಹೀಗೆ, ಪ್ರಮಾಯಾಃ ವಿಷಯಃ = ಪ್ರಮಾವಿಷಯವಾದ, ಚ = ಮತ್ತು, ಪ್ರಮಿನಂತಿ ಇತಿ ಶ್ರುತೌ = 'ವಿಶ್ವಂ ಸತ್ಯಂ ...... ಪ್ರಮಿನಂತಿ ವ್ರತಂ ವಾಮ್' ಎಂಬ ಶ್ರುತಿಯಲ್ಲಿ, ಶ್ರುತಃ = ಶ್ರುತವಾದ, ಬಂಧಃ = (ಬಂಧವು) ಸಂಸಾರಬಂಧವು, ಕಥಂ ಮಿಥ್ಯಾ = ಹೇಗೆ ಮಿಥ್ಯಾ ಆದೀತು? ಸತ್ತ್ವಂ = ಸತ್ತ್ವವು, ಜ್ಞಾನದೋ ಗುಣಃ ಹಿ = ಜ್ಞಾನವನ್ನು ಕೊಡುವ ಗುಣವಷ್ಟೇ. ಚ= ಮತ್ತು, ಸುರಾರ್ಷ್ಯಾದ್ಯಾಃ = ದೇವತೆಗಳು, ಋಷಿಗಳು ಮೊದಲಾದವರು, ಸಾತ್ತ್ವಿಕಾಃ= ಸತ್ತ್ವಗುಣವನ್ನು ಅಧಿಕವಾಗಿ ಹೊಂದಿದವರು, ಏವಂ ಚ= ಆದ್ದರಿಂದ, ತತ್= ಅವರ ಬಂಧಃ= ಬಂಧವು, ನ ಭ್ರಮೋದ್ಭವಃ= ಭ್ರಾಂತಿಕಲ್ಪಿತವಲ್ಲ. ತದ್ವತ್= ಸುರ ಋಷಿ ಮೊದಲಾದವರ ಬಂಧದಂತೆ, ಅನ್ಯತ್ರ= ಅಸುರಾದಿಗಳಲ್ಲಿ, ದುಃಖಾತ್ಮಾ ಬಂಧಃ= ದುಃಖರೂಪವಾದ ಬಂಧವು, ಕಥಂ ಭ್ರಮಃ= ಹೇಗೆ ಭ್ರಮಕಲ್ಪಿತವಾದೀತು?

**ಅನುವಾದ– ಹೀಗೆ ಯಥಾರ್ಥಜ್ಞಾನಕ್ಕೆ ವಿಷಯವಾದ, 'ಪ್ರಮಿನಂತಿ...' ಎಂಬ ಶ್ರುತಿಯಲ್ಲಿ ಪ್ರಸಿದ್ಧವಾದ ಬಂಧವು ಹೇಗೆ ತಾನೇ 'ಮಿಥ್ಯಾ ?' 'ಸತ್ತ್ವ'ವು ಜ್ಞಾನವನ್ನು ಕೊಡುವ ಗುಣ; ಇದು ಪ್ರಸಿದ್ಧ, ದೇವ, ಋಷಿ ಮೊದಲಾದವರು ಸಾತ್ತ್ವಿಕರು= ಅಧಿಕ ಸತ್ತ್ವಗುಣವನ್ನು ಹೊಂದಿದವರು. ಅವರ ಬಂಧವು ಭ್ರಾಂತಿಕಲ್ಪಿತವಲ್ಲ. ಆದ್ದರಿಂದ ಸುರಾದಿಗಳ ಬಂಧದಂತೆ ಬೇರೆಯವರಲ್ಲಿ= ಅಸುರರಲ್ಲಿ ದುಃಖರೂಪವಾದ ಬಂಧವು ಹೇಗೆ ತಾನೇ ಭ್ರಾಂತಿಕಲ್ಪಿತ?**

**ಭಾವವಿಲಾಸಿನೀ–** ಇತ್ಥಂ ಪೂರ್ವೋಕ್ತರೀತ್ಯಾ ಪ್ರಮಾಯಾ ವಿಷಯಃ । ಶ್ರುತಃ ಪ್ರಮಾವಿಷಯತ್ವೇನ ಶ್ರುತಃ । ಗುಣಮೂಲತ್ವಕಥನಾದರ್ಥಾತ್ ಪ್ರಮಾವಿಷಯತ್ವಂ ಪ್ರಾಪ್ತಃ । ಶ್ರುತೌ ತು ಸಾಕ್ಷಾಚ್ಛ್ರುತ ಇತ್ಯರ್ಥಃ। ಅತಃ ಪರೋದೀರಿತಬಂಧಮಿಥ್ಯಾತ್ವರೂಪಾರ್ಥೋ ನ ಘಟತ ಇತಿ ಭಾವಃ । ಪ್ರಾಕ್ ಪ್ರಮಾಜನಕಗುಣಪರತಯಾ ಯೋಜನಾ ಕೃತಾ । ಸಾಮಾನ್ಯತಃ ಶ್ರುತಗುಣಪದಸ್ಯ ತತ್ರಾಪಿ ನೇತುಂ ಶಕ್ಯತ್ವಾತ್ । ಇದಾನೀಂ ಗುಣಪದಸ್ಯ ಸತ್ತ್ವಾದಿಗುಣಪರತಾಯಾಮಪಿ ಬಂಧಸ್ಯ ಪ್ರಮಾವಿಷಯತ್ವಮಾನಯತಿ– **ಸತ್ತ್ವಂ ಹೀತಿ** ॥ ಹಿಶಬ್ದೇನ 'ಸತ್ತ್ವಾತ್ ಸಞ್ಜಾಯತೇ ಜ್ಞಾನಮ್' ಇತಿ ಗೀತಾವಾಕ್ಯಂ ಸೂಚಯತಿ । ನನು ರಜಸ್ತಮಸೋಸ್ಸಂಶಯವಿಪರ್ಯಯಹೇತುತ್ವಾತ್ ಕಥಂ ಗುಣಜನ್ಯತ್ವೇ ಪ್ರಮಾವಿಷಯತ್ವಮಿತ್ಯತ ಆಹ–**ಸಾತ್ತ್ವಿಕಾಶ್ಚೇತಿ** । ಸುರಋಷ್ಯಾದ್ಯುತ್ತಮಾಧಿಕಾರಿಣಃ ಸಾತ್ತ್ವಿಕಾಃ ಸತ್ತ್ವಗುಣಪ್ರಧಾನಾಃ । ತತ್ಸತ್ತ್ವಗುಣಪ್ರಧಾನಬ್ರಹ್ಮಾದಿಜ್ಞಾನವಿಷಯತ್ವಾತ್ ಸತ್ತ್ವಗುಣಜನ್ಯಜ್ಞಾನವಿಷಯತ್ವಾದಿತಿ ಯಾವತ್ । ಏವಮುಕ್ತಪ್ರಕಾರೇಣ ದುಃಖಾದಿರೂಪಬಂಧಸ್ಯ ಬ್ರಹ್ಮಾದಿಪ್ರಮಾವಿಷಯತ್ವಾತ್ ತದ್ವತ್ ಬ್ರಹ್ಮಾದಿಬಂಧವತ್ । ದುಃಖಾತ್ಮಾ ಬಂಧಃ ಅನ್ಯತ್ರಾಸುರಾದಿಷ್ವಪಿ ಕಥಂ ಭ್ರಮಃ । ಭ್ರಾಮ್ಯತ

ಇತಿ ಭ್ರಮಃ ಭ್ರಮವಿಷಯಃ । ಉತ್ತಮಾಧಿಕಾರಿಭಿರನುಭೂಯಮಾನದುಃಖಾತ್ಮಕಬಂಧಸ್ಯ ಸತ್ತ್ವ-ಗುಣಜನ್ಯಜ್ಞಾನವಿಷಯತ್ವೇನ ಪ್ರಮಾವಿಷಯತ್ವಾವಶ್ಯಂಭಾವಾತ್ ತತ್ಸಮಾನತಯಾ ಸರ್ವತ್ರಾಪಿ ವಿದ್ಯಮಾನೋ ಬಂಧಃ ಪ್ರಮಾವಿಷಯ ಏವ । ದುಃಖಾದಿರೂಪಬಂಧಮಾತ್ರೇ ತೇಷಾಮಪಿ ಧೀಃ ಪ್ರಮೈವ । ರಜಸ್ತಮೋನಿಮಿತ್ತಭ್ರಮಸ್ತು ಪರಾಪರತತ್ತ್ವವಿಷಯ ಏವೇತಿ ಭಾವಃ ॥೨೯೧॥

**ವಿವರಣೆ**–(1) 289ನೇ ಶ್ಲೋಕದಲ್ಲಿ ವಿವರಿಸಿದಂತೆ ಬಂಧವು ಯಥಾರ್ಥಜ್ಞಾನ (ಪ್ರಮಾ)ಕ್ಕೆ ವಿಷಯ.

''ವಿಶ್ವಂ ಸತ್ಯಂ ಮಘವಾನಾ ಯುವೋರಿದಾಪಶ್ಚನ ಪ್ರಮಿನಂತಿ ವ್ರತಂ ವಾಮ್''

- ಋಗ್ವೇದ ೨.೨೪.೧೨.

(ಮಘವಾನಾ= ಐಶ್ವರ್ಯ ಸಂಪನ್ನರೇ, ಯುವೋಃ= ನಿಮ್ಮಿಬ್ಬರ, ವಿಶ್ವಂ= ಪ್ರಪಂಚವು, ಸತ್ಯಮ್ ಇತ್= ಸತ್ಯವೇ, ಆಪಶ್ಚನ= ಅಪ್‌ನ ಅಭಿಮಾನಿ ದೇವತೆಗಳೂ, ಕರ್ಮಾಭಿಮಾನಿ ದೇವತೆಗಳೂ, ವಾಂ= ನಿಮ್ಮಿಬ್ಬರ, ವ್ರತಂ= ಕರ್ಮವನ್ನು, ಸತ್ಯಜಗತ್ತಿನ ಸೃಷ್ಟಿ ಮೊದಲಾದ ಕರ್ಮಗಳನ್ನು, ಪ್ರಮಿನಂತಿ= ತಿಳಿದಿದ್ದಾರೆ).

(ಪರಮಾತ್ಮನ ಎರಡು ರೂಪಗಳನ್ನು ಸಂಬೋಧಿಸಿ ಈ ವರ್ಣನೆಯನ್ನು ಮಾಡಲಾಗಿದೆ). ಈ ಶ್ರುತಿಯೂ ಪ್ರಪಂಚವನ್ನು= ಪ್ರಕೃತಿಬಂಧವನ್ನು ಸತ್ಯ ಎಂದೇ ಹೇಳಿದೆ. ಆದ್ದರಿಂದ ಬಂಧವು ಸರ್ವಥಾ ಮಿಥ್ಯಾ ಅಲ್ಲ.

(2) 'ಸತ್ತ್ವ' ಗುಣವು ಜ್ಞಾನವನ್ನು ಕೊಡುವ ಗುಣ. (ತತ್ರ ಸತ್ತ್ವಂ ನಿರ್ಮಲತ್ವಾತ್ ಪ್ರಕಾಶಕ ಮನಾಮಯಮ್- ಭಗವದ್ಗೀತಾ 14.6, 'ಸತ್ತ್ವಾತ್ ಸಞ್ಜಾಯತೇ ಜ್ಞಾನಮ್- 14.17). ದೇವತೆಗಳು ಋಷಿಗಳು ಮೊದಲಾದವರಲ್ಲಿ ಸತ್ತ್ವಗುಣವು ಅಧಿಕವಾಗಿದ್ದು, ಅವರಲ್ಲಿ ಉತ್ಕೃಷ್ಟಜ್ಞಾನವಿದೆ. ಇವರು ತಮಗೆ ಪ್ರಕೃತಿಬಂಧವಿದೆ ಎಂದು ತಿಳಿದಿದ್ದಾರೆ. ಇವರ ಯಥಾರ್ಥ ಜ್ಞಾನಕ್ಕೆ ವಿಷಯವಾದ ಬಂಧವು ಭ್ರಾಂತಿಕಲ್ಪಿತವಲ್ಲ.

(3) ಹೀಗಿರುವಾಗ ಅಸುರ ಚೇತನಗಳಲ್ಲಿ ಇರುವ ಬಂಧವು ಹೇಗೆ ಭ್ರಾಂತಿಕಲ್ಪಿತ? ಅಸುರ ಚೇತನಗಳಿಗೂ ತಮಗೆ ಬಂಧವಿದೆ ಎಂದು ಜ್ಞಾನವಿದೆ. ಇದು ಯಥಾರ್ಥಜ್ಞಾನ. ಈ ಜ್ಞಾನಕ್ಕೆ ವಿಷಯವಾದ ಬಂಧವೂ ಸತ್ಯವೇ, ಭ್ರಾಂತಿಕಲ್ಪಿತವಲ್ಲ. ಈ ಚೇತನಗಳಲ್ಲಿ 'ರಜಸ್' ಮತ್ತು 'ತಮೋ' ಗುಣಗಳು ಅಧಿಕವಾಗಿರುವುದರಿಂದ ಅವರಿಗೆ ಪರಮಾತ್ಮನ ಬಗ್ಗೆ ಮತ್ತು ಅವನಿಗೆ ಅಧೀನವಾದ ಅಪರತತ್ತ್ವಗಳ ಬಗ್ಗೆ ಭ್ರಾಂತಿಯು ಇದೆ.

ಪ್ರಮಾತಾರೋಽಪಿ ಬಂಧಸ್ಯ ಪ್ರಮಿನ್ವಂತಿ ನ ತೇ ಹರಿಮ್ ।
ಅತೋ ಹ್ಯವಿದ್ಯಯಾ ಬಂಧ ಇತ್ಯುಕ್ತಂ ನ ಮೃಷಾತ್ವತಃ ।
ಇತ್ಥಂ ಭಾಗವತೇ ಪ್ರೋಕ್ತಂ ಕೃಷ್ಣೇನೈವೋದ್ಧವಂ ಪ್ರತಿ ॥ ೨೯೨ ॥

**ಅರ್ಥ–** ತೇ= ಆ ಅಸುರರು, ಬಂಧಸ್ಯ= ಸಂಸಾರ ಬಂಧದ(ವನ್ನು), ಪ್ರಮಾತಾರಃ ಅಪಿ= ಪ್ರಮಾತೃಗಳಾಗಿದ್ದರೂ (ಯಥಾರ್ಥವಾಗಿ ತಿಳಿದಿದ್ದರೂ), ಹರಿಂ= ಶ್ರೀಹರಿಯನ್ನು, ನ ಪ್ರಮಿನ್ವಂತಿ= ಯಥಾರ್ಥವಾಗಿ ತಿಳಿದಿಲ್ಲ, ಅತಃ ಹಿ= ಆದ್ದರಿಂದಲೇ= ಶ್ರೀಹರಿಯ ಯಥಾರ್ಥ ಜ್ಞಾನವು ಇಲ್ಲದಿರುವುದರಿಂದಲೇ, 'ಅವಿದ್ಯಯಾ ಬಂಧಃ' ಇತಿ= ಅವಿದ್ಯಯಾ ಬಂಧಃ' (ಪರಮಾತ್ಮನ ಜ್ಞಾನವಿಲ್ಲದಿರುವುದರಿಂದ ಬಂಧವು ಸಂಭವಿಸುತ್ತದೆ) ಎಂದು, ಉಕ್ತಂ= ಹೇಳಲ್ಪಟ್ಟಿದೆ (೧೧.೧೧.೪), ನ ಮೃಷಾತ್ವತಃ= ಮಿಥ್ಯಾ ಆದ್ದರಿಂದ ಅಲ್ಲ. ಇತ್ಥಂ= ಹೀಗೆ, ಭಾಗವತೇ= ಭಾಗವತ ಪುರಾಣದಲ್ಲಿ, ಕೃಷ್ಣೇನೈವ= ಶ್ರೀಕೃಷ್ಣನಿಂದಲೇ, ಉದ್ಧವಂ ಪ್ರತಿ= ಉದ್ಧವನಿಗೆ, ಪ್ರೋಕ್ತಮ್= ಹೇಳಲ್ಪಟ್ಟಿದೆ.

**ಅನುವಾದ–** ತಮಗಿರುವ ಪ್ರಕೃತಿಬಂಧವನ್ನು ಯಥಾರ್ಥವಾಗಿಯೇ ತಿಳಿಯುವ ಅಸುರರೂ ಶ್ರೀಹರಿಯನ್ನು ಯಥಾರ್ಥವಾಗಿ ತಿಳಿಯುವುದಿಲ್ಲ. ಶ್ರೀಹರಿಯ ಯಥಾರ್ಥ ಜ್ಞಾನದ ಅಭಾವವೇ ಅವಿದ್ಯೆ. ಆದ್ದರಿಂದ ಭಾಗವತ ೧೧.೧೧.೪ ರಲ್ಲಿ ಶ್ರೀಕೃಷ್ಣನೇ ಉದ್ಧವನಿಗೆ 'ಅವಿದ್ಯಯಾ ಬಂಧಃ' ಎಂದು ಹೇಳಿದ್ದಾನೆ. ಬಂಧವು ಮಿಥ್ಯಾ ಎಂಬ ಕಾರಣದಿಂದ 'ಅವಿದ್ಯಯಾ ಬಂಧಃ' ಎಂದು ಶ್ರೀಕೃಷ್ಣನು ಹೇಳಲಿಲ್ಲ.

**ಭಾವವಿಲಾಸಿನೀ**–ಏತದೇವ ವಿಶದಯತಿ– **ಪ್ರಮಾತಾರೋಽಪೀತಿ** ॥ ಬಂಧಸ್ಯ ಬಂಧಮಾತ್ರಸ್ಯ ಪ್ರಮಾತಾರೋಽಪಿ ತೇ ದೈತ್ಯಾಃ ಹರಿಂ ನ ಪ್ರಮಿನ್ವಂತಿ । ಹರೇಸ್ಸರ್ವಜ್ಞತ್ವಸರ್ವೇಶ್ವರತ್ವಾದೌ ಪ್ರಮಾವಂತೋ ನ ಭವಂತಿ । ಅತಸ್ತನ್ನಿಷ್ಠರಜಸ್ತಮಸೋಃ ಪರಮಾತ್ಮತತ್ತ್ವಪ್ರಮಾ ಪ್ರತಿಬಂಧಕತ್ವೇನೈವೋಪಯೋಗೋ ನತು ತೈರನುಭೂಯಮಾನದುಃಖಪ್ರಮಾಂ ಪ್ರತಿ ಪ್ರತಿಬಂಧಕತ್ವೇನಾಪೀತಿ ಭಾವಃ । ಅತಃ ದುಃಖಾದಿರೂಪಬಂಧಸ್ಯ ಪ್ರಮಾವಿಷಯತ್ವನಿಯಮಾತ್ । ಅವಿದ್ಯಯಾ ಬಂಧ ಇತ್ಯುಕ್ತೇಽಪಿ ಪರಮಾತ್ಮವಿದ್ಯಾಭಾವೇನೈವ ಬಂಧ ಇತ್ಯರ್ಥೋ ಲಭ್ಯತೇ । ನತು ಮೃಷಾತ್ವತ ಇತಿ । ಸತ್ವಗುಣೇನ ಭ್ರಮಜನಕರಜಸ್ತಮಸೋಃ ಪರಾಭವೇ ಕಾರಿತೇ ಜ್ಞಾನಸಾಮಾನ್ಯಸಾಮಗ್ರೀತ ಏವ ಪ್ರಮಾ ಜಾಯತೇ । ತದಪೇಕ್ಷಯೈವ ಸತ್ವಗುಣಸ್ಯ ಪ್ರಮಾಜನಕತ್ವೋಕ್ತಿಃ । ನತು ಸಾಕ್ಷಾತ್ ಪ್ರಮಾಂ ಪ್ರತ್ಯೇವ ಸತ್ವಗುಣಸ್ಯೋಪಯೋಗಃ । ಅತೋ ನ ಪ್ರಾಮಾಣ್ಯಪರತಸ್ತ್ವಶಂಕಾ । ಕಿಂಚ ಸುಖದುಃಖಾದಿವಿಷಯೇ ಸಾಕ್ಷಿಣೋ ಯಾಥಾರ್ಥ್ಯನಿಯಮಾತ್ ಕದಾಪಿ ನ ತತ್ರ ಭ್ರಾಂತಿತ್ವಮ್ । ತಸ್ಮಾನ್ನಿಯಮೇನ ಪ್ರಮಾವಿಷಯೋ ದುಃಖರೂಪೋ ಬಂಧಃ ಕಥಂ ಮಿಥ್ಯಾರ್ಥಃ ಸ್ಯಾತ್ । ಅತೋ ನ ವಸ್ತುತ ಇತ್ಯಸ್ಯ ನ ಪರೋದೀರಿತಮಿಥ್ಯಾರ್ಥಕತ್ವಮ್ । ಯದ್ವಾ ಗುಣಸ್ಯ ಮಾಯಾಮೂಲತ್ವಾತ್ ನಿರ್ಮಾಯಸ್ಯ ಮೇ ಗುಣತೋಽಪಿ ತಮೋಯೋಗ್ಯಮೋಕ್ಷಯೋಗ್ಯಜೀವವದ್ 'ಬದ್ಧೋ ಮುಕ್ತ' ಇತ್ಯಾಖ್ಯಾ ನ, ಮಧ್ಯಮಜೀವವದ್ ವಸ್ತುತಃ ಸ್ವರೂಪಭೂತಸುಖದುಃಖಸ್ವಭಾವತಃ ಮೇ ಮಮ ಬಂಧಃ ಗುಣತೋ ಮೋಕ್ಷಶ್ಚ ನ । ಅತೋಽಹಂ ನಿತ್ಯಮುಕ್ತ ಏವ ಜೀವಾ ಏವ ಬಂಧಮೋಕ್ಷಪಾತ್ರೀಭೂತಾ ಇತ್ಯರ್ಥಃ । ಅಥವಾ ಗುಣಸ್ಯ ಮನ್ನಿಷ್ಠಜ್ಞಾನಾನಂದಾದ್ಯಲೌಕಿಕ-

ಗುಣಸಮುದಾಯಸ್ಯ ಮಾಯಾಮೂಲತ್ವಾತ್ ನ ಮೂಲಮಮೂಲಂ ಮಾಯಾಪ್ರಕೃತಿ-ರಮೂಲಮಕಾರಣಂ ಯಸ್ಯ ಸ ತಥೋಕ್ತಃ । ತಸ್ಯ ಭಾವಸತ್ತ್ವಾದಿತ್ಯರ್ಥಃ । ಪ್ರಕೃತ್ಯಜನ್ಯ-ತ್ವೇನಾಪ್ರಾಕೃತತ್ವಾದಿತಿ ಯಾವತ್ । ಕಿಂಚ ಗುಣಸ್ಯ ಕೃಷ್ಣಾವತಾರಾದಿಷು ದುರ್ಜನೈರ್ಮಯಿ ಪ್ರತೀಯಮಾನದುಃಖಮೋಹಾದಿಗುಣಸ್ಯ ಮಾಯಾಮೂಲತ್ವಾತ್ 'ನಿರನಿಷ್ಟೋ ನಿರವದ್ಯಃ' ಇತಿ ಶ್ರುತಿಬಾಧಿತತ್ವೇನ ಭ್ರಾಂತಿಮೂಲತ್ವಾತ್ । ಅಲೌಕಿಕಾರ್ಥೇ 'ಪ್ರಾಬಲ್ಯಮಾಗಮಸ್ಯೈವ ಜಾತ್ಯಾ ತೇಷು ತ್ರಿಷು ಸ್ಮೃತಮ್' ಇತಿ ವಚನೇನ ಶ್ರುತೇರೇವ ಪ್ರಬಲತ್ವಾತ್ ತದ್ಬಾಧಿತಪ್ರತೀತೇ-ರ್ಭ್ರಮತ್ವಸ್ಯೈವೌಚಿತ್ಯಾದಿತಿ ಭಾವಃ । ಮೇ ಗುಣತಃ ಜ್ಞಾನಾದಿದಿವ್ಯಗುಣತಃ ಬದ್ಧ ಇತ್ಯಾಖ್ಯಾ ನ । ಅಪ್ರಾಕೃತತ್ವೇನ ತೇಷಾಮಬಂಧಕತ್ವಾದಿತಿ ಭಾವಃ । ಗುಣತಃ ಭ್ರಾಂತಪ್ರತೀತ-ದುಃಖಾದಿಗುಣತಶ್ಚ ಮೇ ಬದ್ಧ ಇತ್ಯಾಖ್ಯಾ ನ । ತೇಷಾಂ ದುರ್ಗುಣಾನಾಂ ಶ್ರುತಿಬಾಧಿತತ್ವೇನ ಮಯ್ಯಭಾವಾದೇವೇತಿ ಭಾವಃ । ವಿದ್ಯಮಾನಗುಣಾನಾಮಬಂಧಕತ್ವಾತ್ ಬಂಧಕತ್ವೇನಾಭಿ-ಮತದುರ್ಗುಣಾನಾಂ ಮಯ್ಯಭಾವೇನ ಕಥಂಚಿದಪಿ ಮಮ ಬದ್ಧ ಇತ್ಯಾಖ್ಯಾ ನ ಯುಕ್ತೇತ್ಯುಕ್ತಂ ಭವತಿ । ಕಿಂಚ ಮೇ ಗುಣತಃ ಜ್ಞಾನಾದಿಶುಭಗುಣತಃ ಮುಕ್ತ ಇತ್ಯಾಖ್ಯಾಪಿ ನ । ತೇಷಾಂ ಗುಣಾನಾಂ ಮಯಿ ಸರ್ವದಾ ವಿದ್ಯಮಾನತ್ವೇನ ತೇಭ್ಯೋ ಮುಕ್ತತ್ವಾಸಂಭವಾತ್ । ಗುಣಾಪಾಯೇ ಐಕ್ಯಮಿತಿ ಶಂಕಾನಿರಾಸಾರ್ಥಮಿದಮ್ । ಗುಣತಃ ದುಃಖಾದಿದುರ್ಗುಣತಶ್ಚ ಮುಕ್ತ ಇತ್ಯಾಖ್ಯಾ ತದ್ಗುಣಪ್ರಧ್ವಂಸವಾನಿತ್ಯಾಖ್ಯಾ ನ । ಪ್ರಧ್ವಂಸಸ್ಯ ಪ್ರತಿಯೋಗಿಸತ್ತಾ-ಪೂರ್ವಕತ್ವನಿಯಮಾತ್ ಪ್ರತಿಯೋಗಿನಶ್ಚ ಮಯಿ ಅಭಾವಾತ್ । ಅಥವಾ ಗುಣತಃ ದುಃಖಾದಿಗುಣತೋಽಪಿ ಮುಕ್ತ ಇತ್ಯಾಖ್ಯಾ ನ । ಸರ್ವವ್ಯಾಪಿನೋ ಮಮ ತದಂತರಪಿ ವಿದ್ಯ-ಮಾನತ್ವೇನ ಸರ್ವಥಾ ತನ್ಮೋಚನವಾವನಿತ್ಯಾಖ್ಯಾ ನೇತ್ಯರ್ಥಃ । ದುಃಖಾದಿಗುಣಾನಾಂ ಮಯ್ಯಭಾವೇಽಪಿ ದುಃಖಾದಿಗುಣೇಷ್ವಹಂ ತಿಷ್ಠಾಮೀತಿ ಯಾವತ್ । ಏವಂಚ ವಸ್ತುತಃ ಮಹದಹಂಕಾರಾದಿಚತುರ್ವಿಂಶತಿತತ್ತ್ವಾಖ್ಯವಸ್ತುತಃ ತದುಪಾದಾನಕದೇಹಾದಿವಸ್ತುತಶ್ಚ ಮೇ ಬಂಧನಂ ಚತುರ್ವಿಂಶತಿತತ್ತ್ವಮಧ್ಯೇ ನಿವಿಷ್ಟಸ್ಯ ತದುಪಾದಾನಕದೇಹಾಂತರೇಷು ನಿವಿಷ್ಟಸ್ಯ ಚ ತನ್ನಿಮಿತ್ತಕಜನನಮರಣದುಃಖಾದಿರೂಪಸಂಸಾರೋ ಮಮ ನೇತ್ಯರ್ಥಃ । ಅತ್ರಾಪಿ ಗುಣಸ್ಯ ಮಾಯಾಮೂಲತ್ವಾದಿತ್ಯೇವ ಹೇತುಃ । ಮಾಯಾಪದೇನ ಪ್ರಕೃತಿಕಾರ್ಯತ್ವಾತ್ ಮಹದಾದಿ-ಚತುರ್ವಿಂಶತಿತತ್ತ್ವಾನಿ ದೇಹಾಶ್ಚ ಕಥ್ಯಂತೇ । ತತ್ರಾಪಿ ಗುಣಸ್ಯ ಮಯಿ ವಿದ್ಯಮಾನ-ಜ್ಞಾನಾನಂದಾದಿಗುಣಸ್ಯ ತದಮೂಲತ್ವಾತ್ ತದನುಪಾದಾನಕತ್ವಾತ್ । ಮಯಿ ವಿದ್ಯಮಾನ-ಜ್ಞಾನಾನಂದಾದಿಗುಣಾನಾಂ ತದಜನ್ಯತ್ವೇನ ತನ್ನಿಮಿತ್ತಕಬಂಧನವತ್ತ್ವಂ ಶಂಕಾರ್ಹಮಪಿ ನ । ತದುಪಾದಾನಕದುಃಖಾದೀನಾಂ ಚ ತೇಷುತೇಷು ಜೀವೇಷ್ವೇವ ವಿದ್ಯಮಾನತ್ವೇನ ಮಯಿ ತಸ್ಯ ದುಃಖಾದಿಗುಣಸ್ಯ ಮಾಯಾಮೂಲತ್ವಾದ್ 'ಅನಶ್ನನ್' ಇತಿ ಶ್ರುತಿಮಜಾನತೋ ಮಾಯಾ-ವಾದಿನೋ ಭ್ರಾಂತ್ಯೇಕಮೂಲತ್ವಾತ್ ಮಮ ತದುಭಯವಸ್ತುಕೃತಬಂಧನಂ ಕಥಂ ಸ್ಯಾತ್? ಕಿಂತು ಗುಣಸ್ಯಾಪ್ರಧಾನಸ್ಯ ಜೀವಸ್ಯೈವ ಮಾಯಾ- ಮೂಲತ್ವಾತ್ ಪ್ರಕೃತಿಮೂಲತ್ವಾತ್

ಪ್ರಾಕೃತದೇಹಕತ್ವಾದಿತಿ ಯಾವತ್ । ಬಂಧನಂ ಯುಕ್ತಮಿತಿ ಭಾವಃ । ಕಿಂಚ ವಸ್ತುತಃ ಉಕ್ತದ್ವಿವಿಧವಸ್ತುತಃ ಮೋಕ್ಷೋಽಪಿ ಮೋಚನಂ ತತ್ಪರಿತ್ಯಾಗ ಇತಿ ಯಾವತ್ । ಮೇ ನ । ತನ್ನಿಮಿತ್ತಕದುಃಖಾದೇರೌಪನಿಷದೇ ಮಯಿ ಪ್ರಾಪ್ತುಮಶಕ್ಯತ್ವೇನ ತದ್ಭೀತೇರಭಾವಾತ್ । ಶ್ರೌತ-ಸರ್ವವ್ಯಾಪಿತ್ವಲಕ್ಷಣಾಯ ತನ್ನಿಯಾಮಕತಯಾ ತೇಷು ಪ್ರವಿಶ್ಯೈವ ತಿಷ್ಠಾಮೀತಿ ಭಾವಃ। ಏವಂಚ ಯೇನ ಕೇನಾಪಿ ಪ್ರಕಾರೇಣ ಮಮ ಬಂಧಬಂಧಧ್ವಂಸಯೋ- ರುಭಯೋರಪ್ಯಭಾವೇನ ನಾನಾದೇಹೇಷ್ವಪಿ ವರ್ತಮಾನೋಽಹಂ ನಿತ್ಯಮುಕ್ತ ಏವ। ಜೀವಸ್ತು ದೇಹಾದಿನಿಮಿತ್ತಕದುಃಖಂ ವಾ ಅಸ್ವಾತಂತ್ರ್ಯಂ ವಾ ಅನುಭವನ್ನಿತ್ಯದ್ಧ ಏವ। ತಸ್ಮಾತ್ 'ನಿತ್ಯಬದ್ಧೋ ನಿತ್ಯಮುಕ್ತ ಏಕ ಏವೇತಿ ಮೇ ಮತಿಃ' ಇತ್ಯುದ್ಧವಕೃತಪೂರ್ವಪಕ್ಷೋ ನ ಯುಕ್ತ ಇತಿ ಪೂರ್ವಾಧ್ಯಾಯೇನ ಸುಸಂಗತೋಽಯಮರ್ಥಃ। ಅಥವಾ **ಮೇ ಗುಣತಃ** ಮಮ ಜ್ಞಾನಾನಂದಾದಿಗುಣತಃ 'ಬದ್ಧೋ ಮುಕ್ತ' ಇತ್ಯಾಖ್ಯಾ ನ । ಮೇ ವಸ್ತುತಃ ಮಮ ಚತುರ್ಭುಜಾದಿದೇಹವೈಕುಂಠಾದಿಗೇಹ-ಲಕ್ಷ್ಮ್ಯಾದಿವನಿತಾಖ್ಯವಸ್ತುತಶ್ಚ ಬಂಧನಂ ಮೋಕ್ಷಶ್ಚ ನ। ದೇಹಗೇಹಾದಿವಸ್ತು ವಾ ತನ್ನಿಮಿತ್ತಸುಖಾದ್ಯ-ನುಭವೋ ವಾ ಸಂಸಾರ ಇತಿ ಲೋಕೇ ದೃಷ್ಟಮ್। ಮಯಿ ತದುಭಯಮಪಿ ನ ಸಂಸಾರಹೇತುರಿತಿ ಭಾವಃ। ತತ್ರ ಹೇತುಃ- **ಗುಣಸ್ಯ ಮಾಯಾಮೂಲತ್ವಾದಿತಿ** । **ಗುಣಸ್ಯ** ಮನ್ನಿಷ್ಠಜ್ಞಾನಾನಂದಾದಿ-ಗುಣಸ್ಯ ಜ್ಞಾನಾನಂದಾದಿಗುಣಾತ್ಮಕಸ್ಯ, ದೇಹವೈಕುಂಠಲಕ್ಷ್ಮ್ಯಾಖ್ಯವಸ್ತುನಶ್ಚ । ಮಾಯಾ-ಮೂಲತ್ವಾತ್ ಮಾಯಾಮೂಲತ್ವಾಭಾವಾದಿತ್ಯರ್ಥಃ । ಪ್ರಕೃತಿಮೂಲದೇಹಗೇಹಾದಿಕಂ ತಜ್ಜನ್ಯಸುಖಾದಿಕಂ ಚ ಲೋಕೇ ಸಂಸಾರ ಇತಿ ಪ್ರಸಿದ್ಧಮ್ । ಮಮ ಗುಣಾ ವಸ್ತೂನಿ ಚ ಶ್ರುತಿಸ್ಮೃತಿಷ್ವಪ್ರಾಕೃತತಯಾ ಪ್ರಸಿದ್ಧಾಃ । ಅತಃ ಕಥಂ ತೈಸ್ಸಂಸಾರ ಇತಿ ಭಾವಃ। ಯದ್ವಾ ಗುಣತಃ ಸಂಸಾರತ್ವೇನಾಭಿಮತಜೀವದೇಹ- ಜನ್ಯಾನಿತ್ಯಜ್ಞಾನಸುಖಾದಿಗುಣತೋ ಮೇ 'ಬದ್ಧೋ ಮುಕ್ತ' ಇತ್ಯಾಖ್ಯಾ ನ । ತದ್ಧೇತುಭೂತಪ್ರಾಕೃತದೇಹಗೇಹಾದಿವಸ್ತುತಶ್ಚ ಮೇ ಬಂಧನಂ ಮೋಕ್ಷಶ್ಚ ನ । ಅತ್ರಾಪಿ ಹೇತುಃ-**ಗುಣಸ್ಯ ಮಾಯಾಮೂಲತ್ವಾದಿತಿ** ॥ ಗುಣಸ್ಯಾನಿತ್ಯಜ್ಞಾನಾನಂದಾದಿಗುಣಸ್ಯ, ಗುಣಸ್ಯ ತ್ರಿಗುಣಾತ್ಮಕತಯಾ ಗುಣಪದವಾಚ್ಯಸ್ಯ ದೇಹಗೇಹಾದೇಶ್ಚ ಮಾಯಾಮೂಲತ್ವಾತ್ ಪ್ರಕೃತಿಮೂಲತ್ವಾತ್ । ಪ್ರಕೃತೇಶ್ಚ 'ಮಾಯಾಂ ವ್ಯುದಸ್ಯ ಚಿಚ್ಛಕ್ತ್ಯಾ ಪುರುಷಃ ಪ್ರಕೃತೇಃ ಪರಃ' ಇತಿ ಭಾಗವತವಾಕ್ಯಾನ್ಮತ್ತೋಽತಿದೂರತ್ವಾತ್ ತದುಪಾದಾನಕಪ್ರಾಕೃತಗುಣದೇಹಾದಿನಿಮಿತ್ತ-ಬಂಧಸ್ತತೋ ಮೋಕ್ಷಶ್ಚ ಮಮ ಕಥಂ ಸ್ಯಾತ್? ಇತಿ ಭಾವಃ। ತರ್ಹಿ ಕಸ್ಯ ಬಂಧಮೋಕ್ಷಾವಿತ್ಯ-ತ್ರೇದಮೇವೋತ್ತರಮ್। ಗುಣಸ್ಯ ಜ್ಞಾನಾನಂದಾದಿಗುಣರೂಪಸ್ಯ ಮೇ ಭಕ್ತಸ್ಯ ಯೋಗ್ಯಜೀವಸ್ಯ ಮಾಯಾಮೂಲತ್ವಾತ್ ಮಾಯಾ ಪ್ರಕೃತಿರ್ಮೂಲೇ ಆದೌ ಯಸ್ಯ ಸಃ। ಆದಾವಿತ್ಯುಕ್ತ್ಯಾ ಅಂತೇ ತದ್ಧ್ವಂಸೋಽಪ್ಯಸ್ತೀತಿ ಧ್ವನಿತಮ್ । ತಸ್ಯ ಭಾವಸ್ತತ್ವಂ ತಸ್ಮಾದಿತ್ಯರ್ಥಃ। **ಗುಣತಃ** ಬಂಧಕಗುಣತಃ 'ಬದ್ಧೋ ಮುಕ್ತಃ' ಇತ್ಯಾಖ್ಯಾ । ವಸ್ತುತಃ ಬಂಧಕವಸ್ತುತಃ ಬಂಧನಂ ಮೋಕ್ಷಶ್ಚ। ಪ್ರಾಗ್ಬಂಧನಂ, ಪಶ್ಚಾತ್ ತದ್ಧ್ವಂಸಶ್ಚ ಭವತೀತಿ ನಞಂ ವಿಹಾಯ ಯೋಜನೀಯಮ್ । ಅತಃ ಕಾದಾಚಿತ್ಕ-ಮುಕ್ತತ್ವಾತ್ ಮುಕ್ತಾವಪಿ ಮದಧೀನತ್ವಾಖ್ಯಸುಖರೂಪಬಂಧಬದ್ಧತಯಾ ನಿತ್ಯಬದ್ಧಯೋಗ್ಯ-ಜೀವಸ್ಯಾಪಿ ಯದಾ ಮೇ ನೈಕ್ಯಮ್, ತದಾ ಕಿಮು ವಾಚ್ಯಂ ಸದಾನಿಷ್ಟರೂಪದುಃಖಬದ್ಧತಯಾ

ಮುಕ್ತ್ಯನರ್ಹಯೋರ್ಮಧ್ಯಮಾಧಮಜೀವಯೋರೈಕ್ಯಂ ನೇತಿ ಪೂರ್ವಪಕ್ಷೋತ್ತರತಯಾ ಶ್ಲೋಕಸ್ಯಾರ್ಥಃ ॥ ೨೯೨ ॥

**ವಿವರಣೆ–** ದುಃಖ ಮತ್ತು ದುಃಖಕಾರಣಗಳೇ ಬಂಧ. ಇವು ಅಸುರರಿಗೆ ಇವೆ. ಇವು ಇವೆ ಎಂಬ ಜ್ಞಾನವೂ ಅವರಿಗೆ ಇದೆ. ಅವರಲ್ಲಿರುವ ರಜಸ್ ಮತ್ತು ತಮೋಗುಣಗಳು ಅವರಿಗೆ ಇರುವ ಬಂಧದ ಯಥಾರ್ಥಜ್ಞಾನಕ್ಕೆ ಪ್ರತಿಬಂಧಕವಲ್ಲ; ಪರಮಾತ್ಮನ ಯಥಾರ್ಥಜ್ಞಾನಕ್ಕೆ ಪ್ರತಿಬಂಧ. ಆದ್ದರಿಂದ ಅವರಿಗೆ ಪರಮಾತ್ಮನ ಬಗ್ಗೆ ಪ್ರಮಾ= ಯಥಾರ್ಥ ಜ್ಞಾನವು ಇಲ್ಲ.

ಆದ್ದರಿಂದ ಭಾಗವತ 11.11.4 ರಲ್ಲಿರುವ 'ಅವಿದ್ಯಯಾ ಬಂಧಃ' ಎಂಬ ಉಕ್ತಿಗೆ ಪರಮಾತ್ಮನ ಬಗ್ಗೆ ವಿದ್ಯೆಯ ಅಭಾವವು ಬಂಧಕ್ಕೆ ಕಾರಣ ಎಂದು ಅರ್ಥ. ಅವಿದ್ಯಾಕಲ್ಪಿತ (ಮಿಥ್ಯಾ) ಎಂದು ಅರ್ಥವಲ್ಲ.

'ಸಾತ್ವಿಕಾಶ್ಚ ಸುರರ್ಷ್ಯಾದ್ಯಾಸ್ತದ್ಬಂಧೋ ನ ಭ್ರಮೋದ್ಭವಃ' (ಶ್ಲೋಕ 291) - ಈ ಶ್ಲೋಕದಲ್ಲಿ ಸುರ-ಋಷಿ ಮೊದಲಾದವರು ಸತ್ವಗುಣವನ್ನು ಅಧಿಕವಾಗಿ ಹೊಂದಿದವರು ಎಂದು ಹೇಳಲಾಗಿದೆ. ಸತ್ವವು ಯಥಾರ್ಥಜ್ಞಾನವನ್ನು ಹುಟ್ಟಿಸುವ ಗುಣ; ಆದ್ದರಿಂದ ಅವರ ಜ್ಞಾನವು ಪ್ರಮಾ; ಪ್ರಮಾವಿಷಯಗಳು ಸತ್ಯ ಎಂದು ಸೂಚಿತವಾಗಿದೆ.

ಪ್ರಶ್ನೆ : ಈ ಸೂಚನೆಯಿಂದ ಜ್ಞಾನದ ಪ್ರಾಮಾಣ್ಯವು ಸತ್ವಗುಣಜನ್ಯ ಎಂದು ಗ್ರಂಥಕಾರರ ಅಭಿಪ್ರಾಯ ಎಂದು ತಿಳಿಯುತ್ತದೆ; ಈ ಅಭಿಪ್ರಾಯವು 'ಪ್ರಾಮಾಣ್ಯಂ ಸ್ವತಃ' ಎಂದು ಹೇಳುವ ಮಾಧ್ವದರ್ಶನಕ್ಕೆ ಸಮ್ಮತವಲ್ಲ?

ಉತ್ತರ : ಸತ್ವಗುಣವು ಅಧಿಕವಾದಾಗ ಅದರ ಪ್ರಭಾವದಿಂದ ರಜಸ್-ತಮಸ್‌ಗಳು ಸೋಲುತ್ತವೆ. ಆಗ ಜ್ಞಾನವು ಹುಟ್ಟಲು ಅವಶ್ಯಕವಾದ ಸಾಮಗ್ರಿಯಿಂದಲೇ ಜ್ಞಾನದಲ್ಲಿ ಪ್ರಾಮಾಣ್ಯವು ಹುಟ್ಟುತ್ತದೆ. ಸತ್ವಗುಣದಿಂದ ಅಲ್ಲ. ಆದ್ದರಿಂದ ಸಿದ್ಧಾಂತವಿರೋಧವಿಲ್ಲ.

'ಸಾತ್ವಿಕಾಃ ಸುರರ್ಷ್ಯಾದ್ಯಾಃ' - ಈ ಪದಗಳಿಗೆ ಸುರ-ಋಷಿ ಮೊದಲಾದವರಲ್ಲಿ ಸತ್ವವು ಅಧಿಕವಾಗಿದೆ ಎಂದು ಅರ್ಥ. ಇದರಿಂದ ಅವರಲ್ಲಿ ರಜಸ್-ತಮಸ್‌ಗಳು ಸೋತಿವೆ ಎಂದು ಸೂಚನೆಯಿದೆ.

ಸಾಕ್ಷಿಯಿಂದ ಸುಖದುಃಖಗಳ ಯಥಾರ್ಥಜ್ಞಾನವೇ ಯಾವಾಗಲೂ ಆಗುತ್ತದೆ. ಸುಖ ಅಥವಾ ದುಃಖದ ಬಗ್ಗೆ ಎಂದು ಯಾರಿಗೂ ಭ್ರಾಂತಿ ಉಂಟಾದ ನಿದರ್ಶನವಿಲ್ಲ. ದುಃಖವೇ ಬಂಧ. ಯಥಾರ್ಥಜ್ಞಾನಕ್ಕೆ ವಿಷಯವಾದ ಬಂಧವು ಹೇಗೆ ತಾನೇ ಮಿಥ್ಯಾ ಆದೀತು.?

'ಬದ್ಧೋ ಮುಕ್ತ ಇತಿ ವ್ಯಾಖ್ಯಾ ಗುಣತೋ ಮೇ ನ ವಸ್ತುತಃ.
ಗುಣಸ್ಯ ಮಾಯಾಮೂಲತ್ವಾತ್ ನ ಮೇ ಮೋಕ್ಷೋ ನ ಬಂಧನಮ್ ॥

(ಭಾಗವತ.೧೧.೧೧.೧)

ಈ ಭಾತವತ ಪದ್ಯಕ್ಕೆ ಯುಕ್ತಿಮಲ್ಲಿಕಾಕಾರರು ನಾನಾ ಅರ್ಥಗಳನ್ನು ಹೇಳಿದ್ದಾರೆ. (262–292) ಅವರ ವ್ಯಾಖ್ಯಾನದಿಂದ ಸ್ಫೂರ್ತಿಯನ್ನು ಪಡೆದ ಶ್ರೀಸುರೋತ್ತಮತೀರ್ಥರು ಮತ್ತಷ್ಟು ಅರ್ಥಗಳನ್ನು ಹೇಳಿದ್ದಾರೆ.

1. ಸತ್ವ-ರಜಸ್-ತಮಸ್ ಈ ಗುಣಗಳ ಮೂಲ ಮಾಯೆ=ಪ್ರಕೃತಿ. ನನಗೆ ಪ್ರಕೃತಿ ಸಂಬಧವಿಲ್ಲ. ಆದ್ದರಿಂದ ನನಗೆ ಬದ್ಧ ಮತ್ತು ಮುಕ್ತ ಎಂಬ ಹೆಸರು ಇಲ್ಲ. ಅಥವಾ ನನ್ನ ಬಗ್ಗೆ ಬದ್ಧ-ಮುಕ್ತ ಎಂಬ ಕಥನವು ಶಾಸ್ತ್ರಗಳಲ್ಲಿ ಇಲ್ಲ. ಜೀವಾತ್ಮರು ಮಾತ್ರ ಬದ್ಧರು. ಅವರೇ ಮುಕ್ತರೂ ಆಗುತ್ತಾರೆ. ಆದ್ದರಿಂದ ಅವರ ಬಗ್ಗೆ ಮಾತ್ರ ಬದ್ಧ-ಮುಕ್ತ ಎಂಬ ಕಥನವು ಯುಕ್ತ.

2. ಮೇ ಗುಣಸ್ಯ = ನನ್ನ ಜ್ಞಾನ, ಆನಂದ ಮೊದಲಾದ ಅಲೌಕಿಕಗುಣಗಳಿಗೆ, ಮಾಯಾ(ಅ)ಮೂಲತ್ವಾತ್= ಪ್ರಕೃತಿಯು ಕಾರಣವಲ್ಲವಾದ್ದರಿಂದ. ನನ್ನ ಗುಣಗಳು ಪ್ರಕೃತಿಜನ್ಯವಲ್ಲವಾದ್ದರಿಂದ ನನಗೆ ಬಂಧವೂ ಇಲ್ಲ, ಮುಕ್ತಿಯೂ ಇಲ್ಲ.

3. ಮಾಯಾ=ಭ್ರಾಂತಿ.

ಗುಣಸ್ಯ=(ನನ್ನ ಕೃಷ್ಣ ಮೊದಲಾದ ಅವತಾರಗಳಲ್ಲಿ ದುರ್ಜನರಿಗೆ ಕಾಣುವ) ದುಃಖಮೊದಲಾದ ಗುಣಗಳಿಗೆ.

ಮಾಯಾಮೂಲತ್ವಾತ್= ಭ್ರಾಂತಿಯೇ ಮೂಲಕಾರಣವಾದ್ದರಿಂದ.

ನನ್ನಲ್ಲಿ ದೋಷಗಳಿವೆ ಎಂಬ ದುರ್ಜನರ ಜ್ಞಾನವು ಭ್ರಾಂತಿ, ನಾನು ನಿರ್ದೋಷ ಎಂದು ಶ್ರುತಿಗಳು ಹೇಳುತ್ತಿರುವುದರಿಂದ.

4. ಮೇ ಗುಣತಃ= ನನ್ನ ದಿವ್ಯಗುಣಗಳಿಂದ, ಮೇ=ನನಗೆ, ಬದ್ಧ ಇತಿ ಆಖ್ಯಾ ನ= ಬದ್ಧ ಎಂಬ ಹೆಸರಿಲ್ಲ, ಇವು ಬಂಧಕವಲ್ಲವಾದ್ದರಿಂದ.

ಭ್ರಾಂತರಿಗೆ ತೋರುವ ದುಃಖಾದಿಗುಣಗಳು ನನ್ನಲ್ಲಿ ಇಲ್ಲವಾದ್ದರಿಂದ ನನಗೆ ಬದ್ಧ ಎಂಬ ಕಥನವಿಲ್ಲ.

5. ನನ್ನಲ್ಲಿರುವ ಜ್ಞಾನ-ಆನಂದ ಮೊದಲಾದ ಶುಭಗುಣಗಳು ನಿತ್ಯ. ನನಗೆ ಅವುಗಳಿಂದ ನಿಯೋಗವು ಆಗುವುದೇ ಇಲ್ಲ. ಆದ್ದರಿಂದ ನನ್ನ ಬಗ್ಗೆ ಮುಕ್ತ ಎಂಬ ಕಥನವಿಲ್ಲ.

'ಮೇ ಗುಣತಃ ಮುಕ್ತ ಇತಿ ಆಖ್ಯಾ ನ'- ಈ ಕೃಷ್ಣನ ವಚನದಿಂದ ಬ್ರಹ್ಮನು ನಿರ್ಗುಣ ಎಂಬ ವಿಚಾರವು ಶ್ರುತಿವಿರುದ್ಧ ಎಂದು ತಿಳಿಯುತ್ತದೆ.

6. ಗುಣತಃ= ದುಃಖಮೊದಲಾದ ದುರ್ಗುಣಗಳಿಂದ.

ನನ್ನಲ್ಲಿ ದುಃಖಮೊದಲಾದ ದುರ್ಗುಣಗಳು ಇಲ್ಲ. ಆದ್ದರಿಂದ ಅವುಗಳಿಂದ ಬಿಡುಗಡೆಯಾಗುವ ಪ್ರಸಕ್ತಿಯೇ ಇಲ್ಲ. ಪ್ರಸಕ್ತಿಯು ಇದ್ದಿದ್ದರೆ, ಬಿಡುಗಡೆಯು ಆದಾಗ ದುರ್ಗುಣಗಳಿಂದ ಮುಕ್ತ ಎಂಬ ಅರ್ಥದಲ್ಲಿ 'ಗುಣತಃ ಮುಕ್ತ' ಎಂಬ ಕಥನವು ಯುಕ್ತವಾಗುತ್ತಿತ್ತು. ಈ ಪ್ರಸಕ್ತಿಯೇ ಇಲ್ಲವಾದ್ದರಿಂದ 'ಮೇ ಗುಣತಃ ಮುಕ್ತ ಇತಿ ಆಖ್ಯಾ ನ'

7. ನಾನು ಸರ್ವವ್ಯಾಪಿ. ಆದ್ದರಿಂದ ದುಃಖ ಮೊದಲಾದ ಗುಣಗಳಲ್ಲೂ ನಾನು ಇದ್ದೇನೆ. ನನಗೆ ಅವುಗಳಿಂದ ವಿಯೋಗವು ಆಗುವುದೇ ಇಲ್ಲ.

   'ದುಃಖಾದಿಗುಣಾನಾಂ ಮಯಿ ಅಭಾವೇऽಪಿ ದುಃಖಾದಿಗುಣೇಷು ಅಹಂ ತಿಷ್ಠಾಮಿ ಇತಿ ಯಾವತ್' ಆದ್ದರಿಂದ 'ಮೇ ಗುಣತೋ ಮುಕ್ತ ಇತಿ ಆಖ್ಯಾ ನ.'

8. ವಸ್ತುತಃ ಮಹತ್ತತ್ತ್ವ, ಅಹಂಕಾರತತ್ತ್ವ ಮೊದಲಾದ ಇಪ್ಪತ್ತನಾಲ್ಕು ತತ್ತ್ವಗಳಿಂದ ಮತ್ತು ಇವುಗಳಿಂದ ಉತ್ಪನ್ನವಾದ ದೇಹ, ಇಂದ್ರಿಯ ಮೊದಲಾದವುಗಳಿಂದ, ಮೇ ಬಂಧನಂ ನಃ ನನಗೆ ಬಂಧನವಿಲ್ಲ.

   ನಾನು ಸರ್ವವ್ಯಾಪಿಯಾದ್ದರಿಂದ ಇಪ್ಪತ್ತನಾಲ್ಕು ತತ್ತ್ವಗಳಲ್ಲಿ ಮತ್ತು ದೇಹ, ಇಂದ್ರಿಯ ಮೊದಲಾದವುಗಳಲ್ಲೂ ಇದ್ದೇನೆ. ಆದರೂ ಅವುಗಳಿಂದ ಯಾವ ವಿಕಾರವೂ ಇಲ್ಲ ಎಂದು ಅಭಿಪ್ರಾಯ. ನನ್ನ ಗುಣಗಳು ಅಪ್ರಾಕೃತವಾದ್ದರಿಂದ ನನಗೆ ಪ್ರಾಕೃತಪದಾರ್ಥಗಳಿಂದ ಬಂಧನವಿಲ್ಲ. ಆದ್ದರಿಂದಲೇ ಅವುಗಳಿಂದ ಮುಕ್ತಿಯೂ ಇಲ್ಲ.

9. 'ಗುಣಸ್ಯ ಮಾಯಾಮೂಲತ್ವಾತ್'. ಗುಣಸ್ಯ= ಅಪ್ರಧಾನನಾದ ಜೀವಾತ್ಮನಿಗೆ ಮಾಯಾಮೂಲತ್ವಾತ್= ಪ್ರಾಕೃತದೇಹವಿರುವುದರಿಂದ ಬಂಧನಂ=ಬಂಧನವು (ಯುಕ್ತ).

10. ಮೇ ಗುಣತಃ ನನ್ನ ಜ್ಞಾನ, ಆನಂದ ಮೊದಲಾದ ಗುಣಗಳಿಂದ, ಬದ್ಧೋ ಮುಕ್ತ ಇತ್ಯಾಖ್ಯಾ ನಃ (ನನಗೆ) ಬದ್ಧ ಮುಕ್ತ ಎಂದು ಹೆಸರಿಲ್ಲ.

    ಮೇ ವಸ್ತುತಃ ನನ್ನ ಚತುರ್ಭುಜ ಇತ್ಯಾದಿಗಳುಳ್ಳ ದೇಹ, ವೈಕುಂಠಮೊದಲಾದ ಗೇಹ, ಲಕ್ಷ್ಮೀ, ಚತುರ್ಮುಖಬ್ರಹ್ಮ ಮೊದಲಾದ ಪರಿವಾರ- ಇವುಗಳಿಂದ, ನ ಮೇ ಮೋಕ್ಷೋ ನ ಬಂಧನಂ: ನನಗೆ ಮೋಕ್ಷವೂ ಇಲ್ಲ ಬಂಧನವೂ ಇಲ್ಲ. ನನ್ನ ಗುಣ ಮತ್ತು ವಸ್ತುಗಳು ಮಾಯಾಜನ್ಯವಲ್ಲವಾದ್ದರಿಂದ.

    ೧೧. ತ್ವಮಾದ್ಯಃ ಪುರುಷಃ ಸಾಕ್ಷಾತ್ ಈಶ್ವರಃ ಪ್ರಕೃತೇಃ ಪರಃ ।
    ಮಾಯಾಂ ವ್ಯುದಸ್ಯ ಚಿಚ್ಛಕ್ತ್ಯಾ ಕೈವಲ್ಯೇ ಸ್ಥಿತ ಆತ್ಮನಿ ॥

    ಈ ಭಾಗವತ ಶ್ಲೋಕವು (1.7.23) ಪುರುಷನಿಗೆ= ಪರಮಾತ್ಮನಿಗೆ ಪ್ರಕೃತಿಸಂಬಂಧವಿಲ್ಲ ಎಂದು ಹೇಳಿದೆ. ಪ್ರಕೃತಿಸಂಬಂಧವೇ ಬಂಧನದ (ಸಂಸಾರದ)

ಮೂಲಕಾರಣ. ಇದು ಇಲ್ಲದ ನನಗೆ ಬಂಧನವೂ ಇಲ್ಲ, ಮೋಕ್ಷವೂ ಇಲ್ಲ. ಆದ್ದರಿಂದಲೇ ನನ್ನ ಬಗ್ಗೆ ಬದ್ಧ ಮತ್ತು ಮುಕ್ತ ಎಂಬ ಮಾತುಗಳೂ ಇಲ್ಲ.

12. ಭಾಗವತ ಶ್ಲೋಕದಲ್ಲಿರುವ 'ಮೇ'- ಈ ಪದಕ್ಕೆ 'ಭಕ್ತಸ್ಯ'- ಈ ಪದವನ್ನು ಸೇರಿಸಿ 'ಮೇ ಭಕ್ತಸ್ಯ' ಎಂದು ಓದಬೇಕು.

ಗುಣಸ್ಯ= ಜ್ಞಾನಾನಂದಾದಿ ಗುಣರೂಪನಾದ,

ಮಾಯಾಮೂಲತ್ವಾತ್= ಪ್ರಕೃತಿಬಂಧವುಳ್ಳವನಾದ್ದರಿಂದ.

ಜ್ಞಾನ-ಆನಂದ ಮೊದಲಾದ ಗುಣಸ್ವರೂಪನಾದ ನನ್ನ ಭಕ್ತನಿಗೆ ಪ್ರಕೃತಿಸಂಬಂಧ-ವಿರುವುದರಿಂದ ಬಂಧನವೂ ಇದೆ, ಮೋಕ್ಷವೂ ಆಗುತ್ತದೆ. ಪ್ರಾಕೃತಗುಣಗಳ ಮತ್ತು ಪ್ರಾಕೃತವಸ್ತುಗಳ ಸಂಬಂಧದಿಂದ ಅವನ ಬಗ್ಗೆ ಬದ್ಧ ಎಂಬ ಮಾತು ಇದೆ. ಇವುಗಳನ್ನು ಪರಿಹರಿಸಿಕೊಂಡವನ ಬಗ್ಗೆ ಮುಕ್ತ ಎಂಬ ಮಾತೂ ಇದೆ.

13. ಮುಕ್ತಜೀವನು ನನಗೆ ಅಧೀನನೇ ಆಗಿರುತ್ತಾನೆ. ಈ ಕಾರಣದಿಂದ ಅವನು ಮುಕ್ತಿಯಲ್ಲೂ ಬದ್ಧನೇ. ಆದ್ದರಿಂದ ಅವನು ನಿತ್ಯಬದ್ಧ.

ಕಾಲತ್ರಯದಲ್ಲೂ ಬಂಧನ-ಮೋಕ್ಷಗಳಿಲ್ಲದ ನನಗೆ (ಕೃಷ್ಣನಿಗೆ), ಸಂಸಾರದಿಂದ ಮುಕ್ತನಾಗಿದ್ದರೂ ಬದ್ಧನೇ ಆಗಿರುವ ಜೀವನೊಂದಿಗೆ ಐಕ್ಯವೇ? ಸರ್ವಥಾ ಇಲ್ಲ. ಇಂತಹ ಕೃಷ್ಣನಿಗೆ ಪ್ರಕೃತಿಬದ್ಧರಾದ ಜೀವರೊಂದಿಗೆ ಐಕ್ಯವೇ? ಸರ್ವಥಾ ಇಲ್ಲ.

**ಅಜೋಽನುಬದ್ಧಃ ಸಗುಣೈರ್ನ ವೇದ ತ್ವಾಂ ಗುಣಾತ್ ಪರಮ್ ॥ ೨೯೩ ॥**

**ಸತ್ವಂ ರಜಸ್ತಮ ಇತಿ ಭವಂತಿ ಪ್ರಕೃತೇರ್ಗುಣಾಃ ।**
**ಏಷು ಹಿ ಪ್ರಾಕೃತಾಃ ಪ್ರೋಕ್ತಾ (ಪ್ರೋತಾ) ಆಬ್ರಹ್ಮಸ್ಥಾವರಾದಯಃ ॥ ೨೯೪ ॥**

**ಭಗವನ್ ಜೀವಲೋಕೋಽಯಂ ಮೋಹಿತಸ್ತವ ಮಾಯಯಾ ।**
**ಅಹಂ ಮಮೇತ್ಯಸದ್ಗ್ರಾಹೋ ಭ್ರಾಮ್ಯತೇ ಕರ್ಮವರ್ತ್ಮಸು ॥ ೨೯೫ ॥**

**ಇತ್ಯಕ್ರೂರೇಣ ನಿರ್ಣೀತಃ ಕೃಷ್ಣೋ ಬಂಧೋಜ್ಝಿತಃ ಪ್ರಭುಃ ।**
**ಜೀವಾನ್ ಸರ್ವಾನ್ ಗುಣೈರ್ಬದ್ಧಾನ್ ಮಾಯಾಬದ್ಧಾಂಶ್ಚ ಶಂಸತಾ ॥ ೨೯೬ ॥**

**ಅರ್ಥ–** ಗುಣೈಃ = ಪ್ರಾಕೃತಗುಣಗಳಿಂದ, ಅನುಬದ್ಧಃ = ಬದ್ಧನಾದ, ಸಃ ಅಜಃ = ಚತುರ್ಮುಖನು, ಗುಣಾತ್ ಪರಂ = ಗುಣಾತೀತನಾದ, ತ್ವಾಂ = ನಿನ್ನನ್ನು ನ ವೇದ = ತಿಳಿದಿಲ್ಲ. ಸತ್ವಂ ರಜಃ ತಮಃ ಇತಿ= ಸತ್ವ ರಜಸ್ಸು ತಮಸ್ಸು ಎಂದು, ಪ್ರಕೃತೇಃ ಗುಣಾಃ =

ಪ್ರಕೃತಿಯ ಗುಣಗಳು, ಭವಂತಿ = ಇವೆ. ಏಷು = ಈ ಗುಣಗಳಲ್ಲಿ, ಆಬ್ರಹ್ಮಸ್ಥಾವರಾದಯಃ = ಚತುರ್ಮುಖಬ್ರಹ್ಮನವರೆಗೆ ಸ್ಥಾವರ ಜಂಗಮಗಳೆಲ್ಲವೂ, ಪ್ರೋತಾಃ= ಹೆಣೆಯಲ್ಪಟ್ಟಿದ್ದಾರೆ, (ಆದ್ದರಿಂದ), ಪ್ರಾಕೃತಾಃ= ಪ್ರಾಕೃತರು, ಹಿ= ಇದು ಪ್ರಮಾಣ ಪ್ರಸಿದ್ಧ. ಭಗವನ್ = ಷಡ್ಗುಣೈಶ್ವರ್ಯಸಂಪನ್ನನೇ, ಅಯಂ ಜೀವಲೋಕಃ = ಈ ಜೀವರಾಶಿಯು, ತವ ಮಾಯಯಾ = ನಿನ್ನ ಇಚ್ಛಾಶಕ್ತಿಯಿಂದ, ಮೋಹಿತಃ = ಮೋಹಗೊಂಡು, ಅಹಂ ಮಮ ಇತಿ = ನಾನು, ನನ್ನದು ಎಂಬ, ಅಸದ್ಗ್ರಾಹಃ = ಭ್ರಮೆಗೊಳಗಾಗಿ, ಕರ್ಮವರ್ತ್ಮಸು = ಕರ್ಮಮಾರ್ಗದಲ್ಲಿ (ಕರ್ಮನಿರ್ಮಿತದೇಹಗಳಲ್ಲಿ, ಅಥವಾ ಲೋಕಗಳಲ್ಲಿ), ಭ್ರಾಮ್ಯತೇ = ಅಲೆಸಲ್ಪಡುತ್ತದೆ. ಇತಿ = ಹೀಗೆ, ಸರ್ವಾನ್ ಜೀವಾನ್ = ಎಲ್ಲಾ ಜೀವರನ್ನು, ಗುಣೈಃ = ಸತ್ತ್ವಾದಿಗುಣಗಳಿಂದ, ಬದ್ಧಾನ್ = ಬದ್ಧರೆಂದೂ, ಚ = ಮತ್ತು, ಮಾಯಾಬದ್ಧಾನ್ = ಪ್ರಕೃತಿ ಅಥವಾ ಶ್ರೀಹರಿಯ ಇಚ್ಛೆಯಿಂದ ಬದ್ಧರೆಂದು, ಶಂಸತಾ = ಸ್ತೋತ್ರಮಾಡುವ, ಅಕ್ರೂರೇಣ = ಅಕ್ರೂರನಿಂದ, ಪ್ರಭುಃ ಕೃಷ್ಣಃ = ಸರ್ವಸಮರ್ಥನಾದ ಕೃಷ್ಣನು, ಬಂಧೋಜ್ಝಿತಃ = ಬಂಧರಹಿತನೆಂದು, ನಿರ್ಣೀತಃ = ನಿಶ್ಚಯಿಸಲ್ಪಟ್ಟಿರುವನು.

**ಅನುವಾದ–** ಚತುರ್ಮುಖಬ್ರಹ್ಮನಿಗೆ ಸತ್ತ್ವ-ರಜಸ್-ತಮಸ್‌ಗಳ ಬಂಧವಿದೆ. ಆದ್ದರಿಂದ ಈ ಗುಣಗಳ ಸ್ಪರ್ಶವಿಲ್ಲದ ನಿನ್ನನ್ನು ಅವನು ತಿಳಿದಿಲ್ಲ. ಸತ್ತ್ವ-ರಜಸ್-ತಮಸ್- ಇವು ಪ್ರಕೃತಿಯ ಗುಣಗಳು. ಚತುರ್ಮುಖಬ್ರಹ್ಮದೇವರವರೆಗೆ ಎಲ್ಲ ಸ್ಥಾವರ-ಜಂಗಮಗಳೂ ಈ ಗುಣಗಳಿಂದ ಹೆಣೆಯಲ್ಪಟ್ಟಿದ್ದಾರೆ. ಆದ್ದರಿಂದಲೇ ಇವರು ಪ್ರಾಕೃತ. ಇದು ಪ್ರಮಾಣ ಪ್ರಸಿದ್ಧ. ಷಡ್ಗುಣೈಶ್ವರ್ಯಸಂಪನ್ನನೇ! ಈ ಜೀವ-ರಾಶಿಯು ನಿನ್ನ ಅಧೀನವಾದ ಮಾಯೆಯಿಂದ ಮೋಹಕ್ಕೊಳಗಾಗಿ, ನಾನು-ನನ್ನದು ಎಂದು ಭ್ರಮೆಗೊಳಗಾಗಿ ಕರ್ಮದ ದಾರಿಗಳಲ್ಲಿ= ಪ್ರಾರಬ್ಧಕರ್ಮದಿಂದ ಪ್ರಾಪ್ತವಾದ ದೇಹಗಳಲ್ಲಿ ಮತ್ತು ಲೋಕಗಳಲ್ಲಿ ಅಲೆಸಲ್ಪಡುತ್ತದೆ.

ಹೀಗೆ ಎಲ್ಲ ಜೀವರೂ ತ್ರಿಗುಣಬದ್ಧರು ಮತ್ತು ಶ್ರೀಹರಿಯ ಇಚ್ಛೆಯಿಂದ ಬದ್ಧರು ಎಂದು ಸ್ತುತಿಸಿದ ಅಕ್ರೂರನಿಂದ ಪ್ರಭು ಶ್ರೀಕೃಷ್ಣನು ಬಂಧರಹಿತ ಎಂದು ನಿರ್ಣಯಿಸಲ್ಪಟ್ಟಿದ್ದಾನೆ.

**ಭಾವವಿಲಾಸಿನೀ–** ಪರೋದೀರಿತಾರ್ಥೇಽಂತರಂಗಂ ಬಾಧಕಂ ಸ್ವೋಕ್ತಾರ್ಥೇ ಸಾಧಕಂ ಚೋಕ್ತ್ವಾ ಬಹಿರಂಗಮಪಿ ತದಾಹ– **ಅಜೋಽನುಬದ್ಧ ಇತಿ** ॥ ಅನೇನ 'ಅಜೋಽನು-ಬದ್ಧಸ್ಸಗುಣೈರಜಾಯಾ ಗುಣಾತ್ ಪರಂ ವೇದ ನ ತೇ ಸ್ವರೂಪಮ್' ಇತ್ಯಕ್ರೂರ-ಸ್ತುತಾವುಕ್ತಶ್ಲೋಕಾರ್ಥಂ ಸಂಗೃಹ್ಣಾತಿ । ಅತ್ರ ಹಿ ಚತುರ್ಮುಖಸ್ಯ ತ್ರಿಗುಣಬದ್ಧತ್ವಮ್, ಕೃಷ್ಣಸ್ಯ ತ್ರಿಗುಣಾತೀತತ್ವಮುಚ್ಯತೇ । ತದಾ ಕಿಂ ವಾಚ್ಯಂ ಜೀವಾನಾಂ ಬದ್ಧತ್ವಂ ಪರಮಾತ್ಮನಶ್ಚ ನಿತ್ಯಮುಕ್ತತ್ವಮಿತಿ ಭಾವಃ । ತತ್ರತ್ಯಮೇವ ಪದ್ಯಾಂತರಂ ಪಠತಿ– **ಸತ್ತ್ವಮಿತಿ**॥ ಅತ್ರಾಪಿ ಬ್ರಹ್ಮಾದಿ-

ಸ್ಥಾವರಾಂತಸರ್ವಜೀವಾನಾಂ ಸತ್ತ್ವಾದಿಗುಣತ್ರಯಬದ್ಧತ್ವೋಚ್ಯತೇ । ಪದ್ಯಾಂತರಂ ಪಠತಿ– **ಭಗವನ್ನಿತಿ** ॥ ಅತ್ರಾಪಿ ಗುಣಮೂಲಮಾಯಾಮೋಹಿತತ್ವಂ ಜೀವಾನಾಂ ಕಥ್ಯತೇ । ಪದ್ಯ-ದ್ವಯಸ್ಯಾಪಿ ಪರಮಾತ್ಮನಃ ಸ್ತುತಿರೂಪತಯಾ ಅರ್ಥಾತ್ ಪ್ರಾಥಮಿಕಶ್ಲೋಕಸಮಾಖ್ಯಯಾ ಚ ಕೃಷ್ಣಸ್ಯ ತದಭಾವೋಽಪಿ ಲಭ್ಯತೇ । ಅತಃ ಪದ್ಯತ್ರಯೇಽಪಿ ಮುಕ್ತಾಮುಕ್ತಭೇದ ಏವೋಚ್ಯತ ಇತಿ ಭಾವಃ । ತದೇವ ವಿಶದಯತಿ– **ಇತ್ಯಕ್ರೂರೇಣೇತಿ** ॥ ೨೯೩–೨೯೬ ॥

**ವಿವರಣೆ–** 'ಅಜೋಽನುಬದ್ಧಃ ಸ ಗುಣೈರಜಾಯಾ ಗುಣಾತ್ ಪರಂ ವೇದ ನ ತೇ ಸ್ವರೂಪಮ್' - ಇದು ಭಾಗವತ 10.38.4 ಉತ್ತರಾರ್ಧ- ಈ ಶ್ಲೋಕದ ಅಭಿಪ್ರಾಯವನ್ನು 293ನೇ ಶ್ಲೋಕವು ಸಂಗ್ರಹಿಸಿ ಹೇಳಿದೆ. 294-295 ಶ್ಲೋಕಗಳು ಭಾಗವತ 10.38 ರ 12 ಮತ್ತು 24ನೆಯ ಪದ್ಯಗಳು.

(1) 10.38.4 ರ ಉತ್ತರಾರ್ಧವು ಚತುರ್ಮುಖಬ್ರಹ್ಮನಿಗೆ ತ್ರಿಗುಣಬದ್ಧತ್ವವನ್ನು, ಶ್ರೀಕೃಷ್ಣನಿಗೆ ತ್ರಿಗುಣಾತೀತತ್ವವನ್ನು ಹೇಳುತ್ತದೆ. ಹೀಗಿರುವಾಗ ಜೀವಾತ್ಮರಿಗೆ ತ್ರಿಗುಣಬಂಧವಿದೆ, ಪರಮಾತ್ಮನು ನಿತ್ಯಮುಕ್ತ ಎಂದು ಸುಸ್ಪಷ್ಟ.

(2) 10.38.12ನೇ ಶ್ಲೋಕವು ಚತುರ್ಮುಖಬ್ರಹ್ಮನಿಂದ ಆರಂಭಿಸಿ ಸಕಲಜೀವರೂ ತ್ರಿಗುಣಬದ್ಧರು ಎಂದು ಹೇಳುತ್ತದೆ.

(3) 10.38.24ನೇ ಶ್ಲೋಕವು ಸಕಲಜೀವರಾಶಿಗಳಿಗೆ ಮಾಯಾಮೂಲಕವಾದ ಮೋಹವಿದೆ ಎಂದು ಹೇಳುತ್ತದೆ. ಈ ಎರಡು ಪದ್ಯಗಳು ಶ್ರೀಕೃಷ್ಣನ ಸ್ತುತಿಯಾದ್ದರಿಂದ ಶ್ರೀಕೃಷ್ಣನಿಗೆ ಈ ಬಂಧ ಮತ್ತು ಮೋಹಗಳು ಇಲ್ಲವೆಂದು ತಿಳಿಯುತ್ತದೆ.

**ಮಾಯಾಮಯೋಽಯಂ ಗುಣಸಂಪ್ರವಾಹಸ್ತೇ ನ ವಿದ್ಯತೇ ।**
**ಇತಿ ಶಕ್ರೇಣ ಕಥಿತಂ ಕೃಷ್ಣಂ ಪ್ರತ್ಯೇವ ಸಾದರಮ್ ॥ ೨೯೭ ॥**

**ಅರ್ಥ–** ಮಾಯಾಮಯಃ = ಭಗವದಿಚ್ಛೆಯಿಂದ ಸಂಭವಿಸುವ, ಅಯಂ ಗುಣಸಂಪ್ರವಾಹಃ = ಈ ತ್ರಿಗುಣ ಪ್ರವಾಹವು, ತೇ = ನಿನಗೆ, ನ ವಿದ್ಯತೇ = ಇಲ್ಲ, ಇತಿ = ಎಂದು, ಶಕ್ರೇಣ = ಇಂದ್ರನಿಂದ, ಕೃಷ್ಣಂ ಪ್ರತ್ಯೇವ = ಕೃಷ್ಣನನ್ನೇ ಕುರಿತು, ಸಾದರಂ = ಭಕ್ತಿಪೂರ್ವಕವಾಗಿ, ಕಥಿತಂ = ಹೇಳಲ್ಪಟ್ಟಿದೆ.

**ಅನುವಾದ– ಈ ತ್ರಿಗುಣಗಳ ಪ್ರವಾಹಕ್ಕೆ ಪರಮಾತ್ಮನ ಇಚ್ಛೆಯೇ ಪ್ರಧಾನ ಕಾರಣ. ಈ ಪ್ರವಾಹವು ನಿನ್ನಲ್ಲಿ ಇಲ್ಲ ಎಂದು ಇಂದ್ರನಿಂದ ಕೃಷ್ಣನಿಗೇ ನೇರವಾಗಿ ಭಕ್ತಿಯಿಂದ ಹೇಳಲ್ಪಟ್ಟಿದೆ.**

**ಭಾವವಿಲಾಸಿನೀ–** ವಾಕ್ಯಾಂತರಮುಪ್ಯಾಹ– **ಮಾಯಾಮಯ ಇತಿ** ॥ ಅನೇನ 'ಮಾಯಾ-ಮಯೋಽಯಂ ಗುಣಸಂಪ್ರವಾಹೋ ನ ವಿದ್ಯತೇ ತೇಽಗ್ರಹಣಾನುಬಂಧಃ' ಇತಿ ವಚನಂ

ಸಂಗೃಹ್ಣಾತಿ। ಅಸ್ಯಾರ್ಥಃ ಅಗ್ರಹಣಾನುಬಂಧಃ ಅಗ್ರಹಣಮಜ್ಞಾನಂ ಅನುಬಧ್ನಾತೀತ್ಯನುಬಂಧೋ ಘಟಕೋ ಯಸ್ಯ ಸೋಽಗ್ರಹಣಾನುಬಂಧಃ । ಅಯಂ ಜೀವೇಷು ಪರಿದೃಶ್ಯಮಾನಃ ತೇ ನ ವಿದ್ಯತೇ । ಅಜ್ಞಾನವಮೂಲಬಂಧಶ್ಚ ಸರ್ವಜ್ಞೇ ತ್ವಯಿ ನ ವಿದ್ಯತ ಇತಿ ಭಾವಃ। ಹೇತುಪೂರ್ವಕ-ಬಂಧನಿಷೇಧಾತ್ ಸಾದರಮಿತ್ಯುಕ್ತಮ್ ॥ ೨೯೭ ॥

**ವಿವರಣೆ–** ಈ ಶ್ಲೋಕದ ಪೂರ್ವಾರ್ಧವು-

'ಮಾಯಾಮಯೋಽಯಂ ಗುಣಸಂಪ್ರವಾಹೋ
ನ ವಿದ್ಯತೇ ತೇಽಗ್ರಹಣಾನುಬಂಧಃ' - ಭಾಗವತ ೧೦.೨೫.೪.

ಈ ಶ್ಲೋಕಾರ್ಧದ ಸಂಗ್ರಹ. 'ಮಾಯಾ' ಶಬ್ದಕ್ಕೆ ಭಗವದಿಚ್ಛೆ ಎಂದು ಅರ್ಥ. ಅವನ ಇಚ್ಛೆಯಂತೆ ಜೀವಾತ್ಮರಿಗೆ ತ್ರಿಗುಣಗಳ ಸಂಬಂಧವು ಉಂಟಾಗುತ್ತದೆ. ಇದರಿಂದ ಅಜ್ಞಾನವೂ ಉಂಟಾಗುತ್ತದೆ. ಪರಮಾತ್ಮನು ತನಗೆ ತ್ರಿಗುಣಗಳ ಸಂಬಂಧವು ಉಂಟಾಗಲಿ ಎಂದು ಬಯಸುವುದಿಲ್ಲ. ಅಜ್ಞಾನವನ್ನೂ ಬಯಸುವುದಿಲ್ಲ. ಆದ್ದರಿಂದ ಅವನಿಗೆ ತ್ರಿಗುಣಬಂಧವೂ ಇಲ್ಲ; ಅಜ್ಞಾನವೂ ಇಲ್ಲ.

**ಪ್ರಾಗುಕ್ತವಾಕ್ಯತೋಽಪಿ ದ್ವೌ ಮುಕ್ತಾಮುಕ್ತೌ ಪ್ರಸಾಧಿತೌ ॥ ೨೯೮ ॥**

**ಅರ್ಥ–** ಪ್ರಾಗುಕ್ತವಾಕ್ಯತೋಽಪಿ = ಹಿಂದೆ ಹೇಳಿದ, ಸುಪರ್ಣಾವೇತೌ ಎಂಬ ವಾಕ್ಯದಿಂದಲೂ, ಮುಕ್ತಾಮುಕ್ತೌ = ನಿತ್ಯಮುಕ್ತ ಮತ್ತು ನಿತ್ಯಬದ್ಧ ಎಂಬ, ದ್ವೌ = ಇಬ್ಬರು ಚೇತನರು, ಪ್ರಸಾಧಿತೌ = ಸಾಧಿಸಲ್ಪಟ್ಟಿದ್ದಾರೆ.

**ಅನುವಾದ–** ಹಿಂದೆ ಹೇಳಲ್ಪಟ್ಟ (ಶ್ಲೋಕ ೨೭೦ರಲ್ಲಿ ಉದಾಹರಿಸಲ್ಪಟ್ಟ) 'ಸುಪರ್ಣಾವೇತೌ...' (ಭಾಗವತ ೧೧.೧೧.೬ ಮತ್ತು ೭) ಮೊದಲಾದ ವಾಕ್ಯಗಳಿಂದಲೂ ನಿತ್ಯಮುಕ್ತ ಮತ್ತು ನಿತ್ಯಬದ್ಧ ಎಂಬ ಎರಡು ವರ್ಗಗಳ ಚೇತನರು ಸಾಧಿಸಲ್ಪಟ್ಟಿದ್ದಾರೆ.

**ನ ಚ ಮಾಂ ತಾನಿ ಕರ್ಮಾಣಿ ನಿಬಧ್ನಂತಿ ಧನಂಜಯ ।
ಉದಾಸೀನವದಾಸೀನಮಸಕ್ತಂ ತೇಷು ಕರ್ಮಸು ॥ ೨೯೯ ॥**

**ಸತ್ವಂ ರಜಸ್ತಮ ಇತಿ ಗುಣಾಃ ಪ್ರಕೃತಿಸಂಭವಾಃ ।
ನಿಬಧ್ನಂತಿ ಮಹಾಬಾಹೋ ದೇಹೇ ದೇಹಿನಮವ್ಯಯಮ್ ॥ ೩೦೦ ॥**

**ಇತಿ ಕೃಷ್ಣೇನ ಗೀತಾಯಾಂ ಕರ್ಮಾಬದ್ಧತ್ವಮಾತ್ಮನಃ ।
ಜೀವಾನಾಂ ಗುಣಬದ್ಧತ್ವಂ ಚೋಕ್ತಂ ವಾಕ್ಯದ್ವಯೇನ ಹಿ ॥ ೩೦೧ ॥**

**ಅರ್ಥ-** ಧನಂಜಯ= ಅರ್ಜುನ!, ತೇಷು ಕರ್ಮಸು= ಆ ಕರ್ಮಗಳಲ್ಲಿ, ಅಸಕ್ತಂ= ಅಂಟಿಕೊಳ್ಳದ, ಉದಾಸೀನವತ್= ಉದಾಸೀನನಂತೆ, ಆಸೀನಂ= ಇರುವ, ಮಾಂ= ನನ್ನನ್ನು, ತಾನಿ ಕರ್ಮಾಣಿ= ಆ ಕರ್ಮಗಳು (ಸಂಹಾರ, ಸೃಷ್ಟಿಗಳು) ನ ನಿಬಧ್ನಂತಿ= ಕಟ್ಟುವುದಿಲ್ಲ, ಮಹಾಬಾಹೋ= ಪರಾಕ್ರಮಶಾಲಿಯೇ! ಪ್ರಕೃತಿಸಂಭವಾಃ= ಪ್ರಕೃತಿಯಿಂದ ಹುಟ್ಟಿದ, ಸತ್ವಂ ರಜಸ್ ತಮ ಇತಿ ಗುಣಾಃ= ಸತ್ವ, ರಜಸ್, ತಮಸ್- ಈ ಗುಣಗಳು, ಅವ್ಯಯಮ್= ನಾಶವಿಲ್ಲದ, ದೇಹಿನಮ್= ಜೀವನನ್ನು, ದೇಹೇ= ದೇಹದಲ್ಲಿ, ನಿಬಧ್ನಂತಿ= ಕಟ್ಟಿಹಾಕುತ್ತವೆ. ಇತಿ= ಹೀಗೆ, ವಾಕ್ಯದ್ವಯೇನ= ಎರಡು ಶ್ಲೋಕಗಳಿಂದ (೯.೯ ಮತ್ತು ೧೪.೫) ಗೀತಾಯಾಂ= ಭಗವದ್ಗೀತೆಯಲ್ಲಿ, ಕೃಷ್ಣೇನ= ಕೃಷ್ಣನಿಂದ, ಆತ್ಮನಃ= ತನಗೆ, ಕರ್ಮಾ-ಬದ್ಧತ್ವಂ= ಕರ್ಮಬಂಧನ ರಹಿತತ್ವವು, ಚ= ಮತ್ತು, ಜೀವಾನಾಂ= ಜೀವಾತ್ಮರಿಗೆ, ಗುಣಬದ್ಧತ್ವಂ= ತ್ರಿಗುಣಬದ್ಧತ್ವವು, ಉಕ್ತಂ= ಹೇಳಲ್ಪಟ್ಟಿದೆ.

**ಅನುವಾದ–** ಆ ಕರ್ಮಗಳಿಗೆ (೯.೭,೮ ಮತ್ತು ೩,೨೨) ಅಂಟಿಕೊಳ್ಳದ ಉದಾಸೀನನಂತೆ ಇರುವ ನನ್ನನ್ನು ಆ ಕರ್ಮಗಳು ಕಟ್ಟಿಹಾಕುವುದಿಲ್ಲ.

ಸತ್ವ-ರಜಸ್, ತಮಸ್- ಈ ಗುಣಗಳು ಪ್ರಕೃತಿಜನ್ಯ. ಇವು ನಾಶವಿಲ್ಲದ ಜೀವಾತ್ಮನನ್ನು ದೇಹದಲ್ಲಿ ಕಟ್ಟಿಹಾಕುತ್ತವೆ. ಹೀಗೆ ಎರಡು ವಾಕ್ಯಗಳಿಂದ (೯.೯ ಮತ್ತು ೧೪.೫) ಗೀತೆಯಲ್ಲಿ ಶ್ರೀಕೃಷ್ಣನಿಂದ ತನಗೆ ಕರ್ಮಬಂಧರಹಿತತ್ವವು ಮತ್ತು ಜೀವಾತ್ಮರಿಗೆ ತ್ರಿಗುಣಬದ್ಧತ್ವವೂ ಹೇಳಲ್ಪಟ್ಟಿದೆ.

**ಭಾವವಿಲಾಸಿನೀ–** ಗೀತಾವಾಕ್ಯೇನಾಪಿ ಕೃಷ್ಣಸ್ಯ ನಿತ್ಯಮುಕ್ತತಾಂ ಜೀವಾನಾಂ ಬದ್ಧತಾಂ ಚ ಸಾಧಯತಿ– **ನ ಚ ಮಾಮಿತಿ** ॥ ಪದ್ಯದ್ವಯಸ್ಯ ಫಲಿತಮಾಹ– **ಇತೀತಿ** ॥ ೨೯೯–೩೦೦ ॥

**ಸೋಽಮೃತಸ್ಯಾಭಯಸ್ಯೇಶೋ ಮರ್ತ್ಯಮನ್ನಂ ಯದತ್ಯಗಾತ್ ।**
**ಪರಾಂತಕಾಲೇ ಸರ್ವೇಽಪಿ ವಿಮುಚ್ಯಂತೇ ಪರಾಮೃತಾತ್ ॥ ೩೦೨ ॥**

**ಪರಾಮೃತಪದೇನಾಽತ್ರ ನಿತ್ಯಮುಕ್ತಃ ಸ್ಫುಟೋದಿತಃ ।**
**ಶ್ರುತಯಃ ಸ್ಮೃತಯಶ್ಚೈವ ಮುಕ್ತಾಮುಕ್ತದ್ವಿತಾಂ ಜಗುಃ ॥ ೩೦೩ ॥**

**ತನ್ಮುಕುಂದಃ ಪರಬ್ರಹ್ಮ ನಿತ್ಯಮುಕ್ತತ್ವತಃ ಪ್ರಭುಃ ।**
**ಮುಕ್ತಾಶ್ಚ ನಿತ್ಯಮುಕ್ತಾ ನ ನಿತ್ಯಮುಕ್ತಸ್ತದಾಪಿ ರಾಟ್ ॥ ೩೦೪ ॥**

**ಅರ್ಥ–** ಸಃ = ಶ್ರೀಹರಿಯು, ಅನ್ನಂ = ಅನ್ನಪದವಾಚ್ಯವಾದ, ಮರ್ತ್ಯಂ = ಸಂಸಾರಿಯನ್ನು, ಯತ್ = ಯಾವಕಾರಣದಿಂದ, ಅತ್ಯಗಾತ್ = ಮೀರಿದ್ದಾನೋ (ತನ್ನ ವಶದಲ್ಲೇ ಇಟ್ಟುಕೊಂಡಿದ್ದಾನೋ), ತತ್ = ಆದ್ದರಿಂದ, ಅಭಯಸ್ಯ = ಭಯರಹಿತನಾದ, ಅಮೃತಸ್ಯ = ಮುಕ್ತರಿಗೆ, ಈಶಃ = ಒಡೆಯನು.

ಪರಾಂತಕಾಲೇ = ಚತುರ್ಮುಖನ ಆಯುಷ್ಯದ ಕೊನೆಯಲ್ಲಿ, ಸರ್ವೇऽಪಿ = ಎಲ್ಲ ಮುಕ್ತರೂ, ಪರಾಮೃತಾತ್ = ನಿತ್ಯಮುಕ್ತನಾದ ಶ್ರೀಹರಿಯಿಂದ, ವಿಮುಚ್ಯಂತೇ= ಬಂಧದಿಂದ ಬಿಡಿಸಲ್ಪಡುತ್ತಾರೆ.

ಅತ್ರ= ಈ ಶ್ರುತಿಯಲ್ಲಿ, ಪರಾಮೃತಪದೇನ= 'ಪರಾಮೃತ' ಪದದಿಂದ, ನಿತ್ಯಮುಕ್ತಃ= ನಿತ್ಯಮುಕ್ತನು, ಸ್ಫುಟೋದಿತಃ= ಸ್ಪಷ್ಟವಾಗಿ ಹೇಳಲ್ಪಟ್ಟಿದ್ದಾನೆ. ಶ್ರುತಯಃ= ಶ್ರುತಿಗಳು, ಸ್ಮೃತಯಶ್ಚ ಏವ= ಸ್ಮೃತಿಗಳೂ, ಮುಕ್ತಾಮುಕ್ತದ್ವಿತಾಂ= ಮುಕ್ತ ಮತ್ತು ಅಮುಕ್ತರ ಭೇದವನ್ನು, ಜಗುಃ= ಹೇಳಿವೆ.

ತತ್= ಆದ್ದರಿಂದ, ಪ್ರಭುಃ ಮುಕುಂದಃ= ಪ್ರಭು ಮುಕುಂದನು, ಪರಬ್ರಹ್ಮ= ಪರಬ್ರಹ್ಮನು, ನಿತ್ಯಮುಕ್ತತ್ವತಃ= ನಿತ್ಯಮುಕ್ತನಾದ್ದರಿಂದ, ಮುಕ್ತಾಃ ಚ= ಪ್ರಕೃತಿ ಬಂಧದಿಂದ ಮುಕ್ತರು, ತದಾ ಅಪಿ= ಆಗಲೂ= ಮುಕ್ತಿಕಾಲದಲ್ಲೂ, ನ ನಿತ್ಯಮುಕ್ತಾಃ= ನಿತ್ಯಮುಕ್ತರಲ್ಲ. ರಾಟ್= ರಾಜನೇ= ಬಂಧರಹಿತನೇ, ನಿತ್ಯಮುಕ್ತಃ= ನಿತ್ಯಮುಕ್ತನು.

**ಅನುವಾದ–** ಅವನು ಸಂಸಾರಿಜೀವರನ್ನು ಮೀರಿದ್ದಾನೆ. ಆದ್ದರಿಂದ ಭಯರಹಿತರಾದ ಮುಕ್ತರಿಗೂ ನಿಯಾಮಕ. ಚತುರ್ಮುಖಬ್ರಹ್ಮದೇವರ ಆಯುಷ್ಯದ ಕೊನೆಯಲ್ಲಿ ನಿತ್ಯಮುಕ್ತನಾದ ಪರಮಾತ್ಮನಿಂದ ಎಲ್ಲರೂ ಮುಕ್ತರಾಗುತ್ತಾರೆ.

ಈ ಶ್ರುತಿಯಲ್ಲಿ (ಆಥರ್ವಣ ೬.೬) ಪರಾಮೃತಪದದಿಂದ ನಿತ್ಯಮುಕ್ತನೇ ಸ್ಪಷ್ಟವಾಗಿ ಹೇಳಲ್ಪಟ್ಟಿದ್ದಾನೆ. ಶ್ರುತಿ ಮತ್ತು ಸ್ಮೃತಿಗಳು ಮುಕ್ತ ಮತ್ತು ಅಮುಕ್ತರ ಭೇದವನ್ನು ಹೇಳಿವೆ.

ಆದ್ದರಿಂದ ಸ್ವತಂತ್ರನಾದ ಮುಕುಂದನೇ ಪರಬ್ರಹ್ಮ. ಮುಕ್ತಿಕಾಲದಲ್ಲೂ ಮುಕ್ತರು ನಿತ್ಯಮುಕ್ತರಲ್ಲ. ಸರ್ವದಾ ಬಂಧನವಿಲ್ಲದೆ ಶೋಭಿಸುವವನೇ ನಿತ್ಯಮುಕ್ತ.

**ಭಾವವಿಲಾಸಿನೀ–** ಶ್ರುತ್ಯಾಪಿ ಭಗವತೋ ನಿತ್ಯಮುಕ್ತತ್ವಂ ಸಾಧಯತಿ– **ಸೋऽಮೃತಸ್ಯೇತಿ** ॥ ಅನೇನ ಭಾಗವತವಚನೇನ 'ಉತಾಮೃತತ್ವಸ್ಯೇಶಾನೋ ಯದನ್ನೇನಾತಿರೋಹತಿ' ಇತಿ ಶ್ರುತಿ-ಮುಪಾದತ್ತೇ । ಶ್ರುತೇರಪ್ಯರ್ಥನಿರ್ಣಾಯಕತ್ವಾತ್ ಸ್ಮೃತ್ಯುದಾಹರಣಮ್ । ಯದ್ ಯಸ್ಮಾದ್ ಅನ್ನೇನ ಅನ್ನಮ್ । ದ್ವಿತೀಯಾರ್ಥೇ ತೃತೀಯಾ । ಅನ್ನಪದೋದಿತಂ ಮರ್ತ್ಯಸಂಸಾರಿಜೀವಂ ಅತಿರೋಹತಿ ಅತ್ಯಗಾದ್ ಅತಿಕ್ರಮ್ಯ ವರ್ತತೇ । ತಾನ್ ಸ್ವವಶೀಕೃತ್ಯ ಸ್ವಯಂ ರಾಜವತ್ ತಿಷ್ಠತೀತ್ಯರ್ಥಃ । ತತ್ ತಸ್ಮಾತ್ ಅಮೃತತ್ವಸ್ಯ ಅಮೃತಸ್ಯ। ದೇವಾನ್ನಭೂತಾಮೃತ-ವ್ಯಾವೃತ್ತ್ಯರ್ಥಮಾಹ– **ಅಭಯಸ್ಯೇತಿ** ॥ ಮರಣಾದಿಸಂಸಾರಭಯರಹಿತಸ್ಯ ಮುಕ್ತಸ್ಯೇತ್ಯರ್ಥಃ । ಜಾತ್ಯೇಕವಚನಮಿದಮ್ । ತಥಾಚ ಮುಕ್ತಾನಾಮಿತಿ ಲಭ್ಯತೇ । ಈಶಾನಃ ಸ್ವಾಮೀ । ಸಂಸಾರಿಣಾಮೀಶ್ವರತ್ವಾನ್ಮುಕ್ತಾನಾಮಪೀಶ್ವರ ಏವ। ನಹಿ ಕೋऽಪಿ ಪ್ರೇಕ್ಷಾವಾನ್ ಸ್ವಾಧೀನಂ ಸ್ವಸಮಂ ಕುರುತೇ । ಅತಃ ಸಂಸಾರಿನಿಯಾಮಕತ್ವಾತ್ ಮುಕ್ತಾನಾಮಪಿ ನಿಯಾಮಕತ್ವಮಿತಿ

ಸಹೇತುಕಂ ಹರೇರ್ಮುಕ್ತಾಧೀಶ್ವರತ್ವಮನಯಾ ಶ್ರುತ್ಯಾ ಲಭ್ಯತ ಇತಿ ಭಾವಃ । ಶ್ರುತ್ಯಂತ-ರಮಪ್ಯಾಹ– **ಪರಾಂತಕಾಲ ಇತಿ** ॥ ಅನೇನ 'ತೇ ಬ್ರಹ್ಮಲೋಕೇ ತು ಪರಾಂತಕಾಲೇ ಪರಾಮೃತಾತ್ ಪರಿಮುಚ್ಯಂತಿ ಸರ್ವೇ' ಇತಿ ಶ್ರುತಿಮರ್ಥತೋ ಗೃಹ್ಣಾತಿ । ತತ್ ತಸ್ಮಾತ್ ಶ್ರುತಿಸ್ಮೃತಿಭಿರ್ನಿತ್ಯ-ಮುಕ್ತತಯಾ ಕಥನಾತ್ । ಮುಕ್ತತ್ವನಿತ್ಯಮುಕ್ತತ್ವಾಭ್ಯಾಂ ಮುಕ್ತಾವಪಿ ಭೇದಂ ಸಾಧಯಿತುಮಾಹ– **ಮುಕ್ತಾಶ್ಚೇತಿ** ॥ ಮುಕ್ತಾಶ್ಚ ಮುಕ್ತಾ ಏವ ನತು ಪರಾತ್ಮವನ್ನಿತ್ಯಮುಕ್ತಾಃ । ಅತಸ್ತದಾಪಿ ಮುಕ್ತಿದಶಾಯಾಮಪಿ । ರಾಟ್ ರಾಜಾ । ಮುಕ್ತೇಷ್ವಪ್ಯವಿದ್ಯಮಾನನಿತ್ಯಮುಕ್ತಾಖ್ಯ-ಮಹಾಮಹಿಮವತ್ತ್ವಾದಿತಿ ಭಾವಃ ॥ ೩೦೨–೩೦೪ ॥

**ವಿವರಣೆ–** 302ನೇ ಶ್ಲೋಕದ ಪೂರ್ವಾರ್ಧವು ಭಾಗವತ 2.6.17ನೇ ಶ್ಲೋಕದ ಪೂರ್ವಾರ್ಧ. ಇದು 'ಉತಾಮೃತತ್ವಸ್ಯೇಶಾನೋ ಯದನ್ನೇನಾತಿರೋಹತಿ' ಈ ಪುರುಷಸೂಕ್ತ ಮಂತ್ರದ ವ್ಯಾಖ್ಯಾನ. ಉತ್ತರಾರ್ಧವು ಅಥರ್ವಣೋಪನಿಷತ್‌ನ 6.6 ರ ಉತ್ತರಾರ್ಧದ ಸಂಗ್ರಹ. ಪೂರ್ವಾರ್ಥವು ಭಾ.ವಿ. ಯಲ್ಲದೆ.

304ನೇ ಶ್ಲೋಕ. ರಾಟ್= ಶೋಭಿಸುವವನು. ಯಾವ ಕಾಲದಲ್ಲೂ ಬಂಧನಕ್ಕೆ ಒಳಗಾಗದವನೇ ರಾಜ. ಶ್ರೀಹರಿಯೊಬ್ಬನೇ ಈ ಮಹಿಮೆಯುಳ್ಳವನು. ಆದ್ದರಿಂದ ಅವನೊಬ್ಬನೇ ನಿತ್ಯಮುಕ್ತ.

ತದಧೀನತ್ವಬಂಧೇನ ಭಕ್ತಿಬಂಧೇನ ವಾ ಹರೇಃ ।
ಮುಕ್ತೋಽಪಿ ಬದ್ಧೋ ಯತ್ ತಸ್ಮಾನ್ನಿತ್ಯಬದ್ಧೋಽಪ್ಯಸೌ ಭವೇತ್
॥ ೩೦೫ ॥

**ಅರ್ಥ–** ತದಧೀನತ್ವಬಂಧೇನ = ಶ್ರೀಹರಿಗೆ ಅಧೀನತ್ವವೆಂಬ ಬಂಧದಿಂದ, ವಾ = ಅಥವಾ, ಹರೇಃ = ಶ್ರೀಹರಿಯ, ಭಕ್ತಿಬಂಧೇನ = ಭಕ್ತಿಪಾಶದಿಂದ, ಮುಕ್ತೋಽಪಿ = ಮುಕ್ತನೂ, ಯತ್ ಬದ್ಧಃ ತಸ್ಮಾತ್ = ಬದ್ಧನಾದುದರಿಂದ, ಅಸೌ ಅಪಿ= ಈ ಮುಕ್ತನು, ನಿತ್ಯಬದ್ಧಃ ಭವೇತ್= ನಿತ್ಯಬದ್ಧನು ಆಗುತ್ತಾನೆ.

**ಅನುವಾದ–** ಶ್ರೀಹರಿಗೆ ಅಧೀನತ್ವ ಎಂಬ ಬಂಧದಿಂದ ಮತ್ತು ಶ್ರೀಹರಿಯ ಮೇಲೆ ಭಕ್ತಿಯೆಂಬ ಬಂಧದಿಂದ ಮುಕ್ತನೂ ಬದ್ಧನೇ. ಆದ್ದರಿಂದ ಮುಕ್ತನು ನಿತ್ಯಬದ್ಧನೇ ಆಗುತ್ತಾನೆ.

**ಭಾವವಿಲಾಸಿನೀ–** ಮುಕ್ತೌ ಬಂಧಾಭಾವಾತ್ ಕಥಂ ಜೀವಾನಾಂ ನಿತ್ಯಬದ್ಧತ್ವಮಿತ್ಯತ ಆಹ– **ತದಧೀನತ್ವೇತಿ** ॥ ೩೦೫ ॥

**ವಿವರಣೆ–** ಪ್ರಶ್ನೆ : ಮುಕ್ತಿಯಲ್ಲಿ ಬಂಧವಿಲ್ಲ; ಆದ್ದರಿಂದ ಮುಕ್ತ ಅಥವಾ ಮುಕ್ತರಾಗುವ ಜೀವಾತ್ಮಗಳಿಗೆ ನಿತ್ಯಬದ್ಧತ್ವವು ಹೇಗೆ?

ಉತ್ತರ : (1) ಮುಕ್ತರು ಪರಮಾತ್ಮನಿಗೆ ಅಧೀನರಾಗಿರುತ್ತಾರೆ. ಅಧೀನತ್ವವು ಬಂಧ.

(2) ಮುಕ್ತರಿಗೆ ಪರಮಾತ್ಮನ ಮೇಲೆ ಗಾಢವಾದ ಭಕ್ತಿಯು ಇರುತ್ತದೆ. ಈ ಭಕ್ತಿಯು ಬಂಧ. ಈ ಬಂಧಗಳು ಶಾಶ್ವತ. ಆದ್ದರಿಂದ ಮುಕ್ತ ಮತ್ತು ಮುಕ್ತರಾಗುವ ಆತ್ಮಗಳು ನಿತ್ಯಬದ್ಧ.

**ಮತ್ತೊಂದು ರೀತಿಯಿಂದ ಜೀವನಿಗೆ ನಿತ್ಯಬದ್ಧತ್ವವನ್ನು ಪ್ರತಿಪಾದಿಸುತ್ತಿದ್ದಾರೆ -**

**ನಿತ್ಯಸಂಸಾರಿಸದ್ಭಾವೋಽಪ್ಯನೇನೈವ ಪ್ರಸಿದ್ಧ್ಯತೇ ।**
**ತದಾ ಯಥಾಶ್ರುತೋ ವಾಕ್ಯಸ್ಯಾರ್ಥಃ ಸ್ವಸ್ಥೋ ಭವಿಷ್ಯತಿ ॥ ೩೦೬ ॥**

**ಅರ್ಥ–** ಅನೇನ ಏವ= ಇದರಿಂದಲೇ (ಜೀವನಿಗೆ ನಿತ್ಯಬದ್ಧತ್ವವನ್ನು ಹೇಳಿದ್ದರಿಂದಲೇ), ನಿತ್ಯಸಂಸಾರಿಸದ್ಭಾವೋಽಪಿ= ನಿತ್ಯಸಂಸಾರಿ ಚೇತನಗಳ ಅಸ್ತಿತ್ವವೂ, ಪ್ರಸಿದ್ಧ್ಯತೇ= ಸಿದ್ಧವಾಗುತ್ತದೆ, ತದಾ= ಆಗ (ನಿತ್ಯಬದ್ಧ ಶಬ್ದಕ್ಕೆ 'ನಿತ್ಯಸಂಸಾರಿ' ಎಂಬ ಅರ್ಥಸ್ವೀಕಾರದಿಂದ), ವಾಕ್ಯಸ್ಯ= ವಾಕ್ಯದ, ಯಥಾಶ್ರುತಃ ಅರ್ಥಃ= ಕೇಳಿದ ಕೂಡಲೇ ಗೋಚರಿಸುವ ಅರ್ಥವು, ಸ್ವಸ್ಥಃ= ಸುಸ್ಥಿತಿವುಳ್ಳದ್ದು, ಭವಿಷ್ಯತಿ= ಆಗುತ್ತದೆ.

**ಅನುವಾದ-** ಇದರಿಂದಲೇ (ಭಾಗವತ ೧೧.೧೧.೭ ರಲ್ಲಿ 'ಅವಿದ್ಯಯಾಂಧಃ ನಿತ್ಯಬದ್ಧಃ' ಎಂದು ಹೇಳಿರುವುದರಿಂದಲೇ) 'ನಿತ್ಯಸಂಸಾರಿ' ಎಂಬ ಜೀವವರ್ಗವು ಇದೆ ಎಂದು ಸಿದ್ಧವಾಗುತ್ತದೆ. ಈ ವ್ಯಾಖ್ಯಾನದಿಂದ 'ನಿತ್ಯಬದ್ಧ' ಶಬ್ದದ 'ಯಥಾಶ್ರುತ ಅರ್ಥವು= ಕೇಳಿದ ಕೂಡಲೇ ಗೋಚರಿಸುವ ಅರ್ಥವು ಸ್ಥಿರವಾಗುತ್ತದೆ.

**ಭಾವವಿಲಾಸಿನೀ–** ಪ್ರಕಾರಾಂತರೇಣ ಜೀವಸ್ಯ ನಿತ್ಯಬದ್ಧತಾಮಾಹ– **ನಿತ್ಯೇತಿ** ॥ ಅನೇನ ಜೀವಸ್ಯ ನಿತ್ಯಬದ್ಧತ್ವಕಥನೇನ । ಪ್ರಸಿದ್ಧಬಂಧೇನೈವ ಕಶ್ಚಿನ್ನಿತ್ಯಬದ್ಧೋಽಪ್ಯಸ್ತೀತಿ ಭಾವಃ ॥ ೩೦೬ ॥

**ವಿವರಣೆ–** ಭಾಗವತ 11.11.7 ರಲ್ಲಿ 'ನಿತ್ಯಬದ್ಧ' ಶಬ್ದವಿದೆ. ಮುಕ್ತಜೀವರೂ ಪರಮಾತ್ಮನಿಗೆ ಅಧೀನವಾಗಿರುತ್ತಾರೆ ಎಂದು, ಭಕ್ತಿಪಾಶದಿಂದ ತಮ್ಮನ್ನು ಬಂಧಿಸಿಕೊಂಡಿರುತ್ತಾರೆ ಎಂದೂ ವಿವರಿಸಿ ಮುಕ್ತಚೇತನರು ನಿತ್ಯಬದ್ಧರೇ ಎಂದು ಯುಕ್ತಿಮಲ್ಲಿಕೆಯ 305ನೆಯ ಶ್ಲೋಕದಲ್ಲಿ ಹೇಳಿದ್ದಾರೆ. 'ನಿತ್ಯಬದ್ಧ' ಶಬ್ದವನ್ನು ಕೇಳಿದವರಿಗೆ ಈ ಅರ್ಥವು ಗೋಚರಿಸುವುದಿಲ್ಲ. ಆದ್ದರಿಂದ ಇದು ಯಥಾಶ್ರುತ ಅರ್ಥ ಅಲ್ಲ. 306ನೇ ಶ್ಲೋಕದಲ್ಲಿ ಭಾಗವತ 11.11.7 ರಲ್ಲಿರುವ ನಿತ್ಯಬದ್ಧ ಶಬ್ದಕ್ಕೆ ಮುಕ್ತರಾಗದ ನಿರಂತರವಾಗಿ ಸಂಸಾರಬಂಧದಲ್ಲೇ ಇರುವ ಚೇತನವರ್ಗ ಎಂದು ವ್ಯಾಖ್ಯಾನಿಸಿದ್ದಾರೆ. 'ನಿತ್ಯಬದ್ಧ' ಶಬ್ದವನ್ನು ಕೇಳಿದ ಕೂಡಲೇ ಈ ಅರ್ಥವೇ ಗೋಚರಿಸುತ್ತದೆ. ಆದ್ದರಿಂದ ಇದು 'ಯಥಾಶ್ರುತ ಅರ್ಥ'. ಆದ್ದರಿಂದ 'ನಿತ್ಯಬದ್ಧ' ಶಬ್ದದ 'ಯಥಾಶ್ರುತ' ಅರ್ಥಕ್ಕೆ ಮನ್ನಣೆಯು ಸಿಕ್ಕಿದೆ.

**ಏವಂಚ ನಿತ್ಯಮುಕ್ತಸ್ಯ ನಿತ್ಯಬದ್ಧಸ್ಯ ಚೈಕತಾ ।**
**ಕದಾ ಸ್ಯಾತ್ತೌ ಯತೋ ಧರ್ಮೌ ವಿರುದ್ಧೌ ಸಾರ್ವಕಾಲಿಕೌ ॥ ೩೦೭ ॥**

**ಅರ್ಥ–** ಏವಂ ಚ= ಆದ್ದರಿಂದ, ನಿತ್ಯಮುಕ್ತಸ್ಯ= ನಿತ್ಯಮುಕ್ತನಾದ ಶ್ರೀಹರಿಗೆ, ಚ= ಮತ್ತು, ನಿತ್ಯಬದ್ಧಸ್ಯ= ನಿತ್ಯಬದ್ಧನಾದ ಜೀವನಿಗೆ, ಏಕತಾ = ಐಕ್ಯವು, ಕದಾ ಸ್ಯಾತ್ = ಯಾವಾಗ ಆದೀತು? ಯತಃ = ಏಕೆಂದರೆ, ತೌ ಧರ್ಮೌ = ನಿತ್ಯಬದ್ಧತ್ವ ಹಾಗೂ ನಿತ್ಯಮುಕ್ತತ್ವಧರ್ಮಗಳು, ವಿರುದ್ಧೌ= ವಿರುದ್ಧಗಳು, ಸಾರ್ವಕಾಲಿಕೌ = ಎಲ್ಲ ಕಾಲದಲ್ಲೂ ಇರುತ್ತವೆ.

**ಅನುವಾದ-** ನಿತ್ಯಸಂಸಾರಿ ಜೀವವರ್ಗವು ಇದೆ; ಶ್ರೀಹರಿಯು ನಿತ್ಯಮುಕ್ತ. ಹೀಗಿರುವಾಗ ಈ ಜೀವವರ್ಗ ಮತ್ತು ಹರಿಯ ಐಕ್ಯವು ಯಾವಾಗ ಆದೀತು? ಏಕೆಂದರೆ ನಿತ್ಯಬದ್ಧತ್ವ ಮತ್ತು ನಿತ್ಯಮುಕ್ತತ್ವ- ಈ ಎರಡು ಧರ್ಮಗಳು ವಿರುದ್ಧ ಮತ್ತು ಸಾರ್ವಕಾಲಿಕ.

**ಭಾವವಿಲಾಸಿನೀ–** ಏಕತಾ ನಿತ್ಯಬದ್ಧೋ ನಿತ್ಯಮುಕ್ತ ಏಕ ಏವೇತ್ಯುದ್ಧವೇನಾಶಂಕಿತೈಕ್ಯಮ್ । ಧರ್ಮೌ ನಿತ್ಯಬದ್ಧತ್ವನಿತ್ಯಮುಕ್ತತ್ವಾಖ್ಯಧರ್ಮೌ ಸಾರ್ವಕಾಲಿಕೌ ಉಭಯೋರಪಿ ನಿತ್ಯೇತಿ ನಿತ್ಯತ್ವ-ಕಥನಾದನಾದ್ಯನಂತಕಾಲೀನೌ ॥ ೩೦೭ ॥

**ವಿವರಣೆ–** ಭಾಗವತ 11.11.7 ರ ನಿತ್ಯಬದ್ಧ ಶಬ್ದಕ್ಕೆ ಈಗ ಹೇಳಿರುವ ಅರ್ಥದಂತೆ ಒಂದು ವರ್ಗದ ಜೀವ ನಿತ್ಯಬದ್ಧ. ಶ್ರೀಹರಿ ನಿತ್ಯಮುಕ್ತ. ನಿತ್ಯಬದ್ಧತ್ವ ಮತ್ತು ನಿತ್ಯಮುಕ್ತತ್ವಗಳು ವಿರುದ್ಧ ಧರ್ಮಗಳು. ಇವುಗಳು ಸಾರ್ವಕಾಲಿಕ. ಹೀಗಿರುವಾಗ ಜೀವ-ಪರಮಾತ್ಮರ ಐಕ್ಯಕ್ಕೆ ಅವಕಾಶವೇ ಇಲ್ಲ.

**ಅತೋ ಮಿಥ್ಯಾತ್ವಕಥನೇ ಪ್ಯಾಶಾದೇಶಾಂತರಂ ಗತಾ ।**
**ಬ್ರಹ್ಮವದ್ವಾ ಮೋಕ್ಷವದ್ವಾ ಯನ್ನಿತ್ಯಂ ತತ್ ಕಥಂ ಮೃಷಾ ॥ ೩೦೮ ॥**

**ಅರ್ಥ–** ಅತಃ ಅಪಿ = ಬಂಧಕ್ಕೂ ನಿತ್ಯತ್ವವನ್ನು ಹೇಳಿದ್ದರಿಂದಲೂ, ಮಿಥ್ಯಾತ್ವಕಥನೇ = ಬಂಧಕ್ಕೆ ಮಿಥ್ಯಾತ್ವವನ್ನು ಹೇಳುವ, ಆಶಾ = ಆಶೆಯು, ದೇಶಾಂತರಂ ಗತಾ = ದೂರಹೋಯಿತು (ನಿರಸ್ತವಾಯಿತು) ಬ್ರಹ್ಮವತ್ = ಪರಬ್ರಹ್ಮನಂತೆ. ವಾ = ಅಥವಾ, ಮೋಕ್ಷವತ್ = ಮೋಕ್ಷದಂತೆ, ಯನ್ನಿತ್ಯಂ = ಯಾವುದು ನಿತ್ಯವೋ (ಅದು ಸತ್ಯವೂ ಆದ್ದರಿಂದ), ತತ್ = ಅದು, ಕಥಂ = ಹೇಗೆ, ಮೃಷಾ = ಮಿಥ್ಯಾ ?

**ಅನುವಾದ–** ಭಾಗವತ (೧೧.೧೧.೭) ಸಂಸಾರಬಂಧವು ನಿತ್ಯ ಎಂದು ಹೇಳಿದೆ. ಯಾವುದು ನಿತ್ಯವೋ ಅದು ಮಿಥ್ಯಾ ಅಲ್ಲ. ಬ್ರಹ್ಮದಂತೆ. ಮೋಕ್ಷದಂತೆ. ಆದ್ದರಿಂದ ಬಂಧಕ್ಕೆ ಮಿಥ್ಯಾತ್ವವನ್ನು ಹೇಳುವ ಆಶೆಯು ದೂರ ಹೋಗಿದೆ.

**ಭಾವವಿಲಾಸಿನೀ-** ಅತಃ ಬಂಧಸ್ಯಾಪಿ ನಿತ್ಯತ್ವೋಕ್ತೇಃ ॥ ೩೦೮ ॥

**ಅನಾದಿಗುಣಸಂಬಂಧಾತ್ ತೇನೌಪಾಧಿಕತೈವ ಹಿ ।**
**ಅವಾಸ್ತವತ್ವಂ ಪ್ರಾಗುಕ್ತಂ ನ ಮಿಥ್ಯಾತ್ವಮಿತಿ ಸ್ಥಿತಮ್ ॥ ೩೦೯ ॥**

**ಅರ್ಥ–** ತೇನ= ಆದ್ದರಿಂದ= ಒಂದು ವರ್ಗದ ಜೀವಗಳ ಬಂಧಕ್ಕೆ, ನಿತ್ಯತ್ವವನ್ನು ಹೇಳಿರುವುದರಿಂದ, ಪ್ರಾಗ್ ಉಕ್ತಂ= ಹಿಂದೆ (ಭಾಗ ೧೧.೧೧.೧) ಹೇಳಲ್ಪಟ್ಟ, ಅವಾಸ್ತವತ್ವಂ= ಅವಾಸ್ತವತ್ವವು, ಅನಾದಿಗುಣ ಸಂಬಂಧಾತ್= ಅನಾದಿತ್ರಿಗುಣಸಂಬಂಧದ ಕಾರಣದಿಂದ, ಔಪಾಧಿಕತಾ ಏವ= ಅಸ್ವಾಭಾವಿಕತ್ವವೇ, ನ ಮಿಥ್ಯಾತ್ವಂ= ಮಿಥ್ಯಾತ್ವ ಅಲ್ಲ, ಇತಿ= ಎಂದು, ಸ್ಥಿತಂ= ಸಿದ್ಧವಾಗಿದೆ.

**ಅನುವಾದ–** ಒಂದು ಜೀವವರ್ಗಕ್ಕೆ ಸಂಸಾರಬಂಧವು ನಿತ್ಯ ಎಂದು ಭಾಗವತ ೧೧.೧೧.೭ ರಲ್ಲಿ ಹೇಳಿದೆ. ಆದ್ದರಿಂದ ೧೧.೧೧.೧ ರಲ್ಲಿ 'ನ ವಸ್ತುತಃ' ಈ ಪದಗಳಿಂದ ಹೇಳಲ್ಪಟ್ಟ ಅವಾಸ್ತವತ್ವ ಎಂದರೆ ಮಿಥ್ಯಾತ್ವ ಅಲ್ಲ; ಜೀವಾತ್ಮನ ಸ್ವರೂಪಕ್ಕೆ ಸೇರಿರದ ಅನಾದಿತ್ರಿಗುಣ ಸಂಬಂಧವೇ ಬಂಧವಾದುದರಿಂದ ಅದು ಅಸ್ವಾಭಾವಿಕ ಎಂದು ಸಿದ್ಧವಾಗಿದೆ.

**ಭಾವವಿಲಾಸಿನೀ–** ತರ್ಹಿ ನ ವಸ್ತುತ ಇತ್ಯಸ್ಯ ಕೋಽರ್ಥ ಇತ್ಯತ್ರ ಪ್ರಾಗುಕ್ತಮೇವಾರ್ಥಂ ಸ್ಮಾರಯನ್ನುಪಸಂಹರತಿ– **ಅನಾದೀತಿ** ॥ ತೇನ ನಿತ್ಯಬದ್ಧ ಇತಿ ಜೀವನಿಷ್ಠಬಂಧಸ್ಯ ನಿತ್ಯತ್ವ-ಕಥನೇನ ॥ ೩೦೯ ॥

**ವಿವರಣ–** ಪ್ರಶ್ನೆ : ಸಂಸಾರಬಂಧವು 'ಮೃಷಾ' ಅಲ್ಲ ಎಂದು ಹಿಂದಿನ ಶ್ಲೋಕದಲ್ಲಿ ಹೇಳಿದೆ. ಹಾಗಾದರೆ, ಭಾಗವತ 11.11.1 ರಲ್ಲಿ 'ನ ವಸ್ತುತಃ' - ಈ ಪದಗಳಿಗೆ ಏನು ಅರ್ಥ?

ಉತ್ತರ : ಸಂಸಾರಬಂಧವು ಸ್ವಾಭಾವಿಕ ಅಲ್ಲ ಎಂದು ಅರ್ಥ. ಜೀವಾತ್ಮನಿಗೆ ತ್ರಿಗುಣ ಸಂಬಂಧವಿದೆ. ಇದೇ ಸಂಸಾರಬಂಧ. ತ್ರಿಗುಣಗಳು ಜೀವಾತ್ಮನ ಸ್ವರೂಪವಲ್ಲ; ಹೊರಗಿನಿಂದ ಅವನಿಗೆ ಅಂಟಿಕೊಂಡಿವೆ. ಆದ್ದರಿಂದ ಸಂಸಾರಬಂಧವು ಅಸ್ವಾಭಾವಿಕ.

**ಸ್ವಯಂ ದುಃಖೀ ಪರಸ್ಯಾಪಿ ದುಃಖಮಾಕಾಂಕ್ಷತೇ ಖಲಃ ।**
**ಬ್ರಹ್ಮ ಸಂಸರತೀತ್ಯುಕ್ತಮನ್ಯಥಾ ಕೇನ ಹೇತುನಾ ॥ ೩೧೦ ॥**

**ಅರ್ಥ–** ಸ್ವಯಂ ದುಃಖೀ= ತಾನೇ ದುಃಖಿಯಾಗಿರುವ, ಖಲಃ= ಕೆಟ್ಟವನು, ಪರಸ್ಯಾಪಿ= ಬೇರೆಯವರಿಗೂ, ದುಃಖಮ್= ದುಃಖವನ್ನು, ಆಕಾಂಕ್ಷತೇ= ಬಯಸುತ್ತಾನೆ, ಅನ್ಯಥಾ= ಹೀಗಲ್ಲದಿದ್ದರೆ, ಕೇನ ಹೇತುನಾ= ಯಾವ ಕಾರಣದಿಂದ, ಬ್ರಹ್ಮ= ಬ್ರಹ್ಮನು, ಸಂಸರತಿ= ಹುಟ್ಟು- ಸಾವುಗಳ ಚಕ್ರದಲ್ಲಿ ಸಾಗುತ್ತಾನೆ, ಇತಿ= ಎಂದು, ಉಕ್ತಮ್= ಹೇಳಲ್ಪಟ್ಟಿತು?

**ಅನುವಾದ–** ದುಃಖಕ್ಕೆ ಒಳಗಾದ ಕೆಟ್ಟವರು, ಇತರರಿಗೂ ದುಃಖವಾಗಲಿ ಎಂದು ಬಯಸುತ್ತಾರೆ. ಹೀಗಲ್ಲದಿದ್ದರೆ ಬ್ರಹ್ಮನು ಹುಟ್ಟು-ಸಾವುಗಳ ಚಕ್ರದಲ್ಲಿ ಸಾಗುತ್ತಾನೆ ಎಂದು ಅದ್ವೈತಚಿಂತಕರು ಹೇಳಲು ಏನು ಕಾರಣ?

**ಭಾವವಿಲಾಸಿನೀ–** ನೀತಿವಿರುದ್ಧಂ ಚ ಭಗವತೋ ಬದ್ಧತ್ವಕಥನಮಿತ್ಯಾಹ– **ಸ್ವಯಂ ದುಃಖೀತಿ ॥** ಅನ್ಯಥಾ ಪೂರ್ವೋಕ್ತಖಲಸ್ವಭಾವಾಭಾವೇ ॥ ೩೧೦ ॥

**ವಿವರಣೆ-** (1) ಪರಮಾತ್ಮನ ಬದ್ಧತ್ವವನ್ನು ಹೇಳುವುದು ನೀತಿವಿರುದ್ಧ ಎಂದು ಈ ಶ್ಲೋಕದಲ್ಲಿ ಹೇಳುತ್ತಾರೆ.

(2) ಕೆಟ್ಟ ಸ್ವಭಾವದವರಿಗೆ ಕಷ್ಟಗಳು ಸಂಭವಿಸಿದರೆ, ಅವರು ಇತರರಿಗೂ ಕಷ್ಟಗಳು ಸಂಭವಿಸಲಿ ಎಂದು ಬಯಸುತ್ತಾರೆ. ಸಂಸಾರಿಯಾದ ಅದ್ವೈತಚಿಂತಕನು, ಬ್ರಹ್ಮನೂ ಸಂಸಾರಿಯಾಗಲಿ ಎಂದು ಬಯಸಿದ್ದಾನೆ. ಹೀಗೆ ಬಯಸಲು ಕೆಟ್ಟತನವೇ ಕಾರಣ; ಬೇರೆ ಏನೂ ಕಾರಣವಿಲ್ಲ.

**ಬದ್ಧಸ್ತು ಬದ್ಧ ಏವ ಸ್ಯಾದ್ ರಾಜ್ಞೋ ಬದ್ಧತ್ವಕೀರ್ತನಾತ್ ।**
**ಯಥಾ ಮುಕುಂದಬಂಧೋಕ್ತ್ಯಾ ಬಂಧನಿರ್ಬಂಧಭುಗ್ ಜನಃ ॥ ೩೧೧ ॥**

**ಅರ್ಥ-** ಬದ್ಧಃ= ಕಾರಾಗೃಹದಲ್ಲಿ ಬದ್ಧನಾದ ಪುರುಷನು, ರಾಜ್ಞಃ= ರಾಜನಿಗೆ, ಬದ್ಧತ್ವ ಕೀರ್ತನಾತ್= ಬದ್ಧತ್ವವನ್ನು ಹೇಳುವುದರಿಂದ, ಯಥಾ ಬದ್ಧ ಏವ ಸ್ಯಾತ್= ಶಾಶ್ವತವಾಗಿ ಬಂಧನದಲ್ಲೇ ಇರುವಂತೆ, ಮುಕುಂದಬಂಧೋಕ್ತ್ಯಾ= ಮುಕುಂದನಿಗೆ ಬಂಧವಿದೆ ಎಂಬ ಮಾತಿನಿಂದ, ಜನಃ= ವ್ಯಕ್ತಿಯು, ಬಂಧನಿರ್ಬಂಧಭುಕ್= ಬಂಧವನ್ನು ಹೆಚ್ಚು ಗಾಢವಾಗಿ ಅನುಭವಿಸುವವನು (ಭವತಿ= ಆಗುತ್ತಾನೆ).

**ಅನುವಾದ-** ಕಾರಾಗೃಹದಲ್ಲಿ ಬಂಧನದಲ್ಲಿ ಇರುವವನು. ರಾಜನನ್ನು ಕುರಿತು, ಅವನು ಬಂಧಿಯೇ ಎಂದು ಹೇಳಿದರೆ, ಅವನ ಬಂಧನವು ಮತ್ತಷ್ಟು ತೀವ್ರವಾಗುತ್ತದೆ. ಹೀಗೆಯೇ ಯಾರಾದರೂ ಪರಮಾತ್ಮನಿಗೆ ಸಂಸಾರಬಂಧವಿದೆ ಎಂದು ಹೇಳಿದರೆ, ಅವರ ಸಂಸಾರ ಬಂಧವು ಮತ್ತಷ್ಟು ಗಾಢವಾಗುತ್ತದೆ.

**ಯದ್ಯಬದ್ಧಸ್ಸ ವೈ ಬದ್ಧೋ ನಿತ್ಯಮುಕ್ತತ್ವಗೀರ್ವೃಥಾ ।**
**ಬಂಧಮಿಥ್ಯಾತ್ವತಸ್ಸಾ ಚೇದ್ಬದ್ಧಃ ಕೋ ನಾಮ ಸಿಧ್ಯತಿ ॥ ೩೧೨ ॥**

**ಅರ್ಥ-** ಅಬದ್ಧಃ= ಬದ್ಧನಲ್ಲದ= ಮುಕ್ತನಾದ, ಸ ವೈ= ಆ ಪರಮಾತ್ಮನೇ, ಯದಿ ಬದ್ಧಃ= ಬದ್ಧನಾಗಿದ್ದರೆ, ನಿತ್ಯಮುಕ್ತತ್ವಗೀಃ= (ಪರಮಾತ್ಮನು) ನಿತ್ಯಮುಕ್ತ ಎಂಬ ಮಾತು, ವೃಥಾ= ಸುಳ್ಳು ಆಗುತ್ತದೆ. ಬಂಧಮಿಥ್ಯಾತ್ವತಃ= ಬಂಧವು ಮಿಥ್ಯಾ ಆದ್ದರಿಂದ, ಸಾ= ಅದು= ನಿತ್ಯಮುಕ್ತ ಎಂಬ ಮಾತು (ಉಪಪನ್ನಾ) ಚೇತ್= ಉಪಪನ್ನವಾಗುವುದಾದರೆ, ಕಃ ನಾಮ= ಯಾರು ತಾನೆ, ಬದ್ಧಃ= ಬಂಧನವುಳ್ಳವನೆಂದು, ಸಿಧ್ಯತಿ= ಸಿದ್ಧವಾಗುತ್ತದೆ.

**ಅನುವಾದ-** ನಿತ್ಯಮುಕ್ತ ಎಂದು ಪ್ರಸಿದ್ಧನಾದ ಪರಮಾತ್ಮನೇ, ಅವನಿಗೆ ಜೀವೈಕ್ಯ- ವಿರುವುದರಿಂದ, ಬದ್ಧ-ಹೀಗೆ ಅದ್ವೈತ ಚಿಂತಕರ ಅಭಿಪ್ರಾಯ- ವಿರುವುದಾದರೆ,

ಸಂಸಾರಿ ಜೀವರು ಯಾವಾಗಲೂ ಇರುವುದರಿಂದ, ಪರಮಾತ್ಮನಿಗೆ ಬಂಧನವೇ ಶಾಶ್ವತ; ಆದ್ದರಿಂದ ಅವನು 'ನಿತ್ಯಮುಕ್ತ' ಎಂಬ ಮಾತು ಅರ್ಥಹೀನವಾಗುತ್ತದೆ.

ಬಂಧವು ಇದೆ, ಆದರೆ ಅದು ಮಿಥ್ಯಾ; ಆದ್ದರಿಂದ 'ನಿತ್ಯಮುಕ್ತ' ಎಂಬ ಮಾತು ಸಾರ್ಥಕ. ಬಂಧವು ಮಿಥ್ಯೆಯಾದರೆ ಯಾರು ಬದ್ಧ? ಯಾರೂ ಇಲ್ಲ?

**ಭಾವವಿಲಾಸಿನೀ-** ಅಬದ್ಧಃ ಸ ವೈ ಬದ್ಧ ಇತ್ಯಸ್ಯ ಅಬದ್ಧಃ ಮುಕ್ತ ಏವ ಸ ಮುಕುಂದಃ ಯದಿ ಬದ್ಧ ಇತಿ ಯೋಜನಾ । ಶುದ್ಧಂ ಬ್ರಹ್ಮೈವ ಸಂಸಾರಬದ್ಧಂ ಚೇದಿತ್ಯರ್ಥಃ । ಸಾ ನಿತ್ಯಮುಕ್ತತ್ವಗೀಃ ॥ ೩೧೨ ॥

**ಅನುತ್ತೀರ್ಣಃ ಸ್ವಯಂ ಪಂಕಾತ್ ಕಿಮನ್ಯೋತ್ತಾರಕೋ ಭವೇತ್ ।**
**ಯದಿ ಬದ್ಧಂ ಪರಂ ಬ್ರಹ್ಮ ಕಃ ಸ್ಯಾದ್ ಬಂಧಸ್ಯ ಮೋಚಕಃ ॥ ೩೧೩ ॥**

**ಅರ್ಥ-** ಪಂಕಾತ್= ಕೆಸರಿನಿಂದ, ಸ್ವಯಮ್ ಅನುತ್ತೀರ್ಣಃ= ತಾನೇ ಮೇಲೆ ಏಳದವನು, ಅನ್ಯೋತ್ತಾರಕಃ ಭವೇತ್ ಕಿಮ್?= ಬೇರೆಯವರನ್ನು ಮೇಲೆ ಎತ್ತುವನೇ? ಪರಂ ಬ್ರಹ್ಮ= ಪರಬ್ರಹ್ಮನು, ಯದಿ ಬದ್ಧಃ= ಬದ್ಧನಾಗಿದ್ದರೆ, ಕಃ= ಯಾರು, ಬಂಧಸ್ಯ= ಬಂಧದಿಂದ, ಮೋಚಕಃ ಸ್ಯಾತ್= ಬಿಡಿಸುವವನು?

**ಅನುವಾದ-** ತಾನೇ ಕೆಸರಿನಿಂದ ಮೇಲೆ ಏಳಲಾಗದವನು ಬೇರೆಯವರನ್ನು ಎತ್ತಬಲ್ಲನೇ? ಪರಬ್ರಹ್ಮನೇ ಬದ್ಧನಾಗಿದ್ದರೆ ಬಂಧವಿಮೋಚಕ ಯಾರು?

**ಭಾವವಿಲಾಸಿನೀ-** ನೀತ್ಯಂತರವಿರುದ್ಧಂ ಚ ಬ್ರಹ್ಮಣೋ ಬದ್ಧತ್ವಕಥನಮಿತ್ಯಾಹ– ಅನುತ್ತೀರ್ಣ ಇತಿ॥

**ವಿವರಣೆ-** ಪರಬ್ರಹ್ಮನು ಬಂಧವಿಮೋಚಕ. ಆದ್ದರಿಂದ ಅವನು ನಿತ್ಯಮುಕ್ತ.

**ದರಿದ್ರದರ್ಶನೇನ ಸ್ಯಾನ್ನೈವ ದಾರಿದ್ರ್ಯನಾಶನಮ್ ।**
**ಧನಿನೋಽಘೃಣಿನೋ ದೂರಾದಾರಾದ್ವಾ ದರ್ಶನೇನ ಕಿಮ್ ॥ ೩೧೪ ॥**

**ಅರ್ಥ-** ದರಿದ್ರದರ್ಶನೇನ= ಬಡವನ ದರ್ಶನದಿಂದ, ದಾರಿದ್ರ್ಯನಾಶನಂ= ಬಡತನದ ನಾಶವು, ನೈವ ಸ್ಯಾತ್= ಆಗುವುದೇ ಇಲ್ಲ. ದೂರಾದ್= ದೂರದಿಂದ, ವಾ= ಅಥವಾ, ಆರಾದ್= ಹತ್ತಿರದಿಂದ, ಅಘೃಣಿನಃ= ದಯಾಲುವಲ್ಲದ, ಧನಿನಃ= ಧನವಂತನ, ದರ್ಶನೇನ ಕಿಮ್?= ದರ್ಶನದಿಂದ ಏನು ಪ್ರಯೋಜನ?

**ಅನುವಾದ-** ಬಡವನನ್ನು ನೋಡಿದರೆ ಬಡತನದ ನಾಶವಾಗುವುದಿಲ್ಲ. ದೂರದಿಂದ ಅಥವಾ ಹತ್ತಿರದಿಂದ ದಯಾಲುವಲ್ಲದ ಧನವಂತನ ದರ್ಶನದಿಂದ ಏನು ಪ್ರಯೋಜನ?

**ಭಾವವಿಲಾಸಿನೀ– ಹರೇರ್ಬದ್ಧತ್ವೇ ತದ್ದರ್ಶನಾದನ್ಯಸ್ಯ ಬಂಧನಾಶನಂ ನ ಸ್ಯಾದಿತ್ಯತ್ರ ದೃಷ್ಟಾಂತಮಾಹ– ದರಿದ್ರೇತಿ ॥ ದಯಾದಿಗುಣಾಭಾವೇ ಶುದ್ಧಸ್ಯಾಪಿ ತಸ್ಯ ದರ್ಶನಂ ನ ಬಂಧನಾಶಕಮಿತ್ಯತ್ರ ದೃಷ್ಟಾಂತಮಾಹ– ಧನಿನ ಇತಿ ॥ ಅಘೃಣಿನಃ ಘೃಣಾ ಕೃಪಾ ಅಸ್ಯಾಸ್ತೀತಿ ಘೃಣೀ, ಘೃಣೀ ನ ಭವತೀತ್ಯಘೃಣೀ ತಸ್ಯೇತ್ಯರ್ಥಃ ॥ ೩೧೪ ॥**

**ವಿವರಣೆ-** ಬದ್ಧನೂ, ದಯಾ ಮೊದಲಾದ ಗುಣಹೀನನೂ ಆದ ಬ್ರಹ್ಮನಿಂದ ಏನೂ ಪ್ರಯೋಜನವಿಲ್ಲ.

**ತಸ್ಮಾಚ್ಛುದ್ಧಃ ಸ ಭಗವಾನಶುದ್ಧಂ ಯೋಗ್ಯಚೇತನಮ್ ।**
**ಶ್ರವಣಾದಿಯುತಂ ಭಕ್ತಂ ಪ್ರೀತಃ ಶುದ್ಧೀಕರಿಷ್ಯತಿ ॥**
**ಇತಿ ವಾಚ್ಯಮತಃ ಶುದ್ಧೌ ಸೋಽಪಿ ಶುದ್ಧಾಂತರಂ ಭವೇತ್ ॥ ೩೧೫ ॥**

**ಅರ್ಥ-** ತಸ್ಮಾದ್= ಆದ್ದರಿಂದ, ಶುದ್ಧಃ ಸ ಭಗವಾನ್= ದೋಷರಹಿತನೂ, ಗುಣಪೂರ್ಣನೂ ಆದ ಆ ಪರಮಾತ್ಮನು, ಅಶುದ್ಧಂ= ದೋಷಗಳಿಂದ ಅಶುದ್ಧವಾದ, ಶ್ರವಣಾದಿಯುತಂ= ಶ್ರವಣ ಮೊದಲಾದ ಸಾಧಕಗುಣಗಳಿಂದ ಕೂಡಿದ, ಭಕ್ತಂ= ಭಕ್ತನಾದ, ಯೋಗ್ಯಚೇತನಮ್= ಯೋಗ್ಯ ಚೇತನವನ್ನು, ಪ್ರೀತಃ= ಪ್ರಸನ್ನನಾಗಿ, ಶುದ್ಧೀಕರಿಷ್ಯತಿ= ಶುದ್ಧಿಗೊಳಿಸುತ್ತಾನೆ. ಇತಿ ವಾಚ್ಯಮ್= ಎಂದು ಹೇಳಬೇಕು. ಅತಃ= ಆದ್ದರಿಂದ= ನಿತ್ಯಶುದ್ಧನಾದ ಪರಮಾತ್ಮನಿಂದ ಶುದ್ಧವಾಗುವುದರಿಂದ, ಶುದ್ಧೌ ಅಪಿ= ಶುದ್ಧಿಯಾದಾಗಲೂ, ಸಃ= ಆ ಶುದ್ಧೀಕೃತ ಜೀವನು, ಶುದ್ಧಾಂತರಂ= ಬೇರೆ ಶುದ್ಧನೇ (ನಿತ್ಯಶುದ್ಧನಾದ ಪರಮಾತ್ಮನಿಗಿಂತ ಭಿನ್ನನಾದ ಶುದ್ಧನೇ), ಭವೇತ್= ಆಗಿರಬೇಕು.

**ಅನುವಾದ- ಬದ್ಧ ಮತ್ತು ಗುಣಹೀನನ ದರ್ಶನದಿಂದ ಪ್ರಕೃತಿ ಬಂಧದ ನಾಶವು ಆಗುವುದಿಲ್ಲವಾದ್ದರಿಂದ, ದೋಷರಹಿತನೂ, ಗುಣಪೂರ್ಣನೂ ಆದ ಪರಮಾತ್ಮನು ಅಜ್ಞಾನಾದಿದೋಷಗಳಿಂದ ಅಶುದ್ಧನಾದ, ಶ್ರವಣ ಮೊದಲಾದ ಸಾಧಕಗುಣಗಳಿಂದ ಸಂಪನ್ನನಾದ ಭಕ್ತನನ್ನು, ಪ್ರಸನ್ನನಾಗಿ ಶುದ್ಧೀಕರಿಸುತ್ತಾನೆ ಎಂದು ಹೇಳಬೇಕು. ಆದ್ದರಿಂದ ಆ ಜೀವನು, ಶುದ್ಧನಾದ ನಂತರವೂ ಶುದ್ಧನಾದ ಪರಮಾತ್ಮನಿಂದ ಭಿನ್ನನಾದ ಶುದ್ಧನೇ ಆಗಿರಬೇಕು.**

**ಭಾವವಿಲಾಸಿನೀ– ತಸ್ಮಾದ್ ಬದ್ಧಸ್ಯ ನಿರ್ಗುಣಸ್ಯ ಚ ದರ್ಶನೇನ ಬಂಧನಾಶಾಯೋಗಾತ್ । ಭಗವಾನ್ ದಯಾಲುತ್ವಾದಿಗುಣವಾನ್ । ಅತಃ ನಿತ್ಯಶುದ್ಧೇನ ಭಗವತಾ ಮಧ್ಯೇ ಶುದ್ಧೀ-ಕರಣಾತ್ । ಸಃ ಶುದ್ಧೀಕೃತೋ ಜೀವಃ ಶುದ್ಧಾಂತರಂ ನಿತ್ಯಶುದ್ಧಾದ್ ಭಗವತಃ ಭಿನ್ನಂ ಶುದ್ಧಮ್ । ನತು ಭಗವದ್ರೂಪತಯಾ ಶುದ್ಧಮ್ ॥ ೩೧೫ ॥**

**ವಿವರಣೆ-** (1) 'ತಯೋರನ್ಯಃ ಪಿಪ್ಪಲಂ ಸ್ವಾದ್ವತ್ತಿ' - ಆಥರ್ವಣೋಪನಿಷತ್
'ಜೀವಸಂಘೋ ಹ್ಯಪೂರ್ಣಃ'- ಮಾಧ್ವಬ್ರಹ್ಮಸೂತ್ರಭಾಷ್ಯ 2.3.27

ಈ ಶ್ರುತಿಗಳಿಂದ ಜೀವಾತ್ಮನು ಬದ್ಧ ಎಂದು ತಿಳಿಯುತ್ತದೆ.

(೨) 'ಅಮೃತತ್ವಸ್ಯ ಈಶಾನಃ'- ಪುರುಷಸೂಕ್ತ

'ಅಸ್ಮಾತ್ ಲೋಕಾತ್ ಪ್ರೇತ್ಯ, ಏತಮನ್ನಮಯಮಾತ್ಮಾನಮುಪಸಂಕ್ರಾಮತಿ'

- ತೈತ್ತಿರೀಯ ಉಪನಿಷತ್

'ಬಂಧಾನ್ಮೋಕ್ಷಂ ತತ್ ಏವಾಭಿವಾಂಛೇತ್'

- ಕೌಶಿಕಶ್ರುತಿ ಬ್ರಹ್ಮಸೂತ್ರ ಮಾಧ್ವಭಾಷ್ಯ ೨.೩.೨೭

'ಸ ಏತೇನೈವ ಸ್ವಾತ್ಮನಾ ಪರೇಣ ಉನ್ನೀಯತೇ'

- ಪೌಷ್ಯಾಯಣ ಶ್ರುತಿ ಬ್ರಹ್ಮಸೂತ್ರ ಮಾಧ್ವಭಾಷ್ಯ ೨.೩.೨೧

ಈ ಶ್ರುತಿಗಳಿಂದ ಜೀವಾತ್ಮನು ಬದ್ಧ ಮತ್ತು ಪರಮಾತ್ಮನು ಮೋಚಕ ಎಂದು ತಿಳಿಯುತ್ತದೆ. ಮೋಚಕನು ದೋಷದೂರನೂ, ಗುಣವಂತನೂ ಆಗಿರಲೇಬೇಕು.

ಆದ್ದರಿಂದ ಶುದ್ಧನಾದ ಪರಮಾತ್ಮನು ಅಶುದ್ಧನಾದ ಸಾಧಕ ಭಕ್ತನನ್ನು, ಪ್ರಸನ್ನಭಾವದಿಂದ ಶುದ್ಧಿಗೊಳಿಸುತ್ತಾನೆ ಎಂದೇ ಹೇಳಬೇಕು.

ಹೀಗೆ ಹೇಳಿದಾಗ ಸದಾ ಶುದ್ಧನಾದ ಪರಮಾತ್ಮ ಮತ್ತು ಪರಮಾತ್ಮನ ಅನುಗ್ರಹದಿಂದ ಒಂದು ಕಾಲದಲ್ಲಿ ಶುದ್ಧನಾದ ಜೀವಾತ್ಮರಿಗೆ ಭೇದವಿರಲೇಬೇಕು.

**ಯದ್ಯನ್ಯ ಏವ ಮಲಿನಃ ಪಟೋ ಧೌತಪಟಾಂತರಾತ್ ।**
**ಸ ಧಾವನೇಽಪಿ ಧೌತೋಽನ್ಯಃ ಪಟಃ ಸ್ಯಾತ್ ಕ್ವಾಭಿದಾ ತಯೋಃ ॥ ೩೧೬ ॥**

**ಅರ್ಥ-** ಮಲಿನಃ ಪಟಃ= ಕೊಳೆಯಾದ ಬಟ್ಟೆಯು, ಧೌತಪಟಾಂತರಾತ್= ಶುದ್ಧವಾಗಿಸಲ್ಪಟ್ಟ ಬೇರೆ ಬಟ್ಟೆಗಿಂತ, ಯದಿ ಅನ್ಯಃ ಏವ= ಬೇರೆಯೇ ಆಗಿದ್ದರೆ, ಸಃ= ಆ ಕೊಳೆಬಟ್ಟೆಯು, ಧಾವನೇ ಅಪಿ= ಶುದ್ಧಿಮಾಡಲ್ಪಟ್ಟರೂ, ಅನ್ಯಃ ಧೌತಃ ಪಟಃ ಸ್ಯಾತ್= ಇನ್ನೊಂದು ಶುದ್ಧ ವಸ್ತ್ರವಾಗುವುದು. ತಯೋಃ= ಅವೆರಡು ವಸ್ತ್ರಗಳಿಗೆ, ಅಭಿದಾ= ಅಭೇದವು, ಕ್ವ= ಎಲ್ಲಿದೆ?= ಇದೆಯೋ?

**ಅನುವಾದ-** ಮಲಿನ ವಸ್ತ್ರವೇ ಬೇರೆ. ಶುದ್ಧ ವಸ್ತ್ರವೇ ಬೇರೆ. ಮಲಿನವಸ್ತ್ರವನ್ನು ಶುದ್ಧಿ ಮಾಡಿದರೂ, ಅದು ಇನ್ನೊಂದು ಶುದ್ಧ ವಸ್ತ್ರವಷ್ಟೇ. ಮೊದಲೇ ಶುದ್ಧವಾಗಿದ್ದ ಮತ್ತು ಅನಂತರ ಶುದ್ಧವಾದ ಎರಡು ವಸ್ತ್ರಗಳಿಗೆ ಅಭೇದವೇ?

**ಭಾವವಿಲಾಸಿನೀ–** ತತ್ರ ಯುಕ್ತಿಮನ್ಯಾಪದೇಶೇನಾಹ– ಯದೀತಿ ॥ ಪ್ರಾಙ್ಮಲಿನಃ ಯದಿ ಸ್ವಮಾಲಿನ್ಯದಶಾಯಾಂ ಧೌತಪಟಾಂತರಾದನ್ಯ ಏವ, ತದಾ ಸ ಪಟಃ ಧಾವನೇಽಪಿ ಕ್ಷಾಲನೇಽಪಿ ಧೌತಃ ಶುದ್ಧಃ ಅನ್ಯಃ ಪ್ರಾಕ್ ಶುದ್ಧಪಟಾತ್ । ತಯೋಃ ಪ್ರಾಕ್ಶುದ್ಧಪಶ್ಚಾಚ್ಛುದ್ಧಪಟಯೋರಭಿದಾ

ಅಭೇದಃ ಕ್ವ? ನ ಕ್ವಾಪೀತ್ಯರ್ಥಃ । ಏವಂ ಸದಾ ಶುದ್ಧಸ್ಯ ಹರೇಃ ಪ್ರಸಾದಾನ್ಮಧ್ಯೇ ಶುದ್ಧೀಕೃತೋಽಪಿ ಜೀವಃ ಶುದ್ಧಾಂತರಮೇವ ಸ್ಯಾತ್ । ನತು ತದಭಿನ್ನ ಇತಿ ದೃಷ್ಟಾಂತಮುಖೇನ ಫಲಿತಾ ಯುಕ್ತಿರಿತಿ ದ್ರಷ್ಟವ್ಯಮ್ ॥ ೩೧೬ ॥

**ವಿವರಣೆ-** ದೃಷ್ಟಾಂತದ ವಸ್ತ್ರಗಳಂತೆ ಮೊದಲೇ (ಸದಾ) ಶುದ್ಧನಾದ ಪರಮಾತ್ಮ ಮತ್ತು ಪರಮಾತ್ಮನಿಂದ ಶುದ್ಧಿಯನ್ನು ಪಡೆದ ಜೀವಾತ್ಮರಿಗೆ ಭೇದವೇ.

**ಅತಃ ಸಾಧರ್ಮ್ಯಮೇವಾಹ ಮುಕ್ತಾನಾಂ ಹರಿರಾತ್ಮನಾ ।**
**ಪೇಟೀಸ್ಥಾನೇಕಪಟವತ್ ಸಾಯುಜ್ಯಮಪಿ ಯುಕ್ತತಾ ॥ ೩೧೭ ॥**

**ಅರ್ಥ-** ಅತಃ= ಆದ್ದರಿಂದ, ಹರಿಃ= ಶ್ರೀಕೃಷ್ಣನು, ಮುಕ್ತಾನಾಂ= ಮುಕ್ತರಿಗೆ, ಆತ್ಮನಾ= ತನ್ನಿಂದ (ತನ್ನ), ಸಾಧರ್ಮ್ಯಮೇವ= ಸಮಾನತೆಯನ್ನು ಮಾತ್ರ, ಆಹ= ಹೇಳಿದ್ದಾನೆ, ಸಾಯುಜ್ಯಮಪಿ= ಸಾಯುಜ್ಯಮುಕ್ತಿಯೂ ಕೂಡ, ಪೇಟಿಸ್ಥ= ಪೆಟ್ಟಿಗೆಯಲ್ಲಿರುವ, ಅನೇಕ ಪಟವತ್= ಅನೇಕಬಟ್ಟೆಗಳಂತೆ, ಯುಕ್ತತಾ= ಜೊತೆಯಲ್ಲಿ ಇರುವಿಕೆ.

**ಅನುವಾದ-** ನಿತ್ಯಮುಕ್ತ ಮತ್ತು ಬಂಧಮುಕ್ತರಿಗೆ ಅಭೇದವು ಅಯುಕ್ತವಾದ್ದರಿಂದ 'ಮಮ ಸಾಧರ್ಮ್ಯಮಾಗತಾಃ' (ಭಗವದ್ಗೀತೆ ೧೪.೨) ಎಂದು ಶ್ರೀಕೃಷ್ಣನು ತನಗೆ ಮತ್ತು ಮುಕ್ತರಿಗೆ ಸಮಾನತೆಯನ್ನು ಮಾತ್ರ ಹೇಳಿದ್ದಾನೆ. ಸಾಯುಜ್ಯವೂ ಒಂದು ಪೆಟ್ಟಿಗೆಯಲ್ಲಿರುವ ಅನೇಕ ವಸ್ತ್ರಗಳಂತೆ ಜೊತೆ ಇರುವಿಕೆ ಅಷ್ಟೇ.

**ಭಾವವಿಲಾಸಿನೀ–** ಅತಃ ನಿತ್ಯಮುಕ್ತಕಾದಾಚಿತ್ಕಮುಕ್ತಯೋರಭೇದಾಯೋಗಾತ್ । ಸಾಧರ್ಮ್ಯಂ ಜನನಮರಣದುಃಖಾದ್ಯಭಾವೇನ ಸಮಾನಧರ್ಮತಾಮಾಹ 'ಮಮ ಸಾಧರ್ಮ್ಯಮಾಗತಾಃ' ಇತಿ ಗೀತಾಯಾಮ್ । ತರ್ಹಿ ಸಾಯುಜ್ಯಮೋಕ್ಷೇ ಅಭೇದಃ ಸ್ಯಾದಿತ್ಯತ ಆಹ– **ಪೇಟೀಸ್ಥೇತಿ** ॥ ಪೇಟ್ಯಾಂ ಪೇಟಿಕಾಯಾಂ ಸ್ಥಿತಾನೇಕಧೌತಪಟವದ್ ಯುಕ್ತತಾ ಸದಾ ಸಂಬಂಧವಿಶೇಷಃ॥೩೧೭॥

**ವಿವರಣೆ-** ''ಇದಂ ಜ್ಞಾನಮುಪಾಶ್ರಿತ್ಯ ಮಮ ಸಾಧರ್ಮ್ಯಮಾಗತಾಃ ॥''
- ಭಗವದ್ಗೀತೆ ೧೪.೨

ಇಲ್ಲಿ ಶ್ರೀಕೃಷ್ಣನು ಅಪರೋಕ್ಷಜ್ಞಾನಿಗಳಿಗೆ ತನ್ನ ಸಮಾನತೆಯನ್ನು ಹೇಳಿದ್ದಾನೆ. ಐಕ್ಯವನ್ನು ಹೇಳಿಲ್ಲ. ಸಾಯುಜ್ಯಮೋಕ್ಷದಲ್ಲೂ ಪರಮಾತ್ಮ ಮತ್ತು ಮುಕ್ತಾತ್ಮರು ಜೊತೆಯಲ್ಲಿ ಇರುತ್ತಾರೆ. ಆ ಸ್ಥಿತಿಯಲ್ಲೂ ಐಕ್ಯವಿಲ್ಲ.

**ಕಿಂಚೇದಂ ಶಬಲತ್ವಂ ತೇ ಕಿಂ ಮಾಯಾಶಬಲತ್ವತಃ ।**
**ಉತ ಸರ್ವೇಶ್ವರತ್ವಾದಿಸದ್ಗುಣಾಂಭೋಧಿಸಂಭ್ರಮಾತ್ ॥ ೩೧೮ ॥**

**ಅರ್ಥ-** ಕಿಂಚ= ಮತ್ತು, ತೇ= ನಿನ್ನ ಮತದಲ್ಲಿ, ಇದಂ= ಈ ಪ್ರಸಿದ್ಧವಾದ, ಶಬಲತ್ವಂ= ಬ್ರಹ್ಮನ ಶಬಲತ್ವವು, ಮಾಯಾಶಬಲತ್ವತಃ ಕಿಮ್?= ಅಜ್ಞಾನ, ಪ್ರಕೃತಿ ಮೊದಲಾದ

ದೋಷಗಳ ಸಂಬಂಧದಿಂದ? ಉತ= ಅಥವಾ, ಸರ್ವೇಶ್ವರತ್ವಾದಿ= ಸರ್ವೇಶ್ವರತ್ವ ಮೊದಲಾದ, ಸದ್ಗುಣಾಂಭೋಧಿ= ಶ್ರೇಷ್ಠಗುಣಗಳ ಸಾಗರದ, ಸಂಭ್ರಮಾತ್= ಸಮಾವೇಶದಿಂದ?

**ಅನುವಾದ-** ನಿಮ್ಮ ಮತದಲ್ಲಿ ಶಬಲಬ್ರಹ್ಮನನ್ನು ಅಂಗೀಕರಿಸಿದ್ದೀರಿ. ಈ ಶಬಲತ್ವ ಎಂದರೆ ಏನು? ಮಾಯೆ (ಅಜ್ಞಾನ, ಪ್ರಕೃತಿಗಳ) ಯ ಸಂಬಂಧವೇ? ಅಥವಾ ಸರ್ವೇಶ್ವರತ್ವ ಮೊದಲಾದ ಅಮಿತ ಶ್ರೇಷ್ಠಗುಣಗಳ ಸಮಾವೇಶವೇ?

**ಭಾವವಿಲಾಸಿನೀ–** ಅಧುನಾ ನಾರಾಯಣಸ್ಯ ಶಬಲಬ್ರಹ್ಮತಾಂ ವದಂತಂ ಪ್ರತಿ ಕಿಮಿದಂ ಶಬಲತ್ವಂ ನಾಮ ದೋಷರೂಪಮಾಯಾಶಬಲತ್ವಂ ವಾ? ಅದೋಷರೂಪಮಾಯಾಶಬಲತ್ವಂ ವಾ? ಜ್ಞಾನಾದಿಶುಭಗುಣಶಬಲತ್ವಂ ವಾ? ಇತಿ ವಿಕಲ್ಪಾದ್ಯಮನಂಗೀಕಾರೇಣ ಪರಿಹೃತ್ಯ ದ್ವಿತೀಯ-ತೃತೀಯೌ ದೋಷಾನಾಪಾದಕತಯಾಂಗೀಕರೋತಿ– ಕಿಂಚೇತ್ಯಾದಿನಾ ॥ ೩೧೮ ॥

**ವಿವರಣೆ-** ಅದ್ವೈತದರ್ಶನವು ಎರಡು ಬ್ರಹ್ಮನನ್ನು ಗುರುತಿಸಿದೆ : (1) ನಿರ್ಗುಣಬ್ರಹ್ಮ (2) ಶಬಲಬ್ರಹ್ಮ. ಶಬಲಬ್ರಹ್ಮ ಎಂದರೆ ಏನು? ಮಾಯಾಶಬಲ? (ಇದು ಎರಡು ವಿಧ (1) ದೋಷಶಬಲ (2) ಅದೋಷಶಬಲ) ಅಥವಾ ಶ್ರೇಷ್ಠಗುಣಗಳ ನಿಧಿ? ಮುಂದಿನ ಶ್ಲೋಕಗಳಲ್ಲಿ ವಿವರಣೆಯು ಇದೆ.

**ಮಾಯಾದೂರತ್ವವಾಕ್ಯಾನಿ ಪೂರ್ವಂ ಧಿಕ್ಕುರ್ವತೇ ಮತಮ್ ।**
**ನಿತ್ಯಮುಕ್ತತ್ವಸಿದ್ಧ್ಯರ್ಥಂ ಪ್ರಾಗುಕ್ತವಚನಾನಿ ಚ ॥ ೩೧೯ ॥**

**ಅಜ್ಞಾನೇ ಜೀವಗತ್ವಸ್ಯೈವೋಕ್ತತ್ವಾಚ್ಚ ನ ತನ್ಮತಮ್ ॥ ೩೨೦ ॥**

**ಅರ್ಥ-** ಮಾಯಾದೂರತ್ವವಾಕ್ಯಾನಿ= ಹರಿಯು ಮಾಯಾದೂರ ಎಂಬ ವಾಕ್ಯಗಳು, ಪೂರ್ವಂ ಮತಂ= ದೋಷರೂಪವಾದ ಮಾಯೆಯಿಂದ ಶಬಲ ಎಂಬ ಮತವನ್ನು, ಧಿಕ್ಕುರ್ವತೇ= ನಿರಾಕರಿಸುತ್ತವೆ, ನಿತ್ಯಮುಕ್ತತ್ವಸಿದ್ಧ್ಯರ್ಥಂ= ಹರಿಗೆ ನಿತ್ಯಮುಕ್ತತ್ವದ ಸಿದ್ಧಿಗಾಗಿ, ಪ್ರಾಗುಕ್ತವಚನಾನಿ ಚ= ಹಿಂದೆ ಹೇಳಿದ ವಾಕ್ಯಗಳೂ ಕೂಡ (ಮೊದಲನೆಯ ಪಕ್ಷವನ್ನು ನಿರಾಕರಿಸುತ್ತವೆ) ಅಜ್ಞಾನೇ= ಅಜ್ಞಾನದಕ್ಕೆ, ಜೀವಗತ್ವಸ್ಯೈವ= ಜೀವಾಶ್ರಿತತ್ವವನ್ನೇ, ಉಕ್ತತ್ವಾಚ್ಚ= ಹೇಳಿರುವ ಕಾರಣದಿಂದಲೂ, ತನ್ಮತಮ್= ದೋಷರೂಪತ್ವ ಎಂಬ ಅರ್ಥದಲ್ಲಿ ಮಾಯಾಶಬಲತ್ವ ಎಂಬ ಅಭಿಪ್ರಾಯವು, ನ= ಕೂಡುವುದಿಲ್ಲ.

**ಅನುವಾದ-** 'ಮಾಯಾಂ ವ್ಯುದಸ್ಯ ಚಿಚ್ಛಕ್ತ್ಯಾ' ಮೊದಲಾದ ವಾಕ್ಯಗಳು ಹರಿಗೆ ಮಾಯಾ ದೂರತ್ವವನ್ನು ಹೇಳಿ ಅದರಂತೆಯೇ ಸತ್ವಂ ರಜಸ್ತಮ ಇತಿ ಗುಣಾ........' ಮೊದಲಾದ ವಾಕ್ಯಗಳು ಹರಿಗೆ ನಿತ್ಯಮುಕ್ತತ್ವವನ್ನು ಸಾಧಿಸಿ ದೋಷರೂಪವಾದ

ಮಾಯಾ ಶಬಲತ್ವವೆಂಬ ಮೊದಲನೆಯ ಪಕ್ಷವನ್ನು ನಿರಾಕರಿಸುತ್ತದೆ. ಅಜ್ಞಾನವು ಜೀವಾಶ್ರಿತ ಎಂದು ಹೇಳಿದ್ದರಿಂದಲೂ ಈ ಮೊದಲನೆಯ ಪಕ್ಷವು ಯುಕ್ತವಾಗುವುದಿಲ್ಲ.

**ಭಾವವಿಲಾಸಿನೀ–** ಮಾಯಾದೂರತ್ವವಾಕ್ಯಾನಿ 'ಮಾಯಾಂ ವ್ಯದಸ್ಯ ಚಿಚ್ಛಕ್ತ್ಯಾ' ಇತ್ಯಾದಿ-ವಾಕ್ಯಾನಿ । ಪ್ರಾಗುಕ್ತವಚನಾನಿ 'ಸತ್ತ್ವಂ ರಜಸ್ತಮ ಇತಿ ಗುಣಾ ಜೀವಸ್ಯ ನೈವ ಮೇ' ಇತ್ಯಾದಿ-ವಚನಾನಿ ॥ ೩೧೯ ॥

ಅಜ್ಞಾನೇ ಜೀವಗತತ್ವಸ್ಯ ಅಜ್ಞಾನಂ ಜೀವಾಶ್ರಿತಮಿತ್ಯಸ್ಯಾರ್ಥಸ್ಯೇತ್ಯರ್ಥಃ । ಉಕ್ತತ್ವಾದ್ ಅಹಮಜ್ಞ' ಇತಿ ಪ್ರತ್ಯಕ್ಷೇಣ ನಿವರ್ತ್ಯನಿವರ್ತಕಯೋಸ್ಸಮಾನದೇಶತ್ವನಿಯಮಾದಿತಿ ಯುಕ್ತ್ಯಾ 'ಅನಾದಿಮಾಯಯಾ ಸುಪ್ತೋ ಯದಾ ಜೀವಃ ಪ್ರಬುದ್ಧ್ಯತೇ' ಇತ್ಯಾದಿಶ್ರುತ್ಯಾ ಚ ಸಮರ್ಥಿತತ್ವಾತ್ ತನ್ಮತಂ ಹರೇರ್ದೋಷರೂಪಮಾಯಾಶಬಲತ್ವಮತಮ್ ॥ ೩೨೦ ॥

**ವಿವರಣೆ–** ಮೂರು ಪಕ್ಷಗಳಲ್ಲಿ ದೋಷರೂಪವಾದ ಮಾಯೆಯಿಂದ ಕೂಡಿದವನು ಎಂಬ ಮೊದಲನೆಯ ಪಕ್ಷವು ಅಯುಕ್ತವಾದುದೆಂದು ಇಲ್ಲಿ ಉಪಪಾದನೆ ಮಾಡಿದ್ದಾರೆ.

**ಹರೇರಿಚ್ಛಾಪಿ ಮಾಯಾಖ್ಯಾ ಮಾಯಾಖ್ಯಾ ಪ್ರಕೃತಿರ್ಜಡಾ ।**
**ಭ್ರಮಹೇತುಶ್ಚ ಮಾಯೈಕಾ ಮಾಯೇಯಂ ತ್ರಿವಿಧಾ ಮತಾ ॥ ೩೨೧ ॥**

**ಅರ್ಥ–** ಹರೇಃ= ಹರಿಯ, ಇಚ್ಛಾಪಿ= ಇಚ್ಛೆಯೂ ಕೂಡ, ಮಾಯಾಖ್ಯಾ= ಮಾಯೆ ಎಂದು ಹೆಸರುಳ್ಳದ್ದು, ಜಡಾ= ಜಡವಾದ, ಪ್ರಕೃತಿಃ= ಪ್ರಕೃತಿಯೂ, ಮಾಯಾಖ್ಯಾ= ಮಾಯಾ ಎಂಬ ಹೆಸರುಳ್ಳದ್ದು, ಭ್ರಮಹೇತುಶ್ಚ= ಮತ್ತು ಭ್ರಮಕ್ಕೆ ಕಾರಣವಾದಂತಹ, ಏಕಾ= ಒಂದು, ಮಾಯಾ= ಮಾಯೆಯು ಇದೆ, ಇಯಂ= ಈ, ಮಾಯಾ= ಮಾಯೆಯು ಹೀಗೆ, ತ್ರಿವಿಧಾ= ಮೂರು ರೀತಿಯಾದುದು ಎಂದು, ಮತಾ= ಅಭಿಪ್ರಾಯವಿದೆ.

**ಅನುವಾದ–** ಹರಿಯ ಇಚ್ಛೆಯು ಮಾಯೆ ಎಂದು ಕರೆಯಲ್ಪಡುತ್ತದೆ. ಜಡ ಪ್ರಕೃತಿಯೂ ಸಹ ಮಾಯೆ ಎಂದು ಕರೆಯಲ್ಪಡುತ್ತದೆ. ಭ್ರಮಕ್ಕೆ ಕಾರಣವಾದ ಮಾಯೆಯು ಇನ್ನೊಂದಿದೆ. ಹೀಗೆ ಈ ಮಾಯೆಯು ಮೂರು ವಿಧ ಎಂದು ಅಭಿಪ್ರಾಯವಿದೆ.

**ಭಾವವಿಲಾಸಿನೀ–** ನನು ತರ್ಹಿ 'ಸೈಷಾ ಭಗವತೋ ಮಾಯಾ' ಇತ್ಯಾದಿವಾಕ್ಯಾನಾಂ ಕಾ ಗತಿರಿತ್ಯತೋ ಮಾಯಾಂ ವಿಭಜ್ಯ ದರ್ಶಯತಿ– **ಹರೇರಿತಿ** ॥ ಯೇಯಂ ಪಂಚವಿಧಾ ಮಾಯಾ ತತ್ರ ಇಚ್ಛಾಶಕ್ತಿತೇಜೋರೂಪದೋಷಾನಾಪಾದಕಮಾಯಾಮಾದಾಯ ಇನ್ದ್ರೋ ಮಾಯಾಭಿಃ ಪುರುರೂಪ ಈಯತೇ' ಇತ್ಯಾದಿವಾಕ್ಯಾನಿ ಪ್ರವೃತ್ತಾನಿ । ಅನ್ಯಥಾ ಮಾಯಾಭಿರಿತಿ ಬಹುವಚನಂ ವ್ಯರ್ಥಂ ಸ್ಯಾತ್। ಅತಃ ಶ್ರುತ್ಯಾದಿದೋಷಾನಾಪಾದಕಮಾಯಾಶ್ರಿತತ್ವಂ ಸೂಚಿತಮಿತಿ ದ್ರಷ್ಟವ್ಯಮ್ ॥ ೩೨೧ ॥

**ವಿವರಣೆ-** ದೋಷರೂಪವಲ್ಲದ ಮಾಯಾಶಬಲತ್ವವು ಶಬಲಶಬ್ದಾರ್ಥ ಎಂಬ ಎರಡನೆಯ ಪಕ್ಷವನ್ನು ಅಂಗೀಕರಿಸಲು ಪೀಠಿಕೆಯನ್ನು ರಚಿಸುತ್ತಿದ್ದಾರೆ. **ಇಂದ್ರೋ ಮಾಯಾಭಿಃ ಪುರುರೂಪ ಈಯತೇ** ಎಂಬ ಶ್ರುತಿವಚನವು ಮಾಯಾಭಿಃ ಎಂಬ ಬಹುವಚನವನ್ನು ಪ್ರಯೋಗಿಸಿ ಅನೇಕವಿಧವಾದ ಮಾಯೆಗಳನ್ನು ಹೇಳುತ್ತದೆ. ಆದ್ದರಿಂದ ಇಲ್ಲಿ ಮೂರು ವಿಧವಾದ ಮಾಯೆಗಳನ್ನು ಹೇಳಿ ಮುಂದಿನ ಶ್ಲೋಕದಲ್ಲಿ ಇನ್ನೂ ಎರಡು ವಿಧವಾದ ಮಾಯೆಯನ್ನು ಹೇಳಿ ಈ ಯಾವ ಮಾಯೆಯೂ ಹರಿಗೆ ದೋಷಾಪಾದಕವಲ್ಲವೆಂದು ಸಮರ್ಥಿಸುತ್ತಾರೆ.

ಹರೇಃ ಶಕ್ತಿಶ್ಚ ತೇಜಶ್ಚ ತಥಾ ಮಾಯಾಪದೋದಿತೇ ।
ಮಹಾಮಾಯೇತ್ಯವಿದ್ಯೇತಿ ನಿಯತಿರ್ಮೋಹಿನೀತಿ ಚ ॥
ಪ್ರಕೃತಿರ್ವಾಸನೇತ್ಯೇವಂ ತವೇಚ್ಛಾನಂತ ಕಥ್ಯತೇ ॥ ೩೨೨ ॥

ಇತ್ಥಂ ಪುರಾಣವಚನಂ ತಥಾ ಭಾಗವತೇ ಧ್ರುವಃ ।
ಮಾಯಾಖ್ಯಯಾ ಸ್ವಶಕ್ತ್ಯೇತಿ ಮಾಯಾಖ್ಯಾಂ ಶಕ್ತಿಮಾಹ ಹಿ ॥ ೩೨೩ ॥

**ಅರ್ಥ-** ತಥಾ= ಹಾಗೆಯೇ, ಹರೇಃ= ಹರಿಯ, ಶಕ್ತಿಶ್ಚ= ಶಕ್ತಿಯೂ, ತೇಜಶ್ಚ= ಸಾಮರ್ಥ್ಯವೂ, ಮಾಯಾಪದೋದಿತೇ= ಮಾಯೆ ಎಂಬ ಪದದಿಂದ ಹೇಳಲ್ಪಟ್ಟಿವೆ, ಮಹಾಮಾಯೇತಿ= ಮಹಾಮಾಯೆ ಎಂದು, ಅವಿದ್ಯೇತಿ= ಅವಿದ್ಯೆ ಎಂದು, ನಿಯತಿಃ ಇತಿ= ನಿಯತಿ ಎಂದು, ಮೋಹಿನೀ ಇತಿ= ಮೋಹಿನೀ ಎಂದು, ಪ್ರಕೃತಿಃ= ಪ್ರಕೃತಿ ಎಂದು, ವಾಸನಾ ಇತಿ= ವಾಸನಾ ಎಂದು, ಅನಂತ= ಎಲೈ ಅನಂತನೇ, ಏವಂ= ಈ ರೀತಿಯಾಗಿ, ತವೇಚ್ಛಾ= ನಿನ್ನ ಇಚ್ಛೆಯು, ಕಥ್ಯತೇ= ಹೇಳಲ್ಪಡುತ್ತದೆ. ಇತ್ಥಂ= ಈ ರೀತಿ, ಪುರಾಣವಚನಂ= ಪುರಾಣವಚನವು ಇದೆ, ತಥಾ= ಅದರಂತೆ, ಭಾಗವತೇ= ಭಾಗವತದಲ್ಲಿ, ಧ್ರುವಃ= ಧ್ರುವನು, ಮಾಯಾಖ್ಯಯಾ ಸ್ವಶಕ್ತ್ಯೇತಿ= ಮಾಯೆ ಎಂದು ಕರೆಯಲ್ಪಡುವ ಸ್ವಶಕ್ತಿಯಿಂದ ಎಂದು, ಮಾಯಾಖ್ಯಾಂ= ಮಾಯೆ ಎಂಬ ಹೆಸರಿನ, ಶಕ್ತಿಂ= ಶಕ್ತಿಯನ್ನು, ಆಹ ಹಿ= ಹೇಳಿದ್ದಾನಷ್ಟೆ.

**ಅನುವಾದ-** ಹಾಗೆಯೇ ಹರಿಯ ಶಕ್ತಿಯು ಮತ್ತು ಸಾಮರ್ಥ್ಯವು ಮಾಯಾಶಬ್ದದಿಂದ ಹೇಳಲ್ಪಡುತ್ತವೆ. ಎಲೈ ಅನಂತನೇ! ನಿನ್ನ ಇಚ್ಛೆಯೇ ಮಹಾಮಾಯೆ ಎಂದೂ, ಅವಿದ್ಯೆ ಎಂದೂ, ನಿಯತಿ ಎಂದೂ, ಮೋಹಿನೀ ಎಂದೂ, ಪ್ರಕೃತಿ ಎಂದೂ, ವಾಸನಾ ಎಂದೂ ಅನೇಕ ವಿಧವಾಗಿ ಹೇಳಲ್ಪಡುತ್ತದೆ ಎಂಬ ಪುರಾಣ ವಚನವು ಮತ್ತು ಭಾಗವತದಲ್ಲಿ ಧ್ರುವನು ಹೇಳಿದ **'ಮಾಯಾಖ್ಯಯಾಸ್ವಶಕ್ತ್ಯಾ'** ಎಂಬ ವಚನವೂ ಮಾಯೆ ಎಂಬ ಹೆಸರಿನ ಹರಿಯ ಶಕ್ತಿಯನ್ನು ಹೇಳುತ್ತವೆಯಷ್ಟೆ.

**ಭಾವವಿಲಾಸಿನೀ-**ಇಚ್ಛಾಯಾ ಮಾಯಾಶಬ್ದವಾಚ್ಯತ್ವೇ ಪ್ರಮಾಣಮಾಹ– **ಮಹಾಮಾಯೇತಿ** ॥ 'ಸ್ವಚ್ಛಂದೋಪಾತ್ತದೇಹಾಯ ತಸ್ಯೇಚ್ಛಯಾತ್ತವಪುಷಃ ಮಾಯಾಮನುಜ ಈಶ್ವರೇ'

ಇತ್ಯಾದಿಭಾಗವತವಾಕ್ಯಾನಾಮೈಕಾರ್ಥ್ಯಲಾಭಾಯಾಪಿ ಮಾಯೇಚ್ಛಾಶಬ್ದೌ ಪರ್ಯಾಯಾವಿತಿ ಗಮ್ಯತೇ। ಮಾಯಾಶಬ್ದಸ್ಯ ಭಗವಚ್ಛಕ್ತಿವಾಚಕತ್ವೇ ಪ್ರಮಾಣಮಾಹ– **ತಥೇತಿ** ॥ ಮಾಯಾಖ್ಯಯಾ ಸ್ವಶಕ್ತ್ಯೇತ್ಯನೇನ 'ಏಕಸ್ತ್ವಮೇವ ಭಗವಾನಿದಮಾತ್ಮಶಕ್ತ್ಯಾ ಮಾಯಖ್ಯಯೋರುಗುಣಯಾ ಮಹ-ದಾದ್ಯಶೇಷಮ್' ಇತಿ ವಚನಂ ಸಂಗೃಹ್ಣಾತಿ । ಅತ್ರ ಮಾಯೇತ್ಯಾಖ್ಯಾ ನಾಮ ಯಸ್ಯಾಸ್ತಯಾ ಸ್ವಶಕ್ತ್ಯೇತ್ಯನೇನೇಶ್ವರಶಕ್ತೇರ್ಮಾಯಾಶಬ್ದವಾಚ್ಯತ್ವಂ ಸ್ಪಷ್ಟಮುಕ್ತಮಿತಿ ದ್ರಷ್ಟವ್ಯಮ್ ॥೩೨೨–೩೨೩॥

**ವಿವರಣೆ- 'ಮಹಾಮಾಯೇ ತ್ಯವಿದ್ಯೇತಿ'** ಎಂದು ಆಚಾರ್ಯರು ಉದಾಹರಿಸಿರುವ ಸ್ಮೃತಿ ವಚನ. ಭಾಗವತದಲ್ಲಿ ಧ್ರುವನ ವಚನವೆಂದರೆ 'ಏಕಸ್ತ್ವಮೇವ ಭಗವಾನಿದಮಾತ್ಮಶಕ್ತ್ಯಾ ಮಾಯಾಖ್ಯಯೋಃಗುಣಯಾಮಹದಾದ್ಯಶೇಷಮ್' ಎಂಬ ವಚನ. ಈ ವಾಕ್ಯದಲ್ಲಿಯೂ ಸ್ಪಷ್ಟವಾಗಿ ಮಾಯೆಯನ್ನು ಶಕ್ತಿ ಎಂದೇ ಹೇಳಿದ್ದಾರೆ. ಆದ್ದರಿಂದ ಈ ಪ್ರಮಾಣಗಳಿಂದ ಮಾಯಾಶಬ್ದಕ್ಕೆ ಶಕ್ತಿ ಎಂಬ ನಾಲ್ಕನೆಯ ಅರ್ಥವು ಸಿದ್ಧವಾಗುತ್ತದೆ ಎಂದು ಅಭಿಪ್ರಾಯ.

ಅಂತಸ್‌ಸ್ಥಃ ಸರ್ವಭೂತಾನಾಮಾತ್ಮಾ ಯೋಗೇಶ್ವರೋ ಹರಿಃ ।
ಸ್ವಮಾಯಯಾಽವೃಣೋದ್ ಗರ್ಭಂ ವೈರಾಟ್ಯಾಃ ಕುರುತಂತವೇ ॥ ೩೨೪ ॥

ಯದ್ಯಪ್ಯಸ್ತ್ರಂ ಬ್ರಹ್ಮಶಿರಸ್ತ್ವಮೋಘಂ ಚಾಪ್ರತಿಕ್ರಿಯಮ್ ।
ವೈಷ್ಣವಂ ತೇಜ ಆಸಾದ್ಯ ಸಮಶಾಮ್ಯದ್ ಭೃಗೂದ್ವಹ ॥ ೩೨೫ ॥

ಇತಿ ಭಾಗವತೇ ಸೂತೋ ಮಾಯೇತ್ಯುಕ್ತ್ವಾ ಪುನಶ್ಚ ತಾಮ್ ।
ವೈಷ್ಣವಂ ತೇಜ ಇತ್ಯಾಹ ಸ್ವಮಾಯಾ ಕಿಲ ಸಾ ಹರೇಃ ॥ ೩೨೬ ॥

**ಅರ್ಥ-** ಸರ್ವಭೂತಾನಾಂ= ಎಲ್ಲ ಜೀವರ, ಅಂತಸ್ಥಃ= ಒಳಗಿರುವ, ಆತ್ಮಾ= ಸ್ವಾಮಿಯಾದ, ಯೋಗೇಶ್ವರಃ= ಯೋಗೇಶ್ವರನಾದ, ಹರಿಃ= ಹರಿಯು, ಕುರುತಂತವೇ= ಕುರು ಸಂತಾನವನ್ನು ಉಳಿಸುವುದಕ್ಕೋಸ್ಕರ, ವೈರಾಟ್ಯಾಃ= ವಿರಾಟನ ಮಗಳಾದ ಉತ್ತರೆಯ, ಗರ್ಭಂ= ಗರ್ಭವನ್ನು, ಸ್ವಮಾಯಯಾ= ತನ್ನ ಮಾಯೆಯಿಂದ, ಆವೃಣೋದ್= ಸುತ್ತುವರಿದನು, ಯದ್ಯಪಿ= ಯದ್ಯಪಿ, ಬ್ರಹ್ಮಶಿರಃ ಅಸ್ತ್ರಂ= ಬ್ರಹ್ಮಶಿರ ಎಂಬ ಅಸ್ತ್ರವು, ಅಮೋಘಂ= ವ್ಯರ್ಥವಾದುದಲ್ಲ, ಚ= ಮತ್ತು, ಅಪ್ರತಿಕ್ರಿಯಂ= ಪ್ರತಿಕಾರಶೂನ್ಯವಾದುದು (ಆದರೂ), ಭೃಗೂದ್ವಹ= ಎಲೈ ಭೃಗುಕುಲಶ್ರೇಷ್ಠ ಶೌನಕನೇ, ವೈಷ್ಣವಂ ತೇಜಃ= ವಿಷ್ಣುವಿನ ಸಾಮರ್ಥ್ಯವನ್ನು, ಆಸಾದ್ಯ= ಸಂಧಿಸಿ, ಸಮಶಾಮ್ಯದ್= ಶಾಂತವಾಯಿತು, ಇತಿ= ಎಂದು, ಭಾಗವತೇ= ಭಾಗವತದಲ್ಲಿ, ಸೂತಃ= ಸೂತರು, ಮಾಯೇತ್ಯುಕ್ತ್ವಾ= ಮಾಯೆ ಎಂಬ ಪದವನ್ನು ಪ್ರಯೋಗಿಸಿ, ಪುನಶ್ಚ= ಮತ್ತೆ, ತಾಮ್= ಅದನ್ನು ವೈಷ್ಣವಂ ತೇಜಃ= ವಿಷ್ಣುವಿನ ಸಾಮರ್ಥ್ಯ, ಇತಿ= ಎಂದು, ಆಹ= ಹೇಳಿದ್ದಾರೆ, ಸಾ= ಆ ವಿಷ್ಣುಸಾಮರ್ಥ್ಯವು, ಹರೇಃ= ಹರಿಯ, ಸ್ವಮಾಯಾ ಕಿಲ= ಸ್ವರೂಪಭೂತವಾದ ಸಾಮರ್ಥ್ಯವಷ್ಟೆ.

**ಅನುವಾದ-** ಸರ್ವಜೀವಾಂತರ್ಯಾಮಿಯಾದ ಯೋಗೇಶ್ವರನಾದ ಸ್ವಾಮಿಯಾದ ಹರಿಯು ಕುರುಸಂತಾನವನ್ನು ಉಳಿಸುವುದಕ್ಕೋಸ್ಕರ ಉತ್ತರೆಯ ಗರ್ಭವನ್ನು ಪ್ರವೇಶಿಸಿ ತನ್ನ ಮಾಯೆಯಿಂದ ಅದನ್ನು ಆವರಿಸಿದನು. ಯದ್ಯಪಿ ಬ್ರಹ್ಮಶಿರಸ್ ಎಂಬ ಅಸ್ತ್ರವು ವ್ಯರ್ಥವಾಗುವುದಲ್ಲ ಮತ್ತು ಪ್ರತಿಕ್ರಿಯಶೂನ್ಯವಾದುದು. ಆದರೂ ಎಲೈ ಭೃಗುಕುಲೋತ್ಪನ್ನನಾದ ಶೌನಕನೇ! ವಿಷ್ಣುವಿನ ತೇಜಸ್ಸನ್ನು ಸಂಧಿಸಿ ಆ ಅಸ್ತ್ರವು ಶಾಂತವಾಯಿತು ಎಂದು ಭಾಗವತದಲ್ಲಿ ಸೂತರು ಮೊದಲು ಮಾಯೆ ಎಂದು ಹೇಳಿ ಪುನಃ ಅದನ್ನೇ ವಿಷ್ಣುಸಾಮರ್ಥ್ಯವೆಂದು ಹೇಳಿದ್ದಾರೆ. ಆ ಮಾಯೆಯು ಹರಿಯ ಸ್ವರೂಪಭೂತವಾದ ಸಾಮರ್ಥ್ಯವಷ್ಟೆ.

**ಭಾವವಿಲಾಸಿನೀ–** ಮಾಯಾಶಬ್ದಸ್ಯ ಭಗವತ್ತೇಜೋವಾಚಕತ್ವೇ ಪ್ರಮಾಣಮಾಹ– **ಅಂತಸ್ಸ್ಥ ಇತ್ಯಾದಿನಾ** ॥ ಮಾಯೇತ್ಯುಕ್ತ್ವಾ ಪೂರ್ವಪದ್ಯೇ ಸ್ವಮಾಯಯೇತಿ ಮಾಯಾಪದೇನೋಕ್ತ್ವಾ ವೈಷ್ಣವಂ ತೇಜ ಆಸಾದ್ಯೇತಿ ದ್ವಿತೀಯಪದ್ಯೇ ವೈಷ್ಣವಂ ತೇಜ ಇತ್ಯಾಹೇತಿ ಸಂಬಂಧಃ । ಸಾ ತೇಜೋರೂಪಾ ಮಾಯಾ ಸ್ವಮಾಯಾ ಕಿಲ । 'ಸ್ವಮಾಯಯಾಽವೃಣೋದ್ ಗರ್ಭಮ್' ಇತ್ಯತ್ರ ಸ್ವಮಾಯಾಪದೇನ ಕಥನಾತ್। ಸ್ವರೂಪಭೂತಾ ಹಿ ಮಾಯಾ ಸ್ವಮಾಯಾ । ಇಚ್ಛಾದಿರೂಪಮಾಯಾವಿವಕ್ಷಯಾ ಸ್ವಮಾಯಾ ಸ್ವಯೋಗಮಾಯೇತ್ಯೇವ ಪ್ರಾಯಶಃ ಪ್ರಯೋಗಃ । ಅನ್ಯಮಾಯಾವಿವಕ್ಷಾಯಾಂ ತು 'ಮಾಯಾಂ ವ್ಯುದಸ್ಯ ಚಿಚ್ಛಕ್ತ್ಯಾ' ಇತ್ಯಾದೌ ಸಾಮಾನ್ಯತ ಏವ ಪ್ರಯೋಗಃ । ಅತಃ ಪ್ರಯೋಗವೈಲಕ್ಷಣ್ಯೇನಾಪಿ ಮಾಯಾದ್ವೈವಿಧ್ಯಮೂಹ್ಯತ ಇತಿ ಭಾವಃ ॥ ೩೨೪–೩೨೬ ॥

**ವಿವರಣೆ-** ಮಾಯಾಶಬ್ದಕ್ಕೆ ಸಾಮರ್ಥ್ಯ ಎಂಬ ಅರ್ಥವನ್ನು ಈ ಶ್ಲೋಕಗಳಲ್ಲಿ ಉಪಪಾದನೆ ಮಾಡುತ್ತಾರೆ. ಮೊದಲನೆಯ ಶ್ಲೋಕದಲ್ಲಿ ಮಾಯಾ ಎಂಬ ಶಬ್ದವನ್ನು ಉಪಯೋಗಿಸಿದ ಸೂತರು ಅದರ ಮುಂದಿನ ಶ್ಲೋಕದಲ್ಲಿ ಮಾಯೆಯನ್ನು ವೈಷ್ಣವಂ ತೇಜಃ ವಿಷ್ಣುವಿನ ಸಾಮರ್ಥ್ಯ ಎಂದು ವ್ಯಾಖ್ಯಾನ ಮಾಡಿದ್ದಾರೆ. ಆ ಮಾಯೆಯೇ ಸ್ವಮಾಯಯಾ ಎಂದು ಮೊದಲನೆಯ ಶ್ಲೋಕದಲ್ಲಿ ಹೇಳಲ್ಪಟ್ಟಿದೆ. ಆದ್ದರಿಂದ ವಿಷ್ಣುವಿನ ಸ್ವರೂಪವೇ ಆದ ಸಾಮರ್ಥ್ಯವೂ ಸಹ ಮಾಯಾಶಬ್ದದ ಒಂದು ಅರ್ಥವೆಂದು ಸಿದ್ಧವಾಗಿದೆ. ಹೀಗೆ ಮಾಯಾ ಶಬ್ದವು ಐದು ವಿಧವಾದ ಅರ್ಥವನ್ನು ಹೊಂದಿದೆ ಎಂದು ಸಿದ್ಧವಾಗುತ್ತದೆ.

ಇಚ್ಛಾದಿರೂಪಾ ಯಾ ಮಾಯಾ ತಯಾ ಮಾಯಾಮಯೋಽಸ್ತ್ವಯಮ್ ।
ಸ್ವಚ್ಛಂದವೃತ್ತಿತಾ ಸರ್ವಶಕ್ತತಾ ಚ ಸಮರ್ಥತಾ ॥ ೩೨೭ ॥

ಸಿದ್ಧೇನ್ಮಹಾತ್ಮನಸ್ತೇನ ಮಾಲಿನ್ಯಂ ನಹಿ ಕಿಂಚನ ।
ಪ್ರಾಚುರ್ಯಾರ್ಥೋ ಮಯಟ್‌ಶಬ್ದೋ ವಕ್ತಿ ತೈಃ ಪೂರ್ಣತಾಂ ಕಿಲ ॥ ೩೨೮ ॥

**ಅರ್ಥ-** ಇಚ್ಛಾದಿರೂಪಾ= ಇಚ್ಛಾಶಕ್ತಿ ಮತ್ತು ಸಾಮರ್ಥ್ಯರೂಪವಾದ, ಯಾ ಮಾಯಾ= ಯಾವ ಮಾಯೆಯೋ, ತಯಾ ತು= ಆ ಮಾಯೆಯಿಂದಲೇ, ಅಯಂ= ಈ ಪರಮಾತ್ಮನು, ಮಾಯಾಮಯಃ ಅಸ್ತು= ಮಾಯಾಮಯನಾಗಲೀ, ತೇನ= ಆದರಿಂದ, ಮಹಾತ್ಮನಃ= ಮಹಾನುಭಾವನಾದ ಅವನಿಗೆ, ಸ್ವಚ್ಛಂದವೃತ್ತಿತಾ= ತನ್ನ ಇಚ್ಛಾನುಸಾರವಾಗಿ ಇರುವಿಕೆ, ಸರ್ವಶಕ್ತತಾ= ಸರ್ವಶಕ್ತಿ, ಚ= ಮತ್ತು, ಸಮರ್ಥತಾ= ತೇಜಸ್, ಸಿದ್ಧ್ಯೇತ್= ಸಿದ್ಧವಾಗುತ್ತದೆ, ಕಿಂಚನ= ಯಾವ, ಮಾಲಿನ್ಯಂ= ದೋಷವು, ನಹಿ= ಸಿದ್ಧವಾಗುವುದಿಲ್ಲವಷ್ಟೆ, ಪ್ರಾಚುರ್ಯಾರ್ಥಃ= ಪೂರ್ಣ ಎಂಬ ಅರ್ಥದ, ಮಯಟ್‌ಶಬ್ದಃ= ಮಯಟ್-ಪ್ರತ್ಯಯವು, ತೈಃ= ಆ ಇಚ್ಛಾ ಶಕ್ತಿ ತೇಜಸ್‌ಗಳಿಂದ, ಪೂರ್ಣತಾಂ= ಪೂರ್ಣತ್ವವನ್ನು, ವಕ್ತಿ ಕಿಲ= ಹೇಳುತ್ತದೆಯಷ್ಟೆ.

**ಅನುವಾದ- ಇಚ್ಛಾ, ಶಕ್ತಿ ಮತ್ತು ಸಾಮರ್ಥ್ಯ-ಇದು ತ್ರಿವಿಧಮಾಯೆ. ಈಶ್ವರನು ಅದರಿಂದಲೇ ಮಾಯಾಮಯನಾಗಲಿ. ಅದರಿಂದ ಆ ಮಹಾನುಭಾವನಿಗೆ ಸ್ವೇಚ್ಛಾನುಸಾರಿತ್ವವು, ಸರ್ವಶಕ್ತಿಯು ಮತ್ತು ಸರ್ವಸಾಮರ್ಥ್ಯವು ಸಿದ್ಧವಾಗುತ್ತದೆ. ಯಾವ ದೋಷವೂ ಉಂಟಾಗುವುದಿಲ್ಲ. ಮಾಯಾಮಯ ಎಂಬಲ್ಲಿ ಇರುವ ಮಯಟ್ ಪ್ರತ್ಯಯಕ್ಕೆ ಪೂರ್ಣ ಎಂದು ಅರ್ಥ. ಇಚ್ಛಾ, ಶಕ್ತಿ ಸಾಮರ್ಥ್ಯಗಳಿಂದ ಪೂರ್ಣತ್ವವನ್ನೇ ಈ ಶಬ್ದವು ಹೇಳುತ್ತದೆಯಷ್ಟೆ.**

**ಭಾವವಿಲಾಸಿನೀ–** ಇಚ್ಛಾದಿರೂಪಮಾಯಾಮಾದಾಯ ಕ್ವಚಿತ್ ಪುರಾಣಾದೌ ಹರೇರ್ಮಾಯಾಮಯತ್ವೋಕ್ತಿರಪಿ ಮಾಹಾತ್ಮ್ಯಸಾಧಿಕೇತ್ಯುಪಪಾದಯತಿ–**ಇಚ್ಛಾದಿರೂಪೇತಿ** ॥ ಅಯಂ ಭಗವಾನ್ । ತೇನೇಚ್ಛಾದಿರೂಪಮಾಯಾಮಯತ್ವೇನ ಮಾಲಿನ್ಯಂ ನಹಿ । ಏತದುಪಪಾದಯತಿ– **ಪ್ರಾಚುರ್ಯಾರ್ಥ ಇತಿ** ॥ ತೈರಿಚ್ಛಾಶಕ್ತಿತೇಜೋಭಿಃ । ಪೂರ್ಣೇಚ್ಛಾವತ್ತ್ವಪೂರ್ಣಶಕ್ತಿತ್ವಪೂರ್ಣತೇಜಸ್ತ್ವರೂಪಮಹಿಮಾಪಾದಕ ಏವ । ಮಯಟೋ ವಿಕಾರಾರ್ಥತ್ವೇ ಕಥಂಚಿನ್ಮಾಲಿನ್ಯಂ ಸ್ಯಾತ್ । ತಚ್ಚ ವಿಕಾರಶಬ್ದಾನ್ನೇತಿ ಚೇನ್ನ ಪ್ರಾಚುರ್ಯಾದ್' ಇತಿ ಸೂತ್ರೇಣ ನಿರಾಕೃತಮ್ । ಪ್ರಾಚುರ್ಯಾರ್ಥತ್ವೇ ಉಕ್ತರೀತ್ಯಾ ಮಹಿಮೈವ ನ ಮಾಲಿನ್ಯಮಿತಿ ಭಾವಃ ॥ ೩೨೭–೩೨೮ ॥

**ವಿವರಣೆ-** ಪುರಾಣಗಳಲ್ಲಿ ಕೆಲವು ಕಡೆ ಈಶ್ವರನಲ್ಲಿ ಮಾಯಾಮಯ ಶಬ್ದಪ್ರಯೋಗವಿದೆ. ಆ ಶಬ್ದವು ಹೇಗೆ ಉಪಪನ್ನವಾಗುವುದೆಂದು ಇಲ್ಲಿ ಪ್ರತಿಪಾದನೆ ಮಾಡುತ್ತಾರೆ. ಇಚ್ಛೆಯು ಪೂರ್ಣವೆಂದರೆ ಯಾವ ಇಚ್ಛೆಯೂ ಭಗ್ನವಾಗುವುದಿಲ್ಲ ಎಂದು ಅರ್ಥ. ಶಕ್ತಿ ಮತ್ತು ಸಾಮರ್ಥ್ಯಗಳು ಪೂರ್ಣವೆಂದರೆ ನಿರವಧಿಕವಾದ ಶಕ್ತಿ ಮತ್ತು ನಿರವಧಿಕವಾದ ಸಾಮರ್ಥ್ಯವಿದೆ ಎಂದು ಅರ್ಥ. ಹೀಗೆ ಗುಣವೇ ಸಿದ್ಧವಾಗುತ್ತದೆ. ಯಾವ ದೋಷವೂ ಸಿದ್ಧವಾಗುವುದಿಲ್ಲ. ಆದ್ದರಿಂದ ಇಂತಹ ದೋಷರೂಪವಲ್ಲದ ಮಾಯಾ ಸಂಬಂಧವನ್ನು ಪರಮಾತ್ಮನಿಗೆ ಒಪ್ಪಬಹುದೆಂಬ ಎರಡನೆಯ ಪಕ್ಷವನ್ನು ಇಲ್ಲಿ ಸಮರ್ಥಿಸುತ್ತಿದ್ದಾರೆ.

**ಅನೇಕಾರ್ಥಪದಸ್ಯಾರ್ಥೋ ಗ್ರಾಹ್ಯಃ ಪ್ರಕರಣೋಚಿತಃ ।**
**ನಹಿ ಸೈಂಧವಶಬ್ದೇನ ವಕ್ತ್ಯಶ್ವಂ ಭುಕ್ತಿಕಾಮುಕಃ ॥ ೩೨೯ ॥**

**ಅರ್ಥ-** ಅನೇಕಾರ್ಥಪದಸ್ಯ= ಅನೇಕಾರ್ಥವುಳ್ಳ ಪದಕ್ಕೆ, ಪ್ರಕರಣೋಚಿತಃ= ಆಯಾ ಸಂದರ್ಭಕ್ಕೆ ಯೋಗ್ಯವಾದ, ಅರ್ಥಃ= ಅರ್ಥವು, ಗ್ರಾಹ್ಯಃ= ಸ್ವೀಕರಿಸಲ್ಪಡಬೇಕು, ಭುಕ್ತಿ ಕಾಮುಕಃ= ಊಟವನ್ನು ಬಯಸುವವನು, ಸೈಂಧವಶಬ್ದೇನ= ಸೈಂಧವ ಎಂಬ ಶಬ್ದದಿಂದ, ಅಶ್ವಂ= ಅಶ್ವವನ್ನು, ನ ವಕ್ತಿ= ಹೇಳುವುದಿಲ್ಲ.

**ಅನುವಾದ-** ನಾನಾರ್ಥಕ ಶಬ್ದಗಳಿಗೆ ಆಯಾ ಪ್ರಕರಣಗಳಿಗೆ ತಕ್ಕ ಅರ್ಥವನ್ನು ಸ್ವೀಕರಿಸಬೇಕು. ಭೋಜನವನ್ನು ಮಾಡುವವನು ಸೈಂಧವ ಶಬ್ದದಿಂದ ಕುದುರೆಯನ್ನು ಹೇಳುವುದಿಲ್ಲವಷ್ಟೆ.

**ಭಾವವಿಲಾಸಿನೀ–** ಮಾಯಾಮಯೇತಿ ಶಬ್ದಸ್ಯ ಭಗವತಿ ಪ್ರಯೋಗೇ ದೋಷರೂಪ-ಮಾಯಾಯಾ ಅಪಿ ಸಂಗ್ರಹಃ ಕುತೋ ನೇತ್ಯತ ಆಹ–**ಅನೇಕಾರ್ಥ ಇತಿ** ॥ ಪ್ರಕರಣೋಚಿತಃ ಶುಭಪ್ರಕರಣೇ ಶುಭಾರ್ಥತ್ವಂ ಅಶುಭಪ್ರಕರಣೇ ಅಶುಭಾರ್ಥತ್ವಮಿತಿ ಪ್ರಕರಣೋಚಿತ ಇತ್ಯರ್ಥಃ ॥ ೩೨೯ ॥

**ವಿವರಣೆ-** ಮಾಯಾಶಬ್ದಕ್ಕೆ ಗುಣವೂ ಅರ್ಥ ಮತ್ತು ದೋಷವೂ ಅರ್ಥ. ಭಗವಂತನಿಗೆ ಅನ್ವಯಿಸಿ ಮಾಯಾಶಬ್ದವು ಪ್ರಯೋಗಿಸಲ್ಪಟ್ಟಾಗ ಭಗವಂತನು ಶುಭವಸ್ತುವಾದ ಪ್ರಯುಕ್ತ ಅಲ್ಲಿ ಶುಭವಾದ ಅರ್ಥವನ್ನೇ ಸ್ವೀಕರಿಸಬೇಕು. ಹೀಗೆ ಮಾಯಾಶ್ರಯತ್ವವನ್ನು ಪರಮಾತ್ಮನಿಗೆ ಒಪ್ಪಬಹುದು ಎಂದು ತಾತ್ಪರ್ಯ.

**ಮಾಯಾಂ ತು ಪ್ರಕೃತಿಂ ವಿದ್ಯಾನ್ಮಾಯಿನಂ ತು ಮಹೇಶ್ವರಮ್ ।**
**ಇತಿ ಶ್ರುತೌ ತು ಯಾ ಮಾಯೇತ್ಯುಕ್ತಾ ಸಾ ಪ್ರಕೃತಿರ್ಜಡಾ ॥ ೩೩೦ ॥**

**ಅರ್ಥ-** ಮಾಯಾಂತು.... ಮಹೇಶ್ವರಮ್= ಮಾಯಾಂತು...., ಇತಿ= ಎಂಬ, ಶ್ರುತೌ= ಶ್ರುತಿಯಲ್ಲಿ, ಯಾ= ಯಾವ ವಸ್ತುವು, ಮಾಯೇತ್ಯುಕ್ತಾ= ಮಾಯೆ ಎಂದು ಹೇಳಲ್ಪಡುತ್ತದೆಯೋ, ಸಾ= ಆ ವಸ್ತುವು, ಜಡಾ= ಜಡವಾದ, ಪ್ರಕೃತಿಃ= ಪ್ರಕೃತಿಯು.

**ಅನುವಾದ-** 'ಮಾಯಾಂ ತು ಪ್ರಕೃತಿಂ ವಿದ್ಯಾತ್' ಎಂಬ ಶ್ರುತಿಯಲ್ಲಿ ಹೇಳಿದ ಮಾಯೆಯು ಜಡರೂಪವಾದ ಪ್ರಕೃತಿ.

**ಭಾವವಿಲಾಸಿನೀ–** ದೋಷರೂಪಮಾಯಾಪಿ ದ್ವಿವಿಧಾ ಭ್ರಮಕರೀ ಪ್ರಕೃತಿರೂಪಾ ಚೇತಿ । ತತ್ರಾದ್ಯೈವ ಭಗವತ್ಯತ್ಯಂತಾನುಪಪನ್ನಾ । ದ್ವಿತೀಯಾಂ ತು ಇಚ್ಛಾದಿವತ್ ಸ್ವನಿಷ್ಠಾಂ ನ ಕರೋತಿ । ಕಿಂತು ಕುಂಭಕಾರೋ ಮೃದಮಿವ ಸೃಷ್ಟಿಕಾಲೇ ತಾಮುಪಾದಾನೀಕೃತ್ಯ ಜಗತ್ ಸೃಜತಿ । ಅನ್ಯದಾ ತಸ್ಯಾಮಪ್ಯುದಾಸ್ತ ಇತ್ಯಾಹ– **ಮಾಯಾಂ ತು ಪ್ರಕೃತಿಂ ವಿದ್ಯಾದಿತಿ** ॥ ೩೩೦ ॥

**ವಿವರಣೆ-** ದೋಷರೂಪ ಮಾಯೆಯೂ ಸಹ ಭ್ರಾಂತಿಜನಕ ಮತ್ತು ಪ್ರಕೃತಿ ಎಂದು ಎರಡು ವಿಧ. ಅವುಗಳಲ್ಲಿ ಭ್ರಾಂತಿಜನಕಮಾಯೆಯನ್ನು ಪರಮಾತ್ಮನಿಗೆ ಒಪ್ಪುವುದಿಲ್ಲ. ಎರಡನೆಯ ಮಾಯೆಯು ಭಗವಂತನಲ್ಲಿ ಸ್ವೀಕರಿಸಲ್ಪಡುತ್ತದೆ. ಅಷ್ಟರಿಂದಲೇ ಭಗವಂತನಿಗೆ ಪ್ರಾಕೃತತ್ವವಾಗಲೀ ಅಥವಾ ಬೇರೆಯ ದೋಷವಾಗಲಿ ಬರುವುದಿಲ್ಲ. ಕುಂಬಾರನು ಹೇಗೆ ಮಣ್ಣನ್ನು ಉಪಯೋಗಿಸಿ ಮಡಿಕೆಯನ್ನು ಮಾಡುತ್ತಾನೆ ಹಾಗೆ ಪರಮಾತ್ಮನು ಪ್ರಕೃತಿಯನ್ನು ಉಪಯೋಗಿಸಿ ಜಗತ್ತನ್ನು ಸೃಷ್ಟಿ ಮಾಡುತ್ತಾನೆ ಎಂದು ಇಷ್ಟೇ ಅರ್ಥ. ಈ ಅರ್ಥದಲ್ಲಿ ಮಾಯಾಶಬ್ದಕ್ಕೆ ಪ್ರಕೃತಿ ಎಂಬ ಅರ್ಥವನ್ನು ಸ್ವೀಕರಿಸಿದರೂ ಅದು ದೋಷಾಧಾಯಕವಾಗುವುದಿಲ್ಲ.

**ಸರ್ಗಾದೌ ಮಾಯಯಾ ವಿಶ್ವಂ ಸೃಜತೀತಿ ವಚೋಽಪಿ ಚ ।**
**ಮಾಯಾಖ್ಯಾಂ ಪ್ರಕೃತಿಂ ಪ್ರಾಹ ಯಾಽಸ್ಯೋಪಾದಾನಕಾರಣಮ್**
**॥ ೩೩೧ ॥**

**ಅರ್ಥ-** ಸರ್ಗಾದೌ= ಸೃಷ್ಟಿಯ ಆರಂಭದಲ್ಲಿ, ಮಾಯಯಾ= ಮಾಯೆಯಿಂದ, ವಿಶ್ವಂ= ಜಗತ್ತನ್ನು, ಸೃಜತೀತಿ= ಸೃಷ್ಟಿಸುತ್ತಾನೆ ಎಂಬ, ವಚೋಽಪಿ= ವಾಕ್ಯವೂ, ಮಾಯಾಖ್ಯಾಂ= ಮಾಯಾ ಎಂಬ ಹೆಸರಿನ, ಪ್ರಕೃತಿಂ= ಪ್ರಕೃತಿಯನ್ನು, ಪ್ರಾಹ= ಹೇಳುತ್ತದೆ. ಯಾ= ಯಾವ ಪ್ರಕೃತಿಯು, ಅಸ್ಯ= ಈ ಜಗತ್ತಿನ, ಉಪಾದಾನಕಾರಣಂ= ಉಪಾದಾನ ಕಾರಣವು.

**ಅನುವಾದ-** ಸೃಷ್ಟಿಯ ಪ್ರಾರಂಭದಲ್ಲಿ ಪರಮಾತ್ಮನು ಮಾಯೆಯಿಂದ ಜಗತ್ತನ್ನು ಸೃಷ್ಟಿಸುತ್ತಾನೆ ಎಂಬ ವಾಕ್ಯವೂ ಕೂಡ ಈ ಜಗತ್ತಿಗೆ ಉಪಾದಾನಕಾರಣವಾದ ಜಗತ್‌ಪ್ರಕೃತಿ ರೂಪವಾದ ಮಾಯೆಯನ್ನೇ ಹೇಳುತ್ತದೆ.

**ಭಾವವಿಲಾಸಿನೀ–** ಮಾಯಾಖ್ಯಾಂ ಪ್ರಕೃತಿಂ ಪ್ರಾಹ । ನತ್ವನಿರ್ವಚನೀಯಾವಿದ್ಯಾಖ್ಯಾಂ ಪರಾಭಿಮತಾಂ ಭ್ರಮಕರೀಂ ಮಾಯಾಮ್ ॥ ೩೩೧ ॥

**ಜಗತೋ ಹೇತುಭೂತಾ ತು ಮಾಯಾ ಸರ್ವಗತಾ ಶುಭಾ ।**
**ವಿಕೃತಾಕಾರತೋಽನಿತ್ಯಾ ನಿತ್ಯಾ ಮೂಲಸ್ವರೂಪತಃ ॥ ೩೩೨ ॥**

**ಅರ್ಥ-** ಜಗತಃ= ಜಗತ್ತಿಗೆ, ಹೇತುಭೂತಾ= ಕಾರಣವಾದ, ಮಾಯಾ ತು= ಮಾಯೆ-ಯಾದರೂ, ಸರ್ವಗತಾ= ವ್ಯಾಪ್ತ ಮತ್ತು, ಶುಭಾ= ಶುಭ, ವಿಕೃತಾಕಾರತಃ= ವಿಕೃತ ಆಕಾರದಿಂದ, ಅನಿತ್ಯಾ= ಅನಿತ್ಯವು; ಮೂಲಸ್ವರೂಪತಃ= ಮೂಲಸ್ವರೂಪದಿಂದ, ನಿತ್ಯಾ= ನಿತ್ಯ.

**ಅನುವಾದ-** ಜಗತಿಗೆ ಉಪಾದಾನಕಾರಣವಾದ ಈ ಮಾಯೆಯು ಸರ್ವತ್ರ ವ್ಯಾಪ್ತವಾಗಿ ಶುಭವಾದುದಾಗಿದೆ. ಅದರ ಆಕಾರವು ಯಾವಾಗಲೂ ಬದಲಾಗುವುದರಿಂದ ಆಕಾರದ ದೃಷ್ಟಿಯಿಂದ ಅದು ಅನಿತ್ಯ. ಆದರೆ ಮೂಲಸ್ವರೂಪವು ನಾಶವನ್ನು ಹೊಂದುವುದಿಲ್ಲವಾದ್ದರಿಂದ ಮೂಲಸ್ವರೂಪ-ದೃಷ್ಟಿಯಿಂದ ಅದು ನಿತ್ಯವೂ ಆಗಿದೆ.

**ಭಾವವಿಲಾಸಿನೀ–** ಏಕೃತಾಕಾರತಃ ಅನಿತ್ಯೇತಿ ಚ್ಛೇದಃ ॥ ೩೩೨ ॥

ನ ಸಾ ಭ್ರಾಂತಿಕರೀ ಶುದ್ಧಾ ಮುಕ್ತಾಮುಕ್ತಪ್ರದೇಶಗಾ ।
ಸೂಕ್ಷ್ಮರೇಣುಮಯೀ ಸಾ ಚ ತಂತುವಾಯಸ್ಯ ತಂತುವತ್ ॥ ೩೩೩ ॥

ವಶಗಾ ಯಸ್ಯ ದೇವಸ್ಯ ತಯಾ ಸ ಶಬಲಃ ಕಥಮ್ ।
ನಹಿ ಸ್ವರ್ಣಕೃತೋ ಹಸ್ತಃ ಸೌವರ್ಣಃ ಶಲೋಽಪಿ ವಾ ॥ ೩೩೪ ॥

ನಾಪಿ ತಂತುಮಯೀ ತಂತುವಾಯಮೂರ್ತಿರತಃ ಪ್ರಭುಃ ।
ಅಪ್ರಾಕೃತಮಹಾಕಾಯೋ ಯದ್ರೋಮ್ಣಿ ಪ್ರಾಕೃತಂ ಜಗತ್ ॥ ೩೩೫ ॥

**ಅರ್ಥ-** ಸಾ= ಆ ಜಡಪ್ರಕೃತಿಯು, ಭ್ರಾಂತಿಕರೀ ನ= ಭ್ರಮಜನಕವಲ್ಲ, ಶುದ್ಧಾ= ಶುದ್ಧವಾದುದು, ಮುಕ್ತಾಮುಕ್ತಪ್ರದೇಶಗಾ= ಮುಕ್ತದೇಶದಲ್ಲಿಯೂ ಮತ್ತು ಅಮುಕ್ತ-ದೇಶದಲ್ಲಿಯೂ ಇರುತ್ತದೆ, ಸಾ ಚ= ಆ ಪ್ರಕೃತಿಯಾದರೂ, ತಂತುವಾಯಸ್ಯ= ನೇಕಾರನ, ತಂತುವತ್= ನೂಲಿನಂತೆ, ಸೂಕ್ಷ್ಮರೇಣುಮಯೀ= ಸೂಕ್ಷ್ಮವಾದ ಕಣಗಳಿಂದ ಕೂಡಿದೆ, ಯಸ್ಯ= ಯಾವ, ದೇವಸ್ಯ= ಈಶ್ವರನಿಗೆ, ವಶಗಾ= ಅದು ಅಧೀನವಾಗಿದೆಯೋ, ತಯಾ= ಆ ಪ್ರಕೃತಿಯಿಂದ, ಸಃ= ಆ ಈಶ್ವರನು, ಕಥಂ= ಹೇಗೆ, ಶಬಲಃ= ಶಬಲನಾಗುತ್ತಾನೆ? ಸ್ವರ್ಣಕೃತಃ= ಸ್ವರ್ಣಕಾರನ, ಹಸ್ತಃ= ಹಸ್ತವು, ಸೌವರ್ಣಃ= ಸುವರ್ಣಮಯ, ವಾ= ಅಥವಾ, ಶಬಲೋಽಪಿ= ಶಬಲವೂ, ನಹಿ= ಆಗುವುದಿಲ್ಲವಷ್ಟೆ, ಅಪಿ= ಮತ್ತು, ತಂತುವಾಯಮೂರ್ತಿಃ= ನೇಕಾರನ ಶರೀರವು, ತಂತುಮಯೀ ನ= ನೂಲಿನ ವಿಕಾರವಲ್ಲ, ಅತಃ= ಆದ್ದರಿಂದ, ಯದ್ರೋಮ್ಣಿ= ಯಾರ ರೋಮದಲ್ಲಿ (ರೋಮಕೂಪದಲ್ಲಿ), ಪ್ರಾಕೃತಂ ಜಗತ್= ಪ್ರಾಕೃತ ಜಗತ್ತು ಅಡಗುತ್ತದೆಯೋ ಅಂತಹ, ಅಪ್ರಾಕೃತ ಮಹಾಕಾಯಃ= ಅಪ್ರಾಕೃತವಾದ ದೊಡ್ಡ ಶರೀರವುಳ್ಳವನು, ಪ್ರಭುಃ= ನಮ್ಮ ಪ್ರಭುವು.

**ಅನುವಾದ-** ಆ ಪ್ರಕೃತಿಯು ಭ್ರಮಜನಕವಲ್ಲ. ಶುದ್ಧವಾದುದು. ಅದು ಮುಕ್ತಪ್ರದೇಶದಲ್ಲಿಯೂ ಮತ್ತು ಅಮುಕ್ತ ಪ್ರದೇಶದಲ್ಲಿಯೂ ಇರುತ್ತದೆ. ನೇಕಾರನ ನೂಲಿನಂತೆ ಅದು ಸೂಕ್ಷ್ಮವಾದ ಕಣಗಳಿಂದ ಕೂಡಿದೆ. ಯಾವ ಈಶ್ವರನಿಗೆ ಅದು ಅಧೀನವಾಗಿದೆಯೋ ಅಂತಹ ಆ ಈಶ್ವರನು ಆ ಪ್ರಕೃತಿಯಿಂದ ಹೇಗೆ

**ಶಬಲನಾಗುತ್ತಾನೆ? ಸ್ವರ್ಣಕಾರನ ಹಸ್ತವು ಸ್ವರ್ಣಮಯವಾಗಲಿ ಅಥವಾ ಸ್ವರ್ಣದಿಂದ ಶಬಲವಾಗಲಿ ಆಗುವುದಿಲ್ಲವಷ್ಟೆ. ಹಾಗೆಯೇ ನೇಕಾರನ ದೇಹವು ತಂತುಮಯ ಆಗುವುದಿಲ್ಲವಷ್ಟೆ. ಆದ್ದರಿಂದ ನಮ್ಮ ಪ್ರಭುವು ಅಪ್ರಾಕೃತವಾದ ಮಹಾಶರೀರವುಳ್ಳವನು. ಅವನ ರೋಮಕೂಪದಲ್ಲಿ ಪ್ರಾಕೃತ ಜಗತ್ತು ಅಡಗುತ್ತದೆ.**

**ಭಾವವಿಲಾಸಿನೀ–** ಸಾ ಭ್ರಾಂತಿಕರೀ ಜೀವನಯನಪಿಧಾನರೂಪಮಾಯಾವದ್ ಭ್ರಾಂತಿಕರೀ ನ । ಅತ ಏವ ಶುದ್ಧಾ । ಅತ ಏವ ಮುಕ್ತಾಮುಕ್ತಪ್ರದೇಶಗಾ ಚ । ಪ್ರಕೃತೇಸ್ಸರ್ವವ್ಯಾಪಿತ್ವಾದಿತಿ ಭಾವಃ । ತಸ್ಯಾಸ್ಸ್ವರೂಪಮಾಹ– **ಸೂಕ್ಷ್ಮರೇಣುಮಯೀತಿ** ॥ ತಾರ್ಕಿಕಾಭಿಮತಪರಮಾಣುತೋಽಪ್ಯನಂತಗುಣಿತಸೂಕ್ಷ್ಮರೇಣುಮಯೀ । ವಶಗಾ ನತು ತನ್ನಿಷ್ಠತ್ವೇನ ತಸ್ಯ ಪ್ರಾಕೃತತ್ವಾಪಾದಿಕಾ। ತಯಾ ತಟಸ್ಥಯಾ ಪ್ರಕೃತ್ಯಾ ಸ ಪರಮಾತ್ಮಾ । ತತ್ರ ದೃಷ್ಟಾಂತಮಾಹ– **ನಹೀತಿ** ॥ ಅತಃ ಪ್ರಕೃತೇರ್ಭಗವನ್ಮೂರ್ತ್ಯಾಕಾರೇಣಾಪರಿಣಾಮಾತ್ ॥ ೩೩೩–೩೩೫ ॥

**ವಿವರಣೆ-** ದೋಷಕರವಲ್ಲದ ಪ್ರಕೃತಿಯಿಂದ ಕೂಡಿದ್ದಾನೆ ಎಂದು ಹಿಂದೆ ಹೇಳಿದ ಪಕ್ಷವನ್ನು ಇಲ್ಲಿ ಸಮರ್ಥನೆ ಮಾಡುತ್ತಾರೆ. ಸ್ವರ್ಣಕಾರನು ಕೈಯಲ್ಲಿ ಸ್ವರ್ಣವನ್ನು ಹಿಡಿದು ಆಭರಣವನ್ನು ಮಾಡಿದರೆ ಅವನ ಹಸ್ತವೇ ಸ್ವರ್ಣಮಯವಾಗುವುದಿಲ್ಲ ಅಥವಾ ಅದರ ಕೆಲವು ಭಾಗ ಮಾಂಸ, ಕೆಲವು ಭಾಗ ಸುವರ್ಣ ಎಂದು ಸುವರ್ಣದಿಂದ ಶಬಲಿತವಾಗುವುದಿಲ್ಲ ಮತ್ತು ನೇಕಾರನು ತಂತುಗಳಿಂದ ಬಟ್ಟೆಯನ್ನು ಮಾಡಿದರೆ ಅವನ ದೇಹವೇ ತಂತುಮಯವಾಗುವುದಿಲ್ಲ. ಅದರಂತೆ ಪ್ರಭುವಾದ ಪರಮಾತ್ಮನು ತನ್ನ ಪ್ರಕೃತಿಯನ್ನು ಉಪಯೋಗಿಸಿ ಜಗತ್ತನ್ನು ನಿರ್ಮಾಣ ಮಾಡಿದರೆ ಅವನ ದೇಹವು ಪ್ರಾಕೃತವೂ ಆಗುವುದಿಲ್ಲ ಅಥವಾ ದೇಹದ ಕೆಲವು ಭಾಗಗಳಲ್ಲಿ ಪ್ರಾಕೃತಾಂಶವು ಸೇರಿ ಅದರಿಂದ ಅವನು ಶಬಲಿತನೂ ಆಗುವುದಿಲ್ಲ. ಅಷ್ಟೇ ಅಲ್ಲದೆ ಅಪ್ರಾಕೃತ ಮಹಾಕಾಯನಾದ ಅವನ ಒಂದು ರೋಮಕೂಪದಲ್ಲಿ ಅನೇಕ ಬ್ರಹ್ಮಾಂಡಗಳು ಅಡಗುವುದರಿಂದ ಅವನ ದೇಹವನ್ನು ಶಬಲಗೊಳಿಸುವ ಯಾವ ಪ್ರಕೃತಿಯೂ ಇಲ್ಲ.

ಭೂಮಿರಾಪೋಽನಲೋ ವಾಯುಃ ಖಂ ಮನೋ ಬುದ್ಧಿರೇವ ಚ ।
ಅಹಂಕಾರ ಇತೀಯಂ ಮೇ ಭಿನ್ನಾ ಪ್ರಕೃತಿರಷ್ಟಧಾ ॥ ೩೩೬ ॥

**ಅರ್ಥ-** -(ಭ.ಗೀ.೭೪.) ಭೂಮಿಃ= ಪೃಥಿವಿ, ಆಪಃ= ಜಲ, ಅನಲ= ಅಗ್ನಿ, ವಾಯುಃ= ವಾಯು, ಖಂ= ಆಕಾಶ, ಮನಃ= ಮನಸ್ಸು, ಬುದ್ಧಿಃ= ಬುದ್ಧಿ, ಚ= ಮತ್ತು, ಅಹಂಕಾರಃ= ಅಹಂಕಾರತತ್ತ್ವ, ಇತಿ= ಎಂದು, ಮೇ= ನನಗೆ ಅಧೀನವಾದ, ಇಯಂ= ಈ ಪ್ರಕೃತಿಯು, ಅಷ್ಟಧಾ ಭಿನ್ನಾ= ಎಂಟು ವಿಧವಾಗಿ ವಿಭಕ್ತವಾಗಿದೆ.

**ಅನುವಾದ-** ಭೂಮಿ, ಜಲ, ಅಗ್ನಿ, ವಾಯು, ಆಕಾಶ, ಮನಸ್ಸು, ಬುದ್ಧಿ ಮತ್ತು ಅಹಂಕಾರ ಹೀಗೆ ನನ್ನ ಅಧೀನವಾದ ಪ್ರಕೃತಿಯು ಎಂಟು ವಿಧವಾಗಿ ಕವಲೊಡೆದಿದೆ.

**ಭಾವವಿಲಾಸಿನೀ–** ಏತಾದೃಶಪ್ರಕೃತೇರೇವ ಜಗತ್ಕಾರಣತ್ವೇ ಭಗವತಸ್ತದಮಿಶ್ರಿತತ್ವೇ ಚ ಗೀತಾವಾಕ್ಯದ್ವಯಂ ಪ್ರಮಾಣೀಕರೋತಿ– **ಭೂಮಿರಾಪ ಇತಿ** ॥ ಮೇ ಮದಧೀನಾ ಪ್ರಕೃತಿಃ ಪೃಥಿವ್ಯಾದ್ಯಷ್ಟಕಾರ್ಯರೂಪೇಣ ಭಿನ್ನಾ ವಿಭಕ್ತಾ । ತಥಾಚೇದಂ ಜಗತ್ಪ್ರಕೃತ್ಯುಪಾದಾನಕಮೇವ, ನತು ಪರಾಭಿಪ್ರೇತಾವಿದ್ಯೋಪಾದಾನಕಮಿತಿ ಭಾವಃ ॥ ೩೩೬ ॥

**ವಿವರಣೆ–** ಪೂರ್ವಶ್ಲೋಕದಲ್ಲಿ ಹೇಳಿದ ಪ್ರಕೃತಿಯು ಜಗತ್ಕಾರಣವೆಂಬ ವಿಷಯದಲ್ಲಿಯೂ ಮತ್ತು ಭಗವಂತನು ಅಂತಹ ಪ್ರಕೃತಿಯಿಂದ ಮಿಶ್ರಿತನಲ್ಲವೆಂಬ ವಿಷಯದಲ್ಲಿಯೂ ಎರಡು ಗೀತಾವಾಕ್ಯಗಳನ್ನು ಪ್ರಮಾಣವಾಗಿ ಉದಾಹರಿಸುತ್ತಾರೆ. ಭಿನ್ನ ಎಂದರೆ ನನ್ನಿಂದ ಭಿನ್ನವಾದ ಮತ್ತು ವಿಭಕ್ತವಾದ ಎಂದು ಅರ್ಥ. ಆದ್ದರಿಂದ ಅಂತಹ ಪ್ರಕೃತಿಯಿಂದ ಪರಮಾತ್ಮನಿಗೆ ಮಾಯಾಶಬಲತ್ವವು ಬರುವುದಿಲ್ಲ ಎಂದು ಅಭಿಪ್ರಾಯ.

ಮಯಾಧ್ಯಕ್ಷೇಣ ಪ್ರಕೃತಿಃ ಸೂಯತೇ ಸಚರಾಚರಮ್ ।
ಹೇತುನಾಽನೇನ ಕೌಂತೇಯ ಜಗದ್ ವಿಪರಿವರ್ತತೇ ॥
ಇತಿ ಕೃಷ್ಣಃ ಸ್ವಯಂ ಪ್ರಾಹ ಪ್ರಕೃತ್ಯಧ್ಯಕ್ಷತಾಂ ಪರಮ್ ॥ ೩೩೭ ॥

**ಅರ್ಥ–** 'ಮಯಾಧ್ಯಕ್ಷೇಣ ........... ವಿಪರಿವರ್ತತೇ॥'(ಭ.ಗೀ. ೯.೧೦)ಇತಿ= 'ಮಯಾಧ್ಯಾಕ್ಷೇಣ...' ಎಂದು, ಕೃಷ್ಣಃ= ಕೃಷ್ಣನು, ಸ್ವಯಂ= ತಾನೇ, ಪರಂ ಪ್ರಕೃತ್ಯಧ್ಯಕ್ಷತಾಂ= ಕೇವಲ ಪ್ರಕೃತಿಸ್ವಾಮಿತ್ವವನ್ನು, ಪ್ರಾಹ= ಹೇಳಿದ್ದಾನೆ.

**ಅನುವಾದ–** ಸ್ವಾಮಿಯಾದ ನನ್ನಿಂದ ಪ್ರಕೃತಿಯು ಚರಾಚರವಾದ ಈ ಜಗತ್ತನ್ನು ಪ್ರಸವಿಸುತ್ತದೆ. ಅರ್ಜುನ! ಈ ಕಾರಣದಿಂದ ಜಗತ್ತು ಚಕ್ರದಂತೆ ಸುತ್ತುತ್ತಿರುತ್ತದೆ ಎಂದು ಸ್ವಯಂ ಕೃಷ್ಣನು ತಾನು ಪ್ರಕೃತಿಗೆ ಸ್ವಾಮಿಯು ಮಾತ್ರ ಎಂದು ಹೇಳಿದ್ದಾನೆ.

**ಭಾವವಿಲಾಸಿನೀ–** ಅಧ್ಯಕ್ಷೇಣ ಸ್ವಾಮಿನಾ ನತು ತಚ್ಛಬಲಿತೇನ । ಅತಃ ಪ್ರಾಕ್ ಮೇ ಪ್ರಕೃತಿರಿತ್ಯಪಿ ಸ್ವಸ್ಯ ಪ್ರಕೃತಿಸ್ವಾಮಿತ್ವಾದೇವೋಕ್ತಮಿತಿ ಭಾವಃ । ಸೂಯತೇ ಸೂತ ಇತ್ಯರ್ಥಃ । ಕಾರ್ಯಾಕಾರೇಣ ಸ್ವಸ್ಯಾ ಏವ ವಿಕೃತತ್ವಾತ್ ಸೂಯತ ಇತ್ಯುಕ್ತಮ್ । ವಿಪರಿವರ್ತತೇ ವಿಶೇಷೇಣ ಪರಿವರ್ತತೇ ಅನಾದ್ಯನಂತಕಾಲೇಷು ಚಕ್ರವತ್ ಪರಿಭ್ರಮತೀತ್ಯರ್ಥಃ । ಪರಂ ಕೇವಲಮ್ । ಏವಂ ಭಗವತಾ ಸ್ವಸ್ಯ ಪ್ರಕೃತ್ಯಧ್ಯಕ್ಷತ್ವಸ್ಯೈವೋಕ್ತತ್ವಾನ್ನ ಪ್ರಕೃತಿರೂಪಮಾಯಾಮಾದಾಯ ಮಾಯಾಶಬಲಿತತ್ವಮ್ ॥ ೩೩೭ ॥

**ವಿವರಣೆ–** (1) ತನ್ನನ್ನು ಪ್ರಕೃತಿಯ ಅಧ್ಯಕ್ಷ ಎಂದರೆ ಸ್ವಾಮಿ ಎಂದು ಹೇಳಿಕೊಂಡಿದ್ದಾನೆ. ಆದ್ದರಿಂದ ಅವನಿಗೆ ಪ್ರಾಕೃತತ್ವವಾಗಲಿ ಅಥವಾ ಪ್ರಕೃತಿಯ ನಿಮಿತ್ತದಿಂದ ಶಬಲತ್ವವಾಗಲಿ ಇಲ್ಲ ಎಂದು ಅಭಿಪ್ರಾಯ.

(2) ಕೌಂತೇಯ= ಕುಂತೀಸುತ! ಅಧ್ಯಕ್ಷೇಣ ಮಯಾ= ಸ್ವಾಮಿಯಾದ ನನ್ನಿಂದ, ಪ್ರಕೃತಿಃ= ಪ್ರಕೃತಿಯು, ಸಚರಾಚರಮ್= ಚರ ಮತ್ತು ಅಚರ ಜಗತ್ತನ್ನು, ಸೂಯತೇ= ಪ್ರಸವಿಸುತ್ತದೆ. ಅನೇನ ಹೇತುನಾ= ಈ ಕಾರಣದಿಂದ, (ಪ್ರಕೃತಿಯಿಂದ ಮತ್ತು ನನ್ನಿಂದ), ಜಗತ್= ಜಗತ್ತು, ವಿಪರಿವರ್ತತೇ= ಚಕ್ರದಂತೆ ಸುತ್ತುತ್ತದೆ.

ನಿಮಿತ್ತಮಾತ್ರಂ ತತ್ರಾತ್ಮಾ ನಿರ್ಗುಣಃ ಪುರುಷರ್ಷಭಃ ।
ವ್ಯಕ್ತಾವ್ಯಕ್ತಮಿದಂ ವಿಶ್ವಂ ಯತ್ರ ಭ್ರಮತಿ ಲೋಹವತ್ ।
ಇತಿ ವಾಕ್ಯೇ ನಿಮಿತ್ತತ್ವಮಾತ್ರೋಕ್ತೇಶ್ಚ ನ ತನ್ಮಯಃ ॥ ೩೩೮ ॥

**ಅರ್ಥ-** 'ನಿಮಿತ್ತಮಾತ್ರಂ.................. ಲೋಹವತ್'' ಇತಿ ವಾಕ್ಯೇ= ಈ ವಾಕ್ಯದಲ್ಲಿ, ನಿಮಿತ್ತಮಾತ್ರೋಕ್ತೇಶ್ಚ= ಕೇವಲ ನಿಮಿತ್ತತ್ವವನ್ನು ಹೇಳಿರುವುದರಿಂದಲೂ, 'ನಿಮಿತ್ತಮಾತ್ರಂ....', ನ ತನ್ಮಯಃ= ಪ್ರಕೃತಿಮಯ= ಪ್ರಕೃತಿಶಬಲನು ಅಲ್ಲ.

**ಅನುವಾದ-** ಪುರುಷೋತ್ತಮನು ಮತ್ತು ನಿರ್ಗುಣನು ಆದ ಪರಮಾತ್ಮನು ಜಗತ್‌ಸೃಷ್ಟಿಗೆ ಕೇವಲ ನಿಮಿತ್ತ ಮಾತ್ರ. ಅವನಲ್ಲಿ ವ್ಯಕ್ತಾವ್ಯಕ್ತವಾದ ಈ ಜಗತ್ತು ಅಯಸ್ಕಾಂತದ ಸನ್ನಿಧಿಯಲ್ಲಿ ಕಬ್ಬಿಣವು ಚಲಿಸಿದಂತೆ ಚಲಿಸುತ್ತದೆ ಎಂದು ಹೇಳುವ ಭಾಗವತವಾಕ್ಯದಲ್ಲಿ ಕೇವಲ ನಿಮಿತ್ತಕಾರಣತ್ವವನ್ನು ಹೇಳಿರುವುದರಿಂದಲೂ ಪರಮಾತ್ಮನು ಜಗದುಪಾದಾನನಲ್ಲ.

**ಭಾವವಿಲಾಸಿನೀ–** ಅಸ್ಮಿನ್ನರ್ಥೇ ಭಾಗವತವಾಕ್ಯಂ ಪಠತಿ– **ನಿಮಿತ್ತಮಾತ್ರಮಿತಿ** ॥ ವಾಕ್ಯಸ್ಯ ತಾತ್ಪರ್ಯಮಾಹ– **ಇತಿ ವಾಕ್ಯ ಇತಿ** ॥ ವಾಕ್ಯೇ ಭಾಗವತವಾಕ್ಯೇ । ತನ್ಮಯಃ ಪ್ರಕೃತಿಶಬಲಿತಃ । ಜಗದುಪಾದಾನತ್ವೇ ಹಿ ತನ್ಮಯತ್ವಮ್ । ತದೇವ ನ ಸಂಭವತಿ । ಕೂಟಸ್ಥಸ್ಯ ಜಗದಾಕಾರೇಣ ಪರಿಣಾಮಾಯೋಗಾತ್ । ಜಗದುಪಾದಾನಭೂತಮಾಯಾಶಬಲಿತತ್ವಂ ಚ ನ ವಕ್ತವ್ಯಮ್ । ನಿಮಿತ್ತಮಾತ್ರಂ ನತೂಪಾದಾನಮಿತ್ಯುಪಾದಾನಸ್ಯ ವ್ಯವಚ್ಛೇದಾದ್ ವ್ಯರ್ಥಸ್ತಚ್ಛಬಲಿತ-ತ್ವಾಂಗೀಕಾರ ಇತಿ ಭಾವಃ ॥ ೩೩೮ ॥

**ವಿವರಣೆ–**ಪುರುಷರ್ಷಭಃ= ಪುರುಷೋತ್ತಮನಾದ, ನಿರ್ಗುಣಃ= ಗುಣತ್ರಯರಹಿತನಾದ, ಆತ್ಮಾ= ಪರಮಾತ್ಮನು, ತತ್ರ= ಅಲ್ಲಿ= ಜಗತ್‌ಸೃಷ್ಟಿಯಲ್ಲಿ, ನಿಮಿತ್ತಮಾತ್ರಂ= ಕೇವಲ ನಿಮಿತ್ತಕಾರಣ. ಯತ್ರ= ಯಾವ ಪರಮಾತ್ಮನಲ್ಲಿ, ಇದಂ= ಈ, ವ್ಯಕ್ತಾವ್ಯಕ್ತಂ= ವ್ಯಕ್ತಾವ್ಯಕ್ತವಾದ, ವಿಶ್ವಂ= ಜಗತ್ತು, ಲೋಹವತ್= ಕಬ್ಬಿಣದಂತೆ, ಭ್ರಮತಿ= ಚಲಿಸುತ್ತದೆ.

ನಿರ್ಗುಣತ್ವೋಕ್ತಿತಶ್ಚಾಭೂತ್ ಸಾ ದೂರೇ ತ್ರಿಗುಣಾತ್ಮಿಕಾ ।
ಆಹಾಯಸ್ಕಾಂತದೃಷ್ಟಾಂತೋಽಪ್ಯಸಕ್ತಸ್ಯ ನಿಯಂತೃತಾಮ್ ॥ ೩೩೯ ॥

**ಅರ್ಥ-** ನಿರ್ಗುಣತ್ವೋಕ್ತಿತಃ= ನಿರ್ಗುಣತ್ವದ ಉಕ್ತಿಯಿಂದಲೂ, ಸಾ ತ್ರಿಗುಣಾತ್ಮಿಕಾ= ಆ ತ್ರಿಗುಣಾತ್ಮಕವಾದ ಪ್ರಕೃತಿಯು, ದೂರೇ ಅಭೂತ್= ದೂರದಲ್ಲೇ ನಿಂತಿದೆ. ಅಯಸ್ಕಾಂತ-

ದೃಷ್ಟಾಂತೋಽಪಿ= ಅಯಸ್ಕಾಂತ ದೃಷ್ಟಾಂತವೂ ಕೂಡ, ಅಸಕ್ತಸ್ಯ= ಪ್ರಕೃತಿಯ ಸಂಬಂಧ-ವಿಲ್ಲದ ಪರಮಾತ್ಮನಿಗೆ, ನಿಯಂತೃತಾಮ್= ಪ್ರಕೃತಿ ನಿಯಾಮಕತ್ವವನ್ನು, ಆಹ= ಹೇಳುತ್ತದೆ.

**ಅನುವಾದ-** ಮೇಲೆ ಉದಾಹರಿಸಿದ ಶ್ಲೋಕದಲ್ಲಿ ಶ್ರೀಹರಿಗೆ ನಿರ್ಗುಣತ್ವದ ಉಕ್ತಿಯಿಂದ ತ್ರಿಗುಣಾತ್ಮಕವಾದ ಪ್ರಕೃತಿಯು ಬ್ರಹ್ಮನಿಂದ ದೂರ ನಿಂತಿದೆ. ಮತ್ತು ಅಯಸ್ಕಾಂತ ದೃಷ್ಟಾಂತವು ಪ್ರಕೃತಿಸಂಬಂಧರಹಿತನಿಗೆ ಪ್ರಕೃತಿನಿಯಾಮಕತ್ವವು ಇದೆ ಎಂದು ಹೇಳುತ್ತದೆ.

**ಭಾವವಿಲಾಸಿನೀ-** ಸಾ ಪ್ರಕೃತಿಃ । ನಿರ್ಗತಾ ಗುಣಾ ಯಸ್ಮಾತ್ ಸ ಹಿ ನಿರ್ಗುಣಃ । ಗುಣಮಯ್ಯಾಃ ಪ್ರಕೃತೇಃ ನಿರ್ಗಮನಾಭಾವೇ ಕಥಂ ಕೇವಲಂ ಗುಣಾನಾಮೇವ ನಿರ್ಗಮನಮ್? ನಹಿ ಪಟಂ ವಿಹಾಯ ಪಟರೂಪಮಾತ್ರಂ ನಿರ್ಗಚ್ಛತಿ । ಅತೋ ನಿರ್ಗುಣತ್ವೋಕ್ತ್ಯಾ ಪ್ರಕೃತಿದೂರತಾಪಿ ಸಿದ್ಧ್ಯತೀತಿ ಭಾವಃ । ಭ್ರಾಮ್ಯಮಾಣಲೋಹಸ್ಯೋಕ್ತತ್ವಾತ್ ಸ್ಥಲಾಂತರೇ 'ಗ್ರಾವ್ಣೇ ನಮಸ್ತೇ ಗುಣಕರ್ಮಸಾಕ್ಷಿಣೇ' ಇತಿ ಸ್ಪಷ್ಟಮುಕ್ತತ್ವಾಚ್ಚ ತನ್ನಿಮಿತ್ತಾಯಸ್ಕಾಂತೋಽಪ್ಯರ್ಥಾದುಕ್ತ ಏವ । ಅತಃ ಅಯಸ್ಕಾಂತದೃಷ್ಟಾಂತೋಽಪೀ ತ್ಯುಕ್ತಮ್ । ಅಸಕ್ತಸ್ಯ ಕಾಂಸ್ಯಪಾತ್ರಸ್ಥಲೋಹ-ಭ್ರಮಣಹೇತುಭೂತದೂರಸ್ಥಾಯಸ್ಕಾಂತವದ್ ಅಸಕ್ತಸ್ಯ ಪ್ರಕೃತ್ಯಾದಿಲೇಪರಹಿತಸ್ಯ । ಯದ್ಯಪ್ಯಯಸ್ಕಾಂತವತ್ ನ ಬ್ರಹ್ಮಣೋ ದೂರಸ್ಥತಾ ವ್ಯಾಪ್ತತ್ವಾತ್ ತಥಾಽಪಿ ತತ್ಕೃತಲೇಪಾಭಾವಾತ್ ತತ್ಸ್ಥೋಽಪಿ ದೂರಸ್ಥ ಏವೇತಿ ಭಾವೇನೋಕ್ತಮ್- **ಅಸಕ್ತಸ್ಯೇತಿ** ॥ ತದುಕ್ತಂ ಗೀತಾಯಾಂ- 'ಮಯಾ ತತಮಿದಂ ವಿಶ್ವಂ ಜಗದವ್ಯಕ್ತಮೂರ್ತಿನಾ' 'ಮತ್ಸ್ಥಾನಿ ಸರ್ವಭೂತಾನಿ ನಚಾಹಂ ತೇಷ್ವವಸ್ಥಿತಃ' 'ನಚ ಮತ್ಸ್ಥಾನಿ ಭೂತಾನಿ ಪಶ್ಯ ಮೇ ಯೋಗಮೈಶ್ವರಮ್' ಇತಿ । ನಿಯಂತೃತಾಂ ವ್ಯಕ್ತಾವ್ಯಕ್ತಮಿದಂ ವಿಶ್ವಮಿತ್ಯತ್ರ ವ್ಯಕ್ತಪದೋದಿತ-ಮಹದಾದಿ ಕಾರ್ಯಾಣಾಮವ್ಯಕ್ತಪದೋದಿತಪ್ರಕೃತೇಶ್ಚ ನಿಯಂತೃತಾಮ್ । ಅತಃ ಕೇನಾಪಿ ಪ್ರಕಾರೇಣ ನ ಭಗವತಃ ಪ್ರಕೃತಿಶಬಲತ್ವಮಿತಿ ಭಾವಃ ॥ ೩೩೯ ॥

**ವಿವರಣೆ-** 338ನೇ ಶ್ಲೋಕದಲ್ಲಿ ಉದಾಹರಿಸಲ್ಪಟ್ಟ ಭಾಗವತ ಪದ್ಯದಲ್ಲಿರುವ ನಿರ್ಗುಣ ಎಂಬ ಉಕ್ತಿಯು ಮೂರು ಗುಣಗಳನ್ನು ನಿಷೇಧಿಸಿ, ಅರ್ಥಾತ್ ಪರಮಾತ್ಮನ ಸ್ವರೂಪದಲ್ಲಿ ಪ್ರಕೃತಿಯ ಪ್ರವೇಶವನ್ನು ನಿಷೇಧಿಸಿದೆ. ಅಯಸ್ಕಾಂತವು ಕಬ್ಬಿಣದಿಂದ ದೂರವಿದ್ದರೂ ಹೇಗೆ ಕಬ್ಬಿಣವನ್ನು ಚಲಿಸುವಂತೆ ಮಾಡುತ್ತದೆಯೋ, ಅದರಂತೆ ಬ್ರಹ್ಮನು ಪ್ರಕೃತಿಯಿಂದ ದೂರವಿದ್ದರೂ ಪ್ರಕೃತಿಯನ್ನು ನಿಯಂತ್ರಿಸುತ್ತಾನೆ ಎಂದು ಹೇಳಿದುದರಿಂದ ಅಂತಹ ಪ್ರಕೃತಿಯಿಂದ ಶಬಲತ್ವವು ಬ್ರಹ್ಮನಿಗೆ ನಿರಾಕೃತವಾಯಿತು. ಯದ್ಯಪಿ ಬ್ರಹ್ಮನು ವ್ಯಾಪ್ತನಾಗಿರುವುದರಿಂದ ಪ್ರಕೃತಿಯ ಸಂಬಂಧವಿಲ್ಲದೆ ಇರಲು ಸಾಧ್ಯವಿಲ್ಲ. ಆದರೂ ಪ್ರಕೃತಿಯ ಲೇಪವು ಅವನಿಗೆ ಇಲ್ಲವಾದ್ದರಿಂದ ದೂರವಿದ್ದಾನೆ ಎಂದು ಅಭಿಪ್ರಾಯ.

**ತಮಸಃ ಪಾರಗತ್ವಂ ಚ ಶ್ರುತ್ಯಾ ಸ್ಮೃತ್ಯಾ ಚ ಕೀರ್ತ್ಯತೇ ।**
**ಅತೋ ಜಗದುಪಾದಾನಮಾಯಾಶಬಲತಾ ಗತಾ ॥ ೩೪೦ ॥**

**ಅರ್ಥ-** ತಮಸಃ= ಪ್ರಕೃತಿಯ, ಪಾರಗತ್ವಂ= ಆಚೆಯ ದಡದಲ್ಲಿ ಇರುವಿಕೆಯು, ಶ್ರುತ್ಯಾ ಚ ಸ್ಮೃತ್ಯಾ ಚ= ಶ್ರುತಿಯಿಂದಲೂ ಮತ್ತು ಸ್ಮೃತಿಯಿಂದಲೂ, ಕೀರ್ತ್ಯತೇ= ಹೇಳಲ್ಪಡುತ್ತದೆ, ಅತಃ= ಆದ್ದರಿಂದ, ಜಗದುಪಾದಾನಮಾಯಾಶಬಲತಾ= ಜಗದುಪಾದಾನವಾದ ಮಾಯೆಯಿಂದ ಶಬಲತ್ವವು, ಗತಾ= ಹೊರಟು ಹೋಯಿತು.

**ಅನುವಾದ- ಶ್ರುತಿಗಳು ಮತ್ತು ಸ್ಮೃತಿಗಳು ಪರಮಾತ್ಮನನ್ನು ಪ್ರಕೃತಿಯ ಆಚೆಯ ದಡದಲ್ಲಿ ಇರುವವನೆಂದು ಹೇಳುತ್ತದೆ. ಆದ್ದರಿಂದ ಬ್ರಹ್ಮನಿಗೆ ಜಗದುಪಾದಾನ ಮಾಯಾ-ಶಬಲತ್ವವು ಇಲ್ಲ.**

**ಭಾವವಿಲಾಸಿನೀ–** ಶ್ರುತ್ಯಾದಿಕಮಪ್ಯಸ್ಮಿನ್ನರ್ಥೇ ದರ್ಶಯನ್ನುಪಸಂಹರತಿ– **ತಮಸಃ ಪಾರಗತ್ವಮಿತಿ॥** ಶ್ರುತ್ಯಾ 'ವೇದಾಹಮೇತಂ ಪುರುಷಂ ಮಹಾಂತಮ್ । ಆದಿತ್ಯವರ್ಣಂ ತಮಸಃ ಪರಸ್ತಾತ್' ಇತ್ಯಾದಿಕಯಾ । ಸ್ಮೃತ್ಯಾ 'ತಮಸ್ತದಾಸೀದ್ ಗಹನಂ ಗಭೀರಂ ಯಸ್ತಸ್ಯ ಪಾರೇಽಭಿವಿರಾಜತೇ ವಿಭುಃ' ಇತ್ಯಾದಿಕಯಾ ॥೩೪೦॥

**ವಿವರಣೆ-** 'ವೇದಾಹಮೇತಂ ಪುರುಷಂ ಮಹಾಂತಂ' ಎಂಬ ಶ್ರುತಿಯು (ಶ್ವೇತಾಶ್ವತರ) ಪರಮಾತ್ಮನನ್ನು ತಮಸಃ ಪರಸ್ತಾತ್ ಎಂದು ಹೇಳುತ್ತದೆ. 'ತಮಸ್ತದಾಸೀದ್ ಗಹನಂ ಗಭೀರಂ। ಯಸ್ತಸ್ಯ ಪಾರೇಽಭಿವಿರಾಜತೇ ಪ್ರಭುಃ' ಎಂಬ ಭಾಗವತ ಸ್ಮೃತಿಯು ಅವನು ತಮಸ್ಸಿನ ಪಾರದಲ್ಲಿ ಇದ್ದಾನೆ ಎಂದು ಹೇಳುತ್ತದೆ. ಇಲ್ಲಿ ತಮಸ್ಸು ಎಂದರೆ ಪ್ರಕೃತಿ. ಪ್ರಕೃತಿಯ ಪಾರದಲ್ಲಿ ಇರುವವನು ಎಂದರೆ ಪ್ರಕೃತಿಯನ್ನು ದಾಟಿದವನು ಎಂದು ಅರ್ಥ. ಆದ್ದರಿಂದ ಬ್ರಹ್ಮನು ಜಗತ್ತಿಗೆ ಉಪಾದಾನಕಾರಣವಾದ ಪ್ರಕೃತಿಯ ಲೇಪವಿಲ್ಲದವನು. ಆದ್ದರಿಂದ ಜಗತ್ತಿಗೆ ಉಪಾದಾನವಾದ ಪ್ರಕೃತಿ ಎಂಬ ಅರ್ಥದ ಮಾಯಾಶಬಲತ್ವವು ಬ್ರಹ್ಮನಿಗೆ ಇಲ್ಲ.

**ವಿದಿತೋಽಸಿ ಭವಾನ್ ಸಾಕ್ಷಾತ್ ಪುರುಷಃ ಪ್ರಕೃತೇಃ ಪರಃ ।**
**ಕೇವಲಾನುಭವಾನಂದಸ್ವರೂಪಃ ಸರ್ವಬುದ್ಧಿದೃಕ್ ॥ ೩೪೧ ॥**

**ಇತಿ ಭಾಗವತೇ ಕೃಷ್ಣಃ ಪ್ರಕೃತೇಃ ಪರ ಏವ ಸನ್ ।**
**ಕೇವಲಾನುಭವಾನಂದರೂಪಃ ಸ್ಪಷ್ಟಂ ನಿರೂಪಿತಃ ॥ ೩೪೨ ॥**

**ಅರ್ಥ-** ವಿದಿತೋಽಸಿ....... ಸರ್ವಬುದ್ಧಿದೃಕ್॥ ಇತಿ= 'ವಿದಿತೋಽಸಿ...' ಎಂದು, ಭಾಗವತೇ= ಭಾಗವತದಲ್ಲಿ (೧೦.೪.೧೩), ಕೃಷ್ಣಃ= ಕೃಷ್ಣನು, ಪ್ರಕೃತೇಃ ಪರ ಏವ ಸನ್= ಪ್ರಕೃತಿಯ ಆಚೆಯೇ ಇದ್ದು, ಕೇವಲಾನುಭವಾನಂದರೂಪಃ= ಜಡಾಮಿಶ್ರವಾದ ಜ್ಞಾನಾನಂದಸ್ವರೂಪ ಎಂದು, ಸ್ಪಷ್ಟಂ= ಸ್ಪಷ್ಟವಾಗಿ, ನಿರೂಪಿತಃ= ವರ್ಣಿಸಲ್ಪಟ್ಟಿದ್ದಾನೆ.

**ಅನುವಾದ-** 'ವಿದಿತೋಽಸಿ... ಸರ್ವಬುದ್ಧಿದೃಕ್' ಎಂದು ಭಾಗವತದಲ್ಲಿ ಕೃಷ್ಣನು ಪ್ರಕೃತಿಯನ್ನು ಮೀರಿದವನೆಂದು ಕೇವಲಾನುಭವವಾದ ಜಡಾಮಿಶ್ರಿತನಾದ ಜ್ಞಾನಾನಂದಸ್ವರೂಪವುಳ್ಳವನೆಂದು ಸ್ಪಷ್ಟವಾಗಿ ನಿರೂಪಿಸಲ್ಪಟ್ಟಿದ್ದಾನೆ.

**ಭಾವವಿಲಾಸಿನೀ–** ಇದಾನೀಂ ಭಾಗವತಶ್ಲೋಕೇನ ಭಗವತೋ ದೇಹಸ್ಯಾಪಿ ಮಾಯಾಖ್ಯಂ ಪ್ರಕೃತಿಬಲಂ ನಾಸ್ತೀತ್ಯುಪಪಾದಯತಿ– **ವಿದಿತೋಽಸೀತಿ** ॥ ೩೪೧–೩೪೨ ॥

**ವಿವರಣೆ-** (1) ಇನ್ನು ಕೃಷ್ಣನ ದೇಹವೂ ಸಹ ಮಾಯಾಖ್ಯವಾದ ಪ್ರಕೃತಿಯಿಂದ ಶಬಲಿತವಾದುದಲ್ಲ ಎಂದು ಈ ಶ್ಲೋಕಗಳಲ್ಲಿ ಉಪಪಾದನೆ ಮಾಡುತ್ತಾರೆ.

(2) ಭವಾನ್= ನೀನು, ಸಾಕ್ಷಾತ್= ಕಣ್ಣೆದುರಿಗೇ ಇರುವ, ಪುರುಷಃ= ಪೂರ್ಣಚೇತನ. ಪ್ರಕೃತೇಃ ಪರಃ= ಪ್ರಕೃತಿಯ ಆಚೆ ಇರುವವನು, ಕೇವಲಾನುಭವಾನಂದರೂಪಃ= ಜಡಾಮಿಶ್ರವಾದ ಜ್ಞಾನಾನಂದಸ್ವರೂಪ, ಸರ್ವಬುದ್ಧಿದೃಕ್= ಎಲ್ಲರ ಬುದ್ಧಿಯನ್ನು ನೋಡುವವನು.

**ಸ್ವದೃಷ್ಟಮದ್ಭುತಂ ರೂಪಂ ಶಿಶೋಸ್ತಸ್ಯ ಚತುರ್ಭುಜಮ್ ।**
**ಇತ್ಥಮಸ್ತೌತ್ ಕಿಲ ಪಿತಾ ದೀಪ್ತಶ್ರೀವತ್ಸಕೌಸ್ತುಭಮ್ ॥ ೩೪೩ ॥**

**ಅರ್ಥ-** ಪಿತಾ= ತಂದೆಯಾದ ವಸುದೇವನು, ಸ್ವದೃಷ್ಟಂ= ತನ್ನಿಂದ ನೋಡಲ್ಪಟ್ಟ, ತಸ್ಯ= ಆ, ಶಿಶೋಃ= ಶಿಶುವಿನ, ಚತುರ್ಭುಜಮ್= ನಾಲ್ಕು ಭುಜಗಳಿಂದ ಕೂಡಿದ, ದೀಪ್ತಶ್ರೀವತ್ಸ ಕೌಸ್ತುಭಮ್= ಹೊಳೆಯುವ ಶ್ರೀವತ್ಸ ಮತ್ತು ಕೌಸ್ತುಭಗಳಿಂದ ಕೂಡಿದ, ಅದ್ಭುತಂ ರೂಪಂ= ಅದ್ಭುತವಾದ ರೂಪವನ್ನು, ಇತ್ಥಂ= ಈ ರೀತಿಯಾಗಿ, ಅಸ್ತೌತ್ ಕಿಲ= ಸ್ತೋತ್ರ ಮಾಡಿದನಷ್ಟೆ.

**ಅನುವಾದ-** ತಂದೆಯಾದ ವಸುದೇವನು ಶಿಶುವಿನ ಚತುರ್ಭುಜಯುಕ್ತವಾದ ಪ್ರಕಾಶಿಸುವ ಶ್ರೀವತ್ಸ ಮತ್ತು ಕೌಸ್ತುಭಗಳಿಂದ ಕೂಡಿದ ಅದ್ಭುತರೂಪವನ್ನು ನೋಡಿ ಹೀಗೆ ಸ್ತೋತ್ರವನ್ನು ಮಾಡಿದನಷ್ಟೆ.

**ವಿವರಣೆ-** ಕೃಷ್ಣನ ದೇಹವನ್ನೇ ನೋಡಿ ವಸುದೇವನು ನೀನು ಪ್ರಕೃತಿಯನ್ನು ಮೀರಿದವನು ಎಂದು ಸ್ತೋತ್ರ ಮಾಡಿದ್ದಾನೆ. ಆದ್ದರಿಂದ ಕೃಷ್ಣನ ದೇಹವೂ ಸಹ ಪ್ರಕೃತಿಯನ್ನು ಮೀರಿದುದು, ಎಂದರೆ ಅಪ್ರಾಕೃತ ಎಂದು ಸಿದ್ಧವಾಗುತ್ತದೆ.

**ಭಾವವಿಲಾಸಿನೀ–** ಸ್ವದೃಷ್ಟಂ ಸ್ವೇನ ವಸುದೇವೇನ ದೃಷ್ಟಮ್ । ಇತ್ಥಂ ಪ್ರಕೃತೇಃ ಪರತ್ವೇನ ಕೇವಲಾನುಭವಾ- ನಂದಸ್ವರೂಪತ್ವೇನ ಚ ॥ ೩೪೩ ॥

**ಅತೋಽಪ್ರಾಕೃತ ಏವಾಭೂದ್ ದಿವ್ಯಾಕಾರೋ ಹರೇರಸೌ ।**
**ಜಡಾಮಿಶ್ರಸುಖಜ್ಞಾನಾತ್ಮಕಹಸ್ತಾಂಘ್ರ್ಯುರೋಮುಖಃ ॥ ೩೪೪ ॥**

**ಅರ್ಥ-** ಅತಃ= ಆದ್ದರಿಂದ, ಹರೇಃ= ಹರಿಯ, ಅಸೌ= ಈ, ಜಡಾಮಿಶ್ರಸುಖ ಜ್ಞಾನಾತ್ಮಕ ಹಸ್ತಾಂಘ್ರ್ಯುರೋಮುಖಃ= ಜಡಮಿಶ್ರಿತವಲ್ಲದ ಸುಖಜ್ಞಾನಾತ್ಮಕವಾದ ಹಸ್ತಪಾದ ವಕ್ಷಸ್‌ಸ್ಥಲ, ಮುಖ ಮೊದಲಾದ, ದಿವ್ಯಾಕಾರಃ= ದಿವ್ಯವಾದ ಆಕೃತಿಯು, ಅಪ್ರಾಕೃತ ಏವ ಅಭೂತ್= ಅಪ್ರಾಕೃತವೆಂದೇ ಸಿದ್ಧವಾಯಿತು.

**ಅನುವಾದ-** ಆದ್ದರಿಂದ ಹರಿಯ ಜಡಾಮಿಶ್ರಿತವಾದ ಸುಖಜ್ಞಾನಸ್ವರೂಪವಾದ ಹಸ್ತ, ಪಾದ, ವಕ್ಷಸ್, ಮುಖ ಮೊದಲಾದ ಈ ದಿವ್ಯಾಕಾರವು ಅಪ್ರಾಕೃತವೆಂದೇ ಸಿದ್ಧವಾಯಿತು.

**ಭಾವವಿಲಾಸಿನೀ–** ಅತಃ ಪ್ರಕೃತಿಪರತ್ವಮುಕ್ತ್ವಾ ಚತುರ್ಭುಜಸ್ಯ ತಸ್ಯ ಕೇವಲಾನುಭವಾನಂದ-ಸ್ವರೂಪತ್ವೇನ ವರ್ಣಿತತ್ವಾತ್ । ಕೇವಲಾನುಭವಾನಂದ ಇತ್ಯತ್ರೋಕ್ತಕೇವಲಪದಸ್ಯಾರ್ಥಮಾಹ– **ಜಡಾಮಿಶ್ರ ಇತಿ** ।। ಸ್ವರೂಪಪದೇನ ಹಸ್ತಪಾದಾದ್ಯಾಕಾರಶರೀರಮೇವೋಚ್ಯತೇ । ಸ್ವರೂಪಮಾತ್ರಪರತ್ವೇ ದೃಶ್ಯಮಾನಾಕಾರಸ್ಯ ಪ್ರಾಕೃತತ್ವಾಪಾತೇನ ಪ್ರಕೃತೇಃ ಪರತ್ವರೂಪ-ವಿಶೇಷಣಸ್ಯಾಸಂಬದ್ಧತ್ವಾಪಾತಾತ್ । ಸ್ವರೂಪಮಾತ್ರೇ ಪ್ರಕೃತಿಪರತ್ವಸ್ಯ ಜೀವಮಾತ್ರೇಽಪಿ ಸದ್ಭಾವಾತ್ । ಅತಃ ಸ್ವದೃಷ್ಟಭಗವನ್ಮೂರ್ತೇರೇವೇಯಂ ಪ್ರಶಂಸಾ ।। ೩೪೪ ।।

**ವಿವರಣೆ-** ಕೇವಲಾನುಭವಾನಂಧ ಎಂಬಲ್ಲಿ ಕೇವಲ ಶಬ್ದಕ್ಕೆ ಜಡಾಮಿಶ್ರಿತ ಎಂದು ಅರ್ಥ. ಆದ್ದರಿಂದ ಪರಮಾತ್ಮನಿಗೆ ಅಂತಹ ಪ್ರಕೃತಿಯಿಂದ ಶಬಲತ್ವವು ಇಲ್ಲ ಎಂದು ಅಭಿಪ್ರಾಯ.

ಭ್ರಮಹೇತುಸ್ತು ಯಾ ಮಾಯಾ ಜೀವೇಜೀವೇ ಚ ಸಂಗತಾ ।
ಸಾ ನೈವ ಶ್ರೂಯತೇ ದೇವೇ ಯಾ ಜೀವೇಽಪಿ ನ ಮುಕ್ತಿಗೇ ।। ೩೪೫ ।।

**ಅರ್ಥ-** ಜೀವೇಜೀವೇ ಚ= ಪ್ರತಿಯೊಬ್ಬ ಜೀವನಲ್ಲಿಯೂ, ಸಂಗತಾ= ಇರುವ, ಭ್ರಮಹೇತುಸ್ತು= ಭ್ರಮಹೇತುವಾದ, ಯಾ ಮಾಯಾ= ಯಾವ ಮಾಯೆಯೋ, ಮುಕ್ತಿಗೇ= ಮೋಕ್ಷದಲ್ಲಿರುವ, ಜೀವೇಽಪಿ= ಜೀವನಲ್ಲಿಯೂ ಕೂಡ, ಯಾ= ಯಾವುದು, ನ= ಇಲ್ಲವೋ, ಆ ಮಾಯೆಯು, ದೇವೇ= ಪರಮಾತ್ಮನಲ್ಲಿ, ನೈವ ಶ್ರೂಯತೇ= ಎಂದೂ ಶ್ರುತಿಯಲ್ಲಿ ಹೇಳಲ್ಪಡುವುದಿಲ್ಲ.

**ಅನುವಾದ-** ಪ್ರತಿಯೊಬ್ಬ ಜೀವನಲ್ಲಿಯೂ ಸಂಗತವಾದ ಭ್ರಮಜನಕವಾದ ಯಾವ ಮಾಯೆಯೋ, ಮುಕ್ತಜೀವನಲ್ಲೂ ಇಲ್ಲದ ಆ ಮಾಯೆಯು ಪರಮಾತ್ಮನಲ್ಲಿ ಇದೆ ಎಂದು ಶ್ರುತಿಯಲ್ಲಿ ಎಲ್ಲಿಯೂ ಹೇಳಲ್ಪಟ್ಟಿಲ್ಲ.

**ಭಾವವಿಲಾಸಿನೀ–** ಏವಂಚ ಜಗದುಪಾದಾನಭೂತಮಾಯಾಶಬಲತ್ವಾಭಾವೇ ಭ್ರಮಹೇತು-ಭೂತಮಾಯಾಶಬಲತ್ವಾಭಾವಃ ಕಿಮು ವಾಚ್ಯಃ? ಇತಿ ಭಾವೇನಾಹ–**ಭ್ರಮಹೇತುರಿತಿ** ।। ಸಾ ಮಾಯಾ। ಯಾ ಭ್ರಮಕರೀ ಮಾಯಾ ಮುಕ್ತಿಗೇ ಜೀವೇಽಪಿ ನ ಸೇತಿ ಸಂಬಂಧಃ ।। ೩೪೫ ।।

**ವಿವರಣೆ–** ದೋಷರೂಪವಾದ ಮಾಯೆಯು ಜೀವನಲ್ಲಿ ಸಂಸಾರಾವಸ್ಥೆಯಲ್ಲಿ ಇದ್ದರೂ ಮೋಕ್ಷಾವಸ್ಥೆಯಲ್ಲಿ ಇಲ್ಲ. ಅನಿತ್ಯಮುಕ್ತವಾದ ಜೀವನಲ್ಲಿಯೇ ಇಲ್ಲದಿರುವ ಆ ಮಾಯೆಯು ನಿತ್ಯಮುಕ್ತನಾದ ಪರಮಾತ್ಮನಲ್ಲಿ ಇದೆ ಎಂದು ಶ್ರುತಿ-ಸ್ಮೃತಿಗಳು ಎಲ್ಲಿಯೂ ಹೇಳಿಲ್ಲ.

**ಕಿಂ ಪುನರ್ನಿತ್ಯಮುಕ್ತೇಽಸ್ಮಿನ್ ಜಡಮಾಯಾನುಪದ್ರವಃ ॥ ೩೪೬ ॥**

**ಅರ್ಥ–** ನಿತ್ಯಮುಕ್ತೇ= ನಿತ್ಯಮುಕ್ತನಾದ, ಅಸ್ಮಿನ್= ಈ ಪರಮಾತ್ಮನಲ್ಲಿ, ಜಡ-ಮಾಯಾನುಪದ್ರವಃ= ಜಡಮಾಯೆಯ ಉಪದ್ರವಾಭಾವವು, ಕಿಂ ಪುನಃ= (ವಕ್ತವ್ಯಃ)= ಹೇಳಲ್ಪಡಬೇಕೆ?

**ಅನುವಾದ–** ನಿತ್ಯಮುಕ್ತನಾದ ಈ ಪರಮಾತ್ಮನಲ್ಲಿ ಜಗತ್ತಿಗೆ ಉಪಾದಾನಕಾರಣವಾದ ಜಡಮಾಯೆಯ ಉಪದ್ರವವಿಲ್ಲ ಎಂದು ಹೇಳಬೇಕೆ?

**ಭಾವವಿಲಾಸಿನೀ– ಪ್ರಕಾರಾಂತರೇಣ ಕೈಮುತ್ಯಮಾಹ– ಕಿಂ ಪುನರಿತಿ ॥ ಭ್ರಮಕರತಯಾಽತಿಕ್ರೂರ-ಮಾಯಾಯಾಃ ಭಗವದ್ಬಾಧನಾಸಮರ್ಥತ್ವೇ ಶಾಂತಾಯಾ ಜಗದುಪಾದಾನಭೂತಮಾಯಾ-ಯಾಸ್ತದ್ಬಾಧಾಸಾಮರ್ಥ್ಯಂ ಕಿಂ ವಾಚ್ಯಮಿತಿ ಭಾವಃ। ದೇಹಾದಿರೂಪಮಾಯಾಯಾ ಭ್ರಮಕರ-ಮಾಯಾ ಮೂಲಮ್ । ತದಭಾವೇ ಅಸ್ಯಾ ಅಪ್ಯಭಾವಃ ಸುಸ್ಥ ಇತ್ಯಪಿ ದ್ರಷ್ಟವ್ಯಮ್ ॥೩೪೬॥**

**ವಿವರಣೆ–** ಮಾಯೆ ಎರಡು ವಿಧ (1) ಭ್ರಾಂತಿಕರೀ ಮಾಯೆ (2) ಉಪಾದಾನ ಕಾರಣ ಮಾಯೆ. ಮೊದಲನೆಯದು ಕ್ರೂರ. ಎರಡನೆಯದು ಶಾಂತ. ಕ್ರೂರಮಾಯೆಯೇ ಇಲ್ಲದ ಪರಮಾತ್ಮನಲ್ಲಿ ಶಾಂತಮಾಯೆಯು ಇಲ್ಲ ಎಂದು ಹೇಳಬೇಕೆ?

**ವಿಲಜ್ಜಮಾನಯಾ ಯಸ್ಯ ಸ್ಥಾತುಮೀಕ್ಷಾಪಥೇಽಮುಯಾ ।**
**ವಿಮೋಹಿತಾ ವಿಕತ್ಥಂತೇ ಮಮಾಹಮಿತಿ ದುರ್ಧಿಯಃ ॥ ೩೪೭ ॥**

**ನಮಸ್ತುಭ್ಯಂ ಭಗವತೇ ಬ್ರಹ್ಮಣೇ ಪರಮಾತ್ಮನೇ ।**
**ನ ಯತ್ರ ಶ್ರೂಯತೇ ಮಾಯಾ ಲೋಕದೃಷ್ಟಿವಿಕಲ್ಪನಾ ॥ ೩೪೮ ॥**

**ಅರ್ಥ–** ಯಸ್ಯ=ಯಾವ ಪರಮಾತ್ಮನ, ಈಕ್ಷಾಪಥೇ=ದೃಷ್ಟಿಮಾರ್ಗದಲ್ಲಿ, ಸ್ಥಾತುಂ=ನಿಲ್ಲಲು, ವಿಲಜ್ಜಮಾನಯಾ=ಹಿಂಜರಿಯುವ, ಅಮುಯಾ=ಈ ಪ್ರಕೃತಿಯಿಂದ, ವಿಮೋಹಿತಾಃ= ಮೋಹಕ್ಕೆ ಒಳಗಾಗಿ, ಮಮ=ನನ್ನದು, ಅಹಂ=ನಾನು, ಇತಿ=ಹೀಗೆ, ದುರ್ಧಿಯಃ=ಕೆಟ್ಟಬುದ್ಧಿಯುಳ್ಳವರಾಗಿ, ವಿಕತ್ಥಂತೇ=ದರ್ಪದ ಮಾತುಗಳನ್ನಾಡುತ್ತಾರೋ,

ಲೋಕದೃಷ್ಟಿವಿಕಲ್ಪನಾ=ಜೀವನಿಗೆ ಅಯಥಾರ್ಥಜ್ಞಾನವನ್ನು ಉಂಟು ಮಾಡುವ, ಮಾಯಾ= ಮಾಯೆಯು, ಯತ್ರ=ಯಾರಲ್ಲಿ, ನ ಶ್ರೂಯತೇ=ಕೇಳಲ್ಪಡುವುದೇ ಇಲ್ಲವೋ, ಅಂತಹ, ಭಗವತೇ=ಷಡ್ಗುಣೈಶ್ವರ್ಯಸಂಪನ್ನನಾದ, ಪರಮಾತ್ಮನೇ=

ಸರ್ವೋತ್ತಮನಾದ, ಬ್ರಹ್ಮಣೇ=ಗುಣಪೂರ್ಣನಾದ, ತುಭ್ಯಂ=ನಿನಗೆ, ನಮಃ= ನಮಸ್ಕಾರವು.

**ಅನುವಾದ–** ಯಾರ ದೃಷ್ಟಿಗೆ ಬೀಳಲು ಹಿಂಜರಿಯುವ ಈ ಮಾಯೆಯಿಂದ ಮೋಹಿತರಾದ ದುರ್ಬುದ್ಧಿಯ ಜನರು ನಾನು-ನನ್ನದು ಎಂದು ದರ್ಪದ ಮಾತುಗಳನ್ನಾಡುತ್ತಾರೋ....

ಜನರಿಗೆ ಅಯಥಾರ್ಥಜ್ಞಾನವನ್ನು ಉಂಟು ಮಾಡುವ ಈ ಮಾಯೆಯು ಯಾರಲ್ಲಿ ಇದೆ ಎಂದು ಯಾವ ಆಗಮವೂ ಹೇಳುವುದಿಲ್ಲವೋ, ಅಂತಹ ಷಡ್ಗುಣೈಶ್ವರ್ಯ ಸಂಪನ್ನನಾದ, ಗುಣಪರಿಪೂರ್ಣನಾದ, ಸರ್ವೋತ್ತಮನಾದ ನಿನಗೆ ನಮಸ್ಕಾರ.

**ಭಾವವಿಲಾಸಿನೀ–** ಭಗವತೋ ಮಾಯಾದೂರತ್ವೇ ಸ್ಪಷ್ಟಾನಿ ಭಾಗವತವಾಕ್ಯಾನ್ಯಾಹ– **ವಿಲಜ್ಜಮಾನಯೇತ್ಯಾದಿನಾ** ॥ ಅಮುಯಾ ಪ್ರಾಕ್ ಪ್ರಸ್ತುತಯಾ ಮಾಯಯಾ ಲೋಕ-ದೃಷ್ಟಿವಿಕಲ್ಪನಾ ಲೋಕಾನಾಂ ಜೀವಾನಾಂ ದೃಷ್ಟಿಂ ವಿಕಲ್ಪಯತಿ ಭ್ರಮಯತೀತಿ ಲೋಕದೃಷ್ಟಿ-ವಿಕಲ್ಪನಾ ॥ ೩೪೭–೩೫೦ ॥

**ವಿವರಣೆ–** (1) ಶ್ರೀ ಹರಿಯು ಮಾಯಾಸಂಬಂಧರಹಿತ ಎಂದು ಹೇಳುವ ಸ್ಪಷ್ಟ ಭಾಗವತವಾಕ್ಯಗಳನ್ನು (347-350) ಹೇಳುತ್ತಾರೆ.

(೨) ಪರಃ ಸ್ವಶ್ಚೇತ್ಯಸದ್ಗ್ರಾಹಃ ಪುಂಸಾಂ ಯನ್ಮಾಯಯಾ ಕೃತಃ ।
ವಿಮೋಹಿತಧಿಯಾಂ ದೃಷ್ಟಸ್ತಸ್ಮೈ ಭಗವತೇ ನಮಃ ॥ - ಭಾಗವತ ೭.೫.೧೧

(3) ಶ್ಲೋಕ 347. ಭಾಗವತ 2.5.13

ತ್ವಮಾದ್ಯಃ ಪುರುಷಃ ಸಾಕ್ಷಾದೀಶ್ವರಃ ಪ್ರಕೃತೇಃ ಪರಃ ।
ಮಾಯಾಂ ವ್ಯುದಸ್ಯ ಚಿಚ್ಛಕ್ತ್ಯಾ ಕೈವಲ್ಯೇ ಸ್ಥಿತ ಆತ್ಮನಿ ॥ ೩೪೯ ॥

**ಅರ್ಥ–** (ಭಾಗವತ ೧.೭.೨೩)ತ್ವಂ=ನೀನು, ಆದ್ಯಃ=ಸೃಷ್ಟಿಯ ಆರಂಭದಲ್ಲಿರುವವನು, ಪುರುಷಃ= ಷಡ್ಗುಣೈಶ್ವರ್ಯ- ಸಂಪನ್ನ, ಈಶ್ವರಃ=ಜಗತ್ತಿನ ಒಡೆಯನು, ಪ್ರಕೃತೇಃ ಪರಃ=ಪ್ರಕೃತಿಯನ್ನು ಮೀರಿ ಇರುವವನು. ಚಿಚ್ಛಕ್ತ್ಯಾ=ಚೇತನಸ್ವರೂಪವಾದ ಶಕ್ತಿಯಿಂದಲೇ, ಮಾಯಾಂ= ಮಾಯೆ ಯನ್ನು, ವ್ಯುದಸ್ಯ=ತಿರಸ್ಕರಿಸಿ, ಕೈವಲ್ಯೇ=ಪ್ರಕೃತಿಯ ಸಂಪರ್ಕವಿಲ್ಲದ, ಆತ್ಮನಿ= ಸ್ವರೂಪದಲ್ಲಿಯೇ, ಸ್ಥಿತಃ= ಇರುವಿ.

**ಅನುವಾದ–** ಶ್ರೀಹರಿಯೇ! ನೀನೇ ಆದಿಪುರುಷ. ಸೃಷ್ಟಿಗಿಂತಲೂ ಪೂರ್ವದಲ್ಲಿ ಇದ್ದವನು. ನೀನೇ ಈ ಜಗತ್ತಿನ ಅಧಿಪತಿ. ನಿನ್ನ ಚಿಚ್ಛಕ್ತಿಯಿಂದ ಮಾಯೆಯನ್ನು

**ವಿವರಣೆ-** ದೋಷರೂಪವಾದ ಮಾಯೆಯು ಜೀವನಲ್ಲಿ ಸಂಸಾರಾವಸ್ಥೆಯಲ್ಲಿ ಇದ್ದರೂ ಮೋಕ್ಷಾವಸ್ಥೆಯಲ್ಲಿ ಇಲ್ಲ. ಅನಿತ್ಯಮುಕ್ತವಾದ ಜೀವನಲ್ಲಿಯೇ ಇಲ್ಲದಿರುವ ಆ ಮಾಯೆಯು ನಿತ್ಯಮುಕ್ತನಾದ ಪರಮಾತ್ಮನಲ್ಲಿ ಇದೆ ಎಂದು ಶ್ರುತಿ-ಸ್ಮೃತಿಗಳು ಎಲ್ಲಿಯೂ ಹೇಳಿಲ್ಲ.

**ಕಿಂ ಪುನರ್ನಿತ್ಯಮುಕ್ತೇಽಸ್ಮಿನ್ ಜಡಮಾಯಾನುಪದ್ರವಃ ॥ ೩೪೬ ॥**

**ಅರ್ಥ-** ನಿತ್ಯಮುಕ್ತೇ= ನಿತ್ಯಮುಕ್ತನಾದ, ಅಸ್ಮಿನ್= ಈ ಪರಮಾತ್ಮನಲ್ಲಿ, ಜಡ-ಮಾಯಾನುಪದ್ರವಃ= ಜಡಮಾಯೆಯ ಉಪದ್ರವಾಭಾವವು, ಕಿಂ ಪುನಃ= (ವಕ್ತವ್ಯಃ)= ಹೇಳಲ್ಪಡಬೇಕೆ?

**ಅನುವಾದ-** ನಿತ್ಯಮುಕ್ತನಾದ ಈ ಪರಮಾತ್ಮನಲ್ಲಿ ಜಗತ್ತಿಗೆ ಉಪಾದಾನಕಾರಣವಾದ ಜಡಮಾಯೆಯ ಉಪದ್ರವವಿಲ್ಲ ಎಂದು ಹೇಳಬೇಕೆ?

**ಭಾವವಿಲಾಸಿನೀ–ಪ್ರಕಾರಾಂತರೇಣ ಕೈಮುತ್ಯಮಾಹ– ಕಿಂ ಪುನರಿತಿ ॥ ಭ್ರಮಕರತಯಾಽತಿಕ್ರೂರ-ಮಾಯಾಯಾಃ ಭಗವದ್ಬಾಧನಾಸಮರ್ಥತ್ವೇ ಶಾಂತಾಯಾ ಜಗದುಪಾದಾನಭೂತಮಾಯಾ-ಯಾಸ್ತದ್ಬಾಧಾಸಾಮರ್ಥ್ಯಂ ಕಿಂ ವಾಚ್ಯಮಿತಿ ಭಾವಃ। ದೇಹಾದಿರೂಪಮಾಯಾಯಾ ಭ್ರಮಕರ-ಮಾಯಾ ಮೂಲಮ್ । ತದಭಾವೇ ಅಸ್ಯಾ ಅಪ್ಯಭಾವಃ ಸುಸ್ಥ ಇತ್ಯಪಿ ದ್ರಷ್ಟವ್ಯಮ್ ॥೩೪೬॥**

**ವಿವರಣೆ-** ಮಾಯೆ ಎರಡು ವಿಧ (1) ಭ್ರಾಂತಿಕರೀ ಮಾಯೆ (2) ಉಪಾದಾನ ಕಾರಣ ಮಾಯೆ. ಮೊದಲನೆಯದು ಕ್ರೂರ. ಎರಡನೆಯದು ಶಾಂತ. ಕ್ರೂರಮಾಯೆಯೇ ಇಲ್ಲದ ಪರಮಾತ್ಮನಲ್ಲಿ ಶಾಂತಮಾಯೆಯು ಇಲ್ಲ ಎಂದು ಹೇಳಬೇಕೆ?

**ವಿಲಜ್ಜಮಾನಯಾ ಯಸ್ಯ ಸ್ಥಾತುಮೀಕ್ಷಾಪಥೇಽಮುಯಾ ।**
**ವಿಮೋಹಿತಾ ವಿಕತ್ಥಂತೇ ಮಮಾಹಮಿತಿ ದುರ್ಧಿಯಃ ॥ ೩೪೭ ॥**

**ನಮಸ್ತುಭ್ಯಂ ಭಗವತೇ ಬ್ರಹ್ಮಣೇ ಪರಮಾತ್ಮನೇ ।**
**ನ ಯತ್ರ ಶ್ರೂಯತೇ ಮಾಯಾ ಲೋಕದೃಷ್ಟಿವಿಕಲ್ಪನಾ ॥ ೩೪೮ ॥**

**ಅರ್ಥ–** ಯಸ್ಯ=ಯಾವ ಪರಮಾತ್ಮನ, ಈಕ್ಷಾಪಥೇ=ದೃಷ್ಟಿಮಾರ್ಗದಲ್ಲಿ, ಸ್ಥಾತುಂ=ನಿಲ್ಲಲು, ವಿಲಜ್ಜಮಾನಯಾ=ಹಿಂಜರಿಯುವ, ಅಮುಯಾ=ಈ ಪ್ರಕೃತಿಯಿಂದ, ವಿಮೋಹಿತಾಃ= ಮೋಹಕ್ಕೆ ಒಳಗಾಗಿ, ಮಮ=ನನ್ನದು, ಅಹಂ=ನಾನು, ಇತಿ=ಹೀಗೆ, ದುರ್ಧಿಯಃ=ಕೆಟ್ಟ ಬುದ್ಧಿಯುಳ್ಳವರಾಗಿ, ವಿಕತ್ಥಂತೇ=ದರ್ಪದ ಮಾತುಗಳನ್ನಾಡುತ್ತಾರೋ,

ಲೋಕದೃಷ್ಟಿವಿಕಲ್ಪನಾ=ಜೀವನಿಗೆ ಅಯಥಾರ್ಥಜ್ಞಾನವನ್ನು ಉಂಟು ಮಾಡುವ, ಮಾಯಾ= ಮಾಯೆಯು, ಯತ್ರ=ಯಾರಲ್ಲಿ, ನ ಶ್ರೂಯತೇ=ಕೇಳಲ್ಪಡುವುದೇ ಇಲ್ಲವೋ, ಅಂತಹ, ಭಗವತೇ=ಷಡ್ಗುಣೈಶ್ವರ್ಯಸಂಪನ್ನನಾದ, ಪರಮಾತ್ಮನೇ=

ಸರ್ವೋತ್ತಮನಾದ, ಬ್ರಹ್ಮಣೇ=ಗುಣಪೂರ್ಣನಾದ, ತುಭ್ಯಂ=ನಿನಗೆ, ನಮಃ= ನಮಸ್ಕಾರವು.

**ಅನುವಾದ–** ಯಾರ ದೃಷ್ಟಿಗೆ ಬೀಳಲು ಹಿಂಜರಿಯುವ ಈ ಮಾಯೆಯಿಂದ ಮೋಹಿತರಾದ ದುರ್ಬುದ್ಧಿಯ ಜನರು ನಾನು-ನನ್ನದು ಎಂದು ದರ್ಪದ ಮಾತುಗಳನ್ನಾಡುತ್ತಾರೋ....

ಜನರಿಗೆ ಅಯಥಾರ್ಥಜ್ಞಾನವನ್ನು ಉಂಟು ಮಾಡುವ ಈ ಮಾಯೆಯು ಯಾರಲ್ಲಿ ಇದೆ ಎಂದು ಯಾವ ಆಗಮವೂ ಹೇಳುವುದಿಲ್ಲವೋ, ಅಂತಹ ಷಡ್ಗುಣೈಶ್ವರ್ಯ ಸಂಪನ್ನನಾದ, ಗುಣಪರಿಪೂರ್ಣನಾದ, ಸರ್ವೋತ್ತಮನಾದ ನಿನಗೆ ನಮಸ್ಕಾರ.

**ಭಾವವಿಲಾಸಿನೀ–** ಭಗವತೋ ಮಾಯಾದೂರತ್ವೇ ಸ್ಪಷ್ಟಾನಿ ಭಾಗವತವಾಕ್ಯಾನ್ಯಾಹ– **ವಿಲಜ್ಜಮಾನಯೇತ್ಯಾದಿನಾ** ॥ ಅಮುಯಾ ಪ್ರಾಕ್ ಪ್ರಸ್ತುತಯಾ ಮಾಯಯಾ ಲೋಕ-ದೃಷ್ಟಿವಿಕಲ್ಪನಾ ಲೋಕಾನಾಂ ಜೀವಾನಾಂ ದೃಷ್ಟಿಂ ವಿಕಲ್ಪಯತಿ ಭ್ರಮಯತೀತಿ ಲೋಕದೃಷ್ಟಿ-ವಿಕಲ್ಪನಾ ॥ ೩೪೭–೩೫೧ ॥

**ವಿವರಣೆ–** (1) ಶ್ರೀ ಹರಿಯು ಮಾಯಾಸಂಬಂಧರಹಿತ ಎಂದು ಹೇಳುವ ಸ್ಪಷ್ಟ ಭಾಗವತವಾಕ್ಯಗಳನ್ನು (347-350) ಹೇಳುತ್ತಾರೆ.

(೨) ಪರಃ ಸ್ವಶ್ಚೇತ್ಯಸದ್ಗ್ರಾಹಃ ಪುಂಸಾಂ ಯನ್ಮಾಯಯಾ ಕೃತಃ ।
ವಿಮೋಹಿತಧಿಯಾಂ ದೃಷ್ಟಸ್ತಸ್ಮೈ ಭಗವತೇ ನಮಃ ॥ - ಭಾಗವತ ೭.೫.೧೧

(3) ಶ್ಲೋಕ 347. ಭಾಗವತ 2.5.13

**ತ್ವಮಾದ್ಯಃ ಪುರುಷಃ ಸಾಕ್ಷಾದೀಶ್ವರಃ ಪ್ರಕೃತೇಃ ಪರಃ ।**
**ಮಾಯಾಂ ವ್ಯುದಸ್ಯ ಚಿಚ್ಛಕ್ತ್ಯಾ ಕೈವಲ್ಯೇ ಸ್ಥಿತ ಆತ್ಮನಿ ॥ ೩೪೯ ॥**

**ಅರ್ಥ–** (ಭಾಗವತ ೧.೭.೨೩)ತ್ವಂ=ನೀನು, ಆದ್ಯಃ=ಸೃಷ್ಟಿಯ ಆರಂಭದಲ್ಲಿರುವವನು, ಪುರುಷಃ= ಷಡ್ಗುಣೈಶ್ವರ್ಯ- ಸಂಪನ್ನ, ಈಶ್ವರಃ=ಜಗತ್ತಿನ ಒಡೆಯನು, ಪ್ರಕೃತೇಃ ಪರಃ=ಪ್ರಕೃತಿಯನ್ನು ಮೀರಿ ಇರುವವನು. ಚಿಚ್ಛಕ್ತ್ಯಾ=ಚೇತನಸ್ವರೂಪವಾದ ಶಕ್ತಿಯಿಂದಲೇ, ಮಾಯಾಂ= ಮಾಯೆ ಯನ್ನು, ವ್ಯುದಸ್ಯ=ತಿರಸ್ಕರಿಸಿ, ಕೈವಲ್ಯೇ=ಪ್ರಕೃತಿಯ ಸಂಪರ್ಕವಿಲ್ಲದ, ಆತ್ಮನಿ= ಸ್ವರೂಪದಲ್ಲಿಯೇ, ಸ್ಥಿತಃ= ಇರುವಿ.

**ಅನುವಾದ–** ಶ್ರೀಹರಿಯೇ! ನೀನೇ ಆದಿಪುರುಷ. ಸೃಷ್ಟಿಗಿಂತಲೂ ಪೂರ್ವದಲ್ಲಿ ಇದ್ದವನು. ನೀನೇ ಈ ಜಗತ್ತಿನ ಅಧಿಪತಿ. ನಿನ್ನ ಚಿಚ್ಛಕ್ತಿಯಿಂದ ಮಾಯೆಯನ್ನು

ತಿರಸ್ಕರಿಸಿ ಪ್ರಕೃತಿ ಹಾಗೂ ಪ್ರಾಕೃತದ ಸಂಬಂಧವಿಲ್ಲದ ಸ್ವರೂಪದೇಹವನ್ನು ಹೊಂದಿರುವವನು.

**ಸ ಏವ ಜೀವಲೋಕಸ್ಯ ಮಾಯಾಮೋಹಿತಚೇತಸಃ ।**
**ವಿಧಿತ್ಸುಸ್ಸ್ವೇನ ವೀರ್ಯೇಣ ಶ್ರೇಯೋ ಧರ್ಮಾದಿಲಕ್ಷಣಮ್ ॥ ೩೫೦ ॥**

**ಅರ್ಥ–** (ಭಾಗವತ ೧.೭.೨೪)ಮಾಯಾಮೋಹಿತ ಚೇತಸಃ= ಮಾಯೆಯಿಂದ ಮೋಹಕ್ಕೊಳಗಾದ ಮನಸ್ಸುಳ್ಳ, ಜೀವಲೋಕಸ್ಯ= ಜೀವಸಮುದಾಯಕ್ಕೆ, ಸ್ವೇನ ವೀರ್ಯೇಣ= ತನ್ನ ಶಕ್ತಿಯಿಂದ, ಧರ್ಮಾದಿಲಕ್ಷಣಮ್= ಧರ್ಮ ಮೊದಲಾದ, ಶ್ರೇಯಃ= ಶ್ರೇಯಸ್ಸನ್ನು, ವಿಧಿತ್ಸುಃ= ಮಾಡಲು ಬಯಸುವವನು, ಸ ಏವ= ಆ ಪರಮಾತ್ಮನೇ.

**ಅನುವಾದ–** ಮಾಯೆಯಿಂದ ಮೋಹಕ್ಕೊಳಗಾದ ಮನಸ್ಸುಳ್ಳ ಜೀವಸಮುದಾಯಕ್ಕೆ, ತನ್ನ ಶಕ್ತಿಯಿಂದ ಧರ್ಮ-ಅರ್ಥ-ಕಾಮ-ಮೋಕ್ಷ-ಈ ಶ್ರೇಯಸ್ಸನ್ನು ಮಾಡಲು ಬಯಸುವವನು ಆ ಪರಮಾತ್ಮನೇ.

**ಇತಿ ಭಾಗವತೇ ಪ್ರೋಕ್ತಚತುರ್ಮುಖಮುಖೋಕ್ತಿತಃ ।**
**ಕೃಷ್ಣಸ್ಯ ಬಂಧಕೀಭೂತಮಾಯಾದೂರತ್ವನಿರ್ಣಯಾತ್ ॥ ೩೫೧ ॥**

**ಅರ್ಥ–** ಇತಿ=ಹೀಗೆ, ಭಾಗವತೇ=ಭಾಗವತದಲ್ಲಿ, ಪ್ರೋಕ್ತ= ಹೇಳಲ್ಪಟ್ಟ, ಚತುರ್ಮುಖಮುಖೋಕ್ತಿತಃ= ಚತುರ್ಮುಖ ಬ್ರಹ್ಮದೇವರ ಬಾಯಿಂದ ಬಂದ ಮಾತಿನಿಂದ, ಕೃಷ್ಣಸ್ಯ= ಕೃಷ್ಣನಿಗೆ, ಬಂಧಕೀಭೂತ=ಬಂಧನಕ್ಕೆ ಕಾರಣವಾದ, ಮಾಯಾದೂರತ್ವ-ನಿರ್ಣಯಾತ್= ಪ್ರಕೃತಿಸಂಬಂಧರಾಹಿತ್ಯವನ್ನು ನಿರ್ಣಯಿಸಿರುವುದರಿಂದ (ಹರಿಯು ಮಾಯಾದೂರನಾಗಿದ್ದಾನೆ).

**ಅನುವಾದ–** ಹಿಂದಿನ ಶ್ಲೋಕಗಳಲ್ಲಿ ಹೇಳಿದಂತೆ ಭಾಗವತದಲ್ಲಿ ಚತುರ್ಮುಖ ಬ್ರಹ್ಮದೇವರ ಮುಖದಿಂದ ಹೊರಹೊಮ್ಮಿದ ಸ್ತೋತ್ರದಲ್ಲಿ ಪರಮಾತ್ಮನಿಗೆ ಮಾಯಾಸಂಬಂಧದ ಲೇಶವೂ ಇಲ್ಲ ಎಂದು ನಿರ್ಣಯಿಸಿರುವುದರಿಂದ ಶ್ರೀಹರಿಯು ಮಾಯಾದೂರನಾಗಿದ್ದಾನೆ.

**ನ ಯತ್ರ ಮಾಯೇತ್ಯಾದ್ಯುಕ್ತ್ಯಾ ಯಲ್ಲೋಕೋಽಪಿ ನ ಮಾಯಿಕಃ ।**
**ಕಥಂ ಮಾಯಾಮಯಾಕಾರಃ ತಲ್ಲೋಕೇಶೋ ಭವೇದ್ ವದ ॥ ೩೫೨ ॥**

**ಅರ್ಥ–** ಯತ್ರ= ಎಲ್ಲಿ, ನ ಮಾಯಾ=ಪ್ರಕೃತಿಯ ಪ್ರವೇಶವಿಲ್ಲವೋ. ಇತ್ಯಾದ್ಯುಕ್ತ್ಯಾ= ಇವೇ ಮೊದಲಾದ ವಚನಗಳಿಂದ, ಯಲ್ಲೋಕೋಽಪಿ=ಯಾವ ಹರಿಯ ವೈಕುಂಠಲೋಕವೂ ಕೂಡ, ನ ಮಾಯಿಕಃ=ಪ್ರಕೃತಿಯ ಸ್ಪರ್ಶವಿಲ್ಲದ್ದೋ, ತಲ್ಲೋಕೇಶಃ=

ಅಂತಹ ಲೋಕಕ್ಕೆ ಒಡೆಯನಾದ ಪರಮಾತ್ಮನು, ಮಾಯಾಮಯಾಕಾರಃ=ಪ್ರಕೃತಿಯ ವಿಕಾರವಾದ ಆಕಾರವುಳ್ಳವನು, ಕಥಂ=ಹೇಗೆ, ಭವೇತ್=ಆಗುತ್ತಾನೆ? ವದ=ಹೇಳು.

**ಅನುವಾದ–** 'ನ ಯತ್ರ ಮಾಯಾ...' ಈ ಭಾಗವತ ಶ್ಲೋಕದಲ್ಲಿ ವೈಕುಂಠಲೋಕದಲ್ಲಿ ಪ್ರಕೃತಿಯ ಪ್ರವೇಶವೇ ಇಲ್ಲ ಎಂದು ಹೇಳಲಾಗಿದೆ. ಆ ಲೋಕವೇ ಪ್ರಕೃತಿನಿರ್ಮಿತವಲ್ಲ; ಆ ಲೋಕದ ಒಡೆಯನಾದ ಪರಮಾತ್ಮನು ಪ್ರಕೃತಿಯ ವಿಕಾರವಾದ ಶರೀರವನ್ನು ಹೇಗೆ ಹೊಂದುತ್ತಾನೆ?

**ಭಾವವಿಲಾಸಿನೀ–** ಭಗವತಃ ಅಮಾಯಿಕದೇಹವತ್ತ್ವೇ ಯುಕ್ತ್ಯಂತರಮಾಹ– ನ ಯತ್ರೇತಿ ॥ ನ ಯತ್ರ ಮಾಯಾ' ಇತ್ಯಾದ್ಯುಕ್ತ್ಯಾ= ನ ಯತ್ರ ಮಾಯಾ ಕಿಮುತಾಪರೇ ಹರೇರನುವ್ರತಾ ಯತ್ರ ಸುರಾಸುರಾರ್ಚಿತಾಃ' ಇತ್ಯುಕ್ತ್ಯಾ । ಯಲ್ಲೋಕಃ ಯಸ್ಯ ಕೃಷ್ಣಸ್ಯ ಲೋಕಃ । ತಲ್ಲೋಕೇಶಃ ಅಮಾಯಿಕವೈಕುಣ್ಠೇಶಃ ॥ ೩೫೨ ॥

**ವಿವರಣೆ–**

ನ ವರ್ತತೇ ಯತ್ರ ರಜಸ್ತಮಸ್ತಯೋಃ<br>
ಸತ್ತ್ವಂ ಚ ಮಿಶ್ರಂ ನಚ ಕಾಲವಿಕ್ರಮಃ ।<br>
ನ ಯತ್ರ ಮಾಯಾ ಕಿಮುತಾಪರೇ ಹರೇ-<br>
ರನುವ್ರತಾ ಯತ್ರ ಸುರಾಸುರಾರ್ಚಿತಾಃ ॥ (ಭಾಗವತ ೨-೯-೧೦)

ವೈಕುಂಠಲೋಕದಲ್ಲಿ ರಜಸ್ ಮತ್ತುತ್ತಮೋಗುಣಗಳು ಇಲ್ಲ. ಇವೆರಡೂ ಸೇರಿರುವ ಸತ್ವವೂ ಇಲ್ಲ. ಕಾಲವಿಲ್ಲ ಎಂದರೆ, ಕಾಲನಿಮಿತ್ತವಾದ ವಿಕಾರಗಳಿಲ್ಲ; ಆದ್ದರಿಂದ ಹರಿಯ ದೇಹವು ಮಾಯಿಕವಲ್ಲವೆಂದು ಸಿದ್ಧವಾಗುತ್ತದೆ. ಅಲ್ಲಿ ಪ್ರಕೃತಿಯ ವಿಕಾರಗಳಿಲ್ಲ ಎಂದು ಹೇಳಬೇಕೇ? ಅಲ್ಲಿ ಭಗವದ್ಭಕ್ತರಾದ ಸುರರಿಂದ ಆದರಿಸಲ್ಪಟ್ಟ ಹರಿಭಕ್ತರು ಮಾತ್ರ ಇದ್ದಾರೆ.

ಮಾಯಾ ಜಯಾ ಕೃತಿಃ ಶಾಂತಿರಿತಿ ರೂಪಚತುಷ್ಟಯಮ್ ।<br>
ಶ್ರಿಯೋಽಸ್ತಿ ಯಾ ಹರೇರ್ಜಾಯಾ ವಾಸುದೇವಾದಿರೂಪಿಣಃ ॥ ೩೫೩ ॥

**ಅರ್ಥ–** ವಾಸುದೇವಾದಿರೂಪಿಣಃ=ವಾಸುದೇವ ಮೊದಲಾದ ರೂಪಗಳುಳ್ಳ, ಹರೇಃ=ಪರಮಾತ್ಮನಿಗೆ, ಯಾ, ಜಾಯಾ=ಯಾರು ಭಾರ್ಯೆಯೋ, ತಸ್ಯಾಃ ಶ್ರಿಯಃ=ಆ ಶ್ರೀದೇವಿಗೆ, ಮಾಯಾ-ಜಯಾ-ಕೃತಿಃ-ಶಾಂತಿಃ ಇತಿ=ಮಾಯಾ, ಜಯಾ, ಕೃತಿ, ಶಾಂತಿ ಎಂದು, ರೂಪಚತುಷ್ಟಯಂ=ನಾಲ್ಕು ರೂಪಗಳು, ಅಸ್ತಿ=ಇವೆ.

**ಅನುವಾದ–** ವಾಸುದೇವ ಮೊದಲಾದ ರೂಪಗಳುಳ್ಳ ಶ್ರೀಹರಿಯ ಪತ್ನಿ ಶ್ರೀ. ಅವಳಿಗೆ ಮಾಯಾ, ಜಯಾ, ಕೃತಿ, ಶಾಂತಿ ಎಂದು ನಾಲ್ಕು ರೂಪಗಳು.

**ಭಾವವಿಲಾಸಿನೀ-** ಮಹಾಲಕ್ಷ್ಮ್ಯಾ ಅಪಿ ಮಾಯಾಶಬ್ದವಾಚ್ಯತ್ವಸ್ಯ ಪುರಾಣಾದೌ ಪ್ರಸಿದ್ಧತ್ವಾತ್ ಸೈವ ಮಾಯಾ ನ ತು ತ್ವದೀಯಾನಿರ್ವಾಚ್ಯಾಽವಿದ್ಯೇತ್ಯಾಹ- **ಮಾಯೇತಿ** ॥ ಮಾಯಾ ವಾಸುದೇವಸ್ಯ ಪತ್ನೀ, ಜಯಾ ಸಂಕರ್ಷಣಸ್ಯ, ಕೃತಿಃ ಪ್ರದ್ಯುಮ್ನಸ್ಯ, ಶಾಂತಿಃ ಅನಿರುದ್ಧಸ್ಯ । ತದೇವ ಸ್ಪಷ್ಟಯತಿ- **ವಾಸುದೇವಾದಿರೂಪಿಣ ಇತಿ** ॥ ೩೫೩ ॥

**ವಿವರಣೆ-**

ಇತ್ಥಂ ವಿಚಿಂತ್ಯ ಪರಮಃ ಸ ತು ವಾಸುದೇವ-
ನಾಮಾ ಬಭೂವ ನಿಜಮುಕ್ತಿಪದಪ್ರದಾತಾ ।
ತಸ್ಯಾಜ್ಞಯೈವ ನಿಯತಾಥ ರಮಾಪಿ ರೂಪಂ
ಬಭ್ರೇ ದ್ವಿತೀಯಮಪಿ ಯತ್ ಪ್ರವದಂತಿ ಮಾಯಾಮ್ ॥

ಸಂಕರ್ಷಣಶ್ಚ ಸ ಬಭೂವ ಪುನಃ ಸುನಿತ್ಯಃ
ಸಂಹಾರಕಾರಣವಪುಸ್ತದನುಜ್ಞಯೈವ ।
ದೇವೀ ಜಯೇತ್ಯನುಬಭೂವ ಸ ಮುಕ್ತಿಹೇತೋಃ
ಪ್ರದ್ಯುಮ್ನತಾಮುಪಗತಃ ಕೃತಿತಾಂ ಚ ದೇವೀ ॥

ಸ್ಥಿತ್ಯೈ ಪುನಃ ಸ ಭಗವಾನನಿರುದ್ಧನಾಮಾ
ದೇವೀ ಚ ಶಾಂತಿರಭವಚ್ಛರದಾಂ ಸಹಸ್ರಮ್ ।

(ಮಹಾಭಾರತತಾತ್ಪರ್ಯನಿರ್ಣಯ, ೧-೬,೭,೮)

ಶ್ರೀಹರಿಯು ತನ್ನ ಭಕ್ತರಿಗೆ ಮೋಕ್ಷವನ್ನು ನೀಡಲು ವಾಸುದೇವರೂಪವನ್ನು ಧರಿಸಿದ. ಆಗ ರಮಾದೇವಿಯು ಮಾಯಾ ಎಂಬ ರೂಪವನ್ನು ಧರಿಸಿದಳು. ಅನಂತರ, ಸಂಹಾರಕಾರಣವಾದ ಸಂಕರ್ಷಣರೂಪವನ್ನು ಧರಿಸಿದನು. ರಮಾದೇವಿಯು ಜಯಾ ಎಂಬ ರೂಪವನ್ನು ಪಡೆದಳು. ಶ್ರೀಹರಿಯು ಸೃಷ್ಟಿಕಾರ್ಯಕ್ಕಾಗಿ ಪ್ರದ್ಯುಮ್ನರೂಪವನ್ನು ಧರಿಸಿದ. ಆಗ ಲಕ್ಷ್ಮೀದೇವಿಯು ಕೃತಿ ಎಂಬ ರೂಪವನ್ನು ಹೊಂದಿದಳು. ಶ್ರೀನಾರಾಯಣನು ಈ ಜಗತ್ತಿನ ರಕ್ಷಣೆಗಾಗಿ ಅನಿರುದ್ಧರೂಪವನ್ನು ಪಡೆದನು. ಆಗ ಲಕ್ಷ್ಮೀದೇವಿಯು ಶಾಂತಿ ಎಂಬ ರೂಪವನ್ನು ಪಡೆದಳು.

ನಾಮಧೇಯಾನಿ ಕುರ್ವಂತಿ ಸ್ಥಾನಾನಿ ಚ ನರಾ ಭುವಿ ।
ಮಾಯಾ ನಾರಾಯಣೇಶಾನಾ ಶಾರದೇತ್ಯಂಬಿಕೇತಿ ಚ ॥ ೩೫೪ ॥

ಇತಿ ಪ್ರಭಾಷ್ಯ ತಂ ದೇವೀ ಮಾಯಾ ಭಗವತೀ ಭುವಿ ।
ಬಹುನಾಮನಿಕೇತೇಷು ಬಹುನಾಮಾ ಬಭೂವ ಹ ।
ಇತಿ ಭಾಗವತೋಕ್ತ್ಯಾ ಚ ಮಾಯಾ ದುರ್ಗಾತ್ಮಿಕಾ ರಮಾ ॥ ೩೫೫ ॥

**ಅರ್ಥ–** (ಭಾಗವತ ೧೦.೩.೧೧, ೧೩) ನಾಮಧೇಯಾನಿ..... ಕೇತಿ ಚ । ಇತಿ ಪ್ರಭಾಷ್ಯ......... ಬಭೂವ ಹ । ಇತಿ= 'ನಾಮಧೇಯಾನಿ.... ಬಭೂವ ಹ' ಎಂದು, ಭಾಗವತೋಕ್ತ್ಯಾ ಚ= ಭಾಗವತದ ಉಕ್ತಿಯಿಂದ, ದುರ್ಗಾತ್ಮಿಕಾ= ದುರ್ಗಾರೂಪಳಾದ, ರಮಾ= ರಮೆಯು, ಮಾಯಾ= ಮಾಯಾ.

**ಅರ್ಥ–** (ಭಾಗವತ ೧೦.೫.೧೩) ಭಗವತೀ=ಷಡ್ಗುಣೈಶ್ವರ್ಯಸಂಪನ್ನಳಾದ, ದೇವೀ ಮಾಯಾ=ದೇವೀ ಮಾಯೆಯು, ಇತಿ=ಹೀಗೆ, ತಂ= ಅವನಿಗೆ (ಕಂಸನಿಗೆ) ಪ್ರಭಾಷ್ಯ=ಹೇಳಿ, ಭುವಿ=ಭೂಮಿಯಲ್ಲಿ, ಬಹುನಾಮನಿಕೇತೇಷು= ಅನೇಕ ಹೆಸರಿನ ಮಂದಿರಗಳಲ್ಲಿ, ಬಹುನಾಮಾ=ಅನೇಕ ಹೆಸರುಳ್ಳವಳು, ಬಭೂವ ಹ= ಆದಳು.

**ಭಾವವಿಲಾಸಿನೀ**-ನಾಮಧೇಯಾನೀತಿ ದಶಮಸ್ಕಂಧೇ ಮಹಾಲಕ್ಷ್ಮೀಂ ಪ್ರತಿ ವಿಷ್ಣೋರ್ವಚನಮ್ । ಕಾನಿ ನಾಮಧೇಯಾನೀತ್ಯತ ಆಹ– **ಮಾಯಾ ನಾರಾಯಣೀತ್ಯಾದಿ** ॥ **ಇತಿ ಪ್ರಭಾಷ್ಯೇತಿ** ॥ ತತ್ರೈವ ದುರ್ಗಾರೂಪಮಹಾಲಕ್ಷ್ಮೀವಚನಮ್ । ಸ್ಥಾನಾನಿ ಚ ನರಾ ಭುವಿ' ಇತಿ ದೇವಾಲಯಸ್ಯಾ-ಪ್ಯುಕ್ತತ್ವಾದ್ ದುರ್ಗೈವೇಯಂ ದೇವೀ ನತು ಪರಾಭಿಲಷಿತಾಽವಿದ್ಯಾ । ತಥಾತ್ವೇ ಉತ್ತರಪ್ರತ್ಯುತ್ತರಾಯೋಗಾತ್ । ತಯೈವ ಲಕ್ಷ್ಮೀರೂಪಮಾಯಯೈವ ಮಾಯಾ ಲಕ್ಷ್ಮೀಃ ಅಸ್ಯ ವರ್ತತ ಇತಿ ಮಾಯೀ ಲಕ್ಷ್ಮೀಧರ ಇತ್ಯರ್ಥಃ । ತಯಾ ಮಾಯಯಾ ಲಕ್ಷ್ಮ್ಯಾಖ್ಯಮಾಯಯಾ । ಅತೋ ಮಾಯಾನಿರ್ಮಿತತ್ವೇಽಪಿ ನ ಜಗತೋ ಮಿಥ್ಯಾತ್ವಮ್ ॥ ೩೫೪–೩೫೬ ॥

**ವಿವರಣೆ–** (1) 354ನೇ ಶ್ಲೋಕವು ಭಾಗವತ 10.3 ರಲ್ಲಿ ಮಹಾಲಕ್ಷ್ಮಿಯನ್ನು ಕುರಿತು ವಿಷ್ಣುವಿನ ವಚನ. ಇದರಿಂದ 'ಮಾಯಾ' ಮಹಾಲಕ್ಷ್ಮಿಯ ಹೆಸರು ಎಂದು ತಿಳಿಯುತ್ತದೆ. 355ನೇ ಶ್ಲೋಕವು ಭಾಗವತದಲ್ಲಿ 10.5.13ನೇ ಶ್ಲೋಕ. ಇಲ್ಲಿ 'ಮಾಯಾ' ಶಬ್ದಕ್ಕೆ ಮಹಾಲಕ್ಷ್ಮಿ ಎಂದು ಅರ್ಥ.

'ಮಾಯಾ'ಗೆ ಮಂದಿರವನ್ನು ಮಾಡುತ್ತಾರೆ ಎಂದು ಹೇಳಿರುವುದರಿಂದ, ಈ ಶ್ಲೋಕದಲ್ಲಿ ಹೇಳಲ್ಪಟ್ಟಿರುವ 'ಮಾಯಾ' ದುರ್ಗಾದೇವಿಯೇ. ಅವಿದ್ಯೆಗೆ ಯಾರೂ ಮಂದಿರವನ್ನು ನಿರ್ಮಿಸುವುದಿಲ್ಲ. ಮಾಯೆಯು 'ಅವಿದ್ಯೆ' ಆಗಿದ್ದರೆ ಪರಮಾತ್ಮ ಮತ್ತು ಮಾಯೆಯ ವಚನ ಮತ್ತು ಅಂಗೀಕಾರವಚನವು ಯುಕ್ತವಾಗುವುದಿಲ್ಲ; ಮಾಯೆಯು ಕಂಸನನ್ನು ಕುರಿತು ಆಡಿದ ಮಾತು ಯುಕ್ತವಾಗುವುದಿಲ್ಲ.

(2) ಕಂಸ ಕೃಷ್ಣನ ತಂಗಿಯಾದ ದುರ್ಗೆಯನ್ನು ಕೊಲ್ಲಲು ಪ್ರಯತ್ನಿಸಿದ. ಅವನ ಕೈಯಿಂದ ಜಾರಿ ಆಕಾಶಕ್ಕೆ ಹಾರಿದಳು. ಅಷ್ಟಭುಜವುಳ್ಳವಳಾಗಿ ನಿಂತಳು. 'ನಿನ್ನನ್ನು ಯಮಸದನಕ್ಕೆ ಅಟ್ಟುವ ಮೃತ್ಯುದೇವತೆ ಈಗಾಗಲೆ ಅವತರಿಸಿದ್ದಾನೆ. ಅಕಾರಣವಾಗಿ ಹಿಂಸಿಸಿ ಸ್ತ್ರೀಹತ್ಯೆಯ ಪಾಪಕ್ಕೆ ಗುರಿಯಾಗಬೇಡ' ಈ ರೀತಿ ಮಾತನ್ನು ಹೇಳಿ ಅನೇಕ ಮಂದಿರಗಳಲ್ಲಿ ಅನೇಕ ಹೆಸರಿನಿಂದ ನೆಲೆಸಿದಳು. ಈ ರೀತಿ ಭಾಗವತದಲ್ಲಿ (10.3.11,

12, 13) ಹೇಳಿರುವುದರಿಂದಲೂ ಮಾಯಾ ಎಂದರೆ ಅನಿರ್ವಚನೀಯವಾದ ಅವಿದ್ಯೆಯಲ್ಲ. ಲಕ್ಷ್ಮೀದೇವಿಯ ದುರ್ಗಾರೂಪವೇ ಮಾಯಾ. ಇದಲ್ಲದೆ, ಇಲ್ಲಿ ಉತ್ತರ-ಪ್ರತ್ಯುತ್ತರಗಳಿವೆ. ಆದರಿಂದಲೂ ಮಾಯೆ ಎಂದರೆ ಅವಿದ್ಯೆಯಲ್ಲ ಎಂದು ನಿರ್ಣಯಿಸಬಹುದು. ಪರಮಾತ್ಮನನ್ನು ಮಾಯೀ ಎನ್ನುವರು. ಮಾಯಾ ಎಂಬ ಹೆಸರಿನ ಲಕ್ಷ್ಮೀದೇವಿಯನ್ನು ಹೊಂದಿರುವವನು ಎಂದು ಅರ್ಥ. ಆದ್ದರಿಂದ ಜಗತ್ತು ಮಾಯಾನಿರ್ಮಿತವೆಂದರೆ ಲಕ್ಷ್ಮೀದೇವಿಯಿಂದ ನಿರ್ಮಿತ ಎಂದು ಅರ್ಥ. ಮಿಥ್ಯಾ ಎಂದು ಅರ್ಥವಲ್ಲ.

(3) ನರಾಃ=ಮಾನವರು, ಭುವಿ=ಭೂಮಿಯಲ್ಲಿ, ಮಾಯಾ, ನಾರಾಯಣೀ ಈಶಾನಾ, ಶಾರದೇತಿ=ಮಾಯಾ, ನಾರಾಯಣೀ, ಈಶಾನಾ, ಶಾರದಾ ಎಂದು, ಅಂಬಿಕೇತಿ ಚ=ಅಂಬಿಕಾ ಎಂದೂ, ನಾಮಧೇಯಾನಿ=ಹೆಸರುಗಳನ್ನು, ಚ=ಮತ್ತು, ಸ್ಥಾನಾನಿ=ಮಂದಿರಗಳನ್ನು, ಕುರ್ವಂತಿ=ಮಾಡುತ್ತಾರೆ.

**ಯಾ ಕೈಂಕರ್ಯಕರೀ ತಸ್ಯ ಸರ್ವದಾ ಸಹಚಾರಿಣೀ ।**
**ತಯೈವ ಮಾಯೀ ಸ ಜಗನ್ನಿರ್ಮಮೇ ಮಾಯಯಾ ತಯಾ ॥ ೩೫೬ ॥**

**ಅರ್ಥ–** ಯಾ=ಯಾವ ಲಕ್ಷ್ಮೀದೇವಿಯು, ತಸ್ಯ=ಆ ಪರಮಾತ್ಮನ, ಕೈಂಕರ್ಯಕರೀ=ಸೇವೆ ಮಾಡುವವಳಾಗಿ, ಸರ್ವದಾ=ಯಾವಾಗಲೂ, ಸಹಚಾರಿಣೀ= ಜೊತೆಯಲ್ಲಿ ಇರುವಳೋ ತಯೈವ=ಆ ಲಕ್ಷ್ಮೀದೇವಿಯಿಂದಲೇ, ಸಃ= ಆ ಪರಮಾತ್ಮನು, ಮಾಯೀ= ಮಾಯೀ (ಎನಿಸಿರುವನು). ತಯಾ ಮಾಯಯಾ=ಆ ಮಾಯೆಯಿಂದಲೇ, ಜಗತ್= ಜಗತ್ತನ್ನು, ನಿರ್ಮಮೇ=ನಿರ್ಮಿಸಿರುವನು.

**ಅನುವಾದ–** **ಲಕ್ಷ್ಮೀದೇವಿಯು ಪರಮಾತ್ಮನ ಸೇವೆಯನ್ನು ಮಾಡುತ್ತಾ, ಅವನೊಂದಿಗೆ ಸದಾ ನೆಲೆಸಿರುವಳು. ಅವಳಿಂದಲೇ ಪರಮಾತ್ಮನು ಮಾಯೀ ಎನಿಸಿರುವನು. ಆ ಮಾಯೆಯ ಮೂಲಕ ಅವನು ಜಗತ್ತನ್ನು ನಿರ್ಮಿಸಿದನು.**

**ವಿವರಣೆ–** ಲಕ್ಷ್ಮೀದೇವಿಗೆ 'ಮಾಯಾ' ಎಂದು ಹೆಸರು. ಇವಳಿಗೆ ಪರಮಾತ್ಮನೊಂದಿಗೆ ನಿತ್ಯಯೋಗ. ಆದ್ದರಿಂದ ಪರಮಾತ್ಮನು ಮಾಯೀ. ಈ ಮಾಯೆಯ ಮೂಲಕವೇ ಅವನು ಜಗತ್ತನ್ನು ಸೃಷ್ಟಿಸಿದ್ದಾನೆ.

**ಯೋ ನಃ ಪಿತಾ ವಿಷ್ಣುರಸೌ ಲೋಕಮಾತಾ ಹಿ ಸೇಂದಿರಾ ।**
**ತಸ್ಮಾತ್ ಸ್ವರೂಪಮಾಯೇಚ್ಛಾ ಬಾಹ್ಯೇ ಶ್ರೀಪ್ರಕೃತೀ ವಶೇ ॥ ೩೫೭ ॥**

**ಅರ್ಥ–** ಯೋ ನಃ ಪಿತಾ='ಯೋ ನಃ ಪಿತಾ' ಎಂಬ ಶ್ರುತಿಪ್ರಮಾಣದಿಂದ, ಅಸೌ ವಿಷ್ಣುಃ= ಈ ವಿಷ್ಣುವು, ನಃ=ನಮ್ಮ, ಪಿತಾ=ತಂದೆಯು, ಸಾ ಇಂದಿರಾ=ಆ ಲಕ್ಷ್ಮೀದೇವಿಯು,

ಲೋಕಮಾತಾ= ಜಗನ್ಮಾತೆಯು, ತಸ್ಮಾತ್= ಆದ್ದರಿಂದ, ಇಚ್ಛಾ= ವಿಷ್ಣುವಿನ ಇಚ್ಛೆಯು (ಮತ್ತು ಶಕ್ತಿ-ತೇಜಸ್‌ಗಳು) ಸ್ವರೂಪಮಾಯಾ= ಅವನ ಸ್ವರೂಪಮಾಯೆ. ಶ್ರೀಪ್ರಕೃತೀ= ಶ್ರೀ ಮತ್ತು ಜಡ ಪ್ರಕೃತಿಯು, ಬಾಹ್ಯೇ= ಹೊರಗಿರುವ= ವಿಷ್ಣುಭಿನ್ನವಾದ ಮಾಯೆಗಳು. ವಶೇ=ವಿಷ್ಣುವಿನ ಅಧೀನದಲ್ಲಿವೆ.

**ಅನುವಾದ–** 'ಯೋ ನಃ ಪಿತಾ ಜನಿತಾ ಯೋ ವಿಧಾತಾ...' ಎಂದು ಋಗ್ವೇದ ೧೦.೮೨.೩ ಶ್ರುತಿ ವಿಷ್ಣುವನ್ನು ಜಗತ್ತಿನ ತಂದೆ ಎಂದು ಹೇಳುತ್ತದೆ. ಆ ಇಂದಿರೆಯು ಲೋಕಮಾತಾ ಎಂದು ಕೋಶವು ಹೇಳಿದೆ. ಆದ್ದರಿಂದ ಪರಮಾತ್ಮನ ಇಚ್ಛೆ ಮತ್ತು ತೇಜಸ್‌ಗಳು ಅವನ ಸ್ವರೂಪ ಮಾಯೆ. ಶ್ರೀ ಮತ್ತು ಪ್ರಕೃತಿಗಳು ಅವನಿಂದ ಭಿನ್ನವಾದ ಮಾಯೆಗಳು. ಇವು ಅವನಿಗೆ ಅಧೀನ.

**ಭಾವವಿಲಾಸಿನೀ–** ಲಕ್ಷ್ಮೀರೂಪಮಾಯಾಯಾ ಏವ ಜಗತ್ಕಾರಣತ್ವೇ ಯುಕ್ತ್ಯಂತರಮಾಹ– **ಯೋ ನ ಇತಿ** ॥ 'ಯೋ ನಃ ಪಿತಾ ಜನಿತಾ ಯೋ ವಿಧಾತಾ' ಇತ್ಯಾದಿಶ್ರುತ್ಯಾ ನೋಽಸ್ಮಾಕಂ ಪಿತಾ ಅಸೌ ವಿಷ್ಣುರಿತ್ಯಾವೃತ್ತ್ಯಾ ಯೋಜನೀಯಮ್ । ಸೇಂದಿರಾ ಲೋಕಮಾತಾ ಹಿ । 'ಇಂದಿರಾ ಲೋಕಮಾತಾ ಮಾ' ಇತ್ಯಭಿಧಾನಪ್ರಸಿದ್ಧಿಂ ಹಿಶಬ್ದೇನ ಸೂಚಯತಿ । ಏವಂಚ ವಿಷ್ಣುರ್ಮಾಯಯಾ ಜಗನ್ನಿರ್ಮಮೇ ಇತ್ಯುಕ್ತೇ ವಿಷ್ಣೋಃ ಪಿತೃತ್ವೇನ ಮಾಯಾ ಲಕ್ಷ್ಮೀರೇವ ಭವೇತ್ । ಪಿತಾ ಹಿ ಪತ್ನ್ಯಾ ಪುತ್ರಂ ಜನಯತಿ । ನತ್ವನ್ಯೇನ । ಅತೋ ಮಾಯಾಪದೇನ ಸೃಷ್ಟಿಸಮಯೇ ಲಕ್ಷ್ಮ್ಯಾ ಏವ ಗ್ರಹಣೇ ಯುಕ್ತ್ಯಂತರಮೇತತ್ । ಉಕ್ತಮುಪಸಂಹರತಿ– **ತಸ್ಮಾದಿತಿ** ॥ ಇಚ್ಛೇತ್ಯುಪಲಕ್ಷಣಮ್ । ಶಕ್ತಿತೇಜಸೀ ಅಪಿ ಗ್ರಾಹ್ಯೇ । ಬಾಹ್ಯೇ ವಿಷ್ಣುಸ್ವರೂಪಾದ್ ಬಾಹ್ಯೇ ಭಿನ್ನೇ ಇತ್ಯರ್ಥಃ। ಮಾಯೇ ಶ್ರೀಶ್ಚ ಪ್ರಕೃತಿಶ್ಚ ಶ್ರೀಪ್ರಕೃತೀ ವಶೇ ವಿಷ್ಣೋರ್ವಶೇ। ಅಭಿಮನ್ಯಮಾನಾ ಜಡಮಾಯಾ ಪ್ರಕೃತಿಃ ಅಭಿಮಾನಿನೀ ಮಾಯಾ ಶ್ರೀರಿತಿ ವಿವೇಕಃ। ತತ್ರ ಶ್ರಿಯಸ್ಸರ್ವದಾ ಹರಿಣಾ ಸಹವಾಸೇಽಪಿ ನ ಕಾಚಿದಸ್ಮಾಕಂ ಹಾನಿಃ । ಅನ್ಯಸ್ಯಾಃ ಸೃಷ್ಟಿಸಮಯೇ ಉಪಾದಾನತಯಾ ತತ್ಸಮೀಪವಾಸೇಽಪಿ ನ ತಸ್ಯ ತಯಾ ಶಬಲತ್ವಮ್ ॥ ೩೫೭ ॥

**ವಿವರಣೆ–** ಲಕ್ಷ್ಮೀರೂಪವಾದ ಮಾಯೆಯೇ ಜಗತ್ತಿಗೆ ಕಾರಣ, ಅವಿದ್ಯೆಯಲ್ಲ ಎಂಬ ವಿಷಯದಲ್ಲಿ ಮತ್ತೊಂದು ಯುಕ್ತಿಯನ್ನು ಹೇಳುತ್ತಿದ್ದಾರೆ. 'ಯೋ ನಃ ಪಿತಾ ಜನಿತಾ ಯೋ ವಿಧಾತಾ' ಈ ಶ್ರುತಿಯು ಪರಮಾತ್ಮನನ್ನು ತಂದೆ ಎಂದು ಹೇಳಿದೆ. ಲಕ್ಷ್ಮೀದೇವಿಯು ಜಗತ್ತಿನ ತಾಯಿ. 'ಇಂದಿರಾ ಲೋಕಮಾತಾ ಮಾ' ಎಂದು ಅಮರಕೋಶವು ಹೇಳಿದೆ. ವಿಷ್ಣುವು ತಂದೆಯಾಗಿರುವುದರಿಂದ, ಮಾಯಾ ಎಂದರೆ ತಾಯಿಯಾದ ಲಕ್ಷ್ಮಿಯೇ ಆಗಬೇಕು. ಆದ್ದರಿಂದ, ವಿಷ್ಣುವು ಮಾಯೆಯಿಂದ ಜಗತ್ತನ್ನು ನಿರ್ಮಿಸಿದ ಎಂಬಲ್ಲಿ ಮಾಯೆ ಎಂದರೆ ಲಕ್ಷ್ಮೀದೇವಿ ಎಂದೇ ಅರ್ಥ.

ಇದುವರೆಗೂ ಹೇಳಿದ್ದನ್ನು 'ತಸ್ಮಾತ್' ಎಂದು ಉಪಸಂಹಾರ ಮಾಡುತ್ತಿದ್ದಾರೆ. ವಿಷ್ಣುವಿನ ಇಚ್ಛಾ-ತೇಜಸ್‌ಗಳು ಅವನ ಸ್ವರೂಪಮಾಯೆ. ಶ್ರೀ ಮತ್ತು ಪ್ರಕೃತಿಗಳು ಅವನಿಂದ ಭಿನ್ನ

ಮಾಯೆಗಳು. ಅವನ ಅಧೀನದಲ್ಲಿವೆ. ಅಭಿಮಾನಿನಿಯಾದ ಮಾಯೆ ಲಕ್ಷ್ಮೀದೇವಿ. ಅವಳಿಂದ ಅಭಿಮನ್ಯವಾದ ಮಾಯೆ ಜಡಮಾಯೆ. ಶ್ರೀ ಎನಿಸಿದ ಮಾಯೆಯ ಸಂಬಂಧವು ಶ್ರೀಹರಿಗೆ ಯಾವಾಗಲೂ ಇದೆ ಎಂದು ಒಪ್ಪುತ್ತೇವೆ. ನಮ್ಮ ಸಿದ್ಧಾಂತಕ್ಕೆ ಹಾನಿ ಇಲ್ಲ. ಜಡವಾದ ಮಾಯೆಯು ಉಪಾದಾನಕಾರಣವಾಗಿದೆ. ಸೃಷ್ಟಿಕಾಲದಲ್ಲಿ ಅದೂ ಸಹ ಶ್ರೀಹರಿಯ ಸಮೀಪದಲ್ಲಿ ಇರುತ್ತದೆ. ಆದರೆ ಆ ಮಾಯೆಯಿಂದಾಗಿ ಬ್ರಹ್ಮನು ಶಬಲನಾಗುವುದಿಲ್ಲ.

**ಅಚೇತನಾ ಚೇತನೇತಿ ದ್ವಿವಿಧಾ ಪ್ರಕೃತಿರ್ಮತಾ ।**
**ತ್ರಿಗುಣಾಽಚೇತನಾ ತತ್ರ ಚೇತನಾ ಶ್ರೀಹರಿಪ್ರಿಯಾ ॥**
**ತೇ ಉಭೇ ವಿಷ್ಣುವಶಗೇ ಜಗತಃ ಕಾರಣೇ ಮತೇ ।**
**ಪಿತಾ ವಿಷ್ಣುಃ ಸ ಜಗತೋ ಮಾತಾ ಶ್ರೀರ್ಯಾ ತ್ವಚೇತನಾ ॥**
**ಉಪಾದಾನಂ ತು ಜಗತಃ ಸೈವ ವಿಷ್ಣುಬಲೇರಿತಾ ॥** (ಗೀತಾತಾತ್ಪರ್ಯನಿರ್ಣಯ, ೭-೪)

ಅಚೇತನ ಮತ್ತು ಚೇತನ ಎಂದು ಪ್ರಕೃತಿ ಎರಡು ವಿಧ. ತ್ರಿಗುಣಾತ್ಮಕಪ್ರಕೃತಿಯು ಅಚೇತನ, ಲಕ್ಷ್ಮೀದೇವಿಯು ಚೇತನಪ್ರಕೃತಿ. ಈ ಎರಡು ಪ್ರಕೃತಿಗಳು ವಿಷ್ಣುವಿನ ಅಧೀನ ಮತ್ತು ಜಗತ್ತಿಗೆ ಕಾರಣ. ಜಗತ್ತಿನ ತಂದೆ ವಿಷ್ಣು. ಜಗತ್ತಿನ ತಾಯಿ ರಮಾದೇವಿ. ವಿಷ್ಣುವಿನ ಬಲದಿಂದ ಪ್ರೇರಿತವಾದ ಅಚೇತನ ಪ್ರಕೃತಿಯು ಜಗತ್ತಿಗೆ ಉಪಾದಾನ ಕಾರಣ.

**ಚತುರ್ಥಿಂ ತು ಚತುರ್ಥಾರ್ಥೀ ನ ಸ್ಮರೇದ್ ಭ್ರಮದಾಂ ಹರೌ ॥ ೩೫೮ ॥**

**ಅರ್ಥ–** ಚತುರ್ಥಾರ್ಥೀ= ನಾಲ್ಕನೆಯದನ್ನು= ಮೋಕ್ಷವನ್ನು ಬಯಸುವವನು, ಭ್ರಮದಾಂ=ಭ್ರಮೆಯನ್ನು ಉಂಟುಮಾಡುವ, ಚತುರ್ಥಾಂ=ನಾಲ್ಕನೆಯದನ್ನು= ಅವಿದ್ಯೆಯನ್ನು, ಹರೌ=ಶ್ರೀಹರಿಯಲ್ಲಿ, ನ ಸ್ಮರೇತ್=ಚಿಂತಿಸಬಾರದು.

**ಅನುವಾದ-** ನಾಲ್ಕನೆಯದನ್ನು ಮೋಕ್ಷವನ್ನು ಬಯಸುವವನು, ಭ್ರಮೆಯನ್ನು ಉಂಟುಮಾಡುವ, ನಾಲ್ಕನೆಯದನ್ನು ಅವಿದ್ಯೆಯನ್ನು, ಶ್ರೀಹರಿಯಲ್ಲಿ, ಚಿಂತಿಸಬಾರದು.

**ಭಾವವಿಲಾಸಿನೀ–** ಚತುರ್ಥೀಂ ನಯನಪಿಧಾನಭೂತಾಂ ಭ್ರಮದಾಂ ಭ್ರಮಕರೀಂ ಹರೌ ನ ಸ್ಮರೇತ್ । ಹರಿನಯನೇ ವಾ ಹರಿಸಮೀಪೇ ವಾ ತಿಷ್ಠತೀತಿ ಸೃಷ್ಟಿಕಾಲೇಽನ್ಯದಾ ವಾ ನ ಸ್ಮರೇತ್ । ಕಿಂತು ಅನಾದ್ಯನಂತಕಾಲೇಷು ಜೀವೇಷ್ವೇವ ಸಾ ತಿಷ್ಠತಿ । ಅತಃ ಸ್ವರೂಪೇಚ್ಛಾದಿರೂಪಮಾಯಾತ್ರಯಾತಿರಿಕ್ತಬಾಹ್ಯಮಾಯಾತ್ರಯೇಣಾಪಿ ನ ವಿಷ್ಣೋಃ ಶಬಲತ್ವಮ್ । ಪರೋದೀರಿತಮಾಯಾ ತು ಸಪ್ತಮರಸಾಯಿತಾ । ತಯಾ ಶಬಲತ್ವವಾರ್ತಾಪಿ ನೋಚಿತೇತಿ ಭಾವಃ ॥ ೩೫೮ ॥

**ವಿವರಣೆ–** ಅವಿದ್ಯಾರೂಪವಾದ ಮಾಯೆಯು ದೃಷ್ಟಿಯನ್ನು ಮರೆಮಾಡುತ್ತದೆ. ನಮ್ಮ ಕಣ್ಣನ್ನೇ ಮುಚ್ಚುತ್ತದೆ. ಸದಾ ಭ್ರಾಂತಿಯನ್ನು ಉಂಟುಮಾಡುತ್ತದೆ. ಅದನ್ನು ಹರಿಯಲ್ಲಿ ಎಂದಿಗೂ ಚಿಂತಿಸಬಾರದು. ಅಂತಹ ಮಾಯೆಯು ಹರಿಯ ಸಮೀಪದಲ್ಲಿ, ಹರಿಯ

ನಯನದಲ್ಲಿ ಸೃಷ್ಟಿಕಾಲದಲ್ಲಿ ಅಥವಾ ಇನ್ನು ಯಾವುದೇ ಕಾಲದಲ್ಲಿ ಇರುತ್ತದೆ ಎಂದು ತಿಳಿಯಬಾರದು. ಆ ಮಾಯೆಯು ಜೀವರಲ್ಲಿಯೇ ಅನಾದ್ಯನಂತಕಾಲಗಳಲ್ಲಿ ಇರುವುದು. ಆದ್ದರಿಂದ, ಶ್ರೀಹರಿಯ ಸ್ವರೂಪವೇ ಆದ ಜ್ಞಾನ, ಇಚ್ಛೆ, ಶಕ್ತಿ - ಈ ಮೂರು ಮಾಯೆಗಳಿಂದಲೂ, ಅತಿರಿಕ್ತವಾದ ಜಡಪ್ರಕೃತಿ, ಲಕ್ಷ್ಮೀದೇವಿ ಮತ್ತು ಮಯನ ಮಾಯೆ- ಈ ಮೂರು ಮಾಯೆಗಳಿಂದಲೂ ವಿಷ್ಣುವು ಶಬಲನಾಗುವುದಿಲ್ಲ. ಪರರು ಹೇಳಿದ ಮಾಯೆಯು ಏಳನೇ ರಸದಂತೆ. ವಿಷ್ಣುವಿನಲ್ಲಿ ಅಸಂಭಾವಿತ. ಅದರ ಸಂಬಂಧದಿಂದ ಬ್ರಹ್ಮನನ್ನು ಶಬಲನೆನ್ನುವುದು ಅಸಮಂಜಸ.

ಮುಖ್ಯತೋ ವಿಷ್ಣುಮಾಹಾತ್ಮ್ಯಂ ಮಾಯಾಶಬ್ದೋದಿತಂ ಭವೇತ್ ।
ಪ್ರಧಾನತ್ವಾಚ್ಚ ಮಾತೃತ್ವಾನ್ಮೇಯತ್ವಾಚ್ಚೈವ ತಸ್ಯ ಹಿ ॥ (ಭಾಗವತತಾತ್ಪರ್ಯ, ೨-೯-೪೨)

**ವಿಜ್ಞಾನಾಸ್ತ್ರೇಣ ಯೋ ಮಾಯಾಮಹರದ್ ಬಾಣಮಂತ್ರಿಣಃ ।**
**ಅನ್ಯೈರಹನ್ಯಮಾನಾಂ ಚ ಸಾ ಕಥಂ ಸಾತ್ವತರ್ಷಭೇ ॥ ೩೫೯ ॥**

**ಅರ್ಥ–** ಬಾಣಮಂತ್ರಿಣಃ=ಬಾಣಾಸುರನ ಮಂತ್ರಿಯ, ಅನ್ಯೈಃ=ಬೇರೆಯವರಿಂದ, ಅಹನ್ಯಮಾನಾಂ=ನಾಶಪಡಿಸಲಾಗದ, ಮಾಯಾಂ=ಮಾಯೆಯನ್ನು, ವಿಜ್ಞಾನಾಸ್ತ್ರೇಣ= ವಿಜ್ಞಾನಾಸ್ತ್ರದಿಂದ, ಯಃ=ಯಾರು, ಅಹರದ್=ನಾಶಪಡಿಸಿದನೋ ಅಂತಹ, ಸಾತ್ವತರ್ಷಭೇ= ಯಾದವಶ್ರೇಷ್ಠನಾದ ಕೃಷ್ಣನಲ್ಲಿ, ಸಾ=ಆ ಮಾಯೆಯು, ಕಥಂ=ಹೇಗೆ?

**ಅನುವಾದ–** ಬಾಣಾಸುರನ ಮಂತ್ರಿಯು ಪ್ರಯೋಗಿಸಿದ ಮಾಯೆಯನ್ನು ಭೇದಿಸಲು ಯಾರಿಗೂ ಆಗಲಿಲ್ಲ. ಆಗ ಶ್ರೀಹರಿಯು ತಾನೇ ವಿಜ್ಞಾನಾಸ್ತ್ರವನ್ನು ಪ್ರಯೋಗಿಸಿ ಆ ಮಾಯೆಯನ್ನು ಕತ್ತರಿಸಿದನು. ಇಂತಹ ಮಾಯೆಯು ಶ್ರೀಕೃಷ್ಣನಲ್ಲಿ ಹೇಗೆ?

**ಭಾವವಿಲಾಸಿನೀ–** ಲೌಕಿಕಮಾಯಾಂತರಂ ವದನ್ ತನ್ನಿರಾಕರಣಸಮರ್ಥಸ್ಯ ಭಗವತೋ ಮಾಯಾಂತರನಿರಾಕರಣಮಪಿ ಸಮಾನನ್ಯಾಯತ್ವಾತ್ ಸಿದ್ಧ್ಯತೀತ್ಯಾಶಯೇನಾಹ– **ವಿಜ್ಞಾನಾಸ್ತ್ರೇಣೇತಿ** ॥ ಸಾ ಬಾಣಮನ್ತ್ರಿಣೋ ಮಾಯಾ ಅನ್ಯಾ ವಾ ॥ ೩೫೯ ॥

**ವಿವರಣೆ–** ಬೇರೆ ಯಾರಿಂದಲೂ ನಾಶಗೊಳಿಸಲಾಗದ ಮಾಯೆಯನ್ನು ಶ್ರೀಕೃಷ್ಣನು ನಾಶಗೊಳಿಸಿದ್ದಾನೆ. ಆದ್ದರಿಂದಲೇ ಅವನ ಮೇಲೆ ಯಾವ ಮಾಯೆಯ ಪ್ರಭಾವವೂ ಇಲ್ಲ.

**ಮಯಮಾಯಾ ಹಿ ಸಾ ಸತ್ಯಾ ಮಿಥ್ಯಾರ್ಥಾನ್ ದರ್ಶಯೇತ್ ಪರಮ್ ।**
**ತ್ರಿವಿಧಾ ದೇವಮಾಯೇಯಂ ಸತ್ಯಾ ಸತ್ಯಾರ್ಥಕಾರಿಣೀ ॥ ೩೬೦ ॥**

**ಅರ್ಥ–** ಸಾ= ಪ್ರಸಿದ್ಧವಾದ, ಮಯಮಾಯಾ= ಮಯನ ಮಾಯೆಯು ಸತ್ಯಾ= ಸತ್ಯವೇ, ಪರಂ= ಆದರೆ, ಮಿಥ್ಯಾರ್ಥಾನ್=ಮಿಥ್ಯಾ ವಸ್ತುಗಳನ್ನು, ದರ್ಶಯೇತ್=

ತೋರಿಸುತ್ತದೆ. ತ್ರಿವಿಧಾ=ಮೂರು ವಿಧವಾದ, ಸತ್ಯಾ=ಸತ್ಯವಾದ, ಇಯಂ ದೇವಮಾಯಾ= ಈ ಪರಮಾತ್ಮನ ಮಾಯೆಯು, ಸತ್ಯಾರ್ಥಕಾರಿಣೀ=ಸತ್ಯವಾದ ವಸ್ತುಗಳನ್ನು ನಿರ್ಮಿಸುತ್ತದೆ.

**ಅನುವಾದ–** ಮಯನ ಮಾಯೆಯು ಸತ್ಯವೇ. ಆದರೆ ಅದು ಮಿಥ್ಯಾವಸ್ತುಗಳನ್ನೇ ತೋರಿಸುತ್ತದೆ. ಸತ್ಯವಾದ, ಮೂರು ವಿಧವಾದ ಪರಮಾತ್ಮ ಮಾಯೆಯು ಸತ್ಯವಾದ ಅರ್ಥಗಳನ್ನೇ ನಿರ್ಮಿಸುತ್ತದೆ.

**ಭಾವವಿಲಾಸಿನೀ–** ಮಯಮಾಯಾ ಹಿ ಮಯೇನ ದೈತ್ಯಕಾರುಣಾ ನಿರ್ಮಿತಾ ಮಯ-ಮಾಯಾ । ಸತ್ಯಾ ಮನ್ತ್ರೌಷಧಾದಿರೂಪತ್ವಾತ್ । ಮಿಥ್ಯಾರ್ಥಾನ್ ಪರ್ವತಾದೀನ್ । ತ್ರಿವಿಧಾ ಸ್ವರೂಪೇ ತ್ರಿವಿಧಾ ಬಹಿಶ್ಚ ತ್ರಿವಿಧಾ । ದೇವಸ್ಯ ವಿಷ್ಣೋಃ ಸ್ವರೂಪಭೂತಾ ತದಧೀನಾ ಚ ಸ್ವಯಂ ಸತ್ಯಾ ಸತ್ಯಾರ್ಥಕಾರಿಣೀ ಚ । ದೈತ್ಯಮಾಯಾ ಭ್ರಮಕರೀ ಮಾಯಾ ಚ ಅಸತ್ಯಾರ್ಥದರ್ಶಿನೀತ್ಯಪಿ ದ್ರಷ್ಟವ್ಯಮ್ । ಸತ್ಯಾರ್ಥಕರಣಾಶಕ್ತಃ ಐಂದ್ರಜಾಲಿಕಾದಿರ್ನರತುರಗಾದಿಮಿಥ್ಯಾರ್ಥಾನ್ ದರ್ಶ-ಯೇತ್ । ಶಕ್ತಸ್ತು ರಾಜಾ ನ ತಥಾ ಕಿಂತು ಸತ್ಯಾನೇವ ಗಜತುರಗಾದೀನ್ ಸಂಪಾದಯತಿ । ಏವಂ ಸಪ್ತಮಾಯಾ ಅಪಿ ಸತ್ಯಾ ಏವ ಜಾತಾಃ ॥ ೩೬೦ ॥

**ವಿವರಣೆ–** ದೈತ್ಯಬಡಗಿ ಮಯನಿಂದ ನಿರ್ಮಿತ ಮಾಯೆಯು ಮಂತ್ರೌಷಧಾದಿರೂಪವಾದ್ದರಿಂದ ಸತ್ಯವಾಗಿದೆ. ಆದರೆ, ಅದು ಇಲ್ಲದಿರುವ ವಸ್ತುವನ್ನು ಇದೆಯೆಂದು ತೋರಿಸಿ, ಭ್ರಾಂತಿಯನ್ನು ಹುಟ್ಟಿಸುತ್ತದೆ. ಪರಮಾತ್ಮನ ಜ್ಞಾನ, ಇಚ್ಛಾ, ಶಕ್ತಿ ಈ ಮೂರು ವಿಧ ಮಾಯಾ ಅವನ ಸ್ವರೂಪವೇ ಆಗಿದೆ. ಅವನಿಂದ ಭಿನ್ನವಾದ ಮಾಯೆ ಚಿತ್‌ಪ್ರಕೃತಿ, ಅಚಿತ್‌ಪ್ರಕೃತಿ ಹಾಗೂ ಅವಿದ್ಯಾರೂಪವಾದ ಮಾಯೆಗಳೂ ಸತ್ಯವೇ ಆಗಿವೆ. ಈ ಪರಮಾತ್ಮನ ಮಾಯೆಗಳು ದೈತ್ಯಮಾಯೆಯಂತೆ ಅಸತ್ಯವಾದ ವಸ್ತುವನ್ನು ತೋರಿಸುವುದಿಲ್ಲ. ಸತ್ಯವಾದ ವಸ್ತುವನ್ನೇ ನಿರ್ಮಿಸಿ ತೋರಿಸುತ್ತವೆ. ಸತ್ಯವಸ್ತುಗಳನ್ನು ನಿರ್ಮಿಸಲು ಅಸಮರ್ಥನಾದ ಐಂದ್ರಜಾಲಿಕನು ತನ್ನ ವಿದ್ಯೆಯಿಂದ ಇಲ್ಲದ ವಸ್ತುಗಳನ್ನು ತೋರಿಸುವವನು. ಸಮರ್ಥರಾದ ರಾಜರು ಸತ್ಯವಾದ ಗಜ-ತುರಗಾದಿಗಳನ್ನು ಸಂಪಾದಿಸುವರು. ಪರಮಾತ್ಮನು ಸತ್ಯವಾದ ವಸ್ತುಗಳನ್ನು ನಿರ್ಮಿಸಲು ಸಮರ್ಥನಾಗಿರುವನು. ಅವನಿಗೇಕೆ ಈ ಮಾಯೆ?

**ತವ ತ್ವನಿರ್ವಾಚ್ಯಮಾಯಾ ನ ಸುರೇ ನಾಪಿ ಚಾಸುರೇ ॥ ೩೬೧ ॥**

**ಅರ್ಥ–**ತವ=ನಿನ್ನ, ಅನಿರ್ವಾಚ್ಯಮಾಯಾ ತು=ಅನಿರ್ವಚನೀಯಮಾಯೆಯಾದರೂ, ನ ಸುರೇ=ದೇವತೆಗಳಲ್ಲಿಯೂ ಇಲ್ಲ. ನಾಪಿ ಚಾಸುರೇ= ಅಸುರರಲ್ಲಿಯೂ ಇಲ್ಲ.

**ಅನುವಾದ–** ನಿಮ್ಮ ಮತದ ಅನಿರ್ವಚನೀಯಮಾಯೆಯು ಸುರರಲ್ಲಿ ಇಲ್ಲ. ಅಸುರರಲ್ಲೂ ಇಲ್ಲ.

**ಭಾವವಿಲಾಸಿನೀ–** ಮಿಥ್ಯಾಭೂತಮಾಯಾಂ ತು ನ ಕುತ್ರಾಪಿ ಪಶ್ಯಾಮ ಇತ್ಯಾಹ–ತವ ತ್ವಿತಿ ॥೩೬೧॥

**ಮದಾಂಧೇ ತು ಮಹಾದೈತ್ಯೇ ಗುರೋರಪ್ಯವಮಂತರಿ ।**
**ತವೋಪಮಾ ಕಥಂಚಿತ್ ಸ್ಯಾನ್ಮಿಥ್ಯಾತ್ವಂ ನಾಸ್ತಿತಾ ಯದಿ ॥ ೩೬೨ ॥**

**ಅರ್ಥ–** ಮಿಥ್ಯಾತ್ವಮ್= ಮಿಥ್ಯಾತ್ವವು, ಕಥಂಚಿತ್= ಹೇಗಾದರೂ, ನಾಸ್ತಿತಾ ಯದಿ= 'ಅಸತ್ವ'ವಾದರೆ, ಗುರೋರಪಿ= ಗುರುಗಳಿಗೂ, ಅವಮಂತರಿ= ಅವಮಾನಿಸಿದ, ಮದಾಂಧೇ= ಮದದಿಂದ ಕುರುಡನಾದ, ಮಹಾದೈತ್ಯೇ= ಮಹಾದೈತ್ಯನಲ್ಲಿ, ತವ= ನಿನಗೆ, ಉಪಮಾ= ಹೋಲಿಕೆಯು, ಸ್ಯಾತ್= ಆಗುವುದು.

**ಅನುವಾದ–** ಮದಾಂಧನಾದ ಮಹಾದೈತ್ಯವೃಕಾಸುರನು ವರವನ್ನು ಕೊಟ್ಟ ಗುರು ಶಿವನನ್ನೇ ಅವಮಾನಿಸಿದನು. 'ಮಾಯೆ'ಯು ಮಿಥ್ಯಾ ಎಂದು ಅದ್ವೈತವನ್ನು ಉಪದೇಶಿಸುವ ಗುರುಗಳು ಹೇಳುತ್ತಾರೆ. 'ಮಿಥ್ಯಾ' ಶಬ್ದಕ್ಕೆ 'ಅಸತ್' ಎಂದು ಅರ್ಥವು ಅದ್ವೈತಗುರುವಿಗೆ ಸಮ್ಮತವಲ್ಲ. 'ಮಿಥ್ಯಾ' ಶಬ್ದಕ್ಕೆ 'ಅಸತ್' ಎಂದು ಅರ್ಥವನ್ನು ಹೇಳುವುದು ಗುರುದ್ರೋಹ. ಆದ್ದರಿಂದ ಹೀಗೆ ಹೇಳುವವನು ವೃಕಾಸುರನಿಗೆ ಸಮ.

**ಭಾವವಿಲಾಸಿನೀ–** ತವ ಮಾಯಾವಾದಿನ ಉಪಮಾ । ಕಥಂಚಿದಿತ್ಯನೇನ ತತ್ರಾಪಿ ಮಾಯಾಯಾಃ ವಸ್ತುಗತ್ಯಾ ನ ನಾಸ್ತಿತಾ । ಕಿಂತು ವಾಙ್ಮಾತ್ರೇಣೇತಿ ಸೂಚಯತಿ । ನಾಸ್ತಿತಾ ಅಸತ್ವಮ್। ನತ್ವನಿರ್ವಾಚ್ಯತ್ವಮ್ ॥ ೩೬೨ ॥

**ವಿವರಣೆ-** ವೃಕಾಸುರನು ಶಿವನ ಆರಾಧನೆಯನ್ನು ಮಾಡಿ, 'ನಾನು ಯಾರ ತಲೆಯ ಮೇಲೆ ಕೈ ಇಡುತ್ತೇನೆಯೋ, ಅವನು ಸುಟ್ಟು ಬೂದಿಯಾಗಬೇಕು' ಎಂದು ಶಿವನಿಂದ ವರವನ್ನು ಪಡೆದನು. ಆ ವರವನ್ನು ಪರೀಕ್ಷಿಸಲು ಶಿವನ ತಲೆಯ ಮೇಲೆಯೇ ಕೈ ಇಡಲು ಮುಂದಾದನು. ಹೀಗೆ ಆ ಮಹಾದೈತ್ಯಗುರುವಾದ ಶಿವನಿಗೆ ಅವಮಾನ ಮಾಡಿದನು. ಅವನಂತೆ ನೀನೂ ಸಹ ಗುರುಗಳಿಂದ ಮಾಯಾವಿದ್ಯೆಯನ್ನು ಪಡೆದು, ಅದನ್ನು ಅಸತ್ ಎಂದು ಪ್ರತಿಪಾದಿಸಿ, ಗುರುಗಳನ್ನೇ ಧಿಕ್ಕರಿಸುತ್ತಿದ್ದೀಯೆ. ಆ ದೈತ್ಯನು ಸತ್ಯಾಸತ್ಯತೆಯನ್ನು ಪರೀಕ್ಷಿಸಲು ಹೊರಟ. ನೀನು ಅಸತ್ಯವೆಂದೇ ಹೇಳುತ್ತಿದ್ದೀಯೆ. ಆ ಮಾಯೆಯು ವಾಸ್ತವಿಕವಾಗಿ ಅಸತ್ ಅಲ್ಲ. 'ಮಾಯೆ'ಯನ್ನು ಮಿಥ್ಯಾ ಎಂದು ಉಪದೇಶಿಸಿದ ಗುರುಗಳ ಅಭಿಪ್ರಾಯಕ್ಕೆ ವಿರುದ್ಧವಾಗಿ ಅದನ್ನು 'ಅಸತ್' ಎಂದು ಹೇಳುವ ನೀನು ವೃಕಾಸುರನಿಗೆ ಸಮ. ಹೀಗೆ ಅಸತ್ವವನ್ನು ಹೇಳಿದ್ದರಿಂದ ಆ ದೈತ್ಯನ ಸಾದೃಶ್ಯವೂ ನಿನಗೆ ಬಂದಿದೆ.

**ಗುರುಂ ಚ ಗುರುಣಾ ದತ್ತಾಂ ವಿದ್ಯಾಮುದ್ಧತಧೀರಸೌ ।**
**ಯತೋ ಧಿಕ್ಕುರುತೇ ವಾಚಾ ಸ ಆಚಾರ್ಯೋ ಭವೇತ್ ತವ ॥ ೩೬೩ ॥**

**ಅರ್ಥ–** ಉದ್ಧತಧೀಃ=ಉದ್ಧಟತನದ ಬುದ್ಧಿಯುಳ್ಳ, ಅಸೌ=ಆ ವೃಕಾಸುರನು, ಗುರುಂ= ಗುರುಗಳನ್ನು ಚ= ಮತ್ತು, ಗುರುಣಾ=ಗುರುಗಳಿಂದ, ದತ್ತಾಂ=ಕೊಡಲ್ಪಟ್ಟ, ವಿದ್ಯಾಂ=ವಿದ್ಯೆಯನ್ನು, ವಾಚಾ=ಮಾತಿನಿಂದ, ಯತಃ=ಯಾವ ಕಾರಣದಿಂದ, ಧಿಕ್ಕುರುತೇ=ಧಿಕ್ಕರಿಸುತ್ತಾನೆಯೋ, ಆ ಕಾರಣದಿಂದ, ಸಃ=ಆ ವೃಕಾಸುರನು, ತವ=ನಿನಗೆ, ಆಚಾರ್ಯಃ=ಗುರುವು, ಭವೇತ್= ಆಗುತ್ತಾನೆ.

**ಅನುವಾದ–** ಉದ್ಧಟಬುದ್ಧಿಯ ವೃಕಾಸುರನು ಗುರುಗಳನ್ನು ಮತ್ತು ಗುರುಗಳು ಕೊಟ್ಟ ವಿದ್ಯೆಯನ್ನು ತನ್ನ ಮಾತಿನಿಂದ ಧಿಕ್ಕರಿಸುತ್ತಾನೆ. ಆದ್ದರಿಂದ ಅವನು ನಿನಗೆ ಗುರುವಾಗಬೇಕು.

**ಭಾವವಿಲಾಸಿನೀ–** ತದೇವ ದರ್ಶಯತಿ– **ಗುರುಂ ಚೇತಿ** ॥ ಧಿಕ್ಕುರುತೇ ನಾಸ್ತೀತಿ ವದತಿ। ತವ ಸ ಆಚಾರ್ಯಃ। ಗುರುದತ್ತಮಾಯಾಖ್ಯವಿದ್ಯಾಯಾ ನಾಸ್ತೀತಿ ವಾದಿತ್ವಾತ್ ॥ ೩೬೩ ॥

**ವಿವರಣೆ–** ಧಾರ್ಷ್ಟ್ಯದ ಬುದ್ಧಿ ಇರುವವನು ಯಾರನ್ನೂ ಗೌರವಿಸುವುದಿಲ್ಲ. ಗುರುಗಳನ್ನೂ ತಿರಸ್ಕರಿಸುತ್ತಾನೆ. ಗುರುಗಳು ನೀಡಿದ ವಿದ್ಯೆಯನ್ನು ಧಿಕ್ಕರಿಸುತ್ತಾನೆ. ಮಿಥ್ಯಾಶಬ್ದಕ್ಕೆ 'ಅಸತ್' ಎಂಬ ಅರ್ಥವನ್ನು ಹೇಳಿ ನೀನೂ ಸಹ ಅದನ್ನೇ ಮಾಡುತ್ತಿದ್ದೀಯೆ. ರುದ್ರದೇವರಿಂದ ವರವನ್ನು ಪಡೆದ ವೃಕಾಸುರನು ಇದನ್ನೇ ಮಾಡಿದ್ದಲ್ಲವೇ? ಆದ್ದರಿಂದ ನಿನಗೆ ವೃಕಾಸುರನೇ ಗುರುವಾಗಲು ಯೋಗ್ಯ.

**ಅನಿರ್ವಾಚ್ಯತ್ವಪಕ್ಷಸ್ಯ ತ್ವನಿರ್ವಾಚ್ಯೋಽಪರೋ ಗುರುಃ ।**
**ಪ್ರಚ್ಛನ್ನಬೌದ್ಧರಾದ್ಧಾಂತೋ ಯತ್ತ್ವಂ ಸದಸತೋರ್ಬಹಿಃ ॥ ೩೬೪ ॥**

**ಅರ್ಥ–** ಅನಿರ್ವಾಚ್ಯತ್ವಪಕ್ಷಸ್ಯ= ಮಾಯೆಯು ಅನಿರ್ವಾಚ್ಯ ಎಂಬ ಮತಕ್ಕೆ, ಗುರುಃ= ಗುರುವಾದ, ತ್ವಂ ತು= ನೀನಾದರೂ, ಅಪರಃ ಅನಿರ್ವಾಚ್ಯಃ= ಇನ್ನೊಂದು (ವಿಧವಾದ) ಅನಿರ್ವಚನೀಯ, ಯತ್= ಏಕೆಂದರೆ, ಪ್ರಚ್ಛನ್ನ ಬೌದ್ಧರಾದ್ಧಾಂತಃ= ಪ್ರಚ್ಛನ್ನಬೌದ್ಧ ಸಿದ್ಧಾಂತವುಳ್ಳ, ತ್ವಂ= ನೀನು, ಸದಸತೋಃ= ವೈದಿಕರಿಂದ ಮತ್ತು ಅವೈದಿಕರಿಂದ, ಬಹಿಃ= ವಿಲಕ್ಷಣ.

**ಅನುವಾದ–** 'ಮಾಯೆ'ಯನ್ನು ಅನಿರ್ವಚನೀಯ ಎಂದು ಪ್ರತಿಪಾದಿಸುವ ಮತಕ್ಕೆ ನೀನೇ ಗುರು. ನೀನಾದರೂ ಇನ್ನೊಂದು ವಿಧವಾದ ಅನಿರ್ವಚನೀಯ. ಏಕೆಂದರೆ ನೀನು ಬೌದ್ಧಸಿದ್ಧಾಂತವನ್ನು ರೂಪಾಂತರಗೊಳಿಸಿ ಅಂಗೀಕರಿಸುವಿ. ಆದ್ದರಿಂದ ನೀನು ವೈದಿಕನೂ ಅಲ್ಲ, ಅವೈದಿಕನೂ ಅಲ್ಲ. ಸತ್= ವೈದಿಕ, ಅಸತ್= ಅವೈದಿಕ, ಈ ಎರಡೂ ವರ್ಗಗಳಿಂದ ನೀನು ವಿಲಕ್ಷಣ. ಆದ್ದರಿಂದ ನೀನು ವಿಭಿನ್ನ ರೀತಿಯ ಸದಸದ್ವಿಲಕ್ಷಣ.

**ಭಾವವಿಲಾಸಿನೀ–** ಅನಿರ್ವಾಚ್ಯಮಾಯಾಪಕ್ಷಸ್ಯ ಗುರುರನಿರ್ವಾಚ್ಯಃ ವಕ್ತುಮಶಕ್ಯಃ। ತ್ರೈಲೋಕ್ಯೇಽಪಿ ನಾಸ್ತೀತ್ಯರ್ಥಃ। ತತ್ರ ಹೇತುಮಾಹ– **ಪ್ರಚ್ಛನ್ನೇತಿ** ॥ ಯದ್ ಯಸ್ಮಾತ್। ಸದಸತೋಃ ಸತೋ ವೈದಿಕಾದಸತಃ ಪಾಷಂಡಿನಶ್ಚ ಬಹಿಃ। ಪ್ರಚ್ಛನ್ನಃ ಬೌದ್ಧರಾದ್ಧಾಂತೋ ಯಸ್ಮಿನ್ ಸ ತಥೋಕ್ತಃ। ಕೇವಲಂ ಪಾಷಣ್ಡೋ ನ ತದ್ರಾದ್ಧಾಂತಸ್ಯಾಚ್ಛಾದನಾತ್। ವೈದಿಕಚಿಹ್ನವಾನಪಿ ವೈದಿಕೋಽಪಿ ನ। ಅಂತತಃ ಬೌದ್ಧರಾದ್ಧಾಂತಾಶ್ರಯಣಾತ್। ಅತಃ ವೈದಿಕೋಽಪಿ ನ ತೇ ಗುರುಃ ನಾಪಿ ಪಾಷಂಡೀತಿ ಭಾವಃ। ಸದಸತೋರ್ಬಹಿರಿತ್ಯನೇನ ಉಕ್ತರೀತ್ಯಾ ತವೈವ ಸದಸದ್ವಿಲಕ್ಷಣತ್ವಾತ್ ತ್ವನ್ಮತಸ್ಯ ತ್ವಮೇವ ಗುರುಃ। ಸ್ವಕಪೋಲಕಲ್ಪಿತಪ್ರಮೇಯಾಂಗೀಕಾರೀತಿ ಚ ಸೂಚಯತಿ ॥ ೩೬೪ ॥

**ವಿವರಣೆ–** ಮಾಯೆಯು ಅನಿರ್ವಚನೀಯ ಎಂಬ ಮತದ ಗುರು ಯಾರು ಎಂದು ಹೇಳಲು ಸಾಧ್ಯವಿಲ್ಲ. ಅವನು ಮೂರುಲೋಕದಲ್ಲಿ ಎಲ್ಲೂ ಇಲ್ಲ. ಏಕೆಂದರೆ ಅವನು ಸತ್= ವೈದಿಕ ಅಲ್ಲ. ಅಸತ್= ಅವೈದಿಕ ಅಲ್ಲ. ಅವನು ಪ್ರಚ್ಛನ್ನಬೌದ್ಧ. ಆದ್ದರಿಂದ ಅವನು ಪ್ರಸಿದ್ಧ ಸದಸದ್ವಿಲಕ್ಷಣಕ್ಕಿಂತ ಭಿನ್ನ ರೀತಿಯ ಸದಸದ್‌ವಿಲಕ್ಷಣ.

**ಪಕ್ಷೋಽನ್ಯಸ್ತು ಸಭಾಮಧ್ಯೇ ಹಾಸ್ಯಾಯ ಸ್ಯಾತ್ ಪರಂ ನೃಣಾಮ್ ॥ ೩೬೫ ॥**

**ಅರ್ಥ–** ಅನ್ಯಃ=ಲೋಕ ಮತ್ತು ವೇದಗಳಿಂದ ಬಹಿರ್ಭೂತವಾದ, ಪಕ್ಷಃ=(ಅದ್ವೈತ) ಮತವು, ಸಭಾಮಧ್ಯೇ=ಸಭೆಯಲ್ಲಿ, ನೃಣಾಮ್=ಪಾಮರರಿಗೂ, ಪರಂ ಹಾಸ್ಯಾಯ ಸ್ಯಾತ್= ಕೇವಲ ಹಾಸ್ಯಾಸ್ಪದವಾಗುತ್ತದೆ.

**ಅನುವಾದ–** ಅದ್ವೈತದರ್ಶನವು ಲೋಕನಿಯಮಗಳಿಂದ ಮತ್ತು ವೈದಿಕ ನೀತಿಯಿಂದ ಬಹಿರ್ಭೂತವಾದುದರಿಂದ ಆ ಮತವು ಸಭೆಯಲ್ಲಿ ಗೌರವಕ್ಕೆ ಪಾತ್ರವಾಗದೆ ಪಾಮರರಿಂದಲೂ ಅಪಹಾಸ್ಯಕ್ಕೆ ಈಡಾಗುತ್ತದೆ. ಜ್ಞಾನಿಗಳಿಂದ ಸ್ವೀಕಾರಕ್ಕೆ ಅರ್ಹವಾಗುವುದಿಲ್ಲ ಎಂದು ಹೇಳಬೇಕೇ?

**ಭಾವವಿಲಾಸಿನೀ–** ಅನ್ಯಃ ಪಕ್ಷಃ ಜ್ಞಾನಾನಂದಾದಿಶುಭಗುಣಭರಿತತ್ವೇನ ಶಬಲಬ್ರಹ್ಮತಾಪಕ್ಷಃ। ಹಾಸ್ಯಾಯ ಶುಭಗುಣಭರಿತತ್ವೇನ ಹೈನ್ಯಾಪಾದಕಶಬಲತ್ವವಾದೀ ಸಭಾಮಧ್ಯೇ ಹಾಸ್ಯೋಽಸೀತಿ ಭಾವಃ ॥ ೩೬೫ ॥

**ವಿವರಣೆ–** ಜ್ಞಾನ-ಆನಂದ ಮೊದಲಾದ ಶುಭಗುಣಪೂರ್ಣನಾದ ಬ್ರಹ್ಮನನ್ನು ಶಬಲಬ್ರಹ್ಮ ಎಂದು ಪರಿಗಣಿಸುವ ದರ್ಶನವು ಹಾಸ್ಯಾಸ್ಪದ.

ಹಿಂದಿನ ಶ್ಲೋಕದಲ್ಲಿ ಹೇಳಿದ 'ಅಪಹಾಸ್ಯಕ್ಕೆ ಈಡಾಗುತ್ತದೆ' ಎಂಬ ಅಂಶವನ್ನೇ ವಿವರಿಸುತ್ತಿದ್ದಾರೆ-

**ಮಲಿನದ್ರವ್ಯಸಂಯೋಗೇ ಮಾಲಿನ್ಯಂ ವಾಸಸೋಽಪಿ ಹಿ।**
**ಶುದ್ಧವಸ್ತುಸಮಾಯೋಗೇ ಶ್ಲಾಘ್ಯಂ ಸ್ಯಾತ್ ಸ್ವರ್ಗಿಣಾಮಪಿ ॥ ೩೬೬ ॥**

**ಅರ್ಥ–** ಮಲಿನದ್ರವ್ಯಸಂಯೋಗೇ=ಕೊಳೆಯಾದ ವಸ್ತುವಿನ ಸಂಬಂಧವಾದಾಗ, ವಾಸಸೋಽಪಿ=ಬಟ್ಟೆಗೂ, ಮಾಲಿನ್ಯಂ=ಮಾಲಿನ್ಯವು, ಶುದ್ಧವಸ್ತುಸಮಾಯೋಗೇ= ಶುದ್ಧ ವಸ್ತುವಿನ ಸಂಬಂಧವಾದಾಗ, ಸ್ವರ್ಗಿಣಾಮಪಿ=ದೇವತೆಗಳಿಗೂ, ಶ್ಲಾಘ್ಯಂ=ಪ್ರಶಂಸಾರ್ಹವು, ಸ್ಯಾದ್ ಹಿ=ಆಗುತ್ತದೆಯಲ್ಲವೇ?

**ಅನುವಾದ–** ಬಟ್ಟೆಗೆ ಕೆಸರು ಅಂಟಿದರೆ, ಬಟ್ಟೆಯೂ ಕೆಸರಾಗುತ್ತದೆ. ಕೌಸುಂಭರಸದಿಂದ ಶುಭ್ರವಾದ ವಸ್ತ್ರವನ್ನು ಎಲ್ಲರೂ ಧರಿಸಲು ಅಪೇಕ್ಷಿಸುತ್ತಾರೆ. ದೇವತೆಗಳೂ ಅದನ್ನು ಶ್ಲಾಘಿಸುತ್ತಾರೆ.

ಅದ್ವೈತದರ್ಶನವು ಬ್ರಹ್ಮನಿಗೆ ಅವಿದ್ಯೆಯ ಕೆಸರನ್ನು ಮೆತ್ತಿದೆ. ಅಂತಹ ಬ್ರಹ್ಮ ಮತ್ತು ದರ್ಶನವು ಸ್ವೀಕಾರಾರ್ಹವಲ್ಲ.

**ಭಾವವಿಲಾಸಿನೀ–** ತದೇವ ದೃಷ್ಟಾಂತಮುಖೇನೋಪಪಾದಯತಿ– **ಮಲಿನೇತಿ** ॥ ಮಲಿನದ್ರವ್ಯಸಂಯೋಗೇ ಪಂಕಾದಿಮಲಿನದ್ರವ್ಯಸಂಯೋಗೇ । ಶುದ್ಧವಸ್ತುಸಮಾಯೋಗೇ ಕೌಸುಂಭರಸಾದಿಶ್ಲಾಘ್ಯವಸ್ತುಸಮಾಯೋಗೇ । ಸ್ವರ್ಗಿಣಾಂ ದೇವಾನಾಂ ತಾದೃಶವಸ್ತ್ರಾದಿನಾಽಲಂಕಾರೇ ಪ್ರೀತಿದರ್ಶನಾದಿತಿ ಭಾವಃ ॥ ೩೬೬ ॥

ಕಿಂ ನ ಕೌಸುಂಭಕುಸುಮರಕ್ತಿಮಾ ವಸ್ತ್ರಭೂಷಣಮ್ ।
ನ ಕಿಂ ಕುಂಕುಮಸೌಗಂಧ್ಯಂ ಗಂಧಸೌಗಂಧ್ಯವರ್ಧನಮ್ ॥ ೩೬೭ ॥

**ಅರ್ಥ–** ಕೌಸುಂಭಕುಸುಮರಕ್ತಿಮಾ=ಕುಸುಂಭ ಪುಷ್ಪದ ರಕ್ತವರ್ಣವು, ವಸ್ತ್ರಭೂಷಣಂ ಕಿಂ ನ?= ವಸ್ತ್ರಕ್ಕೆ ಅಲಂಕಾರವಲ್ಲವೇ? ಕುಂಕುಮಸೌಗಂಧ್ಯಂ= ಕುಂಕುಮರಸದ ಪರಿಮಳವು, ಗಂಧಸೌಗಂಧ್ಯವರ್ಧನಂ ನ ಕಿಮ್= ಚಂದನದ ಪರಿಮಳವರ್ಧಕವಲ್ಲವೇ?

**ಅನುವಾದ–** ಕುಸುಂಭ ಪುಷ್ಪದ ರಕ್ತವರ್ಣವು ವಸ್ತ್ರಕ್ಕೆ ಅಲಂಕಾರವಲ್ಲವೇ? ಕುಂಕುಮರಸದ ಪರಿಮಳವು ಚಂದನದ ಪರಿಮಳವರ್ಧಕವಲ್ಲವೇ?

**ಭಾವವಿಲಾಸಿನೀ–** ಶುದ್ಧವಸ್ತುಸಮಾಯೋಗೇನ ಶ್ಲಾಘ್ಯತಾಯಾಮುದಾಹರಣದ್ವಯಮಾಹ– **ಕಿನ್ನೇತ್ಯಾದಿನಾ** ॥ ವಸ್ತ್ರಭೂಷಣಂ ಕಿಂ ನೇತಿ ಸಂಬಂಧಃ । ಕುಂಕುಮೇನ ಸೌಗಂಧ್ಯಂ ಕುಂಕುಮಸೌಗಂಧ್ಯಂ ಕುಂಕುಮಸುಗಂಧಯುಕ್ತತ್ವಮಿತ್ಯರ್ಥಃ । ಪಾಟಲವರ್ಣಸ್ಯಾಪ್ಯುಪಲಕ್ಷಣಮೇತತ್ । ಗಂಧಸ್ಯ ಸೌಗಂಧ್ಯಂ ಸುಗಂಧತ್ವಂ ಕೌಸುಂಭರಸಮಿಲಿತವಸ್ತ್ರಂ ಕುಂಕುಮರಸೋಪೇತಚಂದನಾದಿಕಂ ಚ ರಾಜಾದಿಭಿರಪಿ ಶ್ಲಾಘ್ಯಮೇವ ದೃಷ್ಟಮ್ । ಅತಶ್ಶುಭಗುಣಸಮುದಾಯ್ಯೈರ್ಬ್ರಹ್ಮಣಃ ಸರ್ವಜನಶ್ಲಾಘ್ಯತೈವ ಸ್ಯಾತ್ । ನತು ದೂಷ್ಯತ್ವಮಿತಿ ಭಾವಃ ॥ ೩೬೭ ॥

**ವಿವರಣೆ–** ಶುದ್ಧವಾದ ವಸ್ತುವಿನ ಸಂಬಂಧವನ್ನು ಹೊಂದಿದ ವಸ್ತುವು ಹೆಚ್ಚು ಅಭಿನಂದನೀಯವಾಗುತ್ತದೆ. ಈ ವಿಷಯದಲ್ಲಿ ಎರಡು ದೃಷ್ಟಾಂತಗಳನ್ನು ಹೇಳುತ್ತಿದ್ದಾರೆ.

ಕುಸುಂಭಪುಷ್ಪದ ರಕ್ತವರ್ಣದ ಸಂಬಂಧವು ವಸ್ತ್ರಕ್ಕೆ ಆದಾಗ, ವಸ್ತ್ರವು ಇನ್ನೂ ಹೆಚ್ಚು ಸುಂದರವಾಗಿ ಕಾಣುತ್ತದೆ. ಕುಂಕುಮಕೇಸರಿಯು ಚಂದನದ ಪರಿಮಳವನ್ನು ವೃದ್ಧಿಗೊಳಿಸುತ್ತದೆ. ಕುಸುಂಭ ಕುಸುಮದಿಂದ ರಕ್ತಿಮವಾದ ವಸ್ತ್ರವನ್ನು ರಾಜರುಗಳೂ ಸಹ ಉಪಯೋಗಿಸುತ್ತಾರೆ. ಕುಂಕುಮಕೇಸರಿಯಿಂದ ಸಹಿತವಾದ ಪರಿಮಳಭರಿತಚಂದನವನ್ನು ಸಂತೋಷದಿಂದ ಎಲ್ಲ ಧನಿಕರೂ ಭೋಗಿಸುತ್ತಾರೆ. ಅದರಂತೆ, ಮಂಗಳಕರಗುಣಗಳಿಂದ ಸಹಿತನಾದ ಬ್ರಹ್ಮನು ಎಲ್ಲರಿಂದಲೂ ಆದರಣೀಯನಾಗುತ್ತಾನೆ. ಪ್ರಾಕೃತ ಕುಂಕುಮ ಸೌಗಂಧ್ಯದ ಸಂಬಂಧದಿಂದಲೇ ಇಷ್ಟು ಆಕರ್ಷಣೆ ಬರುವುದಾದರೆ, ಅಪ್ರಾಕೃತವಾದ ದಿವ್ಯದೇಹವು ಇನ್ನೆಷ್ಟು ಆಕರ್ಷಣೀಯವಾಗಿರಬೇಕು?

**ಶೌಕ್ಲ್ಯೋತ್ತೇಜಕಯೋಗೇ ಸ್ಯಾದ್ ವಸ್ತ್ರಸ್ಯ ಹ್ಯತಿಶುಕ್ಲತಾ ॥ ೩೬೮ ॥**

**ಅರ್ಥ–** ಶೌಕ್ಲ್ಯೋತ್ತೇಜಕಯೋಗೇ=ಬಿಳಿಬಣ್ಣದ ಉತ್ತೇಜಕದ ಸಂಬಂಧವಾದಾಗ, ವಸ್ತ್ರಸ್ಯ=ವಸ್ತ್ರಕ್ಕೆ, ಅತಿಶುಕ್ಲತಾ=ಅತ್ಯಂತಶುಕ್ಲತ್ವವು, ಸ್ಯಾದ್‌ಹಿ=ಆಗುತ್ತದೆಯಷ್ಟೆ.

**ಅನುವಾದ–** ಶುಭ್ರತೆಯ ಉತ್ತೇಜಕಗಳ ಸಂಬಂಧವಾದಾಗ, ವಸ್ತ್ರವು ಅತಿ ಶುಭ್ರವಾಗುತ್ತದೆ. ಬ್ರಹ್ಮನು ಅಪ್ರಾಕೃತಗುಣಗಳ ಸಂಬಂಧದಿಂದ ಶ್ಲಾಘ್ಯನೇ ಆಗುತ್ತಾನೆ.

**ಭಾವವಿಲಾಸಿನೀ–** ತದೇವ ಪುನರ್ದೃಷ್ಟಾಂತಾಂತರಮುಖೇನ ದರ್ಶಯತಿ– **ಶೌಕ್ಲ್ಯೇತಿ** ॥ ಶೌಕ್ಲ್ಯೋತ್ತೇಜಕಯೋಗೇ ರಜಕಾದಿಭಿಃ ಕ್ರಿಯಮಾಣೇ ॥ ೩೬೮ ॥

**ಶಕ್ತಿಸೌಂದರ್ಯಶೌರ್ಯಾದಿಯೋಗಾತ್ ಶ್ಲಾಘ್ಯತರೋ ಹರಿಃ ।**
**ಜ್ಞಾನೇನಾಜ್ಞಾನಾದಿದೋಷಾನ್ ಯದ್ ದೂರೇ ದ್ರಾವಯೇತ್ ಪ್ರಭುಃ ॥ ೩೬೯ ॥**

**ಅರ್ಥ–** ಪ್ರಭುಃ=ಸರ್ವಸಮರ್ಥನಾದ, ಹರಿಃ=ಪರಮಾತ್ಮನು, ಜ್ಞಾನೇನ=ಜ್ಞಾನದಿಂದ, ಅಜ್ಞಾನಾದಿದೋಷಾನ್=ಅಜ್ಞಾನಾದಿದೋಷಗಳನ್ನು, ದೂರೇ=ದೂರಕ್ಕೆ, ದ್ರಾವಯೇತ್ ಯದ್=ಓಡಿಸಿರುವುದರಿಂದ, ಶಕ್ತಿಸೌಂದರ್ಯಶೌರ್ಯಾದಿಯೋಗಾತ್=ಶಕ್ತಿ, ಸೌಂದರ್ಯ, ಪರಾಕ್ರಮಾದಿಗಳ ಸಂಬಂಧದಿಂದ, ಶ್ಲಾಘ್ಯತರಃ= ಬಹಳ ಶ್ಲಾಘ್ಯನಾಗಿದ್ದಾನೆ.

**ಅನುವಾದ–** ಪರಮಾತ್ಮನು ಸರ್ವಸಮರ್ಥ. ತನ್ನ ಪೂರ್ಣಜ್ಞಾನದಿಂದ ಅಜ್ಞಾನ, ಸಂಶಯ, ವಿಪರೀತಜ್ಞಾನ ಮುಂತಾದ ಎಲ್ಲ ದೋಷಗಳನ್ನು ದೂರೀಕರಿಸಿದ್ದಾನೆ. ಶಕ್ತಿ, ಸೌಂದರ್ಯ, ಶೌರ್ಯ ಮೊದಲಾದ ಮಂಗಳಗುಣಗಳಿಂದ ಹೆಚ್ಚು ಶ್ಲಾಘ್ಯನಾಗಿದ್ದಾನೆ.

**ಭಾವವಿಲಾಸಿನೀ–** ಜ್ಞಾನಾದಿಗುಣಾನಾಮಜ್ಞಾನಾದಿದೋಷನಿವಾರಕತ್ವೇನಾತಿಶ್ಲಾಘ್ಯತ್ವಮಿತ್ಯಾಹ– **ಜ್ಞಾನೇನೇತಿ** ॥ ಆದಿಪದೇನ ಸಂಶಯವಿಪರ್ಯಯನಿದ್ರಾಪಶಬ್ದಾದಿದೋಷಾ ಗೃಹ್ಯಂತೇ ॥ ೩೬೯ ॥

**ಯದಿ ಸ್ವರೂಪಜ್ಞಾನಸ್ಯ ನಾಜ್ಞಾನಪ್ರತಿಕೂಲತಾ ।**
**ತದಾ ಮುಕ್ತಸ್ಯ ಚಾಜ್ಞಾನಾತ್ ಪುನಃ ಸಂಸಾರಿತಾಽಪತೇತ್ ॥ ೩೭೦ ॥**

**ಅರ್ಥ–** ಸ್ವರೂಪಜ್ಞಾನಸ್ಯ=ಸ್ವರೂಪಜ್ಞಾನಕ್ಕೆ, ಯದಿ ನ ಅಜ್ಞಾನಪ್ರತಿಕೂಲತಾ= ಅಜ್ಞಾನವಿರೋಧಿತ್ವವಿಲ್ಲದ್ದರೆ, ತದಾ=ಆಗ, ಮುಕ್ತಸ್ಯ=ಮುಕ್ತನಿಗೆ, ಅಜ್ಞಾನಾತ್=ಅಜ್ಞಾನದ ಸಂಬಂಧದಿಂದ, ಪುನಃ=ಮತ್ತೆ ಸಂಸಾರಿತಾ=ಸಂಸಾರವು, ಆಪತೇತ್= ಉಂಟಾಗಬೇಕಾದೀತು.

**ಅನುವಾದ– ಆತ್ಮಸ್ವರೂಪವೇ ಆದ ಜ್ಞಾನವು ಅಜ್ಞಾನವಿರೋಧಿಯಲ್ಲದಿದ್ದರೆ, ಮುಕ್ತನಿಗೂ ಅಜ್ಞಾನವಿರಬೇಕಾಗುತ್ತದೆ; ಅಜ್ಞಾನದ ಫಲವಾಗಿ ಪುನಃ ಸಂಸಾರವು ಸಂಭವಿಸಬೇಕಾಗುತ್ತದೆ.**

**ಭಾವವಿಲಾಸಿನೀ–** ಸ್ವರೂಪಜ್ಞಾನಮಜ್ಞಾನಾವಿರೋಧೀತಿ ಪಕ್ಷಂ ದೂಷಯತಿ– **ಯದೀತಿ** ॥ ಮುಕ್ತಸ್ಯ ಸಂಸಾರಾನ್ಮುಕ್ತಸ್ಯ ಅಜ್ಞಾನಾತ್ ಸ್ವರೂಪಜ್ಞಾನಸ್ಯಾಜ್ಞಾನಾವಿರೋಧಿತ್ವೇ ವಿರೋಧಿಭೂತಬಾಹ್ಯಜ್ಞಾನಸ್ಯ ಮುಕ್ತಾವಸಂಭವಾಚ್ಚಾಜ್ಞಾನಪ್ರಾಪ್ತೇರಿತ್ಯರ್ಥಃ ॥ ೩೭೦ ॥

**ವಿವರಣೆ–** (1) ಅಜ್ಞಾನವು ನಿರ್ವಿಶೇಷಚಿತ್‌ನಲ್ಲಿ ಇರುತ್ತದೆ; ನಿರ್ವಿಶೇಷ ಚಿತ್‌ನ ಸ್ವರೂಪಜ್ಞಾನವು ಅಜ್ಞಾನವಿರೋಧಿಯಲ್ಲ ಎಂದು ಅದ್ವೈತದರ್ಶನ. ಇದನ್ನು ಹಿಂದೆ (ಶ್ಲೋಕ 115-118) ನಿರಾಕರಿಸಿದ್ದಾರೆ. ಈಗ ಮತ್ತಷ್ಟು ದೋಷವನ್ನು ಹೇಳುತ್ತಾರೆ.

(2) 'ಮುಕ್ತ' ಶಬ್ದಕ್ಕೆ ನಿರ್ವಿಶೇಷಚಿತ್ ಎಂದು ಅರ್ಥ. ಇವನ ಸ್ವರೂಪಜ್ಞಾನವು ಅಜ್ಞಾನವನ್ನು ನಾಶಮಾಡುವುದಿಲ್ಲವಾದರೆ, ಈ ಚಿತ್‌ಗೆ ಅಜ್ಞಾನವು ಸದಾ ಇರಬೇಕಾಗುತ್ತದೆ. 'ಅವಿದ್ಯೆಯೇ ಸಂಸಾರ' ಎಂದು ಅದ್ವೈತದರ್ಶನ. ಆದ್ದರಿಂದ ನಿರ್ವಿಶೇಷಚಿತ್ ಸದಾ ಸಂಸಾರಿಯಾಗುವ ಪ್ರಸಂಗ.

(3) ಚಿತ್‌ಸ್ವರೂಪವಲ್ಲದ ವೇದಾಂತಜನ್ಯಜ್ಞಾನವು ಅಜ್ಞಾನಕ್ಕೆ ವಿರೋಧಿ. ಆದರೆ ಈ ಬಾಹ್ಯಜ್ಞಾನವು 'ಮುಕ್ತ'ನಲ್ಲಿ ಇರುವುದಿಲ್ಲ. ಆದ್ದರಿಂದ 'ಮುಕ್ತ' ನಲ್ಲಿ ಸದಾ ಅಜ್ಞಾನವಿರುವ ಪ್ರಸಂಗ. ಆದ್ದರಿಂದಲೇ ಸಂಸಾರಿಯಾಗುವ ಪ್ರಸಂಗ.

**ಭ್ರಾಂತ್ಯುತ್ಥಿತಸ್ಯ ತತ್ರೈವ ಭೂಯೋಭೂಯೋ ಭ್ರಮೋಽಸ್ತಿ ಹಿ ।**
**ನಷ್ಟಾಜ್ಞಾನಸ್ಯ ಚ ಭ್ರಾಂತ್ಯಾ ಕಲ್ಪನಾಪಿ ಪುನಃಪುನಃ ॥ ೩೭೧ ॥**

**ಅರ್ಥ–** ಭ್ರಾಂತ್ಯುತ್ಥಿತಸ್ಯ=ಭ್ರಾಂತಿಯ ಪರಿಹಾರವಾದವನಿಗೆ, ಭೂಯೋಭೂಯಃ=ಮತ್ತೆ ಮತ್ತೆ, ತತ್ರೈವ=ಅದೇ ವಿಷಯದಲ್ಲಿ, ಭ್ರಮಃ=ಭ್ರಾಂತಿಯು, ಅಸ್ತಿ ಹಿ= ಇದೆಯಷ್ಟೆ. ನಷ್ಟಾಜ್ಞಾನಸ್ಯ= ನಷ್ಟವಾದ ಅಜ್ಞಾನದ= ಇಂತಹ ಅಜ್ಞಾನಸದೃಶವಾದ ಬೇರೆ ಅಜ್ಞಾನದ, ಪುನಃ ಪುನಃ= ಮತ್ತೆಮತ್ತೆ, ಕಲ್ಪನಾ ಅಪಿ= ಕಲ್ಪನೆಯೂ ಕೂಡ, ಭ್ರಾಂತ್ಯಾ= (ಪುನಃ ಉಂಟಾದ) ಭ್ರಾಂತಿಯಿಂದ, ಅಸ್ತಿ ಹಿ= ಇದ್ದೇ ಇದೆ.

**ಅನುವಾದ–** ಒಮ್ಮೆ ಭ್ರಾಂತಿಯು ಹುಟ್ಟಿ, ಅದರ ಪರಿಹಾಸವಾದ ಅನಂತರ ಅದೇ ವಿಷಯದಲ್ಲಿ ಮತ್ತೆ ಮತ್ತೆ ಭ್ರಾಂತಿಯು ಹುಟ್ಟುತ್ತದೆ. ಇದು ಅನುಭವಸಿದ್ಧ. ನಿರ್ವಿಶೇಷ ಚಿತ್‌ನಲ್ಲೂ ಒಮ್ಮೆ ಅಜ್ಞಾನದ ನಾಶವಾಗಿದ್ದರೂ, ಪುನಃ ಅಜ್ಞಾನಭ್ರಾಂತಿಯು ಉಂಟಾಗಬಹುದು.

**ಭಾವವಿಲಾಸಿನೀ–** ನನ್ವಜ್ಞಾನಸ್ಯ ಅವಿದ್ಯಾನಿವೃತ್ತಿಲಕ್ಷಣಮುಕ್ತೌ ನಾಶಾತ್ ಕಥಂ ಪುನರಜ್ಞಾನಕಲ್ಪನೇತ್ಯತ ಆಹ– **ಭ್ರಾಂತ್ಯುತ್ಥಿತಸ್ಯೇತಿ** ॥ ಭ್ರಾನ್ತ್ಯುತ್ಥಿತಸ್ಯ ಬಾಧಕಜ್ಞಾನೇನ ಭ್ರಾಂತೇರುತ್ಥಿತಸ್ಯ ಸಕೃನ್ನಷ್ಟಭ್ರಮಸ್ಯ ತತ್ರೈವ ತಸ್ಮಿನ್ನೇವಾರ್ಥೇ ಭೂಯೋಭೂಯಃ ಕಾಲಾಂತರೇ ಭ್ರಮೋಽಸ್ತಿ ಹೀತಿ ಭಾವಃ। ನಷ್ಟಾಜ್ಞಾನಸ್ಯ ಪ್ರಾಥಮಿಕಭ್ರಮನಾಶೇ ನಷ್ಟಾಜ್ಞಾನಸ್ಯ ನಷ್ಟಾಜ್ಞಾನ-ಜಾತೀಯಸ್ಯಾಜ್ಞಾನಾಂತರಸ್ಯ ಪುನಃಪುನಃ ಕಲ್ಪನಾಪಿ ಭ್ರಾನ್ತ್ಯಾ 'ಇದಂ ನ ಜಾನಾಮಿ' ಇತ್ಯಜ್ಞಾನಕಲ್ಪಕಸಾಕ್ಷಿರೂಪಭ್ರಾನ್ತ್ಯಾ ಅಸ್ತಿ ಹಿ । ತಥಾಚ ಅಜ್ಞಾನನಾಶಾನಂತರಮಪಿ ಯಥಾ ಅಜ್ಞಾನಾಂತರಾಣ್ಯಪಿ ತತ್ತದ್ಭ್ರಾನ್ತ್ಯಾ ಕಲ್ಪ್ಯಂತೇ । ಏವಂ ಮುಕ್ತೇಽಪಿ ಬ್ರಹ್ಮಣಿ ಸ್ವರೂಪಜ್ಞಾನಸ್ಯಾಜ್ಞಾನಾವಿರೋಧಿತ್ವಾತ್ ಪ್ರತ್ಯುತ ತಸ್ಯೈವಾಜ್ಞಾನಭ್ರಾಂತಿರೂಪತ್ವಾತ್ ತೇನೈವಾಜ್ಞಾನಾಂತರಕಲ್ಪನಾಪಿ ಸ್ಯಾತ್ । ತೇನ ಚ ಸಂಸಾರೋಽಪಿ ಸ್ಯಾದಿತಿ ಭಾವಃ ॥೩೭೦॥

**ವಿವರಣೆ–** (1) ಪ್ರಶ್ನೆ: ಅಜ್ಞಾನನಿವೃತ್ತಿಯೇ ಮೋಕ್ಷ. ಆದ್ದರಿಂದ ಮುಕ್ತನಾದ ನಿರ್ವಿಶೇಷ ಚಿತ್‌ನಲ್ಲಿ ಪುನಃ ಅಜ್ಞಾನವನ್ನು ಕಲ್ಪಿಸುವುದು ಸರಿಯಲ್ಲ?

ಉತ್ತರ : ಒಮ್ಮೆ ಭ್ರಾಂತಿಯು ಹುಟ್ಟಿ, ಅದರ ಪರಿಹಾರವಾದ ಅನಂತರ, ಅದೇ ವಿಷಯದಲ್ಲಿ ಪುನಃ ಭ್ರಾಂತಿಯು ಹುಟ್ಟುತ್ತದೆ. ಇದು ಅನುಭವಸಿದ್ಧ. ಆದ್ದರಿಂದ, ನಿರ್ವಿಶೇಷ ಚಿತ್‌ನಲ್ಲಿ ಒಮ್ಮೆ ಅಜ್ಞಾನದ ನಾಶವಾಗಿದ್ದರೂ, ಪುನಃ 'ಅಹಮಜ್ಞಃ' ಎಂದು ಭ್ರಾಂತಿಯು ಹುಟ್ಟಬಹುದು. ಇದೇ ಅಜ್ಞಾನಭ್ರಾಂತಿ.

(2) ಆತ್ಮಸ್ವರೂಪವೇ ಆದ ಜ್ಞಾನವು ಅಜ್ಞಾನವಿರೋಧಿ ಅಲ್ಲ ಎಂದು ಅದ್ವೈತದರ್ಶನದ ನಿಲುವು. ಆದ್ದರಿಂದ ಒಮ್ಮೆ ಅಜ್ಞಾನನಿವೃತ್ತಿಯಾಗಿದ್ದರೂ ಪುನಃ ಅಜ್ಞಾನಭ್ರಾಂತಿಯು ಹುಟ್ಟಲು ಅವಕಾಶವಿದೆ.

**ಅಜ್ಞಾನಭ್ರಾಂತಯೇ ದೋಷಃ ಕಲ್ಪ್ಯೋಽಜ್ಞಾನಾನ್ನಚಾಪರಃ ।**
**ಪ್ರಾತೀತಿಕಂ ಚ ತೇಽಜ್ಞಾನಂ ನಾಪಿ ಸ್ವಭ್ರಮಕಾರಣಮ್ ॥ ೩೭೧ ॥**

**ಅರ್ಥ–** ಅಜ್ಞಾನಭ್ರಾಂತಯೇ= ಅಜ್ಞಾನವಿಷಯಕಭ್ರಾಂತಿಗೆ, ಕಲ್ಪ್ಯಾಜ್ಞಾನಾತ್= ಕಲ್ಪ್ಯಮಾನವಾದ ಅಜ್ಞಾನಕ್ಕಿಂತ, ಅಪರಃ= ಬೇರೆ, ದೋಷಃ=ದೋಷವು, ನ= ಇರುವುದಿಲ್ಲ, ತೇ= ನಿನ್ನ ಮತದಲ್ಲಿ, ಪ್ರಾತೀತಿಕಂ=ಪ್ರತೀತಿಕಾಲದಲ್ಲಿ ಮಾತ್ರ ಇರುವ, ಅಜ್ಞಾನಂ= ಅಜ್ಞಾನವು, ನಾಪಿ ಸ್ವಭ್ರಮಕಾರಣಮ್=ತನ್ನ ಭ್ರಾಂತಿಗೆ ಕಾರಣವು ಆಗುವುದಿಲ್ಲ.

**ಅನುವಾದ– ಅಜ್ಞಾನಭ್ರಾಂತಿಯು ಹುಟ್ಟಲು ಕಾರಣವಾದ ದೋಷವು ಯಾವುದು? ಕಲ್ಪಿಸಲ್ಪಡುವ ಅಜ್ಞಾನವೇ. ಬೇರೆ ಯಾವುದೂ ಇಲ್ಲ. ನಿಮ್ಮ ಮತದಲ್ಲಿ ಅಜ್ಞಾನವು ಅದರ ಪ್ರತೀತಿಯಾಗುವ ಕಾಲದಲ್ಲಿ ಮಾತ್ರ ಇರುತ್ತದೆ. ಆದ್ದರಿಂದ ಅದು ತನ್ನ (ಅಜ್ಞಾನದ) ಭ್ರಾಂತಿಗೆ ಕಾರಣವಾಗುವುದಿಲ್ಲ.**

**ಭಾವವಿಲಾಸಿನೀ–** ನನು ದೋಷಾಭಾವಾನ್ನ ಮುಕ್ತಾವಜ್ಞಾನಭ್ರಾಂತಿರಿತ್ಯತ ಆಹ– **ಅಜ್ಞಾನಭ್ರಾಂತಯ ಇತಿ।।** ಅಜ್ಞಾನಭ್ರಾಂತಯೇ ಯೋ ದೋಷಃ ಸಃ ಉಪರಿ ಕಲ್ಪ್ಯಂ ಯದಜ್ಞಾನಂ ತಸ್ಮಾದನ್ಯೋ ನ । ಅಜ್ಞಾನಪರಂಪರಾಯಾಃ ಪರೇಣಾನಂಗೀಕಾರಾತ್ । ಅತೋ ಮುಕ್ತಾವಪಿ ಕಲ್ಪ್ಯಾಜ್ಞಾನಾಖ್ಯದೋಷಸ್ಯ ಸತ್ತ್ವೇನಾಜ್ಞಾನಭ್ರಮಃ ಸ್ಯಾದಿತಿ ಭಾವಃ । ಏತೇನ ಸವಿಲಾಸಾವಿದ್ಯಾಯಾಃ ನಷ್ಟತ್ವಾತ್ ಕಥಂ ಪುನರಜ್ಞಾನಜ್ಞಾನಮಿತಿ ನಿರಸ್ತಮ್ । ಪ್ರಾಚೀನ-ಸಕಲಾಜ್ಞಾನನಾಶೇಽಪಿ ಮುಕ್ತಾವೇವಾಜ್ಞಾನಭ್ರಮರೂಪೇಣ ಸ್ವರೂಪಜ್ಞಾನೇನ ಪುನಸ್ತತ್ಸೈವಾ-ಜ್ಞಾನಾಂತರಕಲ್ಪನಯಾ ಸಂಸಾರಿತ್ವಾಪಾದನಸ್ಯಾಪರಿಹಾರಾತ್ । ಪ್ರಾಕ್ ಕಲ್ಪ್ಯಾಜ್ಞಾನಸ್ಯೈವ ದೋಷತ್ವಮಿತ್ಯುಕ್ತಮ್ । ಇದಾನೀಮಜ್ಞಾನಭ್ರಮೇ ದೋಷ ಏವ ನಾಪೇಕ್ಷಿತ ಇತ್ಯಾಹ– **ಪ್ರಾತೀತಿಕಂ ಚೇತಿ।।** ಪ್ರಾತೀತಿಕಂ ಪ್ರತೀತಿಸಮಸಮಯವರ್ತಿ ನತು ಪ್ರತೀತೇಃ ಪೂರ್ವಂ ವಿದ್ಯಮಾನಮಿತ್ಯರ್ಥಃ । ಅತಃ ಸ್ವಭ್ರಮಕಾರಣಮಪಿ ನೇತಿ ಯೋಜನಾ । ಕಾರಣಸ್ಯ ಪೂರ್ವ-ಭಾವಿತ್ವನಿಯಮಾತ್ ।। ೩೭೨ ।।

**ವಿವರಣೆ–** (1) ಪ್ರಶ್ನೆ : ದೋಷದಿಂದ ಭ್ರಾಂತಿಯು ಹುಟ್ಟುತ್ತದೆ; ಮುಕ್ತಿಯಲ್ಲಿ ದೋಷವಿಲ್ಲ; ಆದ್ದರಿಂದ ಮುಕ್ತನಿಗೆ ಅಜ್ಞಾನಭ್ರಾಂತಿಯು ಉಂಟಾಗಲಾರದು?

ಉತ್ತರ : ಅಜ್ಞಾನವೇ ಅಜ್ಞಾನಭ್ರಾಂತಿಗೆ ಕಾರಣವಾದ ದೋಷ. ಯಾವ ಅಜ್ಞಾನ? ಕಲ್ಪಿಸಲ್ಪಡುವ ಅಜ್ಞಾನ. ಅದ್ವೈತಮತದ ಪ್ರಕಾರ ಶುದ್ಧಚಿತ್ ಅಜ್ಞಾನವಿರೋಧಿ ಅಲ್ಲ. ಆದ್ದರಿಂದ ಮುಕ್ತಿಯಲ್ಲೂ ಶುದ್ಧಚಿತ್‌ನಲ್ಲಿ ಅಜ್ಞಾನಭ್ರಾಂತಿಯು ಹುಟ್ಟಬಹುದು.

(2) ವಸ್ತುತಃ, ಅಜ್ಞಾನಭ್ರಾಂತಿಯು ಹುಟ್ಟಲು ಅಜ್ಞಾನವು ಕಾರಣವಾಗುವುದಿಲ್ಲ. ಅದ್ವೈತಮತದ ಪ್ರಕಾರ ಅಜ್ಞಾನವು, ಅದರ ಪ್ರತೀತಿಯು ಆಗುವ ಕಾಲದಲ್ಲಿ ಮಾತ್ರ ಇರುತ್ತದೆ. ಪೂರ್ವಕ್ಷಣದಲ್ಲಿ ಇರುವುದಿಲ್ಲ. ಯಾವುದು ಪೂರ್ವಕ್ಷಣದಲ್ಲಿ ಇರುತ್ತದೋ, ಅದು ಕಾರಣ. ಆದ್ದರಿಂದ ಅಜ್ಞಾನವು ಅಜ್ಞಾನಭ್ರಾಂತಿಗೆ ಕಾರಣವಲ್ಲ.

(3) ವಿವರಣೆ 1 ರಲ್ಲಿ ಕಲ್ಪ್ಯಅಜ್ಞಾನವೇ ಕಲ್ಪಕಅಜ್ಞಾನ ಎಂದು ತಿಳಿಸಲಾಗಿದೆ. ಕಲ್ಪ್ಯವೇ ಕಲ್ಪಕವಾಗುವುದು ಅಸಂಭಾವಿತ. ಆದ್ದರಿಂದ ಶುದ್ಧಚಿತ್‌ನಲ್ಲಿ ಕಾರಣವಿಲ್ಲದೆ ಅಜ್ಞಾನದ ಭ್ರಾಂತಿಯು ಹುಟ್ಟಬೇಕಾದ ಪ್ರಸಂಗವನ್ನೂ, ಈ ಭ್ರಾಂತಿಯಿಂದ ಮುಕ್ತನೂ ಸಂಸಾರಿಯಾಗಬೇಕಾದ ಪ್ರಸಂಗವನ್ನೂ ಈ ಶ್ಲೋಕವು ಹೇಳಿದೆ ಎಂದು ತಿಳಿಯಬೇಕು. ಈ ಶ್ಲೋಕವು ಶ್ಲೋಕ 370ರ ವಿವರಣೆ.

**ಅತೋ ಭ್ರಾಂತ್ಯೇಕಕಲ್ಪ್ಯಸ್ಯ ಕುತ್ರಕುತ್ರ ನ ಕಲ್ಪನಾ ।**
**ಅನಾದಿ ನಾಸ್ತಿ ಚೇತ್ ಕಿಂ ನಶ್ಭಿನ್ನಂ ಸಾದ್ಯೇವ ಕಲ್ಪ್ಯತಾಮ್ ॥ ೩೭೩ ॥**

**ಅರ್ಥ–** ಅತಃ=ಆದ್ದರಿಂದ= ಅಜ್ಞಾನ ಭ್ರಾಂತಿಗೆ ಕಾರಣವಾಗುವ ದೋಷದ ಅವಶ್ಯಕತೆಯು ಇಲ್ಲದಿರುವುದರಿಂದ, ಭ್ರಾಂತ್ಯೇಕಕಲ್ಪ್ಯಸ್ಯ= ಭ್ರಾಂತಿ ಮಾತ್ರವೇ ಆಗಿರುವ ಕಲ್ಪ್ಯವಾದ ಅಜ್ಞಾನದ, ಕಲ್ಪನಾ= ಕಲ್ಪನೆಯು, ಕುತ್ರಕುತ್ರ ನ?= ಎಲ್ಲಿ ತಾನೆ ಆಗುವುದಿಲ್ಲ? ಅನಾದಿ=ಅನಾದಿತ್ವವು, ನಾಸ್ತಿ ಚೇತ್=ಇಲ್ಲವಾದರೆ, ಸಾದಿ ಏವ= ಆದಿ ಇರುವ ಅಜ್ಞಾನವೇ, ಕಲ್ಪ್ಯತಾಮ್=ಕಲ್ಪಿಸಲ್ಪಡಲಿ. ನಃ=ನಮಗೆ, ಕಿಂ ಭಿನ್ನಂ= ಏನು ಹಾನಿ?

**ಅನುವಾದ–** ಅಜ್ಞಾನಭ್ರಾಂತಿಗೆ ಕಾರಣವಿಲ್ಲವಾದ್ದರಿಂದ (ಶ್ಲೋಕ ೩೭೨ರಲ್ಲಿ ವಿವರಿಸಲಾಗಿದೆ). ನಿಷ್ಕಾರಣಭ್ರಾಂತಿಯು ಎಲ್ಲಿ ಬೇಕಾದರೂ ಆಗಬಹುದು. (ಶುದ್ಧಚಿತ್‌ನಲ್ಲೂ ಆಗಬಹುದು). ಈ ಅಜ್ಞಾನವು ಅನಾದಿಯಲ್ಲ? ಸಾದಿಯೇ ಆಗಲಿ. ಇದರಿಂದ ಶುದ್ಧಚಿತ್ ಪುನಃ ಸಂಸಾರಿಯಾಗಲಿ ಎಂಬ ಆಪಾದನೆಗೆ ಏನೂ ಹಾನಿಯಿಲ್ಲ.

**ಭಾವವಿಲಾಸಿನೀ–** ಅತಃ ಅಜ್ಞಾನಭ್ರಮಸ್ಯ ದೋಷಾಪೇಕ್ಷತ್ವಾನಂಗೀಕಾರಾತ್ । ಭ್ರಾಂತ್ಯೇಕಕಲ್ಪ್ಯಸ್ಯ ಕೇವಲಭ್ರಾಂತಿಮಾತ್ರೇಣ ಕಲ್ಪ್ಯಸ್ಯ ಕುತ್ರಕುತ್ರ ನ ಕಲ್ಪನಾ । ಕಲ್ಪಕಜ್ಞಾನಸದ್ಭಾವೇ ಸರ್ವತ್ರಾಪಿ ಕಲ್ಪನಾ ಸ್ಯಾದಿತಿ ಭಾವಃ । ನನು ಮುಕ್ತೌ ಕಲ್ಪ್ಯಮಾನಾಜ್ಞಾನಸ್ಯ ಕಥಮನಾದಿತ್ವಮಿತ್ಯತ ಆಹ– **ಅನಾದೀತಿ** ॥ 'ಕಿಂ ನಶ್ಭಿನ್ನಮ್' ಇತ್ಯನೇನ ಯಥಾ ತವ ಭ್ರಮಾನಂತರಭ್ರಮೋ ಕಲ್ಪ್ಯಮಾನಮಜ್ಞಾನಂ ಸಾದಿ, ತಥಾತ್ರಾಪಿ ಸಂಭವಾದಿತಿ ಸೂಚಯತಿ ॥ ೩೭೩ ॥

**ಅತಃ ಸ್ವರೂಪಜ್ಞಾನೇನ ಜ್ವಲಜ್ಜ್ವಾಲೋಜ್ಜ್ವಲೇನ ಹಿ ।**
**ಅಜ್ಞಾನೋಚ್ಚಾಟನಂ ವಾಚ್ಯಂ ಯತ್‌ಸಂಗಾನ್ಮನಸೋಽಪಿ ಚಿತ್ ॥ ೩೭೪ ॥**

**ಅರ್ಥ–** ಅತಃ=ಆದ್ದರಿಂದ, ಯತ್‌ಸಂಗಾತ್=ಯಾವುದರ ಸಂಪರ್ಕದಿಂದ, ಮನಸೋಽಪಿ = ಮನಸ್ಸಿಗೂ, ಚಿತ್=ಅರ್ಥಾವಭಾಸನ ಮತ್ತು ಅಜ್ಞಾನ ನಿವಾರಣ ಶಕ್ತಿಯು ಇದೆಯೋ ಅಂತಹ, ಜ್ವಲಜ್ಜ್ವಾಲೋಜ್ಜ್ವಲೇನ=ಪ್ರಜ್ವಲಿಸುವ ಮಹಾಜ್ವಾಲೆಯಂತೆ ಉಜ್ಜ್ವಲವಾದ, ಸ್ವರೂಪಜ್ಞಾನೇನ=ಸ್ವರೂಪಜ್ಞಾನದಿಂದ, ಅಜ್ಞಾನೋಚ್ಚಾಟನಂ= ಅಜ್ಞಾನದ ನಾಶವನ್ನು, ವಾಚ್ಯಂ=ಹೇಳಬೇಕು.

**ಅನುವಾದ–** ಚಿತ್‌ಸ್ವರೂಪಜ್ಞಾನವು ಅಜ್ಞಾನಾವಿರೋಧಿಯಾದರೆ ಮುಕ್ತಿಯಲ್ಲೂ ಅಜ್ಞಾನ ಮತ್ತು ಸಂಸಾರಗಳು ಉಂಟಾಗಬೇಕಾದ ಪ್ರಸಂಗವು ಉಂಟಾಗುವುದರಿಂದ ಜ್ವಲಿಸುವ ಜ್ವಾಲೆಯಂತೆ ಉಜ್ಜ್ವಲವಾದ ಚಿತ್- ಸ್ವರೂಪಜ್ಞಾನದಿಂದ ಅಜ್ಞಾನದ ಉಚ್ಚಾಟನೆಯಾಗುತ್ತದೆ ಎಂದೇ ಹೇಳಬೇಕು. ಈ ಚಿತ್‌ನ ಸಂಗದಿಂದ ಮನಸ್ಸಿಗೂ ಪದಾರ್ಥಗಳ ಜ್ಞಾನವನ್ನು ಉಂಟು ಮಾಡುವ ಮತ್ತು ಅಜ್ಞಾನವನ್ನು ಪರಿಹರಿಸುವ ಶಕ್ತಿಯು ಇದೆ.

**ಭಾವವಿಲಾಸಿನೀ–** ಉಪಸಂಹರತಿ– **ಅತ ಇತಿ** ॥ ಅತಸ್ಸ್ವರೂಪಜ್ಞಾನಸ್ಯಾಜ್ಞಾನಾವಿರೋಧಿತ್ವೇ ಮುಕ್ತಾವಪ್ಯಜ್ಞಾನಾಪಾತಾತ್ । ಯತ್ಸಂಗಾದ್ ಯಸ್ಯಾಶ್ಚಿತ್ಸಂಗಾತ್ । ಮನಸೋಽಪಿ ಚಿತ್ ಜ್ಞಾನಮರ್ಥಾವಭಾಸನಶಕ್ತಿಃ ಅಜ್ಞಾನನಿರ್ಹರಣಶಕ್ತಿಶ್ಚೇತ್ಯರ್ಥಃ ॥ ೩೭೪ ॥

**ಮಾಯಾಂ ವ್ಯುದಸ್ಯ ಚಿಚ್ಛಕ್ತ್ಯೇತ್ಯುಕ್ತಂ ವಾಕ್ಯಮನುಸ್ಮರ ।**
**ದೋಷೇಣ ಶಬಲೋ ದೂಷ್ಯೋ ಗುಣೇನ ತು ಮನಃಪ್ರಿಯಃ ॥ ೩೭೫ ॥**

**ಅರ್ಥ–**'ಮಾಯಾಂ ವ್ಯುದಸ್ಯ ಚಿಚ್ಛಕ್ತ್ಯಾ' ಇತಿ= 'ಮಾಯಾಂ ವ್ಯುದಸ್ಯ ಚಿಚ್ಛಕ್ತ್ಯಾ...' ಎಂಬ, ಉಕ್ತಂ= ಹಿಂದೆ ಹೇಳಲ್ಪಟ್ಟ, ವಾಕ್ಯಂ= ವಾಕ್ಯವನ್ನು, ಅನುಸ್ಮರ= ಸ್ಮರಿಸು. ದೋಷೇಣ ಶಬಲಃ= ದೋಷಗಳಿಂದ ಶಬಲನು, ದೂಷ್ಯಃ= ದೂಷಣೆಗೆ ಒಳಗಾಗುತ್ತಾನೆ. ತು= ಆದರೆ, ಗುಣೇನ ಶಬಲಃ= ಗುಣಗಳಿಂದ ಶಬಲನು, ಮನಃಪ್ರಿಯಃ= ಮನೋಹರ.

**ಅನುವಾದ–**'ಮಾಯಾಂ ವ್ಯುದಸ್ಯ ಚಿಚ್ಛಕ್ತ್ಯಾ....' ಎಂದು ಹಿಂದೆ ಹೇಳಲ್ಪಟ್ಟ ವಾಕ್ಯವನ್ನು ಸ್ಮರಿಸು. ದೋಷಗಳಿಂದ ಶಬಲನು ದೂಷ್ಯ; ಗುಣಗಳಿಂದ ಶಬಲನು ಮನೋಹರ.

**ಭಾವವಿಲಾಸಿನೀ–** ಉಕ್ತಯುಕ್ತ್ಯುಪೋದ್ಬಲಕಸ್ಮೃತಿಂ ಚ ಸ್ಮಾರಯತಿ– **ಮಾಯಾಮಿತಿ** ॥ ೩೭೫ ॥

**ವಿವರಣೆ–** (1) ಮಾಯಾಂ ವ್ಯುದಸ್ಯ ಚಿಚ್ಛಕ್ತ್ಯಾ ಕೈವಲ್ಯೇ ಸ್ಥಿತ ಆತ್ಮನಿ - ಭಾಗವತ 1.7.23.

(೨) ಶಬಲ= ವೈವಿಧ್ಯಮಯ.

ಸ್ವರೂಪಜ್ಞಾನದಿಂದ ಅಜ್ಞಾನದ ನಾಶವಾಗುತ್ತದೆ ಎಂಬ ವಿಷಯದಲ್ಲಿ ಯುಕ್ತಿಯನ್ನು ಹೇಳಿ, ಅದಕ್ಕೆ ಪೋಷಕವಾದ ಸ್ಮೃತಿಯನ್ನು ನೆನಪಿಸುತ್ತಿದ್ದಾರೆ. 'ಮಾಯಾಂ ವ್ಯುದಸ್ಯ ಚಿಚ್ಛಕ್ತ್ಯಾ...' (ಭಾಗವತ 4.7.23) ಎಂದು ಭಾಗವತದಲ್ಲಿ ಹೇಳಿದ ವಾಕ್ಯವನ್ನು ಸ್ಮರಣೆ ಮಾಡಿದಾಗ ನಾವು ಹೇಳಿದ ವಿಷಯವು ದೃಢವಾಗುತ್ತದೆ. ದೋಷಶಬಲನು ದೂಷ್ಯ. ಗುಣಶಬಲನು ಮನೋಹರ.

**ಗೋಃ ಶಾಬಲ್ಯಂ ನ ಕಿಂ ಲಾಲ್ಯಂ ಶ್ವಿತ್ರಿಣಶ್ಚಿತ್ರರೂಪವತ್ ।**
**ನಿತ್ಯಮುಕ್ತತ್ವಶುದ್ಧತ್ವವಚನಾತ್ ಕ್ವಾಸ್ಯ ದೋಷಿತಾ ॥ ೩೭೬ ॥**

**ಅರ್ಥ–**ಶ್ವಿತ್ರಿಣಃ=ಕುಷ್ಠರೋಗವುಳ್ಳವನ, ಚಿತ್ರರೂಪವತ್=ಚಿತ್ರರೂಪದಂತೆ, ಗೋಃ ಶಾಬಲ್ಯಂ=ಹಸುವಿನ ಅನೇಕ ಬಣ್ಣವು, ಕಿಂ ನ ಲಾಲ್ಯಂ=ಪ್ರಶಂಸಾರ್ಹವಲ್ಲವೇ? ಅಸ್ಯ=ಪರಮಾತ್ಮನಿಗೆ, ನಿತ್ಯಮುಕ್ತತ್ವಶುದ್ಧತ್ವವಚನಾತ್=ನಿತ್ಯಮುಕ್ತತ್ವ ಹಾಗೂ ಶುದ್ಧತ್ವಗಳನ್ನು ಶ್ರುತಿಯು ಹೇಳಿರುವುದರಿಂದ, ದೋಷಿತಾ=ದೋಷರೂಪ ಶಬಲತ್ವವು ಕ್ವ=ಎಲ್ಲಿ?

**ಅನುವಾದ–** **ಕುಷ್ಠರೋಗಿಯ ಚಿತ್ರರೂಪವು ಪ್ರಶಂಸಾರ್ಹವಲ್ಲ. ಇದರಂತೆ ಹಸುವಿನ ಚಿತ್ರರೂಪವೂ ಪ್ರಶಂಸಾರ್ಹವಲ್ಲವೇ? ಪರಮಾತ್ಮನಿಗೆ ನಿತ್ಯಮುಕ್ತತ್ವವನ್ನು, ಶುದ್ಧತ್ವವನ್ನು ಆಗಮಗಳು ಹೇಳುತ್ತವೆ. ಆದ್ದರಿಂದ ಅವನಿಗೆ ದೋಷವೆಲ್ಲಿಯದು?**

**ಭಾವವಿಲಾಸಿನೀ–** ದೂಷೇಣ ಶಬಲತ್ವಮೇವ ದೂಷ್ಯಮ್ । ನತು ಗುಣೇನೇತ್ಯತ್ರ ದೃಷ್ಟಾಂತ-ದ್ವಯಮಪಿ ದರ್ಶಯಂಶ್ಶಬಲತ್ವನಿರಾಕರಣಮುಪಸಂಹರತಿ– **ದೋಷೇಣೇತಿ** ॥ ಗೋಃ ಶಾಬಲ್ಯಂ ಶಬಲತ್ವಮ್ । ಶ್ವಿತ್ರಿಣಃ ಕುಷ್ಠವ್ಯಾಧಿಮತಃ ಚಿತ್ರರೂಪವತ್ ನಾನಾರೂಪವತ್ । ಲಾಲ್ಯಂ ಕಿಂ ನೇತಿ ವ್ಯತಿರೇಕದೃಷ್ಟಾಂತಃ । ಅಸ್ಯ ಪರಮಾತ್ಮನಃ ನಿತ್ಯಮುಕ್ತತ್ವಶುದ್ಧತ್ವವಚನಾದ್ 'ವಿದ್ಯಾಮಯೋ ಯಸ್ಸತು ನಿತ್ಯಮುಕ್ತಃ' 'ಅವಿಕಾರೋಽಕ್ಷರಃ ಶುದ್ಧಃ' ಇತ್ಯಾದಿವಚನಾತ್ ದೋಷಿತಾ ಕ್ವ । ದೋಷಾಶಬಲಿತತ್ವೇ ಇದಂ ಚ ಹೇತುದ್ವಯಮಿತಿ ಭಾವಃ ॥ ೩೭೬ ॥

**ವಿವರಣೆ–** ಯಾವುದೇ ವಸ್ತುವು ಹೇಯವಾಗಲು ಅದರ ದೋಷವೇ ಕಾರಣ. ಗುಣಗಳಿರುವ ವಸ್ತು ಉಪಾದೇಯವೇ ಆಗುತ್ತದೆ. ಎರಡು ದೃಷ್ಟಾಂತಗಳಿಂದ ಇದನ್ನು ತೋರಿಸಿ ಬ್ರಹ್ಮನು ಶಬಲ ಎಂಬ ಅದ್ವೈತ ಚಿಂತನೆಯ ವಿಮರ್ಶೆಯನ್ನು ಉಪಸಂಹರಿಸುತ್ತಿದ್ದಾರೆ. ಕುಷ್ಠರೋಗಿಯಲ್ಲಿರುವ ಬಿಳುಪು ಮುಂತಾದ ಬಣ್ಣಗಳು ದೋಷಪ್ರಯುಕ್ತವಾಗಿ ಹೇಯವೆನಿಸಿದೆ. ಹಸುವಿನಲ್ಲಿರುವ ವಿವಿಧ ವರ್ಣಗಳು ದೋಷವಲ್ಲ. ಅದು ಗುಣವೇ ಆಗಿದೆ. ಅದು ಉಪಾದೇಯ. 'ವಿದ್ಯಾಮಯೋ ಯಃ ಸ ತು ನಿತ್ಯಮುಕ್ತಃ', 'ಅವಿಕಾರೋಽಕ್ಷರಃ ಶುದ್ಧಃ' ಮುಂತಾದ ಶ್ರುತಿವಾಕ್ಯಗಳು ಬ್ರಹ್ಮನಲ್ಲಿ ನಿತ್ಯಮುಕ್ತತ್ವ, ನಿತ್ಯಶುದ್ಧತ್ವ ಮೊದಲಾದ ಗುಣಗಳನ್ನು ಹೇಳುತ್ತಿವೆ. ನಿತ್ಯಶುದ್ಧನಾದ ಅವನಲ್ಲಿ ದೋಷಗಳಿರಲು ಸಾಧ್ಯವಿಲ್ಲ. ಆದ್ದರಿಂದ ಕೇವಲ ಗುಣಶಬಲನಾಗಿದ್ದು, ಹಸುವಿನಂತೆ ಉಪಾದೇಯನೇ ಆಗಿದ್ದಾನೆ.

**ಕ್ರಿಯಾವೇಶಪ್ರಸಂಗೇನ ಕರ್ತೃತ್ವಂ ನ ಚಿತೋ ಯದಿ ।**
**ತರ್ಹಿ ಜ್ಞಪ್ತಿಶ್ಚ ಚಿನ್ನ ಸ್ಯಾತ್ ಸಾ ಧಾತ್ವರ್ಥಕ್ರಿಯಾ ಯತಃ ॥ ೩೭೭ ॥**

**ಅರ್ಥ–** ಕ್ರಿಯಾವೇಶಪ್ರಸಂಗೇನ=ಕ್ರಿಯಾವೇಶ ಎಂಬ ದೋಷವು ಬರುವುದರಿಂದ, ಚಿತಃ=ಚಿತ್‌ಗೆ, ಯದಿ ನ ಕರ್ತೃತ್ವಂ ತರ್ಹಿ=ಕರ್ತೃತ್ವವಿಲ್ಲದಿದ್ದರೆ, ಚಿತ್=ಬ್ರಹ್ಮಸ್ವರೂಪವು, ಜ್ಞಪ್ತಿಶ್ಚ=ಜ್ಞಾನರೂಪವೂ, ನ ಸ್ಯಾತ್=ಆಗಬಾರದಿತ್ತು. ಯತಃ=ಏಕೆಂದರೆ, ಸಾ=ಆ ಜ್ಞಪ್ತಿಯು, ಧಾತ್ವರ್ಥಕ್ರಿಯಾ=ಧಾತುವಿನ ಅರ್ಥವಾದ ಕ್ರಿಯೆಯೇ ಆಗಿದೆ.

**ಅನುವಾದ–** ಬ್ರಹ್ಮನಿಗೆ ಕರ್ತೃತ್ವವನ್ನು ಅಂಗೀಕರಿಸಿದರೆ ಅವನಲ್ಲಿ ಕ್ರಿಯೆ ಇದೆ ಎಂದು ಅರ್ಥ. ಕ್ರಿಯಾಸಂಬಂಧವು ದೋಷ. ಆದ್ದರಿಂದ ಬ್ರಹ್ಮನಲ್ಲಿ ಕರ್ತೃತ್ವವಿಲ್ಲ? ಅದ್ವೈತದರ್ಶನವು ಬ್ರಹ್ಮನು (ಚಿತ್) ಜ್ಞಾನರೂಪ ಎಂದು ಹೇಳುತ್ತದೆ. ಜ್ಞಾನವು 'ಜ್ಞಾ' ಧಾತುವಿನ ಅರ್ಥ. ಆದ್ದರಿಂದ ಅದು ಕ್ರಿಯೆ. ಆದ್ದರಿಂದ ಚಿತ್ (ಬ್ರಹ್ಮ) ಜ್ಞಾನರೂಪವೂ ಆಗಲಾರದು.

**ಭಾವವಿಲಾಸಿನೀ–** ನನು ಕರ್ತೃತ್ವಾಂಗೀಕಾರೇ ಕ್ರಿಯಾವೇಶಾಖ್ಯದೋಷಃ ಸ್ಯಾತ್ । ಅತಃ ಕಥಂ ಕ್ವಾಸ್ಯ ದೋಷಿತಾ ಇತ್ಯುಕ್ತಮಿತ್ಯತ ಆಹ– **ಕ್ರಿಯಾವೇಶೇತಿ** ॥ ಕ್ರಿಯಾವೇಶಪ್ರಸಂಗೇನ ಕ್ರಿಯಾವೇಶಾಖ್ಯದೋಷಪ್ರಸಂಗೇನ । ತರ್ಹಿ ಚಿತ್ ಬ್ರಹ್ಮಚಿತ್ ಜ್ಞಪ್ತಿಶ್ಚ ನ ಸ್ಯಾತ್ । ಯತಃ ಸಾ ಜ್ಞಪ್ತಿಃ ಧಾತ್ವರ್ಥರೂಪಾ ಕ್ರಿಯಾ ತತ ಇತಿ ಯೋಜನಾ ॥ ೩೭೭ ॥

**ವಿವರಣೆ–** ಬ್ರಹ್ಮನಲ್ಲಿ ದೋಷವಿಲ್ಲ ಎಂದು ಹಿಂದಿನ ಪದ್ಯದಲ್ಲಿ ಹೇಳಲಾಗಿದೆ.

ಪ್ರಶ್ನೆ : ಬ್ರಹ್ಮನಿಗೆ ಸೃಷ್ಟ್ಯಾದಿಕರ್ತೃತ್ವವನ್ನು ಅಂಗೀಕರಿಸುತ್ತೀರಿ. ಕರ್ತೃತ್ವವು ಯಾರಲ್ಲಿ ಇರುತ್ತದೋ ಅವರಲ್ಲಿ ಕ್ರಿಯಾ ಇದ್ದೇ ಇರುತ್ತದೆ. ಶ್ರುತಿಯು ಬ್ರಹ್ಮನನ್ನು 'ನಿಷ್ಕಲಂ ನಿಷ್ಕ್ರಿಯಂ' ಎಂದು ಹೇಳುತ್ತದೆ. ಆದ್ದರಿಂದ ಬ್ರಹ್ಮನು ಕರ್ತೃ ಅಲ್ಲ?

ಉತ್ತರ: ಬ್ರಹ್ಮನು ಜ್ಞಾನರೂಪ ಎಂದು ಅದ್ವೈತದರ್ಶನವು ಅಂಗೀಕರಿಸುತ್ತದೆ. 'ಜ್ಞಾನ'ವು 'ಜ್ಞಾ' ಧಾತುವಿನ ಅರ್ಥ. ಆದ್ದರಿಂದ ಅದು ಕ್ರಿಯೆ. ಕ್ರಿಯಾರೂಪತ್ವವೂ ಶ್ರುತಿವಿರುದ್ಧ. ಆದ್ದರಿಂದ ಬ್ರಹ್ಮನೂ ಜ್ಞಾನರೂಪನೂ ಆಗಬಾರದು.

ನಿಷ್ಕ್ರಿಯಂ ತ್ವಿತಿ ವೇದಸ್ಯ ಪಕ್ಷಪಾತೋ ನ ವಿದ್ಯತೇ ।
ಕ್ರಿಯಾಮಾತ್ರನಿಷೇಧಿತ್ವಾದ್ ದ್ವಯಂ ಚ ಪ್ರತಿಷೇಧತಿ ॥ ೩೭೮ ॥

**ಅರ್ಥ–** ನಿಷ್ಕ್ರಿಯಮ್ ಇತಿ ವೇದಸ್ಯ ತು= 'ನಿಷ್ಕ್ರಿಯಂ' ಎಂಬ ವೇದವಾಕ್ಯಕ್ಕೆ, ಪಕ್ಷಪಾತಃ=ಒಂದು ಪಕ್ಷದಲ್ಲಿ ಆಗ್ರಹವು, ನ ವಿದ್ಯತೇ=ಇಲ್ಲ. ಕ್ರಿಯಾಮಾತ್ರನಿಷೇಧಿತ್ವಾತ್= ಎಲ್ಲ ಕ್ರಿಯೆಗಳನ್ನು ನಿಷೇಧಿಸುವುದರಿಂದ, ದ್ವಯಂ ಚ=ಎರಡನ್ನೂ, ಪ್ರತಿಷೇಧತಿ=ನಿಷೇಧಿಸುತ್ತದೆ.

**ಅನುವಾದ–** 'ನಿಷ್ಕಲಂ ನಿಷ್ಕ್ರಿಯಂ ಶಾಂತಮ್'– ಈ ಶ್ರುತಿಗೆ ಪಕ್ಷಪಾತವಿಲ್ಲ. ಬ್ರಹ್ಮನಲ್ಲಿ ಸಕಲಕ್ರಿಯೆಗಳನ್ನೂ ನಿಷೇಧಿಸುವ ಈ ಶ್ರುತಿಯು ಎರಡನ್ನೂ (ಕರ್ತೃತ್ವವನ್ನು ಮತ್ತು ಜ್ಞಪ್ತಿತ್ವವನ್ನು) ನಿಷೇಧಿಸುತ್ತದೆ.

**ಭಾವವಿಲಾಸಿನೀ–** ನಿಷ್ಕ್ರಿಯಂ ತ್ವಿತಿ ವೇದಸ್ಯ 'ನಿಷ್ಕಲಂ ನಿಷ್ಕ್ರಿಯಂ ಶಾಂತಮ್' ಇತಿ ವೇದಸ್ಯೇತ್ಯರ್ಥಃ । ಪ್ರಕೃತೋಪಯೋಗಿತ್ವಾತ್ ತಾವತ ಏವ ಗ್ರಹಣಮ್ । ಪಕ್ಷಪಾತಃ ಜ್ಞಪ್ತಿತ್ವರೂಪ-ಕ್ರಿಯಾಮಂಗೀಕೃತ್ಯ ಕರ್ತೃತ್ವರೂಪಕ್ರಿಯಾನಂಗೀಕಾರಃ । ನಿಷ್ಕ್ರಿಯಮಿತಿ ವಾಕ್ಯೇನ ಸಾಮಾನ್ಯತಃ

ಕ್ರಿಯಾನಿಷೇಧಾಂಗೀಕಾರೇ ಕರ್ತೃತ್ವನಿಷೇಧವತ್ ಜ್ಞಪ್ತಿತ್ವನಿಷೇಧೋಽಪಿ ಸ್ಯಾತ್ । ಉಭಯೋರಪಿ ಕ್ರಿಯಾತ್ವಾವಿಶೇಷಾದಿತಿ ಭಾವಃ ॥ ೩೭೮ ॥

**ವಿವರಣೆ–**'ನಿಷ್ಕಲಂ ನಿಷ್ಕ್ರಿಯಂ ಶಾಂತಮ್' ಎಂಬ ಶ್ರುತಿಯು ಬ್ರಹ್ಮನಲ್ಲಿ ಸಕಲ ಕ್ರಿಯೆಗಳನ್ನು ನಿಷೇಧಿಸುತ್ತಿದೆ. ಈ ಶ್ರುತಿಗೆ ಬ್ರಹ್ಮನಲ್ಲಿ ಜ್ಞಾನಕ್ರಿಯಾವನ್ನು ಅಂಗೀಕರಿಸಿ, ಇತರ ಕ್ರಿಯಾಗಳನ್ನು ನಿಷೇಧಿಸುವ ಪಕ್ಷಪಾತವಿಲ್ಲ.

ಪರಾಸ್ಯೇತಿ ಶ್ರುತಿಃ ಪ್ರಾಹ ಸಹ ಜ್ಞಾನಬಲಕ್ರಿಯಾಃ ।
ಅತಃ ಶ್ರೌತಮಿದಂ ತ್ಯಕ್ತ್ವಾ ಸ್ವಗೋತ್ರಕಲಹಾಕ್ಷಮಾ ।
ಶ್ರುತಿರ್ನಿಷೇಧತೀಶೇ ದ್ವೇ ಪುಣ್ಯಪಾಪಾಭಿಧೇ ಕ್ರಿಯೇ ॥ ೩೭೯ ॥

**ಅರ್ಥ–** ಪರಾಸ್ಯೇತಿ ಶ್ರುತಿಃ= ಪರಾಸ್ಯಶಕ್ತಿರ್ವಿವಿಧೈವ ಶ್ರೂಯತೇ ಸ್ವಾಭಾವಿಕೀ ಜ್ಞಾನಬಲಕ್ರಿಯಾ ಚ ಎಂಬ ಶ್ರುತಿಯ ಜ್ಞಾನಬಲಕ್ರಿಯಾಃ= ಜ್ಞಾನ-ಬಲ-ಕ್ರಿಯೆಗಳನ್ನು ಸಹ ಪ್ರಾಹ= ಒಟ್ಟಿಗೆ ಹೇಳುತ್ತದೆ. ಅತಃ= ಆದ್ದರಿಂದ, ಶ್ರೌತಮ್ ಇದಮ್= ಶ್ರುತಿಯಲ್ಲಿ ಹೇಳಿದ ಈ ಜ್ಞಾನಾದಿಗಳನ್ನು, ತ್ಯಕ್ತ್ವಾ= ಬಿಟ್ಟು, ಸ್ವಗೋತ್ರಕಲಹಾಕ್ಷಮಾ= 'ಸ್ವಾಭಾವಿಕೀ-ಕ್ರಿಯಾಚ' ಎಂಬ ತನ್ನ ಜಾತಿಗೇ ಸೇರಿದ ಶ್ರುತಿಯ ವಿರೋಧವನ್ನು ಸಹಿಸದ ಶ್ರುತಿಃ= 'ನಿಷ್ಕ್ರಿಯಂ' ಎಂಬ ಶ್ರುತಿಯು ಪುಣ್ಯಪಾಪಾಭಿಧೇ= ಪುಣ್ಯಪಾಪಗಳೆಂಬ, ದ್ವೇ ಕ್ರಿಯೇ= ಎರಡು ಕ್ರಿಯೆಗಳನ್ನು, ಈಶೇ= ಈಶನಲ್ಲಿ, ನಿಷೇಧತಿ= ನಿಷೇಧಿಸುತ್ತವೆ.

**ಅನುವಾದ-** 'ಪರಾಸ್ಯ ಶಕ್ತಿರ್ವಿವಿಧೈವ ಶ್ರೂಯತೇ ಸ್ವಾಭಾವಿಕೀ ಜ್ಞಾನಬಲಕ್ರಿಯಾ ಚ'- ಈ ಶ್ರುತಿಯು ಪರಮಾತ್ಮನ ಜ್ಞಾನ, ಬಲ ಮತ್ತು ಕ್ರಿಯೆಗಳನ್ನು ಜತೆಗೆ ಹೇಳಿದೆ. 'ಶ್ರುತಿ' ಎಂಬ ಕುಲಕ್ಕೆ ಸೇರಿದ ಬೇರೆ ಬೇರೆ ವಾಕ್ಯಗಳು ಪರಸ್ಪರ ವಿರುದ್ಧವಾಗಿ ಇರುವುದಿಲ್ಲ. ಆದ್ದರಿಂದ 'ನಿಷ್ಕಲಂ...' ಶ್ರುತಿಯು, 'ಸ್ವಾಭಾವಿಕೀ...' ಶ್ರುತಿಯು ಹೇಳುವ ಜ್ಞಾನಾದಿಗಳನ್ನು ಬಿಟ್ಟು ಪುಣ್ಯ-ಪಾಪ ಎಂಬ ಎರಡು ಕ್ರಿಯೆಗಳನ್ನು ಈಶನಲ್ಲಿ ನಿಷೇಧಿಸುತ್ತದೆ.

**ಭಾವವಿಲಾಸಿನೀ–** ನನು ಸತ್ಯಂ ಜ್ಞಾನಮನಂತಂ ಬ್ರಹ್ಮ ಇತಿ ಜ್ಞಾನತ್ವಸ್ಯ ವಿಹಿತತ್ವಾನ್ನ ತನ್ನಿಷೇಧತಿ । ಜ್ಞಾನಾತಿರಿಕ್ತಕ್ರಿಯಾಯಾಃ ವಿಧಾಯಕಾಭಾವಾತ್ ತನ್ಮಾತ್ರಂ ನಿಷೇಧತೀತ್ಯತ ಆಹ–ಪರಾಸ್ಯೇತಿ ॥ ಜ್ಞಾನಬಲಕ್ರಿಯಾಃ ಸಹೈಕವಾಕ್ಯೇನೈವ ಪ್ರಾಹ । ಅತಃ ಜ್ಞಾನಕ್ರಿಯಯೋರೇಕವಾಕ್ಯೋಕ್ತತ್ವೇನ ತಯೋರೇಕಾಂಗೀಕಾರಸ್ಯಾಪರನಿರಾಕರಣಸ್ಯ ಚಾಯೋಗಾತ್ ಶ್ರೌತಮಿದಂ ಜ್ಞಾನಂ ಜಗತ್-ಸೃಷ್ಟ್ಯಾದಿಕ್ರಿಯಾ ಚ । ಸ್ವಗೋತ್ರಕಲಹಾಕ್ಷಮಾ ನಿಷ್ಕ್ರಿಯಶ್ರುತ್ಯಾ ಸರ್ವಥಾ ಕ್ರಿಯಾನಿಷೇಧೇ 'ಸ್ವಾಭಾವಿಕೀ ಜ್ಞಾನಬಲಕ್ರಿಯಾ ಚ' ಇತಿ ಶ್ರುತ್ಯಂತರವಿರೋಧಾಖ್ಯಕಲಹಪ್ರಸಂಗಾತ್ ತತ್ರಾಕ್ಷಮತ್ಯೇರ್ಥಃ । ಸ್ವಗೋತ್ರಕಲಹಸ್ಯ ಲೋಕೇಽಪಿ ನಿಂದಿತತ್ವಾತ್ ಶ್ರುತ್ಯಂತರವಿರೋಧಸ್ಯಾಪಿ ಗೋತ್ರಕಲಹತ್ವೇನ ನಿರ್ದೇಶ ಇತಿ ಜ್ಞಾತವ್ಯಮ್ । ಪುಣ್ಯಪಾಪಾಭಿಧೇ ಕ್ರಿಯೇ ತಯೋರಪಿ

**ಸತ್ಕ್ರಿಯಾ ದುಷ್ಕ್ರಿಯೇತಿ ಕ್ರಿಯಾಶಬ್ದವಾಚ್ಯತ್ವಾತ್ । 'ಪುಣ್ಯಪಾಪೇ ವಿಧೂಯ' ಇತಿ ಭಗವಜ್ಜ್ಞಾನಿಷ್ವಪಿ ಏನಿಂದಿತೇ ಭಗವತಿ ಸುತರಾಂ ಏನಿಂದಿತತ್ವೇನ ತೇ ಏವ ನಿಷೇಧತಿ। ಈಶ ಇತ್ಯನೇನ ಸ್ವೋಚ್ಚಾರಯಿತೃತ್ವೇನ ಸ್ವಸ್ಯಾ ಅಪಿ ಈಶತ್ವಾತ್ । ಈಶೇ ತಸ್ಮಿನ್ ಕ್ರಿಯಾಮಾತ್ರನಿಷೇಧೇ ಸ್ವೋಚ್ಚಾರಣಕ್ರಿಯಾಮೇವ ನ ಕುರ್ಯಾದಿತಿ ದೋಷಾಂತರಾಚ್ಚ ಭೀತಿಂ ಸೂಚಯತಿ ॥೩೭೯॥**

**ವಿವರಣೆ–** ಪ್ರಶ್ನೆ : 'ಸತ್ಯಂ ಜ್ಞಾನಮನಂತಂ ಬ್ರಹ್ಮ' ಎಂಬ ಶ್ರುತಿಯು ಬ್ರಹ್ಮನನ್ನು ಜ್ಞಾನರೂಪ ಎಂದು ಹೇಳಿದೆ. ಬೇರೆ ಕ್ರಿಯೆಗಳನ್ನು ಅವನಲ್ಲಿ ಯಾವ ಶ್ರುತಿಯೂ ಹೇಳಿಲ್ಲ. ಆದ್ದರಿಂದ 'ನಿಷ್ಕ್ರಿಯಂ...' ಶ್ರುತಿಯು ಜ್ಞಾನವನ್ನು ಬಿಟ್ಟು ಎಲ್ಲ ಕ್ರಿಯೆಗಳನ್ನು ನಿಷೇಧಿಸುತ್ತದೆ.

ಉತ್ತರ : **'ಪರಾಸ್ಯ ಶಕ್ತಿಃ ವಿವಿಧೈವ ಶ್ರೂಯತೇ ಸ್ವಾಭಾವಿಕೀ ಜ್ಞಾನಬಲಕ್ರಿಯಾ ಚ'** ಈ ಶ್ರುತಿಯು ಪರಮಾತ್ಮನಲ್ಲಿ ಜ್ಞಾನ, ಬಲ, ಕ್ರಿಯೆಗಳು ಸ್ವಾಭಾವಿಕ ಎಂದು ಒಂದೇ ವಾಕ್ಯದಲ್ಲೇ ಹೇಳುತ್ತಿದೆ. ಆದ್ದರಿಂದ, ಒಂದನ್ನು ಅಂಗೀಕರಿಸಿ ಎರಡನ್ನು ನಿರಾಕರಿಸುವುದು ಸಮಂಜಸವಲ್ಲ. ನಿಷ್ಕ್ರಿಯಶ್ರುತಿಯು ಸರ್ವಕ್ರಿಯೆಗಳನ್ನು ನಿಷೇಧಿಸುತ್ತಿದೆ ಎಂದರೆ 'ಸ್ವಾಭಾವಿಕೀ ಜ್ಞಾನಬಲಕ್ರಿಯಾ ಚ' ಎಂಬ ಶ್ರುತಿಯ ವಿರೋಧವು ಬರುತ್ತದೆ. ತನ್ನ ಒಡ ಹುಟ್ಟಿದವರಲ್ಲಿಯೇ ಕಲಹವು ಲೋಕದಲ್ಲೂ ನಿಂದ್ಯವಾಗಿದೆ. ಶ್ರುತಿಗಳಲ್ಲಿನ ವಿರೋಧವು ಕಲಹವೇ ಆಗಿದೆ. ಆದ್ದರಿಂದ, ಶ್ರುತಿಯು ಬ್ರಹ್ಮನಲ್ಲಿ ಪುಣ್ಯಪಾಪಗಳನ್ನು ಮಾತ್ರ ನಿಷೇಧಿಸುತ್ತಿದೆ. ಅವುಗಳೂ ಸತ್‌ಕ್ರಿಯಾ, ದುಷ್ಕ್ರಿಯಾ ಎಂದು ಕ್ರಿಯಾಶಬ್ದವಾಚ್ಯಗಳಾಗಿವೆ. 'ಪುಣ್ಯಪಾಪೇ ವಿಧೂಯ' ಎಂದು ಶ್ರುತಿಯು ಜ್ಞಾನಿಗೆ ಪುಣ್ಯಪಾಪಗಳ ಸಂಬಂಧವಿಲ್ಲ ಎನ್ನುತ್ತಿದೆ. ಜ್ಞಾನಿಗೇ ಇಲ್ಲ ಎಂದ ಮೇಲೆ ಜ್ಞಾನಿಗೂ ಈಶನಾದ ಪರಮಾತ್ಮನಿಗೆ ಇರುತ್ತವೆಯೇ? ವೇದಗಳಿಗೂ ಅಧಿಪತಿ ಪರಮಾತ್ಮ. ಅವನಲ್ಲಿ ಕ್ರಿಯಾಸಾಮಾನ್ಯವನ್ನು ನಿಷೇಧಿಸಿದರೆ, ವೇದದ ಉಚ್ಚಾರಣಕ್ರಿಯೆಯು ಪರಮಾತ್ಮನಲ್ಲಿ ಇಲ್ಲ ಎಂದಾಗುತ್ತದೆ. ಆದ್ದರಿಂದ, ಸಮಸ್ತ ಕ್ರಿಯೆಗಳನ್ನು 'ನಿಷ್ಕ್ರಿಯಂ...' ಶ್ರುತಿಯು ನಿಷೇಧಿಸುತ್ತಿಲ್ಲ ಎಂದು ಈಶಶಬ್ದದಿಂದ ಸೂಚಿಸಿದ್ದಾರೆ.

**ದುಶ್ಶಬ್ದಸ್ಪರ್ಶರೂಪಾದೀನ್ ವಿಷಯಾನ್ ಜಡವಿಗ್ರಹಮ್ ।**
**ಅಶಬ್ದತ್ವಾದಿಕಾ ವಾಣೀ ನಿವಾರಯತಿ ವೈದಿಕೀ ॥ ೩೮೦ ॥**

**ಅರ್ಥ–** ವೈದಿಕೀ= ವೇದದಲ್ಲಿರುವ, ಅಶಬ್ದತ್ವಾದಿಕಾ= ಆ ಅಶಬ್ದಮಸ್ಪರ್ಶಮರೂಪಮವ್ಯಯಂ ಎಂಬ, ವಾಣೀ= ವಾಕ್ಯವು, ದುಶ್ಶಬ್ದ ಸ್ಪರ್ಶರೂಪಾದೀನ್ ವಿಷಯಾನ್= ದುಶ್ಶಬ್ದ, ಪ್ರಾಕೃತಸ್ಪರ್ಶ, ಪ್ರಾಕೃತರೂಪ ಮೊದಲಾದ ವಿಷಯಗಳನ್ನು ಜಡವಿಗ್ರಹಮ್= ಜಡ ಶರೀರವನ್ನು ನಿವಾರಯತಿ= ನಿವಾರಿಸುತ್ತದೆ.

**ಅನುವಾದ–** 'ಅಶಬ್ದಮ್......' ಮುಂತಾದ ವೇದವಾಕ್ಯವು ಅಶಬ್ದಮ್ ಎಂಬ ಪದರಿಂದ ದೋಷಾಪಾದಕಶಬ್ದಗಳನ್ನು ನಿರಾಕರಿಸುತ್ತದೆ. **'ಅಸ್ಪರ್ಶಂ'** ಎಂಬ ಪದದಿಂದ ದುಷ್ಟ ಸ್ಪರ್ಶವನ್ನು ಎಂದರೆ ಪ್ರಾಕೃತಸ್ಪರ್ಶವನ್ನು ನಿರಾಕರಿಸುತ್ತದೆ.

**'ಅರೂಪಂ'** ಎಂಬ ಪದದಿಂದ ಪ್ರಾಕೃತರೂಪವನ್ನು ನಿರಾಕರಿಸುತ್ತದೆ. **'ಅಶರೀರಂ'** ಎಂಬ ಶ್ರುತಿಯು ಪ್ರಾಕೃತವಾದ ಎಂದರೆ ಜಡವಾದ ಶರೀರವನ್ನು ನಿಷೇಧಿಸುತ್ತದೆ.

**ಭಾವವಿಲಾಸಿನೀ–** 'ಅಶಬ್ದಮಸ್ಪರ್ಶಮರೂಪವಮ್' ಇತ್ಯಾದಿಶ್ರುತ್ಯಾ ಬ್ರಹ್ಮಣಃ ರೂಪಾದಿ-ರಾಹಿತ್ಯಾಖ್ಯದೋಷಃ ಕಥ್ಯತ ಇತಿ ಭ್ರಾಂತಿಂ ನಿವಾರಯಿತುಮಾಹ– **ದುಃಶಬ್ದೇತಿ** ॥ ದುಃಶಬ್ದಸ್ಪರ್ಶ-ರೂಪಾದೀನಿತ್ಯತ್ರ ದುರಿತಿ ವಿಶೇಷಣಂ ಸರ್ವತ್ರ ಸಂಬಧ್ಯತೇ । ಶಬ್ದೇ ದೋಷಃ ತುಚ್ಛತ್ವಶೂನ್ಯತ್ವ-ದುಃಖಾಧಾರತ್ವಬಂಧಾಧಾರತ್ವಾದಿಪ್ರತಿಪಾದಕತ್ವಮ್ ತಾದೃಶಶಬ್ದರಾಹಿತ್ಯಮಶಬ್ದಶ್ರುತೇ-ರರ್ಥಃ । ಸ್ಪರ್ಶಾದಿಷು ಪ್ರಾಕೃತತ್ವಮೇವ ದುಷ್ಟತ್ವಮ್, ತದ್ರಾಹಿತ್ಯಮೇವಾ- ಸ್ಪರ್ಶಮಿತ್ಯಾದಿ-ಶ್ರುತೇರರ್ಥಃ ॥ **ಅಶರೀರಮಿತಿ** ॥ ಶ್ರುತೇರ್ಜಡವಿಗ್ರಹಾಭಾವ ಏವಾರ್ಥಃ ॥ ೩೮೦ ॥

**ವಿವರಣೆ–** (1) 'ಅಶಬ್ದಮಸ್ಪರ್ಶಮರೂಪಮವ್ಯಯಂ
ತಥಾರಸಂ ನಿತ್ಯಮಗಂಧವಚ್ಚ ಯತ್'- ಕಠೋಪನಿಷತ್ ।

(2) ಶಬ್ದದಲ್ಲಿ ಪ್ರಾಕೃತ-ಅಪ್ರಾಕೃತ ಎಂಬ ವಿಭಾಗವಿಲ್ಲ. ರೂಪಸ್ಪರ್ಶಾದಿಗಳಲ್ಲಿ ಅಂತಹ ವಿಭಾಗವಿದೆ. ಆದ್ದರಿಂದ ಶಬ್ದದಲ್ಲಿ ದೋಷವೆಂದರೆ ತುಚ್ಛತ್ವ-ನೀಚತ್ವ ಮೊದಲಾದ ಧರ್ಮಪ್ರತಿಪಾದಕತ್ವ, ರೂಪ-ಸ್ಪರ್ಶಗಳಲ್ಲಿ ದೋಷವೆಂದರೆ ಪ್ರಾಕೃತತ್ವ.

**ನ ಚೇನ್ನಿಷ್ಕಲಶಬ್ದೇನ ನ ಸ್ಯಾಜ್ಜ್ಞಾನಕಲಾಪಿ ತೇ ।**
**ಕಥಂಚಿತ್ ತತ್ಸಮಾಧಾನೇ ಸರ್ವತ್ರೈವಂ ಮತಿಂ ಕುರು ॥ ೩೮೧ ॥**

**ಅರ್ಥ–** ನ ಚೇತ್= ದುಶ್ಶಬ್ದಾದಿರಾಹಿತ್ಯವು ಶ್ರುತ್ಯರ್ಥವಲ್ಲವಾದರೆ, ನಿಷ್ಕಲಶಬ್ದೇನ= ನಿಷ್ಕಲಶಬ್ದದಿಂದ, ಜ್ಞಾನಕಲಾಪಿ=ಜ್ಞಾನಕಲೆಯೂ ಸಹ, ತೇ=ನಿನ್ನ ಬ್ರಹ್ಮನಿಗೆ, ನ ಸ್ಯಾತ್=ಇಲ್ಲವೆಂದಾಗುತ್ತದೆ. ಕಥಂಚಿತ್=ಹೇಗಾದರೂ, ತತ್‌ಸಮಾಧಾನೇ= ಅದಕ್ಕೆ ಸಮಾಧಾನವನ್ನು ಮಾಡಿದರೆ, ಸರ್ವತ್ರ=ಎಲ್ಲ ವಾಕ್ಯಗಳ ಬಗ್ಗೆಯೂ, ಏವಂ=ಹೀಗೆಯೇ, ಮತಿಂ ಕುರು= ಆಲೋಚಿಸು.

**ಅನುವಾದ– 'ಅಶಬ್ದಮಸ್ಪರ್ಶಮ್...' ಇತ್ಯಾದಿ ಶ್ರುತಿಗಳಿಗೆ ದೋಷಾಪಾದಕ ಶಬ್ದರಾಹಿತ್ಯ ಇತ್ಯಾದಿಗಳು ಅರ್ಥವಲ್ಲವಾದರೆ 'ನಿಷ್ಕಲಂ ನಿಷ್ಕ್ರಿಯಂ ಶಾಂತಮ್' ಇತ್ಯಾದಿ ಶ್ರುತಿಗಳು ಬ್ರಹ್ಮನಲ್ಲಿ ಕಲಾರಾಹಿತ್ಯವನ್ನು ಹೇಳುವುದರಿಂದ, ಅವನಲ್ಲಿ ಜ್ಞಾನಕಲೆಯೂ ಇಲ್ಲವಾದೀತು. ಬ್ರಹ್ಮನಲ್ಲಿ ಜ್ಞಾನವನ್ನು ನಿಷೇಧಿಸದಂತೆ, ಹೇಗಾದರೂ ಆ ಶ್ರುತಿಯನ್ನು ವ್ಯಾಖ್ಯಾನಿಸಿದರೆ, 'ಅಶಬ್ದಮಸ್ಪರ್ಶಮ್...' ಇತ್ಯಾದಿ ಎಲ್ಲ ಶ್ರುತಿಗಳ ಬಗ್ಗೆಯೂ ಹೀಗೆಯೇ ವಿಮರ್ಶಿಸು.**

**ಭಾವವಿಲಾಸಿನೀ–** ನ ಚೇದುಕ್ತರೀತ್ಯಾ ದುಶ್ಶಬ್ದಾದಿರಾಹಿತ್ಯಮರ್ಥೋ ನ । ಕಿಂತು ಸಾಮಾನ್ಯತಃ ಶಬ್ದಾದಿರಾಹಿತ್ಯಮೇವಾರ್ಥಶ್ಚೇತ್ । 'ನಿಷ್ಕಲಂ ನಿಷ್ಕ್ರಿಯಂ ಶಾಂತಮ್' ಇತ್ಯತ್ರ ನಿಷ್ಕಲಶಬ್ದೇನ

ಸಮಾನನ್ಯಾಯತ್ವಾತ್ ಕಲಾಮಾತ್ರಂ ನಿವಾರ್ಯತ ಇತಿ ಬ್ರಹ್ಮಣಿ ಜ್ಞಾನಕಲಾಪಿ ತೇ ಮತೇ ನ ಸ್ಯಾದಿತಿ ಸಂಬಂಧಃ । ಚತುಷ್ಷಷ್ಟಿಕಲಾಮಧ್ಯೇ ಜ್ಞಾನಸ್ಯಾಪಿ ಕಲಾತ್ವೇನ ಪಠಿತತ್ವಾತ್। ಕಥಂಚಿತ್ ತತ್ಸಮಾಧಾನೇ ಕಲಾಶಬ್ದೇನ ಜಡಕಲಾ ಏವ ಕಥ್ಯಂತೇ । ನತು ಕಲಾಸಾಮಾನ್ಯಮಿತಿ ಸಮಾಧಾನೇ ಸರ್ವತ್ರಾಶಬ್ದಮಿತ್ಯಾದಾವಪಿ ॥ ೩೮೧ ॥

**ವಿವರಣೆ–** 'ಅಶಬ್ದಮಸ್ಪರ್ಶಮರೂಪಮವ್ಯಯಂ' ಶ್ರುತಿಯು ದುಶ್ಶಬ್ದಾದಿಗಳನ್ನು ನಿಷೇಧಿಸದೆ ಶಬ್ದವಾಚ್ಯತ್ವ ಮೊದಲಾದ ಧರ್ಮಗಳನ್ನೇ ನಿಷೇಧಿಸುವುದಾದರೆ, 'ನಿಷ್ಕಲಂ ನಿಷ್ಕ್ರಿಯಂ ಶಾಂತಂ' ಎಂಬ ಶ್ರುತಿಯು ಕಲಾಸಾಮಾನ್ಯವನ್ನು ನಿಷೇಧಿಸುತ್ತಿದೆ ಎಂದು ಅರ್ಥೈಸಬೇಕಾಗುತ್ತದೆ. ಆಗ ಬ್ರಹ್ಮನಲ್ಲಿ 64 ಕಲೆಗಳಲ್ಲಿ ಸೇರಿದ ಜ್ಞಾನಕಲೆಯೂ ಇಲ್ಲವೆಂದಾಗುತ್ತದೆ. ಇದು ಅದ್ವೈತಸಮ್ಮತವಲ್ಲ. ಇದರ ಪರಿಹಾರಕ್ಕಾಗಿ, ನಿಷ್ಕಲಶಬ್ದವು ಕಲಾಸಾಮಾನ್ಯವನ್ನು ನಿಷೇಧಿಸುತ್ತಿಲ್ಲ; ಕೇವಲ ಜಡ ಕಲಾವನ್ನು ನಿಷೇಧಿಸುತ್ತದೆ ಎಂದು ಹೇಳಿದರೆ ಶ್ರುತಿತ್ವವು ಎರಡು ಕಡೆಯಲ್ಲಿ ಸಮಾನವಾದ್ದರಿಂದ 'ಅಶಬ್ದಮಸ್ಪರ್ಶಂ...' ಎಂಬ ಶ್ರುತಿಯಲ್ಲೂ ದುಷ್ಟವಾದ ಶಬ್ದಾದಿಗಳ ನಿಷೇಧ ಎಂದು ಅರ್ಥೈಸುವುದೇ ಸಮಂಜಸವಾಗುತ್ತದೆ.

ಅಶಬ್ದಶ್ರುತಿಲಕ್ಷ್ಯತ್ವೇ ಮುಖ್ಯಾರ್ಥಾಶಬ್ದತಾ ಗತಾ ।
ಅಶಬ್ದಶ್ರುತಿವಾಚ್ಯತ್ವೇ ಮುಖ್ಯಾರ್ಥಾಶಬ್ದತಾ ಗತಾ ॥ ೩೮೨ ॥

**ಅರ್ಥ–** ಅಶಬ್ದಶ್ರುತಿಲಕ್ಷ್ಯತ್ವೇ=ಬ್ರಹ್ಮನು 'ಅಶಬ್ದ' ಶ್ರುತಿಯ ಲಕ್ಷ್ಯಾರ್ಥವಾದರೆ, ಮುಖ್ಯಾರ್ಥಾಶಬ್ದತಾ= ಮುಖ್ಯಾರ್ಥವಾದ ಶಬ್ದಾಪ್ರತಿಪಾದ್ಯತ್ವವು, ಗತಾ=ಹೋಯಿತು. ಅಶಬ್ದಶ್ರುತಿವಾಚ್ಯತ್ವೇ=ಅಶಬ್ದಶ್ರುತಿಯಿಂದ ಬ್ರಹ್ಮನು ವಾಚ್ಯನಾದರೆ, ಮುಖ್ಯಾರ್ಥಾಶಬ್ದಾ= ಮುಖ್ಯಾರ್ಥವಾದ ಶಬ್ದಾವಾಚ್ಯತ್ವವು, ಗತಾ=ಹೋಯಿತು.

**ಅನುವಾದ–** ಬ್ರಹ್ಮನು ಅಶಬ್ದಶ್ರುತಿಯಿಂದ ಲಕ್ಷ್ಯನೆಂದು ಹೇಳಿದರೆ ಗಂಗಾಪದ ಲಕ್ಷ್ಯವಾದ ತೀರದಲ್ಲಿ ಗಂಗಾತ್ವವು ಇಲ್ಲದಿರುವಂತೆ ಬ್ರಹ್ಮನಲ್ಲಿ ಅಶಬ್ದತ್ವವಿಲ್ಲವೆಂದೇ ಸಿದ್ಧವಾಗುತ್ತದೆ. ಬ್ರಹ್ಮನು ಅಶಬ್ದ ಎಂಬ ಶಬ್ದದಿಂದ ವಾಚ್ಯ ಎಂದು ಹೇಳಿದರೆ ಶಬ್ದವಾಚ್ಯತ್ವವೇ ಬರುವುದರಿಂದ ಅಶಬ್ದತ್ವವು= ಶಬ್ದವಾಚ್ಯತ್ವಾಭಾವವು ಹೊರಟು ಹೋಗುತ್ತದೆ. ಏಕೆಂದರೆ ಅಶಬ್ದ ಎನ್ನುವುದೂ ಒಂದು ಶಬ್ದ? ಆದ್ದರಿಂದ ಬ್ರಹ್ಮನಿಗೆ ಅಶಬ್ದಶಬ್ದ ಲಕ್ಷ್ಯತ್ವವನ್ನು ಒಪ್ಪಿದರೂ, ಅಶಬ್ದ ಶಬ್ದದಿಂದ ವಾಚ್ಯತ್ವವನ್ನು ಒಪ್ಪಿದರೂ ಅಶಬ್ದತ್ವವೇ ಹೊರಟುಹೋಗುತ್ತದೆ. ಅಶಬ್ದ ಶ್ರುತಿಪ್ರತಿಪಾದ್ಯತ್ವವೇ ಇಲ್ಲವೆಂದರೆ ಅದಕ್ಕೆ ಮುಂದಿನ ಶ್ಲೋಕದಲ್ಲಿ ದೋಷವನ್ನು ಹೇಳುತ್ತಾರೆ.

**ಭಾವವಿಲಾಸಿನೀ–** ಅಶಬ್ದಶ್ರುತೇಃ ಸಾಮಾನ್ಯತಶ್ಶಬ್ದಶೂನ್ಯಾರ್ಥಕತ್ವೇ ದೋಷಾಂತರಂ ಚಾಹ– **ಅಶಬ್ದಶ್ರುತಿಲಕ್ಷ್ಯತ್ವ ಇತಿ** ॥ ಬ್ರಹ್ಮಣಃ ಸರ್ವಥಾಶಬ್ದಶೂನ್ಯತ್ವಂ ವದತಃ 'ಅಶಬ್ದಮ್' ಇತಿ ಶ್ರುತ್ಯಾ ಬ್ರಹ್ಮ ಲಕ್ಷ್ಯಂ ವಾ ವಾಚ್ಯಂ ವಾ ಅಬೋಧ್ಯಮೇವ ವೇತಿ ವಿಕಲ್ಪ್ಯ ಪಕ್ಷತ್ರಯೇಽಪ್ಯೇಕಮೇವ

**ದೂಷಣಮುಕ್ತಮ್ । ಮುಖ್ಯಾರ್ಥೋಽಶಬ್ದಶಬ್ದಸ್ಯ ಮುಖ್ಯಾರ್ಥಭೂತಾಽಶಬ್ದತಾ ಶಬ್ದ-ಮಾತ್ರಾಗೋಚರತಾ ॥ ಗತೇತಿ ॥ ಶಬ್ದಲಕ್ಷ್ಯತ್ವೇಽಪಿ ಗಂಗಾಪದೇನ ತೀರಸ್ಯೇವ ಶಬ್ದಗೋಚರತ್ವೇನ ಶಬ್ದಾಗೋಚರತಾ ಗತಾ । ವಾಚ್ಯತ್ವೇಽಪಿ ಸುತರಾಮ್ ॥ ೩೮೨ ॥**

**ವಿವರಣೆ–** 'ಶಬ್ದದ ಯಾವ ವೃತ್ತಿಯಿಂದಲೂ ಪ್ರತಿಪಾದ್ಯವಲ್ಲ' - ಇದು ಅಶಬ್ದ ಶಬ್ದದ ಮುಖ್ಯಾರ್ಥ. ಬ್ರಹ್ಮನು 'ಅಶಬ್ದಮಸ್ಪರ್ಶಮ್...' ಇತ್ಯಾದಿ ಶ್ರುತಿಯಿಂದ ಲಕ್ಷಣಾವೃತ್ತಿಯಿಂದ ಪ್ರತಿಪಾದ್ಯ ಎಂದರೆ, ಮುಖ್ಯಾರ್ಥವು ಹೋಯಿತು. ಶಕ್ತಿವೃತ್ತಿಯಿಂದ ಪ್ರತಿಪಾದ್ಯ ಎಂದರೂ, ವಾಚ್ಯತ್ವವೇ ಬ್ರಹ್ಮನಲ್ಲಿ ಸಿದ್ಧವಾಗುವುದರಿಂದ, ಮುಖ್ಯಾರ್ಥವು ಹೋಯಿತು.

**ಅಶಬ್ದಶ್ರುತ್ಯಬೋಧ್ಯತ್ವೇ ಮುಖ್ಯಾರ್ಥಾಶಬ್ದತಾ ಗತಾ ॥ ೩೮೩ ॥**

**ಅರ್ಥ–** ಅಶಬ್ದಶ್ರುತ್ಯಬೋಧ್ಯತ್ವೇ='ಅಶಬ್ದ' ಶ್ರುತಿಯಿಂದ ಬ್ರಹ್ಮನು ಬೋಧ್ಯನೇ ಅಲ್ಲ ಎಂದರೆ, ಮುಖ್ಯಾರ್ಥಾಶಬ್ದತಾ=ಅಶಬ್ದತ್ವಶಬ್ದದ ಮುಖ್ಯಾರ್ಥವು, ಗತಾ=ಹೋಯಿತು.

**ಅನುವಾದ–** ಬ್ರಹ್ಮನು ಅಶಬ್ದಶ್ರುತಿಯಿಂದ ಬೋಧ್ಯನಲ್ಲ ಎಂದರೆ ಶಬ್ದಾಗೋಚರತ್ವದ ವಿಷಯದಲ್ಲಿ ಪ್ರಮಾಣವೇ ಇಲ್ಲ ಎಂದಾಗುತ್ತದೆ. ಆಗಲೂ ಮುಖ್ಯಾರ್ಥವಾದ ಶಬ್ದಾಪ್ರತಿಪಾದ್ಯತ್ವವು ಭಗ್ನವಾಯಿತು.

**ಭಾವವಿಲಾಸಿನೀ– ಸರ್ವಥಾ ತಚ್ಛಬ್ದಾಬೋಧ್ಯತ್ವೇ ತು ಪ್ರಮಾಣಾಭಾವೇನೈವ ಶಬ್ದಾಗೋಚರತಾ ಗತೇತ್ಯರ್ಥಃ ॥ ೩೮೩ ॥**

**ಯದ್ಯಶಬ್ದಶ್ರುತೇರರ್ಥಃ ಸರ್ವಥಾ ಶಬ್ದದೂರತಾ ।**
**ತರ್ಹೀಯಂ ಚ ಶ್ರುತಿಸ್ತತ್ರ ಮಾನಂ ನೇತಿ ಜಿತಂ ಪರೈಃ ॥ ೩೮೪ ॥**

**ಅರ್ಥ–** ಅಶಬ್ದಶ್ರುತೇಃ=**'ಅಶಬ್ದಮಸ್ಪರ್ಶಂ'** ಶ್ರುತಿಗೆ, ಸರ್ವಥಾ=ಎಲ್ಲ ಪ್ರಕಾರದಿಂದಲೂ, ಶಬ್ದದೂರತಾ=ಶಬ್ದಪ್ರತಿಪಾದ್ಯತ್ವಾಭಾವವೇ, ಯದಿ ಅರ್ಥಃ= ಅರ್ಥವಾದರೆ, ತರ್ಹಿ=ಆ ಪಕ್ಷದಲ್ಲಿ, ಇಯಂ ಚ ಶ್ರುತಿಃ= ಈ ಶ್ರುತಿಯೂ, ತತ್ರ= ಅಶಬ್ದತ್ವ ವಿಷಯದಲ್ಲಿ, ಮಾನಂ ನ ಇತಿ=ಪ್ರಮಾಣವಲ್ಲ ಎಂಬ ಕಾರಣದಿಂದ, ಪರೈಃ=ಪರಪಕ್ಷದವರಿಂದ, ಜಿತಂ= ಗೆಲ್ಲಲ್ಪಟ್ಟಿತು.

**ಅನುವಾದ–** ಅಶಬ್ದಶ್ರುತಿಯು ಬ್ರಹ್ಮನು ಯಾವ ವೃತ್ತಿಯಿಂದಲೂ ಶಬ್ದಪ್ರತಿಪಾದ್ಯನೇ ಅಲ್ಲ ಎಂದು ಅಭಿಪ್ರಾಯವುಳ್ಳದ್ದು ಎಂದರೆ, ಆಗ ಅಶಬ್ದಶ್ರುತಿಯೂ ಅಶಬ್ದತ್ವ ವಿಷಯದಲ್ಲಿ ಪ್ರಮಾಣವಲ್ಲ ಎಂದಾಗುತ್ತದೆ. ಶ್ರುತಿಪ್ರತಿಪಾದ್ಯತ್ವವನ್ನು ಒಪ್ಪಿ ಪ್ರಾಕೃತಗುಣರಹಿತ ಎಂದು ಅರ್ಥೈಸುವ ತತ್ವವಾದಿಗೇ ವಿಜಯಪ್ರಾಪ್ತಿಯಾಗುತ್ತದೆ.

**ಭಾವವಿಲಾಸಿನೀ– ಏತದೇವ ವಿವೇಚಯನ್ ಸಂಗೃಹ್ಯ ದೂಷಣಾಂತರಂ ಚಾಹ– ಯದೀತಿ ॥ ೩೮೪ ॥**

**ಕಥಂಚಿತ್ ಶಬ್ದಯೋಗೇ ತು ಶ್ರುತೇರ್ಮುಖ್ಯಾರ್ಥತಾ ಗತಾ ।**
**ಯಥಾಯೋಗ್ಯಾರ್ಥಕಥನೇ ಜಿತಂ ತ್ವತ್ಪ್ರತಿವಾದಿಭಿಃ ॥ ೩೮೫ ॥**

**ಅರ್ಥ–** ಕಥಂಚಿತ್=ಯಾವುದೋ ಒಂದು ರೀತಿಯಿಂದ, ಶಬ್ದಯೋಗೇ= ಶಬ್ದಪ್ರತಿ-ಪಾದ್ಯತ್ವವು ಇದ್ದರೆ, ಶ್ರುತೇಃ= ಅಶಬ್ದಶ್ರುತಿಗೆ, ಮುಖ್ಯಾರ್ಥತಾ=ಮುಖ್ಯಾರ್ಥವು, ಗತಾ= ಹೋಯಿತು. ಯಥಾಯೋಗ್ಯಾರ್ಥಕಥನೇ= ಪ್ರಮಾಣಾನುಗುಣವಾದ ಅರ್ಥವನ್ನು ಹೇಳಿದರೆ, ತ್ವತ್ಪ್ರತಿವಾದಿಭಿಃ=ನಿನ್ನ ಪ್ರತಿವಾದಿಗಳಿಂದ, ಜಿತಂ=ಗೆಲ್ಲಲ್ಪಟ್ಟಿತು.

**ಅನುವಾದ– ಶ್ರುತಿಯು ಹೇಳುವ ಅಶಬ್ದತ್ವದ ಸಿದ್ಧಿಗಾಗಿ ಯಾವುದಾದರೂ ವೃತ್ತಿಯಿಂದ ಶಬ್ದಪ್ರತಿಪಾದ್ಯತ್ವವನ್ನು ಒಪ್ಪಿದರೆ, ಶಬ್ದಾವಿಷಯತ್ವ ಎಂಬ ಮುಖ್ಯಾರ್ಥವೇ ಹೋಗುತ್ತದೆ. ಅಶಬ್ದಶ್ರುತಿಗೆ ಪ್ರಮಾಣಾನುಗುಣವಾಗಿ ಅರ್ಥಸಂಕೋಚವನ್ನು ಮಾಡಿದರೆ ನಿನ್ನ ಪ್ರತಿವಾದಿಗಳಿಗೇ ಜಯ.**

**ಭಾವವಿಲಾಸಿನೀ– ಕಥಂಚಿತ್ ಶಬ್ದಯೋಗೇ ಅಶಬ್ದತ್ವರೂಪಸ್ವಾಭಿಲಷಿತಾರ್ಥಸಿದ್ಧ್ಯರ್ಥಂ ಅಶಬ್ದಶ್ರುತ್ಯುಕ್ತ ಶಬ್ದಾಖ್ಯಶಬ್ದಯೋಗೇ । ಸರ್ವಥಾ ಶಬ್ದಾಗೋಚರತ್ವಸ್ಯ ತ್ವಯೈವ ಪರಿತ್ಯಕ್ತತ್ವಾತ್ ಶ್ರುತೇರ್ಮುಖ್ಯಾರ್ಥತಾ ಗತಾ । ತ್ವತ್ಪ್ರತಿವಾದಿಭಿರ್ಬ್ರಹ್ಮಣಃ ಸರ್ವಶಬ್ದವಾಚ್ಯತ್ವ-ವಾದಿಭಿರ್ಜಿತಮ್ । ತ್ವಯಾ ಸ್ವಾಭಿಲಷಿತಾರ್ಥಸಿದ್ಧ್ಯರ್ಥಂ ಕ್ರಿಯಮಾಣಸಂಕೋಚವತ್ ತೈರಪಿ ದುಶ್ಶಬ್ದೇತ್ಯಾದ್ಯುಕ್ತರೀತ್ಯಾ ಸಂಕೋಚಸ್ಯ ಕರ್ತುಂ ಶಕ್ಯತ್ವಾತ್ । ದೋಷವರ್ಜಿತೇ ಬ್ರಹ್ಮಣಿ ತೈರುಚ್ಯಮಾನದುಶ್ಶಬ್ದದೂರತ್ವರೂಪಾರ್ಥಸ್ಯೈವ ಯೋಗ್ಯತ್ವಾದಿತಿ ಭಾವಃ ॥ ೩೮೫ ॥**

**ವಿವರಣೆ–** ಶ್ರುತಿಯು ಹೇಳುವ 'ಅಶಬ್ದ' ಶಬ್ದವು ಬ್ರಹ್ಮನಲ್ಲಿ ಹೇಗಾದರೂ ಉಪಪನ್ನವಾದರೆ 'ಶಬ್ದಾಪ್ರತಿಪಾದ್ಯತ್ವ' ಎಂಬ ಮುಖ್ಯಾರ್ಥವು ಹೋಗುತ್ತದೆ.

''ಸರ್ವಥಾ ಶಬ್ದಾ ಪ್ರತಿಪಾದ್ಯ' ಎಂದು ಅಶಬ್ದಶಬ್ದದ ಅರ್ಥವಲ್ಲ; 'ಅಶಬ್ದ' ಶಬ್ದದಿಂದ ಪ್ರತಿಪಾದ್ಯನೇ, ಬೇರೆ ಶಬ್ದಗಳಿಂದ ಪ್ರತಿಪಾದ್ಯನಲ್ಲ'' - ಹೀಗೆ ವ್ಯಾಖ್ಯಾನಿಸಿ ಶ್ರುತಿಯನ್ನು ನಿರ್ವಹಿಸಬೇಕು. ಈ ವ್ಯಾಖ್ಯಾನದಲ್ಲಿ ಅರ್ಥಸಂಕೋಚವಿದೆ. ತತ್ವವಾದಿಗಳೂ ಪ್ರಮಾಣಾನುಗುಣವಾದ ಅರ್ಥಸಂಕೋಚವನ್ನು ಮಾಡುತ್ತಾರೆ. (ಶ್ಲೋಕ 380) ಅರ್ಥ ಸಂಕೋಚದ ಮಾರ್ಗವನ್ನೇ ಮಾಯಾವಾದವೂ ಅನುಸರಿಸುವುದರಿಂದ ತತ್ವವಾದಿಗಳಿಗೇ ಜಯ. ತತ್ವವಾದಿಗಳು ಪ್ರಮಾಣಾನುಗುಣವಾದ ಅರ್ಥಸಂಕೋಚವನ್ನು ಮಾಡುತ್ತಾರೆ. ಮಾಯಾವಾದವು ಪ್ರಮಾಣಾನುಗುಣವಲ್ಲದ ಅರ್ಥಸಂಕೋಚವನ್ನು ಮಾಡುತ್ತದೆ. 'ಅಶಬ್ದ' ಶಬ್ದವನ್ನು ಬಿಟ್ಟು ಬೇರೆ ಶಬ್ದಗಳಿಂದ ಸರ್ವಥಾ ಅಪ್ರತಿಪಾದ್ಯ ಎಂಬ ವಿಷಯದಲ್ಲಿ ಯಾವ ಪ್ರಮಾಣವೂ ಇಲ್ಲ.

**ಯದ್ಯಸ್ಪರ್ಶಶ್ರುತೇರರ್ಥಸ್ಸರ್ವಥಾ ಸ್ಪರ್ಶಶೂನ್ಯತಾ ।**
**ನ ಸ್ಪೃಶೇತ್ ತರ್ಹ್ಯವಿದ್ಯಾಪಿ ಜಿತಂ ತ್ವತ್ಪ್ರತಿವಾದಿಭಿಃ ॥ ೩೮೬ ॥**

**ಅರ್ಥ–** ಅಸ್ಪರ್ಶಶ್ರುತೇಃ='ಅಸ್ಪರ್ಶಂ' ಎಂಬ ಶ್ರುತಿಗೆ, ಸರ್ವಥಾ ಸ್ಪರ್ಶಶೂನ್ಯತಾ= ಸರ್ವಥಾ ಸ್ಪರ್ಶರಾಹಿತ್ಯವೇ, ಯದಿ ಅರ್ಥಃ=ಅರ್ಥವಾದರೆ, ತರ್ಹಿ=ಆ ಪಕ್ಷದಲ್ಲಿ, ಅವಿದ್ಯಾಪಿ= ಅವಿದ್ಯೆಯೂ, ನ ಸ್ಪೃಶೇತ್=ಬ್ರಹ್ಮನನ್ನು ಸ್ಪರ್ಶಿಸಲಾರದು. ಆಗ, ತ್ವತ್ಪ್ರತಿವಾದಿಭಿಃ= ನಿನ್ನ ಪ್ರತಿವಾದಿಗಳಿಂದ, ಜಿತಂ=ಜಯಿಸಲ್ಪಡುತ್ತದೆ.

**ಅನುವಾದ–** ಅಸ್ಪರ್ಶಶ್ರುತಿಗೆ ಸರ್ವಥಾ ಸ್ಪರ್ಶಶೂನ್ಯ ಎಂದು ಅರ್ಥವಾದರೆ, ಆಗ ಬ್ರಹ್ಮನಿಗೆ ಮಾಯಾವಾದಿಗಳು ಹೇಳುವ ಅವಿದ್ಯೆಯ ಸ್ಪರ್ಶವೂ ಇಲ್ಲ ಎಂದಾಗುತ್ತದೆ. ಬ್ರಹ್ಮನಿಗೆ ಅವಿದ್ಯಾಸ್ಪರ್ಶವಿಲ್ಲ ಎಂದು ತತ್ವವಾದಿಗಳ ಸಿದ್ಧಾಂತ. ಮಾಯಾವಾದಿಗಳ ವ್ಯಾಖ್ಯಾನದಿಂದ ತತ್ವವಾದಕ್ಕೇ ಜಯ.

**ಭಾವವಿಲಾಸಿನೀ–** ಅಸ್ಪರ್ಶಶ್ರುತೇರಪಿ ಸರ್ವಥಾಸ್ಪರ್ಶಶೂನ್ಯಾರ್ಥಕತ್ವೇ ದೋಷಮಾಹ– ಯದೀತಿ॥ ತರ್ಹಿ ಅವಿದ್ಯಾ ಮಾಯಾವಾದಿಭಿಃ ಉಚ್ಯಮಾನಾ ನ ಸ್ಪೃಶೇದ್ ಬ್ರಹ್ಮಣಃ ಸ್ಪರ್ಶಂ ನ ಕುರ್ಯಾತ್ । ತ್ವತ್ಪ್ರತಿವಾದಿಭಿಃ ಅವಿದ್ಯಾಸ್ಪರ್ಶದೂರತ್ವವಾದಿಭಿಃ ॥ ೩೮೬ ॥

**ಕಥಂಚಿತ್ ಸ್ಪರ್ಶಿತಾಯಾಂ ತು ಶ್ರುತೇರ್ಮುಖ್ಯಾರ್ಥತಾ ಗತಾ ।**
**ಯಥಾಯೋಗ್ಯಾರ್ಥಕಥನೇ ಜಿತಂ ತ್ವತ್ಪ್ರತಿವಾದಿಭಿಃ ॥ ೩೮೭ ॥**

**ಅರ್ಥ–** ಕಥಂಚಿತ್= ಹೇಗಾದರೂ, ಸ್ಪರ್ಶಿತಾಯಾಂ=ಬ್ರಹ್ಮನು ಅವಿದ್ಯಾ ಸ್ಪರ್ಶ ಉಳ್ಳವನಾದರೆ, ಶ್ರುತೇಃ=ಶ್ರುತಿಗೆ, ಮುಖ್ಯಾರ್ಥತಾ=ಮುಖ್ಯಾರ್ಥವು, ಗತಾ= ಹೋಯಿತು. ಯಥಾಯೋಗ್ಯಾರ್ಥಕಥನೇ= ಪ್ರಮಾಣಕ್ಕೆ ಅನುಗುಣವಾದ ಅರ್ಥವನ್ನು ಹೇಳಿದರೆ, ತ್ವತ್ಪ್ರತಿವಾದಿಭಿಃ=ನಿನ್ನ ಪ್ರತಿವಾದಿಗಳಿಂದ, ಜಿತಂ=ಗೆಲ್ಲಲ್ಪಟ್ಟಿತು.

**ಅನುವಾದ–** ಯಾವುದಾದರೊಂದು ರೀತಿಯ ಸ್ಪರ್ಶವನ್ನು ಬ್ರಹ್ಮನಿಗೆ ಅಂಗೀಕರಿಸಿದರೆ ಅಸ್ಪರ್ಶಶ್ರುತಿಯ ಮುಖ್ಯಾರ್ಥಕ್ಕೆ ಭಂಗ. ಪ್ರಮಾಣಾನುಗುಣವಾದ ಅರ್ಥವನ್ನು ಹೇಳಿದರೆ ನಿನ್ನ ಪ್ರತಿವಾದಿಗಳಿಗೇ ಜಯ.

**ವಿವರಣೆ–** ಪ್ರಶ್ನೆ : ಬ್ರಹ್ಮನಲ್ಲಿ ಪಾರಮಾರ್ಥಿಕ ಅವಿದ್ಯಾಸ್ಪರ್ಶವಿಲ್ಲದಿದ್ದರೂ ವ್ಯಾವಹಾರಿಕ ಸ್ಪರ್ಶವಿದೆ. ಆದ್ದರಿಂದ, ಅವಿದ್ಯಾಸ್ಪರ್ಶವನ್ನು ಹೇಳಬಹುದು?

ಉತ್ತರ : ವ್ಯಾವಹಾರಿಕಸ್ಪರ್ಶವನ್ನು ಒಪ್ಪಿದರೆ, ಮುಖ್ಯಾರ್ಥದ ತ್ಯಾಗವಾಗುತ್ತದೆ. ಅಸ್ಪರ್ಶಶಬ್ದಕ್ಕೆ ಯಾವ ರೀತಿಯಿಂದಲೂ ಸ್ಪರ್ಶವಿಲ್ಲ ಎನ್ನುವುದೇ ಮುಖ್ಯಾರ್ಥ. ಬ್ರಹ್ಮನಲ್ಲಿ

ಯೋಗ್ಯವಾಗುವ ಸ್ಪರ್ಶಾಭಾವವು ಅಸ್ಪರ್ಶಶ್ರುತಿಯ ಅರ್ಥವಾದರೆ, ಆಗ ಪ್ರತಿವಾದಿಗಳು ಜಯಶೀಲರಾಗುತ್ತಾರೆ. ಪ್ರಾಕೃತಸ್ಪರ್ಶರಾಹಿತ್ಯ, ಅವಿದ್ಯಾಸ್ಪರ್ಶರಾಹಿತ್ಯಗಳೇ ಬ್ರಹ್ಮನಲ್ಲಿ ಯೋಗ್ಯವಾದ ಅರ್ಥ.

**ಭಾವವಿಲಾಸಿನೀ–** ಕಥಂಚಿತ್ ಸ್ಪರ್ಶಿತಾಯಾಂ ವ್ಯಾವಹಾರಿಕಸ್ಪರ್ಶೇನ ಸ್ಪರ್ಶಿತಾಯಾಮಿತ್ಯರ್ಥಃ । ಮುಖ್ಯಾರ್ಥತಾ ಸರ್ವಥಾ ಸ್ಪರ್ಶಶೂನ್ಯತ್ವರೂಪಮುಖ್ಯಾರ್ಥತಾ । ಯಥಾಯೋಗ್ಯಾರ್ಥಕಥನೇ ಬ್ರಹ್ಮಣಿ ಯದ್ ಯೋಗ್ಯಂ ತಸ್ಯೈವಾರ್ಥಸ್ಯ ಕಥನೇ ಪೂರ್ವವತ್ ತ್ವತ್ಪ್ರತಿವಾದಿಭಿರ್ಜಿತಮ್ । ಅಪ್ರಾಕೃತೇ ಬ್ರಹ್ಮಣಿ ಪ್ರಾಕೃತಸ್ಪರ್ಶರಾಹಿತ್ಯಸ್ಯಾವಿದ್ಯಾಖ್ಯಪ್ರಕೃತಿಸ್ಪರ್ಶರಾಹಿತ್ಯಸ್ಯ ಯೋಗ್ಯತ್ವಾದಿತಿ ಭಾವಃ ॥ ೩೮೭ ॥

ಯದ್ಯಸ್ತಿ ಮಾಯಿಕೋ ದೇಹಃ ಶ್ರುತೇರ್ಮುಖ್ಯಾರ್ಥತಾ ಗತಾ ।
ಸೋಽಪಿ ನೈವಾಸ್ತಿ ಚೇತ್ ತರ್ಹಿ ಮಾಯಾ ವಂಧ್ಯಾಽಭವತ್ ತವ
॥ ೩೮೮ ॥

**ಅರ್ಥ–** ಮಾಯಿಕಃ=ಮಾಯಾಕಲ್ಪಿತವಾದ ದೇಹಃ=ದೇಹವು, ಯದ್ಯಸ್ತಿ= ಇರುವುದಾದರೆ, ಶ್ರುತೇಃ=ಶ್ರುತಿಯ, ಮುಖ್ಯಾರ್ಥತಾ=ಮುಖ್ಯಾರ್ಥತ್ವವು, ಗತಾ= ಹೋಯಿತು. ಸೋಽಪಿ=ಅದೂ ಕೂಡ, ನೈವಾಸ್ತಿ ಚೇತ್=ಇಲ್ಲವಾದರೆ, ತವ=ನಿನ್ನ ಮಾಯಾ= ಮಾಯೆಯು, ವಂಧ್ಯಾ=ಬಂಜೆಯು, ಅಭವತ್=ಆಯಿತು.

**ಅನುವಾದ–** ಬ್ರಹ್ಮನಿಗೆ ಶರೀರವಿಲ್ಲ ಎಂದು 'ಅಶರೀರಂ' ಎಂಬ ಶ್ರುತಿಯ ಮುಖ್ಯಾರ್ಥ. ಮಾಯಾಕಲ್ಪಿತವಾದ ಶರೀರವನ್ನು ಬ್ರಹ್ಮನಿಗೆ ಅಂಗೀಕರಿಸಿದರೆ, 'ಶರೀರರಾಹಿತ್ಯ' ಎಂಬ ಮುಖ್ಯಾರ್ಥವು ಹೋಗುತ್ತದೆ. ಮಾಯಾಕಲ್ಪಿತವಾದ ಶರೀರವೂ ಇಲ್ಲ ಎಂದರೆ ನಿಮ್ಮ ಮತದ ಮಾಯೆಯು ವ್ಯರ್ಥವಾಗುತ್ತದೆ.

**ಭಾವವಿಲಾಸಿನೀ–** ಅಶರೀರಶ್ರುತೇರಪಿ ಸರ್ವಥಾಶರೀರರಾಹಿತ್ಯಾರ್ಥಕತ್ವೇ ದೋಷಮಾಹ ಯದ್ಯಸ್ತೀತಿ ॥ ಮುಖ್ಯಾರ್ಥತಾ ಸರ್ವಥಾ ಶರೀರರಾಹಿತ್ಯರೂಪಮುಖ್ಯಾರ್ಥತಾ । ಸೋಽಪಿ ಮಾಯಿಕದೇಹೋಽಪಿ । ವಂಧ್ಯಾ ಸ್ವಜನ್ಯಫಲರಹಿತೇತಿ ಯಾವತ್ । ಬ್ರಹ್ಮಣಿ ದೇಹಂ ಸಂಪಾದ್ಯ ಸಂಸಾರಾನುಭಾವಕತ್ವಂ ಹಿ ಮಾಯಾಯಾಃ ಫಲಮ್ । ತದಭಾವೇ ಸಾ ವ್ಯರ್ಥೇತಿ ಭಾವಃ ॥ ೩೮೮ ॥

**ವಿವರಣೆ–** ಬ್ರಹ್ಮನನ್ನು ಶರೀರರಹಿತ ಎಂದು ಹೇಳುವ 'ಅಶರೀರಮ್' ಎಂಬ ಶ್ರುತಿಯಿದೆ. ಬ್ರಹ್ಮನಿಗೆ ಯಾವ ಶರೀರವೂ ಇಲ್ಲ ಎಂದು ಈ ಶ್ರುತಿಯ ಅರ್ಥ? ಅಥವಾ ಮಾಯಾಕಲ್ಪಿತ ಶರೀರವಿದೆ, ಪಾರಮಾರ್ಥಿಕ ಶರೀರವಿಲ್ಲ ಎಂದು ಅರ್ಥ? ಎರಡನೆಯ ಪಕ್ಷವು ನಿಜವಾದರೆ ಶ್ರುತಿಯ ಮುಖ್ಯಾರ್ಥಕ್ಕೆ ಭಂಗ. ಒಂದನೆಯ ಪಕ್ಷವು ನಿಜವಾದರೆ ಮಾಯಾವಾದದ

ಮಾಯೆಯು ವ್ಯರ್ಥವಾಗುತ್ತದೆ. ಬ್ರಹ್ಮನಿಗೆ ದೇಹವನ್ನುಂಟುಮಾಡಿ ಅವನಿಗೆ ಸಂಸಾರಾನುಭವವನ್ನು ಉಂಟು ಮಾಡುವುದು ಅದರ ಕೆಲಸ. ಸರ್ವಥಾ ಶರೀರವಿಲ್ಲ ಎಂಬ ಪಕ್ಷದಲ್ಲಿ ಮಾಯೆಯು ನಿಷ್ಫಲ.

**ಯಥಾಯೋಗ್ಯಾರ್ಥಕಥನೇ ಜಿತಂ ತ್ವತ್ಪ್ರತಿವಾದಿಭಿಃ ॥ ೩೮೯ ॥**

**ಅರ್ಥ–** ಯಥಾಯೋಗ್ಯಾರ್ಥಕಥನೇ=ಬ್ರಹ್ಮನಿಗೆ ಅನುಗುಣವಾದ ಅರ್ಥವನ್ನು ಹೇಳಿದರೆ, ತ್ವತ್ಪ್ರತಿವಾದಿಭಿಃ=ನಿನ್ನ ಪ್ರತಿವಾದಿಗಳಿಂದ, ಜಿತಂ=ಗೆಲ್ಲಲ್ಪಟ್ಟಿತು.

**ಅನುವಾದ– 'ಅಶರೀರಂ...' ಶ್ರುತಿಗೆ ಸಮುಚಿತವಾದ ಅರ್ಥವನ್ನು ಹೇಳಿದರೆ ನಿನ್ನ ಪ್ರತಿವಾದಿಗಳಿಗೇ ಜಯ.**

**ಭಾವವಿಲಾಸಿನೀ– ತದರ್ಥಂ ಯಥಾಯೋಗ್ಯಾರ್ಥಕಥನೇ । ಅಪ್ರಾಕೃತೇ ಬ್ರಹ್ಮಣಿ ಪ್ರಾಕೃತದೇಹರಾಹಿತ್ಯಸ್ಯೈವ ಯೋಗ್ಯತ್ವಾದ್ ಅಶರೀರಶ್ರುತೇಃ ಪ್ರಾಕೃತಶರೀರರಾಹಿತ್ಯ-ರೂಪಾರ್ಥಂ ವದದ್ಭಿಃ ತ್ವತ್ಪ್ರತಿವಾದಿಭಿರ್ಜಿತಮಿತಿ ಸಂಬಂಧಃ ॥ ೩೮೯ ॥**

**ವಿವರಣೆ–** (1) ಬ್ರಹ್ಮನು ಅಪ್ರಾಕೃತ. ಪ್ರಾಕೃತದೇಹರಾಹಿತ್ಯವೇ ಅವನಿಗೆ ಅನುಗುಣವಾದದ್ದು. ಅಶರೀರಶ್ರುತಿಗೆ ಇದೇ ಅರ್ಥವನ್ನು ಹೇಳುವುದಾದರೆ, ಪ್ರಾಕೃತ ಶರೀರರಾಹಿತ್ಯವನ್ನು ಹೇಳುವ ನಿನ್ನ ಪ್ರತಿವಾದಿಗಳು ವಿಜಯಶಾಲಿಗಳಾಗುತ್ತಾರೆ.

(2) ಅಶರೀರಂ ವಾವ ಸಂತಂ ಪ್ರಿಯಾಪ್ರಿಯೇ ನ ಸ್ಪೃಶತಃ- ಛಾಂದೋಗ್ಯ 8.4.1

**ಸರ್ವಥಾ ರೂಪರಾಹಿತ್ಯೇ ರುಗ್ಮವರ್ಣಶ್ರುತಿರ್ಗತಾ ।**
**ಮಾಯಾರೂಪೇಣ ರೂಪಿತ್ವೇ ಶ್ರುತೇರ್ಮುಖ್ಯಾರ್ಥತಾ ಗತಾ ।**
**ಯಥಾಯೋಗ್ಯಾರ್ಥಕಥನೇ ಜಿತಂ ತ್ವತ್ಪ್ರತಿವಾದಿಭಿಃ ॥ ೩೯೦ ॥**

**ಅರ್ಥ–** ಸರ್ವಥಾ=ಎಲ್ಲ ರೀತಿಯಿಂದಲೂ, ರೂಪರಾಹಿತ್ಯೇ=ಬ್ರಹ್ಮನು ರೂಪರಹಿತನಾಗಿದ್ದರೆ, ರುಗ್ಮವರ್ಣಶ್ರುತಿಃ= (ಬಂಗಾರದ ವರ್ಣದವನು ಎನ್ನುವ) ರುಗ್ಮವರ್ಣಶ್ರುತಿಯು, ಗತಾ=ಅರ್ಥಹೀನವಾಯಿತು. ಮಾಯಾರೂಪೇಣ= ಮಾಯಾಕಲ್ಪಿತರೂಪದಿಂದ, ರೂಪಿತ್ವೇ=ರೂಪವುಳ್ಳವನಾದರೆ, ಶ್ರುತೇಃ=ಶ್ರುತಿಯ, ಮುಖ್ಯಾರ್ಥತಾ= ಮುಖ್ಯಾರ್ಥತ್ವವು, ಗತಾ=ನಷ್ಟವಾಯಿತು. ಯಥಾಯೋಗ್ಯಾರ್ಥ-ಕಥನೇ= ಬ್ರಹ್ಮನಲ್ಲಿ ಉಪಪನ್ನವಾಗುವ ಅರ್ಥವನ್ನು ಹೇಳಿದರೆ, ತ್ವತ್ಪ್ರತಿವಾದಿಭಿಃ=ನಿಮ್ಮ ಪ್ರತಿವಾದಿಗಳಿಂದ, ಜಿತಂ= ಗೆಲ್ಲಲ್ಪಟ್ಟಿತು.

**ಅನುವಾದ– ಬ್ರಹ್ಮನಲ್ಲಿ ರೂಪವಿಲ್ಲ ಎಂದು ಹೇಳುವ ಶ್ರುತಿಗಳಿಗೆ ಯಾವುದೇ ರೀತಿಯಿಂದಲೂ ಬ್ರಹ್ಮನಲ್ಲಿ ರೂಪವಿಲ್ಲ ಎಂದು ವ್ಯಾಖ್ಯಾನಿಸಿದರೆ 'ರುಗ್ಮವರ್ಣಮ್'**

ಎನ್ನುವ ಶ್ರುತಿಯು ಅರ್ಥಹೀನವಾಗಿ ಅಪ್ರಮಾಣವಾಗುತ್ತದೆ. ಬ್ರಹ್ಮನಲ್ಲಿ ಮಾಯಾಕಲ್ಪಿತ ರೂಪವಿರುವುದಾದರೆ ಶ್ರುತಿಯ ಮುಖ್ಯಾರ್ಥಕ್ಕೆ ಭಂಗ. ಉಪಪನ್ನವಾಗುವ ಅರ್ಥವನ್ನು ಹೇಳಿದರೆ ನಿನ್ನ ಪ್ರತಿವಾದಿಗಳಿಗೆ ಜಯ.

**ಭಾವವಿಲಾಸಿನೀ–** ಅರೂಪಶ್ರುತೇಃ ಸರ್ವಥಾ ರೂಪರಾಹಿತ್ಯಾರ್ಥಕತ್ವೇ ದೋಷಮಾಹ– **ಸರ್ವಥೇತಿ** ।। ಮಾಯಾರೂಪೇಣ ಮಾಯಾಕಲ್ಪಿತರೂಪೇಣ ಶ್ರುತೇರ್ಮುಖ್ಯಾರ್ಥತಾ ಸರ್ವಥಾ ರೂಪರಾಹಿತ್ಯ ರೂಪಮುಖ್ಯಾರ್ಥತಾ । ಯಥಾಯೋಗ್ಯಾರ್ಥಕಥನೇ ಅಪ್ರಾಕೃತೇ ಬ್ರಹ್ಮಣಿ ಪ್ರಾಕೃತರೂಪರಾಹಿತ್ಯಸ್ಯೈವ ಯೋಗ್ಯತ್ವಾತ್ ತದ್ ವದದ್ಭಿಸ್ತ್ವತ್ಪ್ರತಿವಾದಿಭಿರ್ಜಿತಮಿತಿ ಸಂಬಂಧಃ । ಅತ ಏವ ಆದಿತ್ಯವರ್ಣಂ ತಮಸಃ ಪರಸ್ತಾದ್' ಇತಿ ಶ್ರುತಿಃ ತಮಃಪದೋಕ್ತಪ್ರಕೃತಿಂ ನಿಷಿಧ್ಯ ರೂಪಮಾಹ ।। ೩೯೦ ।।

**ವಿವರಣೆ-** (೧) ಅಸ್ಥೂಲಮನಣು ಅಹ್ರಸ್ವಮದೀರ್ಘಮ್.... ಅಮುಖಮ್ ಅಮಾತ್ರಮ್ ಅನಂತರಮ್ ಅಬಾಹ್ಯಮ್'- ಬೃಹದಾರಣ್ಯಕ ೫.೮೮

ಇದು ಬ್ರಹ್ಮನಲ್ಲಿ ರೂಪವಿಲ್ಲ ಎಂದು ಹೇಳುವ ಶ್ರುತಿ.

'ಯದಾ ಪಶ್ಯಃ ಪಶ್ಯತೇ ರುಗ್ಮವರ್ಣಂ.... ಬ್ರಹ್ಮಯೋನಿಮ್'- ಆಥರ್ವಣ ೫.೩

ಇದು ಬ್ರಹ್ಮನಲ್ಲಿ ರೂಪವಿದೆ ಎಂದು ಹೇಳುವ ಶ್ರುತಿ. ಇದೇ ರುಗ್ಮವರ್ಣಶ್ರುತಿ.

(2) ಎರಡೂ ಶ್ರುತಿಗಳು ಉಪಪನ್ನವಾಗುವಂತೆ, ಬೃಹದಾರಣ್ಯಕಶ್ರುತಿಗೆ ಪ್ರಾಕೃತ ರೂಪರಹಿತ ಎಂದೂ, ಆಥರ್ವಣಶ್ರುತಿಗೆ ಅಪ್ರಾಕೃತರೂಪವುಳ್ಳವನೆಂದೂ ತತ್ವವಾದವು (ಪ್ರತಿವಾದಿ) ವ್ಯಾಖ್ಯಾನಿಸುತ್ತದೆ.

'ಆದಿತ್ಯವರ್ಣಂ ತಮಸಃ ಪರಸ್ತಾತ್' - ಈ ಶ್ರುತಿಯು ಈ ವ್ಯಾಖ್ಯಾನಕ್ಕೆ ಆಧಾರ.

(3) ಮಾಯಾವಾದವೂ ಇದೇ ಮಾರ್ಗವನ್ನು ಅನುಸರಿಸಿದರೆ ತತ್ವವಾದಿಗಳು ಸ್ವಾಗತಿಸುತ್ತಾರೆ. ಸರ್ವಥಾ ರೂಪವಿಲ್ಲ, ಕಲ್ಪಿತರೂಪವಿದೆ - ಹೀಗೆ ವ್ಯಾಖ್ಯಾನಿಸಿದರೆ ಶ್ರುತಿಗಳು ಅಪ್ರಮಾಣವಾಗುವ ಪ್ರಸಂಗವು ಅನಿವಾರ್ಯ.

ಮಾಯಿಕೋಽರ್ಥೋ ನಿಷೇಧಸ್ಯ ವಾರಕೋ ಯದಿ ನೇಷ್ಯತೇ ।
ಘಟೇ ಸತ್ಯಪಿ ಕಿಂ ಭೂಮಿರಘಟೇತಿ ನ ಕಥ್ಯತೇ ।। ೩೯೧ ।।

**ಅರ್ಥ–** ಮಾಯಿಕಃ=ಮಾಯಾಕಲ್ಪಿತವಾದ, ಅರ್ಥಃ=ವಸ್ತುವು, ನಿಷೇಧಸ್ಯ='ಅಶರೀರಂ' ಎಂಬ ಶ್ರುತಿಯು ಮಾಡುವ ಶರೀರನಿಷೇಧಕ್ಕೆ, ವಾರಕಃ= ತಡೆ ಎಂದು, ಯದಿ ನೇಷ್ಯತೇ=ಅಂಗೀಕರಿಸದಿದ್ದರೆ, ಘಟೇ= (ಭೂತಲದಲ್ಲಿ) ಮಾಯಾಕಲ್ಪಿತವಾದ ಘಟವು, ಸತ್ಯಪಿ=ಇದ್ದರೂ, ಭೂಮಿಃ=ಭೂತಲವು, ಅಘಟಾ ಇತಿ=ಘಟರಹಿತವೆಂದು, ಕಿಂ ನ ಕಥ್ಯತೇ= ಏಕೆ ಹೇಳಲ್ಪಡುವುದಿಲ್ಲ.

**ಅನುವಾದ–** ಮಾಯಾಕಲ್ಪಿತವಾದ ಪದಾರ್ಥವು (ಶರೀರವು) 'ಅಶರೀರಂ' ಎಂಬ ಶ್ರುತಿಯು ಮಾಡುವ ಶರೀರನಿಷೇಧಕ್ಕೆ ವಿರೋಧಿ ಅಲ್ಲವಾದರೆ ನೆಲದ ಮೇಲೆ ಮಾಯಾಕಲ್ಪಿತವಾದ ಘಟವು ಇರುವಾಗ ನೆಲದ ಮೇಲೆ ಘಟವು ಇಲ್ಲ ಎಂದು ಹೇಳುವುದು ತಪ್ಪಾಗಲಾರದು.

**ಭಾವವಿಲಾಸಿನೀ–** ಯದಿ ಮಾಯಿಕೋಽರ್ಥಃ ಮಾಯಾಕಲ್ಪಿತೋಽರ್ಥೋ ದೇಹಾದಿಃ ನಿಷೇಧಸ್ಯ ಅಶರೀರಮಿತಿ ನಿಷೇಧಸ್ಯ ವಾರಕಃ ನಿವಾರಕೋ ನ । ಮಾಯಿಕಾರ್ಥೇ ಸತ್ಯಪಿ ಸಾಮಾನ್ಯನಿಷೇಧಃ ಕರ್ತುಂ ಶಕ್ಯತ ಇತಿ ಯಾವತ್ । ದೂಷಣಮಾಹ– **ಘಟೇ ಸತ್ಯಪೀತಿ** ॥ ತರ್ಹಿ ಮಾಯಿಕಘಟೇ ಸತ್ಯಪಿ ಭೂಮಿರಘಟೇತಿ ಕಿಂ ನ ಕಥ್ಯತೇ । ಮಾಯಿಕಸ್ಯ ಸಾಮಾನ್ಯ-ನಿಷೇಧವಿರೋಧಿತ್ವಾಭಾವೇ ಸತ್ಯೇವ ಘಟೇ ಭೂಮಿರಘಟೇತಿ ಕಥನೀಯೈವ । ನಚ ತಥಾ ಕಥ್ಯತೇ । ಅತೋ ಮಾಯಿಕೋಽಪಿ ಪದಾರ್ಥಃ ಸಾಮಾನ್ಯನಿಷೇಧವಿರೋಧೀತಿ ಭಾವಃ॥೩೯೧॥

**ವಿವರಣೆ– ಪ್ರಶ್ನೆ :** ಭೂತಲದಲ್ಲಿ ವಾಸ್ತವಿಕ ಘಟವು ಇದ್ದಾಗ, ಭೂತಲವನ್ನು ಘಟರಹಿತ ಎನ್ನಲು ಬರುವುದಿಲ್ಲ. ಆದರೆ, ಮಾಯಾಕಲ್ಪಿತವಾದ ಘಟವು ನಿಷೇಧಕ್ಕೆ ಪ್ರತಿಬಂಧಕವಲ್ಲ. ಆದ್ದರಿಂದ, ಮಾಯಾಕಲ್ಪಿತವಾದ ರೂಪ, ಸ್ಪರ್ಶ, ಶರೀರಗಳು ಇದ್ದರೂ 'ಅರೂಪಮಸ್ಪರ್ಶಂ' ಎಂಬ ನಿಷೇಧವು ಸಮಂಜಸವೇ ಆಗಿದೆ; ಶ್ರುತಿಯ ಮುಖ್ಯಾರ್ಥವು ಹೋಗುವುದಿಲ್ಲ?

**ಉತ್ತರ:** ಹೀಗಾದರೆ ಮಾಯಾಕಲ್ಪಿತ ಘಟವು ಇದ್ದಾಗ ಭೂತಲವನ್ನು ಘಟರಹಿತ ಎಂದು ಹೇಳಬಹುದು. ಆದರೆ ಹಾಗೆ ವ್ಯವಹಾರವಿಲ್ಲ, ಆದ್ದರಿಂದಲೇ ಮಾಯಿಕವಾದ ಪದಾರ್ಥವು ಸಾಮಾನ್ಯನಿಷೇಧವಿರೋಧಿ ಎಂದು ತಿಳಿಯುತ್ತದೆ. ಆದ್ದರಿಂದ, ಈಶ್ವರನಿಗೆ ಮಾಯಾಕಲ್ಪಿತವಾದ ರೂಪ, ಸ್ಪರ್ಶ, ಶರೀರಗಳನ್ನು ಅಂಗೀಕರಿಸಿದರೆ, 'ಅಸ್ಪರ್ಶಮರೂಪಂ' 'ಅಶರೀರಂ' ಎಂದು ಸ್ಪರ್ಶಾದಿರಾಹಿತ್ಯವನ್ನು ಹೇಳುವುದು ಯುಕ್ತವಾಗುವುದಿಲ್ಲ.

**ಕಿಂತು ಪ್ರಮಾಣಸಿದ್ಧೋಽರ್ಥಃ ಸ್ವತಸ್ತಂ ಚ್ಯಾವಯೇದ್ ಬಲೀ ।**
**ಕನ್ಯಕಾಽನುದರೇತ್ಯಾದೌ ಯಥಾ ವ್ಯವಹೃತೌ ಸತಾಮ್ ॥ ೩೯೨ ॥**

**ಅರ್ಥ–** ಕಿಂತು=ಆದರೆ, ಪ್ರಮಾಣಸಿದ್ಧಃ=ಪ್ರಮಾಣಗಳಿಂದ ಸಿದ್ಧವಾದ, ಬಲೀ= ಬಲಶಾಲಿಯಾದ, ಅರ್ಥಃ= ಪದಾರ್ಥವು, ಸ್ವತಃ=ತನ್ನಿಂದ, ತಂ=ಆ ಸಾಮಾನ್ಯ ನಿಷೇಧವನ್ನು, ಚ್ಯಾವಯೇತ್=ಚ್ಯುತಿಗೊಳಿಸುವುದು. ಅನುದರಾ ಕನ್ಯಕೇತ್ಯಾದೌ= 'ಅನುದರಾ ಕನ್ಯಕಾ' ಮುಂತಾದ, ಸತಾಂ=ಸಜ್ಜನರ, ವ್ಯವಹೃತೌ ಯಥಾ=ವ್ಯವಹಾರದಲ್ಲಿ ಹೇಗೆ ಹಾಗೆ

**ಅನುವಾದ–** ಆದರೆ, ಪ್ರಮಾಣಸಿದ್ಧವಾದ ಪದಾರ್ಥವು, ಬಲಶಾಲಿಯಾದ್ದರಿಂದ, ಅದು ಸಾಮಾನ್ಯ ನಿಷೇಧವು ತನಗೆ ಅನ್ವಯಿಸದಂತೆ ಮಾಡುತ್ತದೆ. 'ಅನುದರಾ ಕನ್ಯಕಾ' ಎಂದು ತಿಳಿದವರು ಹೇಳುತ್ತಾರೆ. ಕನ್ಯೆಯ ಉದರವು ಪ್ರತ್ಯಕ್ಷಸಿದ್ಧ.

**ಆದ್ದರಿಂದ ಈ ನಿಷೇಧ ವಚನವು ಸ್ಥೂಲ ಉದರವನ್ನು ನಿಷೇಧಿಸುತ್ತದೆ; ಉದರವನ್ನೇ ನಿಷೇಧಿಸುವುದಿಲ್ಲ.**

**ವಿವರಣೆ–** ಪ್ರಶ್ನೆ : ಸಾಮಾನ್ಯ ನಿಷೇಧವನ್ನು ಮಾಡುವ ವಾಕ್ಯಕ್ಕೆ ಅರ್ಥಸಂಕೋಚವನ್ನು ಮಾಡಲು ನಿಯಾಮಕ ಯಾವುದು?

ಉತ್ತರ: ಸಾಮಾನ್ಯನಿಷೇಧಕ್ಕೆ ವಿಷಯವಾದ ಪದಾರ್ಥಗಳ ಪ್ರಮಾಣಸಿದ್ಧತ್ವ. 'ಅನುದರಾ ಕನ್ಯಕಾ' ಎಂಬ ವಾಕ್ಯವು ಕನ್ಯೆಯ ಸೌಂದರ್ಯವನ್ನು ವರ್ಣಿಸುವ ಪ್ರಸಂಗದಲ್ಲಿ ಪ್ರಯೋಗಿಸಲ್ಪಡುತ್ತದೆ. ಅವಳಲ್ಲಿ ತೆಳುವಾದ ಉದರವು ಪ್ರಮಾಣಸಿದ್ಧ. ಆದ್ದರಿಂದ, ನಿಷೇಧವು ತೆಳು ಉದರಕ್ಕೆ ಅನ್ವಯಿಸುವುದಿಲ್ಲ. ಸ್ಥೂಲ ಉದರದ ನಿಷೇಧವು ಈ ವಾಕ್ಯದ ಅಭಿಪ್ರಾಯ. 'ಅಶಬ್ದಮಸ್ಪರ್ಶಮರೂಪಂ...' 'ಅಶರೀರಂ' ಎಂದು ಶ್ರುತಿಯು ಮಾಡುವ ಸಾಮಾನ್ಯನಿಷೇಧವು ಪರಮಾತ್ಮನಲ್ಲಿ ಪ್ರಮಾಣಸಿದ್ಧವಾದ ನಾರಾಯಣಾದಿಶಬ್ದಗಳು, ಲಕ್ಷ್ಮೀಕರಸ್ಪರ್ಶ, ರುಗ್ಮವರ್ಣಾದಿಗಳು, ಅಲೌಕಿಕ ದೇಹ - ಇವುಗಳನ್ನು ಬಿಟ್ಟು ಕೇವಲ ದುಷ್ಟ ಶಬ್ದಾದಿಗಳ ನಿಷೇಧವನ್ನು ಮಾತ್ರ ಮಾಡುತ್ತದೆ. 'ಸಹಸ್ರಶೀರ್ಷಾ ಪುರುಷಃ' ಇತ್ಯಾದಿ ಶ್ರುತಿಯು ಪರಮಾತ್ಮನ ಅಲೌಕಿಕದೇಹವನ್ನು ವರ್ಣಿಸಿದೆ.

**ಭಾವವಿಲಾಸಿನೀ–** ಕಸ್ತರ್ಹಿ ಸಾಮಾನ್ಯನಿಷೇಧಸ್ಯ ಸಂಕೋಚಕ ಇತ್ಯತ ಆಹ– **ಕಿಂತ್ವಿತಿ** ॥ ಪ್ರಮಾಣಸಿದ್ಧೋ ಯೋಽರ್ಥೋ ಘಟಾದಿಃ ಸಃ ಬಲೀ ಪ್ರಾಮಾಣಿಕತ್ವೇನ ಬಲವಾನ್ ಸ್ವತಃ ಸ್ವಸ್ಮಾತ್ ತಂ ಸಾಮಾನ್ಯನಿಷೇಧಂ ಚ್ಯಾವಯೇದ್ ಅನ್ಯತ್ರ ನಯೇತ್ । ತಸ್ಯೋದಾಹರಣಮಾಹ– **ಕನ್ಯಕೇತಿ** ॥ ಅನುದರಾ ಕನ್ಯಕೇತ್ಯಾದೌ ಸತಾಂ ವ್ಯವಹೃತೌ ಯಥಾ ತಥಾಽತ್ರಾಪೀತಿ ಸಂಬಂಧಃ । ಅನುದರಾ ಕನ್ಯಕೇತ್ಯತ್ರ ಪ್ರಮಾಣಸಿದ್ಧಸೂಕ್ಷ್ಮೋದರಂ ವಿಹಾಯಾನುದರೇತಿ ಪದಂ ತಸ್ಯಾಮ-ಪ್ರಾಮಾಣಿಕಂ ಸ್ಥೂಲೋದರಮೇವ ನಿಷೇಧತಿ । ತಥಾ ಅಶಬ್ದಾದಿಶ್ರೌತಸಾಮಾನ್ಯ-ನಿಷೇಧೋಽಪಿ ಪ್ರಾಮಾಣಿಕನಾರಾಯಣಾದಿಶಬ್ದಂ ಲಕ್ಷ್ಮೀಕರಾದಿಸ್ಪರ್ಶಂ ರುಗ್ಮವರ್ಣಾದಿ-ರೂಪಂ ಸಹಸ್ರಶೀರ್ಷೇತ್ಯಾದಿ ಶ್ರುತ್ಯುಕ್ತಾಲೌಕಿಕದೇಹಂ ಚ ವಿಹಾಯ ದುಶ್ಶಬ್ದಾದೀನೇವ ನಿಷೇಧತೀತಿ ಭಾವಃ ॥ ೩೯೨ ॥

**ಆದಿತ್ಯವರ್ಣಂ ತಮಸಃ ಪರಸ್ತಾದಿತಿ ವೈದಿಕೀ ।**
**ವಾಗವಿದ್ಯಾನಿವೃತ್ತೌ ಚ ರೂಪಮಾಹ ಪರಾತ್ಮನಃ ॥ ೩೯೩ ॥**

**ಅರ್ಥ–** ಆದಿತ್ಯವರ್ಣಂ ತಮಸಃ ಪರಸ್ತಾತ್='ಆದಿತ್ಯವರ್ಣಂ ತಮಸಃ ಪರಸ್ತಾತ್' ಎಂಬ, ವೈದಿಕೀ ವಾಕ್=ವೈದಿಕ ವಾಣಿಯು, ಅವಿದ್ಯಾನಿವೃತ್ತೌ ಚ= ಅವಿದ್ಯೆಯು ಇಲ್ಲದ ಸ್ಥಿತಿಯಲ್ಲೇ, ಪರಾತ್ಮನಃ=ಪರಮಾತ್ಮನಿಗೆ, ರೂಪಂ=ರೂಪವನ್ನು, ಆಹ=ಹೇಳಿದೆ.

**ಅನುವಾದ–** 'ಆದಿತ್ಯವರ್ಣಂ ತಮಸಃ ಪರಸ್ತಾತ್...' - ಈ ಶ್ರುತಿಯು ಅವಿದ್ಯೆಯಿಲ್ಲದ ಪರಮಾತ್ಮನಿಗೆ ರೂಪವನ್ನು ಹೇಳಿದೆ.

**ಭಾವವಿಲಾಸಿನೀ–** ಅಧುನಾ ಶ್ರುತ್ಯಾ ಶ್ರೌತಯುಕ್ತಿಭಿಶ್ಚ ಭಗವತಿ ಅಪ್ರಾಕೃತರೂಪಾದಿಕಂ ಸಾಧಯತಿ– **ಆದಿತ್ಯವರ್ಣಮಿತಿ** ॥ ತಮಸಃ ಪರಸ್ತಾದ್' ಇತಿ ಶ್ರುತೌ ಕಥಿತತ್ವಾದವಿದ್ಯಾನಿವೃತ್ತೌ ಚೇತ್ಯುಕ್ತಮ್ । ಅತಸ್ತನ್ನ ಪ್ರಾಕೃತಮ್ । ನಾಪ್ಯಪಾರಮಾರ್ಥಿಕಮಿತಿ ಸಿದ್ಧಮ್ ॥ ೩೯ ॥

**ವಿವರಣೆ–** 'ಆದಿತ್ಯವರ್ಣಂ ತಮಸಃ ಪರಸ್ತಾತ್' (ಯಜುರ್ವೇದೀಯ ಪುರುಷಸೂಕ್ತ) ಈ ಶ್ರುತಿಯು ಅವಿದ್ಯಾದೂರನಾದ ಪರಮಾತ್ಮನಲ್ಲಿ ಸೂರ್ಯನಂತೆ ಪ್ರಕಾಶಮಾನವಾದ ಬಣ್ಣವನ್ನು ಬಣ್ಣಿಸುತ್ತಿದೆ. 'ತಮಸಃ ಪರಸ್ತಾತ್' ಪ್ರಕೃತಿದೂರ. ಆದ್ದರಿಂದ, ಅದು ಅಪ್ರಾಕೃತರೂಪ. ಅಪ್ರಾಕೃತರೂಪವು ಅಪಾರಮಾರ್ಥಿಕವೂ ಅಲ್ಲ.

**ರೂಪಂ ಚ ಸ್ಪರ್ಶತೋ ವ್ಯಾಪ್ತಂ ತೌ ಸಾಕಾರಾಶ್ರಿತೌ ಸದಾ ।**
**ತತಶ್ಚೈತನ್ಯಮಾತ್ರೇಽಪಿ ಶ್ರುತಾ ಸಾಕಾರತಾ ಮತಾ ॥ ೩೪ ॥**

**ಅರ್ಥ–** ರೂಪಂ ಚ=ರೂಪವಾದರೂ, ಸ್ಪರ್ಶತಃ=ಸ್ಪರ್ಶದಿಂದ, ವ್ಯಾಪ್ತಂ=ವ್ಯಾಪ್ತವಾಗಿದೆ. ತೌ=ರೂಪಸ್ಪರ್ಶಗಳೆರಡೂ, ಸದಾ=ಯಾವಾಗಲೂ, ಸಾಕಾರಾಶ್ರಿತೌ=ಆಕಾರವುಳ್ಳ ವಸ್ತುವನ್ನು ಆಶ್ರಯಿಸಿವೆ. ತತಃ=ಆದ್ದರಿಂದ, ಚೈತನ್ಯಮಾತ್ರೇಽಪಿ= ಕೇವಲ ಚೇತನನಿಗೂ, ಶ್ರುತಾ=ಶ್ರುತಿಸಿದ್ಧವಾದ, ಸಾಕಾರತಾ=ಆಕಾರಯುಕ್ತತ್ವವು, ಮತಾ=ಯುಕ್ತಿಸಿದ್ಧವಾಗಿದೆ.

**ಅನುವಾದ–** ರೂಪವಿದ್ದಲ್ಲಿ ಸ್ಪರ್ಶವು ಇರುತ್ತದೆ. ಇವೆರಡೂ ಆಕಾರವಿರುವ ಪದಾರ್ಥಗಳಲ್ಲೇ ಇರುತ್ತವೆ. ಆದ್ದರಿಂದ= ರೂಪ ಮತ್ತು ಸ್ಪರ್ಶಗಳಿರುವುದರಿಂದ ಕೇವಲ ಚೇತನನಿಗೂ ಆಕಾರವೂ ಯುಕ್ತಿಸಿದ್ಧ.

**ಭಾವವಿಲಾಸಿನೀ–** ಯದ್ ರೂಪವತ್, ತತ್ ಸ್ಪರ್ಶವದ್' ಇತಿ ವ್ಯಾಪ್ತೇಃ ರೂಪಂ ಚ ಸ್ಪರ್ಶತೋ ವ್ಯಾಪ್ತಮ್' ಇತ್ಯುಕ್ತಮ್ । ತೌ ರೂಪಸ್ಪರ್ಶೌ । ಸದಾ ಸಾಕಾರಾಶ್ರಿತೌ । ಆಕಾರವತ್ಸು ಸಾವಯವ-ವರ್ತುಲಾದ್ಯಾಕಾರವತ್ಸು ಪೃಥಿವ್ಯಪ್ತೇಜೋವಾಯುಷ್ವೇವ ವಿದ್ಯಮಾನತ್ವೇನ ತಯೋಸ್ಸಾಕಾರ-ಪದಾರ್ಥಾಶ್ರಿತತ್ವನಿಯಮಾದಿತ್ಯರ್ಥಃ । ಅಸ್ತ್ವೇವಮ್, ಕಿಮತಃ? ಇತ್ಯತ ಆಹ– **ತತ ಇತಿ** ॥ ಶ್ರುತಾ ವಿಶ್ವತಶ್ಚಕ್ಷುಃ' ಇತ್ಯಾದಿನಾ ಚೈತನ್ಯಮಾತ್ರೇಽಪಿ ಶ್ರುತಾ ಸಾಕಾರತಾ ಮತಾ ಯುಕ್ತೇರಪಿ ಸಮ್ಮತಾ । ಯುಕ್ತ್ಯಾಪಿ ತಮಸಃ ಪರಸ್ತಾದ್' ಇತ್ಯುಕ್ತಾಪ್ರಾಕೃತಪ್ರದೇಶೇಽಪಿ ರೂಪಸ್ಪರ್ಶಾ-ಕಾರಾಣಾಂ ಸಾಧಿತತ್ವಾತ್ । ಶ್ರುತೇತ್ಯನೇನ ಶ್ರುತಿಸಮ್ಮತ್ಯಾ ಭಗವತಿ ಯುಕ್ತಿಸಿದ್ಧೋಽಸೌ ಚಾಕಾರಃ ಹಸ್ತಪಾದಾದ್ಯಾಕಾರ ಇತಿ ಸೂಚಿತಮ್ । ನನು ಸಾಕಾರತ್ವೇ ಕಥಂ ನಾನಿತ್ಯತ್ವಮಿತಿ ಚೇತ್ ಪರಮಾಣೋಃ ಪಾರಿಮಾಂಡಲ್ಯವದ್ ಹಸ್ತಾದ್ಯಾಕಾರಸ್ಯಾಪಿ ನಿತ್ಯತ್ವಾದಿತಿ ಬ್ರೂಮಃ । ಉಭಯೋರಪಿ ನಿತ್ಯತ್ವೇ ಕಥಮವಯವಾವಯವಿಭಾವ ಇತಿ ಚೇತ್, ನ । ಆಕಾಶತತ್ಪರಿ-ಮಾಣಯೋರ್ಗುಣ ಗುಣಿಭಾವವದಿತಿ ಸಂತೋಷ್ಟವ್ಯಮ್ ॥ ೩೪ ॥

**ವಿವರಣೆ–** ರೂಪವಿರುವಲ್ಲಿ ಸ್ಪರ್ಶವು ಇರುತ್ತದೆ. ರೂಪಸ್ಪರ್ಶಗಳೆರಡೂ ಸಾಕಾರ ಪದಾರ್ಥವನ್ನು ಆಶ್ರಯಿಸಿದೆ. ಅವಯವವುಳ್ಳ ವರ್ತುಲಾದಿಆಕಾರವುಳ್ಳ ಪೃಥಿವಿ, ಜಲ, ತೇಜಸ್ಸು, ವಾಯು- ಈ ವಸ್ತುಗಳಲ್ಲಿ ರೂಪಸ್ಪರ್ಶಗಳಿವೆ. 'ವಿಶ್ವತಶ್ಚಕ್ಷುರುತ ವಿಶ್ವತೋ ಮುಖಃ' - ಈ ಶ್ರುತಿಯು ಚೇತನಕ್ಕೆ ಆಕಾರವನ್ನು ಹೇಳಿದೆ. ಅದು ಯುಕ್ತಿಯುಕ್ತವೂ ಆಗಿದೆ. 'ತಮಸಃ ಪರಸ್ತಾತ್' ಈ ಶ್ರುತಿಯು ಯಾವ ಪ್ರದೇಶವನ್ನು ಅಪ್ರಾಕೃತ ಎಂದು ವರ್ಣಿಸಿದೆಯೋ, ಅಲ್ಲಿಯೂ ರೂಪಸ್ಪರ್ಶಆಕಾರಗಳು ಯುಕ್ತಿಸಿದ್ಧವಾಗಿವೆ. ಸಾಕಾರವಾದ ಘಟಪಟಾದಿಗಳು ಅನಿತ್ಯವಾಗಿವೆ. ಹಾಗೆ, ಆತ್ಮನೂ ಅನಿತ್ಯನಾಗಬೇಕಾದೀತು? ಇಲ್ಲ. ಪರಮಾಣುವಿನ ಪರಿಮಾಣದಂತೆ ಆಕಾರವೂ ನಿತ್ಯ. ಎರಡೂ ನಿತ್ಯವಾದರೆ ಅವಯವ-ಅವಯವಿಭಾವ ಯುಕ್ತವಾಗುವುದಿಲ್ಲ? ಇಲ್ಲ. ಆಕಾಶ ಮತ್ತು ಅದರ ಪರಿಮಾಣಗಳು ನಿತ್ಯವಾದರೂ ಅವುಗಳಿಗೆ ಗುಣ-ಗುಣಿಭಾವವಿದೆ. ಅದರಂತೆ, ನಿತ್ಯವಾದರೂ ಅವಯವ-ಅವಯವಿಭಾವವು ಯುಕ್ತವೇ ಆಗಿದೆ.

**ಅತಸ್ಸ ವಿಶ್ವತಶ್ಚಕ್ಷುರ್ವಿಶ್ವತೋಮುಖ ಏವ ಚ ।**
**ವಿಶ್ವತೋಬಾಹುರೀಶೋಽಸೌ ವಿಶ್ವತಃಪಾತ್ ಪರಃ ಪ್ರಭುಃ ॥ ೩೯೫ ॥**

**ಅರ್ಥ–** ಅತಃ= ಆದ್ದರಿಂದ (ಆಕಾರವು ಯುಕ್ತಿ ಸಿದ್ಧವಾದ್ದರಿಂದ), ಸಃ= ಆ ಪರಮಾತ್ಮನು, ವಿಶ್ವತಃ ಚಕ್ಷುಃ= ಸುತ್ತಲೂ ಕಣ್ಣು ಇರುವವನು, ಚ= ಮತ್ತು, ವಿಶ್ವತೋಮುಖ ಏವ= ಸುತ್ತಲೂ ಮುಖವಿರುವವನು. ಈಶಃ ಅಸೌ= ಈಶನಾದ ಇವನು, ವಿಶ್ವತೋ ಬಾಹುಃ= ಸುತ್ತಲೂ ಬಾಹುವುಳ್ಳವನು. ಪರಃ= ಸರ್ವೋತ್ತಮನಾದ, ಅಸೌ ಪ್ರಭುಃ= ಈ ಪ್ರಭುವು, ವಿಶ್ವತಃಪಾತ್= ಸುತ್ತಲೂ ಪಾದವುಳ್ಳವನು.

**ಅನುವಾದ-** ಪರಮಾತ್ಮನಿಗೆ ಆಕಾರವಿರುವುದರಿಂದಲೇ ಅವನು 'ವಿಶ್ವತಶ್ಚಕ್ಷುಃ' 'ವಿಶ್ವತೋಮುಖಃ' 'ವಿಶ್ವತೋಬಾಹುಃ', ವಿಶ್ವತಃಪಾತ್' ಎಂದು ವೇದದ ಉಕ್ತಿಗಳು ಉಪಪನ್ನವಾಗುತ್ತವೆ.

**ಭಾವವಿಲಾಸಿನೀ-** ಅತಃ ಶ್ರುತಿಯುಕ್ತಿಮೂಲತ್ವಾತ್ । 'ವಿಶ್ವತಶ್ಚಕ್ಷುರುತ ವಿಶ್ವತೋ ಮುಖೋ ವಿಶ್ವತೋ ಬಾಹುರುತ ವಿಶ್ವತಸ್ಪಾದ್' ಇತಿ ಪ್ರಾಕ್ ಸೂಚಿತಶ್ರುತೇಃ ಪ್ರತೀಕಗ್ರಹಣಾಯ ವಿಶ್ವತಶ್ಚಕ್ಷುರಿತ್ಯಾದಿ ವಿಶೇಷಣಮುಕ್ತಮ್ ॥ ೩೯೫ ॥

**ಮಾಯಾಭಾವೇಽಪಿ ಯೋ ದೇಹೋ ಜ್ಞಾನಾನಂದಾತ್ಮಕೋ ಹ್ಯಸೌ ।**
**ಸುಖರೂಪಂ ಹಿ ತದ್‌ಬ್ರಹ್ಮ ಜ್ಞಾನರೂಪಂ ನ ಮೃನ್ಮಯಮ್॥ ೩೯೬ ॥**

**ಅರ್ಥ–** ಯಃ=ಯಾವ, ದೇಹಃ=ದೇಹವು, ಮಾಯಾಭಾವೇಽಪಿ=ಮಾಯಾ ಸಂಬಂಧವಿಲ್ಲದಿದ್ದರೂ ಇದೆಯೋ, ಅಸೌ= ಅದು, ಜ್ಞಾನಾನಂದಾತ್ಮಕಃ= ಜ್ಞಾನಾನಂದ

ಸ್ವರೂಪ, ತದ್‌ಬ್ರಹ್ಮ=ಆ ಬ್ರಹ್ಮನು, ಜ್ಞಾನರೂಪಂ=ಜ್ಞಾನಸ್ವರೂಪನೇ, ಸುಖರೂಪಂ ಹಿ= ಸುಖಸ್ವರೂಪನೋ, ನ ಮೃನ್ಮಯಮ್= ಭೌತಿಕ ದೇಹವುಳ್ಳವನಲ್ಲ? ಹಿ= ಇದು ಪ್ರಮಾಣಸಿದ್ಧ.

**ಅನುವಾದ–** ಮಾಯಾಸಂಬಂಧವಿಲ್ಲದೆಯೂ ಯಾವ ದೇಹವು ಇದೆಯೋ ಅದು ಜ್ಞಾನಾತ್ಮಕ ಮತ್ತು ಆನಂದಾತ್ಮಕ. ಆ ಬ್ರಹ್ಮನು ಸುಖರೂಪ ಮತ್ತು ಜ್ಞಾನರೂಪ. ಪ್ರಾಕೃತ ಅಲ್ಲ. ಇದು ಪ್ರಮಾಣಪ್ರಸಿದ್ಧ.

**ಭಾವವಿಲಾಸಿನೀ–** ಭಗವತಃ ಅಮಾಯಿಕದೇಹವತ್ತ್ವೇ ಪ್ರಾಕ್ ಸೂಚಿತಾಂ ಯುಕ್ತಿಂ ವಿಶದಯನ್ ಯುಕ್ತ್ಯಂತರಮಾಹ– **ಮಾಯಾಭಾವೇಽಪೀತಿ** ॥ 'ತಮಸಃ ಪರಸ್ತಾದ್' ಇತಿ ಶ್ರುತ್ಯಾ ದೇಹಸ್ಯಾಪಿ ಮಾಯಾರಹಿತಸ್ಥಲೇ ಸಾಧಿತತ್ವಾತ್ ಮಾಯಾಭಾವೇಽಪೀತ್ಯುಕ್ತಮ್ । ತದ್ ಬ್ರಹ್ಮ ಸುಖರೂಪಂ ಹಿ 'ಆನಂದೋ ಬ್ರಹ್ಮ ಕಂ ಬ್ರಹ್ಮ ಖಂ ಬ್ರಹ್ಮ', 'ವಿಜ್ಞಾನಮಾನಂದಂ ಬ್ರಹ್ಮ', 'ಜ್ಞಾನಿನೋ ಜ್ಞಾನಯಜ್ಞೇನ ಯಜಂತಿ ಜ್ಞಾನವಿಗ್ರಹಮ್' ಇತ್ಯಾದಿಶ್ರುತಿಸ್ಮೃತಿಪ್ರಸಿದ್ಧಿಂ ಹಿಶಬ್ದದ್ವಯೇನ ಸೂಚಯತಿ । ಮೃನ್ಮಯಂ ನಹೀತ್ಯತ್ರ ಮೃನ್ಮಯಪದೇನ ಪಾಂಚಭೌತಿಕ-ದೇಹವತ್ತ್ವೇ ಘಟಾದಿವತ್ ಮೃನ್ಮಯತ್ವಸ್ಯಾಪ್ಯಾಪತ್ತ್ಯಾಽತಿಹೀನತಾ ಸ್ಯಾದಿತಿ ವಿಪಕ್ಷೇ ಬಾಧಕಂ ಚ ಸೂಚಯತಿ ॥ ೩೯೬ ॥

**ವಿವರಣೆ–** ಪರಮಾತ್ಮನಿಗೆ ಮಾಯಾಕಲ್ಪಿತದೇಹವಿಲ್ಲ ಎಂಬ ವಿಷಯದಲ್ಲಿ ಹಿಂದೆ ಹೇಳಿದ ಯುಕ್ತಿಯನ್ನೇ ಸ್ಪಷ್ಟ ಪಡಿಸುತ್ತಿದ್ದಾರೆ. 'ತಮಸಃ ಪರಸ್ತಾತ್' ಶ್ರುತಿಯು ಮಾಯಾರಹಿತ ಸ್ಥಳದಲ್ಲಿಯೂ ಶ್ರೀಹರಿಗೆ ದೇಹವಿದೆ ಎಂದು ಹೇಳಿದೆ. ಅದನ್ನೇ ವಾದಿರಾಜರು 'ಮಾಯಾಭಾವೇಽಪಿ' ಎಂದಿದ್ದಾರೆ. ಆ ಬ್ರಹ್ಮನು ಸುಖಸ್ವರೂಪನೆಂದು 'ಆನಂದೋ ಬ್ರಹ್ಮ ಕಂ ಬ್ರಹ್ಮ ಖಂ ಬ್ರಹ್ಮ' 'ವಿಜ್ಞಾನಮಾನಂದಂ ಬ್ರಹ್ಮ' ಇತ್ಯಾದಿಶ್ರುತಿಗಳು ಹೇಳುತ್ತಿವೆ. ಸ್ಮೃತಿಗಳೂ ಅವನನ್ನು ಜ್ಞಾನಸ್ವರೂಪನೆಂದು ಸ್ತುತಿಸುತ್ತಿವೆ.

ಬ್ರಹ್ಮನಿಗೆ ಪಾಂಚಭೌತಿಕದೇಹವಿರುವುದಾದರೆ ಘಟಾದಿಗಳಂತೆ ಮಣ್ಣಿನ ದೇಹ ಇರಬೇಕಾದೀತು. ಸರ್ವೋತ್ತಮನಾದ ಬ್ರಹ್ಮನಿಗೆ ಇಂತಹ ಹೀನತೆಯು ಯುಕ್ತವಲ್ಲ ಎಂದು ಮೃನ್ಮಯ ಪದದಿಂದ ವಿಪಕ್ಷದಲ್ಲಿ ಬಾಧಕವನ್ನು ಸೂಚಿಸಿದ್ದಾರೆ. ಮಾಯೆಯು ಇಲ್ಲದಿರುವಾಗ ಇರುವ ಈ ದೇಹಾದಿಗಳು ಜ್ಞಾನಾನಂದರೂಪವೆಂದೇ ಸಿದ್ಧವಾಗುತ್ತದೆ.

**ಸತ್ತ್ವಾದಿಮೃನ್ಮಯಾಂತೋಽಯಂ ಮಾಯಾಸಂತಾನ ಏವ ಹಿ ।**
**ಮಾಯಾಮಯಮಿದಂ ವಿಶ್ವಂ ರೋಮರೂಪೇಽಪ್ಯಣುಃ ಕಿಲ ॥ ೩೯೭ ॥**

**ಅರ್ಥ–** ಸತ್ತ್ವಾದಿಮೃನ್ಮಯಾಂತಃ= ಸತ್ತ್ವಗುಣದಿಂದ ಆರಂಭಿಸಿ ಮಣ್ಣಿನ ವಿಕಾರವಾದ ಘಟಪಟಾದಿಗಳವರೆಗಿನ, ಅಯಂ=ಈ ಪ್ರಪಂಚವು, ಮಾಯಾಸಂತಾನ ಏವ ಹಿ= ಪ್ರಕೃತಿಯ ಕಾರ್ಯಪರಂಪರೆಯೇ ಆಗಿದೆ. ಮಾಯಾಮಯಂ=ಪ್ರಕೃತಿನಿರ್ಮಿತ ವಾದ, ಇದಂ

ವಿಶ್ವಂ= ಈ ಪ್ರಪಂಚವು, ರೋಮಕೂಪೇ= ಪರಮಾತ್ಮನ ರೋಮಕೂಪದಲ್ಲಿ, ಅಣುಃ= ಅಣುವಿನಂತಿದೆ. ಕಿಲ=ಇದು ಪ್ರಸಿದ್ಧವು.

**ಅನುವಾದ–** ಸತ್ವಗುಣದಿಂದ ಆರಂಭಿಸಿ ಘಟಪಟಾದಿ ವಸ್ತುಗಳವರೆಗಿನ ಸಮಸ್ತ ಪ್ರಪಂಚವೂ ಪ್ರಕೃತಿಕಾರ್ಯವಾಗಿದೆ. ಇಷ್ಟು ಬೃಹತ್ತಾದ ಪ್ರಪಂಚವು ಪರಮಾತ್ಮನ ರೋಮಕೂಪದಲ್ಲಿ ಅಣುವಿನಂತಿದೆ. 'ಕಿಲ' ಈ ಅವ್ಯಯದಿಂದ ಈ ವಿಷಯವು ಪ್ರಮಾಣಪ್ರಸಿದ್ಧ ಎಂದು ಸೂಚಿಸಿದ್ದಾರೆ.

**ಭಾವವಿಲಾಸಿನೀ–** ಯುಕ್ತ್ಯಂತರಂ ಚಾಹ– **ಸತ್ತ್ವಾದೀತಿ ॥** ಸತ್ವಗುಣಾದಿಶ್ಚಾಸೌ ಮೃನ್ಮಯಾಂತಶ್ಚೇತಿ ಸಮಾಸಃ । ಅಯಂ ಮಹದಹಂಕಾರಾದಿಜಡಪ್ರಪಂಚಃ । ಮಾಯಾಸಂತಾನಃ ಮಾಯೋತ್ಪನ್ನ-ಕಾರ್ಯಪರಂಪರಾ । ಇದಂ ಪೂರ್ವೋಕ್ತಂ ವಿಶ್ವಮಖಿಲಂ ಮಾಯಾಮಯಂ ವಿಷ್ಣೋಃ ರೋಮಕೂಪೇ ಅಣುಃ ಕಿಲ ಅಣುವತ್ ತಿಷ್ಠತಿ ಕಿಲ । ಕಿಲೇತ್ಯನೇನ 'ಯತ್ರ ಪ್ರವಿಷ್ಟಃ ಪರಮಾಣು-ವದ್' ಇತಿ ಭಾಗವತವಾಕ್ಯಂ ಸೂಚಯತಿ ॥ ೩೯೭ ॥

**ವಿವರಣೆ–** ಪ್ರಕೃತಿನಿರ್ಮಿತವಾದ ಈ ಪ್ರಪಂಚವು ಪರಮಾತ್ಮನ ರೋಮಕೂಪವನ್ನೇ ತುಂಬುತ್ತಿಲ್ಲ ಎಂದ ಮೇಲೆ, ಈ ಕಿರಿದಾದ ಪ್ರಕೃತಿಯು ಪರಮಾತ್ಮನ ದೇಹಕ್ಕೆ ಉಪಾದಾನವಾಗಲು ಹೇಗೆ ಸಾಧ್ಯ?

ಮಹಾಕಾಯಸ್ಯ ಕಾಯೋಽಸೌ ಚಿನ್ಮಯೋ ನಹಿ ಮೃನ್ಮಯಃ ।
ನ ಯತ್ರ ಶ್ರೂಯತೇ ಮಾಯಾ ಸತ್ತ್ವಾದೇಸ್ತತ್ರ ಕಾ ಕಥಾ ॥ ೩೯೮ ॥

**ಅರ್ಥ–** ಮಹಾಕಾಯಸ್ಯ= ವಿರಾಡ್‌ರೂಪದ ಪರಮಾತ್ಮನ, ಅಸೌ ಕಾಯಃ= ಈ ದೇಹವು, ಚಿನ್ಮಯಃ=ಜ್ಞಾನಾನಂದಾತ್ಮಕವಾದದ್ದು, ನಹಿ ಮೃನ್ಮಯಃ= ಮೃನ್ಮಯ ಅಲ್ಲವೇ ಅಲ್ಲ. ಯತ್ರ=ಯಾವ ಪರಮಾತ್ಮನಲ್ಲಿ, ಮಾಯಾ= ಪ್ರಕೃತಿಯು, ನ ಶ್ರೂಯತೇ= ಕೇಳಲ್ಪಡುವುದಿಲ್ಲ. ತತ್ರ=ಆ ಪರಮಾತ್ಮನಲ್ಲಿ, ಸತ್ವಾದೇಃ=ಸತ್ವಾದಿ ಗುಣಗಳಿಗೆ, ಕಾ ಕಥಾ=ಅವಕಾಶವೆಲ್ಲಿದೆ?

**ಅನುವಾದ–** ಕೋಟಿ ಬ್ರಹ್ಮಾಂಡಗಳಿಗೆ ಆಶ್ರಯವಾದ ನಾರಾಯಣನ ಶರೀರವು ಮೃನ್ಮಯ ಅಲ್ಲ. ಅವನಲ್ಲಿ ಮಾಯಾ= ಪ್ರಕೃತಿಯ ಪ್ರಭಾವವಿದೆ ಎಂದು ಯಾವ ಪ್ರಮಾಣವೂ ತಿಳಿಸುವುದಿಲ್ಲ. ಪ್ರಕೃತಿಯು ಇದ್ದರೆ ಸತ್ವ-ರಜಸ್-ತಮಸ್‌ಗಳು ಇರುವ ಸಾಧ್ಯತೆ. ಪ್ರಕೃತಿಯೇ ಇಲ್ಲದಿರುವ ಪರಮಾತ್ಮನಲ್ಲಿ ಸತ್ವಾದಿಗುಣಗಳಿಗೆ ಅವಕಾಶವೇ ಇಲ್ಲ.

**ಭಾವವಿಲಾಸಿನೀ–** ಏವಂ ಮಹಾಕಾಯಸ್ಯ ನಾರಾಯಣಸ್ಯಾಸೌ ಕಾಯಃ ಕೋಟಬ್ರಹ್ಮಾಂಡವಿಗ್ರಹ ಇತಿ ವಾಸುದೇವಸಹಸ್ರನಾಮೋಕ್ತಕೋಟಬ್ರಹ್ಮಾಂಡಾಶ್ರಯಕಾಯಃ ಚಿನ್ಮಯ ಏವ । ವ್ಯಾಪ್ತ-

ಪರಮಾತ್ಮಸ್ವರೂಪಜ್ಞಾನಾನಂದಾತ್ಮಕ ಏವ ನತು ಮೃನ್ಮಯಃ । ಮೃದುಪಲಕ್ಷಿತಪಂಚ-ಭೂತಮಯೋ ನಹಿ। ಸತ್ವಗುಣಾದಿಸಕಲಮಾಯಾಸಂತಾನೈರ್ಮಿಲಿತ್ವಾ ತದ್ರೋಮ್ಣೋಽಪಿ ಕರ್ತುಮಶಕ್ಯತ್ವಾದ್ ಬೃಹಚ್ಛರೀರಶ್ರುತ್ಯುಕ್ತಮಹಾಕಾಯೋಽಸೌ ಕೇನ ವಾ ಪ್ರಕೃತಿವಿಕಾರೇಣ ಕರ್ತವ್ಯಃ । ಅತಃ ಕಶಬ್ದೋಕ್ತಸುಖರೂಪತ್ವಾದ್ ಅಯ ಪಯ ಗತೌ' ಇತಿ ಧಾತೋ-ರ್ಜ್ಞಾನರೂಪತ್ವಾಚ್ಚ ಕಾಯ ಇತಿ ಯುಕ್ತಿಂ ಹಿಶಬ್ದೇನ ಸೂಚಯತಿ । ಏವಂ ಶಪದೋಕ್ತಸುಖಂ ರಪದೋಕ್ತಕ್ರೀಡಾಂ ಈರಪದೋಕ್ತಜ್ಞಾನಂ ಚಾದಾಯ ಶ್ರುತೌ ಶರೀರಮಿತಿ ಚೋಚ್ಯತ ಇತಿ ದ್ರಷ್ಟವ್ಯಮ್ । ಶೀರ್ಯತ ಇತಿ ವ್ಯುತ್ಪತ್ತೌ ಶ್ರುತ್ಯುಕ್ತ 'ಬೃಹ ಬೃಂಹ ವೃದ್ಧೌ' ಇತಿ ಧಾತ್ವರ್ಥ-ಬೃಹತ್ತ್ವಾನುಪಪತ್ತೇಃ 'ತನ್ವಾ ವೃಧಾನ' ಇತಿ ಸಮಾಖ್ಯಾಶ್ರುತಿವಿರೋಧಾಚ್ಚೇತ್ಯಪಿ ದ್ರಷ್ಟವ್ಯಮ್ । ಏತದೇವ ನ ವರ್ತತೇ ಯತ್ರ ರಜಸ್ತಮಸ್ತಯೋಸ್ಸತ್ವಂ ಚ ಮಿಶ್ರಂ ನಚ ಕಾಲವಿಕ್ರಮಃ। ನ ಯತ್ರ ಮಾಯಾ ಕಿಮುತಾಪರೇ ಹರೇರನುವ್ರತಾ ಯತ್ರ ಸುರಾಸುರಾರ್ಚಿತಾಃ' ಇತಿ ವಚನಾಂತರ-ಪ್ರಾಪ್ತಯುಕ್ತ್ಯಂತರಂ ಸೂಚಯನ್ ಸ್ಪಷ್ಟಯತಿ–ನ **ಯತ್ರೇತ್ಯಾದಿನಾ** ॥ ೩೯೮ ॥

**ವಿವರಣೆ–** ಬೃಹತ್ತಾದ ದೇಹವುಳ್ಳವನು ಪರಮಾತ್ಮ. ಈ ಬ್ರಹ್ಮಾಂಡವೆಲ್ಲವೂ ಅವನ ದೇಹವನ್ನು ಆಶ್ರಯಿಸಿದೆ. ಆ ದೇಹವು ಜ್ಞಾನಾನಂದಾತ್ಮಕ. ಅದು ಪ್ರಕೃತಿನಿರ್ಮಿತವಲ್ಲ. ಯಾವ ಪರಮಾತ್ಮನಲ್ಲಿ ಮತ್ತು ಶ್ವೇತದ್ವೀಪ, ಅನಂತಾಸನ, ವೈಕುಂಠಲೋಕಗಳಲ್ಲಿ ಪ್ರಕೃತಿಗೆ ಪ್ರವೇಶವೇ ಇಲ್ಲ ಅಂತಹ ಆ ಸ್ಥಳದಲ್ಲಿ ಹಾಗು ಮತ್ತು ಅವನಲ್ಲಿ ಸತ್ವಾದಿಗುಣಗಳಾದರೂ ಇರಲು ಹೇಗೆ ಸಾಧ್ಯ? ಆದ್ದರಿಂದ, ಪರಮಾತ್ಮನ ದೇಹ ಪ್ರಕೃತಿನಿರ್ಮಿತವಲ್ಲ. ವಾಸುದೇವಸಹಸ್ರನಾಮವು 'ಕೋಟಿಬ್ರಹ್ಮಾಂಡವಿಗ್ರಹಃ' ಎಂದು ಸ್ತುತಿಸಿದೆ. ಕೋಟಿ ಬ್ರಹ್ಮಾಂಡಗಳಿಗೆ ಆಶ್ರಯವಾದ ದೇಹ ಪರಮಾತ್ಮನದು. ಪಂಚಭೂತಗಳಿಂದಲೂ ಪರಮಾತ್ಮನ ಶರೀರವು ನಿರ್ಮಿತವಲ್ಲ. ಸತ್ವಾದಿ ಗುಣಗಳು ಪಂಚಭೂತಗಳು ಹಾಗೂ ಪ್ರಕೃತಿಯ ಕಾರ್ಯಗಳೆಲ್ಲವೂ ಒಟ್ಟುಗೂಡಿದರೂ ಭಗವಂತನ ಒಂದು ರೋಮವನ್ನೂ ನಿರ್ಮಿಸಲು ಸಾಧ್ಯವಿಲ್ಲದಿರುವಾಗ ಅವನ ದೇಹವಾದರೂ ಪ್ರಕೃತಿನಿರ್ಮಿತವಾಗಲು ಹೇಗೆ ಸಾಧ್ಯ? ಶ್ಲೋಕದಲ್ಲಿ 'ಹಿ'ಶಬ್ದದಿಂದ ಯುಕ್ತಿಯನ್ನು ಸೂಚಿಸಿದ್ದಾರೆ. ಕಾಯಶಬ್ದದಲ್ಲಿ 'ಕ' ಶಬ್ದಕ್ಕೆ ಸುಖರೂಪ, 'ಅಯ' ಶಬ್ದಕ್ಕೆ ಜ್ಞಾನರೂಪ ಎಂದು ಅರ್ಥ. ಪರಮಾತ್ಮನ ದೇಹವು ಸುಖಜ್ಞಾನರೂಪ ಎಂದು ಕಾಯಶಬ್ದವನ್ನು ಪ್ರಯೋಗಿಸಿ ತಿಳಿಸಿದ್ದಾರೆ. ಅದೇ ರೀತಿ ಶರೀರ ಎಂಬಲ್ಲಿಯೂ ಶ-ಸುಖ, ರ-ಕ್ರೀಡೆ, ಈರ-ಜ್ಞಾನ ಎಂದು ನಿರ್ವಚನ. 'ಶೀರ್ಯತೇ ಇತಿ ಶರೀರಮ್' ಎಂದು ನಿರ್ವಚಿಸಬಾರದು. 'ಶೀರ್ಯತೇ' ಎಂದರೆ 'ಹಿಂಸ್ಯತೇ' ಹಿಂಸಿಸಲ್ಪಡುತ್ತದೆ ಎಂದು ಅರ್ಥ. ಇದು ಶ್ರುತಿವಿರುದ್ಧ. ಬ್ರಹ್ಮಶಬ್ದವು 'ಬೃಹಿ ವೃದ್ಧೌ' ಧಾತುವಿನಿಂದ ಹುಟ್ಟಿದೆ. 'ಶೀರ್ಯತೇ' ಎಂದು ನಿರ್ವಚನ ಮಾಡಿದರೆ ಬೃಹತ್ತ್ವವು ಕೂಡುವುದಿಲ್ಲ. 'ತನ್ವಾ ವೃಧಾನ' ಎಂಬ ಸಮಾಖ್ಯಾಶ್ರುತಿಯ ವಿರೋಧವೂ ಬರುತ್ತದೆ. ಪರಮಾತ್ಮನಲ್ಲಿ ಪ್ರಕೃತಿಯ ಪ್ರವೇಶವಿಲ್ಲ ಎಂದು ಭಾಗವತ ವಾಕ್ಯವೂ ಸ್ಪಷ್ಟಪಡಿಸಿದೆ 'ನ

ವರ್ತತೇ ಯತ್ರ ರಜಸ್ತಮಸ್ತಯೋಃ ಸತ್ವಂ ಚ ಮಿಶ್ರಂ ನಚ ಕಾಲವಿಕ್ರಮಃ । ನ ಯತ್ರ ಮಾಯಾ ಕಿಮುತಾಪರೇ ಹರೇರನುವ್ರತಾ ಯತ್ರ ಸುರಾಸುರಾರ್ಚಿತಾಃ ॥ (ಭಾಗವತ 2.9.10)

**ಸ್ವಕಾರ್ಯೈಸ್ಸಹ ಮಾಯಾ ಯದ್ರೋಮಕೂಪಂ ನ ಪೂರಯೇತ್ ।**
**ತಸ್ಯ ವ್ಯಾಪ್ತಂ ಶರೀರಂ ತಚ್ಚಿದ್ರೂಪಂ ನ ಜಡೋದ್ಭವಮ್ ॥ ೩೯೯ ॥**

**ಅರ್ಥ–** ಮಾಯಾ=ಪ್ರಕೃತಿಯು, ಸ್ವಕಾರ್ಯೈಃ ಸಹ=ತನ್ನ ಕಾರ್ಯದೊಂದಿಗೆ, ಯದ್ ರೋಮಕೂಪಂ=ಯಾವ ನಾರಾಯಣನ ರೋಮಕೂಪವನ್ನೂ, ನ ಪೂರಯೇತ್= ತುಂಬಿಸುವುದಿಲ್ಲವೋ, ತಸ್ಯ=ಆ ನಾರಾಯಣನ, ವ್ಯಾಪ್ತಂ= ವ್ಯಾಪ್ತವಾದ, ಶರೀರಂ= ಶರೀರವು, ತತ್= ಆ ಕಾರಣದಿಂದ, ಚಿದ್ರೂಪಂ=ಜ್ಞಾನಾತ್ಮಕವು, ನ ಜಡೋದ್ಭವಮ್= ಜಡವಾದ ಪ್ರಕೃತಿಯಿಂದ ಹುಟ್ಟಿದ್ದಲ್ಲ.

**ಅನುವಾದ–** ಪ್ರಕೃತಿ ಮತ್ತು ಅದರ ಪರಿಣಾಮವಾದ ಇಡೀ ಜಗತ್ತು ವೈಕುಂಠಸ್ಥಿತ ನಾರಾಯಣನ ರೋಮಕೂಪವನ್ನು ತುಂಬಿಸುವುದಿಲ್ಲ. ಆದ್ದರಿಂದ= ಪ್ರಕೃತಿಯು ಇಲ್ಲದ ವೈಕುಂಠದಲ್ಲಿ ಇರುವುದರಿಂದ, ಆ ನಾರಾಯಣನ ವ್ಯಾಪ್ತಶರೀರವು ಚಿದಾತ್ಮಕವೇ. ಜಡಪ್ರಕೃತಿಯಿಂದ ಉದ್ಭವವಾದದ್ದು ಅಲ್ಲ.

**ಭಾವವಿಲಾಸಿನೀ–** ಯದ್ರೋಮಕೂಪಂ ಮಾಯಾತತ್ಕಾರ್ಯಶೂನ್ಯತ್ವೇನೋಕ್ತ ವೈಕುಂಠಸ್ಥಿತ-ನಾರಾಯಣರೋಮಕೂಪಮ್ । ತಸ್ಯ ನಾರಾಯಣಸ್ಯ । ಪೂರ್ವಂ ಪ್ರಕೃತಿ-ವಿಕಾರಾಣಾಮಲ್ಪತ್ವಾತ್ ನ ಮಹಾಪರಿಮಾಣಭಗವದ್ದೇಹೋಪಾದಾನತ್ವಮಿತ್ಯುಕ್ತಮ್ । ಅಧುನಾ ಮಾಯಾತತ್ಕಾರ್ಯಶೂನ್ಯಸ್ಥಲೀಯಸ್ಯ ಕಥಂ ಮಾಯೋಪಾದಾನಕತ್ವಮ್ । ಉಪಾ-ದಾನರಹಿತಸ್ಥಲೇ ಉಪಾದೇಯಸ್ಯ ಸ್ಥಿತ್ಯಯೋಗಾದಿತಿ ಯುಕ್ತಿರುಚ್ಯತ ಇತಿ ವಿವೇಕಃ ॥ ೩೯೯ ॥

**ವಿವರಣೆ–** ಪ್ರಕೃತಿವಿಕಾರಗಳೆಲ್ಲವೂ ಪರಮಾತ್ಮನ ಬೃಹತ್ತಾದ ದೇಹದ ಮುಂದೆ ಪರಮಾಣುವಿನಂತಿದೆ. ಆದ್ದರಿಂದ, ಪ್ರಕೃತಿಯು ಭಗವಂತನ ದೇಹಕ್ಕೆ ಉಪಾದಾನ ಕಾರಣವಲ್ಲ ಎಂದು ಹಿಂದೆ ಹೇಳಿದ್ದರು. ಪ್ರಕೃತಿ ಹಾಗು ಪ್ರಕೃತಿಯ ಕಾರ್ಯವಿಲ್ಲದ ಸ್ಥಳದಲ್ಲಿಯೂ ವ್ಯಾಪ್ತವಾದ ದೇಹವುಳ್ಳವನು ಪರಮಾತ್ಮ. ಹೀಗಿರುವಾಗ ಅವನ ದೇಹಕ್ಕೆ ಪ್ರಕೃತಿಯು ಉಪಾದಾನಕಾರಣವಾಗಲು ಹೇಗೆ ಸಾಧ್ಯ? ಉಪಾದಾನರಹಿತಸ್ಥಳದಲ್ಲಿ ಉಪಾದೇಯವಿರಲು ಸಾಧ್ಯವಿಲ್ಲ ಎಂದು ಯುಕ್ತಿಯನ್ನು ಇಲ್ಲಿ ಹೇಳಿದ್ದಾರೆ.

**ಸುಖಜ್ಞಾನಸುಖಸ್ಪರ್ಶಸ್ಸುಖಗಂಧಃ ಸುಖಾಕೃತಿಃ ।**
**ನಖಾದಿಸ್ವಶಿಖಾಂತಂ ಚ ಸುಖತೇಜೋಮಯಃ ಪ್ರಭುಃ ॥ ೪೦೦ ॥**

**ಅರ್ಥ–** ಪ್ರಭುಃ=ಸರ್ವಸಮರ್ಥನಾದ ಪರಮಾತ್ಮನು, ಸುಖಜ್ಞಾನಸುಖಸ್ಪರ್ಶಃ= ಸುಖರೂಪ-ಜ್ಞಾನ ಮತ್ತು ಸುಖರೂಪ-ಸ್ಪರ್ಶವುಳ್ಳವನು, ಸುಖಗಂಧಃ=ಸುಖರೂಪ

ಪರಿಮಳಭರಿತನು, ಸುಖಾಕೃತಿಃ= ಸುಖರೂಪವಾದ ಆಕಾರವುಳ್ಳವನು. ನಖಾದಿ-ಸ್ವಶಿಖಾಂತಂ ಚ=ಉಗುರಿನಿಂದ ಆರಂಭಿಸಿ ಶಿಖೆಯವರೆಗೂ, ಸುಖತೇಜೋಮಯಃ = ಸುಖ ಮತ್ತು ತೇಜಃಸ್ವರೂಪನು.

**ಅನುವಾದ–** ಸುಖವೇ ಪರಮಾತ್ಮನ ಆಕೃತಿ. ಅವನ ಜ್ಞಾನವು ಸುಖ, ಸ್ಪರ್ಶವು ಸುಖ, ಗಂಧವೂ ಸುಖ, ಪ್ರಭುವು ಉಗುರಿನಿಂದ ತಲೆಯವರೆಗೂ ಸುಖಮಯ ಮತ್ತು ತೇಜೋಮಯ.

**ಭಾವವಿಲಾಸಿನೀ–** ತರ್ಹಿ ಕಿಂರೂಪೋಽಸಾವಿತ್ಯತಃ ಪ್ರಾಕ್ ಸಂಕ್ಷಿಪ್ಯೋಕ್ತಂ ಪ್ರಪಂಚಯತಿ–**ಸುಖೇತ್ಯಾದಿನಾ** ॥ ಸುಖಮಯಾಕಾರಸ್ಯಾನಾನುಭವಿಕತ್ವಶಂಕಾಪರಿಹಾರಾಯ ಸುಖತೇಜೋ-ಮಯ ಇತ್ಯುಕ್ತಮ್ । ಸುಖಮಪ್ರಾಕೃತಮ್ । ತೇಜಶ್ಚಾಪ್ರಾಕೃತಮ್, ಸ ತನ್ಮಯ ಇತ್ಯರ್ಥಃ । ದಿವಿ ಸೂರ್ಯಸಹಸ್ರಸ್ಯ ಭವೇದ್ ಯುಗಪದುತ್ಥಿತಾ । ಯದಿ ಭಾಃ ಸದೃಶೀ ಸಾ ಸ್ಯಾದ್ ಭಾಸಸ್ತಸ್ಯ ಮಹಾತ್ಮನಃ ॥' ಇತಿ ಗೀತೋಕ್ತಂ ಭಗವತ್ತೇಜಃ ಕಥಂ ಲೌಕಿಕಮ್ । ಸೂರ್ಯ-ತೇಜೋಽತಿರಿಕ್ತತೇಜಸಃ ಲೋಕೇಽದರ್ಶನಾತ್ ॥ ೪೦೦ ॥

**ವಿವರಣೆ–** ಪ್ರಶ್ನೆ : ಪ್ರಾಕೃತಹಸ್ತಪಾದಾದಿಗಳಿಲ್ಲ. ನಿರಾಕಾರನೂ ಅಲ್ಲ ಎಂದರೆ ಆ ಪರಮಾತ್ಮ ಹೇಗಿದ್ದಾನೆ?

ಉತ್ತರ: ಪರಮಾತ್ಮನಿಗೆ ಸುಖಾತ್ಮಕವಾದ ಜ್ಞಾನಸ್ಪರ್ಶಗಳಿವೆ. ಆನಂದಾತ್ಮಕ ಪರಿಮಳವಿದೆ. ಆನಂದವೇ ಅವನ ಆಕಾರ. ಉಗುರಿನಿಂದ ಆರಂಭಿಸಿ, ಶಿಖೆಯವರೆಗೂ ಸುಖಮಯ ಮತ್ತು ತೇಜೋಮಯನಾಗಿದ್ದಾನೆ. ಸುಖವೂ ಅಪ್ರಾಕೃತ, ತೇಜಸ್ಸೂ ಅಪ್ರಾಕೃತ. 'ದಿವಿ ಸೂರ್ಯಸಹಸ್ರಸ್ಯ ಭವೇದ್ ಯುಗಪದುತ್ಥಿತಾ । ಯದಿ ಭಾಃ ಸದೃಶೀ ಸಾ ಸ್ಯಾದ್ ಭಾಸಸ್ತಸ್ಯ ಮಹಾತ್ಮನಃ ॥ (ಭಗವದ್ಗೀತಾ 11.12)

ಆಕಾಶದಲ್ಲಿ ಸಾವಿರ ಸೂರ್ಯರು ಸಮಕಾಲದಲ್ಲಿ ಉದಯಿಸಿದರೆ ಉಂಟಾಗುವ ಕಾಂತಿಯ ಸದೃಶ ಕಾಂತಿ ಆ ಪರಮಾತ್ಮನಿಗೆ ಇದೆ. ಸೂರ್ಯತೇಜಸ್ಸನ್ನು ಲೋಕದಲ್ಲಿ ಎಲ್ಲರೂ ನೋಡಿದ್ದಾರೆ. ಭಗವಂತನ ತೇಜಸ್ಸು ಆ ಸೂರ್ಯನ ತೇಜಸ್ಸನ್ನು ಮೀರಿರುವಾಗ, ಅದು ಹೇಗೆ ಪ್ರಾಕೃತವಾದೀತು?

**ಅಲೌಕಿಕಶರೀರೇಷು ವಿದ್ಯತೇ ಹ್ಯಶರೀರತಾ ।**
**ಯಥಾಽದೃಶ್ಯಶರೀರೋತ್ಥಾ ದೈವೀ ವಾಗಶರೀರವಾಕ್ ॥ ೪೦೧ ॥**

**ಅರ್ಥ–** ಅದೃಶ್ಯಶರೀರೋತ್ಥಾ=ಕಾಣದ ಶರೀರದಿಂದ ಉದ್ಭವಿಸಿದ, ದೈವೀ ವಾಕ್= ದೇವಸಂಬಂಧಿಯಾದ ವಚನವು, ಯಥಾ=ಹೇಗೆ, ಅಶರೀರವಾಕ್= ಅಶರೀರವಾಣಿಯೋ, ತಥಾ=ಅದರಂತೆ, ಅಲೌಕಿಕಶರೀರೇಷು= ಅಪ್ರಾಕೃತ ಶರೀರಗಳಲ್ಲಿ, ಅಶರೀರತಾ= ಅಶರೀರತ್ವವು, ವಿದ್ಯತೇ ಹಿ=ಇದೆಯಷ್ಟೆ.

**ಅನುವಾದ–** ಸಾಮಾನ್ಯಜನರಿಂದ ನೋಡಲಾಗದ ಅಲೌಕಿಕದೇವಶರೀರದಿಂದ ಹೊರಹೊಮ್ಮಿದ ವಾಣಿಯು ಅಶರೀರವಾಣಿ. ಅದರಂತೆ ಅಲೌಕಿಕಶರೀರಗಳಲ್ಲಿ ಅಶರೀರತ್ವವು ಇದೆ.

**ಭಾವವಿಲಾಸಿನೀ–** ಏವಮಶರೀರಶ್ರುತಿರಪ್ಯಲೌಕಿಕವಿಗ್ರಹವಮಾದಾಯ ಘಟತ ಇತ್ಯತ್ರ ಲೌಕಿಕದೃಷ್ಟಾಂತಮಾಹ– **ಅಲೌಕಿಕಶರೀರೇಷ್ವಿತಿ** ॥ ಅದೃಶ್ಯಶರೀರೋತ್ಥಾ ಅಸ್ಮದಾದಿಭಿರದೃಶ್ಯಾಲೌಕಿಕದೇವಶರೀರತಾಲ್ವೋಷ್ಠಪುಟೋತ್ಥದೈವಿಕವಾಕ್ ಆಕಾಶವಾಣೀ ಅಶರೀರವಾಣೀತ್ಯುಚ್ಯತೇ । ಸರ್ವಥಾ ಶರೀರಾಭಾವೇ ವಾಗುಚ್ಚಾರಣಸ್ಯೈವಾಯೋಗಾತ್ ಅಲೌಕಿಕಶರೀರೋಚ್ಚರಿತ್ಯೈವ ವಾಕ್ ಯಥಾ ಶರೀರವಾಕ್ ತಥಾಽಲೌಕಿಕಶರೀರೇಷು ಭಗವದ್ರೂಪೇಷು ಅಶರೀರತಾ ಯುಕ್ತ್ಯೈವೇತಿ ಪೂರ್ವೇಣಾನ್ವಯಃ ॥ ೪೦೦ ॥

**ವಿವರಣೆ–** ಶರೀರವಿಲ್ಲವೆಂದು ಹೇಳುವ ಶ್ರುತಿಗೆ ಪ್ರಾಕೃತ ಶರೀರ ಇಲ್ಲವೆಂದು ಅಭಿಪ್ರಾಯ. ಶರೀರವಿಲ್ಲದೇ ವಾಣಿಯು ಉದ್ಭವಿಸುವುದಿಲ್ಲ. ಶಬ್ದೋತ್ಪತ್ತಿಯ ಸ್ಥಾನ ಕಂಠತಾಲ್ವಾದಿಗಳು. ಆದರೂ, ಶರೀರವು ಕಾಣಿಸದೆ ವಾಣಿಯು ಮಾತ್ರ ಕೇಳುತ್ತದೆ. ಇದು ಆಕಾಶವಾಣಿ. ಇದನ್ನು ಅಶರೀರವಾಣೀ ಎಂದೇ ಕರೆಯುವುದು ವಾಡಿಕೆ. ಇಲ್ಲಿ ಶರೀರ ಎಂದರೆ ಅಲೌಕಿಕಶರೀರ. ಪರಮಾತ್ಮನ ಶರೀರವೂ ಅಲೌಕಿಕವಾದ್ದರಿಂದ ಅವನನ್ನು ಶರೀರರಹಿತ ಎನ್ನುವುದು ಸಮಂಜಸವಾಗಿದೆ.

'ಓಂ ಪ್ರಕಾಶವಚ್ಚಾವೈಯ್ಯರ್ಥ್ಯಮ್ ಓಂ' (ಬ್ರಹ್ಮಸೂತ್ರ 3-2-15) । ಯಥಾ ಚಕ್ಷುರಾದಿಪ್ರಕಾಶೇ ವಿದ್ಯಮಾನೇಽಪಿ ವೈಲಕ್ಷಣ್ಯಾದಪ್ರಕಾಶಾದಿವ್ಯವಹಾರಃ । – ಬ್ರಹ್ಮಸೂತ್ರಭಾಷ್ಯಮ್ ॥

ಚಕ್ಷುಷ್ ಮೊದಲಾದ ಇಂದ್ರಿಯಗಳ ಪ್ರಕಾಶವು ಸೌರದೀಪಾದಿಗಳ ಪ್ರಕಾಶಕ್ಕಿಂತಲೂ ವಿಲಕ್ಷಣವಾಗಿದೆ. ಆ ಕಾರಣದಿಂದ ಚಕ್ಷುರಾದಿ ಪ್ರಕಾಶವಿದ್ದರೂ ಸೂರ್ಯನ ಬೆಳಕು ಇಲ್ಲದ ಸ್ಥಳದಲ್ಲಿ ಪ್ರಕಾಶವಿಲ್ಲ ಎಂದು ವ್ಯವಹಾರವಿದೆ. ಅದರಂತೆ, ಪರಮಾತ್ಮನಲ್ಲಿ ಅಪ್ರಾಕೃತ ರೂಪವಿದ್ದರೂ ಪ್ರಾಕೃತರೂಪವಿಲ್ಲವಾದ್ದರಿಂದ ರೂಪರಹಿತನೆಂದು ವ್ಯವಹಾರ. ಅದೇ ರೀತಿ ಶರೀರವಿದ್ದರೂ ಪ್ರಾಕೃತ ಶರೀರವಿಲ್ಲವಾದ್ದರಿಂದ ಶರೀರರಹಿತನೆಂದು ವ್ಯವಹಾರ.

**ವಿಲಕ್ಷಣಶರೀರತ್ವಾನ್ನ ತದ್ ದುಃಖಾದಿಕಾರಣಮ್ ।**
**ಅಜೀರ್ಣತಾ ಮನುಷ್ಯಾನ್ನಾದ್ ದೇವಾನ್ನಾದಜರೋಽಮರಃ ॥ ೪೦೨ ॥**

**ಅರ್ಥ–** ವಿಲಕ್ಷಣಶರೀರತ್ವಾತ್=ವಿಲಕ್ಷಣ ಶರೀರವಾದ್ದರಿಂದ, ತದ್=ಆ ಶರೀರವು, ನ ದುಃಖಾದಿಕಾರಣಮ್=ದುಃಖಾದಿಗಳಿಗೆ ಕಾರಣವಲ್ಲ. ಮನುಷ್ಯಾನ್ನಾತ್=ಮನುಷ್ಯನ ಆಹಾರದಿಂದ, ಅಜೀರ್ಣತಾ=ಅಜೀರ್ಣತೆಯುಂಟಾಗುತ್ತದೆ. ದೇವಾನ್ನಾತ್=ದೇವತೆಗಳ ಅನ್ನದಿಂದ, ಅಜರಃ=ಜರಾರಹಿತನೂ, ಅಮರಃ=ಮೃತ್ಯುರಹಿತನೂ (ಆಗುತ್ತಾನೆ).

**ಅನುವಾದ–** ಆ ಪರಮಾತ್ಮಶರೀರವು ಮನುಷ್ಯಶರೀರಕ್ಕಿಂತ ವಿಲಕ್ಷಣವಾದುದರಿಂದ, ದುಃಖಾದಿಗಳಿಗೆ ಕಾರಣವಾಗುವುದಿಲ್ಲ. ಮನುಷ್ಯಾನ್ನದಿಂದ ಅಜೀರ್ಣತೆಯು ಉಂಟಾಗುತ್ತದೆ. ದೇವಾನ್ನ-ಅಮೃತವನ್ನು ಸೇವಿಸಿದವರು ಜರಾರಹಿತರೂ, ಮೃತ್ಯುರಹಿತರೂ ಆಗುತ್ತಾರೆ.

**ಭಾವವಿಲಾಸಿನೀ–** ತರ್ಹಿ ಶರೀರವತ್ತ್ವಾದ್ ದುಃಖಾದಿಕಂ ಸ್ಯಾದಿತ್ಯತ ಆಹ– **ವಿಲಕ್ಷಣ-ಶರೀರತ್ವಾದಿತಿ** ॥ ತದ್ ಭಗವಚ್ಛರೀರಮ್ । ತತ್ರ ದೃಷ್ಟಾಂತಮಾಹ– **ಅಜೀರ್ಣತೇತಿ** ॥ ದೇವಾನ್ನಾದ್ ಅಮೃತಾತ್ । ಯಥಾ ಮನುಷ್ಯಾನ್ನವಿಲಕ್ಷಣದೇವಾನ್ನೇ ನ ಮನುಷ್ಯಾನ್ನವದ್ ದುಃಖದತ್ವಮ್, ಪ್ರತ್ಯುತ ದುಃಖಕಾರಣೀಭೂತಜರಾಮರಣಾದಿಪರಿಹಾರಕತ್ವಮೇವ। ತಥಾ ಮನುಷ್ಯದೇಹಾದ್ ವಿಲಕ್ಷಣೋ ಭಗವದ್ದೇಹೋ ನ ದುಃಖದಾಯೀ, ಪ್ರತ್ಯುತ ಮಹಾ-ಸುಖಹೇತುಃ ಜರಾಮರಣಾದ್ಯಭಾವಹೇತುಶ್ಚೇತಿ ಭಾವಃ ॥ ೪೦೨ ॥

**ವಿವರಣೆ–** ಪ್ರಶ್ನೆ : ಶರೀರವಿರುವ ಎಲ್ಲರಿಗೂ ದುಃಖವಿದೆ. ಪರಮಾತ್ಮನಿಗೂ ಶರೀರವಿರುವುದಾದರೆ ಅವನೂ ದುಃಖಿಯಾಗಬೇಕಾದೀತು?

ಉತ್ತರ : ಇಲ್ಲ. ನಮ್ಮ ಶರೀರವು ಪ್ರಕೃತಿನಿರ್ಮಿತ. ಆದ್ದರಿಂದ, ದುಃಖಾದಿಗಳು ಉಂಟಾಗುತ್ತವೆ. ಪರಮಾತ್ಮನ ಶರೀರವು ಪ್ರಾಕೃತವಲ್ಲ. ಮನುಷ್ಯರ ಆಹಾರವು ಅಜೀರ್ಣಾದಿ ದುಃಖಗಳಿಗೆ ಕಾರಣ. ದೇವತೆಗಳ ಆಹಾರವು ಜರಾಮರಣಾದಿಪರಿಹಾರಕ. ಅದರಂತೆ ಅನ್ನಾದಿಗಳ ವಿಕಾರವಾದ ಮನುಷ್ಯದೇಹವು ದುಃಖವನ್ನುಂಟುಮಾಡುವುದು. ಮನುಷ್ಯದೇಹಕ್ಕಿಂತ ವಿಲಕ್ಷಣವಾದ ಪರಮಾತ್ಮನ ದೇಹವು ದುಃಖಕರವಲ್ಲ.

**ಕರ್ತೃತಾ ನ ಚಿತಶ್ಚೇತ್ ಸ್ಯಾದಕೃತಾಗಮಸಂಕಟಮ್ ।**
**ಕರ್ತೃತಾ ಮಿಲಿತೇ ಚೇತ್ ಸ್ಯಾದುಭಯೋರಪಿ ಕರ್ತೃತಾ ॥ ೪೦೩ ॥**

**ಅರ್ಥ–** ಚಿತಃ= ಶುದ್ಧಚಿತ್‌ಗೆ, ಕರ್ತೃತಾ=ಕರ್ತೃತ್ವವು, ನ ಚೇತ್=ಇಲ್ಲದಿದ್ದರೆ, ಅಕೃತಾಗಮಸಂಕಟಮ್= ತಾನು ಮಾಡದಿರುವ ಸಾಧನದ ಫಲಪ್ರಾಪ್ತಿರೂಪಸಂಕಟವು, ಸ್ಯಾತ್=ಆಗುತ್ತದೆ. ಮಿಲಿತೇ=ವಿಶಿಷ್ಟದಲ್ಲಿ, (ಮನಸ್ಸಹಿತವಾದ ಚಿತ್‌ನಲ್ಲಿ) ಕರ್ತೃತಾ ಚೇತ್=ಕರ್ತೃತ್ವವಿದೆ ಎಂದರೆ, ಉಭಯೋರಪಿ= ವಿಶೇಷಣವಿಶೇಷ್ಯಗಳೆರಡರಲ್ಲಿಯೂ, ಕರ್ತೃತಾ=ಕರ್ತೃತ್ವವು, ಸ್ಯಾತ್=ಉಂಟಾಗುತ್ತದೆ.

**ಅನುವಾದ–** ಶುದ್ಧಚಿತ್‌ಗೆ ಕರ್ತೃತ್ವವಿಲ್ಲದಿದ್ದರೆ, ತನ್ನಿಂದ ಮಾಡಲ್ಪಡದ ಸಾಧನೆಯ ಫಲ (ಮೋಕ್ಷ)ವನ್ನು ಹೊಂದುವ ಪ್ರಸಂಗವು ಉಂಟಾಗುವುದು. ಮನಸ್ಸಹಿತವಾದ ಚಿತ್‌ಗೆ ಕರ್ತೃತ್ವವಿರುವುದಾದರೆ ಮನಸ್ ಮತ್ತು ಶುದ್ಧಚಿತ್- ಇವೆರಡಕ್ಕೂ ಕರ್ತೃತ್ವವು ಸಿದ್ಧವಾಗುತ್ತದೆ.

**ಭಾವವಿಲಾಸಿನೀ–** ಕ್ರಿಯಾವೇಶಾನ್ನ ಕರ್ತೃತೇತಿ ಮತಂ ಪ್ರಾಗ್ ದೂಷಿತಮ್ । ಇದಾನೀಂ ಚಿನ್ಮಾತ್ರಸ್ಯ ನ ಕರ್ತೃತೇತಿ ಮತಂ ದೂಷಯತಿ– **ಕರ್ತೃತೇತಿ** ॥ ಚಿತಶ್ಚಿನ್ಮಾತ್ರಸ್ಯ । ಅಕೃತಾಗಮಸಂಕಟಂ ನ ಕೃತಮಕೃತಮ್ । ಸ್ವೇನಾಕೃತಸಾಧನಸ್ಯ ಫಲಸ್ಯ ಮೋಕ್ಷರೂಪಸ್ಯಾಗಮಃ ಪ್ರಾಪ್ತಿಸ್ಸ ಏವ ಸಂಕಟಮ್ । ಚಿತೋಽಕರ್ತೃತ್ವೇ ತೇನಾಕೃತಸಾಧನೋ ಮೋಕ್ಷಃ ಕಥಂ ಚಿನ್ಮಾತ್ರಸ್ಯ ಸ್ಯಾದಿತಿ ಭಾವಃ । ಮಿಲಿತೇ ವಿಶಿಷ್ಟೇ ಉಭಯೋರ್ವಿಶೇಷಣವಿಶೇಷ್ಯಭೂತಯೋಃ ಉಪಾಧಿ ಚೈತನ್ಯಯೋಃ ॥ ೪೦೩ ॥

**ವಿವರಣೆ–** ಕ್ರಿಯಾಪ್ರವೇಶಪ್ರಸಂಗದಿಂದಾಗಿ ಕರ್ತೃತ್ವವಿಲ್ಲ ಎಂಬ ಮತವನ್ನು ಹಿಂದೆ (ಶ್ಲೋಕ 377) ದೂಷಿಸಿದ್ದರು. ಈಗ ಶುದ್ಧಚಿತ್‌ಗೆ ಕರ್ತೃತ್ವವಿಲ್ಲ ಎಂಬ ಮತಕ್ಕೆ ದೋಷವನ್ನು ಹೇಳುತ್ತಿದ್ದಾರೆ.

(1) ಶುದ್ಧಚಿತ್‌ಗೆ ಕರ್ತೃತ್ವವಿಲ್ಲದಿದ್ದರೆ ಅವನಿಗೆ ಮೋಕ್ಷವೂ ಆಗಲಾರದು. ಕರ್ತೃತ್ವವಿದ್ದರೆ ಮೋಕ್ಷಕ್ಕಾಗಿ ಸಾಧನೆಯನ್ನು ಮಾಡಬಹುದು. ಇಲ್ಲದಿದ್ದರೆ ಸಾಧನೆಯು ಇಲ್ಲ. ಮಾಯಾವಾದವು ಶುದ್ಧಚಿತ್‌ಗೆ ಮೋಕ್ಷವನ್ನು ಅಂಗೀಕರಿಸಿದೆ. ಇದು ಸಾಧನೆಯನ್ನು ಮಾಡದೆ ಪ್ರಾಪ್ತವಾದ ಮೋಕ್ಷವಾಗಬೇಕಾಗುತ್ತದೆ. ಇದೇ ಅಕೃತ= ಮಾಡಲ್ಪಡದ ಸಾಧನೆಯುಳ್ಳ ಫಲದ, ಆಗಮಃ= ಪ್ರಾಪ್ತಿ. ಫಲಕ್ಕಾಗಿ ಪ್ರಯತ್ನವನ್ನು ಮಾಡದವನಿಗೆ ಫಲಪ್ರಾಪ್ತಿಯು ಲೋಕವಿರುದ್ಧ ಮತ್ತು ಶಾಸ್ತ್ರವಿರುದ್ಧ. ಲೋಕವಿರೋಧ ಮತ್ತು ಶಾಸ್ತ್ರವಿರೋಧಗಳೇ ಸಂಕಟ.

(2) ಶುದ್ಧಚಿತ್‌ನಲ್ಲಿ ಕರ್ತೃತ್ವವಿಲ್ಲ; ಮನಸ್ಸಿನ ಸಂಬಂಧದಿಂದ ಅವನಿಗೆ ಕರ್ತೃತ್ವವು ಉಪಪನ್ನವಾಗುತ್ತದೆ ಎಂದರೆ, ಈ ಪಕ್ಷದಲ್ಲಿ ಮನಸ್ಸು ಮತ್ತು ಶುದ್ಧಚಿತ್- ಇವೆರಡಕ್ಕೂ ಕರ್ತೃತ್ವವು ಪ್ರಾಪ್ತವಾಗುತ್ತದೆ. ಆದ್ದರಿಂದ ಶುದ್ಧಚಿತ್‌ನಲ್ಲಿ ಕರ್ತೃತ್ವವಿಲ್ಲ ಎಂಬ ಅಭಿಪ್ರಾಯವು ಅನುಪಪನ್ನವೇ ಆಗುತ್ತದೆ.

ವಿಶಿಷ್ಟಸ್ಯ ಹಿ ಕರ್ತೃತ್ವೇ ವಿಶೇಷ್ಯಸ್ಯಾಪಿ ಕರ್ತೃತಾ ।
ವಸ್ತುತಃ ಕರ್ತೃತಾಂ ಕೋ ವಾ ವಕ್ತ್ಯನಾತ್ಮನಿ ಯುಕ್ತಿಮಾನ್ ॥ ೪೦೪ ॥

**ಅರ್ಥ–** ವಿಶಿಷ್ಟಸ್ಯ=ವಿಶಿಷ್ಟಕ್ಕೆ, ಕರ್ತೃತ್ವೇ=ಕರ್ತೃತ್ವವಿರುವುದಾದರೆ, ವಿಶೇಷ್ಯಸ್ಯಾಪಿ= ವಿಶೇಷ್ಯಕ್ಕೂ, ಕರ್ತೃತಾ= ಕರ್ತೃತ್ವವು ಇದೆ. ಅನಾತ್ಮನಿ= ಜಡದಲ್ಲಿ, ವಸ್ತುತಃ ಕರ್ತೃತಾಂ= ಸ್ವಾಭಾವಿಕ ಕರ್ತೃತ್ವವನ್ನು, ಯುಕ್ತಿಮಾನ್= ಯುಕ್ತಿಯನ್ನು ತಿಳಿದ, ಕೋ ವಾ= ಯಾರು ತಾನೆ, ವಕ್ತಿ= ಹೇಳುತ್ತಾನೆ?

**ಅನುವಾದ–** ಮನೋವಿಶಿಷ್ಟ ಚಿತ್‌ಗೆ ಕರ್ತೃತ್ವವಿದ್ದರೆ ವಿಶೇಷ್ಯವಾದ ಚಿತ್‌ಗೂ ಕರ್ತೃತ್ವವು ಪ್ರಾಪ್ತವಾಗುತ್ತದೆ. ಕೇವಲ ಜಡ ಮನಸ್ಸಿಗೆ ಸ್ವಾಭಾವಿಕ ಕರ್ತೃತ್ವವನ್ನು ಯಾವ ವಿಚಾರಶೀಲನು ಹೇಳುತ್ತಾನೆ?

**ಭಾವವಿಲಾಸಿನೀ–**ತದೇವೋಪಪಾದಯತಿ– **ವಿಶಿಷ್ಟಸ್ಯೇತಿ** ॥ ಅನಾತ್ಮನಿ ಜಡೇ। ವಸ್ತುತಃ ಸ್ವಭಾವತಃ ಕರ್ತೃತಾಂ। ಅನೇನ 'ಘಟಶ್ಚಲತಿ' ಇತ್ಯಾದೌ ಕರ್ತೃತ್ವಮೌಪಚಾರಿಕಮಿತಿ ಸೂಚಯತಿ। ಯುಕ್ತಿಮಾನಿತಿ ಜಡಸ್ಯ ಕರ್ತೃತ್ವಂ ಯುಕ್ತಿವಿರುದ್ಧಮಿತಿ ದ್ಯೋತಯಿತುಂ ಹೇತುಗರ್ಭಂ ವಿಶೇಷಣಮ್ ॥ ೪೦೪ ॥

**ವಿವರಣೆ–** ಶುದ್ಧಚಿತ್ ನಿರ್ವಿಕಾರ. ಆದ್ದರಿಂದ, ಅದು ಕರ್ತೃ ಅಲ್ಲ. ಮನಸ್ಸೇ ಕರ್ತೃ ಎಂದು ಕೆಲವರ ಮತ. ಆ ಮತವನ್ನು ಇಲ್ಲಿ ನಿರಾಕರಿಸುತ್ತಿದ್ದಾರೆ. ಮನಸ್ಸು ಜಡ. ಅದಕ್ಕೆ ಕರ್ತೃತ್ವವು ಇಲ್ಲ. ಮನಸ್ಸು ಶ್ರವಣಮನನಾದಿಗಳ ಕರ್ತೃ ಆದರೆ ಶ್ರವಣಾದಿಗಳ ಫಲವಾದ ಮೋಕ್ಷವೂ ಮನಸ್ಸಿಗೆ ಆಗಬೇಕಾಗುತ್ತದೆ. ಕೇವಲ ಮನಸ್ಸಿಗೆ ಕರ್ತೃತ್ವವನ್ನು ಒಪ್ಪದೆ, ಮನೋವಿಶಿಷ್ಟನಾದ ಚಿತ್‌ಗೆ ಕರ್ತೃತ್ವವನ್ನು ಒಪ್ಪಿದರೆ ವಿಶೇಷ್ಯವಾದ ಚಿತ್‌ನಲ್ಲೂ ಕರ್ತೃತ್ವವು ಬರುತ್ತದೆ. 'ಘಟಃ ಚಲತಿ'–ಘಟವು ಚಲಿಸುತ್ತದೆ ಮುಂತಾದ ಪ್ರಯೋಗಗಳಲ್ಲಿ ಘಟ ಮೊದಲಾದ ಜಡಗಳಲ್ಲಿ ತೋರುವ ಕರ್ತೃತ್ವವು ಔಪಚಾರಿಕ, ಮುಖ್ಯವಲ್ಲ.

**ಮರ್ತ್ಯೈರ್ವರ್ತ್ಯೇ ಯತ್ಸ್ವತಂತ್ರಃ ಕರ್ತೇತ್ಯಾಹುರ್ವಿಪಶ್ಚಿತಃ ॥ ೪೦೫ ॥**

**ಅರ್ಥ–** ಮರ್ತ್ಯೈಃ=ಮನುಷ್ಯರಿಂದ, ವರ್ತ್ಯೇ= ನಡೆಸಲ್ಪಡುವ ಕ್ರಿಯೆಗಳಲ್ಲಿ ಸ್ವತಂತ್ರಃ=ಸ್ವತಂತ್ರನು, ಕರ್ತಾ ಇತಿ=ಕರ್ತೃ ಎಂದು, ವಿಪಶ್ಚಿತಃ=ಜ್ಞಾನಿಗಳು, ಯದ್ ಆಹುಃ= ಹೇಳುವುದರಿಂದ, (ಜಡವು ಕರ್ತೃ ಅಲ್ಲ).

**ಅನುವಾದ–** ಮನುಷ್ಯರಿಂದ ನಡೆಸಲ್ಪಡುವ ಕ್ರಿಯೆಗಳಲ್ಲಿ, ಸ್ವೇಚ್ಛೆಯಿಂದ ಪ್ರವೃತ್ತಿಯನ್ನು ಮಾಡುವವರು ಅಥವಾ ಬೇರೆ ಕಾರಕಗಳಿಂದ ಪ್ರಚೋದನೆಯನ್ನು ಪಡೆಯದವರು ಕರ್ತೃ ಎಂದು ಪ್ರಾಜ್ಞರು ಹೇಳುತ್ತಾರೆ. (ಆದ್ದರಿಂದ ಹೀಗಿಲ್ಲದ ಮನಸ್ಸು ಕರ್ತೃ ಅಲ್ಲ. ಅದು ಕರಣ).

**ಭಾವವಿಲಾಸಿನೀ–** ತಾಮೇವ ಯುಕ್ತಿಂ ಪ್ರದರ್ಶಯತಿ– **ಮರ್ತ್ಯೈರಿತಿ** ॥ ಮರ್ತ್ಯೈಃ ಮನುಷ್ಯೈಃ ವರ್ತ್ಯೇ ಪ್ರವರ್ತ್ಯಮಾನೇ ಗಮನಚ್ಛಿದಾದಿಕರ್ಮಣಿ ಯದ್ ಯಸ್ಮಾದ್ವಿಪಶ್ಚಿತಃ ಸ್ವತಂತ್ರಃ ಕರಣಾದೀನಾಂ ಪ್ರೇರಕಸ್ವೇಚ್ಛಾಧೀನಪ್ರವೃತ್ತಿರ್ದೇವದತ್ತಃ ಕರ್ತೇತ್ಯಾಹುಃ। ಕುಠಾರೇಣ ಛಿನತ್ತಿ, ಪಾದೇನ ಗಚ್ಛತಿ' ಇತ್ಯಾದೌ ತಸ್ಮಿನ್ನೇವ ಕರ್ತೃಪದಪ್ರಯೋಗಾತ್। ವಿಶೇಷಣೀಭೂತಪಾದಾದೌ ಕರಣಪದಪ್ರಯೋಗಾಚ್ಚೇತಿ ಭಾವಃ ॥ ೪೦೫ ॥

**ವಿವರಣೆ–** 'ಸ್ವತಂತ್ರಃ ಕರ್ತಾ' ಎಂದು ಪಾಣಿನಿಸೂತ್ರ. ಬೇರೆ ಕಾರಕಗಳಿಂದ ಪ್ರಚೋದನೆಯನ್ನು ಪಡೆಯದೆ, ತನ್ನ ಇಚ್ಛೆಯಂತೆ ಪ್ರವೃತ್ತಿಯನ್ನು ಮಾಡುವವನು ಕರ್ತೃ. ಇದು ಈ ಸೂತ್ರದ ಅರ್ಥ. ದೇವದತ್ತನು ತನ್ನ ಗಮನಾದಿಕ್ರಿಯೆಗಳಲ್ಲಿ ಸ್ವೇಚ್ಛಾಧೀನ ಪ್ರವೃತ್ತಿಯನ್ನು ಹೊಂದಿದ್ದಾನೆ. ಬೇರೆ ಕಾರಕಗಳ ಪ್ರಚೋದನೆಯು ಅವನಿಗೆ ಇಲ್ಲ. ಕುಠಾರದಿಂದ ಕತ್ತರಿಸುತ್ತಾನೆ. ಪಾದದಿಂದ ನಡೆಯುತ್ತಾನೆ ಮುಂತಾದ ಕ್ರಿಯೆಗಳಲ್ಲಿ

ಕುಠಾರಾದಿಗಳಿಗೆ ಪ್ರೇರಕ ದೇವದತ್ತ. ಅವನನ್ನೇ ಕರ್ತೃ, ಕುಠಾರ ಮೊದಲಾದವುಗಳು ಕರಣ ಎಂದು ಪ್ರಾಜ್ಞರು ವ್ಯವಹರಿಸುತ್ತಾರೆ.

**ಯಥಾ ದಂಡಮೃದಾದ್ಯರ್ಥೈರ್ವಿಶಿಷ್ಟೋ ಲಕ್ಷಿತೋಽಪಿ ವಾ ।**
**ಕುಲಾಲ ಏವ ಘಟಕೃತ್ ತೇ ಸರ್ವೇ ಕಾರಕಾಂತರಮ್ ॥ ೪೦೬ ॥**

**ಅರ್ಥ–** ಯಥಾ= ಉದಾಹರಣೆಗೆ, ದಂಡಮೃದಾದ್ಯರ್ಥೈಃ=ದಂಡ, ಮಣ್ಣು ಮುಂತಾದ ವಸ್ತುಗಳಿಂದ, ವಿಶಿಷ್ಟಃ=ಸಹಿತನಾದ, ಅಪಿ ವಾ=ಅಥವಾ, ಲಕ್ಷಿತಃ=ಸಹಿತನಾಗಿದ್ದ, ಕುಲಾಲ ಏವ=ಕುಂಬಾರನೇ, ಘಟಕೃತ್=ಘಟದ ಕರ್ತೃ, ತೇ ಸರ್ವೇ= ಅವೆಲ್ಲವೂ (ದಂಡ, ಮಣ್ಣು ಮುಂತಾದವುಗಳು), ಕಾರಕಾಂತರಮ್= ಬೇರೆ ಕಾರಕಗಳು.

**ಅನುವಾದ– ದಂಡ, ಮಣ್ಣು ಮೊದಲಾದ ಪದಾರ್ಥಗಳನ್ನು ಘಟನಿರ್ಮಾಣಕ್ಕಾಗಿ ಹೊಂದಿರುವ ಕುಂಬಾರನೇ ಘಟದ ಕರ್ತೃ. ಇವುಗಳನ್ನು ಹೊಂದಿದ್ದವನೂ ಘಟಕರ್ತೃವೇ. ಈ ಪದಾರ್ಥಗಳೆಲ್ಲವೂ ಬೇರೆ ಕಾರಕಗಳು.**

**ಭಾವವಿಲಾಸಿನೀ–** ಏತದೇವೋದಾಹರಣಮುಖೇನ ದರ್ಶಯತಿ– **ಯಥೇತಿ** ॥ ದಂಡ-ಮೃದಾದ್ಯರ್ಥೇ ಘಟಕಾರಣದಂಡಮೃದಾದಿವಸ್ತುಭಿಃ ಆದಿಪದೇನ ಕಾಲಾದಿಕಂ ಗೃಹ್ಯತೇ । ತೈರ್ವಿಶಿಷ್ಟೋ ಲಕ್ಷಿತೋಽಪಿ ವೇತಿ ಯಥಾಸಂಭವಮೂಹ್ಯಮಿತಿ ಭಾವಃ । ಕುಲಾಲ ಏವ ಕುಲಾಲಾಖ್ಯಚೇತನ ಏವ ಘಟಕೃತ್ ಕುಂಭಕಾರಃ । ಏವಕಾರೇಣ ಮೃದಾದಿಕಂ ವ್ಯವಚ್ಛಿನತ್ತಿ । ತೇ ಸರ್ವೇ ಮೃದ್ದಂಡಾದ್ಯಾಃ ಕಾರಕಾಂತರಂ ಕರ್ತೃವ್ಯತಿರಿಕ್ತಕಾರಕಾಣಿ । ಕುಲಾಲಃ ಮೃದ್ದಂಡಾದಿ-ನಿಮಿತ್ತಾತ್ ಸ್ವಶಾಲಾಯಾಂ ಘಟಂ ಕರೋತೀತ್ಯಭಿಯುಕ್ತಪ್ರಯೋಗದರ್ಶನಾದಿತಿ ಭಾವಃ ॥ ೪೦೬ ॥

**ವಿವರಣೆ–** ಕುಂಬಾರನು ದಂಡ, ಮಣ್ಣು ಮುಂತಾದ ವಸ್ತುಗಳನ್ನು ಬಳಸಿ ಘಟವನ್ನು ಮಾಡುತ್ತಾನೆ. ಘಟವನ್ನು ಮಾಡುವ ಕಾಲದಲ್ಲಿ ಕುಲಾಲನು ದಂಡಮೃದಾದಿಗಳಿಂದ ಸಹಿತನಾಗಿರುತ್ತಾನೆ. ಘಟನಿರ್ಮಾಣವಾದನಂತರ, ದಂಡಮೃದಾದಿಗಳಿಂದ ಲಕ್ಷಿತನಾಗಿರುತ್ತಾನೆ. ಅಲ್ಲಿ ಚೇತನ ಕುಲಾಲನೇ ಕರ್ತೃ, ದಂಡ, ಮೃತ್ ಮುಂತಾದವುಗಳು ಇತರ ಕಾರಕಗಳು. ಅಂದರೆ ಕರಣಾದಿಗಳು. ಕುಂಬಾರನು ಮೃತ್, ದಂಡ ಮುಂತಾದ ನಿಮಿತ್ತಗಳಿಂದ ತನ್ನ ಗೃಹದಲ್ಲಿ ಘಟವನ್ನು ಮಾಡುತ್ತಾನೆ ಎಂದು ಅಭಿಯುಕ್ತರ ಪ್ರಯೋಗ.

ಕುಂಬಾರನು ಕರ್ತಾ, ಮೃತ್‌ದಂಡಾದಿಗಳು ಕರಣ, ಗೃಹವು ಅಧಿಕರಣ. ಘಟವು ಕರ್ಮ ಎಂದು ಸ್ಪಷ್ಟವಾಗಿ ಜ್ಞಾನಿಗಳ ಪ್ರಯೋಗದಿಂದ ಸಿದ್ಧವಾಗುತ್ತಿದೆ. ಆದ್ದರಿಂದ ಚೇತನನೇ ಕರ್ತೃ.

**ದೇಹಾಂತಃಕರಣಾದ್ಯೈಶ್ಚ ವಿಶಿಷ್ಟೋ ಲಕ್ಷಿತೋಽಪಿ ವಾ ।**
**ಜೀವ ಏವ ತಥಾ ಕರ್ತಾ ತತ್ ಸರ್ವಂ ಕಾರಕಾಂತರಮ್ ॥ ೪೦೭ ॥**

**ಅರ್ಥ–** ತಥಾ= ಹಾಗೆ, ದೇಹಾಂತಃಕರಣಾದ್ಯೈಃ=ದೇಹ, ಅಂತಃಕರಣ ಮುಂತಾದ-ವುಗಳಿಂದ, ವಿಶಿಷ್ಟಃ= ವಿಶಿಷ್ಟನಾದ, ಅಪಿ ವಾ=ಅಥವಾ, ಲಕ್ಷಿತಃ= ಲಕ್ಷಿತನಾದ, ಜೀವ ಏವ=ಜೀವನೇ, ಕರ್ತಾ=ಕರ್ತನು. ತತ್ ಸರ್ವಂ=ದೇಹ, ಅಂತಃಕರಣ ಮುಂತಾದವುಗಳು, ಕಾರಕಾಂತರಮ್=ಕರ್ಮ, ಕರಣ ಮುಂತಾದ ಬೇರೆ ಕಾರಕಗಳು.

**ಅನುವಾದ– ದೇಹ, ಅಂತಃಕರಣ, ಇಂದ್ರಿಯಗಳಿಂದ ಸಹಿತನಾದ ಅಥವಾ ಲಕ್ಷಿತನಾದ ಜೀವನೇ ಕುಂಬಾರನಂತೆ ಕರ್ತಾ. ದೇಹ ಅಂತಃಕರಣಾದಿಗಳು ಬೇರೆ ಕಾರಕಗಳು.**

**ಭಾವವಿಲಾಸಿನೀ–** ದೃಷ್ಟಾಂತಮುಕ್ತ್ವಾ ದಾರ್ಷ್ಟಾಂತಿಕೇಽಪಿ ಯೋಜಯತಿ– **ದೇಹೇತಿ** ॥ ತಥಾ ಕುಂಭಕಾರವತ್ । ತತ್ಸರ್ವಂ ದೇಹಾಂತಃಕರಣಾದಿಕಮ್ ॥ ೪೦೭ ॥

**ಮನೋ ಹಿ ಕರಣಂ ತಸ್ಯ ದೇಹೋಽಧಿಕರಣಂ ಸ್ಮೃತಮ್ ।**
**ಕರ್ತೃತ್ವೇ ಕೋಽಸ್ತಿ ದಾಯಾದೀ ಮಾಯಾಪಿ ಕರಣಾಂತರಮ್ ॥ ೪೦೮ ॥**

**ಅರ್ಥ–** ತಸ್ಯ=ಜೀವನಿಗೆ, ಮನಃ=ಮನಸ್ಸು, ಕರಣಂ=ಕರಣ ಕಾರಕವು. ಹಿ=ಇದು ಅನುಭವ ಸಿದ್ಧ. ದೇಹಃ=ದೇಹವು, ಅಧಿಕರಣಂ=ಅಧಿಕರಣವೆಂದು, ಸ್ಮೃತಮ್= ಸ್ಮೃತಿಪ್ರಮಾಣ ಸಿದ್ಧ. ಕರ್ತೃತ್ವೇ=ಕರ್ತೃತ್ವದ ವಿಷಯದಲ್ಲಿ, ದಾಯಾದೀ= ಪಾಲುದಾರನು, ಕಃ ಅಸ್ತಿ?= ಯಾರಿದ್ದಾನೆ? ಮಾಯಾಪಿ=ಪ್ರಕೃತಿಯೂ, ಕರಣಾಂತರಮ್= ಮತ್ತೊಂದು ಕರಣವು.

**ಅನುವಾದ– ಚೇತನನಿಗೆ ಮನಸ್ಸು ಕರಣ; ದೇಹವು ಅಧಿಕರಣ. ಹೀಗೆ ಎಲ್ಲರೂ ತಿಳಿದಿದ್ದಾರೆ. ಚೇತನನ ಕರ್ತೃತ್ವದ ಪಾಲುದಾರರು ಬೇರೆ ಯಾರೂ ಇಲ್ಲ. ಮಾಯೆಯೂ ಇನ್ನೊಂದು ಕರಣ.**

**ಭಾವವಿಲಾಸಿನೀ–** ತದೇವ ದರ್ಶಯತಿ– **ಮನೋ ಹೀತಿ** ॥ ತಸ್ಯ ಚೇತನಸ್ಯ ಮನಃ ಕರಣಮ್ । ಹೀತ್ಯನೇನ ಮನಸಃ ಅಂತಃಕರಣತ್ವಂ ಸರ್ವಜನಸಿದ್ಧಮಿತಿ ದರ್ಶಯತಿ । ದೇಹಃ ಅಧಿಕರಣಮ್, ದೇಹೇ ಹೃದ್ಗುಹಾಯಾಂ ಜೀವಸ್ಯ ಸ್ಥಿತತ್ವೇನ ಪ್ರಸಿದ್ಧತ್ವಾತ್ । ಕರ್ತೃತ್ವೇ ಚೈತನ್ಯನಿಷ್ಠಕರ್ತೃತ್ವೇ । ದಾಯಾದೀ ಕರ್ತೃತ್ವೈಕಾಂಶಭಾಗೀ ಕೋಽಸ್ತಿ? ನ ಕೋಽಪೀತ್ಯರ್ಥಃ । ಅವಿದ್ಯಾಕರ್ತ್ರೀ ಭವಿಷ್ಯತೀತ್ಯತ ಆಹ– **ಮಾಯಾಪೀತಿ** ॥ ಮಾಯಯಾ ಶಬಲಿತಃ ಸನ್ ದೇಹೇ ಸ್ಥಿತಃ ಅಂತಃಕರಣೇನ ಚಕ್ಷುಷಾ ಚ ಸ್ತ್ರ್ಯಾದಿವಿಷಯಂ ಪಶ್ಯತೀತಿ ಪ್ರಯೋಗಾನ್ಮಾಯಾಯಾ ಅಪಿ ಕರಣತ್ವಮೇವೇತಿ ಭಾವಃ । ಅಥವಾ ಮಾಯಾವಶಾದಿತಿ ಪ್ರಯೋಗದರ್ಶನಾತ್' ಕರಣಾಂತರಂ ಕಾರಕಾಂತರಂ ವಾ । ಕರ್ಮಣಿ ಕರ್ತೃತ್ವಮನಂಗೀಕುರ್ವತಃ ಕರಣೇ ಕರ್ತೃತ್ವಾಂಗೀಕಾರಃ ಸ್ವನ್ಯಾಯ-ವಿರುದ್ಧಶ್ಚೇತ್ಯಪಿ ಜ್ಞೇಯವಮ್ । ದೇಹವಿಶಿಷ್ಟಸ್ಯೈವ ಯಜಮಾನಸ್ಯ ಯಾಗಕರ್ತೃತ್ವೇ ತದ್ದೇಹಾಪಾಯೇ ಸತಿ ಸ್ವರ್ಗಾಖ್ಯಫಲ ಭೋಕ್ತೃತ್ವಸ್ಯಾಕಸ್ಮಿಕತ್ವಪ್ರಸಂಗಾಚ್ಚ ॥ ೪೦೮ ॥

**ವಿವರಣೆ**– (1) ಜೀವನು ಕರ್ತೃ. ಮನಸ್ಸು ಕರಣ. ಮನಸ್ಸಿಗೆ ಅಂತಃಕರಣ ಎಂಬ ಹೆಸರು ಲೋಕಪ್ರಸಿದ್ಧ ಎಂದು ಹಿಶಬ್ದದಿಂದ ಸೂಚಿಸಿದ್ದಾರೆ. ಹೃದಯಗುಹಾದಲ್ಲಿ ಜೀವನು ಇದ್ದಾನೆ. ಆದ್ದರಿಂದ, ದೇಹವು ಅಧಿಕರಣ. ಜೀವನು ಮಾಯೆಯೊಂದಿಗೆ ದೇಹದಲ್ಲಿ ಇದ್ದು ಅಂತಃಕರಣದಿಂದ ಮತ್ತು ಚಕ್ಷುರಿಂದ್ರಿಯದಿಂದ ವಿಷಯಪದಾರ್ಥಗಳನ್ನು ಕಾಣುತ್ತಾನೆ.' ಈ ರೀತಿ ಲೋಕದಲ್ಲಿ ಮಾತನಾಡುತ್ತಾರೆ. ಇದರಿಂದ ಮಾಯೆಯೂ ಕರಣವೆಂದು ತಿಳಿಯುತ್ತದೆ. 'ಮಾಯೆಯಿಂದ ವಿಷಯಪದಾರ್ಥಗಳನ್ನು ಕಾಣುತ್ತಾನೆ' ಎಂದೂ ಪ್ರಯೋಗವಿದೆ. ಇದರಿಂದಲೂ ಮಾಯೆಯು ಕರಣ ಅಥವಾ ಕಾರಕಾಂತರವೆಂದು ತಿಳಿಯುತ್ತದೆ.

(2) ಕರ್ತೃತ್ವ, ಕರ್ಮತ್ವಗಳನ್ನು ಒಬ್ಬನಲ್ಲಿ ಅಂಗೀಕರಿಸಿದವರು ಕರಣತ್ವ-ಕರ್ತೃತ್ವಗಳನ್ನು ಒಂದೇ ಅಧಿಕರಣದಲ್ಲಿ ಹೇಗೆ ಅಂಗೀಕರಿಸುತ್ತಾರೆ?

(3) ಮನೋವಿಶಿಷ್ಟಚಿತ್ ಕರ್ತೃ; ಶುದ್ಧಚಿತ್ ಕರ್ತೃ ಅಲ್ಲ ಎಂದರೆ, ದೇಹವಿಲ್ಲದ ಚೇತನನು ಯಾಗವನ್ನು ಮಾಡಲಾರ, ಆದ್ದರಿಂದ ದೇಹವಿಶಿಷ್ಟಚೇತನನೇ ಯಾಗಕರ್ತೃ ಎಂದು ಹೇಳಬೇಕು ಎಂದು ಪ್ರತಿಬಂದಿಯು ಏರ್ಪಡುತ್ತದೆ. ಮರಣಾನಂತರ ಆ ದೇಹವು ಇರುವುದಿಲ್ಲವಾದ್ದರಿಂದ ಆತ್ಮನಿಗೆ ಆಗುವ ಸ್ವರ್ಗಭೋಗವು ಆಕಸ್ಮಿಕ ಎಂದಾಗುತ್ತದೆ. ಆದ್ದರಿಂದ ಶುದ್ಧಚಿತ್ ಮಾತ್ರವೇ ಕರ್ತೃ ಎಂದು ಅಂಗೀಕರಿಸಬೇಕು.

**'ಅಧಿಷ್ಠಾನಂ ತಥಾ ಕರ್ತಾ ಕರಣಂ ಚ ಪೃಥಗ್ವಿಧಮ್ ।**
**ವಿವಿಧಾ ಚ ಪೃಥಕ್ ಚೇಷ್ಟಾ ದೈವಂ ಚೈವಾತ್ರ ಪಂಚಮಮ್ ॥'**

**- (ಭಗವದ್ಗೀತಾ, ೧೮-೧೪)**

ಸಮಸ್ತ ಕಾರ್ಯಗಳಲ್ಲೂ ಐದು ಕಾರಣಗಳು ಉಪಯೋಗಿಯಾಗುತ್ತವೆ. ಅಧಿಷ್ಠಾನ, ಕರ್ತಾ, ಅನೇಕ ವಿಧವಾದ ಕರಣ, ವಿವಿಧವಾದ ಅವಾಂತರ ವ್ಯಾಪಾರ, ಅದೃಷ್ಟ. ಇಲ್ಲಿ ಕರ್ತಾ ಎಂದರೆ ಜೀವ ಹಾಗೂ ಪರಮಾತ್ಮ. ಜೀವನು ಪರಾಧೀನಕರ್ತಾ, ಪರಮಾತ್ಮನು ಸ್ವತಂತ್ರ ಕರ್ತಾ.

**ವಿಶಿಷ್ಟಾರ್ಥವಿಮರ್ಶೇಽಭೂದ್ ಯತಶ್ಚಿನ್ಮಾತ್ರಕರ್ತೃತಾ ।**
**ಮುಸಲಾಚ್ಚ ತ್ವಚಂ ಕಶ್ಚಿನ್ ಮೋಚಯೇತ್ ತದ್ವಿಚಕ್ಷಣಃ ॥ ೪೦೯ ॥**

**ಅರ್ಥ**– ವಿಶಿಷ್ಟಾರ್ಥವಿಮರ್ಶೇ=ವಿಶಿಷ್ಟ ಚಿತ್ ಅನ್ನು ವಿಮರ್ಶಿಸಿದಾಗ, ಯತಃ=ಯಾವ ಕಾರಣದಿಂದ, ಚಿನ್ಮಾತ್ರಕರ್ತೃತಾ=ಕೇವಲ ಚಿತ್‌ಗೇ ಕರ್ತೃತ್ವವು, ಅಭೂತ್ ಯತಃ ತತ್= ಸಿದ್ಧವಾದ ಕಾರಣದಿಂದ, ವಿಚಕ್ಷಣಃ= ಕುಶಲನಾದ, ಕಶ್ಚಿತ್=ಒಬ್ಬನು, ಮುಸಲಾತ್= ಒನಕೆಯಿಂದಲೂ, ತ್ವಚಂ=ತೊಗಟೆಯನ್ನು, ಮೋಚಯೇತ್= ಬಿಡಿಸಬಲ್ಲನು.

**ಅನುವಾದ–** ದೇಹ, ಇಂದ್ರಿಯಗಳಿಂದ ಸಹಿತವಾದ ಚಿತ್ ವಿಶಿಷ್ಟಾರ್ಥ. ಇದರ ವಿಮರ್ಶೆಯನ್ನು ಮಾಡಿದಾಗ ಕೇವಲ ಚಿತ್‌ಗೆ ಕರ್ತೃತ್ವವು ಸಿದ್ಧವಾಯಿತು. ಕುಶಲನಾದವನು ಒನಕೆಯಿಂದ ಅದರ ತೊಗಟೆಯನ್ನು ಬೇರ್ಪಡಿಸಬಲ್ಲನು.

**ಭಾವವಿಲಾಸಿನೀ–** ಮಾಯಾಂತಃಕರಣದೇಹಾದೀನಾಂ ಮಾಯಾವಾದ್ಯಭಿಮತವಿಶೇಷಣಾನಾಂ ಕರ್ತೃವ್ಯತಿರಿಕ್ತಕಾರಕಾಂತರತ್ವನಿದರ್ಶನೇನಾಕರ್ತೃತ್ವೋಪಪಾದನಸ್ವಕೌಶಲಂ ಗ್ರಂಥಕಾರಃ ಸ್ವಯಮೇವ ಸ್ತೌತಿ– **ವಿಶಿಷ್ಟಾರ್ಥೇತಿ** ॥ ವಿಮರ್ಶೇ ವಿಚಾರೇ ಯತಶ್ಚಿನ್ಮಾತ್ರಕರ್ತೃತಾ ಅಭೂತ್ । ತತ್ ತಸ್ಮಾದ್ವಿಚಕ್ಷಣಃ ಮುಸಲಾಚ್ಚ ತ್ವಚಂ ಮೋಚಯತ್ । ಅನ್ಯಾಸಾಧ್ಯಮಪಿ ಕಾರ್ಯಂ ಕಸ್ಯಚಿತ್ ಕುಶಲಸ್ಯ ಸಾಧ್ಯಂ ಸ್ಯಾದಿತಿ ಭಾವಃ ॥ ೪೦೯ ॥

**ವಿವರಣೆ–** ಚಿತ್‌ಗೆ ವಿಶೇಷಣವಾದ ಮಾಯಾ, ಮನಸ್ಸು, ದೇಹಗಳು ಕರಣಕಾರಕಗಳು ಎಂದು ಹಿಂದಿನ ಪದ್ಯಗಳಲ್ಲಿ ಪ್ರತಿಪಾದಿಸಲಾಗಿದೆ. ಈ ಪ್ರತಿಪಾದನೆಯಿಂದ ಅವುಗಳು ಕರ್ತೃ ಅಲ್ಲ ಎಂದು ಸಿದ್ಧವಾಗಿದೆ. ಆದ್ದರಿಂದ ಚಿತ್ ಮಾತ್ರವೇ ಕರ್ತೃ ಎಂದು ಸಿದ್ಧವಾಗಿದೆ. ಈ ವಿಶಿಷ್ಟಚಿತ್‌ನ ವಿಮರ್ಶೆಯ ಕೌಶಲವು ಒನಕೆಯಿಂದ ಅದರ ತೊಗಟೆಯನ್ನು ಬೇರ್ಪಡಿಸುವ ಕೌಶಲಕ್ಕೆ ಸಮಾನ. ಬೇರೆಯವರಿಂದ ಮಾಡಲಾಗದ ಕೆಲಸವನ್ನು ಕುಶಲವ್ಯಕ್ತಿಯು ಮಾಡಬಲ್ಲ.

**ಅತೋ ವಿಶಿಷ್ಟಕರ್ತೃತ್ವವಾದಂ ಶಿಷ್ಟಾ ನ ಮೇನಿರೇ ।**
**ಸಹಕಾರ್ಯೇವ ತತ್ರಾಪಿ ಜಡಂ ಕರ್ತಾ ತು ಚೇತನಃ ॥ ೪೧೦ ॥**

**ಅರ್ಥ–** ಅತಃ=ಆದ್ದರಿಂದ, ವಿಶಿಷ್ಟಕರ್ತೃತ್ವವಾದಂ=ವಿಶಿಷ್ಟವೇ ಕರ್ತಾ ಎಂಬ ವಾದವನ್ನು, ಶಿಷ್ಟಾಃ= ಸರಿಯಾದ ಚಿಂತಕರು, ನ ಮೇನಿರೇ=ಸಮ್ಮತಿಸುವುದಿಲ್ಲ. ತತ್ರಾಪಿ= ವಿಶಿಷ್ಟದಲ್ಲೂ, ಜಡಂ=ಜಡವು, ಸಹಕಾರಿ ಏವ = ಕೇವಲ ಸಹಕಾರಿ, ಚೇತನಸ್ತು= ಚೇತನನೇ, ಕರ್ತಾ= ಕರ್ತೃ.

**ಅನುವಾದ–** ಆದ್ದರಿಂದ ದೇಹ-ಇಂದ್ರಿಯ-ಅಂತಃಕರಣವಿಶಿಷ್ಟ ಚೇತನನು ಕರ್ತೃ ಎಂಬ ವಾದವನ್ನು ಶುದ್ಧಚಿಂತಕರು ಒಪ್ಪುವುದಿಲ್ಲ. ವಿಶಿಷ್ಟದಲ್ಲಿರುವ ಜಡಭಾಗವು ಸಹಕಾರಿ. ಚೇತನ ಮಾತ್ರವೇ ಕರ್ತೃ.

**ಭಾವವಿಲಾಸಿನೀ–** ಉಪಸಂಹರತಿ– **ಅತ ಇತಿ** ॥ ಅತಃ ವಿಶೇಷಣಾನಾಂ ಸರ್ವೇಷಾಂ ಕಾರಣಾಂತರೇಷು ಪ್ರವೇಶಾತ್ । ತತ್ರಾಪಿ ವಿಶಿಷ್ಟೇಽಪಿ ಜಡಮುಕ್ತರೀತ್ಯಾ ಸಹಕಾರ್ಯೇವ । ಕರ್ತಾ ತು ಚೇತನ ಏವೇತಿ ಸಂಬಂಧಃ ॥ ೪೧೦ ॥

**ವಿವರಣೆ–** ಈ ವಾದವನ್ನು ಉಪಸಂಹರಿಸುತ್ತಿದ್ದಾರೆ. ವಿಶೇಷಣಗಳಾದ ದೇಹ, ಇಂದ್ರಿಯ, ಅಂತಃಕರಣಾದಿಗಳು ಕಾರಕಾಂತರಗಳಾಗಿವೆ. ಆದ್ದರಿಂದ, ವಿಶಿಷ್ಟವು ಕರ್ತೃ ಎನ್ನುವ ವಾದವನ್ನು

ಜ್ಞಾನಿಗಳು ಸಮ್ಮತಿಸುವುದಿಲ್ಲ. ವಿಶಿಷ್ಟದಲ್ಲಿರುವ ಜಡವು ಕೇವಲ ಸಹಕಾರಿ. ಚೇತನನೇ ಕರ್ತೃ.

**ದ್ವಾವುದ್ದಿಶ್ಯ ಕೃತೇ ಯಾಗೇ ದೇವತಾತ್ವಂ ದ್ವಯೋರಪಿ ।**
**ದ್ವಿದೈವತ್ಯಂ ಹಿ ತತ್ಕರ್ಮ ಸಂಕಲ್ಪೋ ದೇವತೇ ಇತಿ ॥ ೪೧೧ ॥**

**ಅರ್ಥ–** ದ್ವೌ= ಇಬ್ಬರನ್ನು, ಉದ್ದಿಶ್ಯ= ಉದ್ದೇಶಿಸಿ, ಕೃತೇ= ಮಾಡಲ್ಪಟ್ಟ, ಯಾಗೇ= ಯಾಗದಲ್ಲಿ, ದ್ವಯೋರಪಿ= ಇಬ್ಬರಿಗೂ, ದೇವತಾತ್ವಂ= ದೇವತಾಭಾವ. ತತ್ಕರ್ಮ= ಆ ಯಾಗಕರ್ಮವು, ದ್ವಿದೈವತ್ಯಂ= ಎರಡು ದೇವತೆ ಉಳ್ಳದ್ದು, ಹಿ= ಇದು ಪ್ರಸಿದ್ಧ. ದೇವತೇ ಇತಿ= ಇಬ್ಬರು ದೇವತೆಗಳು ಎಂದೇ, ಸಂಕಲ್ಪಃ= ಸಂಕಲ್ಪವು.

**ಅನುವಾದ–** ಇಬ್ಬರನ್ನು ಉದ್ದೇಶಿಸಿ ಮಾಡುವ ಯಾಗದಲ್ಲಿ ಇಬ್ಬರಿಗೂ ದೇವತಾಭಾವವಿರುತ್ತದೆ. ಆ ಯಾಗಕರ್ಮವು ಎರಡು ದೇವತೆವುಳ್ಳದ್ದು ಎಂದು ವೇದಪ್ರಸಿದ್ಧ. ಇಬ್ಬರು ದೇವತೆಗಳು ಎಂದೇ ಯಾಗದ ಸಂಕಲ್ಪ.

**ಭಾವವಿಲಾಸಿನೀ–** ನನ್ವಗ್ನೀಷೋಮಯೋರ್ದೇವತಾತ್ವವತ್ ಕರ್ತೃತ್ವಂ ವ್ಯಾಸಜ್ಯವೃತ್ತಿ ಕುತೋ ನ? ಇತಿ ಚೇತ್, ನ । ಕಾರಕವಿಭಾಗಪ್ರದರ್ಶನೇನ ದೂಷಿತತ್ವಾತ್ । ಅಗ್ನೀಷೋಮಾವುದ್ದಿಶ್ಯ ಕ್ರಿಯಮಾಣಕರ್ಮಣಃ ದ್ವಿದೇವತಾತ್ವಸ್ಯೈವ ತತ್ಕರ್ತೃಭಿರುಚ್ಯಮಾನತ್ವಾದ್ ದೃಷ್ಟಾಂತೋಽಪಿ ನ ಘಟತ ಇತ್ಯಾಹ– **ದ್ವಾವುದ್ದಿಶ್ಯೇತಿ** ॥ ದೇವತೇ ಅಗ್ನೀಷೋಮೌ ದೇವತೇ ॥ ೪೧೧ ॥

**ವಿವರಣೆ–** ಪ್ರಶ್ನೆ : ಅಗ್ನಿಷೋಮೀಯ ಯಾಗದಲ್ಲಿ ಹವಿಸ್ಸನ್ನು ಸ್ವೀಕರಿಸುವ ದೇವತೆಗಳು ಇಬ್ಬರು. ಅಗ್ನಿ ಮತ್ತು ಸೋಮ. ದೇವತಾತ್ವವು ಇಬ್ಬರಲ್ಲಿಯೇ ಇರುತ್ತದೆ. ಪ್ರತಿಯೊಬ್ಬನಲ್ಲಿ ಪ್ರತ್ಯೇಕವಾಗಿ ಇರುವುದಿಲ್ಲ. ಹೀಗೆಯೇ ಕರ್ತೃತ್ವವು ಚಿತ್ ಮತ್ತು ಅಂತಃಕರಣಾದಿಗಳನ್ನು ವ್ಯಾಪಿಸಿಯೇ ಇರಲಿ? ಕೇವಲ ಚಿತ್‌ನಲ್ಲಿ ಇದೆ ಎಂದು ಏಕೆ ಹೇಳಬೇಕು?

ಉತ್ತರ : ಅಗ್ನಿಷೋಮೀಯ ಯಾಗಕ್ಕೆ ಅಗ್ನಿ ಮತ್ತು ಸೋಮರು ಜೊತೆಗೇ ದೇವತೆಗಳು; ಪ್ರತ್ಯೇಕ ಅಲ್ಲ ಎಂದು ವಿಧಿಯು ಇದೆ. ಆದ್ದರಿಂದ ಅಲ್ಲಿ ದೇವತಾತ್ವವು ಉಭಯವ್ಯಾಪಿ.

ಪ್ರಕೃತ, ದೇಹ, ಇಂದ್ರಿಯ, ಅಂತಃಕರಣಗಳು ಜಡಗಳಾದ್ದರಿಂದ, ಅವುಗಳಲ್ಲಿ ಕರ್ತೃತ್ವವು ಸಂಭವಿಸುವುದಿಲ್ಲ.

**ಸಮೂಹಾಲಂಬನಜ್ಞಾನೇ ವಿಷಯತ್ವಂ ಯಥಾ ಪೃಥಕ್ ।**
**ತಥಾ ವಿಶಿಷ್ಟವಿಜ್ಞಾನೇ ವಿಷಯತ್ವಂ ಪೃಥಕ್‌ಪೃಥಕ್ ॥ ೪೧೨ ॥**

**ಅರ್ಥ–** ಸಮೂಹಾಲಂಬನಜ್ಞಾನೇ= ಸಮೂಹವನ್ನು ವಿಷಯೀಕರಿಸುವ ಜ್ಞಾನವು ಬಂದಾಗ, ವಿಷಯತ್ವಂ= ಜ್ಞಾನವಿಷಯದಲ್ಲಿರುವ ವಿಷಯತ್ವವು, ಯಥಾಪೃಥಕ್= ಹೇಗೆ

ಪ್ರತ್ಯೇಕವಾಗಿರುವುದೋ, ತಥಾ= ಹಾಗೆ, ವಿಶಿಷ್ಟವಿಜ್ಞಾನೇ= ವಿಶೇಷಣ ಸಹಿತವಾದ ವಸ್ತುವಿನ ಜ್ಞಾನವು ಉಂಟಾದಾಗ, ವಿಷಯತ್ವಂ= ವಿಷಯಗತವಾದ ವಿಷಯತ್ವವು, ಪೃಥಕ್‌ಪೃಥಕ್= ವಿಶೇಷಣ ಮತ್ತು ವಿಶೇಷ್ಯಗಳಲ್ಲಿ ಪ್ರತ್ಯೇಕವಾಗಿ ಇರುತ್ತದೆ.

**ಅನುವಾದ–** ನಾನಾ ಪದಾರ್ಥಗಳನ್ನು ವಿಷಯೀಕರಿಸುವ ಒಂದು ಜ್ಞಾನವು ಸಮೂಹಾಲಂಬನ ಜ್ಞಾನ. ಸಮೂಹದಲ್ಲಿರುವ ಪ್ರತಿಯೊಂದು ವಸ್ತುವೂ ಪ್ರತ್ಯೇಕವಾಗಿ ಜ್ಞಾನಕ್ಕೆ ವಿಷಯ. ಹೀಗೆಯೇ ವಿಶಿಷ್ಟವಸ್ತುವಿನ ಜ್ಞಾನವು ಬಂದಾಗ, ವಿಶಿಷ್ಟದ ಭಾಗಗಳಾದ ವಿಶೇಷಣ, ವಿಶೇಷ್ಯ ಮತ್ತು ಇವುಗಳ ಸಂಬಂಧಗಳು ಪ್ರತ್ಯೇಕವಾಗಿ ಜ್ಞಾನಕ್ಕೆ ವಿಷಯವಾಗುತ್ತವೆ.

**ಭಾವವಿಲಾಸಿನೀ–** ದೃಶ್ಯತ್ವಂ ವಿಶಿಷ್ಟಸ್ಯೈವ, ನ ವಿಶೇಷ್ಯೇ ಅತೋ ಮಿಥ್ಯಾತ್ವಸಾಧಕದೃಗ್ವಿಷಯತ್ವ-ರೂಪದೃಶ್ಯತ್ವಸ್ಯ ನ ಚಿನ್ಮಾತ್ರೇ ವ್ಯಭಿಚಾರ ಇತಿ ಯನ್ಮಾಯಿಮತಮ್, ತದಪಿ ದೃಗವಿಷಯತ್ವೇ ಅಪ್ರಾಮಾಣಿಕತ್ವಾಖ್ಯದೋಷಾಪತ್ತ್ಯಾ ದೂಷಯತಿ– **ಸಮೂಹೇತಿ** ॥ ದಂಡೀತಿ ವಿಶಿಷ್ಟಜ್ಞಾನೇ ದಂಡದೇವದತ್ತತತ್ಸಂಬಂಧಾನಾಮಪಿ ಪೃಥಕ್ಪೃಥಗ್ವಿಷಯತ್ವದರ್ಶನಾತ್ ॥ ೪೧೨ ॥

**ವಿವರಣೆ–**ಪ್ರಶ್ನೆ: ವಿಶಿಷ್ಟವಸ್ತುವಿನ ಜ್ಞಾನವು ಹುಟ್ಟಿದಾಗ ದೃಶ್ಯತ್ವವು= ಜ್ಞಾನ ವಿಷಯತ್ವವು ವಿಶಿಷ್ಟದಲ್ಲಿ ಮಾತ್ರ ಇರುತ್ತದೆ. ವಿಶೇಷ್ಯದಲ್ಲಿ ಇರುವುದಿಲ್ಲ. ಆದ್ದರಿಂದ, 'ವಿಮತಂ ಮಿಥ್ಯಾ, ದೃಶ್ಯತ್ವಾತ್' ಈ ಪ್ರಯೋಗದಲ್ಲಿ ದೃಶ್ಯತ್ವವು= ಜ್ಞಾನವಿಷಯತ್ವವು ಆತ್ಮನಲ್ಲಿ ಇದೆ; ಅಲ್ಲಿ ಮಿಥ್ಯಾತ್ವವು ಇಲ್ಲ ಎಂದು ಹೇತುವಿಗೆ ವ್ಯಭಿಚಾರವನ್ನು ಹೇಳುವುದು ಸರಿಯಲ್ಲ. ದೃಶ್ಯತ್ವವು ವಿಶೇಷ್ಯವಾದ ಆತ್ಮನಲ್ಲಿ ಇಲ್ಲವಾದ್ದರಿಂದ. ಅದು ದೇಹ-ಇಂದ್ರಿಯ-ಅಂತಃಕರಣ ವಿಶಿಷ್ಟ ಆತ್ಮನಲ್ಲಿ ಮಾತ್ರ ಇದೆ?

ಉತ್ತರ : ವಿಶಿಷ್ಟದ ಜ್ಞಾನವು ಹುಟ್ಟಿದಾಗ, ಜ್ಞಾನವಿಷಯತ್ವವು, ವಿಶೇಷ್ಯ, ವಿಶೇಷಣ ಮತ್ತು ಅವುಗಳ ಸಂಬಂಧದಲ್ಲಿ ಪ್ರತ್ಯೇಕವಾಗಿ ಇರುತ್ತದೆ. ಹೀಗಿರದಿದ್ದರೆ ವಿಶೇಷ್ಯವಾದ ಆತ್ಮನ ಜ್ಞಾನವೇ ಇಲ್ಲದಂತಾಗಿ ಅದು ಅಸತ್ ಆಗುವ ಪ್ರಸಂಗವುಂಟಾಗುತ್ತದೆ.

ವ್ಯಾಸಜ್ಯವೃತ್ತಿಧರ್ಮೋಽಯಂ ನಹಿ ದ್ವಿತ್ವಪೃಥಕ್ತ್ವವತ್ ॥ ೪೧೩ ॥

**ಅರ್ಥ–** ದ್ವಿತ್ವ ಪೃಥಕ್ತ್ವವತ್= ದ್ವಿತ್ವ ಮತ್ತು ಪೃಥಕ್ತ್ವಗಳಂತೆ, ಅಯಂ= ಈ ವಿಷಯತ್ವವು, ನಹಿ ವ್ಯಾಸಜ್ಯವೃತ್ತಿ ಧರ್ಮಃ= ವ್ಯಾಸವೃತ್ತಿಧರ್ಮವಲ್ಲ.

**ಅನುವಾದ–** ಈ ವಿಷಯತ್ವವು ದ್ವಿತ್ವ-ಪೃಥಕ್ತ್ವಗಳಂತೆ ವ್ಯಾಸಜ್ಯವೃತ್ತಿಧರ್ಮವಲ್ಲ.

**ಭಾವವಿಲಾಸಿನೀ–** ಅಯಂ ವಿಷಯತ್ವರೂಪಧರ್ಮಃ । ದ್ವಿತ್ವೇತಿ ಸ್ವಮತರೀತ್ಯಾ ಪೃಥಕ್ತ್ವೇತಿ ಪರರೀತ್ಯೋಕ್ತಮಿತಿ ದ್ರಷ್ಟವ್ಯಮ್ । ಅನ್ಯಥಾ ವಿಶೇಷ್ಯವದ್ ವಿಶೇಷಣಸ್ಯಾಪಿ ದೃಶ್ಯತ್ವಾಭಾವೇನ ನ ಕ್ವಾಪಿ ವಿಶೇಷಣಸ್ಯ ಮಿಥ್ಯಾತ್ವಮಿತಿ ಭಾವಃ । ಯದಿಚ ದಂಡಾದೇರ್ವಿಶೇಷಣಸ್ಯ ಪೃಥಕ್ಕ್ರೀತ್ಯಾ

ದೃಶ್ಯತ್ವಮ್, ತರ್ಹಿ ಬ್ರಹ್ಮವಿಶಿಷ್ಟಪ್ರತೀತಾವಪೀದಂ ವಿಶೇಷ್ಯಮಿದಂ ವಿಶೇಷಣಮಿತಿ ಶಿಷ್ಯಂ ಪ್ರತಿ ಬೋಧನಸಮಯೇ ಬ್ರಹ್ಮಚಿತೋಽಪಿ ಪೃಥಕ್ಪ್ರತೀತ್ಯಾ ದೃಶ್ಯತ್ವಮಿತಿ ಸಮಮ್ । ಕಿಂಚ ಯಯಾ ಯುಕ್ತ್ಯಾ ವಿಶೇಷ್ಯಂ ದೃಶ್ಯತ್ವಾದ್ ಬಹಿಷ್ಕರೋಷಿ ತಯೈವ ಯುಕ್ತ್ಯಾ ಸಾಧಿಷ್ಠಾನತ್ವನಿಯತ-ಭ್ರಮೇಽಪಿ ವಿಶೇಷಣಸ್ಯ ದೃಶ್ಯತ್ವಾದ್ ಬಹಿಷ್ಕಾರಸಂಭವೇನ ದೃಷ್ಟಾಂತಸ್ಯ ಸಾಧನವೈಕಲ್ಯಾ-ಪರಿಹಾರಾತ್ । ವಸ್ತ್ರಪಿಹಿತದೇವದತ್ತಾನುಲ್ಲೇಖೇ ಸತಿ ವಿಶಿಷ್ಟಪ್ರತೀತ್ಯದರ್ಶನೇನ ತ್ರಿತಯೋಲ್ಲೇಖಸ್ಯಾಪ್ಯಾವಶ್ಯಕತ್ವಾತ್ । ಉಲ್ಲೇಖ್ಯತ್ವಾತಿರಿಕ್ತವಿಷಯತ್ವಾಭಾವಾಚ್ಚ । ಅಖಂಡಾರ್ಥವಾದಿನಾ ತ್ವಯಾ ವೇದಾಂತಾನಾಂ ಬ್ರಹ್ಮಚಿನ್ಮಾತ್ರವಿಷಯಕನಿರ್ವಿಕಲ್ಪಕ-ಪ್ರಮಾಜನಕತ್ವಾಂಗೀಕಾರೇಣ ಚಿನ್ಮಾತ್ರೇ ವ್ಯಭಿಚಾರಸ್ಯ ವಜ್ರಲೇಪಾಯಿತತ್ವಾತ್ ॥ ೪೧೩ ॥

**ವಿವರಣೆ–** ಎರಡು ಅಥವಾ ಹೆಚ್ಚು ವಸ್ತುಗಳಲ್ಲಿ ವ್ಯಾಪಿಸಿ ಇರುವ, ಒಂದೊಂದರಲ್ಲಿ ಇರದ ಧರ್ಮ. ಉದಾ : ದ್ವಿತ್ವ, ತ್ರಿತ್ವ. ಇವುಗಳು ಒಂದು ವಸ್ತುವಿನಲ್ಲಿ ಇರುವುದಿಲ್ಲ. ಎರಡು ಮೂರು ವಸ್ತುಗಳನ್ನು ವ್ಯಾಪಿಸಿ ಇವೆ.

**ಕೇವಲಸ್ಯ ಹ್ಯಕರ್ತೃತ್ವೇ ಕಿಂ ನಶ್ಛಿನ್ನಂ ಹರಿಶ್ಚ ನಃ ।**
**ಕಾಲಪ್ರಕೃತಿಕರ್ಮಾದ್ಯೈಃ ಸಹೈವ ಕುರುತೇ ಜಗತ್ ॥ ೪೧೪ ॥**

**ಅರ್ಥ–** ಕೇವಲಸ್ಯ= ದೇಹ-ಇಂದ್ರಿಯ ಅಂತಃಕರಣಸಹಿತನಲ್ಲದ ಆತ್ಮನಿಗೆ, ಅಕರ್ತೃತ್ವೇ= ಕರ್ತೃತ್ವವಿಲ್ಲದಿದ್ದರೆ, ನಃ= ನಮಗೆ, ಕಿಂ ಛಿನ್ನಂ= ಏನು ಹಾನಿ? ನಃ= ನಮ್ಮ, ಹರಿಃ= ಹರಿಯು, ಕಾಲಪ್ರಕೃತಿಕರ್ಮಾದ್ಯೈಃ ಸಹ ಏವ= ಕಾಲ-ಪ್ರಕೃತಿ-ಕರ್ಮ ಮೊದಲಾದವುಗಳ ಸಹಕಾರದಿಂದಲೇ, ಜಗತ್= ಪ್ರಪಂಚವನ್ನು, ಕುರುತೇ= ಸೃಷ್ಟಿಸುತ್ತಾನೆ.

**ಅನುವಾದ–** ದೇಹ-ಇಂದ್ರಿಯ-ಅಂತಃಕರಣ ಸಹಿತನಲ್ಲದ ಆತ್ಮನಿಗೆ ಕರ್ತೃತ್ವವಿಲ್ಲ ಎಂದರೂ ನಮಗೆ ಏನೂ ಹಾನಿ ಇಲ್ಲ. ಕಾಲ-ಪ್ರಕೃತಿ-ಜೀವಾತ್ಮಗಳ ಕರ್ಮ ಇತ್ಯಾದಿಗಳ ಸಹಕಾರದಿಂದಲೇ ನಮ್ಮ ಶ್ರೀಹರಿಯು ಪ್ರಪಂಚವನ್ನು ಸೃಷ್ಟಿಸುತ್ತಾನೆ.

**ಭಾವವಿಲಾಸಿನೀ–** ಯುಕ್ತಿಯುಕ್ತತ್ವಾದ್ ವಿಶೇಷ್ಯಸ್ಯೈವ ಕರ್ತೃತ್ವಮುಪಪಾದಿತಮ್ । ಕಾರಕಾಂತರಸಹಕಾರಸ್ತು ಕರ್ತುರ್ಭಗವತೋಽಪ್ಯಸ್ತೀತ್ಯಾಹ– **ಕೇವಲಸ್ಯೇತಿ** ॥ ಕೇವಸ್ಯ ಕಾರಕಾಂತರಾಸಹಕೃತಸ್ಯ । ಕಾಲಪ್ರಕೃತಿವಿಶಿಷ್ಟಸ್ಯ ಹರೇಃ ಕರ್ತೃತ್ವಮಸ್ತ್ವಿತಿ ಭಾವಃ ॥ ೪೧೪ ॥

**ವಿವರಣೆ–** ಅಂತಃಕರಣಾದಿಗಳ ಸಹಕಾರವಿಲ್ಲದ ಆತ್ಮನಿಗೆ ಕರ್ತೃತ್ವವಿಲ್ಲ ಎಂದರೂ ತತ್ವವಾದಿಗಳ ಸಿದ್ಧಾಂತಕ್ಕೆ ಏನೂ ಹಾನಿಯಿಲ್ಲ. ಶ್ರೀಹರಿಯು ಕಾಲ-ಪ್ರಕೃತಿ- ಜೀವಾತ್ಮಗಳ ಪೂರ್ವಕರ್ಮ ಇವುಗಳ ಸಹಕಾರದಿಂದಲೇ ಸೃಷ್ಟಿಯನ್ನು ಮಾಡುತ್ತಾನೆ.

**ದೇಹಾಂತಃಕರಣಾದ್ಯೇವ ಕರ್ತೃತ್ವೇ ಘಟಕಂ ಯದಿ ।**
**ಆನಂದಮಾತ್ರಕರಣದೇಹಾದೇರಸ್ತು ಕರ್ತೃತಾ ॥ ೪೧೫ ॥**

**ಅರ್ಥ–** ದೇಹಾಂತಃಕರಣಾದಿ ಏವ= ದೇಹ, ಅಂತಃಕರಣ ಮೊದಲಾದವುಗಳೇ, ಕರ್ತೃತ್ವೇ= ಆತ್ಮನ ಕರ್ತೃತ್ವಕ್ಕೆ, ಯದಿ ಘಟಕಂ= ಸಹಕಾರಿಯಾದರೆ, ಆನಂದಮಾತ್ರಂ= ಆನಂದ ಸ್ವರೂಪದ, ಕರಣದೇಹಾದೇಃ= ಅಂತಃಕರಣ, ದೇಹ ಇತ್ಯಾದಿಗಳನ್ನು ಹೊಂದಿದ ಶ್ರೀಹರಿಗೆ, ಕರ್ತೃತಾ= ಕರ್ತೃತ್ವವು, ಅಸ್ತು= ಇರಲಿ.

**ಅನುವಾದ– ದೇಹ, ಅಂತಃಕರಣ ಮೊದಲಾದವು ಮಾತ್ರ ಆತ್ಮನಿಗೆ ಕರ್ತೃತ್ವವನ್ನು ಉಂಟುಮಾಡುತ್ತವೆ (ಕಾಲ, ಪ್ರಕೃತಿ, ಕರ್ಮಗಳು ಅಲ್ಲ) ಎಂದರೆ, ಶ್ರೀಹರಿಗೆ ಆನಂದಸ್ವರೂಪದ ಅಂತಃಕರಣ, ದೇಹ ಮೊದಲಾದವುಗಳು ಇವೆ; ಇವುಗಳ ಸಹಕಾರದಿಂದಲೇ ಶ್ರೀಹರಿಗೆ ಕರ್ತೃತ್ವವು ಇರಲಿ.**

**ಭಾವವಿಲಾಸಿನೀ– ಶಂಕತೇ– ದೇಹೇತಿ ॥ ಪರಿಹರತಿ– ಆನಂದಮಾತ್ರೇತಿ ॥ ಆನಂದಮಾತ್ರಾಃ ಕರಣದೇಹಾದಯೋ ಯಸ್ಯೇತಿ ವಿಗ್ರಹಃ ॥ ೪೧೫ ॥**

**ವಿವರಣೆ–** ಪ್ರಶ್ನೆ : ಕಾಲ-ಪ್ರಕೃತಿ-ಕರ್ಮಗಳು ಆತ್ಮನ ಕರ್ತೃತ್ವಕ್ಕೆ ಪ್ರಯೋಜಕವಲ್ಲ. ಅಂತಃಕರಣ, ದೇಹ, ಇಂದ್ರಿಯಗಳೇ ಪ್ರಯೋಜಕ. ಶ್ರೀಹರಿಗೆ ಇವು ಇಲ್ಲ. ಆದ್ದರಿಂದ ಅವನಿಗೆ ಕರ್ತೃತ್ವವಿಲ್ಲ?

ಉತ್ತರ : ಶ್ರೀಹರಿಗೆ ಆನಂದರೂಪವಾದ ದೇಹ, ಅಂತಃಕರಣ, ಇಂದ್ರಿಯಗಳು ಇವೆ. ಇವುಗಳ ಸಹಕಾರದಿಂದ ಅವನಿಗೆ ಕರ್ತೃತ್ವವು ಉಪಪನ್ನವಾಗುತ್ತದೆ.

**ವಿದಿತೋಽಸಿ ಭವಾನ್ ಸಾಕ್ಷಾತ್ ಪುರುಷಃ ಪ್ರಕೃತೇಃ ಪರಃ ।**
**ಕೇವಲಾನುಭವಾನಂದಸ್ವರೂಪಃ ಸರ್ವಬುದ್ಧಿದೃಕ್ ॥**
**ಇತಿ ಭಾಗವತೇ ಪ್ರೋಕ್ತೇಃ ಕಾ ನೋ ಹಾನಿರತೋ ವದ ॥ ೪೧೬ ॥**

**ಅರ್ಥ–** ವಿದಿತೋಽಸಿ ಭವಾನ್ ಸಾಕ್ಷಾತ್ ಪುರುಷಃ ಪ್ರಕೃತೇ ಪರಃ । ಕೇವಲಾನುಭವಾನಂದ ಸ್ವರೂಪಸ್ಸರ್ವಬುದ್ಧಿದೃಕ್' ಇತಿ= 'ವಿದಿತೋಽಸಿ.... ಸರ್ವ-ಬುದ್ಧಿದೃಕ್' ಎಂದು ಭಾಗವತೇ= ಭಾಗವತ ಪುರಾಣದಲ್ಲಿ, ಪ್ರೋಕ್ತೇಃ= ಹೇಳಿರುವುದರಿಂದ, ಅತಃ= ಆದರಿಂದ= ದೇಹ, ಇಂದ್ರಿಯ, ಅಂತಃಕರಣಗಳೇ ಆತ್ಮನ ಕರ್ತೃತ್ವಕ್ಕೆ ಪ್ರಯೋಜಕಗಳಾದರೂ, ನಃ= ನಮಗೆ, ಕಾ ಹಾನಿಃ= ಏನು ಹಾನಿ? ವದ= ಹೇಳು.

**ಭಾವವಿಲಾಸಿನೀ– ಆನಂದಮಾತ್ರದೇಹತ್ವೇ ಪ್ರಾಗುಕ್ತಭಾಗವತವಾಕ್ಯಂ ಸ್ಮಾರಯನ್ನಿಷ್ಟಾಪತ್ತಿಂ ಕರೋತಿ– ವಿದಿತೋಽಸೀತಿ ॥ ನೋಽಸ್ಮಾಕಂ ತವ ವಾದಿನಾಮ್ ॥ ೪೧೬ ॥**

**ವಿವರಣೆ–**(1) ಭವಾನ್= ದೀಪ್ತಿಸ್ವಾಮಿತ್ವ ಸ್ವಾತಂತ್ರ್ಯಾದ್ಯನಂತ ಕಲ್ಯಾಣಗುಣಗಳುಳ್ಳವನು ಸಾಕ್ಷಾತ್= ಮುಖ್ಯ ಅರ್ಥದಲ್ಲಿ, ಪುರುಷಃ= ಪೂರ್ಣ, ಪ್ರಕೃತೇಃ ಪರಃ= ಪ್ರಕೃತಿಯಿಂದಲೂ ದೂರವಿರುವವನು, ಕೇವಲಾನುಭವಾನಂದಸ್ವರೂಪಃ= ಶುದ್ಧಜ್ಞಾನಾನಂದ ಸ್ವರೂಪ,

ಸರ್ವಬುದ್ಧಿದೃಕ್= ಎಲ್ಲರ ಬುದ್ಧಿಯನ್ನು ನೋಡುವವನು ಇತಿ= ಎಂದು, ವಿದಿತಃ ಅಸಿ= ತಿಳಿಯಲ್ಪಟ್ಟಿರುವಿ.

(2) ಈ ಭಾಗವತ ವಚನವು ಈಶನಿಗೆ ಶುದ್ಧಜ್ಞಾನ, ಆನಂದಗಳೇ ಸ್ವರೂಪ ಎಂದು ತಿಳಿಸುತ್ತಿದೆ. ಇದರಿಂದ ಅವನ ದೇಹ-ಇಂದ್ರಿಯ-ಅಂತಃಕರಣಗಳೂ ಅವನ ಸ್ವರೂಪ ಎಂದು ತಿಳಿಯುತ್ತದೆ. ಆದ್ದರಿಂದ ಈಶನಿಗೆ ಕರ್ತೃತ್ವವನ್ನು ಅಂಗೀಕರಿಸುವ ನಮಗೆ ಏನೂ ಹಾನಿಯಿಲ್ಲ.

(3) ಭವಾನ್ ವಿದಿತೋಽಸಿ' - ಈ ಪ್ರಯೋಗ ಅಪಾಣಿನೀಯ? ಪಾಣಿನೀಯವಲ್ಲದ ಪ್ರಯೋಗಗಳು ವೇದ. ಮಹಾಭಾರತ-ಪುರಾಣಗಳಲ್ಲಿ ವಿಪುಲವಾಗಿವೆ. ಈ ಶ್ಲೋಕದ ಸತ್ಯಧರ್ಮೀಯವ್ಯಾಖ್ಯಾನವನ್ನು ನೋಡಿ.

(4) ಭ ಅಥವಾ ಭಾ ಧಾತುಗಳಿಂದ ನಿಷ್ಪನ್ನವಾಗುವ 'ಭ' ಶಬ್ದಕ್ಕೆ ದೀಪ್ತಿ, ಜ್ಞಾನ, ಸ್ವಾತಂತ್ರ್ಯ ಮೊದಲಾದ ಅರ್ಥಗಳಿವೆ. 'ಭವಾನ್' ಪದಕ್ಕೆ ದೀಪ್ತಿಮೊದಲಾದವುಗಳುಳ್ಳವನು ಎಂದು ಅರ್ಥ.

**ಟಿಪ್ಪಣಿ** : ಶ್ರೀಮಧ್ವಾಚಾರ್ಯರು '(೧) ಭಾ ದೀಪ್ತೌ (೨) ಭಾ ಜ್ಞಾನೇ (೩) ಭ ಆಧಾರಭಾವೇ (೪) ಭ ಔದಾರ್ಯೇ (೫) ಭ ಸಂಧಾನೇ (೬) ಭ ಉಪಾದಾನೇ (೭) ಭ ನಿಕಟಭಾವೇ (೮) ಭ ಸೇವ್ಯತ್ವೇ (೯) ಭ ಊರೀಕರಣೇ (೧೦) ಭ ಸಂತತಿಭಾವೇ (೧೧) ಭ ನಾನಾಭಾವೇ (೧೨) ಭ ವೈಲಕ್ಷಣ್ಯೇ (೧೩) ಭ ಆಧಿಕ್ಯೇ (೧೪) ಭ ಸ್ವಾತಂತ್ರ್ಯೇ (೧೫) ಭ ಆನಂದೇ (೧೬) ಭ ಸಂತತವಚನೇ (೧೭) ಭ ಪೂಜ್ಯಭಾವೇ (೧೮) ಭ ವಿಸ್ತಾರೇ (೧೯) ಭ ವಿನಾಶನೇ (೨೦) ಭ ಸ್ವಾಮಿಭಾವೇ (೨೧) ಭ ನಿಶ್ಚಲಭಾವೇ (೨೨) ಭ ಉಗ್ರಭಾವೇ (೨೩) ಭ ಉದ್ದಾನೇ (೨೪) ಭ ಸಮ್ಮೋಹನೇ (೨೫) ಭ ಸಞ್ಚಾರೇ (೨೬) ಭ ವಿದಾರಣೇ (೨೭) ಭ ಆಲೋಚನೆ (೨೮) ಭ ಸುಂದರಭಾವೇ' ಎಂದು ಮಹಾವ್ಯಾಕರಣದ ಧಾತುಪಾಠವನ್ನು ಉಪದೇಶಿಸಿದ್ದಾರೆ. ಭವಾನ್= ಔದಾರ್ಯಸೌಂದರ್ಯಸ್ವಾತಂತ್ರ್ಯ-ಜ್ಞಾನಾನಂದಾದಿ ಅನಂತಗುಣಪರಿಪೂರ್ಣಪ್ರಕಾರ ಎಂಬ ಅರ್ಥವೂ 'ಭವಾನ್' ಪದಕ್ಕೆ ಇದೆ. ಈ ಅರ್ಥದಲ್ಲಿ 'ಭವಾನ್' ಪದವು 'ಅಸಿ'ಗೆ ಅನ್ವಯಿಸುವುದಿಲ್ಲ. ಆದ್ದರಿಂದ ಶ್ಲೋಕದ ಪ್ರಯೋಗವು ಅಪಾಣಿನೀಯವಲ್ಲ. ಈ ಧಾತುಪಾಠವನ್ನು ವ್ಯಾಖ್ಯಾನಕಾರರು ಹೀಗೆ ಸಂಗ್ರಹಿಸಿದ್ದಾರೆ. - 'ದೀಪ್ತೌ ಜ್ಞಾನೇ ಭ ಆಧಾರೇ ಭ ಭ ಔದಾರ್ಯ ಏವ ಚ । ಸಂಧಾನೇ ಭ ಉಪಾದಾನೇ ನಿಕಟತ್ವೇ ಚ ಕಥ್ಯತೇ । ಭ ಸೇವ್ಯತ್ವೇ ಚ ವಿದ್ವದ್ಭಿರೂರೀಕರಣ ಏವ ಚ । ಸಂಪೂರ್ಣತತಿ ಭಾವೇ ಭಾ ನಾನಾಭಾವೇ ಚ ಕಥ್ಯತೇ । ವೈಲಕ್ಷಣ್ಯೇ ತಥಾಽಧಿಕ್ಯೇ ಸ್ವಾತಂತ್ರ್ಯೇ ಭ ಉದೀರ್ಯತೇ । ಭ ಆನಂದೇ ಭ ಸಂಪೂರ್ಣತತವಾದೇ ಚ ಕಥ್ಯತೇ । ಪೂಜ್ಯಭಾವೇ ಭ ವಿಸ್ತಾರೇ ಭ ವಿನಾಶನ ಈರ್ಯತೇ । ಸ್ವಾಮಿತ್ವೇ ನಿಶ್ಚಲೇ ಭಾವೇ ಉಗ್ರೇ ಚೋದ್ದಾನ ಏವ ಚ । ಸಂಮೋಹನೇಽಥ ಸಂಚಾರೇ ಭವಿದಾರಣ ಈರ್ಯತೇ । ಆಲೋಚನೇ ಭ ಸೌಂದರ್ಯ ಇತಿ ಸರ್ವವಿದೀರಿತಮ್ ॥'

**ಯದಿ ದೃಷ್ಟಂ ಜಡಸ್ಯೈವ ಸಹಾಯತ್ವಂ ಗೃಹೇಗೃಹೇ ।**
**ತದಾ ದರಿದ್ರದೇಶಸ್ಥಃ ಸ್ವರ್ಣಕುಂಭಜಲಂ ತ್ಯಜೇತ್ ॥ ೪೧೭ ॥**

**ಅರ್ಥ–** ಗೃಹೇ ಗೃಹೇ= ಮನೆಮನೆಗಳಲ್ಲಿ, ಜಡಸ್ಯ ಏವ= ಜಡಪದಾರ್ಥಕ್ಕೆ, ಸಹಾಯತ್ವಂ= ಚೇತನನ ಕರ್ತೃತ್ವಕ್ಕೆ ಸಹಕಾರಿತ್ವವು, ಯದಿ ದೃಷ್ಟಂ= ನೋಡಲ್ಪಟ್ಟಿದ್ದರೆ, ತದಾ= ಆಗ, ದರಿದ್ರ ದೇಶಸ್ಥಃ= ಬಡವರ ಊರಿನಲ್ಲಿ ವಾಸಿಸುವವನು, ಸ್ವರ್ಣಕುಂಭಜಲಂ= ಸುವರ್ಣ ಕುಂಭದಲ್ಲಿರುವ ನೀರನ್ನು, ತ್ಯಜೇತ್= ಪರಿತ್ಯಾಗ ಮಾಡುವ ಪ್ರಸಂಗವು ಉಂಟಾಗುತ್ತದೆ.

**ಅನುವಾದ–** ಕೆಲಸ ಮಾಡುವವರಿಗೆ ಜಡಪದಾರ್ಥಗಳೇ ಸಹಕಾರಿಯಾಗಿರುವುದು ಮನೆಮನೆಗಳಲ್ಲಿ ಕಂಡುಬಂದಿದೆ. (ಆದ್ದರಿಂದ ಚೇತನಸ್ವರೂಪವೇ ಆದ ದೇಹ ಇತ್ಯಾದಿಗಳು ಕರ್ತೃತ್ವಕ್ಕೆ ಉಪಯೋಗಿಯಲ್ಲ?) ಹೀಗಾದರೆ ಬಡಗ್ರಾಮದಲ್ಲಿ ವಾಸಿಸಿದವನು ಬಂಗಾರದ ಕುಂಭದಲ್ಲಿ ನೋಡಿದ ನೀರನ್ನು ತ್ಯಜಿಸಬೇಕಾಗುತ್ತದೆ.

**ಭಾವವಿಲಾಸಿನೀ–** ಪುನರಪಿ ಶಂಕತೇ– **ಯದಿ ದೃಷ್ಟಮಿತಿ** ॥ ಜಡಸ್ಯ ದೇಹಸ್ಯ ಸಹಾಯತ್ವಂ ಕರ್ತೃತ್ವೋಪಯೋಗಿತ್ವಮ್ । ಸೋಪಹಾಸಮುತ್ತರಮಾಹ– **ತದೇತಿ** ॥ ಸ್ವಗ್ರಾಮೇ ಮೃದ್ಘಟಸ್ಯೈವ ಜಲಾಹರಣೋಪಯೋಗಿತ್ವದರ್ಶನಾತ್ ಸಭಾಗ್ಯಗ್ರಾಮೇ ತತೋಽಪ್ಯುತ್ತಮಸ್ವರ್ಣಘಟೋದಕಂ ತ್ಯಜೇತ್ । ಸಗ್ರಾಮೇ ಅದೃಷ್ಟತ್ವಸ್ಯ ತತ್ರಾಪಿ ಸಾಮ್ಯಾತ್ । ಕಾರ್ಯಸ್ಯ ತತೋಽತಿತರಾಂ ಸಂಭವೇಽಸ್ವಗ್ರಾಮೇ ಅದೃಷ್ಟಿರಪ್ರಯೋಜಿಕಾ ಚೇತ್, ಪ್ರಕೃತೇಽಪಿ ದೀಯತಾಂ ದೃಷ್ಟಿರಿತಿ ಭಾವಃ ॥ ೪೧೭ ॥

**ವಿವರಣೆ–** ಪ್ರಶ್ನೆ : ಪರಮಾತ್ಮನ ಸ್ವರೂಪವೇ ಆದ ದೇಹ ಇಂದ್ರಿಯ ಅಂತಃಕರಣಗಳು ಅವನ ಕರ್ತೃತ್ವಕ್ಕೆ ಸಹಕಾರಿ ಎಂದು ಹೇಳುವುದು ಸರಿಯಲ್ಲ. ಲೋಕದಲ್ಲಿ ಜಡವಸ್ತುಗಳು ಮಾತ್ರ ಕೆಲಸ ಮಾಡುವವರಿಗೆ ಸಹಕಾರಿಯಾಗಿರುವುದು ಕಂಡುಬಂದಿದೆ?

ಉತ್ತರ : ನಾವು ನೋಡಿಲ್ಲದ ವಿದ್ಯಮಾನವು ಇರುವುದೇ ಇಲ್ಲ ಎಂಬ ವಿಚಾರವು ಸರಿಯಲ್ಲ. ಬಡವರ ಗ್ರಾಮದಲ್ಲಿ ಬಂಗಾರದ ಕೊಡದಲ್ಲಿ ತುಂಬಿಸಿರುವ ನೀರನ್ನು ಯಾರೂ ನೋಡಿರುವುದಿಲ್ಲ. ಶ್ರೀಮಂತರ ಮನೆಯಲ್ಲಿ ತುಂಬಿಸಿರುತ್ತಾರೆ. ಬಡವರ ಗ್ರಾಮನಿವಾಸಿಯು ಶ್ರೀಮಂತರ ಮನೆಗೆ ಹೋದಾಗ, ಬಂಗಾರದ ಕೊಡದಲ್ಲಿ ತುಂಬಿಸಿರುವ ನೀರನ್ನು ನೋಡಿ, ಅದು ನೀರು ಅಲ್ಲ ಎಂದು ಹೇಳುತ್ತಾನೆಯೇ? ಹೇಳಿದರೂ ಅವನ ಮಾತು ಸತ್ಯವಲ್ಲ.

ಹಾಗೆಯೇ, ಲೋಕದಲ್ಲಿ ಜಡವಸ್ತುಗಳೇ ಸಹಕಾರಿಗಳಾಗಿ ಕಂಡುಬಂದಿದ್ದರೂ ಪರಮಾತ್ಮನಿಗೆ ಅವನ ಸ್ವರೂಪವೇ ಆದ ದೇಹ-ಇಂದ್ರಿಯ-ಅಂತಃಕರಣಗಳು ಸಹಕಾರಿಯಾಗಲು ಏನೂ ಬಾಧಕವಿಲ್ಲ. ಇವು ಸಹಕಾರಿಗಳು ಎಂದು ಶಾಸ್ತ್ರಗಳು ಹೇಳುತ್ತವೆ.

**ಸುವರ್ಣಗರುಡಸ್ಥಸ್ಯ ಯಾತ್ರಾ ಸ್ವಸ್ಥಾ ಭವೇತ್ ಕಿಲ ।**
**ಸಾಕ್ಷಾದ್ ಗರುಡಕಂಠಸ್ಥಶ್ಚಿತ್ರಂ ಯಾತ್ರಾऽಕ್ಷಮಃ ಕಿಲ ॥ ೪೧೮ ॥**

**ಅರ್ಥ–** ಸುವರ್ಣಗರುಡಸ್ಥಸ್ಯ= ಬಂಗಾರದ ಗರುಡನ ಮೇಲೆ ಕುಳಿತವನ, ಯಾತ್ರಾ= ಸಂಚಾರವು, ಸ್ವಸ್ಥಾ ಭವೇತ್ ಕಿಲ= ಸುಖವಾಗಿ ಆಗುವುದಂತೆ! ಸಾಕ್ಷಾತ್ ಗರುಡಕಂಠಸ್ಥಃ= ನಿಜವಾದ ಗರುಡದ ಮೇಲೆ ಕುಳಿತವನು, ಯಾತ್ರಾಕ್ಷಮಃ ಕಿಲ= ಸಂಚಾರಿಸಲು ಅಸಮರ್ಥನಂತೆ! ಚಿತ್ರಮ್= ವಿಚಿತ್ರ!

**ಅನುವಾದ- (ಭೂತಾವೇಶವುಳ್ಳ) ಬಂಗಾರದ ಕೃತಕ ಗರುಡನ ಮೇಲೆ ಕುಳಿತವನ ಸಂಚಾರವು ಸುಖವಾಗಿ ಆಗುತ್ತದೆಯಂತೆ! ನಿಜವಾದ ಗರುಡನ ಮೇಲೆ ಕುಳಿತವನಿಗೆ ಯಾತ್ರೆಯೇ ಆಗುವುದಿಲ್ಲವಂತೆ! ಏನು ವಿಚಿತ್ರ!**

**ಭಾವವಿಲಾಸಿನೀ–** ತದೇವೋಪಪಾದಯತಿ– **ಸುವರ್ಣೇತಿ** ॥ ಸ್ವಸ್ಥಾ ಭವೇತ್ । ಚೇತನ-ಭೂತಾವೇಶಾದಿನಾ । ಯಾತ್ರಾಯಾಮಕ್ಷಮಃ ಯಥಾ ಜಡಸ್ಯ ಗರುಡಾಕಾರಸ್ಯ ಚೇತನಾನು-ಗ್ರಹಮಾತ್ರೇಣ ಕಾರ್ಯಕಾರಿತ್ವೇ ಸಾಕ್ಷಾಚ್ಚೇತನಗರುಡಸ್ಯ ಸುತರಾಂ ಕಾರ್ಯಕಾರಿತ್ವಮ್, ತಥಾ ಜಡದೇಹಾತ್ ಚಿದಾತ್ಮಕದೇಹಸ್ಯ ಕಾರ್ಯಕಾರಿತ್ವಂ ಕೈಮುತ್ಯಸಿದ್ಧಮಿತಿ ಭಾವಃ ॥ ೪೧೮ ॥

**ವಿವರಣೆ–** ಜಡದೇಹಾದಿಗಳ ಸಹಕಾರವುಳ್ಳ ಆತ್ಮನಿಗೆ ಕರ್ತೃತ್ವವು ಉಪಪನ್ನ. ಸ್ವರೂಪ ದೇಹಾದಿಗಳ ಸಹಕಾರವಿದ್ದವನಿಗೆ ಕರ್ತೃತ್ವವು ಉಪಪನ್ನವಲ್ಲ ಎಂಬ ವಿಚಾರವು ಶ್ಲೋಕದಲ್ಲಿ ಹೇಳಿರುವ ವಿಚಾರದಷ್ಟೇ ಅಸಂಗತ.

**ಯದಾ ಹಿ ರೂಪನಿಷ್ಪತ್ತಿರ್ಮುಕ್ತೌ ಜೀವಸ್ಯ ಜಾಯತೇ ।**
**ನಹಿ ತತ್ ಪ್ರಾಕೃತಂ ರೂಪಂ ಸ್ವೇನೇತ್ಯಸ್ಯ ವಿರೋಧತಃ ॥ ೪೧೯ ॥**

**ಅರ್ಥ–** ಜೀವಸ್ಯ= ಜೀವನಿಗೆ, ಮುಕ್ತೌ= ಮುಕ್ತಿ ದೆಶೆಯಲ್ಲಿ, ಯದಾ ಹಿ= ಯಾವಾಗ, ರೂಪನಿಷ್ಪತ್ತಿಃ= ರೂಪದ ಅಭಿವ್ಯಕ್ತಿಯು, ಜಾಯತೇ= ಆಗುವುದೋ, ತದ್‌ರೂಪಂ= ಆ ರೂಪವು, ನಹಿ ಪ್ರಾಕೃತಂ= ಪ್ರಾಕೃತವಲ್ಲ. 'ಸ್ವೇನ' ಇತ್ಯಸ್ಯ ವಿರೋಧತಃ= 'ಸ್ವೇನ...' ಎಂಬ ಶ್ರುತಿಯ ವಿರೋಧವಿರುವುದರಿಂದ.

**ಅನುವಾದ– ಮುಕ್ತಜೀವನಿಗೆ ಸ್ವರೂಪದ ಅಭಿವ್ಯಕ್ತಿಯಾಗುತ್ತದೆ. ಈ ರೂಪವು ಪ್ರಾಕೃತವಲ್ಲ (ಪರಂಜ್ಯೋತಿರುಪಸಂಪದ್ಯ) ಸ್ವೇನ (ರೂಪೇಣ ಅಭಿನಿಷ್ಪದ್ಯತೇ) ಎಂಬ ಶ್ರುತಿಯ ವಿರೋಧವಿರುವುದರಿಂದ.**

**ಭಾವವಿಲಾಸಿನೀ–** ಚಿದಾತ್ಮಕದೇಹಸ್ಯ ಕಾರ್ಯಕಾರಿತ್ವಾನಂಗೀಕಾರೇ ಬಾಧಕಮಾಹ– **ಯದಾ ಹೀತಿ** ॥ ನಿಷ್ಪತ್ತಿಃ ಪರಂ ಜ್ಯೋತಿರುಪಸಂಪದ್ಯ ಸ್ವೇನ ರೂಪೇಣಾಭಿನಿಷ್ಪದ್ಯತೇ' ಸ ತತ್ರ ಪರ್ಯೇತಿ

ಜಕ್ಷನ್ ಕ್ರೀಡನ್ ರಮಮಾಣಃ ಸ್ತ್ರೀಭಿರ್ವಾ ಯಾನೈರ್ವಾ' ಇತಿ ಶ್ರುತ್ಯುಕ್ತಾಭಿವ್ಯಕ್ತಿಃ। ತತ್ ಶ್ರುತ್ಯುಕ್ತಂ ರೂಪಮ್ । ಸ್ವೇನೇತ್ಯಸ್ಯ ಬಾಹ್ಯದೇಹವ್ಯಾವರ್ತಕವಿಶೇಷಣಸ್ಯ । ಸ್ವಸ್ವರೂಪಭೂತೇನೇತಿ ಹಿ ತಸ್ಯಾರ್ಥಃ। ಬಾಹ್ಯಸಕಲದೇಹನಿವೃತ್ತಿರೂಪೇ ಮೋಕ್ಷೇ ಕಥ್ಯಮಾನಂ ಸ್ವತ್ವಮಿದಮೇವ ನಾನ್ಯದಿತಿ ಭಾವಃ ॥ ೪೧೯ ॥

**ವಿವರಣೆ–** 'ಸ ತತ್ರ ಪರ್ಯೇತಿ ಜಕ್ಷನ್ ಕ್ರೀಡನ್ ರಮಮಾಣಃ' ಮುಕ್ತರು ಪ್ರಕೃತಿ ಬಂಧರಹಿತರಾಗಿ, ತಮ್ಮ ಸ್ವರೂಪದ ಅಭಿವ್ಯಕ್ತಿಯನ್ನು ಅನುಭವಿಸುತ್ತಾರೆ. ಎಂದು ಛಾಂದೋಗ್ಯೋಪನಿಷತ್ತು ಹೇಳಿದೆ. ''ಪರಂ ಜ್ಯೋತಿರುಪಸಂಪದ್ಯ ಸ್ವೇನ ರೂಪೇಣ ಅಭಿನಿಷ್ಪದ್ಯತೇ'- ಛಾಂದೋಗ್ಯೋಪನಿಷತ್

'ಮುಕ್ತಿರ್ಹಿತ್ವಾಽನ್ಯಥಾರೂಪಂ ಸ್ವರೂಪೇಣ ವ್ಯವಸ್ಥಿತಿಃ' - ಭಾಗವತ ೨.೧೦.೬

ವಿಹಾರವಿದೆ ಎಂದರೆ ಕರ್ತೃತ್ವವಿದೆ ಎಂದೇ ಅರ್ಥ. ಆತ್ಮಸ್ವರೂಪವೇ ಆದ ದೇಹ-ಇಂದ್ರಿಯ-ಅಂತಃಕರಣಗಳೂ ಕರ್ತೃತ್ವಕ್ಕೆ ಉಪಯೋಗಿಯಾಗಿದಿದ್ದರೆ ಮುಕ್ತಿಯೇ ಅನುಪಪನ್ನವಾಗುವ ಪ್ರಸಂಗವೂ, ಶ್ರುತಿ-ಸ್ಮೃತಿಗಳ ವಿರೋಧವೂ ಉಂಟಾಗುತ್ತದೆ.

**ಮುಕ್ತತ್ವವ್ಯಾಹತೇಶ್ಚಾತಃ ಚಿದ್ರೂಪಂ ರೂಪಮುಚ್ಯತೇ ॥ ೪೨೦ ॥**

**ಅರ್ಥ–** ಅತಃ=ಆದ್ದರಿಂದ (ಮುಕ್ತಿದಶೆಯಲ್ಲಿ ಇರುವುದರಿಂದ) ರೂಪಂ= ಆ ರೂಪವು (ಪ್ರಾಕೃತವಾದರೆ) ಮುಕ್ತತ್ವವ್ಯಾಹತೇಃ= ಮುಕ್ತಿವಿರೋಧಿಯಾಗುವುದರಿಂದ, ಚಿದ್ರೂಪಂ= ಜ್ಞಾನಾತ್ಮಕ ದೇಹವೆಂದು, ಉಚ್ಯತೇ= ಹೇಳಲ್ಪಡುತ್ತದೆ.

**ಅನುವಾದ–** ಮುಕ್ತಿದಶೆಯಲ್ಲಿ ಇರುವ ಆತ್ಮನ ರೂಪವು (ಪ್ರಾಕೃತವಾದರೆ) ಆ ದಶೆಯು ಮುಕ್ತಿಯೇ ಆಗುವುದಿಲ್ಲ. ಮುಕ್ತಿಯು ಮುಕ್ತಿಯಾಗದಿರುವ ಪ್ರಸಂಗವು ಉಂಟಾಗುವುದರಿಂದ, ಮುಕ್ತರ ದೇಹವು ಚಿದಾತ್ಮಕ ಎಂದು ಪ್ರಾಜ್ಞರು ಹೇಳುತ್ತಾರೆ.

**ಭಾವವಿಲಾಸಿನೀ–** ಅತಃ ಮೌಕ್ತರೂಪತ್ವಾತ್ । ರೂಪಂ ದೇಹಃ ॥ ೪೨೦ ॥

**ವಿವರಣೆ–** 'ಪರಂಜ್ಯೋತಿರುಪಸಂಪದ್ಯ ಸ್ವೇನ ರೂಪೇಣ ಅಭಿನಿಷ್ಪದ್ಯತೇ'
- ಛಾಂದೋಗ್ಯ ೮:೪:೧

ಈ ಉಪನಿಷತ್‌ನಲ್ಲಿ ಪರಮಾತ್ಮನನ್ನು ಹೊಂದಿ ಸ್ವರೂಪದ ಅಭಿವ್ಯಕ್ತಿಯನ್ನು ಪಡೆಯುತ್ತಾನೆ ಎಂದು ಹೇಳಿಕೆಯಿದೆ. ಮುಕ್ತನಿಗೆ ಮಾತ್ರ ಸ್ವರೂಪದ ಅಭಿವ್ಯಕ್ತಿಯಾಗುತ್ತದೆ. ಅಭಿವ್ಯಕ್ತವಾದ ಸ್ವರೂಪವು ಪ್ರಾಕೃತವಾದರೆ, ಆ ಸ್ಥಿತಿಯು ಮುಕ್ತಿಯೇ ಆಗುವುದಿಲ್ಲ. ಆದ್ದರಿಂದ ಮುಕ್ತದೇಹವು ಚಿದ್ರೂಪವೇ.

**ಯೇನ ಪರ್ಯೇತಿ ಸಸ್ತ್ರೀಕೋ ಯಾನೈರ್ಗಚ್ಛತಿ ಪಶ್ಯತಿ ।**
**ಹಸತಿ ಕ್ರೀಡತೇ ರೂಪಂ ದೇಹೋಽಯಂ ನಾತ್ರ ಸಂಶಯಃ ॥ ೪೨೧ ॥**

**ಅರ್ಥ–** ಯೇನ=ಯಾವ ರೂಪದಿಂದ, ಸಸ್ತ್ರೀಕಃ=ಸ್ತ್ರೀಸಹಿತನಾಗಿ, ಪರ್ಯೇತಿ= ಸಂಚರಿಸುತ್ತಾನೋ, ಯಾನೈಃ=ವಾಹನಗಳಿಂದ, ಗಚ್ಛತಿ=ಹೋಗುತ್ತಾನೋ, ಪಶ್ಯತಿ= ನೋಡುತ್ತಾನೋ, ಹಸತಿ=ನಗುತ್ತಾನೋ, ಕ್ರೀಡತೇ=ರಮಿಸುತ್ತಾನೋ, ಅಯಂ= ಈ ರೂಪವು, ದೇಹಃ=ಶರೀರವೇ, ಅತ್ರ=ಈ ವಿಷಯದಲ್ಲಿ, ನ ಸಂಶಯಃ=ಸಂಶಯವಿಲ್ಲ.

**ಅನುವಾದ–** ಮುಕ್ತನು ಯಾವರೂಪದಿಂದ ಸ್ತ್ರೀಯರೊಡನೆ ಸಂಚರಿಸುತ್ತಾನೋ, ವಾಹನಗಳಲ್ಲಿ ಚಲಿಸುತ್ತಾನೋ, ನೋಡುತ್ತಾನೋ, ನಗುತ್ತಾನೋ, ವಿಹರಿಸುತ್ತಾನೋ ಆ ರೂಪವು ದೇಹವೇ. ಈ ವಿಷಯದಲ್ಲಿ ಸಂಶಯವಿಲ್ಲ.

**ಭಾವವಿಲಾಸಿನೀ–** ನನು ರೂಪಪದಂ ಚೈತನ್ಯಸ್ಯ ಸ್ವರೂಪಪರಮ್ । ನತು ದೇಹಪರಮಿತ್ಯತ ಆಹ– ಯೇನೇತಿ ॥ ಶ್ರುತೌ ಸಃ ನಿಷ್ಪನ್ನರೂಪ ಇತಿ ಹೇತುಗರ್ಭವಿಶೇಷಣೇನ ರೂಪೇಣೈವ ಪರ್ಯಟನಾದೇಃ ಕಥನಾತ್ ಸ್ತ್ರೀರಮಣಾದೇರ್ದೇಹಂ ವಿನಾಽಯೋಗಾಚ್ಚ ರೂಪ- ಪದೋದಿತೋ ದೇಹ ಏವೇತಿ ಭಾವಃ । ನಚೇಯಂ ಮುಕ್ತಿರ್ಜೀವನ್ಮುಕ್ತಿಃ, ಯೇನ ಪ್ರಾಕೃತ- ದೇಹೋಽಪಿ ಸಂಪದ್ಯತೇ । ಸ್ವಸ್ವರೂಪಾಭಿನಿಷ್ಪತ್ತೇರ್ಜೀವನ್ಮುಕ್ತಾವಭಾವಾತ್ ॥ ೪೨೧ ॥

**ವಿವರಣೆ–** ಪ್ರಶ್ನೆ: 'ಪರಂ ಜ್ಯೋತಿಃ' ಎಂಬ ಶ್ರುತಿಯು 'ರೂಪೇಣ' ಶಬ್ದದಿಂದ ಮುಕ್ತನ ದೇಹವನ್ನು ಹೇಳುತ್ತಿಲ್ಲ; ನಿರವಯವನಾದ 'ಚಿತ್'ಅನ್ನು ಮಾತ್ರ ಹೇಳುತ್ತಿದೆ?

ಉತ್ತರ : ಇಲ್ಲ. ಏಕೆಂದರೆ, ಅದೇ ಶ್ರುತಿಯಲ್ಲಿ 'ಜಕ್ಷನ್ ಕ್ರೀಡನ್ ರಮಮಾಣಃ ಸ್ತ್ರೀಭಿರ್ವಾ ಯಾನೈರ್ವಾ' ಈ ವಾಕ್ಯದಿಂದ ಮುಕ್ತನ ವಿಹಾರವನ್ನು ಹೇಳಲಾಗಿದೆ. ಈ ವಿಹಾರವು ದೇಹರಹಿತನಾದ ಚೇತನಕ್ಕೆ ಆಗುವುದಿಲ್ಲ. ಆದ್ದರಿಂದ ಈ ಶ್ರುತಿಯಲ್ಲಿರುವ 'ರೂಪ' ಶಬ್ದವು ಮುಕ್ತನ ದೇಹವನ್ನೇ ಹೇಳುತ್ತಿದೆ. ಆ ದೇಹವು ಸ್ವರೂಪದೇಹವೇ.

ಪ್ರಶ್ನೆ : ಇಲ್ಲಿ ಜೀವನ್ಮುಕ್ತಿಅವಸ್ಥೆಯನ್ನು ಹೇಳಲಾಗಿದೆ. ಜೀವನ್ಮುಕ್ತಿಅವಸ್ಥೆಯಲ್ಲಿ ಪ್ರಾಕೃತ ದೇಹವೂ ಇರಬಹುದು?

ಉತ್ತರ : ಇಲ್ಲ. ಏಕೆಂದರೆ, ಜೀವನ್ಮುಕ್ತಿಅವಸ್ಥೆಯಲ್ಲಿ ಜೀವನಿಗೆ ಸ್ವಸ್ವರೂಪ ಅಭಿವ್ಯಕ್ತಿಯು ಇರುವುದಿಲ್ಲ. ಈ ಶ್ರುತಿಯಲ್ಲಿ 'ಸ್ವೇನ ರೂಪೇಣ ಅಭಿನಿಷ್ಪದ್ಯತೇ' ಎಂದು ಸ್ವಸ್ವರೂಪದ ಅಭಿವ್ಯಕ್ತಿಯನ್ನು ಹೇಳಲಾಗಿದೆ.

**ಫಲಾಧ್ಯಾಯೇ ಹಿ ಸಂಪದ್ಯಾವಿಹಾಯೇತಿ ಯಮಾದರಾತ್ ।**
**ಅಸೂತ್ರಯತ್ ಸೂತ್ರಕಾರಃ ಸ ಮೋಕ್ಷಃ ಪರಮೋ ಧ್ರುವಃ ॥ ೪೨೨ ॥**

**ಅರ್ಥ–** ಸೂತ್ರಕಾರಃ=ಬ್ರಹ್ಮಸೂತ್ರಕಾರರು, ಫಲಾಧ್ಯಾಯೇ=ಫಲಾಧ್ಯಾಯದಲ್ಲಿ, ಸಂಪದ್ಯಾ ವಿಹಾಯೇತಿ='ಸಂಪದ್ಯಾವಿಹಾಯ ಸ್ವೇನ ಶಬ್ದಾತ್' ಎಂಬ ಸೂತ್ರದಲ್ಲಿ, ಯಂ= ಯಾವ ಮೋಕ್ಷವನ್ನು, ಆದರಾತ್=ಆದರದಿಂದ, ಅಸೂತ್ರಯತ್= ಸೂತ್ರಿಸಿರುವರೋ, ಸಃ=ಆ ಮೋಕ್ಷವೇ, ಧ್ರುವಃ=ನಿತ್ಯವಾದುದು, ಪರಮಃ ಮೋಕ್ಷಃ= ಮುಖ್ಯ ಮೋಕ್ಷವು.

**ಅನುವಾದ–** ಬ್ರಹ್ಮಸೂತ್ರಕಾರರು ಫಲಾಧ್ಯಾಯದಲ್ಲಿ 'ಸಂಪದ್ಯಾವಿಹಾಯ ಸ್ವೇನ ಶಬ್ದಾತ್' ೪.೪.೧ ಈ ಸೂತ್ರದಲ್ಲಿ ಯಾವ ಮುಕ್ತಿಯನ್ನು ಆದರದಿಂದ ಸೂತ್ರಿಸಿದ್ದಾರೋ ಅದು ಪರಮಮುಕ್ತಿ.

**ಭಾವವಿಲಾಸಿನೀ–** ಯುಕ್ತ್ಯಂತರಂ ಚಾಹ– **ಫಲಾಧ್ಯಾಯ ಇತಿ** ॥ ಸಂಪದ್ಯಾವಿಹಾಯೇತ್ಯನೇನ 'ಸಂಪದ್ಯಾವಿಹಾಯ ಸ್ವೇನ ಶಬ್ದಾತ್' ಇತಿ ಸೂತ್ರಂ ಗೃಹ್ಣಾತಿ। ಯಂ ಮೋಕ್ಷಂ ಫಲಾಧ್ಯಾಯೇ ಆದರಾದಸೂತ್ರಯದಿತಿ ಯೋಜನಾ । ಸಂಪದ್ಯೇತಿ ಪ್ರಾಪ್ತಿಮುಕ್ತ್ವಾ ಪುನರವಿಹಾಯೇತಿ ತಸ್ಯಾ ಏವ ಸದಾತನತ್ವೇನ ವಿಶೇಷಿತತ್ವಾದಾದರಾದಿತ್ಯುಕ್ತಮ್ । ವೇದಾಂತವಿದ್ಯಾಫಲತ್ವೇನ ಸಾಧನಾಧ್ಯಾಯೇ ಜ್ಞಾನಪಾದೋಕ್ತಾಪರೋಕ್ಷಜ್ಞಾನ್ಯಾಖ್ಯಜೀವನ್ಮುಕ್ತಸ್ಯ ಫಲತಯಾ ಚ ಕಥ್ಯಮಾನೇಯಂ ಮುಕ್ತಿಃ ಕಥಮವಾಂತರಮುಕ್ತಿರಿತಿ ಭಾವಃ ॥ ೪೨೨ ॥

**ವಿವರಣೆ–** 'ಮುಕ್ತಜೀವನು ಪರಮಾತ್ಮನನ್ನು ಹೊಂದಿ ಆ ಪರಮಾತ್ಮನನ್ನು ಬಿಡದೆ, ಅವನ ಜೊತೆಯಲ್ಲಿಯೇ ಯಾವಾಗಲೂ ಇರುತ್ತಾ ತನ್ನಸ್ವರೂಪದೇಹದಿಂದ ತನಗೆ ಇಷ್ಟವಾದ ಭೋಗಗಳನ್ನು ಭೋಗಿಸುತ್ತಾನೆ' ಎಂದು ಬ್ರಹ್ಮಸೂತ್ರಗಳ ಫಲಾಧ್ಯಾಯದಲ್ಲಿ 'ಸಂಪದ್ಯಾವಿಹಾಯ' ಎಂಬ ಸೂತ್ರದಲ್ಲಿ ಹೇಳಲಾಗಿದೆ. ನಿರವಕಾಶಶ್ರುತಿಯೂ ಈ ವಿಷಯವನ್ನೇ ಹೇಳುತ್ತಿದೆ (ಬ್ರ.ಸೂ.ಭಾ.44.1). ಆದ್ದರಿಂದ ಇದು ಜೀವನ್ಮುಕ್ತಿ ಅಲ್ಲ.

ಮೇಲೆ ಉದಾಹರಿಸಲ್ಪಟ್ಟ ಛಾಂದೋಗ್ಯಶ್ರುತಿ ಮತ್ತು ಶ್ರೀಮಧ್ವಾಚಾರ್ಯರ ಬ್ರಹ್ಮಸೂತ್ರಭಾಷ್ಯ 4.4.1 ರಲ್ಲಿ ಉದಾಹರಿಸಲ್ಪಟ್ಟ ಶ್ರುತಿಗಳು, ಅಪರೋಕ್ಷಜ್ಞಾನಾನಂತರ ಲಭಿಸುವ ಫಲವನ್ನು ಹೇಳುತ್ತಿವೆ. ಆದ್ದರಿಂದ ಈ ಮುಕ್ತಿಯು ಪರಮಮುಕ್ತಿಯೇ.

ಯತ್ರ ತ್ವಸ್ಯೇತಿ ವಾಕ್ಯಂ ತು ಪ್ರವೃತ್ತಂ ತರ್ಕಮುದ್ರಯಾ ।
ದೃಢೀಕರೋತೀಮಮರ್ಥಂ ಯತ್ತರ್ಕೋಽಂತವಿಪರ್ಯಯಃ॥ ೪೨೩ ॥

**ಅರ್ಥ–** ತರ್ಕಮುದ್ರಯಾ= ತರ್ಕಕ್ರಮದಂತೆ, ಪ್ರವೃತ್ತಂ= ಪ್ರವೃತ್ತವಾಗಿರುವ, ಯತ್ರ ತ್ವಸ್ಯ ಇತಿ='ಯತ್ರ ತ್ವಸ್ಯ ಸರ್ವಮಾತ್ಮೈವಾಭೂತ್ । ತತ್ ಕೇನ ಕಂ ಪಶ್ಯೇತ್ ಕೇನ ಕಂ ಜಿಘ್ರೇತ್ ॥' ಎಂಬ, ವಾಕ್ಯಂ=ಶ್ರುತಿವಾಕ್ಯವು, ಇಮಮ್ ಅರ್ಥಂ= ಈ ಅರ್ಥವನ್ನು ದೃಢೀಕರೋತಿ= ದೃಢೀಕರಿಸುತ್ತದೆ. ಯತ್= ಏಕೆಂದರೆ, ತರ್ಕಃ= ತರ್ಕವು, ಅಂತವಿಪರ್ಯಯಃ=ಕೊನೆಯಲ್ಲಿ ವಿರುದ್ಧಾರ್ಥದಲ್ಲಿ ಪರ್ಯವಸಾನವುಳ್ಳದ್ದು.

**ಅನುವಾದ–** ತರ್ಕಮಾರ್ಗದಿಂದ ಪ್ರವೃತ್ತವಾಗಿರುವ 'ಯತ್ರ ತ್ವಸ್ಯ ಸರ್ವಮಾತ್ಮೈವಾ ಭೂತ್...' ಈ ಶ್ರುತಿವಾಕ್ಯವು ಈ ವಿಷಯವನ್ನು ದೃಢೀಕರಿಸುತ್ತದೆ. ಏಕೆಂದರೆ ತರ್ಕವು ವಿರುದ್ಧಾರ್ಥದಲ್ಲಿ ಪರ್ಯವಸಾನವುಳ್ಳದ್ದು.

**ಭಾವವಿಲಾಸಿನೀ–** ತರ್ಹಿ ಯತ್ರ ತು ಸರ್ವಮಾತ್ಮೈವಾಭೂತ್ । ತತ್ಕೇನ ಕಂ ಪಶ್ಯೇತ್ ಕೇನ ಕಂ ಜಿಘ್ರೇದ್' ಇತಿ ಶ್ರುತೇಃ ಕಾ ಗತಿರಿತ್ಯತಃ ಸೂತ್ರಕಾರಾಭಿಮತ ದೃಢನಿರೂಢಸ್ಪಷ್ಟೇತರಶ್ರುತಿಬಲಾದಸ್ಪಷ್ಟತಯಾ ಸಾವಕಾಶಾಯಾಸ್ತಸ್ಯಾ ಏತದನುಕೂಲತಯೈವಾರ್ಥಃ ಕಥನೀಯ ಇತಿ ಭಾವೇನಾಹ–ಯತ್ರ ತ್ವಸ್ಯೇತಿ ॥ ತರ್ಕಮುದ್ರಯಾ । ಯದ್ಯಸ್ಯ ಮುಕ್ತಸ್ಯ ಸರ್ವಮಾತ್ಮೈವಾಭೂತ್ । ಮಾಯಾವಾದ್ಯುಕ್ತರೀತ್ಯಾ ಆತ್ಮವ್ಯತಿರಿಕ್ತಂ ಕಿಮಪಿ ನಾಭೂತ್ । ತತ್ ತರ್ಹಿ ಕೇನ ಕರಣೇನ ಕಂ ಪಶ್ಯೇದಿತ್ಯಾದಿರೂಪೇಣ ಪ್ರವೃತ್ತಮಿತ್ಯರ್ಥಃ । ಇಮಂ ಮುಕ್ತಸ್ಯ ದೇಹೇಂದ್ರಿಯಾದಿಸದ್ಭಾವರೂಪಮ್। ಯತ್ ಯಸ್ಮಾತ್ ತರ್ಕ ಅಂತವಿಪರ್ಯಯಃ ಅಂತೇ ಅವಸಾನೇ ವಿಪರ್ಯಯಃ ವಿಪರ್ಯಯೇ ಪರ್ಯವಸಾನಂ ಯಸ್ಯ ಸಃ । ತಸ್ಮಾದ್ ದೃಢೀಕರೋತೀತಿ ಪೂರ್ವೇಣಾನ್ವಯಃ । ತರ್ಹಿ ಕೇನ ಕಂ ಪಶ್ಯೇದ್' ಇತಿ ದರ್ಶನಾಕ್ಷೇಪರೂಪತರ್ಕಸ್ಯ ಪಶ್ಯತಿ ಜಿಘ್ರತಿ ಚ ತೇನೇಂದ್ರಿಯೇಣ ತಂ ವಿಷಯಮ್ । ಅತಃ ಮಾಯಾವಾದ್ಯಭಿಮತಚೈತನ್ಯಮಾತ್ರಾದ್ ವಿಶೇಷಬಲೇನಾತಿರಿಕ್ತಂ ದೇಹೇಂದ್ರಿಯಾದಿಕಮಪ್ಯಸ್ತೀತಿ ವಿಪರ್ಯಯಪರ್ಯವಸಾನಸ್ಯ ತರ್ಕೇಽವಶ್ಯಮಪೇಕ್ಷಿತತ್ವಾತ್ ಪೂರ್ವಶ್ರುತ್ಯುಕ್ತ ದೇಹೇಂದ್ರಿಯಾದಿದೃಢೀಕರಣಾಯೇಯಂ ಶ್ರುತಿಃ ಪ್ರವೃತ್ತೇತಿ ಭಾವಃ ॥ ೪೨೩ ॥

**ವಿವರಣೆ–** 'ಯತ್ರ ತ್ವಸ್ಯ ಸರ್ವಮಾತ್ಮೈವಾಭೂತ್ ತತ್ ಕೇನ ಕಂ ಪಶ್ಯೇತ್,
ತತ್ ಕೇನ ಕಂ ಜಿಘ್ರೇತ್ ತತ್ ಕೇನ ಕಂ ರಸಯೇತ್...'
ಬೃಹದಾರಣ್ಯಕ ೬.೫.೧೫

ಈ ಶ್ರುತಿಯು ತರ್ಕಮಾರ್ಗದಿಂದ ಪ್ರವೃತ್ತವಾಗಿದೆ. ಮುಕ್ತಿಯಲ್ಲಿ ಕೇವಲ ಆತ್ಮವು ಇದ್ದರೆ ಯಾವ ಇಂದ್ರಿಯದಿಂದ ಏನನ್ನು ನೋಡಿಯಾನು, ಯಾವ ಇಂದ್ರಿಯದಿಂದ ಏನನ್ನು ಆಘ್ರಾಣಿಸಿಯಾನು ಇತ್ಯಾದಿ ತರ್ಕವು ಅಲ್ಲಿ ಉಕ್ತವಾಗಿದೆ. ಮುಕ್ತಿಯಲ್ಲಿ ದೇಹ-ಇಂದ್ರಿಯಗಳಿಲ್ಲದೆ ಆತ್ಮಮಾತ್ರವೇ ಇದ್ದರೆ ದರ್ಶನ, ಆಘ್ರಾಣ ಇತ್ಯಾದಿಗಳು ಆಗಲು ಅವಕಾಶವೇ ಇಲ್ಲ. ಇವುಗಳು ಆಗುತ್ತವೆ ಎಂದು ಬೇರೆ ಶ್ರುತಿಗಳು ಹೇಳುತ್ತವೆ (ಉದಾ: ಛಾಂದೋಗ್ಯ) ಆದ್ದರಿಂದ 'ಮುಕ್ತಿಯಲ್ಲಿ ದರ್ಶನಾದಿಗಳು ಇವೆ; ಆದ್ದರಿಂದ ಅಲ್ಲಿ ಕೇವಲ ಆತ್ಮವು ಇಲ್ಲ' ಎಂದು ಹಿಮ್ಮುಖಪರ್ಯಾವಸನಾವಾಗುತ್ತದೆ. ಹಿಮ್ಮುಖ ಪರ್ಯವಸಾನವಾಗುವಂತಹ ಹೇಳಿಕೆಯು ತರ್ಕಮುದ್ರೆಯ ಹೇಳಿಕೆ.

ಆದ್ದರಿಂದ 'ಯತ್ರ ತ್ವಸ್ಯ...' ಇತ್ಯಾದಿ ಬೃಹದಾರಣ್ಯಕಶ್ರುತಿಯು ಮುಕ್ತಾತ್ಮನಿಗೆ ಸ್ವರೂಪ ದೇಹ- ಇಂದ್ರಿಯಗಳು ಇವೆ ಎಂಬ ವಿಷಯಕ್ಕೆ ವಿರೋಧಿಯಲ್ಲ.

**ಅವ್ಯಯೋಕ್ತೇರನೇಕಾರ್ಥೇ ಶಾಸನೇ ತ್ವನುಶಾಸನಾತ್ ।**
**ಸಾಮಾನ್ಯವಚನಂ ಹ್ಯೇತತ್ ಪೂರ್ವವಾಕ್ ತು ವಿಶೇಷವಾಕ್ ॥ ೪೨೪ ॥**

**ಅರ್ಥ–** ಅನೇಕಾರ್ಥೇ= ಅನೇಕ ಅರ್ಥಗಳಲ್ಲಿ, ಅವ್ಯಯೋಕ್ತೇಃ ತು= ಅವ್ಯಯದ ಪ್ರಯೋಗಕ್ಕೆ, ಶಾಸನೇ= ಕೋಶವ್ಯಾಕರಣಾದಿಗಳಲ್ಲಿ, ಅನುಶಾಸನಾತ್= ಅನುಶಾಸನ ಇರುವುದರಿಂದ, ಏತತ್= ಇದು (**ಯತ್ರ ತ್ವಸ್ಯ ಸರ್ವಂ...** ಈ ಬೃಹದಾರಣ್ಯಕ ವಾಕ್ಯವು), ಸಾಮಾನ್ಯವಚನಃ= ಸಾವಕಾಶವಚನವು, ಪೂರ್ವವಾಕ್ ತು= ಹಿಂದಿನ ವಚನವಾದರೂ (ಛಾಂದೋಗ್ಯವಚನ) ವಿಶೇಷವಾಕ್= ನಿರವಕಾಶ ವಚನ.

**ಅನುವಾದ–** ಅನೇಕ ಅರ್ಥಗಳಲ್ಲಿ ಅವ್ಯಯಗಳ ಪ್ರಯೋಗಕ್ಕೆ ಕೋಶ-ವ್ಯಾಕರಣಾದಿಗಳಲ್ಲಿ ಅನುಶಾಸನವಿದೆ. ಆದ್ದರಿಂದ ಬೃಹದಾರಣ್ಯಕ ವಚನವು ಸಾವಕಾಶ. ಛಾಂದೋಗ್ಯವಚನವು ನಿರವಕಾಶ.

**ಭಾವವಿಲಾಸಿನೀ–** ಯತ್ರೇತ್ಯಸ್ಯ ಯದೀತ್ಯರ್ಥಃ ಕಥಂ ಸ್ಯಾತ್? ಇತ್ಯತ ಆಹ– **ಅವ್ಯಯೋಕ್ತೇರಿತಿ॥** ಅನುಶಾಸನಾತ್ । ಅವ್ಯಯಾನಾಮನೇಕಾರ್ಥತ್ವಮಭಿಯುಕ್ತವಚನಾದಿತ್ಯರ್ಥಃ। ಏತತ್ 'ಯತ್ರ ತ್ವಸ್ಯ' ಇತಿ ವಾಕ್ಯಂ ಸಾಮಾನ್ಯವಚನಂ ಸಾವಕಾಶವಾಕ್ಯಮ್ । ಪೂರ್ವಾ ವಾಕ್ 'ಪರಂ ಜ್ಯೋತಿರುಪಸಂಪದ್ಯ' ಇತಿ ವಾಕ್ ವಿಶೇಷವಾಕ್ । ಪರ್ಯಟನಸ್ತ್ರೀರಮಣಾದೇರ್ನಿರವಕಾಶತಯಾ ಕಥನಾತ್ ॥ ೪೨೪ ॥

**ವಿವರಣೆ–** (1) ಪ್ರಶ್ನೆ : ತರ್ಕಮುದ್ರೆಯಿಂದ ಪ್ರವೃತ್ತವಾಗುವ ವಾಕ್ಯದಲ್ಲಿ 'ಯದಿ' ಇರಬೇಕು. 'ಯತ್ರ ತ್ವಸ್ಯ...' ಈ ವಾಕ್ಯದಲ್ಲಿ 'ಯದಿ' ಇಲ್ಲ?

ಉತ್ತರ : 'ಯತ್ರ' - ಈ ಅವ್ಯಯಕ್ಕೆ 'ಯದಿ' ಎಂದು ಅರ್ಥ. ಅವ್ಯಯಗಳನ್ನು ಅನೇಕಅರ್ಥಗಳಲ್ಲಿ ಪ್ರಯೋಗಿಸಲು ಅನುಶಾಸನವಿದೆ. ಆದ್ದರಿಂದ ಈ ವಾಕ್ಯವು ತರ್ಕ ಮುದ್ರೆಯಿಂದ ಪ್ರವೃತ್ತವಾಗಿದೆ ಎಂದು ತಿಳಿಯಲು ಬಾಧಕವಿಲ್ಲ.

(2) ಛಾಂದೋಗ್ಯವಾಕ್ಯದ ವಿರೋಧವಿಲ್ಲದ ಅರ್ಥವನ್ನು ಬೃಹದಾರಣ್ಯಕವಾಕ್ಯಕ್ಕೆ ಹೇಳಲು ಅವಕಾಶವಿದೆ. ಆದ್ದರಿಂದ ಬೃಹದಾರಣ್ಯಕವಾಕ್ಯವು ಸಾವಕಾಶ. ಬೃಹದಾರಣ್ಯಕ ವಾಕ್ಯಕ್ಕೆ 'ಮುಕ್ತಿಯಲ್ಲಿ ಆತ್ಮನಿಗೆ ದೇಹ- ಇಂದ್ರಿಯಗಳು ಇಲ್ಲ' ಎಂದು ಅರ್ಥವಿದ್ದರೆ ಛಾಂದೋಗ್ಯ ವಾಕ್ಯವು ಹೇಳುವ ಮುಕ್ತವಿಹಾರವು ಅನುಪಪನ್ನವಾಗುತ್ತದೆ. ಮುಕ್ತವಿಹಾರವನ್ನು ಹೇಳುವ ವಾಕ್ಯಕ್ಕೆ ಬೇರೆ ಅರ್ಥವನ್ನು ಹೇಳಲು ಅವಕಾಶವಿಲ್ಲ. ಆದ್ದರಿಂದ ಛಾಂದೋಗ್ಯವಾಕ್ಯವು ನಿರವಕಾಶ.

**ಜಂಬುಕೋ ಮೇಷಯುದ್ಧಾರ್ಥೀ ವೃದ್ಧ್ಯರ್ಥೀ ಪೋಷಕೋ ಜನಃ**
**॥ ೪೨೫ ॥**

**ಅರ್ಥ–** ಜಂಬುಕಃ=ನರಿಯು, ಮೇಷಯುದ್ಧಾರ್ಥೀ=ಟಗರುಗಳ ಯುದ್ಧವನ್ನೇ ಅಪೇಕ್ಷಿಸುತ್ತದೆ. ಪೋಷಕಃ ಜನಃ=ಆ ಟಗರುಗಳ ಯಜಮಾನನು, ವೃದ್ಧ್ಯರ್ಥೀ=ಆ ಎರಡು ಟಗರುಗಳ ಅಭಿವೃದ್ಧಿಯನ್ನೇ ಇಚ್ಛಿಸುತ್ತಾನೆ.

**ಭಾವವಿಲಾಸಿನೀ– ಶ್ರುತ್ಯೋರೇಕಸ್ಯಾ ವ್ಯಾವಹಾರಿಕಾರ್ಥತಯಾ ಅಪ್ರಾಮಾಣ್ಯಮ್ । ಅಪರಸ್ಯಾಃ ಪ್ರಾಮಾಣ್ಯಮಿತಿ ವ್ಯಾಖ್ಯಾನಂ ನೀತಿವಿರುದ್ಧಂ ಚೇತ್ಯಾಹ– ಜಂಬುಕ ಇತಿ॥ ಮೇಷಯುದ್ಧಾರ್ಥೀ ಮೇಷಯೋಃ ಪರಸ್ಪರಯುದ್ಧೇ ಸತಿ ತಚ್ಛಿರೋವಿದಾರಣೋತ್ಥರಕ್ತಂ ಪಿಬಾಮೀತ್ಯಾಶಯಾ ಮೇಷಯುದ್ಧಾರ್ಥೀ । ಪೋಷಕಃ ಮೇಷಯೋರುಭಯೋರಪಿ ರಕ್ಷಕಃ ಅವಿಪಾಲಃ ವೃದ್ಧ್ಯರ್ಥೀ ವೃದ್ಧಿಮೇವ ಪ್ರಾರ್ಥಯಮಾನಃ ಸ್ವಪೋಷ್ಯಮೇಷಾಣಾಂ ಮಧ್ಯೇ ಏಕಸ್ಯಾಪಿ ಮರಣಮಸಹಮಾನ ಇತಿ ಯಾವತ್। ಏವಂ ಶ್ರುತಿಘಾತಕಸ್ತ್ವಂ ಯತ್ಕಿಂಚಿಜ್ಜಲ್ಪಸಿ । ಶ್ರುತಿರಕ್ಷಕಸ್ತು ವೇದವ್ಯಾಸಃ ತದ್ಭಕ್ತಾಶ್ಚ ಏಕಾಮಪಿ ಶ್ರುತಿಂ ಹಂತುಂ ನೇಚ್ಛಂತೀತಿ ಭಾವಃ ॥ ೪೨೫ ॥**

**ವಿವರಣೆ–** ಪ್ರಶ್ನೆ : 'ಜಕ್ಷನ್ ಕ್ರೀಡನ್' ಎಂಬ ಶ್ರುತಿಯು ಮುಕ್ತನಿಗೆ ವ್ಯಾವಹಾರಿಕವಾದ (ಮಿಥ್ಯಾ) ಶರೀರೇಂದ್ರಿಯಗಳನ್ನು ಹೇಳುತ್ತಿದೆ. 'ಯತ್ರ ತ್ವಸ್ಯ' ಎಂಬ ಶ್ರುತಿಯು ಪಾರಮಾರ್ಥಿಕವಾದ ದೇಹೇಂದ್ರಿಯಗಳ ಅಭಾವವನ್ನು ಪ್ರತಿಪಾದಿಸುತ್ತಿದೆ. ಹೀಗೆ ಅರ್ಥೈಸಿದಲ್ಲಿ ಶ್ರುತಿಗಳ ವಿರೋಧವು ಪರಿಹಾರವಾಗುತ್ತದೆ?

ಉತ್ತರ : ಎರಡೂ ವಾಕ್ಯಗಳ ಪ್ರಾಮಾಣ್ಯಕ್ಕೆ ಭಂಗಬರದಂತೆ ವ್ಯಾಖ್ಯಾನಿಸಲು ಅವಕಾಶವಿರುವಾಗ ಒಂದು ವಾಕ್ಯವನ್ನು ಅಪ್ರಮಾಣವೆಂದು ಪರಿಗಣಿಸುವುದು ರಕ್ಷಕರ ರೀತಿ ಅಲ್ಲ. ಭಕ್ಷಕರ ರೀತಿ.

ನರಿಯು ಎರಡು ಟಗರುಗಳ ಯುದ್ಧವನ್ನು ಬಯಸುತ್ತದೆ. ಯುದ್ಧದಲ್ಲಿ ಅವುಗಳ ತಲೆಯು ಒಡೆದು ತನಗೆ ಕುಡಿಯಲು/ ತಿನ್ನಲು ರಕ್ತ-ಮಾಂಸಗಳು ದೊರೆಯಲಿ ಎಂದು ಅದರ ದುರಾಸೆ. ಟಗರುಗಳ ಪಾಲಕರು ಅವುಗಳು ಯುದ್ಧ ಮಾಡದಂತೆ ಅವುಗಳನ್ನು ಬಿಡಿಸಲು ಬಯಸುತ್ತಾರೆ.

ಒಂದು ಶ್ರುತಿಯು ಅರ್ಥವು ವ್ಯಾವಹಾರಿಕ ಎಂದು ಹೇಳುವವನು ನರಿ. ಎರಡೂ ಶ್ರುತಿಗಳ ಪ್ರಾಮಾಣ್ಯವನ್ನು ರಕ್ಷಿಸುವವನು ಅವುಗಳ ಪಾಲಕ.

**ನ ಚೇತ್ ಕಾಮಾನ್ನಿತಾ ಕಾಮರೂಪಿತಾ ಗಾನಕರ್ತೃತಾ ।**
**ಭೋಕ್ತೃತಾ ಸರ್ವಕಾಮಾನಾಂ ಕುಪ್ಯಂತ್ಯೇತೇ ವಿಮುಕ್ತಿಗಾಃ ॥ ೪೨೬ ॥**

**ಅರ್ಥ–** ನ ಚೇತ್=ಶ್ರುತಿಗಳಿಗೆ ಪರಸ್ಪರ ವಿರೋಧವಿಲ್ಲದಂತೆ ಅರ್ಥವನ್ನು ಹೇಳದಿದ್ದರೆ, ವಿಮುಕ್ತಿಗಾಃ= ಮುಕ್ತಿಯಲ್ಲಿ ಇರುವ, ಕಾಮಾನ್ನಿತಾ=ತಮಗೆ ಇಷ್ಟವಾದ ಆಹಾರದಪ್ರಾಪ್ತಿ,

ಕಾಮರೂಪಿತಾ=ತಮಗೆ ಬೇಕಾದ ರೂಪಗಳ ಸ್ವೀಕಾರ, ಗಾನಕರ್ತೃತಾ=ತಮಗಿಷ್ಟ ಬಂದಂತೆ ಗಾನ, ಸರ್ವಕಾಮಾನಾಂ=ತಮಗಿಷ್ಟವಾದ ಎಲ್ಲ ಸುಖಗಳ, ಭೋಕ್ತೃತಾ=ಭೋಗ, ಏತೇ=ಈ ಧರ್ಮಗಳು, ಕುಪ್ಯಂತಿ=ಕೋಪಗೊಳ್ಳುತ್ತವೆ.

**ಅನುವಾದ–** ಶ್ರುತಿಗಳಿಗೆ ಪರಸ್ಪರ ವಿರೋಧವಿಲ್ಲದ ಅರ್ಥವನ್ನು ಹೇಳದಿದ್ದರೆ ಮುಕ್ತರಿಗೆ ಇರುತ್ತವೆ ಎಂದು ವರ್ಣಿಸಲ್ಪಟ್ಟಿರುವ ಕಾಮಾನ್ನ, ಕಾಮರೂಪ, ಗಾನ, ಸರ್ವಕಾಮಗಳ ಭೋಗ- ಈ ಧರ್ಮಗಳು, ಎಂದರೆ ಈ ಧರ್ಮಗಳ ಅಭಿಮಾನಿ ದೇವತೆಗಳು ಕೋಪಗೊಳ್ಳುತ್ತಾರೆ.

**ಭಾವವಿಲಾಸಿನೀ–** ನ ಚೇದ್ ಏವಮವಿರುದ್ಧಾರ್ಥೋ ನ ಕಥ್ಯತೇ ಚೇತ್ । 'ಕಾಮಾನ್ನೀ ಕಾಮರೂಪ್ಯನುಸಂಚರನ್', ಏತತ್ ಸಾಮ ಗಾಯನ್ನಾಸ್ತೇ' ಇತಿ ಶ್ರುತೌ ಸೋऽಶ್ನುತೇ ಸರ್ವಾನ್ ಕಾಮಾನ್' ಇತಿ ಶ್ರುತೌ ಚ ಕಥಿತಾಃ ಕಾಮಾನ್ನಿತ್ವಾದಯಶ್ಚತ್ವಾರೋ ಮುಕ್ತ-ವಿಶೇಷಣೀಭೂತಧರ್ಮಾಃ ಜೀವನ್ಮುಕ್ತಾವಸಂಭಾವಿತಾಃ ಕುಪ್ಯಂತಿ ನಿರವಕಾಶಬಹು-ಶ್ರುತ್ಯುಕ್ತಶೋಭನಾರ್ಥಾಪಹಾರಿಣಂ ತ್ವಾಮಂಧೇ ತಮಸಿ ನಿಕ್ಷಿಪಂತೀತ್ಯರ್ಥಃ । ನಿರವಕಾಶ-ಬಹುಶ್ರುತೀನಾಮಪ್ರಾಮಾಣ್ಯಕಥನಾತ್ ಸಾವಕಾಶೈಕಶ್ರುತೇರನುಕೂಲಾರ್ಥಕಥನಮೇವ ನ್ಯಾಯ್ಯಮಿತಿ ಭಾವಃ ॥ ೪೨೬ ॥

**ವಿವರಣೆ–** 'ಕಾಮಾನ್ನೀ ಕಾಮರೂಪ್ಯನುಸಂಚರನ್' 'ಏತತ್ ಸಾಮ ಗಾಯನ್ನಾಸ್ತೇ' 'ಸೋऽಶ್ನುತೇ ಸರ್ವಾನ್ ಕಾಮಾನ್' ಮುಂತಾದ ಶ್ರುತಿಗಳು ಮುಕ್ತಜೀವರಿಗೆ ತಾವು ಇಚ್ಛಿಸಿದ ಆಹಾರಗಳ ಸ್ವೀಕಾರ, ತಮಗೆ ಇಷ್ಟಬಂದ ರೂಪಗಳ ಧಾರಣೆ, ಸಾಮಗಾನಪೂರ್ವಕ ಆನಂದಾನುಭವ, ತಮಗೆ ಇಷ್ಟವಾದ ಎಲ್ಲ ಕಾಮಗಳ ಭೋಗ - ಈ ಧರ್ಮಗಳನ್ನು ಹೇಳುತ್ತವೆ. ಇವು ಜೀವನ್ಮುಕ್ತರ ಧರ್ಮಗಳಲ್ಲ, ಮುಕ್ತರ ಧರ್ಮಗಳೇ. ದೇಹ-ಇಂದ್ರಿಯ ಅಂತಃಕರಣಗಳು ಇಲ್ಲದಿದ್ದರೆ ಈ ಭೋಗಗಳು ಸಂಭವಿಸಲಾರವು. 'ಯತ್ರ ತ್ವಸ್ಯ...' ಈ ಶ್ರುತಿಗೆ ಮತ್ತು ಭೋಗವನ್ನು ಹೇಳುವ ಶ್ರುತಿಗಳಿಗೆ ಪರಸ್ಪರ ವಿರೋಧವಿಲ್ಲದ ಅರ್ಥವಿದ್ದರೆ ಮಾತ್ರ ಯಾವ ಶ್ರುತಿಯೂ ಅಪ್ರಮಾಣವಾಗುವುದಿಲ್ಲ. 'ಯತ್ರ ತ್ವಸ್ಯ...' ಶ್ರುತಿಯು ಮುಕ್ತನಿಗೆ ದೇಹ-ಇಂದ್ರಿಯ- ಅಂತಃಕರಣಗಳಿಲ್ಲ ಎಂದು ಹೇಳುತ್ತದೆ ಎಂದು ವ್ಯಾಖ್ಯಾನಿಸಿದರೆ, ಮುಕ್ತರಿಗೆ ಭೋಗವನ್ನು ಹೇಳುವ ಶ್ರುತಿಗಳು ಅನುಪಪನ್ನವಾಗುತ್ತವೆ. ಶ್ರುತಿಗಳಿಗೆ ವಿರೋಧವೇ ಉಂಟಾಗುತ್ತದೆ. ವಿರೋಧವಿರುವಂತೆ ತೋರಿಸುವ ವ್ಯಾಖ್ಯಾನಕಾರರ ಮೇಲೆ ಶ್ರುತಿಯ ಅಭಿಮಾನಿಗಳು ಕೋಪಿಸಿಕೊಳ್ಳುತ್ತಾರೆ.

ತವ ತ್ವಾಘಾತವಾಕ್ಯಾರ್ಥಾತ್ ಶೂನ್ಯತೈವೇತ್ಯಪಾರ್ಥತಾ ।
ಚಿತ್ರಚಿದ್ರೂಪದೇಹಾಸ್ತಜ್ಜೀವಾಃ ಸರ್ವೇऽಪಿ ಸರ್ವದಾ ॥ ೪೨೭ ॥

**ಅರ್ಥ–** ಆಪಾತವಾಕ್ಯಾರ್ಥಾತ್= ಮೇಲ್ನೋಟಕ್ಕೆ ತೋರುವ ವಾಕ್ಯಾರ್ಥದಿಂದ, ತವ ತು= ನಿನಗೇ, ಶೂನ್ಯತಾ= ಶೂನ್ಯತೆಯು ಉಂಟಾಗುತ್ತದೆ. ಇತಿ ಅಪಾರ್ಥತಾ ಏವ= ಆದ್ದರಿಂದ ಅನರ್ಥವೇ. ತತ್= ಆದ್ದರಿಂದ, ಸರ್ವೇಽಪಿ ಜೀವಾಃ= ಮುಕ್ತಜೀವರೆಲ್ಲರೂ, ಸರ್ವದಾ= ಯಾವಾಗಲೂ, ಚಿತ್ರಚಿದ್ರೂಪದೇಹಾಃ= ಸುಂದರವಾದ ಚೇತನಸ್ವರೂಪ-ದೇಹವುಳ್ಳವರೇ.

**ಅನುವಾದ–** 'ಯತ್ರ ತ್ವಸ್ಯ...' ಇತ್ಯಾದಿ ಶ್ರುತಿವಾಕ್ಯಗಳಿಗೆ ಮೇಲ್ನೋಟಕ್ಕೆ ಕಾಣುವ ಅರ್ಥವನ್ನು ಮಾತ್ರ ಸ್ವೀಕರಿಸಿದರೆ ನಿನಗೆ ಅಸ್ತಿತ್ವವಿಲ್ಲವಾದೀತು. ಆದ್ದರಿಂದ ಮುಕ್ತಜೀವರೆಲ್ಲರೂ ಯಾವಾಗಲೂ ಸುಂದರವಾದ ಚಿದ್ರೂಪದೇಹವುಳ್ಳವರು.

**ಭಾವವಿಲಾಸಿನೀ–** ಪರಕೀಯಾರ್ಥೇ ವಾಕ್ಯಮರ್ಯಾದಯೈವ ಬಾಧಕಂ ಚಾಹ– **ತವ ತ್ವಿತಿ** ॥ ಆಪಾತವಾಕ್ಯಾರ್ಥಾದ್ ಆಪಾತತಃ ಪ್ರತೀತವಾಕ್ಯಾರ್ಥಾತ್ । 'ವಿಜ್ಞಾತಾರಮರೇ ಕೇನ ವಿಜಾನೀಯಾತ್' 'ಯೇನೇದಮಖಿಲಂ ವೇದ ತಂ ಚ ಕೇನ ವಿಜಾನೀಯಾದ್' ಇತಿ ಸ್ವಸ್ವರೂಪಜ್ಞಾನಸ್ಯ ಬ್ರಹ್ಮರೂಪಜ್ಞಾನಸ್ಯ ಚಾಭಾವೋಕ್ತ್ಯಾ ಶೂನ್ಯತೈವ ಭವಿಷ್ಯತೀತ್ಯರ್ಥಃ। ವಿಷಯಾದ್ಯಭಾವಮಂಗೀಕುರ್ವತಾಪಿ ಮಾಯಾವಾದಿನಾ ಸ್ವಸ್ವರೂಪಂ ಬ್ರಹ್ಮರೂಪಂ ಚ ನಾಪಲಪ್ಯತೇ । ತಸ್ಯ ಸ್ವಪ್ರಕಾಶತಯಾ ಜ್ಞಾನಂ ಚಾಂಗೀಕ್ರಿಯತೇ । ತದಪಿ ನ ಸ್ಯಾತ್ । ಅತಸ್ತ್ವಯಾಪ್ಯಸ್ಮದುಕ್ತತರ್ಕ ಮುದ್ರೈವಾಶ್ರಯಣೀಯೇತಿ ಭಾವಃ॥ ತತ್ ತಸ್ಮಾನ್ಮುಕ್ತೌ ಸ್ತ್ರೀಪುರುಷ ದೇಹಾನಾಮಾವಶ್ಯಕತ್ವಾತ್ ॥ ೪೨೭ ॥

**ವಿವರಣೆ–** 'ಯತ್ರ ತ್ವಸ್ಯ' ಎಂಬ ಶ್ರುತಿವಾಕ್ಯಕ್ಕೆ ತರ್ಕಮುದ್ರಯಾ ಅರ್ಥವನ್ನು ಅಂಗೀಕರಿಸದೇ ಆಪಾತತಃ ತೋರುವ ಅರ್ಥವನ್ನೇ ಅಂಗೀಕರಿಸಿ ಮುಕ್ತ ಜೀವರಿಗೆ ದೇಹೇಂದ್ರಿಯಾದಿಗಳು ಇಲ್ಲ ಎಂದು ಹೇಳುವುದಾದರೆ, 'ಯೇನೇದಮಖಿಲಂ ವೇದ ತಂ ಚ ಕೇನ ವಿಜಾನೀಯಾತ್' 'ವಿಜ್ಞಾತಾರಮರೇ ಕೇನ ವಿಜಾನೀಯಾತ್' ... ಈ ಬೃಹದಾರಣ್ಯಕ (6.2) ವಾಕ್ಯಕ್ಕೂ 'ಯಾರಿಂದ ಇದೆಲ್ಲವನ್ನು ತಿಳಿಯುತ್ತಾನೋ ಅವನನ್ನು ಯಾವ ಸಾಧನದಿಂದ ತಿಳಿದಾನು? ತಿಳಿಯುವ ತನ್ನನ್ನು ಯಾವ ಸಾಧನದಿಂದ ತಿಳಿದಾನು?' ಎಂದು ಅರ್ಥವನ್ನು ಹೇಳಬೇಕಾಗುವುದರಿಂದ, ಆತ್ಮಜ್ಞಾನವೇ ಇಲ್ಲ ಎಂದು ಮತ್ತು ಆತ್ಮವೇ ಇಲ್ಲ ಎಂದು ಪರ್ಯವಸಾನವಾಗುತ್ತದೆ. ಇದೇ ಶೂನ್ಯಸ್ಥಿತಿ. ತಾನೇ ಇಲ್ಲವಾಗುವ ಸ್ಥಿತಿಯು ಮಹಾ ಅನರ್ಥ.

ಆದ್ದರಿಂದ 'ಯತ್ರ ತ್ವಸ್ಯ ಸರ್ವಮಾತ್ಮೈವಾಭೂತ್...' ಇತ್ಯಾದಿ ಬೃಹದಾರಣ್ಯಕ ಶ್ರುತಿಯನ್ನು ತರ್ಕಮುದ್ರೆಯ ವಾಕ್ಯ ಎಂದೇ ಪರಿಗಣಿಸಿ ವ್ಯಾಖ್ಯಾನಿಸಬೇಕು.

ಆಗ ಮುಕ್ತಾತ್ಮನಿಗೆ ಆತ್ಮಸ್ವರೂಪವೇ ಆದ ದೇಹ-ಇಂದ್ರಿಯ-ಅಂತಃಕರಣಗಳು ಇವೆ ಎಂದೇ ಸಿದ್ಧವಾಗುತ್ತದೆ.

**ಚಿದ್ರೂಪಾಕಾರಹೇತುತ್ವಾತ್ ಲಿಂಗದೇಹೇಽಪಿ ತತ್ಪದಮ್ ।**
**ಬಂಧೇ ತು ಪ್ರಾಕೃತೋಽಪ್ಯಸ್ತಿ ಮುಕ್ತೌ ಚಿನ್ಮಾತ್ರಕಂ ವಪುಃ ॥ ೪೨೮ ॥**

**ಅರ್ಥ–** ಚಿದ್ರೂಪಾಕಾರಹೇತುತ್ವಾತ್= ಚಿದ್ರೂಪಶರೀರದ ಆಕಾರವು ಲಿಂಗದೇಹದ ಆಕಾರಕ್ಕೆ ಕಾರಣವಾದುದರಿಂದ, ಲಿಂಗದೇಹೇಽಪಿ=ಲಿಂಗಶರೀರದಲ್ಲಿಯೂ (ವಾಚಕವಾಗಿ), ತತ್ಪದಂ=ದೇಹ ಎಂಬ ಪದವು ಇದೆ. ಬಂಧೇ ತು=ಸಂಸಾರಾವಸ್ಥೆಯಲ್ಲಿ, ಪ್ರಾಕೃತೋಽಪಿ= ಪ್ರಾಕೃತವಾದ ಲಿಂಗಶರೀರವೂ ಮತ್ತು ಪ್ರಾಕೃತವಾದ ಸ್ಥೂಲ ಶರೀರವೂ, ಅಸ್ತಿ= ಇದೆ. ಮುಕ್ತೌ ತು=ಮುಕ್ತಿಯಲ್ಲಾದರೂ, ಚಿನ್ಮಾತ್ರಕಂ= ಕೇವಲ ಚೇತನಸ್ವರೂಪವಾದ, ವಪುಃ= ಶರೀರವು, ಅಸ್ತಿ= ಇರುತ್ತದೆ.

**ಅನುವಾದ–** **ಚಿದ್ರೂಪದೇಹದ ಆಕಾರವನ್ನು ಹೋಲುವ ಆಕಾರವೇ ಲಿಂಗಶರೀರಕ್ಕೆ ಇದೆ. ಆದ್ದರಿಂದ ಲಿಂಗಕ್ಕೆ ದೇಹ ಎಂದು ಹೆಸರು. ಸಂಸಾರಬಂಧಸ್ಥಿತಿಯಲ್ಲಿ ಪ್ರಾಕೃತದೇಹವೂ ಇದೆ. ಮುಕ್ತಿಯಲ್ಲಿ ಕೇವಲ ಚಿದ್ರೂಪಶರೀರವು ಇರುತ್ತದೆ.**

**ಭಾವವಿಲಾಸಿನೀ–** **ತತ್ಪದಂ ದೇಹಪದಂ ಚಿದ್ರೂಪದೇಹಪ್ರಾವರಣರೂಪತ್ವಾದೇವ ಲಿಂಗದೇಹಸ್ಯ ದೇಹತ್ವಮ್ । ನೋಚೇತ್ ಜಡಾಂತರೇಷ್ವದೃಷ್ಟಂ ದೇಹತ್ವಂ ಕಥಮಸ್ಯೇತಿ ಭಾವಃ ॥ ೪೨೮ ॥**

**ವಿವರಣೆ–** (1) ಜೀವಾತ್ಮರ ಚಿದ್ರೂಪಶರೀರಕ್ಕೆ ಒಂದು ಪ್ರಾಕೃತ ಪದಾರ್ಥವು ಆವರಣವಾಗಿದೆ. ಈ ಆವರಣವು ಅಡಗಿದ ಚಿದ್ರೂಪಶರೀರದ ಪರೋಕ್ಷಜ್ಞಾನವನ್ನು ಪ್ರಾಜ್ಞರಿಗೆ ಉಂಟುಮಾಡುತ್ತದೆ. ಅಡಗಿದ ಪದಾರ್ಥವನ್ನು ತಿಳಿಯುವ ಸಾಧನಕ್ಕೆ ಲಿಂಗ ಎಂದು ಹೆಸರು (ಲೀನಂ= ಅಡಗಿದ ವಸ್ತುವನ್ನು, ಗಮಯತಿ= ತಿಳಿಸುತ್ತದೆ, ಆದ್ದರಿಂದ ಲಿಂಗ) ಚಿದ್ರೂಪಶರೀರದ ಆಕಾರವೇ ಈ ಲಿಂಗಕ್ಕೂ ಇದೆ. ಆದ್ದರಿಂದ ಈ ಲಿಂಗವನ್ನು ದೇಹ ಎಂದು ಶಾಸ್ತ್ರಗಳು ಕರೆದಿವೆ.

(2) ಜೀವಾತ್ಮನಿಗೆ ಬಂಧಸ್ಥಿತಿಯಲ್ಲಿ ಪ್ರಾಕೃತದೇಹವೂ ಇದೆ. ಮುಕ್ತಿಯಲ್ಲಿ ಕೇವಲ ಚಿದ್ರೂಪದೇಹವು ಇದೆ.

**ಹರೇಸ್ತು ನಿತ್ಯಮುಕ್ತಸ್ಯ ದೇಹಃ ಸರ್ವತ್ರ ಸರ್ವದಾ ।**
**ಬಲಜ್ಞಾನಪ್ರಭಾಸೌಖ್ಯಸೌಂದರ್ಯಾದಿಗುಣಾತ್ಮಕಃ ॥ ೪೨೯ ॥**

**ಅರ್ಥ–** ನಿತ್ಯಮುಕ್ತಸ್ಯ=ನಿತ್ಯಮುಕ್ತನಾದ, ಹರೇಃ=ಪರಮಾತ್ಮನ, ದೇಹಸ್ತು= ದೇಹವಾದರೂ, ಸರ್ವತ್ರ=ಎಲ್ಲ ರೂಪಗಳಲ್ಲಿಯೂ, ಸರ್ವದಾ=ಯಾವಾಗಲೂ, ಬಲ- ಜ್ಞಾನಪ್ರಭಾಸೌಖ್ಯ ಸೌಂದರ್ಯಾದಿಗುಣಾತ್ಮಕಃ=ಬಲ, ಜ್ಞಾನ, ಕಾಂತಿ, ಆನಂದ, ಸೌಂದರ್ಯ ಮುಂತಾದ ಗುಣಸ್ವರೂಪವೇ ಆಗಿದೆ.

**ಅನುವಾದ–** ನಿತ್ಯಮುಕ್ತನಾದ ಪರಮಾತ್ಮನ ದೇಹವಾದರೂ ಎಲ್ಲ ರೂಪಗಳಲ್ಲಿಯೂ, ಯಾವಾಗಲೂ ಬಲ, ಜ್ಞಾನ, ಕಾಂತಿ, ಆನಂದ, ಸೌಂದರ್ಯ ಮುಂತಾದ ಗುಣಸ್ವರೂಪವೇ ಆಗಿದೆ.

**ಭಾವವಿಲಾಸಿನೀ–** ಹರೇಸ್ತ್ವಿತಿ ತುಶಬ್ದೇನ ಕದಾಚಿದ್ ಬದ್ಧಾತ್ ಪುನರ್ಮುಕ್ತಾಜ್ಜೀವಾದ್ ವಿಶೇಷಂ ಸೂಚಯತಿ । ತದೇವ ಸ್ಪಷ್ಟಯತಿ– **ನಿತ್ಯಮುಕ್ತಸ್ಯೇತ್ಯಾದಿನಾ** ॥ ಸರ್ವತ್ರ ಸರ್ವದೇತ್ಯತ್ರ ಹೇತುಸೂಚನಾಯ ನಿತ್ಯಮುಕ್ತಸ್ಯೇತಿ ಹೇತುಗರ್ಭಂ ವಿಶೇಷಣಮ್ । ಪ್ರಾಕೃತದೇಹವತ್ತ್ವೇ 'ನಿತ್ಯಮುಕ್ತತ್ವನ್ಯಾಕೋಪಾದ್ ವಿದ್ಯಾಮಯೋ ಯಸ್ತು ನಿತ್ಯಮುಕ್ತಃ' ಇತಿ ನಿತ್ಯಮುಕ್ತತಯಾ ಶ್ರೂಯಮಾಣಸ್ಯ ಭಗವತೋ ದೇಹಃ ಜ್ಞಾನಾನಂದಾದಿಶುಭಗುಣಾತ್ಮಕ ಏವೇತ್ಯಪ್ರಾಕೃತ-ದೇಹವತ್ತ್ವೇ ನಿತ್ಯಮುಕ್ತತ್ವಂ ಚ ಹೇತುರಿತಿ ಭಾವಃ ॥ ೪೨೯ ॥

**ತಸ್ಯೈಷ ಆತ್ಮಾ ವಿವೃಣುತೇ ತನೂಂ ಸ್ವಾಮಿತಿ ಶ್ರುತಿಃ ।**
**ಭಗವತ್ಪ್ರಾಪ್ತಿತಃ ಪಶ್ಚಾತ್ ತನುಂ ವಕ್ತಿ ವಿಮುಕ್ತಿಗಾಮ್ ॥ ೪೩೦ ॥**

**ಅರ್ಥ–** 'ತಸ್ಯೈಷ ಆತ್ಮಾ ವಿವೃಣುತೇ ತನೂಂ ಸ್ವಾಮ್' ಇತಿ ಶ್ರುತಿಃ= 'ತಸ್ಯೈಷ ಆತ್ಮಾ.... ಸ್ವಾಮ್' ಎಂಬ ಶ್ರುತಿಯು ಭಗವತ್ಪ್ರಾಪ್ತಿತಃ ಪಶ್ಚಾತ್= ಭಗವತ್ಪ್ರಾಪ್ತಿಯ ಅನಂತರ, ವಿಮುಕ್ತಿಗಾಂ= ಮುಕ್ತಿಯಲ್ಲಿರುವ, ತನುಂ= ಶರೀರವನ್ನು, ವಕ್ತಿ= ಹೇಳುತ್ತದೆ.

**ಅನುವಾದ–** 'ತಸ್ಯೈಷ ಆತ್ಮಾ ವಿವೃಣುತೇ ತನೂಂ ಸ್ವಾಮ್' ಎಂಬ ಶ್ರುತಿಯು, ಭಗವತ್ಪ್ರಾಪ್ತಿಯ ಅನಂತರ ಮುಕ್ತಿಯಲ್ಲಿರುವ ಶರೀರವನ್ನು ಹೇಳುತ್ತದೆ. (ಮುಕ್ತಿಯಲ್ಲಿ ಶರೀರವು ಇದೆ ಎಂದು ಹೇಳುತ್ತದೆ).

**ಭಾವವಿಲಾಸಿನೀ–** ನಿರವಕಾಶಸ್ಪಷ್ಟಶ್ರುತ್ಯಂತರೇಣಾಪಿ ನಿತ್ಯಮುಕ್ತಸ್ಯ ಹರೇರ್ಮುಕ್ತಾನಾಂ ಚಾನಾದಿನಿತ್ಯಚಿದಾನಂದಾತ್ಮಕಸ್ವರೂಪಭೂತದೇಹವತ್ತಾಂ ಪ್ರಸಾಧಯನ್ ತಸ್ಯ ದುಃಖಾ-ಹೇತುತಾಂ ಕೇವಲಸುಖಹೇತುತಾಂ ಚ ಪ್ರಸಾಧಯತಿ– **ತಸ್ಯೈಷ ಇತಿ** ॥ ಅನೇನ ನಾಯಮಾತ್ಮಾ ಪ್ರವಚನೇನ ಲಭ್ಯೋ ನ ಮೇಧಯಾ ನ ಬಹುನಾ ಶ್ರುತೇನ । ಯಮೇವೈಷ ವೃಣುತೇ ತೇನ ಲಭ್ಯಸ್ತಸ್ಯೈಷ ಆತ್ಮಾ ವಿವೃಣುತೇ ತನೂಂ ಸ್ವಾಮ್' ಇತಿ ಶ್ರುತಿಂ ಸಂಗೃಹ್ಣಾತಿ । ತೇನ ಸ್ವಪ್ರಸಾದ-ಪಾತ್ರಭೂತೇನ ಮುಕ್ತೇನ ಲಭ್ಯಃ ಪ್ರಾಪ್ಯ ಇತ್ಯುಕ್ತತ್ವಾದ್ ಭಗವತಃ ಪ್ರಾಪ್ತಿತಃ ಪಶ್ಚಾದಿತ್ಯುಕ್ತಮ್ । ತನುಂ ಮುಕ್ತಜೀವತನುಮ್ । ತಸ್ಯ ಸ್ವಾಂ ತನುಮಿತ್ಯುಕ್ತೇರ್ಜೀವತನೋಃ ಪ್ರಾಪ್ತೇರ್ಮುಕ್ತ-ಜೀವತನುಮಿತ್ಯುಕ್ತಮ್ ॥ ೪೩೦ ॥

**ವಿವರಣೆ–**

(೧) 'ನಾಯಮಾತ್ಮಾ ಪ್ರವಚನೇನ ಲಭ್ಯೋ
ನ ಮೇಧಯಾ ನ ಬಹುನಾ ಶ್ರುತೇನ ।
ಯಮೇವೈಷ ವೃಣುತೇ ತೇನ ಲಭ್ಯ-
ಸ್ತಸ್ಯೈಷ ಆತ್ಮಾ ವಿವೃಣುತೇ ತನೂಂ ಸ್ವಾಮ್ ॥' - ಕಠೋಪನಿಷತ್ ೧.೨.೨೩

ಅರ್ಥ- ಶಾಸ್ತ್ರಪುರಾಣಾದಿಗಳ ಪ್ರವಚನದಿಂದಾಗಲಿ, ಬುದ್ಧಿಯ ಬಲದಿಂದಾಗಲಿ, ಅನೇಕ ಗ್ರಂಥಾಧ್ಯಯನದಿಂದಾಗಲಿ ಪರಮಾತ್ಮನನ್ನು ಹೊಂದಲು ಸಾಧ್ಯವಾಗುವುದಿಲ್ಲ. ಆದರೆ, ಪರಮಾತ್ಮನು ಯಾವ ಜೀವನನ್ನು ತನ್ನ ಭಕ್ತನೆಂದು ಸ್ವೀಕರಿಸಿ, ಈ ಭಕ್ತನನ್ನು ಸಂಸಾರಸಾಗರದಿಂದ ಬಿಡುಗಡೆಗೊಳಿಸುತ್ತೇನೆ ಎಂದು ಇಚ್ಛಿಸುವನೋ, ಆ ಭಕ್ತನಿಗೆ ಮಾತ್ರ ದರ್ಶನವನ್ನು ಕೊಡುತ್ತಾನೆ. ಅವನಿಗೆ ಅವನ ಶರೀರವನ್ನು ತೋರಿಸುತ್ತಾನೆ.

**ತದಾಪೀಶತನೋಃ ಸಾಕ್ಷಾತ್ಕಾರಂ ವಾ ವಕ್ತಿ ವಾಗ್ಘಿ ಸಾ ।**
**ಅರ್ಥದ್ವಯಂ ಯತೋ ವಾಕ್ಯಸ್ಯಾಸ್ಯ ಶ್ಲೋಕ್ಯಂ ಬುಧೈಃ ಸದಾ ॥ ೪೩೦ ॥**

**ಅರ್ಥ–** ವಾ=ಅಥವಾ, ಸಾ ವಾಕ್='ಯಮೇವೈಷ ವೃಣುತೇ' ಎಂಬ ಶ್ರುತಿವಾಕ್ಯವು, ತದಾ=ಮೋಕ್ಷದಲ್ಲಿ, ಈಶತನೋಃ=ಭಗವಂತನ ರೂಪದ, ಸಾಕ್ಷಾತ್ಕಾರಮ್ ಅಪಿ=ಪ್ರತ್ಯಕ್ಷವನ್ನೂ ಕೂಡ, ವಕ್ತಿ ಹಿ=ಹೇಳುತ್ತಿದೆ. ಯತಃ=ಏಕೆಂದರೆ, ಅಸ್ಯ ವಾಕ್ಯಸ್ಯ= 'ಯಮೇವೈಷ ವೃಣುತೇ' ಎಂಬ ಶ್ರುತಿವಾಕ್ಯಕ್ಕೆ, ಅರ್ಥದ್ವಯಂ=ಎರಡು ಅರ್ಥಗಳು, ಬುಧೈಃ=ವಿದ್ವಾಂಸರಿಂದ, ಸದಾ=ಯಾವಾಗಲೂ, ಶ್ಲೋಕ್ಯಂ=ಸ್ತುತ್ಯವೇ ಆಗಿರುತ್ತದೆ.

**ಅನುವಾದ– ಆ ಶ್ರುತಿ ವಾಕ್ಯವು ಮುಕ್ತಿದೆಶೆಯಲ್ಲಿ ಪರಮಾತ್ಮನ ಶರೀರದ ಸಾಕ್ಷಾತ್ಕಾರವನ್ನು ಹೇಳುತ್ತದೆ. ಏಕೆಂದರೆ ಈ ವಾಕ್ಯಕ್ಕೆ ಎರಡು ಅರ್ಥವು ಯಾವಾಗಲೂ ಪ್ರಾಜ್ಞಶ್ಲಾಘ್ಯವೇ ಆಗಿದೆ.**

**ಭಾವವಿಲಾಸಿನೀ– ಶ್ರುತೇರರ್ಥಾಂತರಮಪ್ಯಾಹ–ತದಪೀತಿ ॥ ಈಶತನೋಃ ಶ್ರೀನಾರಾಯಣ-**ವಿಗ್ರಹಸ್ಯ । ಲಭ್ಯ ಇತ್ಯುಕ್ತಪರಮಾತ್ಮನೋಽಪಿ ಸ್ವಪದೇನ ವಕ್ತುಂ ಶಕ್ಯತ್ವಾದ್ **ಈಶತನೋ-ರ್ವೇ**ತ್ಯುಕ್ತಮ್ । 'ವಿವೃಣುತೇ' ಇತ್ಯುಕ್ತತ್ವಾನ್ಮುಕ್ತ್ಯನಂತರಂ ಪ್ರತಿಬಂಧಕಾಭಾವೇನ ಸದಾ ಸಾಕ್ಷಾತ್ಕಾರಸ್ಯ ಸತ್ವಾದಿದಮುಕ್ತಮ್ । ಉಕ್ತರೀತ್ಯಾಽರ್ಥದ್ವಯಸ್ಯಾಪಿ ಶ್ರೌತಪದಲಭ್ಯತ್ವಾತ್ **ಶ್ಲೋಕ್ಯಂ** ಸ್ತುತ್ಯಮ್ ॥ ೪೩೦ ॥

**ವಿವರಣೆ–** 'ವಿವೃಣುತೇ ತನೂಂ ಸ್ವಾಮ್' ಎಂಬ ಶ್ರುತಿಯು ಭಗವಂತನು ಮುಕ್ತರಿಗೆ ತನ್ನ ರೂಪವನ್ನು ಯಾವಾಗಲೂ ತೋರಿಸುತ್ತಾನೆ ಎಂಬ ಇನ್ನೊಂದು ಅರ್ಥವನ್ನೂ ಹೇಳುತ್ತಿದೆ.

'ಸ್ವ' ಶಬ್ದಕ್ಕೆ 'ತಾನು' ಎಂದು ಅರ್ಥ. ಪ್ರಕೃತಶ್ರುತಿಯಲ್ಲಿ 'ಸ್ವಾಮ್' ಪದದಿಂದ ತನ್ನ ಎಂದರೆ, ಜೀವಾತ್ಮನ ಎಂದೂ, ಪರಮಾತ್ಮನ ಎಂದೂ ಅರ್ಥವನ್ನು ಗ್ರಹಿಸಲು ಏನೂ ಬಾಧಕವಿಲ್ಲ.

**ತನುಃ ಶರೀರಮೇವೇಯಂ ರೂಪಮಾತ್ರಂ ನ ವೈ ತನುಃ ।**
**ಘಟಸ್ವರೂಪೇ ಕಿಂ ಕಶ್ಚಿದ್ ವಿಪಶ್ಚಿತ್ ಪ್ರಾಹ ದೇಹತಾಮ್ ॥ ೪೩೧ ॥**

**ಅರ್ಥ**– ಇಯಂ ತನುಃ= ಈ 'ತನು' ವು ('ತನೂಂ ಸ್ವಾಂ' ಎಂದು ಶ್ರುತಿಯಲ್ಲಿ ಹೇಳಲ್ಪಟ್ಟ 'ತನು' ವು) ಶರೀರಮೇವ= ದೇಹವೇ, ರೂಪಮಾತ್ರಂ– ಬರೀ ರೂಪವು, ತನುಃ ನ ವೈ= ದೇಹ ಅಲ್ಲವೇ ಅಲ್ಲ, ಕಶ್ಚಿತ್ ವಿಪಶ್ಚಿತ್= ಯಾರಾದರೂ ಪ್ರಾಜ್ಞರು, ಘಟಸ್ವರೂಪೇ= ಘಟದ ಸ್ವರೂಪದಲ್ಲಿ, ದೇಹತಾಂ= ದೇಹತ್ವವನ್ನು, ಪ್ರಾಹ ಕಿಂ= ಹೇಳುತ್ತಾರೆಯೇ?

**ಅನುವಾದ**– 'ಸ್ವಾಂ ತನೂಂ...' - ಈ ಶ್ರುತಿಯು ಹೇಳುವ 'ತನು' ಶರೀರವೇ. ಬರೀ ರೂಪ ಅಲ್ಲ. ತಿಳಿದವರು ಯಾರೂ ಘಟದ ರೂಪವನ್ನು ದೇಹ ಎನ್ನುವುದಿಲ್ಲ (ಘಟದ ರೂಪಕ್ಕೆ ದೇಹತ್ವವನ್ನು ಹೇಳುವುದಿಲ್ಲ).

**ಭಾವವಿಲಾಸಿನೀ**– ಪ್ರಾಗುಕ್ತಶ್ರುತಿತೋಽಸ್ಯಾಃ ಶ್ರುತೇಃ ಸ್ಪಷ್ಟತಾ ಕಥಮ್? ಇತ್ಯತ ಆಹ– ತನುರಿತಿ ॥ ೪೩೨ ॥

**ವಿವರಣೆ**– ಪ್ರಶ್ನೆ : ಈ ಶ್ರುತಿಯಲ್ಲಿರುವ 'ತನು' ಶಬ್ದಕ್ಕೆ ಸ್ವರೂಪ ಎಂದು ಅರ್ಥ. ಶರೀರ ಎಂದು ಅರ್ಥ ಅಲ್ಲ. ಆದ್ದರಿಂದ, ಮುಕ್ತನಿಗೆ ಮೋಕ್ಷದಲ್ಲಿ ದೇಹವು ಇದೆ ಎಂದು ಈ ಶ್ರುತಿಯು ಹೇಳುತ್ತಿಲ್ಲ?

ಉತ್ತರ : ಶ್ರುತಿಯಲ್ಲಿರುವ 'ತನು' ಶಬ್ದಕ್ಕೆ ದೇಹವೆಂದೇ ಅರ್ಥ. ಸ್ವರೂಪ ಬೇರೆ, ದೇಹ ಬೇರೆ. ಲೋಕದಲ್ಲಿ ಘಟ-ಪಟಗಳ ರೂಪಗಳಾದ ಘಟತ್ವ-ಪಟತ್ವಗಳನ್ನು ಅವುಗಳ ಶರೀರ ಎಂದು ಯಾರೂ ಹೇಳುವುದಿಲ್ಲ.

**ಸ್ವಾಮಿತ್ಯುಕ್ತ್ಯಾ ತನುಃ ಸಾ ಚ ಸ್ವರೂಪೈವೇತಿ ಸಿದ್ಧ್ಯತಿ ।**
**ಜಡಾನ್ಯದೇಹನಿರ್ಮೋಕ್ಷಾತ್ ಸ್ವೀಯತ್ವಾರ್ಥೋऽಹ್ಯಪಾರ್ಥಕಃ ॥ ೪೩೩ ॥**

**ಅರ್ಥ**– ಸ್ವಾಮ್ ಇತ್ಯುಕ್ತ್ಯಾ= ಶ್ರುತಿಯಲ್ಲಿ 'ಸ್ವಾಂ' ಎಂದು ಪ್ರಯೋಗಿಸಿದ್ದರಿಂದ, ಸಾ ಚ ತನುಃ=ಆ ದೇಹವಾದರೂ, ಸ್ವರೂಪಾ ಏವ ಇತಿ= ಜೀವಾತ್ಮನ ಸ್ವರೂಪವೇ ಎಂದು, ಸಿದ್ಧ್ಯತಿ=ಸಿದ್ಧವಾಗುತ್ತದೆ. ಜಡಾನ್ಯದೇಹನಿರ್ಮೋಕ್ಷಾತ್=ಜಡವಾದ, ಜೀವಭಿನ್ನವಾದ ದೇಹವನ್ನು ಸರ್ವಾತ್ಮನಾ ತ್ಯಜಿಸಿರುವುದರಿಂದ, ಸ್ವೀಯತ್ವಾರ್ಥಃ=ತನ್ನ ಸಂಬಂಧಿಯಾದ (ತನಗಿಂತ ಭಿನ್ನವಾದ) ಎಂಬ ಅರ್ಥವು, ಅಪಾರ್ಥಕಃ ಹಿ=ಅಸಂಗತ.

**ಅನುವಾದ**– 'ಸ್ವಾಂ ತನೂಂ' - ಈ ಶ್ರುತಿಯಲ್ಲಿ 'ಸ್ವಾಮ್' ಎಂದು ಉಕ್ತಿಯಿಂದ, ಆ ತನುವು ಸ್ವರೂಪ ಎಂದೇ ಸಿದ್ಧವಾಗುತ್ತದೆ. ಜಡವಾದ, ಜೀವನಲ್ಲದ ದೇಹವನ್ನು ಸರ್ವಾತ್ಮನಾ ತ್ಯಜಿಸಿರುವುದರಿಂದ 'ಸ್ವ' ಶಬ್ದಕ್ಕೆ 'ತನ್ನ ಸಂಬಂಧಿಯಾದ' ಎಂಬ ಅರ್ಥವು ಅಸಂಗತ.

**ಭಾವವಿಲಾಸಿನೀ**– ತನೋಃ ಸ್ವರೂಪಭೂತತಾ ಕಥಮಿತ್ಯತ ಆಹ – ಸ್ವಾಮಿತ್ಯುಕ್ತ್ಯೇತಿ ॥ ಸ್ವಾಮಿತ್ಯಸ್ಯ ಸ್ವೀಯಾಮಿತ್ಯರ್ಥಃ ಕುತೋ ನೇತ್ಯತ ಆಹ – ಜಡಾನ್ಯದೇಹನಿರ್ಮೋಕ್ಷಾದಿತಿ ॥ ಜಡಾನ್ಯಃ

ಜೀವಾದ್ ಭಿನ್ನೋ ದೇಹಃ ತಸ್ಯ ನಿರ್ಮೋಕ್ವಾನ್ನಿತರಾಂ ಮೋಚನಾತ್ । ಮುಕ್ತಿಕಾಲೇ ಲಿಂಗ-ಶರೀರಸ್ಥೂಲಶರೀರಯೋರುಭಯೋರಪಿ ಮೋಚನಾದಿತ್ಯರ್ಥಃ । ಸ್ವೀಯತ್ವಾರ್ಥಃ ಅಪಾರ್ಥಕೋ ವ್ಯರ್ಥಃ । ಭಿನ್ನದೇಹೋ ಹಿ ಸ್ವೀಯತಯಾ ವಕ್ತುಂ ಶಕ್ಯತೇ । ತದಭಾವಾತ್ ಆತ್ಮಾತ್ಮೀಯಜ್ಞಾತಿಧನವಾಚೀಸ್ವಶಬ್ದ ಇತ್ಯಪ್ರಾಥಮಿಕಾರ್ಥತ್ವಾಚ್ಚ ಸ್ವಾಮಿತ್ಯಸ್ಯ ಸ್ವರೂಪಭೂತಾ-ಮಿತ್ಯೇವಾರ್ಥ ಉಚ್ಯತ ಇತಿ ಭಾವಃ ॥ ೪೩೩ ॥

**ವಿವರಣೆ–** ಪ್ರಶ್ನೆ : ಶ್ರುತಿಯಲ್ಲಿರುವ 'ತನು' ಶಬ್ದಕ್ಕೆ ದೇಹವೆಂದು ಅರ್ಥವಿದ್ದರೂ ಆ ದೇಹವು ಸ್ವರೂಪಶರೀರವೇ ಎಂದು ಏಕೆ ಹೇಳಬೇಕು? ಸ್ವರೂಪಕ್ಕಿಂತ ಭಿನ್ನವಾದ ಶರೀರ ಎಂದು ಏಕೆ ಅಂಗೀಕರಿಸಬಾರದು?

ಉತ್ತರ : 'ಸ್ವ' ಎಂಬ ಶಬ್ದಕ್ಕೆ ತಾನು, ತನ್ನದು ಎಂದು ಎರಡು ಅರ್ಥಗಳಿವೆ. ಈ ಶ್ರುತಿಯಲ್ಲಿರುವ 'ಸ್ವಾಮ್' ಶಬ್ದಕ್ಕೆ ಸ್ವರೂಪ ಎಂದೇ ಅರ್ಥ. ಮುಕ್ತಿಯಲ್ಲಿ ಜೀವನು ತನಗಿಂತ ಭಿನ್ನವಾದ ಜಡವಾದ ಲಿಂಗಶರೀರ ಮತ್ತು ಸ್ಥೂಲಶರೀರಗಳನ್ನು ತ್ಯಜಿಸಿರುವುದರಿಂದ ಸ್ವೀಯ ಎಂಬ ಅರ್ಥವು ಅಪಾರ್ಥವಾಗುತ್ತದೆ. ಮುಕ್ತಿಯಲ್ಲಿ ಸ್ವರೂಪದೇಹವು ಇರುವುದರಿಂದ 'ಸ್ವ' ಶಬ್ದಕ್ಕೆ ಸ್ವರೂಪ ಎಂಬ ಅರ್ಥವೇ ಸಂಗತವಾಗುತ್ತದೆ.

**ದೃಙ್ಮಾತ್ರಂ ಜಡದೇಹಸ್ಯ ಕಿಂ ಮಹಾಕರುಣಾಫಲಮ್ ॥ ೪೩೪ ॥**

**ಅರ್ಥ–** ಜಡದೇಹಸ್ಯ=ಜಡ ಶರೀರದ, ದೃಙ್ಮಾತ್ರಂ= ದರ್ಶನವೇ, ಮಹಾಕರುಣಾಫಲಂ ಕಿಂ= ಭಗವಂತನ ಮಹಾಕರುಣೆಯ ಫಲವೇ?

**ಅನುವಾದ–** ಜಡ ಶರೀರದ ದರ್ಶನವೇ ಭಗವಂತನ ಮಹಾಕರುಣೆಯ ಫಲವೇ?

**ಭಾವವಿಲಾಸಿನೀ–** ಜಡದೇಹಾರ್ಥತ್ವೇ ಬಾಧಕಾಂತರಂ ಚಾಹ – **ದೃಙ್ಮಾತ್ರಮಿತಿ** ॥ ಜಡದೇಹಸ್ಯ ದೃಙ್ಮಾತ್ರಂ ವಿವೃಣುತ ಇತಿ ಪದೋಕ್ತಂ ದರ್ಶನಮಾತ್ರಂ ಮಹಾಕರುಣಾಯಾಃ ವೃಣುತ ಇತಿ ಪದೋಕ್ತಾಂಗೀಕಾರಾಖ್ಯಮಹಾಕರುಣಾಯಾಃ ಫಲಂ ಕಿಮಿತಿ ಸಂಬಂಧಃ । ಶ್ರವಣಾದಿಜನ್ಯ-ಮಹಾಪ್ರಸಾದಸಿದ್ಧ್ಯುತ್ತರಂ ಪುನರ್ಜಡದೇಹಸ್ಯ ತದ್ದರ್ಶನಸ್ಯ ಚ ಸಂಸಾರಹೇತುತ್ವೇನ ವಿರುದ್ಧತ್ವಾದಿತಿ ಭಾವಃ ॥ ೪೩೪ ॥

**ವಿವರಣೆ–** (1) ಶ್ರುತಿಯು '**ಯಮೇವೈಷ ವೃಣುತೇ**' ಎಂದು ಪರಮಾತ್ಮನ ಅನುಗ್ರಹದಿಂದ 'ಸ್ವತನುವಿನ' ದರ್ಶನ ಎಂದು ಹೇಳಿದೆ. 'ವಿವೃಣುತೇ ತನೂಂ ಸ್ವಾಮ್' ಎಂದು ಹೇಳಿದ 'ಸ್ವತನು' ಜಡಶರೀರವಾದರೆ, ಅದರ ದರ್ಶನವು ಪರಮಾತ್ಮನ ಮಹಾಕರುಣೆಯ ಫಲವೇ?

(2) ಮಹಾಪ್ರಯತ್ನ ಮತ್ತು ಪರಮಾತ್ಮನ ಮಹಾಪ್ರಸಾದದಿಂದ ಆಗುವ ತನುದರ್ಶನವು ನಿರುಪಯೋಗಿಯಾದ ಜಡದೇಹದ ದರ್ಶನವಲ್ಲ.

ಅನಾದಿನಿತ್ಯತಾ ಚಾಸ್ಯ ವ್ಯಕ್ತಿಮಾತ್ರಪ್ರಕೀರ್ತನಾತ್ ।
ಸಿದ್ಧಾ ತೇನ ಚ ಸಂಸಿದ್ಧಾ ಜಡಾನ್ಯೈವ ತನೂರಿಯಮ್ ॥ ೪೩೫ ॥

**ಅರ್ಥ–** ಅಸ್ಯ=ಶ್ರುತಿಯಲ್ಲಿ ಪ್ರಸಕ್ತವಾದ ಈ ದೇಹಕ್ಕೆ, ವ್ಯಕ್ತಿಮಾತ್ರಪ್ರಕೀರ್ತನಾತ್=ಅಭಿವ್ಯಕ್ತಿಯನ್ನು ಮಾತ್ರ ಹೇಳಿದ್ದರಿಂದ, ಅನಾದಿನಿತ್ಯತಾ ಚ=ಅನಾದಿತ್ವ ಮತ್ತು ನಿತ್ಯತ್ವಗಳು, ಸಿದ್ಧಾ=ಸಿದ್ಧವಾಗುತ್ತವೆ. ತೇನ=ಆದ್ದರಿಂದ, ಇಯಂ ತನೂಃ=ಈ ದೇಹವು, ಜಡಾನ್ಯೈವ=ಜಡಭಿನ್ನವಾದುದೇ ಎಂದು, ಸಂಸಿದ್ಧಾ=ಸಿದ್ಧವಾಗುತ್ತದೆ.

**ಅನುವಾದ–** ಶ್ರುತಿಯಲ್ಲಿ ಪ್ರಸಕ್ತವಾದ ಈ ದೇಹಕ್ಕೆ ಅಭಿವ್ಯಕ್ತಿಯನ್ನು ಮಾತ್ರ ಹೇಳಿದ್ದರಿಂದ ಅನಾದಿತ್ವ ಮತ್ತು ನಿತ್ಯತ್ವಗಳು ಸಿದ್ಧವಾಗುತ್ತವೆ. ಆದ್ದರಿಂದ ಈ ದೇಹವು ಜಡಭಿನ್ನವಾದುದೇ ಎಂದು ಸಿದ್ಧವಾಗುತ್ತದೆ.

**ಭಾವವಿಲಾಸಿನೀ–** ವಿವೃಣುತ ಇತಿ ವ್ಯಕ್ತಿಮಾತ್ರಪ್ರಕೀರ್ತನಾತ್ಕೇವಲಂ ವ್ಯಕ್ತೇರೇವ ಕಥನಾತ್ ಪೂರ್ವಂ ವಿದ್ಯಮಾನತ್ವಸಿದ್ಧ್ಯಾಽನಾದಿತ್ವಂ, ವಿವೃಣುತ ಇತಿ ವ್ಯಕ್ತೇಃಸದಾ ವರ್ತಮಾನತ್ವ ಕಥನಾನ್ನಿತ್ಯತ್ವಂ ಚೇತಿ ಅಸ್ಯ ದೇಹಸ್ಯಾನಾದಿನಿತ್ಯತಾ ಚ ಸಿದ್ಧೇತಿ ಸಂಬಂಧಃ । ತೇನ ಚೋಕ್ತರೀತ್ಯಾ ಸಿದ್ಧೇನ ಅನಾದಿನಿತ್ಯತ್ವೇನ ಚ ಇಯಂ ಶ್ರುತ್ಯುಕ್ತಾ ತನುಃ ಜಡಾನ್ಯೈವ ಸಂಸಿದ್ಧೇತಿ ಯೋಜನಾ । ಪ್ರಾಗುಕ್ತಯುಕ್ತಿಸಮುಚ್ಚಯಾರ್ಥಶ್ಚಶಬ್ದಃ ॥ ೪೩೫ ॥

**ವಿವರಣೆ–** 'ವಿವೃಣುತೇ ತನೂಂ ಸ್ವಾಮ್' ಎಂಬ ಶ್ರುತಿಯಲ್ಲಿ ಭಗವಂತನು ತನ್ನ ಮತ್ತು ಜೀವಾತ್ಮನ ಅಪ್ರಾಕೃತವಾದ ಶರೀರವನ್ನು ಅಭಿವ್ಯಕ್ತಿಗೊಳಿಸುತ್ತಾನೆ ಎಂದು ಹೇಳಿದ್ದರಿಂದ ಆ ಶರೀರವು ಮೊದಲೇ ಇದ್ದಿತು, ಅಂದರೆ, ಅನಾದಿ ಎಂದು ನಿತ್ಯ ಎಂದೂ ಸಿದ್ಧವಾಗುತ್ತದೆ. ಜಡವು ಅನಾದಿ ಮತ್ತು ನಿತ್ಯವಾಗಿರುವುದಿಲ್ಲ. ಆದ್ದರಿಂದ ಮುಕ್ತಿಯಲ್ಲಿರುವ ಶರೀರವು ಜಡಶರೀರವಲ್ಲ ಎಂದು ಸಿದ್ಧವಾಗುತ್ತದೆ.

ಅತಃ ಶ್ರುತ್ಯರ್ಥತತ್ವಜ್ಞಾಸ್ತನುಂ ಮುಕ್ತಪರಾತ್ಮನೋಃ ।
ಚಿದಾನಂದಮಯೀಂ ಪ್ರಾಹುರ್ನಪ್ರಾಹುರ್ಜಡದೇಹಿತಾಮ್ ॥ ೪೩೬ ॥

**ಅರ್ಥ–** ಅತಃ= ಆದ್ದರಿಂದ= ಶ್ರುತಿಯಲ್ಲಿ ಪ್ರಯೋಗಿಸಿದ ಪದಗಳನ್ನು ಪರ್ಯಾಲೋಚಿಸಿದಾಗ 'ತನು', ಎಂದರೆ ಅನಾದಿನಿತ್ಯಸ್ವರೂಪದೇಹವೆಂದೇ ಸಿದ್ಧವಾಗು-ವುದರಿಂದ, ಶ್ರುತ್ಯರ್ಥತತ್ವಜ್ಞಾಃ= ಶ್ರುತಿಗಳ ಅರ್ಥತತ್ವವನ್ನು ತಿಳಿದವರು, ಮುಕ್ತ-ಪರಮಾತ್ಮನೋಃ= ಮುಕ್ತಜೀವರಿಗೂ ಮತ್ತು ಪರಮಾತ್ಮನಿಗೂ, ಚಿದಾನಂದ- ಮಯೀಂ= ಜ್ಞಾನಾನಂದಸ್ವರೂಪವಾದ, ತನುಂ= ಶರೀರವನ್ನು, ಪ್ರಾಹುಃ= ಹೇಳುತ್ತಾರೆ. ಜಡ-ದೇಹಿತಾಂ= ಜಡದೇಹವನ್ನು, ನ ಪ್ರಾಹುಃ= ಹೇಳುವುದಿಲ್ಲ.

**ಅನುವಾದ–** ಶ್ರುತಿಯಲ್ಲಿರುವ ಪದಗಳನ್ನು ವಿಮರ್ಶಿಸಿದಾಗ 'ತನು' ಎಂದರೆ ಅನಾದಿ ಮತ್ತು ನಿತ್ಯವಾದ ಚಿತ್‌ಸ್ವರೂಪಶರೀರ ಎಂದು ಅರ್ಥವು ಲಭಿಸುವುದರಿಂದ, ಶ್ರುತಿಯ ಅರ್ಥತತ್ವವನ್ನು ತಿಳಿದವರು ಮುಕ್ತಚೇತನರ ಮತ್ತು ಪರಮಾತ್ಮನ ಶರೀರವನ್ನು ಚಿದಾನಂದಮಯ ಎಂದೇ ಹೇಳುತ್ತಾರೆ. ಅವರಿಗೆ ಜಡದೇಹವಿದೆ ಎಂದು ಹೇಳುವುದಿಲ್ಲ.

**ಭಾವವಿಲಾಸಿನೀ–** ಅತಃ ಶ್ರೌತಪದಪರ್ಯಾಲೋಚನೇ ಸತಿ ಅನಾದಿನಿತ್ಯ ಸ್ವರೂಪಭೂತ-ದೇಹಲಾಭಾತ್ ಚಿದಾನಂದಮಯೀಂ ಚಿದಾನಂದಾತ್ಮಕಚೈತನ್ಯಸ್ವರೂಪತಯಾ ಚಿದಾನಂದ-ಪ್ರಚುರಾಮ್ ॥ ೪೩೬ ॥

ಸಾ ಚ ಜನ್ಮಜರಾರೋಗಹ್ರಾಸನಾಶಾದ್ಯಭಾವತಃ ।
ನ ಕ್ಲೇಶದಾ ತಯೋಸ್ತಸ್ಮಾತ್ ಕಥಂ ದೋಷಾವಹಾ ವದ ॥ ೪೩೭ ॥

**ಅರ್ಥ–**ಸಾ ಚ= ಆ ಅಪ್ರಾಕೃತತನುವು, ಜನ್ಮಜರಾರೋಗಹ್ರಾಸನಾಶಾದ್ಯಭಾವತಃ= ಜನ್ಮ, ಮುದಿತನ, ರೋಗ, ಕುಗ್ಗುವಿಕೆ, ನಾಶ ಮೊದಲಾದ ದೋಷರಹಿತವಾದ್ದರಿಂದ, ನ ಕ್ಲೇಶದಾ= ದುಃಖಪ್ರದವಲ್ಲ. ತಸ್ಮಾತ್=ಆದ್ದರಿಂದ, ತಯೋಃ=ಮುಕ್ತರಿಗೆ ಮತ್ತು ಭಗವಂತನಿಗೆ, ಕಥಂ=ಹೇಗೆ ತಾನೇ, ದೋಷಾವಹಾ=ಮಾಲಿನ್ಯಕರವಾದೀತು? ವದ= ಹೇಳು.

**ಅನುವಾದ–** ಹುಟ್ಟು, ಮುಪ್ಪು, ರೋಗ, ಹ್ರಾಸ, ನಾಶ ಮೊದಲಾದವುಗಳು ಇಲ್ಲದಿರುವುದರಿಂದ ಆ ಶ್ರುತಿಯಲ್ಲಿ ಹೇಳಿದ 'ತನು' ಕ್ಲೇಶದಾಯಕವಲ್ಲ. ಆದ್ದರಿಂದ ಅದು ಮುಕ್ತ ಮತ್ತು ಪರಮಾತ್ಮರಿಗೆ ಹೇಗೆ ದೋಷಕರವಾದೀತು? ಹೇಳು.

**ಭಾವವಿಲಾಸಿನೀ–** ಸ್ವಸ್ವರೂಪಭೂತಾ ತನುಃ । ತಯೋರ್ಜೀವಪರಮಾತ್ಮನೋಃ । ದೋಷಾ-ವಹಾ ಮಲಿನತ್ವಸಂಪಾದಿಕಾ । ಜಡದೇಹವತ್ತ್ವೇ ಹಿ ಮಲಿನತ್ವರೂಪಶಬಲತಾ ಸ್ಯಾತ್ । ಚಿದಾನಂದಾತ್ಮಕದಿವ್ಯದೇಹವತ್ತ್ವೇ ಕಥಂ ಮಾಲಿನ್ಯಮ್ । ಅನ್ಯಥಾ ಚಿದಾನಂದಶಬಲತಯಾಪಿ ಮಾಲಿನ್ಯಪ್ರಸಂಗಾದಿತಿ ಭಾವಃ ॥ ೪೩೭ ॥

**ವಿವರಣೆ–** ಜಡದೇಹಕ್ಕೆ ಮಾತ್ರ ಜನ್ಮ, ಮರಣ, ಭಯ, ನಾಶ ಮುಂತಾದ ದೋಷಗಳು ಇರುತ್ತವೆ. ಈ ದೋಷಗಳಿಂದಾಗಿ ಆ ಶರೀರವು ಜೀವನಿಗೆ ದುಃಖಪ್ರದವಾಗುತ್ತದೆ. ಮುಕ್ತರಿಗೆ ಹಾಗೂ ಪರಮಾತ್ಮನಿಗೆ ಇರುವ ಅಪ್ರಾಕೃತ ದೇಹಗಳಲ್ಲಿ ಜನನಮರಣಾದಿದೋಷಗಳು ಇಲ್ಲದಿರುವುದರಿಂದ, ಈ ದೇಹದಿಂದ ಅವರಿಗೆ ದುಃಖವು (ಮಾಲಿನ್ಯವು, ಶಬಲತೆಯು) ಹೇಗೆ ತಾನೇ ಉಂಟಾದೀತು?

ಕಿಂತು ಸೌಂದರ್ಯಸೌರಭ್ಯಪ್ರಭಾಮಂದಸ್ಮಿತೇಕ್ಷಿತೈಃ ।
ಆಲಿಂಗನೈರಾಲಪನೈಶ್ಚಿತ್ರಮಾಲ್ಯಾನುಲೇಪನೈಃ ॥ ೪೩೮ ॥

**ಅನಾದಿನಿತ್ಯತಾ ಚಾಸ್ಯ ವ್ಯಕ್ತಿಮಾತ್ರಪ್ರಕೀರ್ತನಾತ್ ।**
**ಸಿದ್ಧಾ ತೇನ ಚ ಸಂಸಿದ್ಧಾ ಜಡಾನ್ಯೈವ ತನೂರಿಯಮ್ ॥ ೪೩೫ ॥**

**ಅರ್ಥ–** ಅಸ್ಯ=ಶ್ರುತಿಯಲ್ಲಿ ಪ್ರಸಕ್ತವಾದ ಈ ದೇಹಕ್ಕೆ, ವ್ಯಕ್ತಿಮಾತ್ರಪ್ರಕೀರ್ತನಾತ್= ಅಭಿವ್ಯಕ್ತಿಯನ್ನು ಮಾತ್ರ ಹೇಳಿದ್ದರಿಂದ, ಅನಾದಿನಿತ್ಯತಾ ಚ=ಅನಾದಿತ್ವ ಮತ್ತು ನಿತ್ಯತ್ವಗಳು, ಸಿದ್ಧಾ=ಸಿದ್ಧವಾಗುತ್ತವೆ. ತೇನ=ಆದ್ದರಿಂದ, ಇಯಂ ತನೂಃ=ಈ ದೇಹವು, ಜಡಾನ್ಯೈವ= ಜಡಭಿನ್ನವಾದುದೇ ಎಂದು, ಸಂಸಿದ್ಧಾ=ಸಿದ್ಧವಾಗುತ್ತದೆ.

**ಅನುವಾದ–** ಶ್ರುತಿಯಲ್ಲಿ ಪ್ರಸಕ್ತವಾದ ಈ ದೇಹಕ್ಕೆ ಅಭಿವ್ಯಕ್ತಿಯನ್ನು ಮಾತ್ರ ಹೇಳಿದ್ದರಿಂದ ಅನಾದಿತ್ವ ಮತ್ತು ನಿತ್ಯತ್ವಗಳು ಸಿದ್ಧವಾಗುತ್ತವೆ. ಆದ್ದರಿಂದ ಈ ದೇಹವು ಜಡಭಿನ್ನವಾದುದೇ ಎಂದು ಸಿದ್ಧವಾಗುತ್ತದೆ.

**ಭಾವವಿಲಾಸಿನೀ–** ವಿವೃಣುತ ಇತಿ ವ್ಯಕ್ತಿಮಾತ್ರಪ್ರಕೀರ್ತನಾತ್ಕೇವಲಂ ವ್ಯಕ್ತೇರೇವ ಕಥನಾತ್ ಪೂರ್ವಂ ವಿದ್ಯಮಾನತ್ವಸಿದ್ಧ್ಯಾಽನಾದಿತ್ವಂ, ವಿವೃಣುತ ಇತಿ ವ್ಯಕ್ತೇಃಸದಾ ವರ್ತಮಾನತ್ವ ಕಥನಾನ್ನಿತ್ಯತ್ವಂ ಚೇತಿ ಅಸ್ಯ ದೇಹಸ್ಯಾನಾದಿನಿತ್ಯತಾ ಚ ಸಿದ್ಧೇತಿ ಸಂಬಂಧಃ । ತೇನ ಚೋಕ್ತರೀತ್ಯಾ ಸಿದ್ಧೇನ ಅನಾದಿನಿತ್ಯತ್ವೇನ ಚ ಇಯಂ ಶ್ರುತ್ಯುಕ್ತಾ ತನುಃ ಜಡಾನ್ಯೈವ ಸಂಸಿದ್ಧೇತಿ ಯೋಜನಾ । ಪ್ರಾಗುಕ್ತಯುಕ್ತಿಸಮುಚ್ಚಯಾರ್ಥಶ್ಚಶಬ್ದಃ ॥ ೪೩೫ ॥

**ವಿವರಣೆ–** 'ವಿವೃಣುತೇ ತನೂಂ ಸ್ವಾಮ್' ಎಂಬ ಶ್ರುತಿಯಲ್ಲಿ ಭಗವಂತನು ತನ್ನ ಮತ್ತು ಜೀವಾತ್ಮನ ಅಪ್ರಾಕೃತವಾದ ಶರೀರವನ್ನು ಅಭಿವ್ಯಕ್ತಿಗೊಳಿಸುತ್ತಾನೆ ಎಂದು ಹೇಳಿದ್ದರಿಂದ ಆ ಶರೀರವು ಮೊದಲೇ ಇದ್ದಿತು, ಅಂದರೆ, ಅನಾದಿ ಎಂದು ನಿತ್ಯ ಎಂದೂ ಸಿದ್ಧವಾಗುತ್ತದೆ. ಜಡವು ಅನಾದಿ ಮತ್ತು ನಿತ್ಯವಾಗಿರುವುದಿಲ್ಲ. ಆದ್ದರಿಂದ ಮುಕ್ತಿಯಲ್ಲಿರುವ ಶರೀರವು ಜಡಶರೀರವಲ್ಲ ಎಂದು ಸಿದ್ಧವಾಗುತ್ತದೆ.

**ಅತಃ ಶ್ರುತ್ಯರ್ಥತತ್ವಜ್ಞಾಸ್ತನುಂ ಮುಕ್ತಪರಾತ್ಮನೋಃ ।**
**ಚಿದಾನಂದಮಯೀಂ ಪ್ರಾಹುರ್ನಪ್ರಾಹುರ್ಜಡದೇಹಿತಾಮ್ ॥ ೪೩೬ ॥**

**ಅರ್ಥ–** ಅತಃ= ಆದ್ದರಿಂದ= ಶ್ರುತಿಯಲ್ಲಿ ಪ್ರಯೋಗಿಸಿದ ಪದಗಳನ್ನು ಪರ್ಯಾಲೋಚಿಸಿದಾಗ 'ತನು', ಎಂದರೆ ಅನಾದಿನಿತ್ಯಸ್ವರೂಪದೇಹವೆಂದೇ ಸಿದ್ಧವಾಗು-ವುದರಿಂದ, ಶ್ರುತ್ಯರ್ಥತತ್ವಜ್ಞಾಃ= ಶ್ರುತಿಗಳ ಅರ್ಥತತ್ವವನ್ನು ತಿಳಿದವರು, ಮುಕ್ತ-ಪರಮಾತ್ಮನೋಃ= ಮುಕ್ತಜೀವರಿಗೂ ಮತ್ತು ಪರಮಾತ್ಮನಿಗೂ, ಚಿದಾನಂದ- ಮಯೀಂ= ಜ್ಞಾನಾನಂದಸ್ವರೂಪವಾದ, ತನುಂ= ಶರೀರವನ್ನು, ಪ್ರಾಹುಃ= ಹೇಳುತ್ತಾರೆ. ಜಡ-ದೇಹಿತಾಂ= ಜಡದೇಹವನ್ನು, ನ ಪ್ರಾಹುಃ= ಹೇಳುವುದಿಲ್ಲ.

**ಅನುವಾದ–** ಶ್ರುತಿಯಲ್ಲಿರುವ ಪದಗಳನ್ನು ವಿಮರ್ಶಿಸಿದಾಗ 'ತನು' ಎಂದರೆ ಅನಾದಿ ಮತ್ತು ನಿತ್ಯವಾದ ಚಿತ್‌ಸ್ವರೂಪಶರೀರ ಎಂದು ಅರ್ಥವು ಲಭಿಸುವುದರಿಂದ, ಶ್ರುತಿಯ ಅರ್ಥತತ್ವವನ್ನು ತಿಳಿದವರು ಮುಕ್ತಚೇತನರ ಮತ್ತು ಪರಮಾತ್ಮನ ಶರೀರವನ್ನು ಚಿದಾನಂದಮಯ ಎಂದೇ ಹೇಳುತ್ತಾರೆ. ಅವರಿಗೆ ಜಡದೇಹವಿದೆ ಎಂದು ಹೇಳುವುದಿಲ್ಲ.

**ಭಾವವಿಲಾಸಿನೀ–** ಅತಃ ಶ್ರೌತಪದಪರ್ಯಾಲೋಚನೇ ಸತಿ ಅನಾದಿನಿತ್ಯ ಸ್ವರೂಪಭೂತ-ದೇಹಲಾಭಾತ್ ಚಿದಾನಂದಮಯೀಂ ಚಿದಾನಂದಾತ್ಮಕಚೈತನ್ಯಸ್ವರೂಪತಯಾ ಚಿದಾನಂದ-ಪ್ರಚುರಾಮ್ ॥ ೪೩೬ ॥

ಸಾ ಚ ಜನ್ಮಜರಾರೋಗಹ್ರಾಸನಾಶಾದ್ಯಭಾವತಃ ।
ನ ಕ್ಲೇಶದಾ ತಯೋಸ್ತಸ್ಮಾತ್ ಕಥಂ ದೋಷಾವಹಾ ವದ ॥ ೪೩೭ ॥

**ಅರ್ಥ**–ಸಾ ಚ= ಆ ಅಪ್ರಾಕೃತತನುವು, ಜನ್ಮಜರಾರೋಗಹ್ರಾಸನಾಶಾದ್ಯಭಾವತಃ= ಜನ್ಮ, ಮುದಿತನ, ರೋಗ, ಕುಗ್ಗುವಿಕೆ, ನಾಶ ಮೊದಲಾದ ದೋಷರಹಿತವಾದ್ದರಿಂದ, ನ ಕ್ಲೇಶದಾ= ದುಃಖಪ್ರದವಲ್ಲ. ತಸ್ಮಾತ್=ಆದ್ದರಿಂದ, ತಯೋಃ=ಮುಕ್ತರಿಗೆ ಮತ್ತು ಭಗವಂತನಿಗೆ, ಕಥಂ=ಹೇಗೆ ತಾನೇ, ದೋಷಾವಹಾ=ಮಾಲಿನ್ಯಕರವಾದೀತು? ವದ= ಹೇಳು.

**ಅನುವಾದ–** ಹುಟ್ಟು, ಮುಪ್ಪು, ರೋಗ, ಹ್ರಾಸ, ನಾಶ ಮೊದಲಾದವುಗಳು ಇಲ್ಲದಿರುವುದರಿಂದ ಆ ಶ್ರುತಿಯಲ್ಲಿ ಹೇಳಿದ 'ತನು' ಕ್ಲೇಶದಾಯಕವಲ್ಲ. ಆದ್ದರಿಂದ ಅದು ಮುಕ್ತ ಮತ್ತು ಪರಮಾತ್ಮರಿಗೆ ಹೇಗೆ ದೋಷಕರವಾದೀತು? ಹೇಳು.

**ಭಾವವಿಲಾಸಿನೀ–** ಸ್ವಸ್ವರೂಪಭೂತಾ ತನುಃ । ತಯೋರ್ಜೀವಪರಮಾತ್ಮನೋಃ । ದೋಷಾ-ವಹಾ ಮಲಿನತ್ವಸಂಪಾದಿಕಾ । ಜಡದೇಹವತ್ತ್ವೇ ಹಿ ಮಲಿನತ್ವರೂಪಶಬಲತಾ ಸ್ಯಾತ್ । ಚಿದಾನಂದಾತ್ಮಕದಿವ್ಯದೇಹವತ್ತ್ವೇ ಕಥಂ ಮಾಲಿನ್ಯಮ್ । ಅನ್ಯಥಾ ಚಿದಾನಂದಶಬಲತಯಾಪಿ ಮಾಲಿನ್ಯಪ್ರಸಂಗಾದಿತಿ ಭಾವಃ ॥ ೪೩೭ ॥

**ವಿವರಣೆ–** ಜಡದೇಹಕ್ಕೆ ಮಾತ್ರ ಜನ್ಮ, ಮರಣ, ಭಯ, ನಾಶ ಮುಂತಾದ ದೋಷಗಳು ಇರುತ್ತವೆ. ಈ ದೋಷಗಳಿಂದಾಗಿ ಆ ಶರೀರವು ಜೀವನಿಗೆ ದುಃಖಪ್ರದವಾಗುತ್ತದೆ. ಮುಕ್ತರಿಗೆ ಹಾಗೂ ಪರಮಾತ್ಮನಿಗೆ ಇರುವ ಅಪ್ರಾಕೃತ ದೇಹಗಳಲ್ಲಿ ಜನನಮರಣಾದಿದೋಷಗಳು ಇಲ್ಲದಿರುವುದರಿಂದ, ಈ ದೇಹದಿಂದ ಅವರಿಗೆ ದುಃಖವು (ಮಾಲಿನ್ಯವು, ಶಬಲತೆಯು) ಹೇಗೆ ತಾನೇ ಉಂಟಾದೀತು?

ಕಿಂತು ಸೌಂದರ್ಯಸೌರಭ್ಯಪ್ರಭಾಮಂದಸ್ಮಿತೇಕ್ಷಿತೈಃ ।
ಆಲಿಂಗನೈರಾಲಪನೈಶ್ಚಿತ್ರಮಾಲ್ಯಾನುಲೇಪನೈಃ ॥ ೪೩೮ ॥

**ಪರಾರ್ಧ್ಯಭೂಷಣೈರ್ಮೌಕ್ತನೃತ್ತವಾದಿತ್ರಕೀರ್ತನೈಃ ।**
**ಭೋಗೈಶ್ಚ ವಿವಿಧೈರ್ನಿತ್ಯಂ ಮಹೋತ್ಸಾಹಾವಹೈವ ಹಿ ॥ ೪೩೯ ॥**

**ಅತಸ್ತಯಾ ಶಬಲತಾ ನ ವಿದ್ವಜ್ಜನಸಮ್ಮತಾ ॥ ೪೪೦ ॥**

**ಅರ್ಥ–** ಕಿಂತು=ಆದರೆ, ಸೌಂದರ್ಯಸೌರಭ್ಯಪ್ರಭಾಮಂದಸ್ಮಿತೇಕ್ಷಣೈಃ= ಸೌಂದರ್ಯ, ಸುಗಂಧ, ಕಾಂತಿ, ಮಂದಹಾಸಯುಕ್ತವಾದ ನೋಟ ಇವುಗಳಿಂದ, ಆಲಿಂಗನೈಃ= ಆಲಿಂಗನಗಳಿಂದ, ಆಲಪನೈಃ= ಮೃದು ನುಡಿಗಳಿಂದ, ಚಿತ್ರಮಾಲ್ಯಾನುಲೇಪನೈಃ= ಸುಂದರ ಮತ್ತು ವಿವಿಧ ಪುಷ್ಪ ಮಾಲೆಗಳಿಂದ ಮತ್ತು ಅನುಲೇಪನಗಳಿಂದ, ಪರಾರ್ಧ್ಯಭೂಷಣೈಃ= ಅತಿಶ್ರೇಷ್ಠವಾದ ಆಭರಣಗಳಿಂದ, ಮೌಕ್ತನೃತ್ತವಾದಿತ್ರಕೀರ್ತನೈಃ= ಮುಕ್ತಲೋಕದ ನರ್ತನ ವಾದ್ಯ ಮತ್ತು ಕೀರ್ತನೆಗಳಿಂದ, ಚ= ಮತ್ತು, ವಿವಿಧೈಃ= ವಿಧವಿಧವಾದ, ಭೋಗೈಃ=ಭೋಗಗಳಿಂದ, ನಿತ್ಯಂ=ಯಾವಾಗಲೂ, ಮಹೋತ್ಸಾಹಾವಹಾ ಏವ= ಮಹಾಉತ್ಸಾಹಕರವೇ. ಹಿ= ಈ ವಿಷಯವು ವೇದಪ್ರಸಿದ್ಧ. ಅತಃ=ಆದ್ದರಿಂದ, ತಯಾ=ಆ ಮುಕ್ತದೇಹದಿಂದ, ಶಬಲತಾ= ದೋಷಕರತ್ವವು, ವಿದ್ವಜ್ಜನಸಮ್ಮತಾ ನ= ಜ್ಞಾನಿಗಳಿಗೆ ಸಮ್ಮತವಲ್ಲ.

**ಅನುವಾದ–** ಆದರೆ ಸೌಂದರ್ಯ, ಸುಗಂಧ, ಕಾಂತಿ, ಮಂದಹಾಸಯುಕ್ತವಾದ ನೋಟ, ಆಲಿಂಗನ, ಮೃದು ನುಡಿ, ಸುಂದರವಾದ ವಿವಿಧ ಪುಷ್ಪ ಮಾಲೆಗಳು ಮತ್ತು ಅನುಲೇಪನ, ಅತಿಶ್ರೇಷ್ಠವಾದ ಆಭರಣ, ಮುಕ್ತಲೋಕದ ನರ್ತನ ವಾದ್ಯ ಮತ್ತು ಕೀರ್ತನೆ, ವಿಧವಿಧವಾದ ಭೋಗ- ಇವುಗಳಿಂದ ಆ ಅಪ್ರಾಕೃತತನುವು ಯಾವಾಗಲೂ ಮಹೋತ್ಸಾಹಕರವೇ. ಈ ವಿಷಯವು ವೇದಪ್ರಸಿದ್ಧ. ಆದ್ದರಿಂದ ಆ ಮುಕ್ತದೇಹದಿಂದ ದೋಷಕರತ್ವವು ಜ್ಞಾನಿಗಳಿಗೆ ಸಮ್ಮತವಲ್ಲ.

**ಭಾವವಿಲಾಸಿನೀ–** ನ ಕೇವಲಂ ದೋಷಾವಹಾ ನೇತ್ಯೇವ । ಕಿಂತು ಮೌಕ್ತಸಕಲಮಹೋತ್ಸಾಹ-ಸಂಪಾದಕತ್ವೇನ ಮಹಾಶ್ರೇಯಸ್ಕರೀಚೇತ್ಯಾಹ–**ಕಿಂತ್ವಿತ್ಯಾದಿನಾ ಮಹೋತ್ಸಾಹಾವಹೈವ ಹೀತ್ಯನೇನ ಗ್ರಂಥೇನ** ॥ ೪೩೮-೪೩೯ ॥

ಅತಃ ಉಕ್ತರೀತ್ಯಾ ದೋಷಾಹೇತುತ್ವಾದ್ ಗುಣಸಂಪಾದಕತ್ವಾಚ್ಚ ॥ ೪೪೦ ॥

**ವಿವರಣೆ–** ಮುಕ್ತರ ಚಿದಾನಂದಾತ್ಮಕಶರೀರಗಳು ಮುಕ್ತರಿಗೆ ದುಃಖಪ್ರದಗಳಲ್ಲ ಎಂದು ಮಾತ್ರ ಅಲ್ಲ. ಆ ದೇಹಗಳು ಮೋಕ್ಷದಲ್ಲಿರುವ ಎಲ್ಲ ಮಹೋತ್ಸಾಹಗಳಿಗೆ ಕಾರಣಗಳಾಗಿ ಮಹಾಶ್ರೇಯಸ್ಕರಗಳಾಗಿವೆ.

ಭಗವಂತನ ಅನುಗ್ರಹದಿಂದ ಸ್ವರೂಪದೇಹದ ಅಭಿವ್ಯಕ್ತಿಯನ್ನು ಪಡೆದ ಮುಕ್ತರು ಅತ್ಯುತ್ಸಾಹದಿಂದ, ವಿಧವಿಧವಾದ ಭೋಗಸಾಮಗ್ರಿಗಳಿಂದ ಲೋಕವಿಲಕ್ಷಣವಾದ ಸುಖವನ್ನು

ಅನುಭವಿಸುತ್ತಾರೆ. ಇಂತಹ ದೇಹವನ್ನು ಹೊಂದಿರುವ ಮುಕ್ತನು ಹೇಗೆ ತಾನೇ ಶಬಲನಾದಾನು? ಖಂಡಿತವಾಗಿಯೂ ಶಬಲನಾಗುವುದಿಲ್ಲ.

**ದದತೀ ಶಂ ಬಲ ಚ ತ್ವಚ್ಛಬಲತ್ವಂ ಬಹಿಃ ಕ್ಷಿಪೇತ್ ।**
**ಬಿಂದುಮಾತ್ರಾಧಿಕತ್ವೇಽಪಿ ಪ್ರಬಲೋ ದುರ್ಬಲಂ ಕ್ಷಿಪೇತ್ ॥ ೪೪೧ ॥**

**ಅರ್ಥ–** ಶಂ= ಸುಖವನ್ನೂ, ಬಲಂ ಚ= ಬಲವನ್ನೂ, ದದತೀ=ಮುಕ್ತರಿಗೆ ಕೊಡುವ ಭಗವಂತನ ಚಿದಾನಂದಾತ್ಮಕವಾದ ದೇಹವು, ತ್ವಚ್ಛಬಲತ್ವಂ= ನಿನ್ನ ಶಬಲತೆಯನ್ನು(ಶಬಲತ್ವ ಧರ್ಮವನ್ನು) ಬಹಿಃ= ಹೊರಗೆ, ಕ್ಷಿಪೇತ್=ಎಸೆಯುತ್ತದೆ. ಬಿಂದುಮಾತ್ರಾಧಿಕತ್ವೇಽಪಿ= ಬಿಂದು ಮಾತ್ರದಿಂದ (ಸೊನ್ನೆ ಮಾತ್ರದಿಂದ) ಅಧಿಕನಾದರೂ, ಪ್ರಬಲಃ=ಬಲಿಷ್ಠನು. ದುರ್ಬಲಂ=ಬಲಹೀನನನ್ನು, ಕ್ಷಿಪೇತ್=ನಾಶಪಡಿಸುತ್ತಾನೆ.

**ಅನುವಾದ–** ಪರಬ್ರಹ್ಮನಿಗೆ ಮತ್ತು ಮುಕ್ತಾತ್ಮರಿಗೆ ಶಂ= ಸುಖವನ್ನು ಮತ್ತು ಬಲವನ್ನು ಕೊಡುವ ಚಿನ್ಮಾತ್ರಸ್ವರೂಪದೇಹವು, ನೀನು ಹೇಳುವ ಶಬಲತ್ವವನ್ನು ದೂರ ಎಸೆಯುತ್ತದೆ. 'ಶಬಲ ಶಬ್ದಕ್ಕಿಂತ ಒಂದು ಬಿಂದುವನ್ನು ಹೆಚ್ಚಾಗಿ ಹೊಂದಿರುವ ಶಂಬಲಶಬ್ದವು, ಅಂದರೆ, ಶಂಬಲಶಬ್ದ ಪ್ರವೃತ್ತಿ ನಿಮಿತ್ತವು ಪ್ರಬಲ. ಇದು ದುರ್ಬಲವಾದ 'ಶಬಲ' ಶಬ್ದದ ಪ್ರವೃತ್ತಿ ನಿಮಿತ್ತವಾದ ದೋಷಗಳನ್ನು ದೂರ ಎಸೆಯುವುದು.

**ಭಾವವಿಲಾಸಿನೀ–** ಜ್ಞಾನಾನಂದಸ್ವರೂಪತ್ವಾತ್ ಸ್ವರೂಪಭೂತದೇಹೇನ ಭಗವತಃ ಶಬಲತಾ ನೇತೀಮಮರ್ಥಂ ಸಾಹಿತ್ಯಮುದ್ರಯಾ ಚ ಸಾಧಯತಿ-**ದದತೀತಿ** ॥ ಶಂ ಸುಖಂ ಬಲಂ ಚ ದದತೀ ಭಗವತಸ್ತನುಃ । ಅತ ಏವ ಶಂಬಲರೂಪತ್ವೇನ ಶಂಬಲಶಬ್ದವಾಚ್ಯಾ ಚ । ತ್ವಚ್ಛಬಲತ್ವಂ ಮಾಯಾವಾದಿನಾ ತ್ವಯೋಕ್ತಶಬಲತ್ವಂ ಬಹಿಃ ಭಗವತೋ ಬಹಿಃ ಅಮುಕ್ತಜೀವಾದಿಷು ಕ್ಷಿಪೇದಿತಿ ಸಂಬಂಧಃ। ಪಾಂಚಭೌತಿಕದೇಹಾನ್ ಜೀವಾನೇವ ಶಬಲೀಕುರ್ಯಾತ್ । ಜ್ಞಾನಾ-ನಂದಮಯದಿವ್ಯದೇಹೇ ಭಗವತಿ ಶಬಲತಾಯಾ ಅವಕಾಶಮಪಿ ನ ದಿಶೇದಿತಿ ಭಾವಃ । ತತ್ರ ಲೋಕನ್ಯಾಯಮಾಹ – **ಬಿಂದುಮಾತ್ರೇತಿ**॥ ಬಿಂದುಮಾತ್ರಾಧಿಕತ್ವೇಽಪಿ ಪ್ರಬಲಃ ಬಿಂದು-ಮಾತ್ರೇಣಾಪಿ ಪ್ರಬಲ ಇತ್ಯರ್ಥಃ । ಕ್ಷಿಪೇನ್ನಿರಾಕುರ್ಯಾತ್। ಅಲ್ಪಬಲೇನಾಧಿಕೋಽಪಿ ಪ್ರಬಲಃ ತಾವದ್ಬಲರಹಿತಂ ದುರ್ಬಲಂ ಘಾತಯೇದಿತ್ಯರ್ಥಃ । ಪ್ರಕೃತೇಽಪಿ ಪರೋಕ್ತಶಬಲಾತ್ ಅಸ್ಮದುಕ್ತರೀತ್ಯಾ ಶಂಬಲರೂಪಾ ಭಗವತ್ತನುಃ ಬಿಂದುಮಾತ್ರೇಣಾಧಿಕೇತಿ ತತ್ ಕ್ಷಿಪೇದಿತಿ ಸಾಹಿತ್ಯಮುದ್ರಯಾ ಫಲಿತೋಽರ್ಥಃ । ಸುಖಜ್ಞಾನರೂಪತಯಾ ಶಬಲತಾಂ ವಾರಯೇದಿತಿ ತತ್ತ್ವಾರ್ಥಃ ॥ ೪೪೧ ॥

**ವಿವರಣೆ–** ಭಗವಂತನ ಶರೀರವು ಜ್ಞಾನಾನಂದಸ್ವರೂಪವಾದುದರಿಂದ ಆ ಸ್ವರೂಪದೇಹದಿಂದ ಭಗವಂತನಿಗೆ ಯಾವ ಮಾಲಿನ್ಯವೂ (ಶಬಲತೆಯೂ) ಬರುವದಿಲ್ಲ ಎಂದು ರಾಜರು ಆಲಂಕಾರಿಕವಾಗಿ ಈ ಶ್ಲೋಕದಲ್ಲಿ ನಿರೂಪಿಸುತ್ತಾರೆ.

ಅದ್ವೈತಿಗಳು ಅವರ ಸಗುಣಬ್ರಹ್ಮನನ್ನು ಶಬಲ ಎನ್ನುತ್ತಾರೆ. ನಮ್ಮ ಭಗವಂತನು ಶಂಬಲ. ಅಂದರೆ ಮುಕ್ತರಾದ ಜೀವರಿಗೆ ವಿಶೇಷವಾದ ಸುಖ ಮತ್ತು ಬಲಗಳನ್ನು ಕೊಡುವವನು. ಶಬಲ ಶಬ್ದದಲ್ಲಿ ಇಲ್ಲದ ಒಂದು ಬಿಂದುವು ಶಂಬಲ ಶಬ್ದದಲ್ಲಿ ಇದೆ. ಆದ್ದರಿಂದ ಶಂಬಲಶಬ್ದ ಮತ್ತೂ ಅದರ ಅರ್ಥವು ಹೆಚ್ಚು ಬಲಶಾಲಿಯಾಗಿವೆ. ಲೋಕದಲ್ಲಿ ಪ್ರಬಲನು ದುರ್ಬಲನನ್ನು ನಾಶಪಡಿಸುವಂತೆ ಶಂಬಲತ್ವವು ಶಬಲತ್ವವನ್ನು ನಾಶಪಡಿಸುತ್ತದೆ.

ದೋಷಕ್ಕಿಂತ ಗುಣವು ಪ್ರಬಲ. ಆದ್ದರಿಂದ ಸುಖ-ಬಲಗಳನ್ನು ಕೊಡುವ ಚಿದ್ರೂಪ ಶರೀರವು ತನ್ನಲ್ಲಿ ದೋಷಕ್ಕೆ ಆಸ್ಪದವನ್ನು ಕೊಡುವುದಿಲ್ಲ.

**ಚಿತ್ರಪ್ರಕಾಶಬಲತಃ ಶಬಲೋ ವಾಸ್ತು ನಃ ಪ್ರಭುಃ ।**
**ಯತೋಽಸ್ಯ ಹಾಸೋ ಧವಲಃ ತನುರ್ನೀಲಾಽಧರೋಽರುಣಃ ॥ ೪೪೨ ॥**

**ಅರ್ಥ–** ಯತಃ= ಏಕೆಂದರೆ, ಅಸ್ಯ= ಈ ಭಗವಂತನ, ಹಾಸಃ= ನಗುವು, ಧವಲಃ= ಬಿಳಿ, ತನುಃ= ದೇಹವು, ನೀಲಃ= ನೀಲ, ಅಧರಃ= ಕೆಳತುಟಿಯು, ಅರುಣಃ= ಕೆಂಪು, ಚಿತ್ರಪ್ರಕಾಶಬಲತಃ= ವಿವಿಧಕಾಂತಿಯ ಬಲದಿಂದ, ನಃ= ನಮ್ಮ, ಪ್ರಭುಃ= ಪ್ರಭುವು, ಶಬಲೋ ವಾ ಅಸ್ತು= (ಶಬಲನೂ) ಅನೇಕವರ್ಣಮಿಶ್ರಿತನೂ ಆಗಲಿ.

**ಅನುವಾದ– ನಮ್ಮ ಪ್ರಭುವು ವಿವಿಧ ಕಾಂತಿಯುಳ್ಳವನು. ಇದರ ಬಲದಿಂದ ಅವನು ಶಬಲನೂ ಹೌದು. ಏಕೆಂದರೆ ಅವನ ಮಂದಹಾಸ ಬಿಳಿ, ಶರೀರ ನೀಲ, ಕೆಳತುಟಿ ಕೆಂಪು.**

**ಭಾವವಿಲಾಸಿನೀ– ಏವಂ ದೋಷರೂಪಾಂ ಪರೋಕ್ತಶಬಲತಾಂ ನಿರಾಕೃತ್ಯ ಗುಣರೂಪಾಂ ಕಾಂಚನ ಶಬಲತಾಮಂಗೀಕರೋತಿ ॥ ಚಿತ್ರೇತಿ ॥ ಯತಃ ಪರಮಾತ್ಮನಃ ಹಾಸಃ ಮಂದಹಾಸಃ ಧವಲಃ ಶ್ವೇತಃ ತನುಃ ನೀಲಾ ನೀಲವರ್ಣಾ । ಅಧರಃ ಅಧರೋಷ್ಠಃ ಅರುಣಃ ರಕ್ತವರ್ಣಃ ಉಪಲಕ್ಷಣಂ ಚೈತತ್ । ಹಸ್ತಪಾದತಲಾನ್ಯರುಣಾನಿ । ನಖಾನಾಮಾವಲಿಃ ಶ್ವೇತಾ । ಅಕ್ಷಿಣೀ ಪುಂಡರೀಕವತ್ ಶ್ವೇತೇ । ಕಟಾಕ್ಷೌ ದ್ವೌ ನೀಲೌ । ತದಂತಪ್ರದೇಶೌ ಈಷದರುಣೌ ಚೇತ್ಯಪಿ ದ್ರಷ್ಟವ್ಯಮ್ । ತತಃ ಚಿತ್ರಪ್ರಕಾಶಬಲತಃ ವಿಚಿತ್ರಕಾಂತೀನಾಂ ಬಲತಃ ನಃ ಪ್ರಭುಃ ಶಬಲಃ ಅಸ್ತು ವೇತಿ ಯೋಜನಾ । ನಾನಾವರ್ಣತಯಾ ಗೋರಿವ ಗೋವಿಂದಸ್ಯಾಪಿ ಶಬಲತಾಯಾಂ ನ ನೋ ಹಾನಿರಿತಿ ಭಾವಃ । ಸಾಹಿತ್ಯಮುದ್ರಯಾ ಪರನಿರಾಕರಣಕೌಶಲಂ ಸ್ವಸ್ವರೂಪನಿರೂಪಣ-ಕೌಶಲಂ ಚ ಪಶ್ಯತೋ ಭಗವತಃ ಕೃಪಯಾ ಮಂದಹಾಸೋಽಭೂದಿತಿ ಸೂಚನಾಯ ಸ ಏವಾದೌ ಗೃಹೀತಃ ॥ ೪೪೨ ॥**

**ವಿವರಣೆ–** 'ಶಬಲಾ ಗೌಃ' ಎಂಬ ವ್ಯವಹಾರವು ಲೋಕದಲ್ಲಿ ಪ್ರಸಿದ್ಧವಾಗಿದೆ. ಶಬಲಾ ಎಂದರೆ ಅನೇಕಬಣ್ಣವುಳ್ಳದ್ದು ಎಂದರ್ಥ. ನಮ್ಮ ಭಗವಂತನೂ ಅನೇಕ ವರ್ಣಮಿಶ್ರಿತನಾದುದರಿಂದ ಅವನೂ ಶಬಲನಾಗಲಿ.

ಈವರೆಗೆ 'ಶಬಲ' ಎಂದರೆ ದೋಷಸಹಿತ ಎಂದು ಅರ್ಥವನ್ನು ಸ್ವೀಕರಿಸಿ ಇಂತಹ ಶಬಲತ್ವವು ಭಗವಂತನಿಗೆ ಇಲ್ಲ ಎಂದು ನಿರಾಕರಿಸಿ, ಈಗ ಶಬಲಶಬ್ದಕ್ಕೆ ನಾನಾವರ್ಣವಿಶಿಷ್ಟ ಎಂಬ ಅರ್ಥವನ್ನು ಸ್ವೀಕರಿಸಿ, ಇಂತಹ ಶಬಲತ್ವವು ಭಗವಂತನಲ್ಲಿ ಇದೆ ಎಂದು ಆಲಂಕಾರಿಕವಾಗಿ ಗುರುರಾಜರು ಈ ಶ್ಲೋಕದಲ್ಲಿ ನಿರೂಪಿಸಿದ್ದಾರೆ.

ಇಲ್ಲಿ ಹಾಸ, ತನು, ಕೆಳತುಟಿಯ ಬಣ್ಣಗಳನ್ನು ಹೇಳಲಾಗಿದೆ. ಅಷ್ಟೇ ಅಲ್ಲ, ಹಸ್ತ ಮತ್ತು ಪಾದಗಳ ತಲಗಳು ಕೆಂಪಾಗಿವೆ. ಉಗುರುಗಳು ಬಿಳಿಯಾಗಿವೆ. ಕಣ್ಣುಗಳು ಕಮಲದಂತೆ ಬಿಳಿಯಾಗಿವೆ. ಕಣ್ಣಿನ ಕೊನೆಗಳು ಸ್ವಲ್ಪ ಕೆಂಪಾಗಿವೆ. ಕಡೆಗಣ್ಣಿನ ನೋಟವು ನೀಲವಾಗಿದೆ. ಹೀಗೆ ಭಗವಂತನ ಎಲ್ಲ ಅವಯವಗಳೂ ಒಂದೊಂದೂ ಸುಂದರವರ್ಣದಿಂದ ಕೂಡಿದೆ. ಆದ್ದರಿಂದ, ಅವನು ಶಬಲನಾಗಿದ್ದಾನೆ.

ಶ್ರೀರಾಜರು ನಡೆಸುತ್ತಿರುವ ಕಾವ್ಯಮಯವಾದ ಪರಮತನಿರಾಕರಣೆ, ಸ್ವಮತಸ್ಥಾಪನೆ ಇವುಗಳ ಕೌಶಲವನ್ನು ನೋಡಿದ ಭಗವಂತನಿಗೆ ತಮ್ಮ ಮೇಲೆ ಕೃಪೆಯಿಂದ ಮಂದಹಾಸವು ಮೂಡಿತು ಎಂದು ಸೂಚಿಸಲು ಶ್ರೀರಾಜರು 'ಹಾಸ'ವನ್ನು ಮೊದಲು ಗ್ರಹಿಸಿದ್ದಾರೆ ಎಂದು ಶ್ರೀಸುರೋತ್ತಮತೀರ್ಥರು ತಮ್ಮ ವ್ಯಾಖ್ಯಾನದಲ್ಲಿ ಹೇಳಿದ್ದಾರೆ.

**ನಾಂತಂ ನ ಮಧ್ಯಂ ನೈವಾದಿಂ ಯಸ್ಯಾಪಶ್ಯದ್ ರಣೇಽರ್ಜುನಃ ।**
**ಅನಂತಬಾಹುಜಠರವಕ್ತ್ರನೇತ್ರಭ್ರಮದ್‌ಭ್ರುವಃ ।**
**ವಿಶ್ವರೂಪಾಖ್ಯರೂಪಸ್ಯ ದೃಷ್ಟಸ್ಯ ಜ್ಞಾನಚಕ್ಷುಷಾ ॥ ೪೪೩ ॥**

**ಅನಂತಗಂಧಾಭರಣಾನ್ಯನಂತಕುಸುಮಾನಿ ಚ ।**
**ಅನಂತಾನ್ಯಂಬರಾಣ್ಯಸ್ಯ ಕೇನ ದತ್ತಾನಿ ಸರ್ವದಾ ॥ ೪೪೪ ॥**

**ಅರ್ಥ–** ಅರ್ಜುನಃ= ಅರ್ಜುನನು, ಜ್ಞಾನಚಕ್ಷುಷಾ= ಜ್ಞಾನದೃಷ್ಟಿಯಿಂದ, ದೃಷ್ಟಸ್ಯ= ನೋಡಲ್ಪಟ್ಟ, ಯಸ್ಯ= ಯಾರ, ಅನಂತಬಾಹುಜಠರವಕ್ತ್ರನೇತ್ರಭ್ರಮದ್‌ಭ್ರುವಃ= ಅನಂತ ಬಾಹು, ಉದರ, ಮುಖ, ಕಣ್ಣು ಮತ್ತು ಚಲಿಸುವ ಹುಬ್ಬುಗಳುಳ್ಳ, ವಿಶ್ವರೂಪಾಖ್ಯ-ರೂಪಸ್ಯ= ವಿಶ್ವರೂಪ ಎಂಬ ಹೆಸರಿನ ರೂಪದ, ಅಂತಂ= ಕೊನೆಯನ್ನು, ನ ಅಪಶ್ಯತ್= ಕಾಣಲಿಲ್ಲವೋ, ಮಧ್ಯಂ= ಮಧ್ಯವನ್ನು, ನ ಅಪಶ್ಯತ್= ಕಾಣಲೇ ಇಲ್ಲವೋ, ಆದಿಂ= ಆದಿಯನ್ನು, ನೈವ ಅಪಶ್ಯತ್= ಕಾಣಲಿಲ್ಲವೋ, ಅಸ್ಯ= ಇವನಿಗೆ (ಶ್ರೀಕೃಷ್ಣನಿಗೆ), ಅನಂತಗಂಧಾಭರಣಾನಿ= ಅನಂತ ಗಂಧ ಆಭರಣಗಳು, ಅನಂತ ಕುಸುಮಾನಿ= ಅನಂತಕುಸುಮಗಳು, ಅನಂತಾನಿ ಅಂಬರಾಣಿ= ಅನಂತ ಅಂಬರಗಳು, ಕೇನ= ಯಾರಿಂದ, ದತ್ತಾನಿ?= ಕೊಡಲ್ಪಟ್ಟಿವೆ? (ಇವುಗಳು), ಸರ್ವದಾ= ಯಾವಾಗಲೂ (ಇವೆ).

**ಅನುವಾದ–** ಅರ್ಜುನನು ತನ್ನ ಜ್ಞಾನದೃಷ್ಟಿಯಿಂದ ಅನಂತ ಬಾಹು, ಉದರ, ಮುಖ, ಕಣ್ಣು ಮತ್ತು ಚಲಿಸುವ ಹುಬ್ಬುಗಳುಳ್ಳ ವಿಶ್ವರೂಪ ಎಂಬ ಹೆಸರಿನ ರೂಪದ ಕೊನೆಯನ್ನು ಮಧ್ಯವನ್ನು ಮತ್ತು ಆದಿಯನ್ನು ಕಾಣಲಿಲ್ಲವೋ ಅಂತಹ ಶ್ರೀಕೃಷ್ಣನಿಗೆ ಎಣೆಯಿಲ್ಲದ ಗಂಧ ಮತ್ತು ಆಭರಣಗಳು, ಅನಂತಕುಸುಮಗಳು, ಅನಂತ ವಸ್ತ್ರಗಳು, ಯಾರಿಂದ ಕೊಡಲ್ಪಟ್ಟಿವೆ? ಇವುಗಳು ಯಾವಾಗಲೂ ಇವೆ.

**ಭಾವವಿಲಾಸಿನೀ–** ಭಗವತಃ ಅಮಾಯಿಕಾನಾದಿನಿತ್ಯದೇಹವತ್ತ್ವಂ ಗೀತಾವಾಕ್ಯೇನಾಪಿ ಸಾಧಯತಿ–**ನಾಂತಮಿತ್ಯಾದಿನಾ ॥** ಯಸ್ಯ ದೇಹಸ್ಯ ಅಸ್ಯ ವಿಶ್ವರೂಪಾಖ್ಯರೂಪಸ್ಯೇತಿ ಸಂಬಂಧಃ। ಅನೇನ 'ನಾಂತಂ ನ ಮಧ್ಯಂ ನ ಪುನಸ್ತವಾದಿಂ ಪಶ್ಯಾಮಿ ವಿಶ್ವೇಶ್ವರವಿಶ್ವರೂಪ ಇತಿ ವಚನಂ ಸೂಚಯತಿ । ಅತ್ರಾದ್ಯಂತಶೂನ್ಯತಯಾಽರ್ಜುನದೃಷ್ಟಭಗವದ್ದೇಹಸ್ಯಾನಾದಿನಿತ್ಯತ್ವಂ ಸ್ಪಷ್ಟಮುಕ್ತಮ್ । ಪಶ್ಯಾಮಿ ದೇವಾಂಸ್ತವ ದೇವ ದೇಹೇ ಇತಿ ದೇಹಸ್ಯೈವ ಪ್ರಸ್ತುತತ್ವಾತ್' ಅನಂತಬಾಹೂದರವಕ್ತ್ರನೇತ್ರಂ ಪಶ್ಯಾಮಿ ತ್ವಾಂ ಸರ್ವತೋಽನಂತರೂಪಮ್ ಇತ್ಯಸ್ಯ ಪದ್ಯಸ್ಯ ಪೂರ್ವಾರ್ಧ ಏವ ಪ್ರಸ್ತುತತ್ವಾಚ್ಚ ದೇಹಸ್ಯೈವಾನಾದಿನಿತ್ಯತ್ವಮುಚ್ಯತೇ । ಅಸ್ಯ ವಿಶ್ವರೂಪದೇಹಸ್ಯ ಸರ್ವದಾ ಕೇನ ದತ್ತಾನಿ । ಸರ್ವದೇತ್ಯನೇನ ತದೀಯಾನಾಮನಂತಾನಾಂ ಗಂಧಾಭರಣಕುಸುಮಾಂಬರಾದೀನಾಮಪಿ ಲಕ್ಷ್ಮ್ಯಾತ್ಮಕ- ತಯಾಽನಾದ್ಯನಂತತ್ವಂ ಸೂಚಯತಿ । ಅರ್ಜುನದರ್ಶನಸಮಯೇಽನಂತಾನಾಂ ತೇಷಾಂ ಕೋ ವಾ ಸಂಪಾದಕೋಽಸ್ತಿ । ಅತಸ್ತಾನ್ಯಪ್ಯನಂತಾನಿ । ಕಿಮು ವಾಚ್ಯಂ ತದಾಧಾರದೇಹಸ್ಯೇತಿ ಭಾವಃ ॥ ೪೪೩-೪೪೪ ॥

**ವಿವರಣೆ–** ಭಗವಂತನು ಮಾಯಾಮಯವಲ್ಲದ ಅನಾದಿನಿತ್ಯವಾದ ದೇಹ ಉಳ್ಳವನು ಎಂಬ ವಿಷಯದಲ್ಲಿ ಭಗವದ್‌ಗೀತೆಯೂ ಪ್ರಮಾಣವಾಗಿದೆ.

ರಣರಂಗದ ಮಧ್ಯದಲ್ಲಿ ಆದಿಮಧ್ಯಾಂತರಹಿತವಾದ, ಅನಂತ ಬಾಹು, ಉದರ, ಮುಖ, ನೇತ್ರ, ಹುಬ್ಬುಗಳುಳ್ಳ ವಿಶ್ವರೂಪವನ್ನು ಅರ್ಜುನನು, ಕೃಷ್ಣನೇ ದಯಪಾಲಿಸಿದ ಜ್ಞಾನದೃಷ್ಟಿಯಿಂದ ನೋಡಿದನಷ್ಟೆ? ಈ ವಿಶ್ವರೂಪಕ್ಕೆ ಅಸಂಖ್ಯ ಗಂಧ, ಆಭರಣ, ಹೂವುಗಳು, ಪೀತಾಂಬರಗಳು ಇವುಗಳನ್ನು ಯಾರು ಕೊಟ್ಟರು? ಯಾರೂ ಕೊಡಲಿಲ್ಲ. ಇವು ನಿತ್ಯ.

ಶ್ರೀಕೃಷ್ಣನ ವಿಶ್ವರೂಪದೇಹದಲ್ಲಿ ಅರ್ಜುನನು ಆದಿಮಧ್ಯಾಂತಗಳನ್ನು ಕಾಣದಿರುವುದರಿಂದ ಆ ದೇಹವು ಅನಾದಿನಿತ್ಯ ಎಂದು ಸಿದ್ಧವಾಗುತ್ತದೆ. 'ಪಶ್ಯಾಮಿ ತವ ದೇಹೇ' ಎಂದು ಹೇಳಿದ್ದರಿಂದ ಭಗವಂತನಿಗೆ ದೇಹವಿದೆ ಎಂದು ಸಿದ್ಧವಾಗುತ್ತದೆ.

'ಸರ್ವದಾ' ಎಂದಿದ್ದರಿಂದ ಈ ಶರೀರವು ಯಾವಾಗಲೂ ಇದೆ, ಆ ದೇಹದಲ್ಲಿ ಗಂಧಾಭರಣಕುಸುಮಾಂಬರಗಳೂ ಯಾವಾಗಲೂ ಇರುತ್ತವೆ, ಲಕ್ಷ್ಮೀಸ್ವರೂಪವಾದ ಈ ಗಂಧಾಭರಣಕುಸುಮಾಂಬರಗಳೂ ಅನಾದ್ಯನಂತವಾಗಿದೆ, ಆದ್ದರಿಂದ ಅಪ್ರಾಕೃತ ಎಂದು ಸಿದ್ಧವಾಗುತ್ತದೆ.

ಹೀಗೆ ವಿಶ್ವರೂಪದರ್ಶನದ ಸಂದರ್ಭದಲ್ಲಿರುವ ಅರ್ಜುನನ ಮಾತುಗಳನ್ನು ಗಮನಿಸಿದಾಗ, ಭಗವಂತನು ಅನಾದ್ಯನಂತವಾದ ಅಪ್ರಾಕೃತ ಶರೀರವುಳ್ಳವನೆಂದೂ, ಅವನ ಶರೀರಗಳು, ಅವಯವಗಳು ಮತ್ತು ಆತನ ಆಭರಣಾದಿಗಳು ಅನಾದ್ಯನಂತ ನಿತ್ಯ ಎಂದೂ ಸಿದ್ಧವಾಗುತ್ತದೆ.

**ಸವಿತ್ರೀ ತಸ್ಯ ದೇಹಸ್ಯ ನಾದಿತಿರ್ನಾಪಿ ದೇವಕೀ ।**
**ಯೋ ದೌತ್ಯಮಾಚರದ್ ದೇಹಃ ಸ ಏವೈತಾದೃಶಃ ಕಿಲ ॥ ೪೪೫ ॥**

**ಅರ್ಥ–** ತಸ್ಯ=ಆ, ದೇಹಸ್ಯ=ವಿಶ್ವರೂಪ ದೇಹದ, ಸವಿತ್ರೀ=ಜನನಿಯು, ಅದಿತಿಃ ನ= ಅದಿತಿಯು ಅಲ್ಲ. ದೇವಕೀ ಅಪಿ ನ= ದೇವಕಿಯೂ ಅಲ್ಲ. ಯೋ ದೇಹಃ=ಯಾವ ದೇಹವು, ದೌತ್ಯಂ=ಅರ್ಜುನನ ಸಾರಥ್ಯವನ್ನು, ಆಚರತ್=ಆಚರಿಸಿತೋ, ಸ ಏವ=ಆ ದೇಹವೇ, ಏತಾದೃಶಃ ಕಿಲ= ಈ ವಿಧವಾಗಿದೆಯಲ್ಲವೇ?

**ಅನುವಾದ– ಅರ್ಜುನನಿಂದ ನೋಡಲ್ಪಟ್ಟ ವಿಶ್ವರೂಪಕ್ಕೆ ಅದಿತಿಯು ತಾಯಿ ಅಲ್ಲ. ದೇವಕಿಯೂ ಅಲ್ಲ. ಯಾವ ದೇಹವು ಅರ್ಜುನನಿಗೆ ಸಾರಥಿಯಾಗಿ ಕೆಲಸವನ್ನು ಮಾಡಿತೋ, ಆ ದೇಹವೇ ಈ ವಿಧವಲ್ಲವೆ?**

**ಭಾವವಿಲಾಸಿನೀ–** ತಸ್ಯ ವಿಶ್ವರೂಪದೇಹಸ್ಯ । ತದುದರಕೋಣೇ ಕ್ವಚಿತ್ ಸ್ಥಿತಾ ಅದಿತಿರ್ದೇವಕೀ ವಾ ನ ಸವಿತ್ರೀ । ನನ್ವಸ್ಯ ದೇಹಸ್ಯ ತತ್‌ಪ್ರಸೂತತ್ವಾಭಾವೇಽಪಿ ಅವತಾರದೇಹಸ್ಯ ಭವಿಷ್ಯತೀತ್ಯತ ಆಹ – ಯ ಇತಿ ॥ ಯೋ ದೇಹ ಇತಿ ಸಂಬಂಧಃ । ದೌತ್ಯಂ ದೂತಭಾವಮ್ । ಅರ್ಜುನ-ರಥಸಾರಥ್ಯಮಿತಿ ಯಾವತ್ । ಸ ಏವ ಸಾರಥ್ಯಕಾರೀ ದೇಹ ಏವ ಏತಾದೃಶಃ ಕಿಲ ವಿಶ್ವರೂಪ-ದೇಹಃ ಕಿಲ । ಕಿಲೇತ್ಯನೇನ ತಸ್ಯೈವ ದೇಹಸ್ಯ ವಿಶ್ವರೂಪತ್ವಂ ನತು ಸ ದೇಹೋಽನ್ಯಃ ಅಯಮನ್ಯ ಇತಿ ರೂಪದ್ವಯಕಲ್ಪನಮ್ । ಭಾರತಭಾಗವತಾದಿವಿರುದ್ಧತ್ವಾದಿತಿ ಸೂಚಯತಿ । ತೇನೈವ ರೂಪೇಣ ಚತುರ್ಭುಜೇನ "ಸಹಸ್ರಬಾಹೋ ಭವ ವಿಶ್ವಮೂರ್ತೇ" ಇತ್ಯಸ್ಯೈವ ರೂಪಸ್ಯ ಚತುರ್ಭುಜರೂಪಾಕಾರತ್ವಸ್ಯೋಕ್ತತ್ವಾತ್ ತದ್ರೂಪಂ ತಥೈವಾಸ್ತಿ ಚೇತ್ ಕಿಮರ್ಥಮಿಯಂ ಪ್ರಾರ್ಥನಾ । ಅತಸ್ತಸ್ಯೈವ ರೂಪಸ್ಯ ಸ್ಥೂಲತಾಂ ಸೂಕ್ಷ್ಮತಾಂ ಚ ಸ್ವಶಕ್ತ್ಯಾ ಭಗವಾನ್ ಪ್ರದರ್ಶಯತಿ ॥ ೪೪೫ ॥

**ವಿವರಣೆ–** (1) ಅರ್ಜುನನಿಗೆ ಸಾರಥ್ಯವನ್ನು ಮಾಡಿದ ದೇಹವೇ ವಿಶ್ವರೂಪದೇಹ. ಎರಡೂ ಬೇರೆ ಅಲ್ಲ.

(2) ವಿಶ್ವರೂಪದ ಉದರದ ಮೂಲೆಯಲ್ಲಿ ಇದ್ದ ಅದಿತಿ-ದೇವಕಿಯರು ಈ ರೂಪಕ್ಕೆ ಜನನಿಯರಾಗಬಲ್ಲರೆ?

**ಅನಾದ್ಯನಂತದೇಹೇಽಸ್ಮಿನ್ ಕ್ವ ನಿರಾಕಾರತಾ ಚ ತೇ ।**
**ದಿವ್ಯದೃಷ್ಟ್ಯೈವ ದೃಷ್ಟೋಽಯಂ ಕಥಂ ಮಾಯಾಮಯೋ ಭವೇತ್ ॥ ೪೪೬ ॥**

**ಅರ್ಥ–** ಅನಾದ್ಯನಂತದೇಹೇ=ಅನಾದ್ಯನಂತ ಶರೀರಗಳುಳ್ಳ, ಅಸ್ಮಿನ್=ಈ ಭಗವಂತನಲ್ಲಿ, ತೇ=ನಿನ್ನ (ಮಾಯಾವಾದಿಯ), ನಿರಾಕಾರತಾ=ಆಕಾರರಹಿತತ್ವವು, ಕ್ವ=ಎಲ್ಲಿದೆ? ದಿವ್ಯದೃಷ್ಟ್ಯೈವ= ದಿವ್ಯದೃಷ್ಟಿಯಿಂದಲೇ, ದೃಷ್ಟಃ= ನೋಡಲ್ಪಟ್ಟ, ಅಯಂ= ಈ ವಿಶ್ವರೂಪದೇಹವು, ಕಥಂ= ಹೇಗೆ, ಮಾಯಾಮಯಃ= ಅಜ್ಞಾನಕಲ್ಪಿತವು, ಭವೇತ್= ಆದೀತು?

**ಅನುವಾದ–** ಅನಾದಿಯಾದ ಅನಂತದೇಹಗಳನ್ನು ಹೊಂದಿದ ಪರಮಾತ್ಮನು ನಿರಾಕಾರನಾಗಲು ಅವಕಾಶವೆಲ್ಲಿದೆ? ದಿವ್ಯದೃಷ್ಟಿಯಿಂದ ನೋಡಲ್ಪಟ್ಟ ಈ ರೂಪವು ಹೇಗೆ ಮಾಯಾಕಲ್ಪಿತವಾದೀತು?

**ಭಾವವಿಲಾಸಿನೀ–** ಅಸ್ಮಿನ್ನನಾದ್ಯನಂತದೇಹೇ ಸತಿ ತವ ನಿರಕಾರತಾ ಕ್ವ। ದೇಹಾಪಗಮೇ ಹಿ ಪರಾಭಿಮತಾ ನಿರಾಕಾರತಾ ಸ್ಯಾತ್ । ಉಕ್ತವಿಧಯಾ ದೇಹಸ್ಯಾನಾದಿನಿತ್ಯತ್ವೇ ತು ನಿರಾಕಾರತಾ ದೇಶಾಂತರಂ ಗತೇತಿ ಭಾವಃ। ''ದಿವ್ಯಂ ದದಾಮಿ ತೇ ಚಕ್ಷುಃ ಪಶ್ಯ ಮೇ ಯೋಗಮೈಶ್ವರಮ್'' ಇತಿ ವಚನಾದ್ ದಿವ್ಯದೃಷ್ಟ್ಯೈವ ದೃಷ್ಟ ಇತ್ಯರ್ಥಃ । ಮಾಯಾಯಾಃ ಭ್ರಾಂತದೃಷ್ಟಿಗಮ್ಯತ್ವನಿಯಮೇನಾಯಂ ದೇಹಃ ಕಥಂ ಮಾಯಾಮಯೋ ಭವೇದಿತ್ಯರ್ಥಃ ॥ ೪೪೬ ॥

**ವಿವರಣೆ–** ಪರಮಾತ್ಮನು ನಿರಾಕಾರನಾಗಿದ್ದಾನೆ. ಅವನಿಗೆ ಶರೀರವಿಲ್ಲ. ಶರೀರವಿದ್ದರೂ ಅದು ಮಾಯಾಕಲ್ಪಿತವಾಗಿದೆ ಎಂಬ ಅದ್ವೈತಿಗಳ ವಿಚಾರವನ್ನು ರಾಜರು ಈ ಶ್ಲೋಕದಲ್ಲಿ ನಿರಾಕರಿಸುತ್ತಿದ್ದಾರೆ.

ಹಿಂದೆ ನಿರೂಪಿಸಿದಂತೆ, ಅನೇಕಶ್ರುತಿಸ್ಮೃತಿಗಳಿಂದ ಭಗವಂತನು ಅನಾದ್ಯನಂತ ಶರೀರವುಳ್ಳವನಾಗಿದ್ದಾನೆ, ಅವನ ಶರೀರದಲ್ಲಿರುವ ಪ್ರತಿಯೊಂದು ಅವಯವವೂ ಸುಂದರವಾಗಿವೆ ಎಂದು ಸಿದ್ಧವಾಗಿರುವುದರಿಂದ, ಪರಮಾತ್ಮನು ನಿರಾಕಾರನಾಗಿದ್ದಾನೆ ಎಂಬ ಮಾಯಾವಾದಿಗಳ ವಿಚಾರಕ್ಕೆ ಎಲ್ಲೂ ಅವಕಾಶವಿಲ್ಲ.

ಅರ್ಜುನನಿಗೆ ಇರುವ ಪ್ರಾಕೃತ ಕಣ್ಣಿನಿಂದ ಅವನು ವಿಶ್ವರೂಪದರ್ಶನವನ್ನು ಮಾಡಲಾರನು ಎಂದು ಅರಿತ ಭಗವಂತನು 'ದಿವ್ಯಂ ದದಾಮಿ ತೇ ಚಕ್ಷುಃ' ಎಂದು ಹೇಳಿ ದಿವ್ಯಚಕ್ಷುಸ್ಸನ್ನು ದಯಪಾಲಿಸುತ್ತಾನೆ. ಭಗವಂತನು ದಯಪಾಲಿಸಿದ ಅಪ್ರಾಕೃತವಾದ ದೃಷ್ಟಿಯಿಂದ ಅರ್ಜುನನು ಭಗವಂತನ ಅಪ್ರಾಕೃತವಿಶ್ವರೂಪವನ್ನು ಕಂಡಿದ್ದಾನೆ. ಆದ್ದರಿಂದ, ಭಗವಂತನ ದೇಹವು ಭ್ರಾಂತಿವಿಷಯವಲ್ಲ. ಆದ್ದರಿಂದ ಅದು ಮಿಥ್ಯಾ ಅಲ್ಲ. ಸತ್ಯವೇ ಆಗಿದೆ.

**ಮಾಯಾದೂರತ್ವವಾಚಾ ಚ ನೇದಂ ಮಾಯಾಮಯಂ ವಪುಃ ॥ ೪೪೭ ॥**

**ಅರ್ಥ–** ಮಾಯಾದೂರತ್ವವಾಚಾ ಚ=ಭಗವಂತನು ಮಾಯಾವಿದೂರನಾಗಿದ್ದಾನೆ ಎಂಬ ಶ್ರುತಿ ಮತ್ತು ಸ್ಮೃತಿವಾಕ್ಯಗಳಿಂದಲೂ, ಮತ್ತು ಹಿಂದೆ ಹೇಳಿದ ಯುಕ್ತಿಗಳಿಂದಲೂ, ಇದಂ ವಪುಃ=ಅರ್ಜುನನು ಕಂಡ ಈ ವಿಶ್ವರೂಪ ದೇಹವು, ನ ಮಾಯಾಮಯಮ್= ಮಾಯಾಕಲ್ಪಿತ ಅಲ್ಲ (ಮಿಥ್ಯಾ ಅಲ್ಲ).

**ಅನುವಾದ– ಭಗವಂತನು ಮಾಯಾವಿದೂರನಾಗಿದ್ದಾನೆ ಎಂದು ಹೇಳುವ ಶ್ರುತಿ ಮತ್ತು ಸ್ಮೃತಿವಾಕ್ಯಗಳಿಂದಲೂ ಮತ್ತು ಹಿಂದೆ ಹೇಳಿದ ಯುಕ್ತಿಗಳಿಂದಲೂ ಅರ್ಜುನನು ಕಂಡ ಈ ವಿಶ್ವರೂಪ ದೇಹವು ಮಾಯಾಕಲ್ಪಿತವಲ್ಲ ಎಂದು ತಿಳಿಯುತ್ತದೆ.**

**ಭಾವವಿಲಾಸಿನೀ– ಪ್ರಾಗುಕ್ತವಚನಾನ್ಯಪಿ ಸ್ಮಾರಯತಿ– ಮಾಯೇತಿ ॥ ಚಶಬ್ದಾದ್ಯುಕ್ತಿಭಿಶ್ಚ ॥೪೪೭॥**

**ವಿವರಣೆ–** 'ಮಾಯಾಂ ವ್ಯುದಸ್ಯ ಚಿಚ್ಛಕ್ತ್ಯಾ' ಮೊದಲಾದ ಹಿಂದೆ ಉದಾಹರಿಸಿದ ಶ್ರುತಿ ಮತ್ತು ಸ್ಮೃತಿಗಳಿಂದ ಮತ್ತು ಯುಕ್ತಿಗಳಿಂದಲೂ ಅರ್ಜುನನು ಕಂಡ ಶ್ರೀಕೃಷ್ಣನು ತೋರಿಸಿದ ವಿಶ್ವರೂಪ ಶರೀರವು ಮಾಯಾಕಲ್ಪಿತವಲ್ಲ ಎಂದು ತಿಳಿಯುತ್ತದೆ.

**ಅಪರಿಚ್ಛಿನ್ನದೇಹೋಽಯಂ ಪಾರ್ಥಪ್ರತ್ಯಕ್ಷಗೋಚರಃ ।**
**ಪರಿಚ್ಛಿನ್ನಭವನ್ಮಾಯಾಮಯೋ ನೈವೇತಿ ಮೇ ಮತಿಃ ॥ ೪೪೮ ॥**

**ಅರ್ಥ–** ಪಾರ್ಥಪ್ರತ್ಯಕ್ಷಗೋಚರಃ=ಅರ್ಜುನನ ದೃಷ್ಟಿಗೆ ವಿಷಯವಾದ, ಅಯಂ=ಈ ವಿಶ್ವರೂಪದೇಹವು, ಅಪರಿಚ್ಛಿನ್ನದೇಹಃ=ದೇಶಕಾಲಗಳ ಮಿತಿ ಇಲ್ಲದ ದೇಹ. ಈ ದೇಹವು ಪರಿಚ್ಛಿನ್ನಭವನ್ಮಾಯಾಮಯಃ= ದೇಶಕಾಲಗಳ ಮಿತಿ ಇರುವ ನೀನು ಹೇಳುವ ಮಾಯಾಮಯವಾದ ದೇಹವು, ನೈವ ಇತಿ=ಅಲ್ಲವೇ ಅಲ್ಲ ಎಂದು, ಮೇ=ನನ್ನ, ಮತಿಃ=ಅಭಿಪ್ರಾಯ.

**ಭಾವವಿಲಾಸಿನೀ–** ಭಗವದ್ದೇಹಸ್ಯ ಮಾಯಾಮಯತ್ವಾಭಾವೇ ಸ್ವಾರ್ತಯುಕ್ತ್ಯಂತರಂ ಚಾಹ – **ಅಪರಿಚ್ಛಿನ್ನೇತಿ ॥ ೪೪೮ ॥**

**ತತ ಏವ ಸ ಸತ್ಯೋಽಭೂತ್ ನಿತ್ಯಶ್ಚ ಪರಮಾತ್ಮವತ್ ।**
**ಬ್ರಹ್ಮವಚ್ಛಿನ್ಮಯೋಽಪ್ಯಾಸೀತ್ ತ್ವನ್ನಯಾನ್ನೈವ ಮನ್ನಯಾತ್ ॥ ೪೪೯ ॥**

**ಅರ್ಥ–** ತತ ಏವ=ಅಪರಿಚ್ಛಿನ್ನವಾದ್ದರಿಂದಲೇ, ಸಃ=ಅರ್ಜುನನು ಕಂಡ ಆ ದೇಹವು, ತ್ವನ್ನಯಾದ್ ಏವ= ನಿನ್ನ ನ್ಯಾಯದಿಂದ, ಪರಮಾತ್ಮವತ್=ಪರಮಾತ್ಮನಂತೆಯೇ, ಸತ್ಯಃ= ಸತ್ಯವೂ, ನಿತ್ಯಶ್ಚ=ನಿತ್ಯವೂ, ಅಭೂತ್=ಆಯಿತು. ಬ್ರಹ್ಮವತ್= ಬ್ರಹ್ಮನಂತೆಯೇ,

ಚಿನ್ಮಯೋಽಪಿ= ಚಿನ್ಮಯವೂ, ಆಸೀತ್= ಆಯಿತು, ಮನ್ನಯಾದೇವ ನ= ನನ್ನ ದರ್ಶನದ ನ್ಯಾಯದಿಂದ ಮಾತ್ರ ಅಲ್ಲ.

**ಅನುವಾದ–** ಅರ್ಜುನನು ನೋಡಿದ ಆ ದೇಹವು ಅಪರಿಚ್ಛಿನ್ನವಾದ್ದರಿಂದ ಪರಮಾತ್ಮನಂತೆ ಸತ್ಯ ಮತ್ತು ನಿತ್ಯ; ಬ್ರಹ್ಮನಂತೆ ಚಿನ್ಮಯವೂ ಹೌದು; ಇದು ನಿನ್ನ ಮತದ ನ್ಯಾಯದಂತೆ, ಕೇವಲ ನನ್ನ ಮತದ ನ್ಯಾಯದಂತೆ ಅಲ್ಲ.

**ಭಾವವಿಲಾಸಿನೀ–** ತತ ಏವಾಪರಿಚ್ಛಿನ್ನತ್ವಾದೇವ । ಸಃ ದೇಹಃ । ಪರಮಾತ್ಮವದಿತಿ ದೃಷ್ಟಾಂತಃ । ಏಮತೋ ಭಗವದ್ದೇಹಃ ಪರಮಾರ್ಥಸತ್ಯಃ ಸಾರ್ವಕಾಲೀನತಯಾ ನಿತ್ಯಶ್ಚೇತಿ ಸಾಧ್ಯದ್ವಯಮ್ । ಅಪರಿಚ್ಛಿನ್ನತ್ವಾತ್ ಪರಮಾತ್ಮವದಿತಿ ಪ್ರಯೋಗೋ ದ್ರಷ್ಟವ್ಯಃ । ಅನೇನೈವ ಹೇತುನಾ ಪ್ರಮೇಯಾಂತರಮಪಿ ಸಿದ್ಧಮಿತ್ಯಾಹ – **ಬ್ರಹ್ಮವದಿತಿ** ॥ ತ್ವನ್ನಯಾತ್ ತವ ಸಿದ್ಧಾಂತರೀತ್ಯೈವ । ಮನ್ನಯಾದೇವ ನ । ಪರಮತೇ ಬ್ರಹ್ಮಣೋಽನ್ಯತ್ರಾಪರಿಚ್ಛಿನ್ನತ್ವಾಭಾವಾತ್ ಪರಿರೀತ್ಯೈವೇದ-ಮನುಮಾನಮಿತಿ ಭಾವಃ ॥ ೪೪೯ ॥

**ವಿವರಣೆ–** ಅರ್ಜುನನು ಕಂಡ ವಿಶ್ವರೂಪದೇಹವು ಅಪರಿಚ್ಛಿನ್ನವಾದುದರಿಂದಲೇ, ಅದು ಪರಮಾತ್ಮನಂತೆಯೇ ಸತ್ಯ ಮತ್ತು ಪರಬ್ರಹ್ಮನಂತೆ ಚಿನ್ಮಯ. ಈ ವಿಷಯವು ಕೇವಲ ಮಧ್ವಸಿದ್ಧಾಂತದಂತೆ ಅಲ್ಲ, ಅದ್ವೈತ ಸಿದ್ಧಾಂತದಂತೆಯೂ ಸಿದ್ಧಿಸುತ್ತದೆ. ಹೇಗೆಂದರೆ, ಅದ್ವೈತ ಸಿದ್ಧಾಂತದಲ್ಲಿ ಬ್ರಹ್ಮ ಮಾತ್ರ ಸತ್ಯ, ನಿತ್ಯ ಮತ್ತು ಅಪರಿಚ್ಛಿನ್ನ. ಬ್ರಹ್ಮಭಿನ್ನವಾದ ಎಲ್ಲ ಪದಾರ್ಥಗಳೂ ಪರಿಚ್ಛಿನ್ನವಾಗಿವೆ. ಅರ್ಜುನನು ಕಂಡ ಈ ವಿಶ್ವರೂಪದೇಹಕ್ಕೆ ಆದಿ-ಮಧ್ಯ-ಅಂತಗಳಿಲ್ಲದಿರುವುದರಿಂದ ಇದು ಬ್ರಹ್ಮನಂತೆಯೇ ಅಪರಿಚ್ಛಿನ್ನವಾಗಿದೆ. ಅಪರಿಚ್ಛಿನ್ನವಾದುದರಿಂದ ಬ್ರಹ್ಮನಂತೆ ಸತ್ಯ ನಿತ್ಯ ಮತ್ತು ಚಿದ್ರೂಪ ಎಂದು ಸಿದ್ಧವಾಗುತ್ತದೆ.

**ಕ್ವಾನಂತಸೂರ್ಯಸಂಕಾಶಪ್ರಕಾಶೋ ಮುಕ್ತಿದಃ ಪ್ರಭುಃ ।**
**ಕ್ವ ತೇ ತಮೋಮಯೀ ಮಾಯಾ ಯಂ ಪ್ರಪನ್ನೋಽಪಿ ಯಾಂ ತರೇತ್**
**॥ ೪೫೦ ॥**

**ಅರ್ಥ–** ಯಂ=ಯಾವ ಪರಮಾತ್ಮನಿಗೆ, ಪ್ರಪನ್ನೋಽಪಿ= ಶರಣಾಗತನಾದವನೂ ಕೂಡ, ಯಾಂ=ಯಾವ ಮಾಯೆಯನ್ನು, ತರೇತ್=ದಾಟುತ್ತಾನೆಯೋ, ಅಂತಹ, ಅನಂತ-ಸೂರ್ಯಸಂಕಾಶಪ್ರಕಾಶಃ= ಅನಂತಸೂರ್ಯರ ಪ್ರಕಾಶಕ್ಕೆ ಸದೃಶವಾದ ಪ್ರಕಾಶವುಳ್ಳ, ಮುಕ್ತಿದಃ=ಮೋಕ್ಷವನ್ನು ಕೊಡುವ, ಪ್ರಭುಃ= ಸರ್ವಸ್ವಾಮಿಯಾದ ಆ ನಾರಾಯಣನು, ಕ್ವ=ಎಲ್ಲಿ? ತೇ=ನಿನಗೆ ಸಮ್ಮತವಾದ, ತಮೋಮಯೀ= ಅವಿದ್ಯಾಮಯವಾದ, ಮಾಯಾ= ಮಾಯೆಯು, ಕ್ವ=ಎಲ್ಲಿ?

**ಅನುವಾದ–** ಯಾರಿಗೆ ಶರಣಾಗತನಾದವನು ಯಾವ ಮಾಯೆಯನ್ನು ದಾಟುವನೋ, ಅಂತಹ ಅನಂತಸೂರ್ಯರಿಗೆ ಸಮಾನವಾದ ಪ್ರಕಾಶವುಳ್ಳ, ಮುಕ್ತಿಯನ್ನು ಕೊಡುವ ಪ್ರಭು ಎಲ್ಲಿ? ಅವಿದ್ಯಾಮಯವಾದ ನಿನ್ನ ಮಾಯೆ ಎಲ್ಲಿ?

**ಭಾವವಿಲಾಸಿನೀ–**ಭಗವತಃ ಅಮಾಯಿಕದೇಹವತ್ತ್ವೇ ಪುನರಪಿ ಯುಕ್ತಿದ್ವಯಮಾಹ– **ಕ್ವಾನಂತೇತಿ** ॥ ಪ್ರಕಾಶತಮಸೋಃ ಪರಸ್ಪರವಿರೋಧಾದಿತಿ ಯುಕ್ತಿರನೇನ ಸೂಚಿತಾ । ಯಂ ಪರಮಾತ್ಮಾನಂ ಪ್ರಪನ್ನಃ ಶ್ರವಣಮನನಾದಿನಾ ಪ್ರಪನ್ನಃ ಶರಣಂ ಪ್ರಾಪ್ತಃ ಯಾಂ ಮಾಯಾಂ ''ಮಾಮೇವ ಯೇ ಪ್ರಪದ್ಯಂತೇ ಮಾಯಾಮೇತಾಂ ತರಂತಿ'' ಇತಿ ವಚನಾತ್ । ಯದಾ ತದ್ಭಕ್ತೋऽಪಿ ಮಾಯಾತರಣಸಮರ್ಥಃ ತದಾ ಸುತರಾಂ ಚ ಭಗವಾನಿತಿ ಯುಕ್ತಿರನೇನ ಸೂಚಿತಾ ॥ ೪೫೦ ॥

**ವಿವರಣೆ–** ನಿತ್ಯವೂ ಅನಂತಾನಂತ ಸೂರ್ಯರ ಪ್ರಕಾಶಕ್ಕೆ ಸಮಾನವಾದ ಪ್ರಕಾಶಸ್ವರೂಪನಾದ ಭಗವಂತನು ಹೇಗೆ ತಾನೇ ಮಾಯಾಮಯನಾಗಿರಲು ಸಾಧ್ಯ? ಮಾಯೆ ಎಂದರೆ ಅವಿದ್ಯೆ ಅದು ಅಂಧಕಾರಕ್ಕೆ ಸದೃಶ. ಪ್ರಕಾಶರೂಪನಾದವನು ಅಂಧಕಾರಮಯನಾಗಲು ಹೇಗೆ ಸಾಧ್ಯ? ಭಗವಂತನ ಶರೀರವು ಅಜ್ಞಾನಕಲ್ಪಿತ ಅಲ್ಲ. ಅದು ಸದಾ ನಿತ್ಯ, ಚಿನ್ಮಯ ಮತ್ತು ಸತ್ಯ.

'ಮಾಮೇವ ಯೇ ಪ್ರಪದ್ಯಂತೇ ಮಾಯಾಮೇತಾಂ ತರಂತಿ ತೇ' ಎಂದು ಗೀತೆಯಲ್ಲಿ (7.14) ಹೇಳಿದಂತೆ, ಭಗವಂತನಿಗೆ ಶರಣಾಗತರಾದ ಭಕ್ತರು ತಮ್ಮ ಅಜ್ಞಾನವನ್ನು ಕಳೆದುಕೊಳ್ಳುತ್ತಾರೆ. ಭಕ್ತರ ಅಜ್ಞಾನವನ್ನು ದೂರೀಕರಿಸುವ ಭಗವಂತನು ಹೇಗೆ ತಾನೇ ಅಜ್ಞಾನಕಲ್ಪಿತ (ಮಿಥ್ಯಾ)ನಾಗಿರಲು ಸಾಧ್ಯ? ಆದ್ದರಿಂದ, ನಿನ್ನ ಮಾಯೆ ಎಲ್ಲಿ? ಭಗವಂತನೆಲ್ಲಿ?

ಪ್ರಾಯೋ ದಗ್ಧಪಟಪ್ರಾಯಾ ಯಾ ಯಜ್‌ಜ್ಞಾನೋದಯೇ ಹೃದಿ ।
ಮಾಯಾನಿಸ್ತರಣೋಪಾಯಃ ಸೋऽಯಂ ಮಾಯಾಮಯಃ ಕಿಲ
॥ ೪೫೧ ॥

**ಅರ್ಥ–** ಹೃದಿ=ಹೃದಯದಲ್ಲಿ, ಯಜ್‌ಜ್ಞಾನೋದಯೇ ಸತಿ=ಯಾವ ಭಗವಂತನ ಅಪರೋಕ್ಷ ಜ್ಞಾನವು ಉಂಟಾದಾಗ, ಯಾ=ಯಾವ ಮಾಯೆಯು (ಅಜ್ಞಾನವು), ಪ್ರಾಯಃ= ಪ್ರಾಯೇಣ, ದಗ್ಧಪಟಪ್ರಾಯಾ=ಸುಟ್ಟ ವಸ್ತ್ರದಂತೆ ಆಗುತ್ತದೆಯೋ, ಮಾಯಾ-ನಿಸ್ತರಣೋಪಾಯಃ= ಮಾಯೆಯನ್ನು ದೂರೀಕರಿಸಲು ಕಾರಣನಾದ, ಸಃ ಅಯಂ=ಆ ಈ ಭಗವಂತನು, ಮಾಯಾಮಯಃ ಕಿಲ=ಮಾಯಾಮಯನಾಗಿದ್ದಾನಂತೆ!

**ಅನುವಾದ–** ಹೃದಯದಲ್ಲಿ ಯಾರ ಜ್ಞಾನವು ಉದಯಿಸಿದಾಗ, ಯಾವುದು ಪ್ರಾಯಶಃ ಸುಟ್ಟಬಟ್ಟೆಗೆ ಸಮಾನವಾಗುವುದೋ, ಮಾಯೆಯನ್ನು ದಾಟುವ ಸಾಧನವಾಗಿರುವ ಆ ಇವನು ಮಾಯಾಮಯ ಅಲ್ಲವೇ!

**ಭಾವವಿಲಾಸಿನೀ–** ಯುಕ್ತ್ಯಂತರಂ ಚಾಹ – **ಪ್ರಾಯ ಇತಿ** ॥ ಯಜ್‌ಜ್ಞಾನೋದಯೇ ಯಸ್ಯಾ-ಪರೋಕ್ಷಜ್ಞಾನೋದಯೇ ಯಾ ಮಾಯಾ । ಮಾಯಾನಿಸ್ತರಣೋಪಾಯಸ್ಸ ಭಗವಾನ್ ಸ್ವದರ್ಶನಮಾತ್ರೇಣ ಮಾಯಾಂ ದಗ್ಧಪಟೋಪಮಾಂ ಕುರ್ವನ್ನಿತ್ಯರ್ಥಃ । ತಯಾ ಮಾಯಯಾ ಮಾಯಾಮಯಃ ಕಿಲೇತ್ಯುಪಹಾಸಃ ॥ ೪೫೧ ॥

**ವಿವರಣೆ–** ಸುಟ್ಟ ಬಟ್ಟೆಗೆ ಆಕಾರ ಇದೆ. ಆದರೆ, ಆ ಬಟ್ಟೆಯು ಯಾವ ಉಪಯೋಗಕ್ಕೂ ಬರುವುದಿಲ್ಲ. ಸಾಧಕನಿಗೆ ತನ್ನ ಹೃದಯಗುಹೆಯಲ್ಲಿರುವ ಬಿಂಬರೂಪಿಯಾದ ಭಗವಂತನ ಸಾಕ್ಷಾತ್ಕಾರವಾದಾಗ, ಅವನ ಅಜ್ಞಾನವೂ ಸುಟ್ಟಬಟ್ಟೆಯಂತೆ ಆಗುತ್ತದೆ ಎಂದರೆ ಅಪರೋಕ್ಷಜ್ಞಾನಾನಂತರ ಇರುವ ಅಜ್ಞಾನದಿಂದ ಯಾವ ಕಾರ್ಯವೂ ನಡೆಯುವುದಿಲ್ಲ. ಆದ್ದರಿಂದ, ತನ್ನ ಭಕ್ತರ ಅಜ್ಞಾನವನ್ನು ಕಳೆಯುವ ಸಾಮರ್ಥ್ಯವುಳ್ಳ ಭಗವಂತನು ತಾನೇ ಅಜ್ಞಾನಕಲ್ಪಿತನಾಗುವುದು ಹೇಗೆ? ಮಾಯಾಮಯಃ ಕಿಲ - ಇದು ಉಪಹಾಸ.

ಅಸ್ತ್ಯಸ್ತಿತೋಕ್ತೌ ನಾಸ್ತೀತಿ ಪ್ರತಿವಾಗತಿವಾದಿನಿ ।
ಸಹಸ್ರಶೀರ್ಷಾ ಶ್ರೌತೋ ಯೋ ನೈಕಶೀರ್ಷಾಪ್ಯಸೌ ಕಿಲ ॥ ೪೫೨ ॥

**ಅರ್ಥ–** ಅಸಿತೋಕ್ತೌ=ಯಾವುದಾದರೊಂದು ಪದಾರ್ಥವು ಇದೆ ಎಂದು ಹೇಳಿದಾಗ, ಅತಿವಾದಿನಿ= ದೋಷಾನ್ವೇಷಿಯಾದ ಪುರುಷನಲ್ಲಿ, ನಾಸ್ತೀತಿ=ಆ ಪದಾರ್ಥವು ಇಲ್ಲ ಎಂಬ, ಪ್ರತಿವಾಕ್=ಪ್ರತಿವಚನವು (ವಿರುದ್ಧವಾದ ಮಾತು), ಅಸ್ತಿ= ಇರುತ್ತದೆ. ಇದಕ್ಕೆ ದೃಷ್ಟಾಂತವು ಹೀಗಿದೆ. ಯಃ=ಯಾರು, ಸಹಸ್ರಶೀರ್ಷಾ=ಅನಂತ ಶಿರಸ್‌ಉಳ್ಳವನು ಎಂದು, ಶ್ರೌತಃ= ಶ್ರುತಿಪ್ರತಿಪಾದಿತನೋ, ಅಸೌ=ಈ ಭಗವಂತನು, ಏಕಶೀರ್ಷಾ ಅಪಿ=ಒಂದು ತಲೆಯುಳ್ಳವನೂ, ನ ಕಿಲ= ಅಲ್ಲವಂತೆ!

**ಅನುವಾದ–** ಅತಿಯಾಗಿ (ಅಸಂಗತವಾಗಿ) ಮಾತನಾಡುವ ಸ್ವಭಾವವುಳ್ಳವರು. 'ಅಸ್ತಿ' ಎಂಬ ಮಾತಿಗೆ ವಿರುದ್ಧವಾಗಿ 'ನಾಸ್ತಿ' ಎಂದು ಹೇಳುತ್ತಾರೆ. ಪರಮಾತ್ಮನು 'ಸಹಸ್ರಶೀರ್ಷಾ' ಎಂದು ಶ್ರುತಿಗಳು ಹೇಳುತ್ತವೆ. ಇಂತಹ ಪರಮಾತ್ಮನಿಗೆ ಒಂದು ಶಿರಸ್ಸೂ ಇಲ್ಲವಂತೆ! (ಅವನು ನಿರಾಕಾರನಂತೆ!)

**ಭಾವವಿಲಾಸಿನೀ–** ಇದಾನೀಂ ಪುರುಷಸೂಕ್ತಾರ್ಥಂ ವಕ್ತುಂ ತತ್‌ಪ್ರಸಕ್ತ್ಯರ್ಥಂ ಕಾಂಚನ ನೀತಿಂ ವದನ್ ಪ್ರತಿವಾದಿನಮುಪಹಸತಿ – **ಅಸ್ತೀತಿ** ॥ ಅಸ್ತಿತೋಕ್ತೌ ಅಸ್ತೀತಿ ಕಸ್ಯಚಿತ್ ವಿಶಿಷ್ಟಸ್ಯೋಕ್ತೌ ಸತ್ಯಾಮ್ । ಅತಿವಾದಿನಿ ಬಹುಭಾಷಿಣಿ ಯತ್ಕಿಂಚಿಜ್ಜಲ್ಪತಿ ಖಲೇ ನಾಸ್ತೀತಿ ಪ್ರತಿವಾಕ್ ಅಸ್ತೀತ್ಯಸ್ಯ ಪ್ರತಿವಾಕ್ ಅಸ್ತಿ । ಯತ್ಕಿಂಚಿದಬದ್ಧಂ ಪ್ರತಿವದತ್ಯೇವೇತ್ಯರ್ಥಃ । ತತ್ ಕುತ್ರ ದೃಷ್ಟಮಿತ್ಯತ ಉಕ್ತಂ

**ಸಹಸ್ರಶೀರ್ಷೇತ್ಯಾದಿ ॥** ಯಃ ಪರಮಾತ್ಮಾ ಸಹಸ್ರಶೀರ್ಷಾ ಶ್ರೌತಃ ಸಹಸ್ರಶೀರ್ಷೇತಿ ಶ್ರುತಿಪ್ರತಿಪಾದಿತ ಇತ್ಯರ್ಥಃ । ಅಸಾವೇಕಶೀರ್ಷಾಪಿ ನ ಕಿಲ । ಅಸ್ಯಾಃ ದುರ್ನೀತೇಃ ಸಹಸ್ರಶೀರ್ಷ್ಣೋ ಹರೇರ್ನಿರಾಕಾರತಾವಾದ್ಯೇವ ನಿದರ್ಶನಮಿತಿ ಭಾವಃ ॥ ೪೫೨ ॥

**ವಿವರಣೆ–** ಮುಂದೆ ಪುರುಷಸೂಕ್ತದ ಅರ್ಥವನ್ನು ಹೇಳಲು ಹೊರಟ ರಾಜರು ಅದಕ್ಕೆ ಪೀಠಿಕೆಯಾಗಿ ಲೋಕಪ್ರಸಿದ್ಧವಾದ ಒಂದು ನೀತಿಯನ್ನು ಉದಾಹರಿಸುತ್ತಾರೆ.

'ಏತಿ ಅಂದರೆ ಪ್ರೇತಿ' ಎನ್ನುತ್ತಾನೆ. ಅಥವಾ 'ಪೂರ್ವ ಅಂದರೆ ಪಶ್ಚಿಮ' ಎನ್ನುತ್ತಾನೆ ಎಂಬ ಪ್ರಸಿದ್ಧವಾದ ಗಾದೆಯಂತೆ ಲೋಕದಲ್ಲಿ ದುಷ್ಟರಾದವರು ಅಥವಾ ದುರಾಗ್ರಹಪೀಡಿತರಾದವರು, ತನ್ನ ಎದುರಾಳಿಯು 'ಒಂದು ಪದಾರ್ಥವು ಇದೆ' ಎಂದು ಹೇಳಿದರೆ, ಕೂಡಲೇ ಏನನ್ನೂ ವಿಚಾರ ಮಾಡದೇ 'ಆ ಪದಾರ್ಥವು ಇಲ್ಲ' ಎನ್ನುತ್ತಾನೆ. ಅದರಂತೆ 'ಸಹಸ್ರಶೀರ್ಷಾ ಪುರುಷಃ' ಎಂಬ ವೇದವಾಕ್ಯವು ಶ್ರೀಹರಿಯು ಅನಂತ ಶಿರಸ್ಸುಳ್ಳವನಾಗಿದ್ದಾನೆ ಎಂದು ಹೇಳಿದರೆ ಮಾಯಾವಾದಿಯು ಆ ಭಗವಂತನಿಗೆ ಅವಯವಗಳೇ ಇಲ್ಲ, ಅವನು ನಿರಾಕಾರ, ಅವನಿಗೆ ಒಂದು ತಲೆಯೂ ಇಲ್ಲ ಎನ್ನುತ್ತಾನೆ.

**ಛಲೀ ಸೂರ್ಯಾಚ್ಛಾದನಾಯ ಕರಂ ಕೋಽಪಿ ಪ್ರಸಾರಯೇತ್ ।**
**ಸಪ್ರಕಾರಂ ಹಿ ಯಂ ವಿದ್ವಾನ್ ಮುಚ್ಯೇತ ಸ ಕಿಲಾಲ್ಪಕಃ ॥ ೪೫೩ ॥**

**ಅರ್ಥ–** ಛಲೀ= ದುರಾಗ್ರಹಿಯಾದ, ಕಃ ಅಪಿ=ಯಾರಾದರೊಬ್ಬನು, ಸೂರ್ಯಾಚ್ಛಾದನಾಯ= ಸೂರ್ಯನನ್ನು ಮುಚ್ಚುವುದಕ್ಕಾಗಿ, ಕರಂ=ತನ್ನ ಕೈಯನ್ನು, ಪ್ರಸಾರಯೇತ್ = ಚಾಚಿಯಾನು. ಅದರಂತೆ, ಸಪ್ರಕಾರಂ=(ಪುರುಷಸೂಕ್ತದಲ್ಲಿ ಹೇಳಿದ) ಧರ್ಮಗಳುಳ್ಳ, ಯಂ=ಯಾವ ಭಗವಂತನನ್ನು, ವಿದ್ವಾನ್=ತಿಳಿದವನು, ಮುಚ್ಯೇತ= ಮುಕ್ತನಾಗುತ್ತಾನೆಯೋ, ಸಃ=ಅವನು (ಆ ಭಗವಂತನು), ಅಲ್ಪಕಃ ಕಿಲ= ಅಲ್ಪನಂತೆ!

**ಅನುವಾದ–** ದುರಾಗ್ರಹದ ಮನುಷ್ಯನು ಸೂರ್ಯನನ್ನು ಮರೆಮಾಡಲು ಕೈಚಾಚಿಯಾನು. ಗುಣಗಳನ್ನು ಹೊಂದಿದ ಯಾರನ್ನು ತಿಳಿದವನು ಮುಕ್ತಿಯನ್ನು ಹೊಂದುವನೋ ಅವನು ಅಲ್ಪನೇ?

**ಭಾವವಿಲಾಸಿನೀ–** ಪುರುಷಸೂಕ್ತಸ್ಯ ವಿರಾಟ್‌ಪುರುಷ ಇತಿ ಹರೇರನ್ಯಃ ಕಶ್ಚಿತ್‌ಪುರುಷಃ ಪ್ರತಿಪಾದ್ಯ ಇತಿ ವದಂತಮಪಿ ದುರ್ನೀತಿವಿಷಯಂ ಪ್ರತಿಪಾದಯತಿ ॥ **ಛಲೀತಿ ॥ ಕೋಽಪಿ ಛಲೀ** ಸೂರ್ಯೋ ನಾಸ್ತೀತ್ಯುಕ್ತ್ವಾ ಸ್ವೋಕ್ತನಿರ್ವಾಹಾಯ ಸೂರ್ಯಾಚ್ಛಾದನಾಯ ಕರಂ ಪ್ರಸಾರಯೇತ್ । ತತ್‌ಕುತ್ರ ದೃಷ್ಟಮಿತ್ಯತ ಉಕ್ತಮ್ ॥ **ಸಪ್ರಕಾರಮಿತ್ಯಾದಿ ॥** ಸಪ್ರಕಾರಂ ಸಹಸ್ರಶೀರ್ಷತ್ವಾದಿವಿಶೇಷಣ ಸಹಿತಂ ಯಂ ಪುರುಷಂ ವಿದ್ವಾನ್ ಮುಚ್ಯೇತ ಮುಕ್ತಿಂ ಪ್ರಾಪ್ನುಯಾತ್ । ''ತಮೇವಂ ವಿದ್ವಾನಮೃತ ಇಹ ಭವತೀ''ತಿ ಯಾಜುಷಪುರುಷಸೂಕ್ತೇ ಶ್ರವಣಾತ್ । ಏವಮಿತ್ಯನೇನ ಪೂರ್ವೋಕ್ತವಿಶೇಷಣಾನಾಂ ಪರಾಮರ್ಶಾತ್

ಸಪ್ರಕಾರಮಿತ್ಯುಕ್ತಮ್ । ಅಮುಕ್ತಿದಾತಾಪುರುಷಃ ಅಲ್ಪಕಃ ಕಿಲ ವಿಷ್ಣೋರನ್ಯಃ ಕಶ್ಚನ ನೀಚಪುರುಷಃ ಕಿಲ । ಏವಂ ವಾದೀ ಸೂರ್ಯಾಚ್ಛಾದನಾಯ ಕರಪ್ರಸಾರಣಕರ್ತುಃ ಸಮಃ । ಮೋಕ್ಷದಾಯಕಸ್ಯ ಮಹಾಪುರುಷಸ್ಯ ಸ್ವವಾಚಾ ತುಚ್ಛೀಕರಣಾದಿತಿ ಭಾವಃ ॥ ೪೫೩ ॥

**ವಿವರಣೆ–** ದುರಾಗ್ರಹ ಸ್ವಭಾವದ ಒಬ್ಬ ಮನುಷ್ಯನು 'ಸೂರ್ಯನು ಇಲ್ಲ' ಎಂದು ಹೇಳಿ ತನ್ನ ಮಾತೇ ಸರಿ ಎಂದು ಸಾಧಿಸಲು ಕಣ್ಣಿಗೆ ಕಾಣುತ್ತಿರುವ ಸೂರ್ಯನನ್ನು ಮರೆಮಾಚಲು ತನ್ನ ಕೈಯನ್ನೇ ಸೂರ್ಯನಿಗೆ ಅಡ್ಡ ಹಿಡಿಯುತ್ತಾನೆ. ಇದು ಹಠವಾದಿಯ ಸ್ವಭಾವ. ಅವನ ಕೈಯನ್ನು ಅಡ್ಡ ಹಿಡಿದ ಮಾತ್ರಕ್ಕೆ ವಿಶಾಲನಾದ ಸೂರ್ಯನು ಇಲ್ಲವಾಗುವನೇ?

'ಸಹಸ್ರಶೀರ್ಷಾ ಪುರುಷಃ' ಈ ಶ್ರುತಿಯು ಪರಬ್ರಹ್ಮನು ಸಾವಿರಾರು ತಲೆ, ಕಣ್ಣು, ಕೈ, ಕಾಲುಗಳುಳ್ಳವನಾಗಿದ್ದಾನೆ ಎಂದು ಹೇಳಿ, ಯಜುರ್ವೇದದ ಪುರುಷಸೂಕ್ತದಲ್ಲಿ 'ತಮೇವಂ ವಿದ್ವಾನ್ ಅಮೃತ ಇಹ ಭವತಿ' ಎಂದು ಫಲಶ್ರುತಿಯಲ್ಲಿ ಯಾರು ಭಗವಂತನನ್ನು ಸಾವಿರಾರು ತಲೆ, ಕಣ್ಣು, ಕೈ, ಕಾಲುಗಳುಳ್ಳವನು ಎಂದು ತಿಳಿಯುವರೋ, ಅವರು ಮುಕ್ತರಾಗುತ್ತಾರೆ ಎಂದು ಸ್ಪಷ್ಟವಾಗಿ ವಿವರಿಸಲಾಗಿದೆ. ಹೀಗೆ ಪುರುಷ ಸೂಕ್ತದಲ್ಲಿ ನಿರೂಪಿಸಿದ್ದರೂ ಹಠವಾದಿಯಾದ ಅದ್ವೈತಿಯು, ಪುರುಷ ಸೂಕ್ತದಲ್ಲಿ ಹೇಳಿರುವುದು ಪರಬ್ರಹ್ಮ ಅಲ್ಲ; ಅದು ವಿರಾಟ್ ಪುರುಷ ಎಂದು ಹೇಳುತ್ತಾ, ಪುರುಷಸೂಕ್ತಪ್ರತಿಪಾದ್ಯನಾದ ನಾರಾಯಣನಿಗೆ ಅಲ್ಪತ್ವವನ್ನು ಹೇಳಲು ಪ್ರಯತ್ನಿಸುತ್ತಾನೆ. ಅದ್ವೈತಿಯ ಈ ಉದ್ಯೋಗವು ಸೂರ್ಯನನ್ನು ಮರೆ ಮಾಡಲು ಕೈ ಚಾಚಿದ ಪುರುಷನ ಉದ್ಯೋಗದಂತೆ ಆಗಿದೆ. ಯಾವ ಮಹಾಪುರುಷನ ಜ್ಞಾನದಿಂದ ಜೀವನು ಮುಕ್ತನಾಗುತ್ತಾನೆಯೋ, ಅಂತಹ ಭಗವಂತನು ಅಲ್ಪನಾಗಿರಲು ಹೇಗೆ ಸಾಧ್ಯ?

**ಅತಃ ಪುರುಷಸೂಕ್ತಸ್ಯ ವಿರಾಟ್‌ಪುರುಷಸೂಕ್ತತಾಮ್ ।**
**ವದಂತೋ ವಾದಿನಃ ಪೂರ್ವೋತ್ತರಜ್ಞಾನವಿವರ್ಜಿತಾಃ ॥ ೪೫೪ ॥**

**ಅರ್ಥ–** ಅತಃ= ಆದ್ದರಿಂದ, ಪುರುಷಸೂಕ್ತಸ್ಯ=ಪುರುಷಸೂಕ್ತಕ್ಕೆ, ವಿರಾಟ್‌ಪುರುಷ-ಸೂಕ್ತತಾಂ= ವಿರಾಟ್‌ಪುರುಷನ ಸೂಕ್ತತ್ವವನ್ನು, ವದಂತಃ= ಹೇಳುವ, ವಾದಿನಃ= ವಾದಿಗಳು, ಪೂರ್ವೋತ್ತರಜ್ಞಾನವಿವರ್ಜಿತಾಃ=ಪುರುಷಸೂಕ್ತದ ಮೊದಲಿನ ಹಾಗು ಅನಂತರದ ವಾಕ್ಯಗಳ ಜ್ಞಾನರಹಿತರು.

**ಅನುವಾದ–** ಆದ್ದರಿಂದ ಪುರುಷಸೂಕ್ತವು ವಿರಾಟ್ ಪುರುಷನನ್ನು ಪ್ರತಿಪಾದಿಸುವ ಸೂಕ್ತ ಎಂದು ಹೇಳುವವರು ಈ ಸೂಕ್ತದ ಪೂರ್ವ-ಉತ್ತರ ವಾಕ್ಯಗಳ ಜ್ಞಾನವಿಲ್ಲದವರು.

**ಭಾವವಿಲಾಸಿನೀ–** ತದೇವ ವಿವೇಚಯತಿ– **ಅತ ಇತಿ ॥** ವಿರಾಟ್‌ಪುರುಷಸೂಕ್ತತಾಂ ವಿರಾಟ್ ಪುರುಷಪ್ರತಿಪಾದಕಸೂಕ್ತತಾವ್‌ । ತಮೇವಂ ವಿದ್ವಾನಿತ್ಯುತ್ತರವಾಕ್ಯಾಪರಿಜ್ಞಾನಾದ್ವಾ ಋಗ್ವೇದಪುರುಷಸೂಕ್ತಸಮಾಖ್ಯಯೋಕ್ತಯಜುರ್ವೇದಪುರುಷಸೂಕ್ತಾಜ್ಞಾನಾದ್ವಾ ಪೂರ್ವೋತ್ತರಜ್ಞಾನವಿವರ್ಜಿತಾ ಇತ್ಯರ್ಥಃ ॥ ೪೫೪ ॥

**ವಿವರಣೆ–** ಪುರುಷಸೂಕ್ತದ ಆರಂಭದಲ್ಲಿ ಭಗವಂತನನ್ನು ವರ್ಣಿಸಿ ಫಲಶ್ರುತಿಯಲ್ಲಿ ಇಂತಹ ಭಗವಂತನನ್ನು ತಿಳಿದವರು ಮೋಕ್ಷವನ್ನು ಹೊಂದುತ್ತಾರೆ ಎಂದು ಹೇಳಿದೆ. ಈ ಪೂರ್ವೋತ್ತರ ವಾಕ್ಯಗಳ ಸರಿಯಾದ ಜ್ಞಾನವಿಲ್ಲದ ಅದ್ವೈತಿಗಳು ಪರಬ್ರಹ್ಮನು ಪುರುಷಸೂಕ್ತಪ್ರತಿಪಾದ್ಯನಲ್ಲ ಎನ್ನುತ್ತಾರೆ. ಅಥವಾ, ಋಗ್ವೇದದ ಪುರುಷಸೂಕ್ತಕ್ಕೆ ಸಮಾಖ್ಯಾರೂಪವಾಗಿ ಯಜುರ್ವೇದದ ಪುರುಷಸೂಕ್ತವು ಹೊರಟಿದೆ, ಈ ಎರಡೂ ಪುರುಷ ಸೂಕ್ತಗಳು ಪರಬ್ರಹ್ಮನನ್ನು ಒಬ್ಬನೇ ಪ್ರತಿಪಾದಿಸುತ್ತವೆ ಎಂಬ ಪರಿಜ್ಞಾನವಿಲ್ಲದ ಮಾಯಾವಾದಿಗಳು ವಿರಾಟ್ ಪುರುಷನು ಪುರುಷಸೂಕ್ತಪ್ರತಿಪಾದ್ಯ ಎನ್ನುತ್ತಾರೆ. ಮೋಕ್ಷವನ್ನು ಕೊಡುವ ಸಾಮರ್ಥ್ಯವುಳ್ಳವನು ಪರಬ್ರಹ್ಮನೇ. ಬೇರೆ ಯಾರೂ ಅಲ್ಲ.

ಸಹಸ್ರಶೀರ್ಷಂ ದೇವಂ ವಿಶ್ವಾಕ್ಷಂ ವಿಶ್ವಶಂಭುವಮ್ ।
ವಿಶ್ವಂ ನಾರಾಯಣಂ ದೇವಮಕ್ಷರಂ ಪರಮಂ ಪದಮ್ ॥ ೪೫೫ ॥

ಇತಿ ನಾರಾಯಣಸ್ಯೈವ ಯಾಜುಷೋಪನಿಷಜ್ಜಗೌ ।
ಯತಃ ಸಹಸ್ರಶೀರ್ಷತ್ವಂ ತತಃ ಪುಂಸೂಕ್ತಗೋऽಪ್ಯಸೌ ॥ ೪೫೬ ॥

**ಅರ್ಥ–** ಯತಃ=ಯಾವ ಕಾರಣದಿಂದ, ಯಾಜುಷೋಪನಿಷತ್= ಯಜುಶ್ಶಾಖೆಯಲ್ಲಿರುವ ನಾರಾಯಣೋಪನಿಷತ್ತು, 'ಸಹಸ್ರಶೀರ್ಷಂ .... ಪರಮಂ ಪದಮ್' ಇತಿ= ಸಹಸ್ರಶೀರ್ಷಂ... ಪರಮಂ ಪದಂ ಎಂದು, ಸಹಸ್ರಶೀರ್ಷತ್ವಂ= ಸಹಸ್ರ ಶೀರ್ಷತ್ವವನ್ನು, ನಾರಾಯಣಸ್ಯೈವ= ನಾರಾಯಣನಿಗೇ, ಜಗೌ= ಹೇಳಿದೆಯೋ, ತತ= ಆದ್ದರಿಂದ, ಪುಂಸೂಕ್ತಗಃ ಅಪಿ= ಪುರುಷ ಸೂಕ್ತ ಪ್ರತಿಪಾದ್ಯನೂ, ಅಸೌ= ಈ ನಾರಾಯಣನೇ.

**ಅನುವಾದ–** 'ಸಹಸ್ರಶೀರ್ಷಂ ದೇವಂ.... ಪರಮಂ ಪದಮ್' ಎಂಬ ಯರ್ಜುವೇದಿಯ ಉಪನಿಷತ್ತು ನಾರಾಯಣನಿಗೇ ಸಹಸ್ರಶೀರ್ಷತ್ವ ಮೊದಲಾದವುಗಳನ್ನು ಹೇಳಿದೆ. ಆದ್ದರಿಂದ ಪುರುಷಸೂಕ್ತ ಪ್ರತಿಪಾದ್ಯನೂ ನಾರಾಯಣನೇ.

ಭಾವವಿಲಾಸಿನೀ– ಪ್ರಕಾರಾಂತರೇಣಾಪಿ ಪೂರ್ವೋತ್ತರಜ್ಞಾನವಿವರ್ಜಿತಾ ಇತ್ಯಾಹ – **ಸಹಸ್ರಶೀರ್ಷಮಿತಿ ॥** ಯತಃ ಯಸ್ಮಾತ್ ಇತಿ ಯಾಜುಷೋಪನಿಷತ್ ನಾರಾಯಣಸ್ಯೈವ

ಸಹಸ್ರಶೀರ್ಷತ್ವಂ ಜಗೌ । ಸಹರ್ಷಶೀರ್ಷಂ ದೇವಮಿತ್ಯಾದಿವಿಶೇಷಣಾನ್ಯುಕ್ತ್ವಾ ನಾರಾಯಣಮಿತಿ ನಾರಾಯಣಸ್ಯೈವ ಸ್ಪಷ್ಟಂ ವಿಶೇಷ್ಯತಯಾ ನಿರ್ದೇಶಾತ್ । ತತಃ ಸಂದಿಗ್ಧವಾಕ್ಯಸ್ಯ ನಿರ್ಣಾಯಕವಾಕ್ಯಾನುಸಾರೇಣ ವ್ಯಾಖ್ಯಾತವ್ಯತ್ವಾತ್ ॥ ೪೫೫ ॥ ಪುಂಸೂಕ್ತಗಃ ಪುರುಷಸೂಕ್ತಪ್ರತಿಪಾದ್ಯಃ ॥ ೪೫೬ ॥

**ವಿವರಣೆ–** ಪೂರ್ವೋತ್ತರ ಜ್ಞಾನವಿಲ್ಲದಿರುವಿಕೆಯನ್ನು ಇನ್ನೊಂದು ರೀತಿಯಿಂದ ರಾಜರು ಇಲ್ಲಿ ಸಮರ್ಥಿಸುತ್ತಿದ್ದಾರೆ. ಯಜುರ್ವೇದಶಾಖೆಯ ನಾರಾಯಣೋಪನಿಷತ್ತು ಸಹಸ್ರಶೀರ್ಷತ್ವಾದಿ ಧರ್ಮಗಳು ನಾರಾಯಣನಿಗೇ ಇವೆ ಎಂದು ಹೇಳುತ್ತಿದೆ. ಅದೇ ಸಹಸ್ರಶೀರ್ಷತ್ವಾದಿ ಧರ್ಮಗಳು ಪುರುಷ ಸೂಕ್ತದಲ್ಲಿ ಪುರುಷನಿಗೆ ಹೇಳಲ್ಪಟ್ಟಿವೆ. ನಾರಾಯಣ ಉಪನಿಷತ್ತಿನಲ್ಲಿ 'ನಾರಾಯಣ'ಶಬ್ದವೇ ಇರುವುದರಿಂದ ಆ ಧರ್ಮಗಳು ನಾರಾಯಣನ ಧರ್ಮಗಳು ಎಂದು ನಿರ್ಣಯ. ಅವೇ ಧರ್ಮಗಳು ಪುರುಷಸೂಕ್ತದಲ್ಲಿ ಹೇಳಲ್ಪಟ್ಟಿರುವುದರಿಂದ ಪುರುಷ ಸೂಕ್ತವೂ ನಾರಾಯಣಪರವೇ ಆಗಿದೆ ಎಂದು ನಿರ್ಣಯವಾಗುತ್ತದೆ.

**ಅಗ್ನಿರ್ಮುಖಂ ತ ಇತ್ಯಾದ್ಯೈಃ ಪದ್ಯೈರ್ಯಂ ಕೃಷ್ಣಮಂಬುನಿ ।**
**ಅಕ್ರೂರೋಽಸ್ತೌತ್ ಸ ಏವಾರ್ಥಾತ್ ಪುಂಸೂಕ್ತಾರ್ಥೋ ಹಿ ಧೀಮತಾಮ್ ॥ ೪೫೭ ॥**

**ಅರ್ಥ–** ಅಕ್ರೂರಃ=ಅಕ್ರೂರನು, ಅಂಬುನಿ= ನೀರಿನಲ್ಲಿ (ಯಮುನೆಯಲ್ಲಿ), ಯಂ ಕೃಷ್ಣಂ=ಯಾವ ಕೃಷ್ಣನನ್ನು, ಅಗ್ನಿರ್ಮುಖಂ ತೇ ಇತ್ಯಾದ್ಯೈಃ ಪದ್ಯೈಃ='ಅಗ್ನಿರ್ಮುಖಂ ತೇ' ಇತ್ಯಾದಿ ಪದ್ಯಗಳಿಂದ, ಅಸ್ತೌತ್=ಸ್ತೋತ್ರ ಮಾಡಿದನೋ, ಸ ಏವ=ಆ ಕೃಷ್ಣನೇ, ಅರ್ಥಾತ್=ಪುರುಷಸೂಕ್ತ ಮತ್ತು ಭಾಗವತಗಳಿಗೆ ಏಕಾರ್ಥವಿರುವುದರಿಂದ, ಧೀಮತಾಂ=ಜ್ಞಾನಿಗಳ ಅಭಿಪ್ರಾಯದಂತೆ, ಪುಂಸೂಕ್ತಾರ್ಥಃ ಹಿ=ಪುರುಷಸೂಕ್ತದಿಂದ ಪ್ರತಿಪಾದ್ಯನಾಗಿದ್ದಾನಷ್ಟೇ.

**ಅನುವಾದ–** ಅಕ್ರೂರನು ''ಅಗ್ನಿರ್ಮುಖಂತೆ...'' ಇತ್ಯಾದಿ ಪದ್ಯಗಳಿಂದ ನೀರಿನೊಳಗೆ ಯಾವ ಕೃಷ್ಣನನ್ನು ಸ್ತುತಿಸಿದನೋ, ಅವನೇ ಅರ್ಥಾತ್ ಪುರುಷಸೂಕ್ತಾರ್ಥ ಎಂದು ಧೀಮಂತರ ಅಭಿಪ್ರಾಯ.

**ಭಾವವಿಲಾಸಿನೀ–** ಪ್ರಕಾರಾಂತರೇಣಾಪಿ ಪೂರ್ವೋತ್ತರಜ್ಞಾನಶೂನ್ಯಾ ಇತ್ಯಾಹ – **ಅಗ್ನಿರ್ಮುಖಂ ತ ಇತಿ** ॥ ಅಗ್ನಿರ್ಮುಖಂ ತ ಇತ್ಯಾದ್ಯೈರಿತ್ಯನೇನ ಅಗ್ನಿರ್ಮುಖಂತೇಽವನಿರಂಘ್ರಿರೀಕ್ಷಣಂ ಸೂರ್ಯೋ ನಭೋ ನಾಭಿರಥೋದಿಶಃ ಶ್ರುತಿರಿತ್ಯಾದಿಪದ್ಯಂ ಸಂಗೃಹ್ಣಾತಿ । ಸ ಏವ ಕೃಷ್ಣ ಏವ ಅರ್ಥಾತ್ ಅರ್ಥೈಕ್ಯಾದ್ಧೀಮತಾಂ ಮತೇ ಪುಂಸೂಕ್ತಾರ್ಥೋ ಹಿ । ಪ(ಪು)ರುಷಸೂಕ್ತಸಮಾಖ್ಯಾರೂಪತಯಾ ಕೃಷ್ಣಪ್ರತಿಪಾದಕ ಭಾಗವತವಾಕ್ಯಾಪರಿಜ್ಞಾನಾತ್ ಪೂರ್ವೋತ್ತರಜ್ಞಾನಶೂನ್ಯಾ ಇತ್ಯರ್ಥಃ । 'ಮುಖಾದಿಂದ್ರಶ್ಚಾಗ್ನಿಶ್ಚ। ಪದ್ಭ್ಯಾಂ ಭೂಮಿಃ। ಚಕ್ಷೋಃ ಸೂರ್ಯಃ।

ನಾಭ್ಯಾ ಆಸೀದಂತರಿಕ್ಷಮ್ । ದಿಶಃ ಶ್ರೋತ್ರಾದಿ''ತ್ಯಾದಿ ಪುರುಷಸೂಕ್ತಸಮಾಖ್ಯಾ-ರೂಪತ್ವಾದಗ್ನಿರ್ಮುಖಮಿತ್ಯಾದಿವಾಕ್ಯಸ್ಯ ಕಾರ್ಯಕಾರಣಯೋರೈಕ್ಯವ್ಯಪದೇಶ ಇತಿ ನ್ಯಾಯೇನ ಮುಖಾದಗ್ನಿರಿತ್ಯಾದಿರೇವಾರ್ಥೋ ಗ್ರಾಹ್ಯಃ । ಸ್ಮೃತ್ಯಾ ಪುರುಷಸೂಕ್ತಸ್ಯ ಕೃಷ್ಣಪ್ರತಿಪಾದಕತ್ವ ನಿರ್ಣಯಾಚ್ಛ್ರುತ್ಯಾ ಚ ಸ್ಮೃತೇರ್ವಿಭಕ್ತಿವ್ಯತ್ಯಾಸನಿರ್ಣಯಾಚ್ಛ್ರುತಿ ಸ್ಮೃತ್ಯೋಃ ಪರಸ್ಪರೋಪಕಾರಿ-ತಯಾತಿಸಖ್ಯಾತ್ತದುಕ್ತಮಿಯಂ ನೋಲ್ಲಂಘಯತಿ । ಏತದುಕ್ತಂ ಚ ಸಾಪಿ ನೋಲ್ಲಂಘಯತೀತಿ ಭಾವಃ ॥ ೪೫೭ ॥

**ವಿವರಣೆ**– (1) ಭಗವಂತನು ಪುರುಷಸೂಕ್ತಪ್ರತಿಪಾದ್ಯನಲ್ಲ ಎಂದು ಹೇಳುವವರು ಪೂರ್ವಾಪರಜ್ಞಾನರಹಿತರು ಎಂಬುದನ್ನು ಇನ್ನೊಂದು ರೀತಿಯಿಂದ ಈ ಶ್ಲೋಕದಲ್ಲಿ ನಿರೂಪಿಸುತ್ತಿದ್ದಾರೆ.

ಮಧುರೆಗೆ ಕೃಷ್ಣಬಲರಾಮರನ್ನು ಕರೆದುಕೊಂಡು ಹೋಗುತ್ತಿದ್ದ ಅಕೂರನು ದಾರಿಯಲ್ಲಿ ಯಮುನಾ ನದಿಯಲ್ಲಿ ಅವಗಾಹನ ಮಾಡಿದಾಗ ನೀರಿನಲ್ಲಿ ಶೇಷಶಾಯಿಯಾದ ಭಗವಂತನನ್ನು ಕಂಡನು. ಆಗ, ಅವನು ಭಗವಂತನನ್ನು ಭಕ್ತಿಭಾವದಿಂದ ಹೀಗೆ ಸ್ತುತಿಸುತ್ತಾನೆ. 'ಅಗ್ನಿರ್ಮುಖಂ ತೇಽವನಿರಂಘ್ರಿರೀಕ್ಷಣಂ ಸೂರ್ಯೋ ನಭೋ ನಾಭಿರತೋ ದಿಶಃ ಶ್ರುತಿಃ' (10.38.14) 'ಮುಖವೇ ಅಗ್ನಿಯು, ಪಾದವೇ ಭೂಮಿಯು, ಕಣ್ಣೇ ಸೂರ್ಯನು, ಹೊಕ್ಕಳೇ ಆಕಾಶವು, ಕಿವಿಗಳು ದಿಕ್ಕುಗಳು'. ಇಲ್ಲಿ 'ಅಗ್ನಿಯು ಭಗವಂತನ ಮುಖ' ಎಂದರೆ ಅಗ್ನಿಯು ಭಗವಂತನ ಮುಖದಿಂದ ಹುಟ್ಟಿದ್ದಾನೆ. ಅವನ ಬಾಯಿಯಿಂದ ಹುಟ್ಟಿ, ಅಲ್ಲಿಯೇ ಆಶ್ರಯವನ್ನು ಪಡೆದಿದ್ದಾನೆ ಎಂದು ಅರ್ಥ. 'ಪಾದವೇ ಭೂಮಿಯು' ಎಂದರೆ ಭೂಮಿಯು ಪರಮಾತ್ಮನ ಪಾದದಿಂದ ಹುಟ್ಟಿ, ಆ ಪಾದವನ್ನೇ ಆಶ್ರಯಿಸಿದೆ ಎಂದು ಅರ್ಥ. ಹೀಗೆಯೇ, ಎಲ್ಲ ಶಬ್ದಗಳಿಗೂ ಅರ್ಥವನ್ನು ಹೇಳಬೇಕು.

ಪುರುಷಸೂಕ್ತದಲ್ಲಿ 'ಮುಖಾದಿಂದ್ರಶ್ಚಾಗ್ನಿಶ್ಚ ಪ್ರಾಣಾದ್ವಾಯುರಜಾತ ।
ನಾಭ್ಯಾ ಆಸೀದಂತರಿಕ್ಷಂ ಶೀರ್ಷ್ಣೋ ದ್ಯೌಃ ಸಮವರ್ತತ ॥
ಪದ್ಭ್ಯಾಂ ಭೂಮಿರ್ದಿಶಃ ಶ್ರೋತ್ರಾತ್'

ಎಂದು ಪರಮಾತ್ಮನ ಅವಯವಗಳಿಂದ ಅಗ್ನಿ, ವಾಯು ಮೊದಲಾದವುಗಳು ಹುಟ್ಟಿದವು ಎಂದು ಹೇಳಿದೆ.

ಅಕ್ರೂರನು ಕೃಷ್ಣನಲ್ಲಿ ಯಾವ ಮಹಿಮೆಯನ್ನು ನೋಡಿದನೋ ಅದನ್ನೇ ಪುರುಷಸೂಕ್ತವು ಪುರುಷನಿಗೆ ಹೇಳುತ್ತದೆ. ಆದ್ದರಿಂದ ಶ್ರೀಕೃಷ್ಣನೇ ಪುರುಷಸೂಕ್ತ ಪ್ರತಿಪಾದ್ಯ.

(2) 'ಅರ್ಥಾತ್' - ಈ ಪದವನ್ನು, 'ಅರ್ಥೈಕ್ಯಾತ್' ಎಂದು ಸುರೋತ್ತಮರು ವ್ಯಾಖ್ಯಾನಿಸಿದ್ದಾರೆ. ಅಕ್ರೂರಸ್ತುತಿಯ ಮತ್ತು ಪುರುಷಸೂಕ್ತದ ಅರ್ಥವು ಒಂದೇ ಆದ್ದರಿಂದ ಎಂದು ಅಭಿಪ್ರಾಯ.

ತತ್ರ ಗತ್ವಾ ಜಗನ್ನಾಥಂ ದೇವದೇವಂ ವೃಷಾಕಪಿಮ್ ।
ಪುರುಷಂ ಪುರುಷಸೂಕ್ತೇನ ಉಪತಸ್ಥೇ ಸಮಾಹಿತಃ ॥ ೪೫೮ ॥

ಇತಿ ಭಾಗವತೇ ವಿಷ್ಣೌ ಪುರುಷಾಖ್ಯಾಮುದೀರಯನ್ ।
ಯತಃ ಪುರುಷಸೂಕ್ತಂ ಚ ತತ್ಸೂಕ್ತಂ ಸ್ಪಷ್ಟಮುಕ್ತವಾನ್ ।
ಅತೋಽಪ್ಯಕುಶಲಾಸ್ತೇ ವೈ ವೇದಾರ್ಥಕಥನೋದ್ಯತಾಃ ॥ ೪೫೯ ॥

**ಅರ್ಥ–** ತತ್ರಗತ್ವಾ ಜಗನ್ನಾಥಂ ದೇವದೇವಂ ವೃಷಾಕಪಿಮ್ । ಪುರುಷಂ ಪುರುಷಸೂಕ್ತೇನ ಉಪತಸ್ಥೇ ಸಮಾಹಿತಃ' ಇತಿ== ತತ್ರಗತ್ವಾ... ಸಮಾಹಿತಃ ಎಂದು, ಭಾಗವತೇ= ಭಾಗವತ ಪುರಾಣದಲ್ಲಿ (೧೦.೧.೨೦), ವಿಷ್ಣೌ= ವಿಷ್ಣುವಿನಲ್ಲಿ, ಪುರುಷಾಖ್ಯಾಂ= ಪುರುಷ ಎಂಬ ಹೆಸರನ್ನು, ಉದೀರಯನ್= ಹೇಳುವವರಾದ ಶುಕಾಚಾರ್ಯರು, ಯತಃ= ಯಾವ ಕಾರಣದಿಂದ, ಪುರುಷಸೂಕ್ತಂ ಚ= ಪುರುಷಸೂಕ್ತವನ್ನು, ತತ್ಸೂಕ್ತಂ= ವಿಷ್ಣುಸೂಕ್ತವೆಂದು, ಸ್ಪಷ್ಟಂ= ಸ್ಪಷ್ಟವಾಗಿ, ಉಕ್ತವಾನ್= ಹೇಳಿರುವರೋ, ಅತಃ ಅಪಿ= ಆ ಕಾರಣದಿಂದಲೂ, ವೇದಾರ್ಥಕಥನೋದ್ಯತಾ= ವೇದಾರ್ಥವನ್ನು ಹೇಳಲು ಉದ್ಯುಕ್ತರಾದ, ತೇ= ಆ ಮಾಯಾವಾದಿಗಳು, ಅಕುಶಲಾಃ ವೈ= ಅಕುಶಲರೇ.

**ಅನುವಾದ–** 'ತತ್ರಗತ್ವಾ ಜಗನ್ನಾಥಂ.... ಸಮಾಹಿತಃ' ಎಂದು ಭಾಗವತ ಪುರಾಣದಲ್ಲಿ (೧೦.೧.೨೦) ವಿಷ್ಣುವಿನಲ್ಲಿ ಪುರುಷಶಬ್ದವನ್ನು ಹೇಳಿದ ಚತುರ್ಮುಖ ಬ್ರಹ್ಮದೇವರು (ಶುಕಾಚಾರ್ಯರು) ಪುರುಷಸೂಕ್ತವನ್ನು ವಿಷ್ಣುಸ್ತುತಿ ಎಂದು ಸ್ಪಷ್ಟವಾಗಿ ಹೇಳಿದ್ದಾರೆ. ಆದ್ದರಿಂದಲೂ ವೇದಾರ್ಥವನ್ನು ಹೇಳಲು ಪ್ರವೃತ್ತರಾದ ಅವರು (ಅದ್ವೈತ ಚಿಂತಕರು) ಅಕುಶಲರೇ.

**ಭಾವವಿಲಾಸಿನೀ–** ಪ್ರಕಾರಾಂತರೇಣ ಪರೇಷಾಮಕೌಶಲಂ ಪ್ರದರ್ಶಯತಿ ॥ **ತತ್ರೇತಿ** ॥ ವಿಷ್ಣೌ ಪುರುಷಾಖ್ಯಾಂ ನಿರವಕಾಶಪುರುಷಾಭಿಧಾಮ್ ಉದಿರಯನ್‌ಶುಕಃ ಪುರುಷಂ ವೃಷಾಕಪಿಮಿತಿ ಪುರುಷಸೂಕ್ತಂ ತತ್‌ಸೂಕ್ತಂ ವಿಷ್ಣುಸೂಕ್ತಂ ಯತಃ ಸ್ಪಷ್ಟಮುಕ್ತವಾನ್ ಪುರುಷಸೂಕ್ತೇನ ವೃಷಾಕಪಿಮಿತಿ ಸ್ಪಷ್ಟಮುಕ್ತವಾನ್ । ''ಉಪಾನ್ಮಂತ್ರಕರಣ'' ಇತಿ ಸೂತ್ರಾನ್ಮಂತ್ರಕರಣೇ ವಿವಕ್ಷಿತೇ ಉಪಾದಿತ್ಯುಪಸರ್ಗಾದಾತ್ಮನೇಪದವಿಧಾನಾತ್ ಉಪತಸ್ಥ ಇತ್ಯುಕ್ತ್ಯಾ ಪುರುಷಸೂಕ್ತಸ್ಯ ವಿಷ್ಣುಮಂತ್ರತ್ವಸ್ಯಾಪಿ ಕಥನಾತ್ ಸ್ಪಷ್ಟಮಿತ್ಯುಕ್ತಮ್ । ನ ಹ್ಯನ್ಯಮಂತ್ರೇಽನ್ಯಸ್ಯ ಪ್ರತಿಪಾದನಂ ಯುಕ್ತಮ್ । ಅತಃ ಉಕ್ತವಿವೇಕಶೂನ್ಯತ್ವಾತ್ ॥ ೪೫೮–೫೯ ॥

**ವಿವರಣೆ–** (1) ಭೂಭಾರಹರಣಕ್ಕಾಗಿ ಗೋರೂಪದಿಂದ ತನ್ನ ಬಳಿಗೆ ಬಂದು ಪ್ರಾರ್ಥಿಸಿದ ಭೂದೇವಿಯನ್ನು ಮುಂದೆ ಮಾಡಿಕೊಂಡು ಕ್ಷೀರಸಮುದ್ರದ ತಟಕ್ಕೆ ಹೋದ

ಚತುರ್ಮುಖ ಬ್ರಹ್ಮದೇವರು ಪುರುಷಸೂಕ್ತದಿಂದ ಅಲ್ಲಿರುವ ಭಗವಂತನನ್ನು ಸ್ತೋತ್ರ ಮಾಡಿದರು ಎಂದು ಭಾಗವತ ಪುರಾಣವು ವಿವರಿಸಿದೆ. ಆದ್ದರಿಂದ ಪುರುಷಸೂಕ್ತವು ವಿಷ್ಣುವನ್ನೇ ಪ್ರತಿಪಾದಿಸುತ್ತದೆ.

(2) ಭಾಗವತ ಶ್ಲೋಕದಲ್ಲಿ 'ಉಪತಸ್ಥೇ' ಎಂದಿದೆ. ಮಂತ್ರದಿಂದ ಮಾಡುವ ಸ್ತುತಿಯು ಉಪಸ್ಥಾನ. ಯಾವುದೋ ಮಂತ್ರದಿಂದ ಯಾರ ಸ್ತುತಿಯನ್ನೋ ಮಾಡಲಾಗುವುದಿಲ್ಲ. ಪುರುಷಸೂಕ್ತದಿಂದ ವಿಷ್ಣುವನ್ನು ಸ್ತುತಿಸಿರುವುದರಿಂದ ಪುರುಷನು ವಿಷ್ಣುವೇ.

(3) ತತ್ರ= ಅಲ್ಲಿಗೆ (ಕ್ಷೀರ ಸಮುದ್ರತೀರಕ್ಕೆ) ಗತ್ವಾ= ಹೋಗಿ, ಜಗನ್ನಾಥ= ಜದದೊಡೆಯನಾದ, ದೇವದೇವಂ= ದೇವೋತ್ತಮನಾದ, ವೃಷಾಕಪಿಂ= ಧರ್ಮಪ್ರಭವೂ, ಭೂಮಿಯ ಉದ್ಧಾರಕನೂ ಆದ, ಪುರುಷಂ= ಪುರುಷನನ್ನು, ಸಮಾಹಿತಃ= ಸಮಾಧಿ ಸ್ಥಿತಿಯಲ್ಲಿ, ಪುರುಷಸೂಕ್ತೇನ= ಪುರುಷಸೂಕ್ತದಿಂದ, ಉಪತಸ್ಥೇ= ಸ್ತುತಿಸಿದನು.

**ಸಾಕ್ಷಾನ್ಮೋಕ್ಷಾಂಗತೋಕ್ತೇಃ ಸಾ ಮೂರ್ತಿರಪ್ರಾಕೃತೈವ ಹಿ ।**
**ನಹಿ ಪ್ರಾಕೃತವಿಜ್ಞಾನಾದಪ್ರಾಕೃತಪದಂ ಭವೇತ್ ॥ ೪೬೦ ॥**

**ಅರ್ಥ–** ಸಾಕ್ಷಾತ್ ಮೋಕ್ಷಾಂಗತೋಕ್ತೇಃ=ಪುರುಷಸೂಕ್ತಪ್ರತಿಪಾದ್ಯಭಗವಂತನ ಜ್ಞಾನವು ಸಾಕ್ಷಾತ್ ಮೋಕ್ಷಕ್ಕೆ ಸಾಧನವಾಗಿದೆ ಎಂದು ಹೇಳಿದ್ದರಿಂದಲೂ, ಸಾ ಮೂರ್ತಿಃ= ಪುರುಷಸೂಕ್ತೋಕ್ತ ಭಗವಂತನ ಮೂರ್ತಿಯು, ಅಪ್ರಾಕೃತ ಏವ ಹಿ= ಅಪ್ರಾಕೃತವೇ. ಪ್ರಾಕೃತವಿಜ್ಞಾನಾತ್= ಪ್ರಾಕೃತ ಪದಾರ್ಥದ ಜ್ಞಾನದಿಂದ, ಅಪ್ರಾಕೃತಪದಂ= ಅಪ್ರಾಕೃತ ಸ್ಥಾನವು (ಮುಕ್ತಿಯು), ನಹಿ ಭವೇತ್= ಆಗುವುದೇ ಇಲ್ಲ.

**ಅನುವಾದ–** ಪುರುಷಸೂಕ್ತದಲ್ಲಿ ಪುರುಷನ ಜ್ಞಾನವು ಮುಕ್ತಿಗೆ ಮುಖ್ಯಸಾಧನ ಎಂದು (ಏವಂ ವಿದ್ವಾನ್ ಅಮೃತ ಇಹ ಭವತಿ) ಹೇಳಿದ್ದರಿಂದ, ಈ ಸೂಕ್ತಪ್ರತಿಪಾದ್ಯನು ಅಪ್ರಾಕೃತನೇ. ಪ್ರಾಕೃತ ಪದಾರ್ಥಜ್ಞಾನದಿಂದ ಅಪ್ರಾಕೃತ ಸ್ಥಾನವು ಲಭಿಸುವುದೇ ಇಲ್ಲ.

**ಭಾವವಿಲಾಸಿನೀ–**ಪುರುಷಸೂಕ್ತಾರ್ಥಕಥನಸ್ಯ ಪ್ರಕೃತೋಪಯೋಗಂ ದರ್ಶಯತಿ-**ಸಾಕ್ಷಾದಿತಿ** ॥ ಹಿ ಯಸ್ಮಾತ್ಪ್ರಾಕೃತವಿಜ್ಞಾನಾದಪ್ರಾಕೃತಪದಂ ಮುಕ್ತಿರ್ನ ಭವೇತ್ । ತಸ್ಮಾತ್ ಸಾಕ್ಷಾನ್ಮೋಕ್ಷಾಂಗತೋಕ್ತೇಃ ಏವಂ ವಿದ್ವಾನಿತಿ ಸಹಸ್ರಶೀರ್ಷತ್ವಾದಿಪ್ರಕಾರಣಾಮಪಿ ಮೋಕ್ಷೋಪಯೋಗಿಜ್ಞಾನವಿಷಯತ್ವೋಕ್ತೇರಿತ್ಯರ್ಥಃ । ಸಾ ಮೂರ್ತಿಃ ಸಹಸ್ರಶೀರ್ಷಾದ್ಯಾಕಾರಮೂರ್ತಿಃ ॥ ೪೬೦ ॥

**ವಿವರಣೆ–** ಪುರುಷ ಸೂಕ್ತದಲ್ಲಿ ಭಗವಂತನು ಸಾವಿರಾರು ತಲೆ, ಕಣ್ಣು, ಕೈ, ಕಾಲುಗಳುಳ್ಳವನಾಗಿದ್ದಾನೆ ಎಂದು ವರ್ಣಿಸಿ, ಕೊನೆಯಲ್ಲಿ 'ತಮೇವಂ ವಿದ್ವಾನ್ ಅಮೃತ'

ಇಹ ಭವತಿ'- ಈ ಪುರುಷಸೂಕ್ತದಲ್ಲಿ ಹೇಳಿದ ಕ್ರಮದಲ್ಲಿ ಭಗವಂತನನ್ನು ತಿಳಿದವನು ಮೋಕ್ಷವನ್ನು ಪಡೆಯುತ್ತಾನೆ ಎಂದು ಹೇಳಿದೆ. ಆದ್ದರಿಂದ, ಪುರುಷಸೂಕ್ತಪ್ರತಿಪಾದ್ಯನಾದ ಭಗವಂತನು ಅಪ್ರಾಕೃತನೇ.

**ಸಹಸ್ರಾಕ್ಷಿಶಿರಃಪಾದೈಃ ಯತೋಽತ್ಯಂತವಿಲಕ್ಷಣಃ ।**
**ಪುರುಷಃ ಪೂರ್ವವಾಕ್ಯೇನ ವಿಶ್ವವ್ಯಾಪ್ತಶ್ಚ ಕೀರ್ತ್ಯತೇ ॥ ೪೬೧ ॥**

**ಅರ್ಥ–** ಯತಃ= ಏಕೆಂದರೆ, ಪೂರ್ವವಾಕ್ಯೇನ= ಹಿಂದಿನ ವಾಕ್ಯಗಳಿಂದ, ಸಹಸ್ರಾಕ್ಷಿಶಿರಃ ಪಾದೈಃ= ಸಾವಿರಾರು ಕಣ್ಣು, ತಲೆ, ಪಾದಗಳಿಂದ, ಅತ್ಯಂತವಿಲಕ್ಷಣಃ= ಬಹಳ ವಿಲಕ್ಷಣನಾದ, ಚ= ಮತ್ತು, ವಿಶ್ವವ್ಯಾಪ್ತಶ್ಚ= ವಿಶ್ವವ್ಯಾಪ್ತನೂ ಆದ, ಪುರುಷಃ= ಪುರುಷನು, ಕೀರ್ತ್ಯತೇ= ಸ್ತುತಿಸಲ್ಪಡುತ್ತಾನೆ.

**ಅನುವಾದ–** 'ಉತಾಮೃತತ್ವಸ್ಯ ಈಶಾನಃ...' ಈ ವಾಕ್ಯಕ್ಕಿಂತ ಮೊದಲಿನ ವಾಕ್ಯಗಳಿಂದ ಸಾವಿರಾರು ಕಣ್ಣುತಲೆ, ಪಾದಗಳಿಂದಾಗಿ ಜಗತ್ತಿನ ಸಕಲ ಪದಾರ್ಥಗಳಿಂದ ವಿಲಕ್ಷಣನಾದ, ವಿಶ್ವವ್ಯಾಪ್ತನಾದ ಪುರುಷನು ವರ್ಣಿಸಲ್ಪಟ್ಟಿದ್ದಾನೆ.

**ಭಾವವಿಲಾಸಿನೀ–** ಪುರುಷ ಏವೇದಂ ಸರ್ವಮಿತ್ಯಸ್ಯೈಕ್ಯಾರ್ಥತ್ವೇ ಬಾಧಕಂ ವದನ್ನಿದರ್ಶನ-ಪೂರ್ವಕಂ ಸ್ವಾಭಿಮತಾರ್ಥಮಾಹ – **ಸಹಸ್ರಾಕ್ಷೀತ್ಯಾದಿನಾ ॥** ಸಹಸ್ರಾಣ್ಯಕ್ಷೀಣಿ ಶಿರಾಂಸಿಪಾದಾಶ್ಚ ತೈಃ । ಸಮಾಸಾಂತವಿಧೇರನಿತ್ಯತ್ವಾತ್ ವೈಲಕ್ಷಣ್ಯಸ್ಯ ಸ್ಫುಟೀಕರಣಾಯ ಚೈಕವದ್ಭಾವೋ ನಾಸ್ತಿ । ಯತಃ ಯಸ್ಮಾತ್। ಅತ್ಯಂತವಿಲಕ್ಷಣಃ "ಅನಂತಬಾಹೂದರವಕ್ತ್ರನೇತ್ರ" ಇತಿ ಸ್ಮೃತಿಸಮಾಖ್ಯಯಾ ಸಹಸ್ರಪದಸ್ಯಾನಂತಾರ್ಥಕತ್ವಾತ್ ತಸ್ಯ ಜಡೇ ವಾ ಚೇತನೇ ವಾ ಕ್ವಾಪ್ಯಸಂಭವಾದತ್ಯಂತವಿಲಕ್ಷಣಃ ಪುರುಷ ಇತ್ಯುಕ್ತಮ್ । ಪೂರ್ವವಾಕ್ಯೇನ "ಸಹಸ್ರಶೀರ್ಷಾ ಪುರುಷ" ಇತಿ ಪೂರ್ವವಾಕ್ಯೇನ । ವಿಶ್ವವ್ಯಾಪ್ತಶ್ಚ "ಸಭೂಮಿಂ ವಿಶ್ವತೋ ವೃತ್ವಾತ್ಯತಿಷ್ಠದಿ"ತಿ ವಾಕ್ಯೇನ ಕೀರ್ತ್ಯತೇ ॥ ೪೬೧ ॥

**ಉತಾಮೃತತ್ವಸ್ಯೇಶಾನೋ ಯದನ್ನೇನಾತಿರೋಹತಿ ।**
**ಏತಾವಾನಸ್ಯ ಮಹಿಮಾ ತತೋ ಜ್ಯಾಯಾಂಶ್ಚ ಪೂರುಷಃ ।**
**ಇತ್ಯುತ್ತರತ್ರ ಚೇಶತ್ವಪೂರ್ವೋಽಸ್ಯ ಮಹಿಮೋಚ್ಯತೇ ॥ ೪೬೨ ॥**

**ಅರ್ಥ–** 'ಉತಾಮೃತತ್ವಸ್ಯ... ಪುರುಷಃ' ಇತಿ= ಉತಾಮೃತತ್ವಸ್ಯ.... ಪುರುಷಃ ಎಂದು, ಉತ್ತರತ್ರ=ಪುರುಷ ಸೂಕ್ತದ ಮುಂದಿನ ವಾಕ್ಯದಲ್ಲಿ, ಅಸ್ಯ= ಈ ನಾರಾಯಣನ, ಈಶತ್ವಪೂರ್ವಃ=ಮುಕ್ತ ನಿಯಾಮಕತ್ವ ಮೊದಲಾದ, ಮಹಿಮಾ=ಮಹಿಮೆಯು, ಉಚ್ಯತೇ=ಹೇಳಲ್ಪಡುತ್ತದೆ.

**ಭಾವವಿಲಾಸಿನೀ–** ಉತ್ತರತ್ರ ಚ ಉತ್ತರವಾಕ್ಯೇ । ಅಸ್ಯ ಪುರುಷಸ್ಯ । ಈಶತ್ವಪೂರ್ವಃ ಮುಕ್ತೇಶತ್ವಸಂಸಾರ್ಯತಿಕ್ರಾಂತತ್ವಜ್ಯಾಯಸ್ತ್ವಪೂರ್ವ ಇತ್ಯರ್ಥಃ । ಮಹಿಮೋಚ್ಯತ ಇತಿ ಸಂಬಂಧಃ । ಅನೇನಾಪಿ ಪೂರ್ವವದತ್ಯಂತವಿಲಕ್ಷಣಃ ಪುರುಷೋಽಭೂದಿತಿ ಭಾವಃ ॥೪೬೨॥

**ವಿವರಣೆ–** (1) ಇದೇ ಪುರುಷಸೂಕ್ತದ ಮುಂದಿನ ಋಕ್‌ನಲ್ಲಿ ಭಗವಂತನು ಎಲ್ಲ ಮುಕ್ತ ಸಮೂಹಕ್ಕೆ ನಿಯಾಮಕನಾಗಿದ್ದಾನೆ. ಎಲ್ಲ ಸಂಸಾರಿ ಜೀವಗಳಿಗೂ ಅತ್ಯುತ್ತಮನಾಗಿದ್ದಾನೆ. ನಿಯಾಮಕನಾಗಿದ್ದಾನೆ. ಇಷ್ಟು ಇವನ ಮಹಿಮೆ. ಆದ್ದರಿಂದಲೇ ಇವನು ಸರ್ವೋತ್ತಮ ಎಂದು ನಿಯಾಮಕತ್ವ ಮೊದಲಾದ ಇವನ ಮಹಿಮೆಯು ಹೇಳಲ್ಪಟ್ಟಿದೆ. ಆದ್ದರಿಂದ ಇವನು ಲೋಕವಿಲಕ್ಷಣನಾಗಿದ್ದಾನೆ.

(2) ಉತ ಅಮೃತತ್ವಸ್ಯ= ಮುಕ್ತಿಗೂ, ಈಶಾನಃ= ಒಡೆಯ, ಯತ್= ಏಕೆಂದರೆ, ಅನ್ನೇನ= ಅಮುಕ್ತರನ್ನು, ಅತಿರೋಹತಿ= ಮೀರಿ ನಿಯಮಿಸುತ್ತಾನೆ. ಏತಾವಾನ್= ಇಷ್ಟು, ಅಸ್ಯ= ಈ ಪುರುಷನ, ಮಹಿಮಾ= ಮಹಿಮೆಯು, ಅತಃ= ಆದ್ದರಿಂದ, ಪುರುಷಃ= ಈ ಪುರುಷನು, ಜ್ಯಾಯಾನ್ ಚ= ಸರ್ವೋತ್ತಮನೇ.

**ಅತಃ ಪುರುಷ ಏವೇದಂ ಸರ್ವಮಿತ್ಯಪಿ ನೈಕ್ಯವಾಕ್ ।**
**ಉಪಕ್ರಮೋಪಸಂಹಾರೌ ಯದ್ವಾಕ್ಯಾರ್ಥನಿಯಾಮಕೌ ॥ ೪೬೩ ॥**

**ಅರ್ಥ–** ಯತ್=ಯಾವ ಕಾರಣದಿಂದ, ಉಪಕ್ರಮೋಪಸಂಹಾರೌ=ಉಪಕ್ರಮ ಮತ್ತು ಉಪಸಂಹಾರಗಳು, ವಾಕ್ಯಾರ್ಥನಿಯಾಮಕೌ= ವಾಕ್ಯಾರ್ಥನಿರ್ಣಾಯಕಗಳಾಗಿವೆಯೋ, ಅತಃ= ಆದ್ದರಿಂದ, 'ಪುರುಷ ಏವೇದಂ ಸರ್ವಮ್' ಇತ್ಯಪಿ= 'ಪುರುಷ ಏವ ಇದಂ ಸರ್ವಮ್' ಈ ವಾಕ್ಯವೂ, ನ ಐಕ್ಯವಾಕ್=ಪ್ರಪಂಚ ಮತ್ತು ಬ್ರಹ್ಮನಿಗೆ ಐಕ್ಯವನ್ನು ಹೇಳುವ ಮಾತು ಅಲ್ಲ.

**ಅನುವಾದ–** ಉಪಕ್ರಮ ಮತ್ತು ಉಪಸಂಹಾರಗಳು ವಾಕ್ಯಗಳ ಅರ್ಥ-ನಿರ್ಣಾಯಕಗಳಾದ್ದರಿಂದ 'ಪುರುಷ ಏವ ಇದಂ ಸರ್ವಮ್' ಈ ವಾಕ್ಯವು ಪುರುಷನೇ ಪ್ರಪಂಚ ಎಂದು ಹೇಳುವುದಿಲ್ಲ.

**ಭಾವವಿಲಾಸಿನೀ–** ಅತಃ ಪೂರ್ವೋತ್ತರವಾಕ್ಯಯೋಃ ಸ್ಪಷ್ಟಬಹುವಿರುದ್ಧರ್ಮ- ಕಥನೇನಾತ್ಯಂತ-ವೈಲಕ್ಷಣ್ಯಸ್ಯೈವೋಕ್ತತ್ವಾತ್ ಐಕ್ಯವಾಕ್ ನ । ತನ್ಮಧ್ಯೇ ಪತಿತಮಿದಮಪಿ ವಾಕ್ಯಮೈಕ್ಯಪ್ರತಿಪಾದಕಂ ನೇತ್ಯರ್ಥಃ । ತತ್ರ ಹೇತುಮಾಹ – **ಉಪಕ್ರಮೇತಿ** ॥ ಯತ್ ಯಸ್ಮಾತ್। ಉಪಕ್ರಮೋಪ-ಸಂಹಾರಾನುಗುಣ್ಯೇನೈವ ಮಧ್ಯಗತವಾಕ್ಯಾರ್ಥಸ್ಯಾಪಿ ನಿರ್ಣೇಯತ್ವಾದಿತಿ ಭಾವಃ ॥ ೪೬೩ ॥

**ವಿವರಣೆ–** ಉಪಕ್ರಮ-ಉಪಸಂಹಾರಗಳು ಪ್ರಕರಣಾರ್ಥನಿರ್ಣಾಯಕಗಳು. ಅವುಗಳಿಗೆ ಅನುಗುಣವಾಗಿ ಮಧ್ಯದ ವಾಕ್ಯಗಳಿಗೆ ಅರ್ಥವನ್ನು ಹೇಳಬೇಕು.

ಪ್ರಕೃತ ಪುರುಷಸೂಕ್ತದ ಉಪಕ್ರಮದಲ್ಲಿ 'ಸಹಸ್ರಶೀರ್ಷಾ ಪುರುಷಃ' ಮೊದಲಾದ ವಾಕ್ಯವು ಇದೆ. ಉಪಸಂಹಾರದಲ್ಲಿ 'ಉತಾಮೃತತ್ವಸ್ಯೇಶಾನಃ' 'ಅತೋ ಜ್ಯಾಯಾಂಶ್ಚ ಪೂರುಷಃ' ಎಂಬ ವಾಕ್ಯವು ಇದೆ.

ಮಧ್ಯದ ವಾಕ್ಯದ ಅರ್ಥವು ಇವುಗಳಿಗೆ ಅನುಗುಣವಾಗಿಯೇ ಇರಬೇಕು. ಆದ್ದರಿಂದ ಇವುಗಳ ಮಧ್ಯದಲ್ಲಿರುವ 'ಪುರುಷ ಏವ ಇದಮ್ ಸರ್ವಮ್' - ಈ ವಾಕ್ಯವು ಪುರುಷ ಮತ್ತು ಪ್ರಪಂಚದ ಐಕ್ಯವನ್ನು ಹೇಳುವುದಿಲ್ಲ.

**ಯದಧೀನಾ ಯಸ್ಯ ಸತ್ತಾ ತತ್ತದಿತ್ಯೇವ ಭಣ್ಯತೇ ।**
**ರಾಜೈವ ರಾಷ್ಟ್ರಮಿತ್ಯಾದಿಪ್ರಯೋಗಸ್ತನ್ನಿದರ್ಶನಮ್ ॥ ೪೬೪ ॥**

**ಅರ್ಥ–** ಯಸ್ಯ=ಯಾರ (ಯಾವುದರ), ಸತ್ತಾ=ಇರುವಿಕೆಯು, ಯದಧೀನಾ=ಯಾರ ಅಧೀನವಾಗಿದೆಯೋ, ತತ್= ಅದು, ತದಿತ್ಯೇವ=ಆ ಪದಾರ್ಥವೇ ಎಂದು, ಭಣ್ಯತೇ= ಹೇಳಲ್ಪಡುತ್ತದೆ. 'ರಾಜಾ ಏವ ರಾಷ್ಟ್ರಂ'= ರಾಜನೇ ರಾಷ್ಟ್ರ, ಇತ್ಯಾದಿ=ಇದು ಮೊದಲಾದ, ಪ್ರಯೋಗಃ=ವ್ಯವಹಾರವು, ತನ್ನಿದರ್ಶನಂ=ಹಿಂದೆ ಹೇಳಿದ ನ್ಯಾಯಕ್ಕೆ ಉದಾಹರಣೆ.

**ಅನುವಾದ–** ಯಾವುದರ ಅಸ್ತಿತ್ವವು ಯಾರಿಗೆ ಅಧೀನವಾಗಿರುವುದೋ ಅದು ಅದೇ ಎಂದು ಪ್ರಾಜ್ಞರ ವ್ಯವಹಾರವಿದೆ. 'ರಾಜಾ ಏವ ರಾಷ್ಟ್ರಮ್' ಮೊದಲಾದ ಪ್ರಯೋಗಗಳು ಇದಕ್ಕೆ ನಿದರ್ಶನ.

**ಭಾವವಿಲಾಸಿನೀ–** ತರ್ಹಿ ವಾಕ್ಯಸ್ಯ ಕೋಽರ್ಥ ಇತ್ಯತ ಆಹ – **ಯದಧೀನೇತಿ** ॥ ತನ್ನಿದರ್ಶನಂ ಯದಧೀನೇತಾದ್ಯುಕ್ತನ್ಯಾಯಸ್ಯ ದೃಷ್ಟಾಂತಃ ॥ ೪೬೪ ॥

**ವಿವರಣೆ–** ರಾಷ್ಟ್ರವು ರಾಜನ ಅಧೀನವಾಗಿರುವುದರಿಂದ ರಾಜನನ್ನೇ ರಾಷ್ಟ್ರವೆಂದು ಕರೆಯುತ್ತಾರೆ. ಅದರಂತೆ ಸಮಗ್ರ ಪ್ರಪಂಚದ ಸತ್ತಾ, ಪ್ರವೃತ್ತಿ ಪ್ರತೀತಿಗಳು ಭಗವಂತನ ಅಧೀನವಾಗಿರುವುದರಿಂದ ಭಗವಂತನೇ ಪ್ರಪಂಚ ಎಂದು ಹೇಳುವುದು ತಪ್ಪಲ್ಲ.

ಹೀಗೆ, 'ಪುರುಷ ಏವೇದಂ ಸರ್ವಂ' ಎಂಬ ಪುರುಷಸೂಕ್ತದ ಮಂತ್ರವು ಭಗವಂತನು ಸರ್ವೋತ್ತಮನಾಗಿದ್ದಾನೆ ಎಂದು ಸಮರ್ಥಿಸಲು ಹೊರಟಿದೆ. ಪ್ರಪಂಚವೇ ಪುರುಷ ಎಂದು ಅಭೇದವನ್ನು ಹೇಳಲು ಹೊರಟಿಲ್ಲ.

**'ತದಧೀನತ್ವಾದ್ ಅರ್ಥವತ್'** (1.4.3) ಎಂಬ ಬ್ರಹ್ಮಸೂತ್ರಕ್ಕೆ ಅರ್ಥವನ್ನು ಹೇಳುವಾಗ ಆಚಾರ್ಯ ಮಧ್ವರು 'ಯಥಾ ಜೀವಃ ಪರಾತ್ಮೇತಿ' 'ಯಥಾ ರಾಜಾ ಜಯೀತ್ಯಪಿ' ಎಂದು ಭಾಷ್ಯದಲ್ಲಿ ಹೇಳಿದ್ದಾರೆ. ರಣರಂಗದಲ್ಲಿ ಯುದ್ಧ ಮಾಡಿದವರು ಯೋಧರು. ಆದರೆ ಎಲ್ಲ ಯೋಧರೂ ರಾಜಾಧೀನರಾದುದರಿಂದ 'ರಾಜಾ ಜಯೀ' ಎಂಬ ವ್ಯವಹಾರವು

ಲೋಕದಲ್ಲಿರುವಂತೆ, ಎಲ್ಲ ಜೀವರೂ ಪರಮಾತ್ಮನ ಅಧೀನರಾದುದರಿಂದ ಜೀವನೇ ಪರಮಾತ್ಮ ಎಂಬ ವಾಡಿಕೆಯು ಲೋಕದಲ್ಲಿ ಬಂದಿದೆ ಎಂದು ಅಲ್ಲಿ ವ್ಯಾಖ್ಯಾನಿಸಿದ್ದಾರೆ.

ಅದರಂತೆ, ಪ್ರಕೃತ, ಭಗವಂತನು ಸ್ವತಂತ್ರನಾದುದರಿಂದ ಮತ್ತು ಸಮಸ್ತ ಪ್ರಪಂಚವೂ ಅವನ ಅಧೀನವಾದುದರಿಂದ ಭಗವಂತನೇ ಪ್ರಪಂಚ ಎಂದು ಕರೆಯುವುದು ಯುಕ್ತಿಯುಕ್ತವಾಗಿದೆ. ಅಭೇದವು ಇಲ್ಲಿ ಅಭಿಪ್ರೇತವಲ್ಲ.

**ಅತಃ ಪುರುಷ ಏವೇತಿ ಪುಂಸಃ ಸ್ವಾತಂತ್ರ್ಯವಾಗಿಯಮ್ ॥ ೪೬೫ ॥**

**ಅರ್ಥ–** ಅತಃ=ಆದ್ದರಿಂದ, ಪುರುಷ ಏವೇತಿ ಇಯಂ ವಾಕ್='ಪುರುಷ ಏವೇದಂ' ಎಂಬ ಈ ವಾಕ್ಯವು, ಪುಂಸಃ=ಪರಮಾತ್ಮನ, ಸ್ವಾತಂತ್ರ್ಯವಾಕ್=ಸ್ವಾತಂತ್ರ್ಯವನ್ನು ಹೇಳುವ ವಾಕ್ಯ.

**ಅನುವಾದ– ಆದ್ದರಿಂದ 'ಪುರುಷ ಏವ ಇದಂ ಸರ್ವಮ್' - ಈ ವಾಕ್ಯವು ಪರಮಾತ್ಮನ ಸ್ವಾತಂತ್ರ್ಯವನ್ನು ಹೇಳುವ ವಚನ.**

**ಭಾವವಿಲಾಸಿನೀ– ಅತಃ ನಿಯಮ್ಯನಿಯಾಮಕಯೋರೈಕ್ಯವ್ಯಪದೇಶಸ್ಯ ದೃಷ್ಟತ್ವಾತ್ ಪುಂಸಃ ಪುರುಷಸ್ಯ ಸ್ವತಂತ್ರ್ಯವಾಕ್ ಸ್ವಾತಂತ್ರ್ಯಾಖ್ಯಮಹಿಪಪ್ರತಿಪಾದಕವಾಕ್ ॥ ೪೬೫ ॥**

**ವಿವರಣೆ–** ನಿಯಮ್ಯ-ನಿಯಾಮಕಗಳಿಗೆ ಅಭೇದವ್ಯವಹಾರವು ಲೋಕದಲ್ಲಿ ಇರುವುದರಿಂದ ಸ್ವತಂತ್ರ ಭಗವಂತನು ಅಸ್ವತಂತ್ರ ಪ್ರಪಂಚಕ್ಕೆ ನಿಯಾಮಕನಾದುದರಿಂದ 'ಪುರುಷ ಏವ ಇದಂ ಸರ್ವಮ್' - ಈ ವಾಕ್ಯವು ಭಗವಂತನಿಗೆ ಸ್ವಾತಂತ್ರ್ಯವನ್ನೇ ಹೇಳುತ್ತದೆಯೇ ಹೊರತು, ಪ್ರಪಂಚಕ್ಕೂ ಭಗವಂತನಿಗೂ ಐಕ್ಯವನ್ನು ಹೇಳುವುದಿಲ್ಲ.

**ಪೂರ್ವೋತ್ತರೋಕ್ತಸುಗುಣರತ್ನಮಾಲಾ ಮಹಾಮಣಿಮ್ ।**
**ಮಧ್ಯೇ ಬಿಭರ್ತಿ ನ ಪುನಃ ಕಾಚಂ ವಾಚಾಮಗೋಚರಮ್ ॥ ೪೬೬ ॥**

**ಅರ್ಥ–** ಪೂರ್ವೋತ್ತರೋಕ್ತಸುಗುಣರತ್ನಮಾಲಾ=ಆರಂಭದ ಮತ್ತು ಅನಂತರದ ವಾಕ್ಯಗಳಿಂದ ಹೇಳಲ್ಪಟ್ಟ ಸದ್ಗುಣಗಳೆಂಬ ರತ್ನಗಳ ಮಾಲೆಯು, ಮಧ್ಯೇ=ಮಧ್ಯದಲ್ಲಿ, ಮಹಾಮಣಿಂ= ಸ್ವಾತಂತ್ರ್ಯ ಎಂಬ ಅನರ್ಘ್ಯವಾದ ಮಣಿಯನ್ನು, ಬಿಭರ್ತಿ=ಧರಿಸುತ್ತದೆ. ವಾಚಾಮಗೋಚರಂ= ಅವಾಚ್ಯವಾದ (ಹೇಳಲು ಅನರ್ಹವಾದ), ಕಾಚಂ=ಗಾಜಿನ ಮಣಿಯನ್ನು, ನ ಪುನಃ ಬಿಭರ್ತಿ=ಧರಿಸುವುದೇ ಇಲ್ಲ.

**ಅನುವಾದ– (ಪುರುಷಸೂಕ್ತದ) ಪೂರ್ವವಾಕ್ಯ ಮತ್ತು ಉತ್ತರವಾಕ್ಯಗಳಲ್ಲಿ ಹೇಳಲ್ಪಟ್ಟ ಗುಣಗಳೆಂಬ ರತ್ನಗಳ ಮಾಲೆಯು ಮಧ್ಯದಲ್ಲಿ ಮಹಾಮಣಿಯನ್ನು (ಸ್ವಾತಂತ್ರ್ಯ ಗುಣವನ್ನು) ಧರಿಸುತ್ತದೆ. ಮಾತಿಗೆ ನಿಲುಕದ (ಹೇಳಲು ಅನರ್ಹವಾದ) ಗಾಜಿನ ಮಣಿಯನ್ನು (ಐಕ್ಯವನ್ನು) ಧರಿಸುವುದಿಲ್ಲ.**

**ಭಾವವಿಲಾಸಿನೀ–** ಪೂರ್ವೋತ್ತರಾನುಗುಣ್ಯೇನ ಮಧ್ಯೇಽಪಿ ವಾಕ್ಯಾರ್ಥಕಲ್ಪನಾ ಕರ್ತವ್ಯೇತ್ಯತ್ರ ಲೋಕದೃಷ್ಟಾಂತಮಾಹ – **ಪೂರ್ವೋತ್ತರೋಕ್ತೇತಿ** ॥ ಸುಗುಣರತ್ನಮಾಲಾ ಶೋಭನ-ಗುಣಾಖ್ಯರತ್ನಮಾಲಾ । ಗುಣಬಾಹುಲ್ಯಾನ್ಮಾಲೇತ್ಯುಕ್ತಮ್ । ಮಧ್ಯೇಽಪಿ ಮಹಾಮಣಿಂ ನಾಯಕರತ್ನಂ ಸಕಲಗುಣೇಷು ಸ್ವಾತಂತ್ರ್ಯಾಖ್ಯಗುಣಸ್ಯ ಶ್ರೇಷ್ಠತ್ವಾತ್ । ಸ್ವಾತಂತ್ರ್ಯೇ ಹಿ ನಿರ್ದುಃಖಾನಂದಾದಿಕಂ ಸಂಭವತ್ಯನ್ಯಥಾ ನೇತ್ಯತೋ ಮಹಾಮಣಿಮಿತ್ಯುಕ್ತಮ್ । ಕಾಚಂ ನೈಚ್ಯಾಪಾದಕತ್ವೇನ ಕಾಚೋಪಮಮೈಕ್ಯಮ್ । ವಾಚಾಮಗೋಚರಮಿತ್ಯನೇನ ಪರಮತೇ ತಸ್ಯೈಕ್ಯಸ್ಯ ವಾಗವಿಷಯತ್ವಂ ಸ್ಮಾರಯತಿ ॥ ೪೬೬ ॥

**ವಿವರಣೆ–** ಪೂರ್ವೋತ್ತರ ವಾಕ್ಯಗಳಿಗೆ ಅನುಗುಣವಾಗಿ ಮಧ್ಯದ ವಾಕ್ಯದ ಅರ್ಥವಿರುತ್ತದೆ ಎಂಬ ವಿಷಯವನ್ನು ಲೌಕಿಕ ದೃಷ್ಟಾಂತದಿಂದ ಇಲ್ಲಿ ರಾಜರು ಪ್ರತಿಪಾದಿಸುತ್ತಾರೆ.

ಲೋಕದಲ್ಲಿ ರತ್ನಗಳಿಂದ ಹಾರವನ್ನು ತಯಾರಿಸುವವನು ಪಾರ್ಶ್ವದಲ್ಲಿರುವ ರತ್ನಗಳಿಗೆ ಶೋಭೆಯನ್ನು ಕೊಡುವ ಮಹಾರತ್ನವನ್ನು ಮಧ್ಯದಲ್ಲಿ ಜೋಡಿಸುತ್ತಾನೆ. ಆ ಸ್ಥಾನದಲ್ಲಿ ಪಾರ್ಶ್ವದ ರತ್ನಗಳಿಗಿಂತ ನೀಚವಾದ ಗಾಜಿನ ಮಣಿಯನ್ನು ಇಡುವುದಿಲ್ಲ. ಪುರುಷಸೂಕ್ತವು ಪರಮಾತ್ಮನ ಗುಣರತ್ನಗಳ ಹಾರ. ಈ ಸೂಕ್ತವು ಆರಂಭದಲ್ಲಿ ಪರಮಾತ್ಮನ ಲೋಕವಿಲಕ್ಷಣತ್ವವನ್ನು ಹೇಳಿದೆ. ಮುಂದಿನ ವಾಕ್ಯಗಳು ಮುಕ್ತರಿಗೆ ಆಶ್ರಯತ್ವವನ್ನು ಮತ್ತು ಸರ್ವೋತ್ತಮತ್ವವನ್ನು ಹೇಳಿವೆ. ಇವು ಗುಣರತ್ನಗಳು. ಸ್ವಾತಂತ್ರ್ಯವು ಈ ಗುಣಗಳಿಗೆ ಶೋಭೆಯನ್ನು ಉಂಟುಮಾಡುವ ಮಹಾರತ್ನ. ಆದ್ದರಿಂದ ಸೂಕ್ತದ ಮಧ್ಯದಲ್ಲಿರುವ 'ಪುರುಷ ಏವೇದಂ ಸರ್ವಮ್' - ಈ ವಾಕ್ಯವು ಸ್ವಾತಂತ್ರ್ಯವನ್ನು ಹೇಳುವುದು ಸಮಂಜಸ.

**ಯತ್ ಸ್ವಪ್ರಕಾಶಾತ್ಮರೂಪಮೈಕ್ಯಂ ತೇ ವಾಕ್ಯದೂರಗಮ್ ॥ ೪೬೭ ॥**

**ಅರ್ಥ–** ತೇ=ನಿನ್ನ ಮತದಲ್ಲಿ, ಯತ್=ಯಾವ ಕಾರಣದಿಂದ, ಐಕ್ಯಂ=ಜೀವಬ್ರಹ್ಮರ ಐಕ್ಯವು, ಸ್ವಪ್ರಕಾಶಾತ್ಮರೂಪಂ ಯತ್=ಸ್ವಪ್ರಕಾಶನಾದ ಬ್ರಹ್ಮಸ್ವರೂಪವಾಗಿರುವುದರಿಂದ, ವಾಕ್ಯದೂರಗಮ್=ವಾಕ್ಯಗಳಿಂದ ದೂರವಾಗಿದೆ (ಅವಾಚ್ಯ).

**ಅನುವಾದ–** ನಿಮ್ಮ ಮತದಲ್ಲಿ ಐಕ್ಯವು ಸ್ವಪ್ರಕಾಶನಾದ ಆತ್ಮನ ಸ್ವರೂಪವೇ. ಆದ್ದರಿಂದ ಅದು ವಾಕ್ಯಪ್ರತಿಪಾದ್ಯವಲ್ಲ.

**ಭಾವವಿಲಾಸಿನೀ–** ತದೇವೋಪಪಾದಯತಿ ॥ **ಯದಿತಿ** ॥ ತೇ ಮತೇ । ಸ್ವಪ್ರಕಾಶಾತ್ಮರೂಪಮಿತಿ ಹೇತುಗರ್ಭಂ ವಿಶೇಷಣಮ್ । ಸ್ವಪ್ರಕಾಶತ್ವೇನ ಬ್ರಹ್ಮಣಃ ಶಾಸ್ತ್ರಾವೇದ್ಯತ್ವಂ ವದತಾ ತದಭಿನ್ನೈಕ್ಯಸ್ಯಾಪಿ ತಥಾತ್ವಸ್ಯಾವಶ್ಯಂ ವಕ್ತವ್ಯತ್ವಾದಿತಿ ಹೇತೋಃಸೂಚನಾತ್ । ಅಖಂಡಾರ್ಥ-ವಾದಾಖ್ಯಯುಕ್ತೇರಪ್ಯುಪಲಕ್ಷಣಮೇತತ್ । ಅತೋಽಪಿ ನಾಸ್ಯ ವಾಕ್ಯಸ್ಯೈಕ್ಯಮರ್ಥ ಇತಿ ಭಾವಃ ॥ ೪೬೭ ॥

**ವಿವರಣೆ–** ಅದ್ವೈತದರ್ಶನದಲ್ಲಿ ಬ್ರಹ್ಮನು ಸ್ವಪ್ರಕಾಶ. ಅಂದರೆ ಅವನು ಪ್ರಮಾಣಗಳಿಂದ ತಿಳಿಯಲ್ಪಡುವುದಿಲ್ಲ. ಐಕ್ಯವು ಅವನ ಸ್ವರೂಪ. ಆದ್ದರಿಂದ ಅದೂ ಸ್ವಪ್ರಕಾಶ. ಎಂದರೆ ಶಾಸ್ತ್ರಪ್ರತಿಪಾದ್ಯವಲ್ಲ. ಶಾಸ್ತ್ರಪ್ರತಿಪಾದ್ಯವಲ್ಲದ, ಐಕ್ಯವು ಗಾಜಿನ ಮಣಿ. ಸೂಕ್ತವು ಅದನ್ನು ಹೇಳುವ ಅವಕಾಶವೇ ಇಲ್ಲ.

**ವಿರುದ್ಧಧರ್ಮಾಸ್ತ ಇಮೇ ಸಾಕ್ಷಾನ್ಮೋಕ್ಷಾಂಗತಾಬಲಾತ್ ।**
**ಅನಿವರ್ತ್ಯಾಶ್ಚ ಸತ್ಯಾಶ್ಚ ಕದೈಕ್ಯಾವಸರೋ ವದ ॥ ೪೬೮ ॥**

**ಅರ್ಥ–** ತೇ ಇಮೇ ವಿರುದ್ಧಧರ್ಮಾಃ= ಆ (ಶ್ರುತಿಯಲ್ಲಿ ಹೇಳಲ್ಪಟ್ಟಿರುವ) ಈ ವಿರುದ್ಧ ಧರ್ಮಗಳು, ಸಾಕ್ಷಾತ್= ಮುಖ್ಯವಾಗಿ, ಮೋಕ್ಷಾಂಗತಾಬಲಾತ್= ಮುಕ್ತಿಗೆ ಅಂಗವಾಗಿ ಇರುವುದರ ಬಲದಿಂದ, ಅನಿವರ್ತ್ಯಾ= ನಿವರ್ತ್ಯಗಳಲ್ಲ (ನಾಶಗೊಳಿಸಲ್ಪಡುವವುಗಳಲ್ಲ), ಸತ್ಯಾಶ್ಚ= ಸತ್ಯವೇ (ಆದ್ದರಿಂದ), ಐಕ್ಯಾವಸರಃ= ಐಕ್ಯಕ್ಕೆ ಅವಕಾಶವು, ಕದಾ= ಯಾವಾಗ ಇದೆ, ವದ= ಹೇಳು.

**ಅನುವಾದ–** ಆ ಈ ವಿರುದ್ಧ ಧರ್ಮಗಳು ನೇರವಾಗಿ ಮೋಕ್ಷಾಂಗಗಳೇ ಆದ್ದರಿಂದ ನಾಶಗೊಳಿಸಲ್ಪಡಲಾರವು. ಅವು ಸತ್ಯಗಳೇ. ಆದ್ದರಿಂದ ಐಕ್ಯಕ್ಕೆ ಅವಕಾಶವು ಯಾವಾಗ ಇದೆ? ಹೇಳು.

**ಭಾವವಿಲಾಸಿನೀ–** ನನು ವಿರುದ್ಧಧರ್ಮಾಣಾಂ ಮಿಥ್ಯಾತ್ವಾನ್ನೈಕ್ಯಬಾಧಕತ್ವಮಿತಿ ಶಂಕಾಂ ವೇದಾಪ್ರಾಮಾಣ್ಯಪ್ರಸಂಗೇನ ದೂಷಿತಾಮಪಿ ದೋಷಾಂತರೇಣ ದೂಷಯತಿ- **ವಿರುದ್ಧಧರ್ಮಾ ಇತಿ ॥** ಸಾಕ್ಷಾನ್ಮೋಕ್ಷಾಂಗತಾಬಲಾತ್, ತಮಿತಿ ಪುರುಷಸ್ಯ ಏವಮಿತಿ ತದ್ಧರ್ಮಾಣಾಂ ಚ ವೇದನಸ್ಯ ಸಹೈವ ಮೋಕ್ಷಹೇತುತ್ವಕಥನಾದಿತ್ಯರ್ಥಃ । ಅನಿವರ್ತ್ಯಾಃ ಬ್ರಹ್ಮವದನಿವರ್ತ್ಯಾಃ ಸತ್ಯಾಶ್ಚ ॥ ೪೬೮ ॥

**ವಿವರಣೆ–** 'ಪುರುಷಸೂಕ್ತವು ಜೀವಾತ್ಮ ಮತ್ತು ಪರಮಾತ್ಮರಿಗೆ ನಿಯಮ್ಯತ್ವ ಮತ್ತು ನಿಯಾಮಕತ್ವವನ್ನು, ಮೋಚ್ಯತ್ವ ಮತ್ತು ಮೋಚಕತ್ವಗಳನ್ನು, ಪರಮಾತ್ಮನಿಗೆ ಲೋಕವಿಲಕ್ಷಣತ್ವವನ್ನು ಹೇಳಿದೆ. ಇವು ವಿರುದ್ಧ ಧರ್ಮಗಳು. 'ಈ ವಿರುದ್ಧ ಧರ್ಮಗಳು ಬ್ರಹ್ಮಜ್ಞಾನದಿಂದ ನಾಶವಾಗುತ್ತವೆ; ಆದ್ದರಿಂದ ಇವುಗಳು ಮಿಥ್ಯಾ; ನಾಶಾನಂತರ ಬ್ರಹ್ಮನೊಬ್ಬನೇ ಉಳಿಯುತ್ತಾನೆ' - ಎಂದು ಅದ್ವೈತದರ್ಶನವು ಹೇಳುತ್ತದೆ.

ಇದು ಸರಿಯಲ್ಲ. ಪುರುಷಸೂಕ್ತದ, ಕೊನೆಯಲ್ಲಿ 'ತಮೇವಂ ವಿದ್ವಾನ್ ಅಮೃತ ಇಹ ಭವತಿ' ಎಂದು ಇದೆ. 'ಪುರುಷನನ್ನು ಪೂರ್ವವಾಕ್ಯಗಳಲ್ಲಿ ಹೇಳಿದ ಧರ್ಮಗಳುಳ್ಳವನೆಂದು ತಿಳಿದವನು ಮುಕ್ತನಾಗುತ್ತಾನೆ' ಎಂದು ಈ ವಾಕ್ಯದ ಅರ್ಥ. ಆದ್ದರಿಂದ ಪುರುಷ, ಅವನ ಧರ್ಮಗಳು ಮತ್ತು ಇವುಗಳ ಜ್ಞಾನ- ಇವು ಮೋಕ್ಷಕಾರಣಗಳು.

ಆದ್ದರಿಂದ ಇವುಗಳ ನಾಶವಾಗುವುದಿಲ್ಲ. ಆದ್ದರಿಂದಲೇ ಸತ್ಯ. ವಿರುದ್ಧ ಧರ್ಮಗಳು ಸತ್ಯವಾದ್ದರಿಂದ ಜೀವ-ಪರಮಾತ್ಮರ ಐಕ್ಯಕ್ಕೆ ಯಾವ ಕಾಲದಲ್ಲೂ ಅವಕಾಶವಿಲ್ಲ.

**ಏವಂ ವಿದ್ವಾನಿತಿ ಜ್ಞಾನಂ ಶ್ರೂಯತೇ ಸಪ್ರಕಾರಕಮ್ ।**
**ನಿಷ್ಪ್ರಕಾರಕಧೀವೇದ್ಯಂ ತೇಽದ್ವೈತಂ ನಾತ್ರ ಶೋಭತೇ ॥ ೪೬೯ ॥**

**ಅರ್ಥ–** ಏವಂ ವಿದ್ವಾನ್ ಇತಿ= 'ಏವಂ ವಿದ್ವಾನ್' ಎಂದು, ಸಪ್ರಕಾರಕಂ= ಸಪ್ರಕಾರಕವಾಗಿ, ಜ್ಞಾನಂ= ಜ್ಞಾನವು, ಶ್ರೂಯತೇ= (ಪುರುಷಸೂಕ್ತದಲ್ಲಿ) ಕೇಳಲ್ಪಡುತ್ತಿದೆ. ನಿಷ್ಪ್ರಕಾರಕಧೀವೇದ್ಯಂ= ಯಾವ ಪ್ರಕಾರವನ್ನು ಉಲ್ಲೇಖಿಸದ ಜ್ಞಾನಕ್ಕೆ ವಿಷಯವಾದ, ತೇ= ನಿನ್ನ ಅದ್ವೈತಂ= ಐಕ್ಯವು, ಅತ್ರ= ಈ ಪುರುಷಸೂಕ್ತದಲ್ಲಿ, ನ ಶೋಭತೇ= ಶೋಭಿಸುವುದಿಲ್ಲ.

**ಅನುವಾದ–** 'ಏವಂ ವಿದ್ವಾನ್' ಎಂದು ಧರ್ಮಸಹಿತವಾದ ಧರ್ಮಿಯ ಜ್ಞಾನವನ್ನು ಪುರುಷಸೂಕ್ತವು ಹೇಳುತ್ತಿದೆ. ನಿನ್ನ ಅದ್ವೈತವು ಧರ್ಮವನ್ನು ವಿಷಯೀಕರಿಸದ ಜ್ಞಾನ (ನಿಷ್ಪ್ರಕಾರಕಧೀ) ಕ್ಕೆ ವಿಷಯ. ಆದ್ದರಿಂದ ಈ ಪುರುಷಸೂಕ್ತದಲ್ಲಿ ನಿನ್ನ ಅದ್ವೈತವು ಶೋಭಿಸುವುದಿಲ್ಲ.

**ಭಾವವಿಲಾಸಿನೀ–** ಐಕ್ಯಾರ್ಥಕತ್ವೇ ದೂಷಣಾಂತರಮಾಹ – **ಏವಂ ವಿದ್ವಾನಿತಿ** ॥ ನಿಷ್ಪ್ರಕಾರಕಚರಮವೃತ್ತಿವೇದ್ಯತ್ವೇನಾಂಗೀಕೃತಂ ತವೈಕ್ಯಮ್ । ಅತ್ರ ಸಪ್ರಕಾರಕ ಜ್ಞಾನವಿಷಯಧರ್ಮಬೋಧಕೇ ವಾಕ್ಯೇ ॥ ೪೬೯ ॥

**ವಿವರಣೆ–** ಮತ್ತೊಂದು ರೀತಿಯಿಂದಲೂ ಪುರುಷಸೂಕ್ತದಲ್ಲಿ ಐಕ್ಯವು ಪ್ರತಿಪಾದ್ಯವಲ್ಲ ಎಂದು ಈ ಶ್ಲೋಕದಲ್ಲಿ ರಾಜರು ಹೇಳುತ್ತಾರೆ.

ಅದ್ವೈತದರ್ಶನದ ಐಕ್ಯವು ನಿಷ್ಪ್ರಕಾರಕಜ್ಞಾನಕ್ಕೆ ವಿಷಯವಾಗಿದೆ. ಪುರುಷಸೂಕ್ತವು 'ಏವಂ ವಿದ್ವಾನ್' ಎಂದು ಎಲ್ಲ ಧರ್ಮವುಳ್ಳ ಭಗವಂತನ ಜ್ಞಾನವನ್ನು ಹೇಳಿದೆ. ಸಪ್ರಕಾರಕ ಜ್ಞಾನಕ್ಕೆ ಐಕ್ಯವು ವಿಷಯವಲ್ಲವಾದುದರಿಂದ ಪುರುಷಸೂಕ್ತದಲ್ಲಿ ಐಕ್ಯ ಪ್ರತಿಪಾದನೆಗೆ ಅವಕಾಶವೇ ಇಲ್ಲ.

**ಏತಾವಾನಸ್ಯ ಮಹಿಮಾ ತತೋ ಜ್ಯಾಯಾಂಶ್ಚ ಪೂರುಷಃ ।**
**ಇತಿ ಪೂರ್ವೋಕ್ತಮಹಿಮಾ ಜ್ಯಾಯಸ್ತ್ವೇ ಹೇತುರುಚ್ಯತೇ ॥ ೪೭೦ ॥**

**ಅತಃ ಪೂರ್ವೋದಿತೋಽಪ್ಯರ್ಥಃ ಸರ್ವೋಽಪಿ ಮಹಿಮಾ ಭವೇತ್ ।**
**ನ ಚೇದ್ ವಿರುದ್ಧೋ ಹೇತುಃ ಸ್ಯಾದನುವಾದೋಽಪ್ಯನನ್ವಿತಃ ॥ ೪೭೧ ॥**

**ಅರ್ಥ–** 'ಏತಾವಾನಸ್ಯ..... ಪುರುಷಃ' ಇತಿ= 'ಏತಾವಾನಸ್ಯ .... ಪುರುಷಃ' ಎಂದು, ಪೂರ್ವೋಕ್ತ ಮಹಿಮಾ= ಹಿಂದೆ (ಆರಂಭದಿಂದ ಎರಡು ಋಕ್‌ಗಳಲ್ಲಿ) ಹೇಳಲ್ಪಟ್ಟ

ಮಹಿಮೆಯು, ಜ್ಯಾಯಸ್ತ್ವೇ= ಸರ್ವೋತ್ತಮತ್ವಕ್ಕೆ, ಹೇತುಃ= ಹೇತುವಾಗಿ, ಉಚ್ಯತೇ= ಹೇಳಲ್ಪಡುತ್ತದೆ. ಅತಃ= ಆದ್ದರಿಂದ, ಪೂರ್ವೋದಿತಃ= ಹಿಂದೆ (೧, ೨ನೆಯ ಮಂತ್ರಗಳಲ್ಲಿ) ಹೇಳಲ್ಪಟ್ಟ, ಸರ್ವೋऽಪಿ ಅರ್ಥಃ= ಎಲ್ಲ ಅರ್ಥವೂ, ಮಹಿಮಾ= ಮಹಿಮೆಯು, ಭವೇದ್ ಹಿ= ಆಗಲೇಬೇಕು, ನ ಚೇತ್= ಇಲ್ಲದಿದ್ದರೆ, ಹೇತುಃ= ಹೇತುವು, ವಿರುದ್ಧಃ ಸ್ಯಾತ್= ಸಾಧ್ಯಾಭಾವದ ಜೊತೆಗೇ ವ್ಯಾಪ್ತಿವುಳ್ಳದ್ದು ಆಗುವುದು. ಅನುವಾದಃ ಅಪಿ= 'ಏತಾವಾನ್' ಎಂಬ ಪದದಿಂದ ಮಾಡಲ್ಪಡುವ ಅನುವಾದವೂ, ಅನನ್ವಿತಃ ಸ್ಯಾತ್= ಅಸಂಬದ್ಧವಾದೀತು.

**ಅನುವಾದ–** 'ಏತಾವಾನಸ್ಯ ಮಹಿಮಾ ತತೋ ಜ್ಯಾಯಾಶ್ಚ ಪೂರುಷಃ' - ಈ ಮಂತ್ರದಿಂದ ಹಿಂದೆ ಹೇಳಲ್ಪಟ್ಟ (ಮಂತ್ರ ೧,೨) ಮಹಿಮೆಯು 'ಪುರುಷ' ನ ಸರ್ವೋತ್ತಮತ್ವಕ್ಕೆ ಹೇತುವಾಗಿ ಹೇಳಲ್ಪಡುತ್ತದೆ. ಆದ್ದರಿಂದ ಮೊದಲು (ಮಂತ್ರ ೧,೨) ಹೇಳಿದ ಎಲ್ಲವೂ ಮಹಿಮೆ ಆಗಲೇಬೇಕು. ಇಲ್ಲದಿದ್ದರೆ ಹೇತುವು ಸಾಧ್ಯಾಭಾವದ ಜೊತೆಗೇ ವ್ಯಾಪ್ತಿವುಳ್ಳದ್ದು ಆಗುವುದು. 'ಏತಾವಾನ್' ಎಂಬ ಪದದಿಂದ ಮಾಡಲ್ಪಡುವ ಅನುವಾದವು ಅಸಂಬದ್ಧವಾಗುವುದು.

**ಭಾವವಿಲಾಸಿನೀ–** ಐಕ್ಯಾರ್ಥಕತ್ವಾಭಾವೇ ಯುಕ್ತ್ಯಂತರಂ ಚಾಹ – **ಏತಾವಾನಿತಿ ॥** ಯತೋऽಸ್ಯ ಪುರುಷಸ್ಯ ಮಹಿಮಾ ಏತಾವಾನ್‌ಪೂರ್ವೋಕ್ತಪ್ರಕಾರೇಣ ಬಹುಸಂಖ್ಯಾಕ ಇತ್ಯರ್ಥಃ । ತತಃ ಕಾರಣಾತ್ ಪುರುಷಃ ಜ್ಯಾಯಾನ್ ಸರ್ವೋತ್ತಮ ಇತಿ ಪೂರ್ವೋಕ್ತಮಹಿಮಾ ಜ್ಯಾಯಸ್ತ್ವೇ ಯತೋ ಹೇತುರುಚ್ಯತೇ । ಅತಃ ಪೂರ್ವೋದಿತಃ ಪೂರ್ವವಾಕ್ಯೈರುದಿತಃ ಸರ್ವೋऽಪ್ಯರ್ಥಃ ಮಹಿಮಾ ಮಹಿಮರೂಪಃ । ನ ಚೇತ್ ಮಧ್ಯೇ ಐಕ್ಯಮುಕ್ತ್ವಾ ಮಹಿಮರೂಪತಾ ನೋಚ್ಯತೇ ಚೇತ್ । ಹೇತುಃ ಏತಾವಾನಸ್ಯ ಮಹಿಮೇತ್ಯುಕ್ತೋ ಹೇತುರ್ವಿರುದ್ಧಃಸ್ಯಾತ್ । ತ್ವಯೋಚ್ಯಮಾನೈಕ್ಯಸ್ಯ ಜ್ಯಾಯಾ ನಿತ್ಯುಕ್ತಸರ್ವೋತ್ತಮತ್ವಾಖ್ಯಸಾಧ್ಯವಿಪರ್ಯಯವ್ಯಾಪ್ತತ್ವಾದಿತಿ ಭಾವಃ । ಅನುವಾದೋऽಪ್ಯನನ್ವಿತಃ । ಏತಾವಾನಿತ್ಯನೇನೈಕ್ಯಸ್ಯಾಪ್ಯನುವಾದೇ ತಸ್ಯ ಮಹಿಮಘಾತಕತ್ವೇನ ಪುನರ್ಮಹಿಮೇತಿ ಪದಮಗ್ನಿನಾ ಸಿಂಚೇದಿತಿವದರ್ಥತ ಏವಾನನ್ವಿತಂ ಸ್ಯಾದಿತ್ಯರ್ಥಃ ॥ ೪೭೦- ೪೭೧ ॥

ವಿವರಣೆ– (1) 'ಪುರುಷ ಏವೇದಂ ಸರ್ವಂ' ಎಂಬ ಪುರುಷಸೂಕ್ತದ ಮಧ್ಯದ ವಾಕ್ಯವು ಐಕ್ಯಪ್ರತಿಪಾದಕವಲ್ಲ ಎಂಬ ವಿಷಯದಲ್ಲಿ ಇನ್ನೊಂದು ಯುಕ್ತಿಯನ್ನು ಹೇಳುತ್ತಾರೆ. 'ಏತಾವಾನಸ್ಯ ಮಹಿಮಾ ತತೋ ಜ್ಯಾಯಾಂಶ್ಚಪೂರುಷಃ' ಎಂಬ ಪುರುಷಸೂಕ್ತದ ವಾಕ್ಯದಲ್ಲಿ ಪರಮ ಪುರುಷನಾದ ಶ್ರೀಹರಿಯು ಹಿಂದೆ ಹೇಳಿದ ಮಹಿಮೆಯುಳ್ಳವನಾದುದರಿಂದ ಅವನು ಸರ್ವೋತ್ತಮನಾಗಿದ್ದಾನೆ ಎಂದು ಹೇಳಲ್ಪಟ್ಟಿದೆ; ಭಗವಂತನ ಸರ್ವೋತ್ತಮತ್ವಕ್ಕೆ ಅವನಲ್ಲಿರುವ ಪೂರ್ವೋಕ್ತ ಮಹಿಮೆಗಳು ಕಾರಣವಾಗಿವೆ ಎಂದು ಹೇಳುವುದರ ಮೂಲಕ ಮಹಿಮೆ ಮತ್ತು ಸರ್ವೋತ್ತಮತ್ವಗಳಿಗೆ ವ್ಯಾಪ್ಯವ್ಯಾಪಕ ಭಾವವು ಹೇಳಲ್ಪಟ್ಟಿದೆ.

(2) ಪುರುಷಃ ಸರ್ವೋತ್ತಮಃ, ಪೂರ್ವೋಕ್ತ ಮಹಿಮವತ್ವಾತ್. ಇಲ್ಲಿ ಸರ್ವೋತ್ತಮತ್ವ ವು ಸಾಧ್ಯ, ಪೂರ್ವೋಕ್ತ ಮಹಿಮವತ್ವವು ಹೇತು.

'ಪುರುಷ ಏವ ಇದಂ ಸರ್ವಮ್' ಎಂದು ಪೂರ್ವಮಂತ್ರದಲ್ಲಿ ಇದೆ. ಇದು ಐಕ್ಯಬೋಧಕವಾದರೆ, 'ಯತ್ರ ಐಕ್ಯಂ ತತ್ರ ಸರ್ವೋತ್ತಮತ್ವಾಭಾವಃ' ಎಂದು ವ್ಯಾಪ್ತಿಯು ಇರುವುದರಿಂದ ಹೇತುವು ವಿರುದ್ಧವಾಗುತ್ತದೆ. ಸಾಧ್ಯಾಭಾವದ ಜೊತೆಗೇ ವ್ಯಾಪ್ತಿಯನ್ನು ಹೊಂದಿದ ಹೇತುವು ವಿರುದ್ಧ.

(3) 'ಪುರುಷ ಏವ ಇದಂ ಸರ್ವಂ' ಇದು ಐಕ್ಯಬೋಧಕವಾದರೆ ಐಕ್ಯವು ಮಹಿಮೆಗೆ ಘಾತಕವಾದ್ದರಿಂದ, ಇಷ್ಟು ಮಹಿಮೆ ಎಂಬ ಅನುವಾದವು ಅಸಂಬದ್ಧ.

'ಪುರುಷ ಏವೇದಂ' ಎಂದು ಐಕ್ಯವನ್ನು ಹೇಳಿದರೆ ಜೀವೈಕ್ಯವಾಗಲೀ ಜಡೈಕ್ಯವಾಗಲೀ ನೈಚ್ಯಾಪಾದಕವಾಗುತ್ತದೆಯೇ ಹೊರತು ಮಹಿಮೆಯಾಗುವುದಿಲ್ಲ. ನೈಚ್ಯಾಪಾದಕ ಧರ್ಮವು ಸರ್ವೋತ್ತಮತ್ವರೂಪವಾದ ಸಾಧ್ಯಕ್ಕೆ ವಿರುದ್ಧವಾದ ಹೇತುವಾಗುತ್ತದೆ. ಮತ್ತು ಅದು ಮಹಿಮೆಯಲ್ಲವಾದ್ದರಿಂದ 'ಏತಾವಾನ್ ಅಸ್ಯ ಮಹಿಮಾ' ಎಂದು ಅನುವಾದ ಮಾಡುವುದೂ ಅನುಪಪನ್ನವಾಗುತ್ತದೆ.

**ಸೋಽಮೃತಸ್ಯಾಭಯಸ್ಯೇಶೋ ಮರ್ತ್ಯಮನ್ನಂ ಯದತ್ಯಗಾತ್ ।**
**ಇತಿ ಸ್ಮೃತ್ಯನುಸಾರೇಣ ಮರ್ತ್ಯಾಮೃತಪದೋಕ್ತಯೋಃ ॥ ೪೭೨ ॥**

**ಮುಕ್ತಾಮುಕ್ತಚಿತೋರೀಶೋ ಹ್ಯುತ್ತರಾರ್ಧೇ ಸ ಕಥ್ಯತೇ ।**
**ಅತೋ ಜಡಪದಾರ್ಥಸ್ಯಾಪೀಶತ್ವಂ ವಕ್ತಿ ಪೂರ್ವವಾಕ್ ॥ ೪೭೩ ॥**

**ಅರ್ಥ–** 'ಸೋಽಮೃತಸ್ಯಾಭಯಸ್ಯೇಶೋ... ಯದತ್ಯಗಾತ್' ಇತಿ= 'ಸೋಽಮೃತಸ್ಯ... ಯದತ್ಯಗಾತ್' ಎಂಬ, ಸ್ಮೃತ್ಯನುಸಾರೇಣ= ಸ್ಮೃತಿಗೆ (ಭಾಗವತ) ಅನುಗುಣವಾಗಿ ಮರ್ತ್ಯಾಮೃತಪದೋಕ್ತಯೋಃ= ಸೂಕ್ತದಲ್ಲಿ ಮರ್ತ್ಯ (ಅನ್ನ) ಮತ್ತು ಅಮೃತ ಪದಗಳಿಂದ ಹೇಳಲ್ಪಟ್ಟ, ಮುಕ್ತಾಮುಕ್ತಚಿತೋಃ= ಮುಕ್ತ ಮತ್ತು ಅಮುಕ್ತ ಚೇತನಗಳ, ಈಶಃ= ಈಶ ಎಂದು, ಸಃ= ಆ ಪುರುಷನು, ಉತ್ತರಾರ್ಧೇ= (ಎರಡನೆಯ ಮಂತ್ರದ) ಉತ್ತರಾರ್ಧದಲ್ಲಿ, ಕಥ್ಯತೇ ಹಿ= ಹೇಳಲ್ಪಡುತ್ತಾನೆ.

ಅತಃ= ಆದ್ದರಿಂದ, ಪೂರ್ವವಾಕ್= (ಎರಡನೆಯ ಮಂತ್ರದ) ಪೂರ್ವಾರ್ಧದ ಪದಗಳು, ಜಡಪದಾರ್ಥಸ್ಯ ಅಪಿ= ಜಡ ಪದಾರ್ಥಗಳ, ಈಶತ್ವಂ= (ಪುರುಷನಿಗೆ) ಸ್ವಾಮಿತ್ವವನ್ನು, ವಕ್ತಿ= ಹೇಳುತ್ತದೆ.

**ಅನುವಾದ– 'ಸೋಮೃತಸ್ಯಾಭಯಸ್ಯಶೋ...' ಎಂಬ ಸ್ಮೃತಿಗೆ (ಭಾಗವತ ೨.೬.೧೮) ಅನುಗುಣವಾಗಿ ಪುರುಷಸೂಕ್ತದ ಅನ್ನ ಮತ್ತು ಅಮೃತಪದಗಳಿಂದ ಹೇಳಲ್ಪಟ್ಟ**

**ಅಮುಕ್ತ ಮತ್ತು ಮುಕ್ತ ಚೇತನಗಳಿಗೆ ಪುರುಷನು ಈಶ ಎಂದು ಎರಡನೆಯ ಮಂತ್ರದ ಉತ್ತರಾರ್ಧವು ಹೇಳಿದೆ. ಆದ್ದರಿಂದ ಇದೇ ಮಂತ್ರದ ಪೂರ್ವಾರ್ಧವು ಪುರುಷನು ಜಡಪದಾರ್ಥಗಳಿಗೂ ಈಶ ಎಂದು ಹೇಳುತ್ತದೆ.**

**ಭಾವವಿಲಾಸಿನೀ–** ಪುರುಷ ಏವೇದಂ ಸರ್ವಮಿತ್ಯಸ್ಯ ಶ್ಲೋಕ್ತಾರ್ಥೇ ನಿಯಾಮಕಾಂತರಂ ಚ ದರ್ಶಯತಿ॥ **ಸೋಽಮೃತಸ್ಯೇತಿ** ॥ ಸ್ಮೃತ್ಯನುಸಾರೇಣ ಭಾಗವತವಾಕ್ಯಾನುಸಾರೇಣ ಮರ್ತ್ಯಾ-ಮೃತಪದೋಕ್ತಯೋರ್ಮರ್ತ್ಯಮನ್ನಂ ಯದತ್ಯಾಗಾದಿತ್ಯನ್ನಪದಸ್ಯ ಮರ್ತ್ಯಾರ್ಥಕಥನಾತ್ ಅಮೃತತ್ವಸ್ಯೇತ್ಯಸ್ಯಾಮೃತಸ್ಯೇತ್ಯರ್ಥಕಥನಾತ್ ಮುಕ್ತಾಮುಕ್ತಚಿತೋರಿತ್ಯುಕ್ತಮ್ । ಉತ್ತರಾರ್ಧೇ ಉತಾಮೃತತ್ವಸ್ಯೇತ್ಯುತ್ತರವಾಕ್ಯಾರ್ಧೇ । ಸ ಪುರುಷಃ । ಅತಃ ಚೇತನಾಚೇತನಯೋರ್ಮಧ್ಯೇ ಚೇತನೇಶಾನತ್ವಕಥನಾತ್ । ಪುರುಷ ಏವೇದಂ ಸರ್ವಮಿತಿ ಪೂರ್ವವಾಗಪಿ ಜಡಪದಾರ್ಥ-ಸ್ಯಾಪೀಶತ್ವಂ ವಕ್ತೀತಿ ಯೋಜನಾ । ಜಡಾಜಡಾತ್ಮಕ ಜಗತೋರ್ಜಡೇಶತ್ವಂ ಪೂರ್ವಮುಕ್ತ್ವಾ ಅಜಡೇಶತ್ವಂ ಪಶ್ಚಾದ್ವಕ್ತುಮುಚಿತಂ ನಾನ್ಯದಿತಿ ಭಾವಃ ॥ ೪೭೨-೪೭೩ ॥

**ವಿವರಣೆ–** 'ಪುರುಷ ಏವೇದಂ' ಎಂಬ ವಾಕ್ಯಕ್ಕೆ ಪರಮಾತ್ಮನು ಸರ್ವ-ನಿಯಾಮಕನಾದುದರಿಂದ ಸ್ವತಂತ್ರನಾಗಿದ್ದಾನೆ ಎಂದೇ ಅರ್ಥ ಎಂದು ಭಾಗವತದ ಆಧಾರದಿಂದ ಮತ್ತು ಪೂರ್ವಾಪರ ವಾಕ್ಯವಿಮರ್ಶೆಯಿಂದ ಸಮರ್ಥಿಸುತ್ತಾರೆ.

ಸಂಸಾರಭಯಾದಿದೋಷಗಳಿಂದ ರಹಿತವಾದ ಮುಕ್ತಜೀವರ ಸಮೂಹಕ್ಕೆ ಮತ್ತು ಮರಣಶೀಲರಾದ ಸಂಸಾರಿ ಜೀವಸಮೂಹಕ್ಕೆ ಶ್ರೀಹರಿಯು ನಿಯಾಮಕನಾಗಿದ್ದಾನೆ ಎಂದು ಭಾಗವತದಲ್ಲಿ ಹೇಳಿದೆ. ಪ್ರಕೃತ, 'ಪುರುಷ ಏವೇದಂ ಸರ್ವಂ ಯದ್ಭೂತಂ ಯಚ್ಚ ಭವ್ಯಮ್। ಉತಾಮೃತತ್ವಸ್ಯೇಶಾನಃ ಯದನ್ನೇನಾತಿರೋಹತಿ ॥' ಎಂಬ ಪುರುಷಸೂಕ್ತದ ಮಂತ್ರದಲ್ಲಿ 'ಪುರುಷ ಏವೇದಂ' ಎಂದು ಪೂರ್ವಾರ್ಧ. 'ಉತಾಮೃತತ್ವಸ್ಯ' ಎಂದು ಉತ್ತರಾರ್ಧ. ಈ ಮಂತ್ರದ ಉತ್ತರಾರ್ಧದಲ್ಲಿ ಮುಕ್ತರಾದ ಜೀವಸಮೂಹಕ್ಕೆ ಮತ್ತು ಸಂಸಾರಿಗಳಾದ ಜೀವಸಮೂಹಕ್ಕೂ ಶ್ರೀಹರಿಯು ನಿಯಾಮಕನಾಗಿದ್ದಾನೆ ಎಂದು ಹೇಳಿರುವುದರಿಂದ, ಪೂರ್ವಾರ್ಧವು ಅಚೇತನ ಪ್ರಪಂಚಕ್ಕೆ ನಿಯಾಮಕನಾಗಿದ್ದಾನೆ ಎಂದು ಹೇಳುವುದೇ ಸಮಂಜಸ. 'ಪುರುಷ ಏವೇದಂ ಸರ್ವಮ್' - ಈ ಮಂತ್ರವು ಪುರುಷನಿಗೆ ಏಕತ್ವವನ್ನು ಹೇಳುವುದಿಲ್ಲ. ಅವನ ಸ್ವಾತಂತ್ರ್ಯವನ್ನು ಹೇಳುತ್ತದೆ.

**ದೃಶ್ಯಮಾನಮಿದಂ ಸರ್ವಂ ಪ್ರಾಯಶೋ ಜಡಮೇವ ಹಿ ।**
**ನ ಚೇದತಿವಿರುದ್ಧೋಕ್ತಿರಿಯಂ ಸ್ಯಾತ್ ಸರ್ವವಾದಿನಾಮ್ ।**
**ಮುಕ್ತಾಮುಕ್ತಚಿತೋರೀಶಃ ಕಥಂ ಸರ್ವಜಡಾತ್ಮಕಃ ॥ ೪೭೪ ॥**

**ಅರ್ಥ–** ದೃಶ್ಯಮಾನಂ=ಪ್ರತ್ಯಕ್ಷಗೋಚರವಾದ, ಇದಂ ಸರ್ವಂ=ಈ ಪ್ರಪಂಚವೆಲ್ಲವೂ, ಪ್ರಾಯಶಃ=ಬಹುಪಾಲು, ಜಡಮ್ ಏವ ಹಿ=ಜಡಪದಾರ್ಥವೇ ಆಗಿದೆಯಷ್ಟೇ.

ನಚೇತ್=ಇಂತಹ ಜಡಪ್ರಪಂಚಕ್ಕೆ ಭಗವಂತನು ನಿಯಾಮಕನಲ್ಲದೆ ಅದರಿಂದ ಅಭಿನ್ನನಾದರೆ, ಇಯಮ್ ಉಕ್ತಿಃ= ಈ 'ಇದಂ ಸರ್ವಂ' ಎಂಬ ಉಕ್ತಿಯು, ಸರ್ವವಾದಿನಾಂ= ಎಲ್ಲವಾದಿಗಳಿಗೂ, ಅತಿವಿರುದ್ಧಾ ಸ್ಯಾತ್= ಅತ್ಯಂತವಿರುದ್ಧವು ಆದೀತು. ಮುಕ್ತಾಮುಕ್ತಚಿತೋಃ= ಮುಕ್ತಾಮುಕ್ತ ಚೇತನಗಳಿಗೆ, ಈಶಃ=ನಿಯಾಮಕನಾದ ಭಗವಂತನು, ಸರ್ವಜಡಾತ್ಮಕಃ=ಎಲ್ಲ ಜಡ ಪದಾರ್ಥಗಳಿಂದ ಅಭಿನ್ನನು, ಕಥಂ ಸ್ಯಾತ್=ಹೇಗೆ ಆದಾನು?

**ಅನುವಾದ–** ಕಾಣುವ ಈ ಜಗತ್ತೆಲ್ಲವೂ ಪ್ರಾಯಶಃ ಜಡವೇ. 'ಪುರುಷ ಏವ ಇದಂ ಸರ್ವಮ್' - ಈ ಮಂತ್ರಭಾಗಕ್ಕೆ ಪುರುಷನು ಜಡನಿಯಾಮಕ ಎಂಬ ಅರ್ಥ- ವಿರದಿದ್ದರೆ ಈ ಉಕ್ತಿಯು ಎಲ್ಲ ವಾದಿಗಳ ಪ್ರಕಾರವೂ ವಿರುದ್ಧವಾದೀತು.

ಈ ಉಕ್ತಿಯ ಪುರುಷನಿಗೆ ಸರ್ವಾಭೇದವನ್ನು ಹೇಳಿದರೆ ಈಶನು ಸರ್ವ- ಜಡವಸ್ತುಗಳ ಸ್ವರೂಪವೇ ಆಗಬೇಕಾಗುತ್ತದೆ. ಈಶನು ಹೇಗೆ ಜಡವಾದಾನು?

**ಭಾವವಿಲಾಸಿನೀ–** ಪೂರ್ವವಾಕ್ಯೇ ಜಡತ್ವಜ್ಞಾಪಕಂ ಕಿಮಿತ್ಯತ ಆಹ – **ದೃಶ್ಯಮಾನಮಿತಿ** ॥ ಇದಂ ಪರಿದೃಶ್ಯಮಾನಮ್ ಇದಂಪದಸ್ಯ ಪರಿದೃಶ್ಯಮಾನಾರ್ಥಕತ್ವಾದ್ದೃಶ್ಯಮಾನಮಿತ್ಯುಕ್ತಮ್। ತಾದೃಶಂ ಚ ಸರ್ವಂ ಪ್ರಾಯಶೋ ಜಡಮೇವ ಹಿ। ಅತಸ್ತನ್ನಿಯಾಮಕತಯಾ ತದೀಶತ್ವಮೇವಾತ್ರೋಚ್ಯತ ಇತಿ ಭಾವಃ। ಏವಮನಂಗೀಕಾರೇ ಬಾಧಕಮಾಹ – **ನ ಚೇದಿತಿ** ॥ ಕಥಮಿತ್ಯತ ಆಹ – **ಮುಕ್ತಾ- ಮುಕ್ತಚಿತೋರಿತಿ** ॥ ಸರ್ವಜಡಾತ್ಮಕಃ ಪುರುಷ ಏವೇದಂ ಸರ್ವಮಿತಿ ವಾಕ್ಯಸ್ಯೈಕ್ಯಾರ್ಥಕತ್ವೇ ಜಡೈಕ್ಯಪ್ರಾಪ್ತೇಃ ಸರ್ವಜಡಾತ್ಮಕ ಇತ್ಯುಕ್ತಮ್ । ಏವಂ ಚ ಮುಕ್ತಾಮುಕ್ತಚಿತೋರೀಶಃ ಜಡಾಭಿನ್ನಶ್ಚೇತ್ಯೇತತ್ಸರ್ವವಾದಿಮತವಿರುದ್ಧಮಿತಿ ಭಾವಃ ॥ ೪೭೪ ॥

**ವಿವರಣೆ–** ಚೇತನಾಚೇತನಾತ್ಮಕ ಪ್ರಪಂಚದಲ್ಲಿ ಅಚೇತನ ಪ್ರಪಂಚವು ಮಾತ್ರ ದೃಷ್ಟಿಗೋಚರವಾಗಿದೆ. ಚೇತನ ಪ್ರಪಂಚವು ದೃಷ್ಟಿಗೋಚರ ಅಲ್ಲ. ಎಲ್ಲರಿಗೂ 'ಅಹಂ' ಎಂಬ ಜ್ಞಾನವಿದೆ. ಇದು ಸಾಕ್ಷಿಪ್ರತ್ಯಕ್ಷ. ಆದ್ದರಿಂದ ಜೀವರು ಸಾಕ್ಷಿಗೋಚರರಾಗಿದ್ದಾರೆ. ಒಬ್ಬ ಜೀವನಿಗೆ ಇನ್ನೊಬ್ಬ ಜೀವನು ಅಕ್ಷಿಗೋಚರನಲ್ಲ. ಸಾಕ್ಷಿಗೋಚರನೂ ಅಲ್ಲ. ತನಗೆ ತಾನು ಮಾತ್ರ ಸಾಕ್ಷಿಗೋಚರನಾಗಿದ್ದಾನೆ. ಒಬ್ಬ ಚೇತನನಿಗೆ ಇನ್ನೊಬ್ಬ ಚೇತನನು ಅನುಮಾನದಿಂದ ಸಿದ್ಧನಾಗಿದ್ದಾನೆ. 'ಪುರತಃ ದೃಶ್ಯಮಾನಂ ಇದಂ ಶರೀರಂ ಚೇತನವತ್ ಚೇಷ್ಟಾವತ್ತ್ವಾತ್ ಮಚ್ಛರೀರವತ್' = ನನ್ನ ಶರೀರದಲ್ಲಿ ಕ್ರಿಯೆ ಇರುವುದರಿಂದ ನನ್ನ ಶರೀರವು ಹೇಗೆ ಸಚೇತನವೋ, ಅದರಂತೆ ನಮಗೆ ಕಾಣುವ ಎಲ್ಲ ಶರೀರಗಳಲ್ಲಿ ಚೇತನಗಳಿವೆ ಎಂದು ಅನುಮಾನ. ಆದ್ದರಿಂದ ರಾಜರು ಈ ಶ್ಲೋಕದಲ್ಲಿ 'ಪ್ರಾಯಶಃ' ಎಂಬ ಪದವನ್ನು ಪ್ರಯೋಗಿಸಿದ್ದಾರೆ.

ದೃಷ್ಟಿಗೋಚರವಾದ ಜಡಪ್ರಪಂಚಕ್ಕೆ ಭಗವಂತನು ನಿಯಾಮಕನಾಗಿದ್ದಾನೆ ಎಂದು ಶ್ರುತಿಯು ಹೇಳುತ್ತಿದೆ. ಶರೀರದಲ್ಲಿ ಜೀವನಿದ್ದಾನೆ. ಅವನಿಗೆ ಭಗವಂತನು ನಿಯಾಮಕ-

ನಾಗಿದ್ದಾನೆ ಎಂದೂ ಶ್ರುತಿಯು ಹೇಳುತ್ತಿದೆ. ಹೀಗಿರುವಾಗ ಅದ್ವೈತಿಗಳು 'ಪುರುಷ ಏವೇದಂ ಸರ್ವಂ' ಎಂಬ ಪುರುಷಸೂಕ್ತದ ಮಂತ್ರವು ಜಡಪದಾರ್ಥಗಳಿಗೂ ಪರಮಾತ್ಮನಿಗೂ ಐಕ್ಯವನ್ನು ಹೇಳುತ್ತಿದೆ ಎಂದು ಹೇಳಿದರೆ ಈ ವಾದವು ಎಲ್ಲ ವಾದಿಗಳಿಗೂ ವಿರುದ್ಧವಾಗುತ್ತದೆ.

ಅಲ್ಲದೇ, ಈಶನು ಜಡಾಭಿನ್ನನಾಗಿದ್ದರೆ ಇದೇ ಮಂತ್ರದ ಉತ್ತರಾರ್ಧದಲ್ಲಿ ಹೇಳಿರುವಂತೆ ಅವನು ಮುಕ್ತಾಮುಕ್ತನಿಯಾಮಕನಾಗುವುದು ಹೇಗೆ?

ಪೂರ್ವಾರ್ಧದಲ್ಲಿ 'ಜಡ' ಎಂಬ ಶಬ್ದವಿಲ್ಲ. ಆದ್ದರಿಂದ 'ಇದಂ ಸರ್ವಂ' ಈ ಪದಗಳಿಗೆ ಜಡಪ್ರಪಂಚ ಎಂಬ ವ್ಯಾಖ್ಯಾನವು ಹೇಗೆ?

ಮಂತ್ರದಲ್ಲಿ 'ಇದಂ' ಎಂಬ ಶಬ್ದವಿರುವುದರಿಂದ ಪ್ರತ್ಯಕ್ಷಗೋಚರವಾದ ವಸ್ತುಗಳಲ್ಲಿ ಮಾತ್ರ 'ಇದಂ' ಎಂಬ ಶಬ್ದವನ್ನು ಪ್ರಯೋಗಿಸುವುದರಿಂದ 'ಇದಂ ಸರ್ವಂ' - ಈ ಪದಗಳಿಗೆ ಜಡ ಎಂದೇ ಅರ್ಥ.

**ದೇಹೋಽಪ್ಯಾತ್ಮಾ ನ ಚೇತ್ ಸರ್ವಂ ದೃಶ್ಯಮಾನಮಿದಂ ಜಡಮ್ ।**
**ಕಥಂ ಪುರುಷ ಏವ ಸ್ಯಾದೇವೇತ್ಯತ್ಯಂತದುರ್ಘಟಮ್ ॥ ೪೭೫ ॥**

**ಅರ್ಥ–** ದೇಹೋಽಪಿ=(ಜೀವನ ಹತ್ತಿರದಲ್ಲಿರುವ) ದೇಹವೇ, ಆತ್ಮಾ ನ ಚೇತ್=ಆತ್ಮವಲ್ಲವಾದರೆ, ದೃಶ್ಯಮಾನಂ=ಎಲ್ಲರ ದೃಷ್ಟಿಗೋಚರವಾದ, ಇದಂ ಜಡಂ=ಈ ಜಡಪ್ರಪಂಚವು, ಕಥಂ=ಹೇಗೆ ತಾನೇ, ಪುರುಷ ಏವ ಸ್ಯಾತ್?=ಪುರುಷನೇ ಆದೀತು? ಏವ ಇತಿ= (ಶ್ರುತಿಯಲ್ಲಿರುವ) 'ಏವ' ಎಂಬ ಶಬ್ದವು, ಅತ್ಯಂತ ದುರ್ಘಟಮ್= ಸರ್ವಾತ್ಮನಾ ಅನುಪಪನ್ನ.

**ಅನುವಾದ–** ಜೀವಾತ್ಮನಿಗೆ ಹತ್ತಿರದಲ್ಲೇ ಇರುವ ದೇಹವೇ ಆತ್ಮಾ ಅಲ್ಲ. ಹೀಗಿರುವಾಗ ಕಾಣುವ ಜಡ ಪ್ರಪಂಚವು ಹೇಗೆ ತಾನೆ 'ಪುರುಷನೇ' ಆದೀತು? ಶ್ರುತಿಯಲ್ಲಿರುವ 'ಏವ' ಶಬ್ದಕ್ಕೆ ಯಾವುದೇ ರೀತಿಯಿಂದ ಸಮರ್ಥನೆಯಿಲ್ಲ.

**ಭಾವವಿಲಾಸಿನೀ–** ತದೇವ ದರ್ಶಯತಿ ॥ **ದೇಹೋಽಪೀತಿ** ॥ ದೇಹೋಽಪ್ಯಾತ್ಮಾ ನ ಚೇತ್ । ದೇಹೋಽಪೀತ್ಯಪಿಪದೇನಾತಿಸಮೀಪಸ್ಥತಯಾ ಅಹಮಿತಿ ವ್ಯವಹ್ರಿಯಮಾಣತಯಾ ಚ ಸಂಭಾವಿತೈಕ್ಯೋಽಪೀತಿ ಸೂಚಯತಿ । ಇದಂ ಘಟಪಟಾದಿಕಂ ಪುರುಷ ಏವ ಕಥಂ ಸ್ಯಾತ್ । ಚಾರ್ವಾಕಾತಿರಿಕ್ತಸರ್ವವಾದಿಭಿರಪಿ ದೇಹಾತ್ಮವಿವೇಕಸ್ಯಾಂಗಿಕಾರಾದಿತಿ ಭಾವಃ ॥ **ಏವೇತಿ** ॥ ಪುರುಷ ಏವೇತ್ಯತ್ರೋಕ್ತಮೇವೇತಿ ಪದಂ ಅತ್ಯಂತದುರ್ಘಟಮ್ । ಯದಾ ಸರ್ವಂ ಪುರುಷ ಇತ್ಯಪಿ ನ ವಕ್ತುಂ ಶಕ್ಯತೇ ತದಾ ಪುರುಷ ಏವೇತಿ ಸುತರಾಂ ವಕ್ತುಂ ನ ಶಕ್ಯತ ಇತ್ಯರ್ಥಃ । ಅನೇನ ಪದೇನಾತ್ಯಂತಾಭೇದಕಥನಾತ್ ಭೇದಾಭೇದಾಂಗೀಕಾರೇಣಾಪಿ ನಾತ್ರ ನಿರ್ವಾಹಃ ಶಕ್ಯ ಇತಿ ಭಾವಃ ॥ ೪೭೫ ॥

**ವಿವರಣೆ–** ದೇಹವು ಆತ್ಮನ ಹತ್ತಿರ ಇರುವುದರಿಂದ, ಮತ್ತು ಲೋಕದಲ್ಲಿ ದೇಹವನ್ನು ನಿರ್ದೇಶಿಸಿ ನಾನು-ನೀನು ಮುಂತಾದ ವ್ಯವಹಾರವಿರುವುದರಿಂದ ದೇಹಾತ್ಮರ ಐಕ್ಯವು ಸಂಭಾವಿತವಾದೀತು. ಆದರೆ, ಈ ದೇಹಾತ್ಮೈಕ್ಯವು ಸತ್ಯವಲ್ಲ. ಏಕೆಂದರೆ, ದೇಹವು ಜಡ. ಆತ್ಮನು ಚೇತನ. ಹೀಗೆ, ದೇಹವೇ ಆತ್ಮನಲ್ಲದಿರುವಾಗ ಘಟಪಟಾದಿ ಪ್ರಪಂಚವು ಹೇಗೆ ತಾನೇ ಆತ್ಮಸ್ವರೂಪವಾದೀತು?

ಪುರುಷ-ಜಡಗಳ ಅಭೇದ ಪಕ್ಷದಲ್ಲಿ 'ಸರ್ವಂ ಪುರುಷಃ' (ಎಲ್ಲವೂ ಪುರುಷ) ಎಂಬ ಉಕ್ತಿಯೇ ಅನುಪಪನ್ನವಾಗಿರುವಾಗ 'ಸರ್ವಂ ಪುರುಷ ಏವ' ಎಂಬ ಉಕ್ತಿಯಲ್ಲಿರುವ 'ಏವ' ಶಬ್ದಕ್ಕೆ ಯಾವುದೇ ಉಪಪತ್ತಿಯೂ ಇಲ್ಲ.

'ಅತ್ಯಂತದುರ್ಘಟಂ' ಎಂದು ರಾಜರು 'ಅತ್ಯಂತ' ಶಬ್ದವನ್ನು ಪ್ರಯೋಗಿಸಿ ಪುರುಷ ಮತ್ತು ಪ್ರಪಂಚಕ್ಕೆ ಅತ್ಯಂತಾಭೇದವು ಮಾತ್ರ ದುರ್ಘಟವಲ್ಲ. (ದೇಹಾತ್ಮರಿಗೆ) ಭೇದಾಭೇದವೂ ದುರ್ಘಟ ಎಂದು ಸೂಚಿಸಿದ್ದಾರೆ.

**ವಿಶಿಷ್ಟೈಕ್ಯಂ ಹಿ ತಸ್ಯಾರ್ಥೋ ಯಜ್ಜೀವೇಽಪಿ ನ ಯುಜ್ಯತೇ ॥ ೪೭೬ ॥**

**ಅರ್ಥ–** ತಸ್ಯ= ಪುರುಷ ಏವೇದಂ ಸರ್ವಂ ಎಂಬ ವಾಕ್ಯಕ್ಕೆ, ವಿಶಿಷ್ಟೈಕ್ಯಂ= ವಿಶಿಷ್ಟೈಕ್ಯವು, ಅರ್ಥೋ ಹಿ= ಅರ್ಥವಷ್ಟೆ. ಯತ್= ಯಾವ ವಿಶಿಷ್ಟೈಕ್ಯವು, ಜೀವೇಪಿ= ಜೀವನಲ್ಲಿಯೂ, ನಯುಜ್ಯತೇ= ಕೂಡುವುದಿಲ್ಲ.

**ಅನುವಾದ–** 'ಪುರುಷ ಏವ ಇದಂ ಸರ್ವಂ'- ಈ ಮಂತ್ರದಲ್ಲಿ ಪ್ರಸ್ತುತನಾದ ಪುರುಷನು 'ಸಹಸ್ರಶೀರ್ಷತ್ವ' ಮೊದಲಾದ ವಿಶೇಷಣಗಳಿಂದ ಸಹಿತ. ಆದ್ದರಿಂದ ವಿಶಿಷ್ಟ 'ಈ ವಿಶಿಷ್ಟ ಪುರುಷನೇ ಈ ಪ್ರಪಂಚ' ಎಂದು ಐಕ್ಯವಾದಿಗಳು ಹೇಳಬೇಕಾಗುತ್ತದೆ. ಆದರೆ ಇವರು ಜೀವಾತ್ಮನಿಗೇ ವಿಶಿಷ್ಟ ಬ್ರಹ್ಮನಿಂದ ಐಕ್ಯವನ್ನು ಅಂಗೀಕರಿಸುವುದಿಲ್ಲ. ಹೀಗಿರುವಾಗ ಜಡಪ್ರಪಂಚಕ್ಕೆ ವಿಶಿಷ್ಟಪುರುಷನಿಂದ ಐಕ್ಯವು ಉಪಪನ್ನವೇ?

**ಭಾವವಿಲಾಸಿನೀ–** ಭಾವಾಂತರಂ ಚಾಹ – **ವಿಶಿಷ್ಟೈಕ್ಯಮಿತಿ** ॥ ತಸ್ಯೈವಕಾರಸ್ಯ ವಿಶಿಷ್ಟೈಕ್ಯಂ ಯಾವಂತಿ ವಿಶೇಷಣಾನಿ ಸಹಸ್ರಶೀರ್ಷತ್ವಾದೀನಿ ತಾವದ್ವಿಶೇಷಣವಿಶಿಷ್ಟೇನೈಕ್ಯಮ್ । ಚಿನ್ಮಾತ್ರೈಕ್ಯೇ ಹಿ ಪುರುಷ ಏವೇತಿ ನ ವಕ್ತುಮುಚಿತಮ್ । ಕಿಂತು ಪುರುಷಸ್ಯೈಕದೇಶ ಇತ್ಯೇವ ವಕ್ತವ್ಯಮ್ । ಪುರುಷ ಏವೇತ್ಯುಕ್ತೇ ಯಥಾ ಪುರುಷೋಽಸ್ತಿ ತಥೈವೇತ್ಯರ್ಥಸ್ಯ ಪ್ರತೀಯಮಾನತ್ವಾತ್ । ಏವಪದಮಹಿಮ್ನಾ ವಿಶಿಷ್ಟೈಕ್ಯಮೇವಾಯಾತಿ । ನ ತು ಚಿನ್ಮಾತ್ರೈಕ್ಯಮಿತಿ ಭಾವಃ । ಯದ್ವಿಶಿಷ್ಟೈಕ್ಯಂ ಜೀವೇಽಪಿ ನ ಯುಜ್ಯತೇ ತತ್‌ಕಥಂ ಜಡೇ ಸ್ಯಾತ್ । ಅತ ಏವ ಪ್ರಾಗತ್ಯಂತದುರ್ಘಟ-ಮಿತ್ಯುಕ್ತಮ್ ॥ ೪೭೬ ॥

**ವಿವರಣೆ–** ಪ್ರಶ್ನೆ: 'ಪುರುಷ ಏವೇದಂ' ಎಂಬ ವಾಕ್ಯದಲ್ಲಿರುವ ಏವಕಾರವು ವಿಶಿಷ್ಟೈಕ್ಯವನ್ನೇ ಹೇಳುತ್ತಿದೆ. ಸಹಸ್ರಶೀರ್ಷತ್ವಾದಿ ಗುಣವಿಶಿಷ್ಟನಾದ ಬ್ರಹ್ಮನೇ (ಪುರುಷನೇ) 'ಇದಂ ಸರ್ವಂ' ಈ ಎಲ್ಲ ಜಗತ್?

ಉತ್ತರ : ಈ ಏವಕಾರದಿಂದ ಹೇಳಲ್ಪಟ್ಟ ಗುಣವಿಶಿಷ್ಟೈಕ್ಯವು ಜೀವನಲ್ಲಿಯೇ ಕೂಡುವುದಿಲ್ಲ. ಏಕೆಂದರೆ, ಜೀವನು ಚೇತನನಾಗಿದ್ದರೂ ಬ್ರಹ್ಮನಿಗಿಂತ ವಿರುದ್ಧವಾದ ಅಲ್ಪಜ್ಞತ್ವ, ಅಸ್ವತಂತ್ರತ್ವ ಮೊದಲಾದ ವಿರುದ್ಧ ಧರ್ಮವುಳ್ಳವನಾಗಿದ್ದಾನೆ. ಏವಕಾರದಿಂದ ಗುಣವಿಶಿಷ್ಟನಿಗೇ ಐಕ್ಯವು ವಿಹಿತವಾದುದರಿಂದ ಸಹಸ್ರಶೀರ್ಷತ್ವಾದಿ ಗುಣವಿಶಿಷ್ಟನಾದ ಬ್ರಹ್ಮನಿಗೂ ಜಡ ಪದಾರ್ಥಗಳಿಗೂ ಐಕ್ಯವು ಹೇಗೆ ತಾನೇ ಸಮ್ಮತವಾದೀತು? ಸರ್ವಥಾ ಸಮ್ಮತವಾಗಲಾರದು.

ಏವಕಾರವು ವರ್ಣಿತ ಪುರುಷನಿಂದ ಐಕ್ಯವನ್ನೇ ಹೇಳುತ್ತಿದೆ; ವರ್ಣಿತ ಪುರುಷನು ಸಹಸ್ರಶೀರ್ಷತ್ವಾದಿ ಧರ್ಮವಿಶಿಷ್ಟನಾಗಿದ್ದಾನೆ. ಇಂತಹ ವಿಶಿಷ್ಟ ಪುರುಷನಿಂದ ಚೇತನನಾದ ಜೀವನಿಗೇ ಐಕ್ಯವನ್ನು ಹೇಳಲು ಬಾರದಿರುವಾಗ ಜಡ ಪ್ರಪಂಚಕ್ಕೆ ಗುಣವಿಶಿಷ್ಟ ಪುರುಷನಿಂದ ಐಕ್ಯವನ್ನು ಹೇಳಲು ಹೇಗೆ ಸಾಧ್ಯವಾದೀತು? ಚಿನ್ಮಾತ್ರೈಕ್ಯವನ್ನು ಹೇಳುವ ಉದ್ದೇಶವಿದ್ದಿದ್ದರೆ 'ಪುರುಷೈಕದೇಶ ಏವ ಇದಂ ಸರ್ವಮ್' ಎಂದು ಇರಬೇಕಾಗಿದ್ದಿತು.

**ನಷ್ಟಾನುತ್ಪನ್ನಜಗತೋ ಭೂತಭವ್ಯಪದೋದಿತಾತ್ ।**
**ಐಕ್ಯಂ ತ್ವನಾದಿನಿತ್ಯಸ್ಯ ಪುರುಷಸ್ಯೇತಿ ಕೋ ವದೇತ್ ॥ ೪೭೭ ॥**

**ಅರ್ಥ–** ಅನಾದಿನಿತ್ಯಸ್ಯ= ಆದ್ಯಂತ ರಹಿತನಾದ, ಪುರುಷಸ್ಯ=ಪುರುಷನಿಗೆ, ಭೂತಭವ್ಯ-ಪದೋದಿತಾತ್= ಭೂತ ಮತ್ತು ಭವ್ಯ ಎಂಬ ಪದಗಳಿಂದ ಹೇಳಲ್ಪಟ್ಟ, ನಷ್ಟಾನುತ್ಪನ್ನ-ಜಗತಃ=ನಾಶಹೊಂದಿದ ಮತ್ತು ಮುಂದೆ ಹುಟ್ಟಲಿರುವ ಜಗತ್ತಿನಿಂದ, ಐಕ್ಯಮ್ ಇತಿ= ಐಕ್ಯ ಎಂದು, ಕಃ ತು= ಯಾರು ತಾನೇ, ವದೇತ್=ಹೇಳಿಯಾನು?

**ಅನುವಾದ–** ಪುರುಷಸೂಕ್ತದ ಭೂತ ಮತ್ತು ಭವ್ಯ ಪದಗಳಿಂದ ಹೇಳಲ್ಪಟ್ಟ ನಾಶವಾಗಿರುವ ಮತ್ತು ಮುಂದೆ ಹುಟ್ಟುವ ಜಡವಸ್ತುಗಳಿಂದ ಆದಿ-ಅಂತಗಳಿಲ್ಲದ ಪುರುಷನಿಗೆ ಐಕ್ಯವಿದೆ ಎಂದು ಯಾರು ತಾನೇ ಹೇಳಿಯಾರು?

**ಭಾವವಿಲಾಸಿನೀ–** ಐಕ್ಯಾರ್ಥಕತ್ವೇ ಬಾಧಕಾಂತರಂ ಚಾಹ – **ನಷ್ಟಾನುತ್ಪನ್ನೇತಿ ॥** ಯದ್ಭೂತಂ ಯಚ್ಚ ಭವ್ಯಮಿತಿ ಭೂತಭವ್ಯಪದೋದಿತಾತ್ । ಭೂತಪದಸ್ಯಾತೀತಾರ್ಥಕತ್ವಾದ್ಭವ್ಯಪದಸ್ಯ ಭವಿಷ್ಯದರ್ಥಕತ್ವಾತ್ ನಷ್ಟಾನುತ್ಪನ್ನಜಗತ ಇತ್ಯುಕ್ತಮ್ । ಏವಂ ಚ ಭೂತಭವ್ಯಪದಬಲಾದಪಿ ಜಡಮೇವಾತ್ರ ಪ್ರತಿಪಾದ್ಯಮಿತಿ ಸೂಚಯತಿ । ಅನಾದಿನಿತ್ಯಸ್ಯ ಪ್ರಾಗಭಾವಪ್ರಧ್ವಂಸ-ವಿಧುರಸ್ಯ ॥ ೪೭೭ ॥

**ಭಾವಾಭಾವವಿರೋಧಶ್ಚ ನಾಸ್ತಿ ಕಿಂ ಸರ್ವಸಮ್ಮತಃ ।**
**ಘಟೋಽಪಿ ವಿದ್ಯಮಾನೋಽಯಂ ನಹಿ ನಷ್ಟಘಟಾತ್ಮಕಃ ॥ ೪೭೮ ॥**

**ಅರ್ಥ–** ಸರ್ವಸಮ್ಮತಃ=ಎಲ್ಲ ವಾದಿಗಳೂ ಅಂಗೀಕರಿಸಿದ, ಭಾವಾಭಾವವಿರೋಧಶ್ಚ= ಭಾವ ಮತ್ತು ಅಭಾವ ಪದಾರ್ಥಗಳ ವಿರೋಧವು, ನಾಸ್ತಿ ಕಿಂ= ಇಲ್ಲವೇ? ವಿದ್ಯಮಾನಃ= ಇರುವ, ಅಯಂ ಘಟಃ ಅಪಿ= ಈ ಮಡಿಕೆಯೂ, ನಷ್ಟಘಟಾತ್ಮಕಃ= ನಾಶವಾದ ಮಡಿಕೆಯೇ, ನ ಹಿ= ಅಲ್ಲವಷ್ಟೆ?

**ಅನುವಾದ–** **ಸರ್ವಸಮ್ಮತವಾದ ಭಾವ-ಅಭಾವಗಳ ವಿರೋಧವು ಇಲ್ಲವೇ? ಈಗ ಇರುವ ಘಟವು ನಾಶವಾದ ಘಟವೂ ಒಂದೇ ಅಲ್ಲವಷ್ಟೆ!**

**ಭಾವವಿಲಾಸಿನೀ–** ಭಾವಾಭಾವವಿರೋಧಶ್ಚ ನಾಸ್ತಿ ಕಿಮಿತ್ಯನೇನಾಭಾವಪ್ರತಿಯೋಗಿನೋ ಜಡಸ್ಯ ಭಾವರೂಪಸ್ಯ ಪುರುಷಸ್ಯೈಕ್ಯೇಭಾವಾಭಾವವಿರೋಧೋಽಪಿ ದತ್ತಜಲಾಂಜಲಿಃ ಸ್ಯಾದಿತಿ ಸೂಚಯತಿ। ವಿರೋಧಮೇವ ದರ್ಶಯತಿ- **ಘಟೋಽಪೀತಿ** ॥ ಘಟೇಽಪ್ಯಸಂಭಾವಿತಮಿದಂ ಕಥಂ ಪರಮಾತ್ಮನ್ಯುಚ್ಯತ ಇತಿ ಭಾವಃ ॥ ೪೭೮ ॥

**ವಿವರಣೆ–** ಮುಂದೆ ಹುಟ್ಟುವ ಪದಾರ್ಥವು ಪ್ರಾಗಭಾವಪ್ರತಿಯೋಗಿ. ನಷ್ಟವಾದ ಪದಾರ್ಥವು ಪ್ರಧ್ವಂಸಾಭಾವಪ್ರತಿಯೋಗಿ. ಭಗವಂತನು ಭಾವಸ್ವರೂಪ. ಭಾವರೂಪನಾದ ಭಗವಂತನಿಂದ ಅಭಾವಗಳಿಗೆ ಅಭೇದವನ್ನು ಹೇಳಿದರೆ ಭಾವಾಭಾವಗಳಿಗೆ ವಿರೋಧವೇ ಇಲ್ಲವಾದೀತು.

ಈಗಿರುವ ಮಡಿಕೆಯು ನಷ್ಟವಾದ ಮಡಿಕೆಯಿಂದ ಅಭಿನ್ನವಲ್ಲ. ಅದರಂತೆ ಈಗಿರುವ ಭಗವಂತನು ನಷ್ಟವಾದ ಜಗತ್ತಿನಿಂದ ಹೇಗೆ ಅಭಿನ್ನನಾಗುತ್ತಾನೆ? ಅಥವಾ ಮುಂದೆ ಉತ್ಪನ್ನವಾಗುವ ಜಗತ್ತಿನಿಂದ ಹೇಗೆ ಅಭಿನ್ನನಾಗುತ್ತಾನೆ?

**ಪೂರ್ವೋಕ್ತಮರ್ಥಂ ಸರ್ವಂ ಚ ತಚ್ಛಬ್ದೋಽಯಂ ಪರಾಮೃಶೇತ್ ।**
**ಕಥಂ ವಿರುದ್ಧಯೋರೇಕಫಲಸಾಧನತಾ ವದ ॥ ೪೭೯ ॥**

**ಅರ್ಥ–** ಅಯಂ= (ಪುರುಷಸೂಕ್ತದ ಕೊನೆಯಲ್ಲಿರುವ) ಈ, ತಚ್ಛಬ್ದಃ= ತಮೇವಂ ವಿದ್ವಾನ್ ಎಂಬಲ್ಲಿರುವ 'ತತ್' ಶಬ್ದವು, ಪೂರ್ವೋಕ್ತಂ=ಹಿಂದೆ ಹೇಳಿದ, ಸರ್ವಂ=ಎಲ್ಲ, ಅರ್ಥಂ=ಅರ್ಥವನ್ನೂ, ಪರಾಮೃಶೇತ್=ಪರಾಮರ್ಶಿಸುತ್ತದೆ. ವಿರುದ್ಧಯೋಃ=ಪರಸ್ಪರ ವಿರುದ್ಧವಾದ ಜ್ಞಾನಗಳಿಗೆ, ಏಕಫಲಸಾಧನತಾ=(ಮೋಕ್ಷವೆಂಬ) ಒಂದು ಫಲಕ್ಕೆ ಸಾಧನತ್ವವು, ಕಥಂ=ಹೇಗೆ ಉಪಪನ್ನವಾದೀತು? ವದ= ಹೇಳು.

**ಅನುವಾದ–** **'ತಮೇವಂ ವಿದ್ವಾನ್ ಅಮೃತ ಇಹ ಭವತಿ' - ಈ ವಾಕ್ಯದಲ್ಲಿ ತದ್ ಶಬ್ದವು ('ತಮ್' ನ ಮೂಲ) ಹಿಂದಿನ ವಾಕ್ಯಗಳಿಂದ ಹೇಳಿದ ಎಲ್ಲ ಅರ್ಥವನ್ನೂ**

ಪರಾಮರ್ಶಿಸುತ್ತದೆ. (ಅದ್ವೈತದರ್ಶನವು ಹೇಳುವಂತೆ 'ಪುರುಷ ಏವ ಇದಂ ಸರ್ವಮ್'- ಈ ವಾಕ್ಯಕ್ಕೆ ಪುರುಷನಿಗೆ ಸರ್ವಾಭೇದವು ಅರ್ಥವಾದರೆ, ಇತರ ವಾಕ್ಯಗಳಿಗೆ ಅರ್ಥಾತ್ ಭೇದವು ಅರ್ಥವಾದರೆ) ವಿರುದ್ಧವಾದ ಭೇದ ಮತ್ತು ಅಭೇದವನ್ನು ಪರಾಮರ್ಶಿಸಿ, ಇವುಗಳ ಜ್ಞಾನ ಒಂದು ಫಲಕ್ಕೆ ಸಾಧನ ಎಂದು ಹೇಳಬೇಕು. ವಿರುದ್ಧವಾದ ಭೇದ ಅಭೇದಗಳ ಜ್ಞಾನವು ಒಂದು ಫಲಕ್ಕೆ ಹೇಗೆ ಸಾಧನವಾಗುತ್ತದೆ?

**ಭಾವವಿಲಾಸಿನೀ**– ಐಕ್ಯಾರ್ಥತ್ವೇಽನ್ಯದಪಿ ಬಾಧಕಮಾಹ –**ಪೂರ್ವೋಕ್ತಮಿತಿ** ॥ ತಚ್ಛಬ್ದಃ ತಮೇವಂ ವಿದ್ವಾನಿತ್ಯತ್ರ ಶ್ರುತಃ ತಮಿತಿ ಪೂರ್ವಪರಾಮರ್ಶಿತಚ್ಛಬ್ದಃ । ಪೂರ್ವೋಕ್ತಂ ಸಹಸ್ರಶೀರ್ಷೇತ್ಯಾದಿ ಪೂರ್ವವಾಕ್ಯೋಕ್ತಂ ಸರ್ವಂ ಪರಾಮೃಶೇದಿತಿ ಸಂಬಂಧಃ । ಸರ್ವಮಿತ್ಯನೇನ ತನ್ಮಧ್ಯಪತಿತಂ ಪುರುಷ ಏವೇದಂ ಸರ್ವಮಿತಿ ವಾಕ್ಯೋಕ್ತಮರ್ಥಮಪಿ ಸಂಗೃಹ್ಣಾತಿ । ವಿರುದ್ಧಯೋಃ ಇತರವಾಕ್ಯಾನಾಂ ಭಗವನ್ಮಹಿಮಪ್ರತಿಪಾದಕತ್ವೇನ ಭೇದಪರತ್ವಾತ್, ಅಸ್ಯ ಚ ವಾಕ್ಯಸ್ಯೈಕ್ಯಾರ್ಥತ್ವಾಂಗೀಕಾರೇ ಪರಸ್ಪರವಿರುದ್ಧಯೋರಿತ್ಯರ್ಥಃ । ಮಹಿಮಪ್ರತಿಪಾದಕವಾಕ್ಯಾನಾಂ ಬಹುತ್ವೇಽಪಿ ಜಾತಾವೇಕವಚನಮಂಗೀಕೃತ್ಯೇದಂ ದ್ವಿವಚನಮಿತಿ ದ್ರಷ್ಟವ್ಯಮ್ । ವಿದ್ವಾನಿತ್ಯತ್ರೋಕ್ತ ಜ್ಞಾನದ್ವಾರಾಽಮೃತೋ ಭವತೀತ್ಯುಕ್ತಮೋಕ್ಷಾಖ್ಯೈಕ ಫಲಸಾಧನತಾ । ಭೇದಜ್ಞಾನಸ್ಯೈಕ್ಯಜ್ಞಾನಸ್ಯ ಚ ಮಿಥೋ ವಿರುದ್ಧತ್ವೇನೈಕಫಲಸಾಧನತ್ವಾಯೋಗಾತ್ । ನಹಿ ಗ್ರಾಮಾತ್ಪರಾವೃತ್ಯಾಗಮನೇನ ತಮೇವ ಗ್ರಾಮಂ ಪ್ರತ್ಯಾಭಿಮುಖ್ಯ ಗಮನೇನ ಚೈಕಾಗ್ರಾಮಪ್ರಾಪ್ತಿರಸ್ತಿ । ನ ಚ ಜಲಪಾನಾತ್ ವಹ್ನಿಜ್ವಾಲಾಪಾನಾಚ್ಚ ತೃಷಾಪರಿಹಾರಾಖ್ಯೈಕಫಲಪ್ರಾಪ್ತಿರ್ದೃಷ್ಟಾ । ಅತಃ ಸರ್ವವಾಕ್ಯಾನಾಮಪಿ ಭೇದಪರತಾ ಯಥಾ ಭವತಿ ತಥೈವ ಯೋಜನಿಕಾ ಕರ್ತವ್ಯಾ । ನ ತು ಮಧ್ಯೇ ಏಕವಾಕ್ಯಸ್ಯೈಕ್ಯಪರತಾಪೀತಿ ಭಾವಃ ॥ ೪೭೯ ॥

**ವಿವರಣೆ**– ಪುರುಷಸೂಕ್ತದ ಕೊನೆಯಲ್ಲಿ 'ತಮೇವಂ ವಿದ್ವಾನ್ ಅಮೃತ ಇಹ ಭವತಿ' ಎಂಬ ವಾಕ್ಯದಲ್ಲಿ, ಈ ಸೂಕ್ತದಲ್ಲಿ ಹೇಳಿದ ಕ್ರಮದಲ್ಲಿ ಭಗವಂತನನ್ನು ತಿಳಿದವನು ಅಮೃತನಾಗುತ್ತಾನೆ ಎಂದು ಹೇಳಲಾಗಿದೆ.

ಈ ಮಂತ್ರದಲ್ಲಿರುವ 'ತಮ್' ನ ಮೂಲವಾದ ತದ್‌ಶಬ್ದವು ಪುರುಷಸೂಕ್ತದಲ್ಲಿ ಹೇಳಿದ ಎಲ್ಲ ಅರ್ಥವನ್ನೂ ಪರಾಮರ್ಶಿಸುತ್ತದೆ. 'ಸಹಸ್ರಶೀರ್ಷಾ ಪುರುಷಃ' ಎಂದು ಆರಂಭಿಸಿ 'ಉತಾಮೃತತ್ವಸ್ಯೇಶಾನಃ' ಎಂಬ ಮಂತ್ರದವರೆಗೆ ಭಗವಂತನು ಮುಕ್ತಾಮುಕ್ತ-ನಿಯಾಮಕನಾಗಿದ್ದಾನೆ ಎಂದು ಹೇಳಲಾಗಿದೆ. ಮಧ್ಯದಲ್ಲಿ, 'ಪುರುಷ ಏವೇದಂ ಸರ್ವಂ' ಎಂಬ ವಾಕ್ಯದಲ್ಲಿ ಅಭೇದವನ್ನು ಪ್ರತಿಪಾದಿಸಲಾಗಿದೆ ಎಂದು ಅದ್ವೈತ ಮತ. ಕೊನೆಯಲ್ಲಿರುವ 'ತಂ' ಎಂಬ ಶಬ್ದವು ಹಿಂದೆ ಹೇಳಿದ ಎಲ್ಲ ಅರ್ಥವನ್ನೂ ಸ್ವೀಕರಿಸುವುದರಿಂದ ಮೊದಲು ಹೇಳಿದ ಮತ್ತು ಕೊನೆಯಲ್ಲಿ ಹೇಳಿದ ಭಗವಂತನ ಮಹಿಮೆಗಳನ್ನು ಮಧ್ಯದಲ್ಲಿ ಹೇಳಿದ ಐಕ್ಯವನ್ನು ಅದು ಗ್ರಹಿಸುತ್ತದೆ.

ಇದರಿಂದ ಪುರುಷಸೂಕ್ತವು ಜಗತ್ ಮತ್ತು ಬ್ರಹ್ಮರ ಭೇದ-ಅಭೇದ ಎಂಬ ಪರಸ್ಪರ ವಿರುದ್ಧ ಧರ್ಮಗಳನ್ನು ಪ್ರತಿಪಾದಿಸುತ್ತಿದೆ ಎಂದಂತಾಯಿತು.

**'ತಮೇವಂ ವಿದ್ವಾನ್'**. ಎಂಬಲ್ಲಿ ಪುರುಷಸೂಕ್ತದಲ್ಲಿ ಹೇಳಿದ ಭಗವಂತನ ಜ್ಞಾನವು ಮೋಕ್ಷಸಾಧನವಾಗಿದೆ ಎಂದು ಹೇಳಿದ್ದರಿಂದ, ಭೇದಜ್ಞಾನ ಮತ್ತು ಐಕ್ಯಜ್ಞಾನಗಳು ಮೋಕ್ಷಸಾಧನವಾಗಿವೆ ಎಂದಂತಾಯಿತು. ಈ ಎರಡೂ ಜ್ಞಾನಗಳು ಪರಸ್ಪರ ವಿರುದ್ಧವಾಗಿರುವುದರಿಂದ ಮೋಕ್ಷವೆಂಬ ಒಂದು ಫಲವನ್ನು ಕುರಿತು ವಿರುದ್ಧವಾದ ಈ ಜ್ಞಾನಗಳು ಹೇಗೆ ಸಾಧನವಾದಾವು?

ಗ್ರಾಮದಿಂದ ಹೊರಟು ಬರುವುದರಿಂದ ಮತ್ತು ಗ್ರಾಮದ ಕಡೆಗೆ ಹೋಗುವುದರಿಂದ ಒಂದೇ ಸ್ಥಳವನ್ನು ತಲುಪಬಲ್ಲರೇ? ಪರಸ್ಪರವಿರುದ್ಧವಾದ ಮಾರ್ಗದಿಂದ ಹೋಗುವವರು ವಿರುದ್ಧ ಸ್ಥಳಗಳನ್ನೇ ತಲುಪುತ್ತಾರಲ್ಲವೇ?

ಜಲಪಾನದಿಂದ ಮತ್ತು ಅಗ್ನಿಜ್ವಾಲೆಯ ಪಾನದಿಂದ ಬಾಯಾರಿಕೆಯ ಪರಿಹಾರವೆಂಬ ಒಂದೇ ಫಲವು ಲಭಿಸಲು ಸಾಧ್ಯವೇ?

**ಅನಪೇಕ್ಷಿತಸಂತ್ಯಾಗಃ ಸ್ವಾಪೇಕ್ಷಿತಪರಿಗ್ರಹಃ ।**
**ಕಥಂ ಸ್ಯಾತ್ ಸೂಕ್ತಸೂತ್ರೇಽಸ್ಮಿನ್ ದೃಢಬದ್ಧಾರ್ಥಸನ್ಮಣೌ ॥ ೪೮೦ ॥**

**ಅರ್ಥ–** ದೃಢಬದ್ಧಾರ್ಥಸನ್ಮಣೌ=ಚೆನ್ನಾಗಿ ಕಟ್ಟಲ್ಪಟ್ಟ ಅರ್ಥಗಳೆಂಬ ಶ್ರೇಷ್ಠ ಮಣಿಗಳಿಂದ ಕೂಡಿದ, ಅಸ್ಮಿನ್= ಈ, ಸೂಕ್ತಸೂತ್ರೇ=ಪುರುಷಸೂಕ್ತವೆಂಬ ದಾರದಲ್ಲಿ, ಅನಪೇಕ್ಷಿತ-ಸಂತ್ಯಾಗಃ= ಅಪೇಕ್ಷಿತವಲ್ಲದ ಅರ್ಥದ ಸಂತ್ಯಾಗ ಮತ್ತು, ಸ್ವಾಪೇಕ್ಷಿತಪರಿಗ್ರಹಃ=ತನಗೆ ಬೇಕಾದ ವಾಕ್ಯಾರ್ಥದ ಸ್ವೀಕಾರವು, ಕಥಂ=ಹೇಗೆ, ಸ್ಯಾತ್=ಯುಕ್ತವಾದೀತು?

**ಅನುವಾದ–** ಪುರುಷಸೂಕ್ತವು ಒಂದು ಸೂತ್ರ. ಇದರಲ್ಲಿ ದೃಢವಾಗಿ, ಎಂದರೆ, ಪೂರ್ವಾಪರ ವಿರೋಧವಿಲ್ಲದ ಗುಣಗಳು ಪ್ರತಿಪಾದಿತವಾಗಿವೆ. ಈ ಗುಣಗಳು ಮಣಿಗಳು. ಈ ಮಣಿಗಳು ಈ ಸೂತ್ರದಲ್ಲಿ ದೃಢವಾಗಿ ಕಟ್ಟಲ್ಪಟ್ಟಿವೆ. ಇಂತಹ ಸೂಕ್ತದಲ್ಲಿ ತನಗೆ ಬೇಕಾದ ಗುಣಗಳ ಸ್ವೀಕಾರ ಮತ್ತು ಬೇಡವಾದ ಗುಣಗಳ ತ್ಯಾಗವು ಯುಕ್ತವೇ?

**ಭಾವವಿಲಾಸಿನೀ–** ನನ್ವಿತರವಾಕ್ಯಾರ್ಥಮಪರಾಮೃಶ್ಯ ಸ್ವಾಪೇಕ್ಷಿತೈಕ್ಯವಾಕ್ಯಾರ್ಥಮೇವಾಯಂ ತಚ್ಛಬ್ದಃ ಪರಾಮೃಶತೀತಿ ಮಂದಾಶಂಕಾಂ ಸಾಹಿತ್ಯಮುದ್ರಯಾ ಪರಿಹರತಿ ॥ **ಅನಪೇಕ್ಷಿತೇತಿ** ॥ ಸೂಕ್ತಸೂತ್ರೇ ಏಕಾರ್ಥಪ್ರತಿಪಾದಕತ್ವಾತ್ ಏಕಸೂಕ್ತಾತ್ಮಕೇ ಪುರುಷಸೂಕ್ತಾಖ್ಯತಂತೌ ಅಪೌರುಷೇಯತ್ವೇನಾನ್ಯಥೀಕರ್ತುಮಶಕ್ಯತಯಾ ದೃಢಂ ಬದ್ಧೋ ಯೋಽರ್ಥಃ ಸ ಏವ ಸನ್ಮಣಿಃ ತಸ್ಮಿನ್ । ಅನಪೇಕ್ಷಿತಸಂತ್ಯಾಗಃ ಸ್ವಸ್ಯಾನಪೇಕ್ಷಿತಾನಾಮಿತರವಾಕ್ಯಾರ್ಥಾನಾಂ ಸಂತ್ಯಾಗಃ

ಸ್ವಾಪೇಕ್ಷಿತಪರಿಗ್ರಹಃ ಸ್ವಾಪೇಕ್ಷಿತಸ್ಯೈಕ್ಯವಾಕ್ಯಾರ್ಥಮಾತ್ರಸ್ಯ ಪರಿಗ್ರಹಶ್ಚ ಕಥಂ ಸ್ಯಾದಿತಿ ಯೋಜನಾ । ಅಪೌರುಷೇಯವಾಕ್ಯತಯಾ ಏಕಾಂಶೇऽಪ್ಯಪ್ರಾಮಾಣ್ಯಾಸಂಭವೇನ ಕಸ್ಯಚಿದ್ಭಾಗಸ್ಯ ವ್ಯವಹಾರಿಕಾರ್ಥಪರತಾಪರಿತ್ಯಾಗಃ ಕಸ್ಯಚಿದಂಗೀಕಾರಶ್ಚ ನ ವಕ್ತುಮುಚಿತಃ । ಪರಾಮರ್ಶಸ್ಯ ಪಕ್ಷಪಾತಾಭಾವಾದಿತಿ ಭಾವಃ ॥ ೪೮೦ ॥

**ವಿವರಣೆ–** ಪ್ರಶ್ನೆ : ಪುರುಷಸೂಕ್ತದ ಆದ್ಯಂತದಲ್ಲಿ ಪ್ರತಿಪಾದಿತವಾದ ಭಗವಂತನ ಮಹಿಮೆಯು ವ್ಯಾವಹಾರಿಕ ಸತ್ಯ. ಆದ್ದರಿಂದ, 'ತಮೇವಂ ವಿದ್ವಾನ್' ಎಂಬಲ್ಲಿರುವ 'ತದ್'ಶಬ್ದವು ತನಗೆ ಅನಪೇಕ್ಷಿತವಾದ ವ್ಯಾವಹಾರಿಕ ಸತ್ಯವಾದ ಭಗವಂತನ ಮಹಿಮೆಯನ್ನು ಹೇಳುವ ವಾಕ್ಯಾರ್ಥವನ್ನು ಪರಿಗ್ರಹಿಸದೇ 'ಪುರುಷ ಏವೇದಂ' ಎಂಬ ವಾಕ್ಯದಲ್ಲಿ ಹೇಳುವ ತನಗೆ ಅಪೇಕ್ಷಿತವಾದ ಐಕ್ಯವನ್ನು ಮಾತ್ರ ಪರಿಗ್ರಹಿಸುತ್ತದೆ?

ಉತ್ತರ : ಇಲ್ಲ. ಪುರುಷಸೂಕ್ತವು ಒಂದು ರತ್ನದ ಹಾರ. ಈ ಹಾರದಲ್ಲಿ ಭಗವಂತನ ಮಹಿಮೆಗಳೆಂಬ ಅನರ್ಘ್ಯ ರತ್ನಗಳು ಪೋಣಿಸಲ್ಪಟ್ಟಿವೆ. ಸಮಗ್ರವಾದ ಪುರುಷಸೂಕ್ತವು ಅಪೌರುಷೇಯವಾದುದರಿಂದ ಪರಮಪ್ರಮಾಣ. ಇಂತಹ ರತ್ನಹಾರದಲ್ಲಿರುವ ಎಲ್ಲ ರತ್ನಗಳೂ ಅಮೂಲ್ಯವಾದುದರಿಂದ, ತನಗೆ ಬೇಕಾದ ಒಂದು ರತ್ನವನ್ನು ಮಾತ್ರ ಸ್ವೀಕರಿಸಿ ತನಗೆ ಬೇಡವಾದ ಇನ್ನೊಂದು ರತ್ನವನ್ನು ಪರಿತ್ಯಜಿಸಲು ಬರುವುದಿಲ್ಲ.

ಸ್ವೇಚ್ಛಾನುಸಾರಿವ್ಯಾಖ್ಯಾ ಚೇತ್ ಮೀಮಾಂಸಾ ಕಿಂನಿಬಂಧನಾ ।
ಸೂತ್ರಚ್ಛೇದಂ ವಿನಾ ಮಧ್ಯಮಣೇರ್ನೈವ ಹಿ ಸಂಗ್ರಹಃ ॥ ೪೮೧ ॥

**ಅರ್ಥ–** ಸ್ವೇಚ್ಛಾನುಸಾರಿವ್ಯಾಖ್ಯಾ ಚೇತ್= ತಮ್ಮ ಮನಸ್ಸಿಗೆ ಬಂದಂತೆ ವೇದವಾಕ್ಯಗಳಿಗೆ ವ್ಯಾಖ್ಯಾನವನ್ನು ಮಾಡುವುದಾದರೆ, ಮೀಮಾಂಸಾ= ವಿಮರ್ಶೆಯು, ಕಿಂ ನಿಬಂಧನಾ= ಯಾವ ಆಧಾರವುಳ್ಳದ್ದು? ಸೂತ್ರಚ್ಛೇದಂ ವಿನಾ=ತಂತುವನ್ನು ಕತ್ತರಿಸದೇ, ಮಧ್ಯಮಣೇಃ= ಮಧ್ಯದಲ್ಲಿರುವ ರತ್ನದ, ಸಂಗ್ರಹಃ=ಸ್ವೀಕಾರವು (ಪರಾಮರ್ಶವು), ನ ಏವ ಹಿ=ಸಾಧ್ಯವಾಗುವುದಿಲ್ಲವಷ್ಟೆ.

**ಅನುವಾದ–** ವೇದವಾಕ್ಯಗಳಿಗೆ ತಮ್ಮ ಇಚ್ಛೆಗೆ ಅನುಗುಣವಾಗಿ ವ್ಯಾಖ್ಯಾನವನ್ನು ಮಾಡುವುದಾದರೆ ಪೂರ್ವಾಪರ ಅವಿರೋಧವನ್ನು ಅನ್ವೇಷಿಸುವ ವಿಮರ್ಶೆ ಏಕೆ ಬೇಕು? ಸೂತ್ರವನ್ನು ಕತ್ತರಿಸದೆ ಮಧ್ಯದಲ್ಲಿರುವ ಮಣಿಯನ್ನು ತೆಗೆದುಕೊಳ್ಳಲು ಸರ್ವಥಾ ಆಗುವುದಿಲ್ಲ.

**ಭಾವವಿಲಾಸಿನೀ–** ಯುಕ್ತ್ಯಂತರಂ ಚಾಹ – **ಸ್ವೇಚ್ಛೇತಿ** ॥ ಸ್ವೇಚ್ಛಾನುಸಾರಿಣೀ ವ್ಯಾಖ್ಯಾ ಸ್ವೇಚ್ಛಾನುಸಾರಿವ್ಯಾಖ್ಯಾ । ವೇದೋಕ್ತೋऽಪ್ಯರ್ಥಃ ಕಶ್ಚಿನ್ಮಿಥ್ಯಾ ಕಶ್ಚಿತ್‌ಸತ್ಯ ಇತಿ ವಾಖ್ಯೇತಿ ಯಾವತ್ । ಮೀಮಾಂಸಾವಾಕ್ಯಾನಾಂ ಪರಸ್ಪರವಿರೋಧೇ ಸತಿ ಉಭಯೋರಪಿ ವಾಕ್ಯಯೋ-

ರವಿರುದ್ಧಾರ್ಥಕಥನೇನ ಪ್ರಾಮಾಣ್ಯರಕ್ಷಣರೂಪಾ । ಕಿಂ ನಿಬಂಧನಾ ವ್ಯರ್ಥೇತ್ಯರ್ಥಃ । ಅನಪೇಕ್ಷಿತವಾಕ್ಯಾನಾಂ ಮಿಥ್ಯಾಭೂತಾರ್ಥಕತ್ವೇನಾಪ್ರಾಮಾಣ್ಯಂ ವಕ್ತುಂ ಶಕ್ಯಂ ಚೇತ್ ಕಿಮರ್ಥಮಿಯಂ ಮೀಮಾಂಸೇತಿ ಭಾವಃ। ಪ್ರಾಗುಕ್ತಸಾಹಿತ್ಯಮುದ್ರಯಾ ಲಬ್ಧಮರ್ಥಮಾಹ – **ಸೂತ್ರಚ್ಛೇದಮಿತಿ** ॥ ಮಧ್ಯಮಣೇ ರ್ಮಾಲಾಮಧ್ಯಸ್ಥಿತರತ್ನಸ್ಯ ಸಂಗ್ರಹಃ ಮಾಲಾತಃ ಪೃಥಕ್ಕೃತ್ಯ ಸ್ವೀಕಾರಃ । ಏವಂ ಸೂತ್ರಸ್ಯಾಪ್ರಾಮಾಣ್ಯಾಖ್ಯಚ್ಛೇದಂ ವಿನಾ ಪೂರ್ವೋತ್ತರವಾಕ್ಯೋಕ್ತ-ಮಹಿಮ್ನಾಂ ಪರಿತ್ಯಾಗೇನ ಮಧ್ಯವಾಕ್ಯೋಕ್ತ್ಯೈಕ್ಯಪರಾಮರ್ಶೋಽಪ್ಯಶಕ್ಯ ಇತಿ ಭಾವಃ ॥೪೮೧॥

**ವಿವರಣೆ–** ಪರಸ್ಪರ ವಿರೋಧವಿಲ್ಲದ ಅರ್ಥದ ಅನ್ವೇಷಣೆಯೇ ಮೀಮಾಂಸಾ. ವಿರುದ್ಧ ಅರ್ಥವನ್ನು ಹೇಳಿ, ಅನಂತರ ಒಂದು ವಿಧದ ಅರ್ಥವನ್ನು ತ್ಯಜಿಸುವುದಾದರೆ ಮೀಮಾಂಸೆಯೇ ಬೇಕಿಲ್ಲ.

ಅದೂ ಅಲ್ಲದೇ, 'ತಮೇವಂ ವಿದ್ವಾನ್' ಎಂಬಲ್ಲಿರುವ 'ತದ್' ಶಬ್ದವು ಪುರುಷಸೂಕ್ತವೆಂಬ ರತ್ನಹಾರದ ಮಧ್ಯದಲ್ಲಿರುವ 'ಪುರುಷ ಏವೇದಂ ಸರ್ವಂ' ವಾಕ್ಯದ ಅರ್ಥವನ್ನು ಮಾತ್ರ ಪರಾಮರ್ಶಿಸುತ್ತದೆ ಎನ್ನಲು ಬರುವುದಿಲ್ಲ. ಏಕೆಂದರೆ, ಅನೇಕ ರತ್ನಗಳಿಂದ ಕೂಡಿದ ರತ್ನಹಾರದಲ್ಲಿ ಮಧ್ಯ ರತ್ನವನ್ನು ಬೇರ್ಪಡಿಸಬೇಕಾದರೆ ರತ್ನಹಾರವನ್ನು ತುಂಡು ಮಾಡಬೇಕು. ಅದರಂತೆ, ಪುರುಷಸೂಕ್ತವೆಂಬ ರತ್ನಹಾರದಲ್ಲಿರವ 'ಪುರುಷ ಏವೇದಂ' ಎಂಬ ಮಧ್ಯ ಮಣಿಯನ್ನು ಮಾತ್ರ ತೆಗೆಯಬೇಕಾದರೆ, ರತ್ನಹಾರದ ಚ್ಛೇದವನ್ನು ಮಾಡಲೇಬೇಕು. ಹಾಗೆ ಮಾಡಿದರೆ, ಪುರುಷಸೂಕ್ತವು ಅಪ್ರಮಾಣವಾದೀತು.

**ಛಿನ್ನೇ ಸೂತ್ರೇ ತ್ವನಾಲಂಬಃ ಪರಾಮರ್ಶೋಽಪ್ಯಯಂ ಪತೇತ್ ।**
**ಅತೋ ಜ್ಞಾನೈಕಸಾಧ್ಯೋಽರ್ಥೋ ನ ಸ್ಯಾತ್ ತೇ ಸ್ಯಾತ್ತಮೋಽಂತತಃ**
**॥ ೪೮೨ ॥**

**ಅರ್ಥ–** ಸೂತ್ರೇ=ಪುರುಷಸೂಕ್ತವೆಂಬ ಸೂತ್ರವು, ಛಿನ್ನೇ= ಕತ್ತರಿಸಲ್ಪಟ್ಟಾಗ, ಅಯಂ=ಈ, ಪರಾಮರ್ಶೋಽಪಿ='ತಮೇವಂ ವಿದ್ವಾನ್' ಎಂಬ ಪರಾಮರ್ಶ ವಾಕ್ಯವೂ ಕೂಡ, ಅನಾಲಂಬಃ ಸನ್=ಆಶ್ರಯರಹಿತವಾಗಿ, ಪತೇತ್=ಬಿದ್ದು ಹೋದೀತು. ಅತಃ=ಪರಾಮರ್ಶ ವಾಕ್ಯವು ಅಪ್ರಮಾಣವಾಗುವುದರಿಂದ, ತೇ=ನಿನಗೆ, ಜ್ಞಾನೈಕಸಾಧ್ಯೋಽರ್ಥಃ=ಕೇವಲ ಜ್ಞಾನದಿಂದ ಸಾಧ್ಯವಾದ ಮೋಕ್ಷರೂಪ ಪ್ರಯೋಜನವು, ನ ಸ್ಯಾತ್=ಆಗಲಾರದು. ತೇ=ನಿನಗೆ, ಅಂತತಃ=ಕೊನೆಯಲ್ಲಿ, ತಮಃ=ಅಂಧಂತಮಸ್ಸೇ, ಸ್ಯಾತ್=ಉಂಟಾದೀತು.

**ಅನುವಾದ– ಸೂತ್ರವು ತುಂಡಾದರೆ 'ತಮೇವಂ ವಿದ್ವಾನ್....' ಈ ವಾಕ್ಯಕ್ಕೆ ಆಧಾರವೇ ಇರುವುದಿಲ್ಲ. ಆದ್ದರಿಂದ ಪರಾಮರ್ಶವೇ ಇರುವುದಿಲ್ಲ. ಆದ್ದರಿಂದ ಕೇವಲ ಜ್ಞಾನದಿಂದ ಸಾಧಿಸಲ್ಪಡಬೇಕಾದ ಮೋಕ್ಷವು ನಿನಗೆ ಇಲ್ಲವಾಗುತ್ತದೆ. ಕೊನೆಗೆ ನಿನಗೆ ತಮಸ್ಸೇ ಆಗುತ್ತದೆ.**

**ಭಾವವಿಲಾಸಿನೀ–** ಅಸ್ತು ತರ್ಹಿ ಸೂತ್ರಾಪ್ರಾಮಾಣ್ಯಮಿತ್ಯತ ಆಹ – ಛಿನ್ನ ಇತಿ ॥ ಸೂತ್ರೇ ಸೂಕ್ತಾಖ್ಯಸೂತ್ರೇ ಛಿನ್ನೇ ಅಪ್ರಾಮಾಣ್ಯೇನ ವಿನಾಶಿತೇ ಅನಾಲಂಬಃ ತಮೇವಂ ವಿದ್ವಾನಿತಿ ಸೂಕ್ತಮಧ್ಯಪತಿತಪರಾಮರ್ಶವಾಕ್ಯಸ್ಯಾಪ್ಯಪ್ರಾಮಾಣ್ಯಪ್ರಸಂಗೇನ । ಮೂಲೀಭೂತಸ್ವಪ್ರತಿ-ಪಾದಕಪ್ರಮಾಣಶೂನ್ಯ ಇತ್ಯರ್ಥಃ । ಪತೇತ್ ಗಚ್ಛೇತ್ । ಸೂಕ್ತಸ್ಯಾಪ್ರಾಮಾಣ್ಯೇ ಪರಾಮರ್ಶ-ವಾಕ್ಯಸ್ಯಾಪ್ಯಪ್ರಾಮಾಣ್ಯಪ್ರಸಂಗೇನ ಭವದಭಿಲಷಿತೈಕ್ಯಪರಾಮರ್ಶೋऽಪಿ ನ ಸ್ಯಾತ್ । ಉಪಲಕ್ಷಣಂ ಚೈತತ್ । ಅಪ್ರಮಾಣವಾಕ್ಯಮಧ್ಯಪತಿತಭವದಭಿಮತೈಕ್ಯ ವಾಕ್ಯಸ್ಯಾಪ್ಯ-ಪ್ರಾಮಾಣ್ಯಾಪರಿಹಾರೇಣೈಕ್ಯಮಪಿ ನ ಸಿದ್ಧ್ಯೇದಿತಿ ಭಾವಃ । ಅಸ್ತು ಪರಾಮರ್ಶಪತನಂ ಕಾ ನೋ ಹ್ಯನಿರಿತ್ಯತ ಆಹ – ಅತ ಇತಿ ॥ ಅತಃ ತಮೇವಂ ವಿದ್ವಾನಿತಿ ಪರಾಮರ್ಶವಾಕ್ಯ-ಸ್ಯಾಪ್ರಾಮಾಣ್ಯೇನ ನಾಶಿತತ್ವಾತ್ ತೇ ತವ, ಜ್ಞಾನೈಕಸಾಧ್ಯೋऽರ್ಥಃ ಮೋಕ್ಷಃ ನ ಸ್ಯಾತ್ । ಜ್ಞಾನೇನ ಮೋಕ್ಷಂ ಪ್ರಾಪ್ಸ್ಯಾಮೀತಿ ಹಿ ತವಾಶಯಃ ತನ್ನ ಸ್ಯಾತ್ । ಮೋಕ್ಷಸ್ಯ ಜ್ಞಾನಸಾಧ್ಯತ್ವೇ ಪ್ರಮಾಣಾಭಾವಾತ್ । ತತಶ್ಚಾಂತತಸ್ತೇ ಇತ್ಥಂ ವೇದಾಪ್ರಾಮಾಣ್ಯವಾದಿನಸ್ತವ ತಮ ಏವ ಸ್ಯಾದಿತ್ಯರ್ಥಃ ॥ ೪೮೨ ॥

**ವಿವರಣೆ–** ಪುರುಷಸೂಕ್ತವೆಂಬ ರತ್ನಹಾರವು ತುಂಡಾಗಲಿ, ಅಂದರೆ ಅದು ಅಪ್ರಮಾಣವಾಗಲಿ ಎಂದು ಹೇಳಲು ಬರುವುದಿಲ್ಲ. ಏಕೆಂದರೆ, ಹಾರವನ್ನೇ ಕತ್ತರಿಸಿದಾಗ ಆ ಹಾರದಲ್ಲಿರುವ ಎಲ್ಲ ರತ್ನಗಳೂ ಕೆಳಗೆ ಬೀಳುವಂತೆ, ಪುರುಷಸೂಕ್ತವೆಂಬ ರತ್ನದ ಹಾರವು ತುಂಡಾದಾಗ ಆ ಹಾರವನ್ನೇ ಆಶ್ರಯಿಸಿ ನಿಂತಿರುವ 'ತಮೇವಂ ವಿದ್ವಾನ್' ಎಂಬ ಪರಾಮರ್ಶ ವಾಕ್ಯವು ಕೆಳಗೆ ಬೀಳುತ್ತದೆ. ಅಂದರೆ, ಪುರುಷಸೂಕ್ತವು ಅಪ್ರಮಾಣವಾದರೆ ಆ ಸೂಕ್ತದ ಕೊನೆಯಲ್ಲಿರುವ ಪರಾಮರ್ಶ ವಾಕ್ಯವೂ ಅಪ್ರಮಾಣವಾಗುತ್ತದೆ. ಆಗ ಆ ವಾಕ್ಯದಿಂದ ಐಕ್ಯಪರಾಮರ್ಶವು ಕೂಡುವುದಿಲ್ಲ. ಇದೇ ಸೂಕ್ತದ ಮಧ್ಯದಲ್ಲಿರುವ ಆ 'ಪುರುಷ ಏವೇದಂ ಸರ್ವಂ' ಎಂಬ ವಾಕ್ಯರತ್ನವೂ ಬಿದ್ದು ಹೋಗುತ್ತದೆ. ಅಂದರೆ, ಈ ವಾಕ್ಯವೂ ಅಪ್ರಮಾಣವಾಗುತ್ತದೆ. ಐಕ್ಯವು ಸಿದ್ಧಿಸುವುದಿಲ್ಲ.

ಆಗಲಿ, ಪರಾಮರ್ಶ ವಾಕ್ಯವೂ ನಾಶವಾಗಲಿ. ಆ ವಾಕ್ಯಕ್ಕೆ ಅಪ್ರಾಮಾಣ್ಯವು ಬರಲಿ. ನನಗೇನು ನಷ್ಟ? ಎಂದರೆ, 'ತಮೇವಂ ವಿದ್ವಾನ್' ಎಂಬ ಪರಾಮರ್ಶ ವಾಕ್ಯವು ಅಪ್ರಮಾಣವಾದರೆ, ಮೋಕ್ಷವು ಜ್ಞಾನಸಾಧ್ಯ ಎಂಬ ವಿಷಯದಲ್ಲಿ ಪ್ರಮಾಣವೇ ಇಲ್ಲದಂತಾಗಿ, ಜ್ಞಾನದಿಂದ ಮೋಕ್ಷವನ್ನು ಪಡೆಯುತ್ತೇನೆ ಎಂಬ ನಿನ್ನ ಇಚ್ಛೆಯು ಸಿದ್ಧಿಸಲಾರದು.

ವೇದಾಪ್ರಾಮಾಣ್ಯವನ್ನು ಹೇಳುವ ನಿನಗೆ ಮೋಕ್ಷವಿಲ್ಲದೇ ಕೊನೆಗೆ ಅಂಧಂತಮಸ್ಸೇ ಪ್ರಾಪ್ತವಾದೀತು.

**ತಸ್ಮಾನ್ಮೀಮಾಂಸಕೈರಾರ್ಯೈಃ ಉಕ್ತ ಏವಾರ್ಥ ಇಷ್ಯತೇ ।**
**ಅನ್ಯೋ ಹ್ಯನರ್ಥಃ ಶ್ರೋತುರ್ವಾ ವಕ್ತುರ್ವಾ ನ ಮನೋಹರಃ ॥ ೪೮೩ ॥**

**ಅರ್ಥ–** ತಸ್ಮಾತ್=ಆದ್ದರಿಂದ, ಮೀಮಾಂಸಕೈಃ= ವಿಮರ್ಶಕರಾದ, ಆರ್ಯೈಃ= ಜ್ಞಾನಿಗಳಿಂದ, ಉಕ್ತಃ= ಹೇಳಲ್ಪಟ್ಟ, ಅರ್ಥ ಏವ= ಅರ್ಥವೇ, ಇಷ್ಯತೇ=ಎಲ್ಲರಿಂದಲೂ ಸ್ವೀಕರಿಸಲ್ಪಡುತ್ತದೆ. ಅನ್ಯಃ=ಎಲ್ಲ ಪ್ರಪಂಚವೂ ಬ್ರಹ್ಮಸ್ವರೂಪವಾಗಿದೆ ಎಂಬ ಅರ್ಥವು, ಅನರ್ಥಃ ಹಿ=ಅನರ್ಥಸಂಪಾದಕವಾಗಿದೆ. ವಕ್ತುಃ ವಾ=ಹೇಳುವವನಿಗಾಗಲೀ, ಶ್ರೋತುಃ ವಾ=ಕೇಳುವವನಿಗಾಗಲೀ, ನ ಮನೋಹರಃ=ಮನೋಹರವಲ್ಲ.

**ಅನುವಾದ–** 'ಪುರುಷ ಏವೇದಂ ಸರ್ವಂ' ಎಂಬ ವಾಕ್ಯಕ್ಕೆ ಮಾಯಾವಾದಿಗಳು ಹೇಳುವ ಅರ್ಥವು ಅನರ್ಥಕರವಾದುದರಿಂದ, ವಿಮರ್ಶಕರಾದ ಜ್ಞಾನಿಗಳು ಹೇಳುವ, ಸರ್ವವೂ ಭಗವದಧೀನ ಎಂಬ ಅರ್ಥವನ್ನೇ ಎಲ್ಲರೂ ಸ್ವೀಕರಿಸುತ್ತಾರೆ. ಇನ್ನೊಂದು ಅರ್ಥವು ಅರ್ಥವಲ್ಲ. ಕೇಳುವವರಿಗಾಗಲಿ, ಹೇಳುವವರಿಗಾಗಲಿ ಮನೋಹರವಲ್ಲ.

**ಭಾವವಿಲಾಸಿನೀ–** ತಸ್ಮಾತ್ಪರೋದೀರಿತಾರ್ಥಸ್ಯ ಬಹುಧಾ ವಿರುದ್ಧತ್ವಾತ್ । ಉಕ್ತೋಽರ್ಥಃ ಸರ್ವಸ್ಯ ಭಗವದಧೀನತ್ವರೂಪಾರ್ಥಃ । ಅನ್ಯಃ ಸರ್ವಸ್ಯ ಬ್ರಹ್ಮಾತ್ಮಕತ್ವರೂಪಃ । ಅನರ್ಥಃ ಶ್ರುತ್ಯಪ್ರಮಾಣ್ಯಾದ್ಯನರ್ಥಸಂಪಾದಕಃ ॥ ೪೮೩ ॥

**ವಿವರಣೆ–** ಅದ್ವೈತಿಗಳು ಹೇಳುವ ಅಭೇದಾರ್ಥವು ವೇದಕ್ಕೆ ಅಪ್ರಾಮಾಣ್ಯವನ್ನು ತಂದುಕೊಡುವುದರಿಂದ ಆ ಅರ್ಥವು ಅನರ್ಥಕರವಾಗಿದೆ. ಅಷ್ಟೇ ಅಲ್ಲದೇ, ಆ ಅರ್ಥವನ್ನು ಹೇಳುವವರಿಗೆ ನರಕಾದಿ ಅನರ್ಥಗಳೂ ಉಂಟಾಗುತ್ತದೆ. ಆದ್ದರಿಂದಲೇ, ಅವರು ಹೇಳುವ ಅರ್ಥವು ಹೇಳುವವರಿಗಾಗಲೀ ಕೇಳುವವರಿಗಾಗಲೀ ಮನೋಹರವಲ್ಲ.

(ಪುರುಷ ಏವ ಇದಂ ಸರ್ವಂ ಎಂಬ ಶ್ರುತಿವಾಕ್ಯಕ್ಕೆ ಭೇದವಾದಿಗಳು ಮಾಡುವ ಅರ್ಥವು ಪ್ರಾಮಾಣಿಕವಾದುದು ಎಂದು ಸಮರ್ಥಿಸುತ್ತಾ)-

ವ್ಯತ್ಯಾಸಶ್ಚ ವಿಭಕ್ತೀನಾಂ ವೇದವ್ಯಾಸಸ್ಯ ಸಮ್ಮತಃ ।
ಅನ್ನೇನೇತಿ ತೃತೀಯಾಂ ಯೋ ದ್ವಿತೀಯಾರ್ಥೇಽನ್ವಶಿಕ್ಷತ ॥ ೪೮೪ ॥

**ಅರ್ಥ–** ಯಃ = ಯಾರು, ಅನ್ನೇನ ಇತಿ = ಯದನ್ನೇನಾತಿರೋಹತಿ ಎಂಬಲ್ಲಿ ಅನ್ನೇನ ಪದದಲ್ಲಿರುವ, ತೃತೀಯಾಂ = ತೃತೀಯಾವಿಭಕ್ತಿಪ್ರತ್ಯಯವನ್ನು, ದ್ವಿತೀಯಾರ್ಥೇ = ದ್ವಿತೀಯಾವಿಭಕ್ತ್ಯರ್ಥದಲ್ಲಿ ಅನ್ವಶಿಕ್ಷತ = ಬೋಧಿಸಿದ್ದಾರೆಯೋ, ತಸ್ಯ = ಆ, ವೇದವ್ಯಾಸಸ್ಯ = ವೇದವ್ಯಾಸರಿಗೆ, ವಿಭಕ್ತೀನಾಂ = ವಿಭಕ್ತಿಗಳ, ವ್ಯತ್ಯಾಸಃ = ವ್ಯತ್ಯಾಸವು, ಸಮ್ಮತಃ ಚ =ಸಮ್ಮತವೇ ಆಗಿದೆ.

**ಅನುವಾದ–** 'ಅನ್ನೇನ' - ಈ ಪದದಲ್ಲಿರುವ ತೃತೀಯಾ ವಿಭಕ್ತಿಯನ್ನು ದ್ವಿತೀಯಾ ವಿಭಕ್ತಿಯ ಅರ್ಥದಲ್ಲಿ ಯಾರು ಬೋಧಿಸಿದರೋ ಆ ವೇದವ್ಯಾಸರಿಗೆ ವಿಭಕ್ತಿಗಳ ವ್ಯತ್ಯಾಸವು ಸಮ್ಮತ.

**ಭಾವವಿಲಾಸಿನೀ–** ಪುರುಷ ಏವೇದಂ ಸರ್ವಮಿತಿ ವಾಕ್ಯಸ್ಯ ಪ್ರಕಾರಾಂತರೇಣಾಪ್ಯರ್ಥಂ ವಕ್ತುಂ ಪೀಠಿಕಾಮಾರಚಯತಿ – **ವ್ಯತ್ಯಾಸ ಇತಿ** ॥ ಯಃ ವ್ಯಾಸಃ ಯದನ್ನೇನಾತಿರೋಹತೀತ್ಯತ್ರ ವಿದ್ಯಮಾನಾಮನ್ನೇನೇತಿ ತೃತೀಯಾಂ ದ್ವಿತೀಯಾವಿಭಕ್ತ್ಯರ್ಥೇ ಮರ್ತ್ಯಮನ್ನಂ ಯದತ್ಯಗಾದಿತಿ ಭಾಗವತವಾಕ್ಯೇನೈತದ್ವಾಕ್ಯವ್ಯಾಖ್ಯಾನರೂಪೇಣ ಅನ್ವಶಿಕ್ಷತ ತಸ್ಯ ವ್ಯಾಸಸ್ಯೇತಿ ಸಂಬಂಧಃ । ವಿಭಕ್ತೀನಾಂ ವ್ಯತ್ಯಾಸಃ ಏಕವಿಭಕ್ತೌ ವಿಭಕ್ತ್ಯಂತರಮಿತ್ಯರ್ಥಃ । ಅನ್ನೇನೇತಿ ತೃತೀಯಾಯಾ ಅನ್ನಮಿತಿ ದ್ವಿತೀಯಾವಿಭಕ್ತ್ಯರ್ಥತ್ವಕಥನೇನಾರ್ಥಾನುಪಪತ್ತೌ ವೇದೇ ವಿಭಕ್ತಿವ್ಯತ್ಯಾಸೋಽಪಿ ವ್ಯಾಸಸ್ಯ ಸಂಮತ ಇತಿ ಭಾವಃ । ವ್ಯಾಸಸ್ಯೇತ್ಯುಪಲಕ್ಷಣಮ್ । ಸುಪಾಂ ಸುಲುಗಿತ್ಯಾದಿ ವಚನಾತ್ ಪಾಣಿನ್ಯಾದೀನಾಮಪೀತಿ ದ್ರಷ್ಟವ್ಯಮ್ ॥ ೪೮೪ ॥

**ವಿವರಣೆ–** ಪುರುಷಏವೇದಂ ಸರ್ವಂ ಎಂಬ ವಾಕ್ಯಕ್ಕೆ ಇನ್ನೊಂದು ರೀತಿಯಿಂದ ಅರ್ಥವನ್ನು ಹೇಳಲು ಪೀಠಿಕೆಯನ್ನು ರಚಿಸುತ್ತಾರೆ- ಯದನ್ನೇನಾತಿರೋಹತಿ ಎಂಬ ವೇದವಾಕ್ಯಕ್ಕೆ ವ್ಯಾಖ್ಯಾನರೂಪವಾದ 'ಮರ್ತ್ಯಮನ್ನಂ ಯದತ್ಯಗಾತ್' ಎಂಬ ಭಾಗವತವಾಕ್ಯ(2.6.17)ದಲ್ಲಿ ವೇದವ್ಯಾಸರು ವೇದದಲ್ಲಿರುವ ಅನ್ನೇನ ಎಂಬ ಪದದ ತೃತೀಯಾ ವಿಭಕ್ತಿಯು ದ್ವಿತೀಯಾವಿಭಕ್ತ್ಯರ್ಥದಲ್ಲಿ ಪ್ರಯೋಗಿಸಲ್ಪಟ್ಟಿದೆ ಎಂದು ತಿಳಿಸಿಕೊಡುವ ಮೂಲಕ ಅರ್ಥಸಾಮಂಜಸ್ಯಕ್ಕಾಗಿ ವೇದದಲ್ಲಿ ವಿಭಕ್ತಿವ್ಯತ್ಯಾಸವನ್ನು ಮಾಡುವುದು ತಮಗೆ ಸಮ್ಮತ ಎಂದು ತಿಳಿಸಿದ್ದಾರೆ.

ಸುಪಾಂ ಸುಲುಕ್ ಪೂರ್ವಸವರ್ಣಾಚ್ಛೆಯಾಡಾಡ್ಯಾಯಾ ಜಾಲಃ- 7.1.39 ಎಂಬ ಸೂತ್ರದಲ್ಲಿ ಒಂದು ವಿಭಕ್ತ್ಯರ್ಥದಲ್ಲಿ ಇನ್ನೊಂದು ವಿಭಕ್ತಿಯ ಪ್ರಯೋಗವನ್ನು ಪಾಣಿನಿಯೂ ವಿಧಿಸಿದ್ದಾನೆ.

**ಅತಃ ಪುರುಷ ಏವೇತಿ ಪ್ರಥಮಾ ಪಂಚಮೀ ಯದಾ ।**
**ಸದಾ ಸರ್ವನಿಮಿತ್ತತ್ವಮಹಿಮಾ ಪುಂಸಿ ವರ್ಣ್ಯತೇ ॥ ೪೮೫ ॥**

**ಅರ್ಥ–** ಅತಃ = ಆದ್ದರಿಂದ (ವೈದಿಕಶಬ್ದಗಳಲ್ಲಿ ವಿಭಕ್ತಿವ್ಯತ್ಯಾಸವು ವೇದವ್ಯಾಸರಿಗೆ ಸಮ್ಮತವಾದ್ದರಿಂದ), ಪುರುಷ ಏವ ಇತಿ = ಪುರುಷ ಏವ ಎಂದು, ಪ್ರಥಮಾ = ಪ್ರಥಮಾ ವಿಭಕ್ತಿಯು, ಯದಾ = ಯಾವಾಗ, ಪಂಚಮೀ = ಪಂಚಮ್ಯರ್ಥದಲ್ಲಿರುವುದೋ, (ತದಾ = ಆಗ) ಪುಂಸಿ = ಪುರುಷನಲ್ಲಿ, ಸದಾ = ಯಾವಾಗಲೂ, ಸರ್ವನಿಮಿತ್ತತ್ವಮಹಿಮಾ = ಎಲ್ಲ ಪದಾರ್ಥಗಳ ಉತ್ಪತ್ತಿಗೆ ನಿಮಿತ್ತತ್ವ ಎಂಬ ಮಹಿಮೆಯು, ವರ್ಣ್ಯತೇ = ವರ್ಣಿಸಲ್ಪಡುತ್ತದೆ.

**ಅನುವಾದ–** ವೈದಿಕಶಬ್ದಗಳಲ್ಲಿ ಒಂದು ವಿಭಕ್ತ್ಯರ್ಥದಲ್ಲಿ ಇನ್ನೊಂದು ವಿಭಕ್ತಿಯ ಪ್ರಯೋಗವು ಸಾಧುವಾದ್ದರಿಂದ, 'ಪುರುಷ ಏವ ಇದಂ ಸರ್ವಮ್' ಎಂಬಲ್ಲಿ ಪುರುಷಃ ಎಂಬಲ್ಲಿನ ಪ್ರಥಮಾ ವಿಭಕ್ತಿಯು ಪಂಚಮ್ಯರ್ಥದಲ್ಲಿ ಪ್ರಯೋಗಿಸಲ್ಪಟ್ಟಿದೆ.

ಆದ್ದರಿಂದ 'ಸರ್ವನಿಮಿತ್ತಕಾರಣತ್ವ' ಎಂಬ ಮಹಿಮೆಯು ಪುರುಷನಲ್ಲಿ ವರ್ಣಿಸಲ್ಪಡುತ್ತದೆ.

**ಭಾವವಿಲಾಸಿನೀ–** ಪೀಠಿಕಾರಚನಯಾ ಲಬ್ಧಮರ್ಥಮಾಹ – **ಅತ ಇತಿ** ॥ ಅತಃ ವೇದೇ ವಿಭಕ್ತಿವ್ಯತ್ಯಾಸಸ್ಯಾಪಿ ಪ್ರಾಮಾಣಿಕತ್ವಾತ್ । ಪಂಚಮೀ ಪುರುಷಾದಿತಿ ನಿಮಿತ್ತಪಂಚಮೀ-ವಿಭಕ್ತ್ಯರ್ಥಭೂತಾ ॥ ೪೮೫ ॥

**ಯದಾ ತು ಸಪ್ತಮೀ ಸರ್ವಾಧಾರತ್ವಂ ವರ್ಣಯೇತ್ತದಾ ॥ ೪೮೬ ॥**

**ಅರ್ಥ–** ಯದಾ ತು = ಯಾವಾಗ, ಸಪ್ತಮೀ = ಸಪ್ತಮೀ ವಿಭಕ್ತಿಯೋ, ತದಾ= ಆಗ, ಸರ್ವಧಾರತ್ವಂ= ಸರ್ವ ಜಗತ್ತಿಗೆ ಆಧಾರತ್ವವನ್ನು, ವರ್ಣಯೇತ್= ವರ್ಣಿಸುತ್ತದೆ.

**ಅನುವಾದ–** 'ಪುರುಷ ಏವ' ಎಂಬಲ್ಲಿ ಪ್ರಥಮಾ ವಿಭಕ್ತಿಯನ್ನು ಸಪ್ತಮ್ಯರ್ಥದಲ್ಲಿ ಪರಿಗಣಿಸಿದಾಗ 'ಇದಂ ಸರ್ವಂ ಪುರುಷೇ ಏವ' – ಈ ಜಗತ್ತೆಲ್ಲವೂ ಪುರುಷನನ್ನೇ ಆಶ್ರಯಿಸಿಕೊಂಡಿದೆ ಎಂದು ಅರ್ಥ. ಆಗ ಪರಮಾತ್ಮನ ಸರ್ವಾಧಾರತ್ವ ಎಂಬ ಮಹಿಮೆಯನ್ನು ಈ ಮಂತ್ರವು ವರ್ಣಿಸುತ್ತದೆ.

**ಭಾವವಿಲಾಸಿನೀ–** ಸಪ್ತಮೀ ಪುರುಷೇ ಇತ್ಯಾಧಾರಸಪ್ತಮೀವಿಭಕ್ತ್ಯರ್ಥಭೂತಾ ॥ ೪೮೬ ॥

**ಸೂಕ್ತಸ್ಯೈಕಾರ್ಥತಾ ಚೈವಂ ಸತ್ಯೇವ ಸ್ಯಾನ್ನಚಾನ್ಯಥಾ ।**
**ಯತಃ ಸರ್ವಜಗತ್ಕರ್ತಾ ಪುರುಷಃ ಸೋಽತ್ರ ಕೀರ್ತ್ಯತೇ ॥ ೪೮೭ ॥**

**ಅರ್ಥ–** ಸೂಕ್ತಸ್ಯ= ಸೂಕ್ತಕ್ಕೆ, ಏವಂ ಸತಿ ಏವ= ವಿಭಕ್ತಿ ವ್ಯತ್ಯಾಸದಿಂದ ಅರ್ಥವನ್ನು ಹೇಳಿದರೆ ಮಾತ್ರ, ಏಕಾರ್ಥತಾ= ಪೂರ್ವೋತ್ತರ ವಾಕ್ಯಗಳ ಅರ್ಥಕ್ಕೆ ಅವಿರುದ್ಧವಾದ ಅರ್ಥವು, ಸ್ಯಾತ್= ಆಗುವುದು. ಅನ್ಯಥಾ= ಇಲ್ಲದಿದ್ದರೆ, ನ= ಇಲ್ಲ, ಯತಃ= ಏಕೆಂದರೆ, ಅತ್ರ= 'ಪುರುಷ ಏವ ಇದಂ ಸರ್ವಮ್' ಎಂಬ ವಾಕ್ಯದಲ್ಲಿ, ಸಃ ಪುರುಷಃ= ಆ ಪುರುಷನು, ಸರ್ವಜಗತ್ಕರ್ತಾ= ಸರ್ವಜಗತ್ತಿನ ಕರ್ತಾ ಎಂದು, ಕೀರ್ತ್ಯತೇ= ವರ್ಣಿಸಲ್ಪಡುತ್ತಾನೆ.

**ಅನುವಾದ–** ವಿಭಕ್ತಿ ವ್ಯತ್ಯಾಸದಿಂದ ಅರ್ಥವನ್ನು ಹೇಳಿದರೆ ಮಾತ್ರ ಪುರುಷಸೂಕ್ತಕ್ಕೆ ಪೂರ್ವ ಮತ್ತೂ ಉತ್ತರ ವಾಕ್ಯಗಳ ವಿರೋಧವಿಲ್ಲದ ಸುಸಂಗತವಾದ ಅರ್ಥವು ಲಭಿಸುತ್ತದೆ. ಇಲ್ಲದಿದ್ದರೆ ಇಲ್ಲ. ಏಕೆಂದರೆ 'ಪುರುಷ ಏವೇದಂ ಸರ್ವಮ್' ಎಂಬ ವಾಕ್ಯದಲ್ಲಿ ಆ ಪುರುಷನು ಸರ್ವಜಗತ್ಕರ್ತೃ ಎಂದು ಸ್ತುತಿಸಲ್ಪಡುತ್ತಾನೆ.

**ಭಾವವಿಲಾಸಿನೀ–** ಆಪಾತಪ್ರತೀತಪರಕೀಯಾರ್ಥೇ ಬಾಧಕಾಂತರಂ ಚ ಸೂಚಯನ್ನುಕ್ತರೀತ್ಯಾ ವಿಭಕ್ತಿವ್ಯತ್ಯಾಸೇನಾರ್ಥಕಥನಮೇವ ನ್ಯಾಯ್ಯಮಿತ್ಯಾಹ – **ಸೂಕ್ತಸ್ಯೇತಿ** ॥ ಏವಂ ಸತ್ಯೇವ ವಿಭಕ್ತಿ-ವ್ಯತ್ಯಾಸೇನಾರ್ಥಕಥನೇ ಸತ್ಯೇವ ಏಕಾರ್ಥತಾ ಪೂರ್ವೋತ್ತರಾವಿರುದ್ಧೈಕಪ್ರಕಾರಾರ್ಥತಾ ।

ಪೂರ್ವೋತ್ತರವಾಕ್ಯೋಕ್ತಮಹಿಮವತ್ ಅಸ್ಮಿನ್ನಪಿ ವಾಕ್ಯೇ ಸರ್ವಕರ್ತೃತ್ವಸರ್ವಾಧಾರತ್ವಾದಿ-ಮಹಿಮಲಾಭಾದಿತ್ಯರ್ಥಃ । ಅನ್ಯಥಾ ವಿಭಕ್ತಿವ್ಯತ್ಯಾಸಂ ವಿನಾಽಽಪಾತಪ್ರತೀತಾರ್ಥಕಥನೇ । ತಥಾ ಚ ಪರಕೀಯಾರ್ಥೇ ವಾಕ್ಯಭೇದೋಽಪಿ ದೋಷ ಇತಿ ಭಾವಃ । ಏಕಾರ್ಥತಾಮೇವ ಲೇಶತೋ ದರ್ಶಯತಿ– **ಯತ ಇತಿ** ॥ ಅತ್ರ ಪುರುಷ ಏವೇದಂ ಸರ್ವಮಿತಿ ವಾಕ್ಯೇ ॥ ೪೮೭ ॥

**ವಿವರಣೆ–** 'ಪುರುಷ ಏವ ಇದಂ ಸರ್ವಮ್' - ಈ ವಾಕ್ಯದ ಹಿಂದಿನ ಮತ್ತು ಮುಂದಿನ ವಾಕ್ಯಗಳು ಪುರುಷನ ಸರ್ವವ್ಯಾಪ್ತಿ ಮತ್ತು ಸರ್ವೋತ್ತಮತ್ವಗಳನ್ನು ಹೇಳುತ್ತವೆ. ಈ ವಾಕ್ಯವೂ, ವಿಭಕ್ತಿ ವ್ಯತ್ಯಾಸದಿಂದ ವ್ಯಾಖ್ಯಾನಿಸಲ್ಪಟ್ಟಾಗ, ಸರ್ವಕರ್ತೃತ್ವ, ಸರ್ವಾಧಾರತ್ವಗಳನ್ನು ಹೇಳುತ್ತದೆ. ಆದ್ದರಿಂದ ಸಮಗ್ರಸೂಕ್ತವು ಪರಮ ಪುರುಷನ ಮಹಿಮೆಯನ್ನು ಹೇಳುತ್ತದೆ. ಇಲ್ಲಿ ಪೂರ್ವಾಪರವಿರೋಧವಿಲ್ಲ. ವಿಭಕ್ತಿ ವ್ಯತ್ಯಾಸದಿಂದ ವ್ಯಾಖ್ಯಾನಿಸದಿದ್ದರೆ 474-483 ಶ್ಲೋಕಗಳಲ್ಲಿ ಹೇಳಿದ ದೋಷಗಳಿಗೆ ಆಸ್ಪದವಾಗಿ ಇಡೀ ಸೂಕ್ತವೇ ಅಸಂಗತವಾಗುವ ಪ್ರಸಂಗವಿದೆ.

ಅಪಿ ಭಿಕ್ಷಾಟನಂ ಕೃತ್ವಾ ಜ್ಞಾತೀನ್ ರಕ್ಷಿತುಮರ್ಹತಿ ।
ಯದಿಯಂ ಭಾರತೀ ಭೀಮಸೇನದರ್ಶಿತಪದ್ಧತಿಃ ॥ ೪೮೮ ॥

**ಅರ್ಥ–** ಇಯಂ ಭಾರತೀ= ಈ ಶ್ರುತಿಯು, ಭಿಕ್ಷಾಟನಂ ಕೃತ್ವಾ ಅಪಿ= ಭಿಕ್ಷೆ ಬೇಡಿ-ಯಾದರೂ, ಜ್ಞಾತೀನ್= ತನ್ನ ಜೊತೆಗಿರುವ ವಾಕ್ಯಗಳನ್ನು, ರಕ್ಷಿತುಂ ಅರ್ಹತಿ= ಕಾಪಾಡಬೇಕು, ಯತ್= ಏಕೆಂದರೆ, ಇಯಂ ಭಾರತೀ= ಈ ವೇದವಾಣಿಯೂ (ಅಭಿಮಾನಿಯಾದ ಭಾರತೀದೇವಿಯೂ) ಕೂಡ, ಭೀಮಸೇನದರ್ಶಿತಪದ್ಧತಿಃ= ಭೀಮ-ಸೇನನಿಂದ ತೋರಿಸಲ್ಪಟ್ಟ ದಾರಿವುಳ್ಳವಳು.

**ಅನುವಾದ–** ಈ ವೇದವಾಣಿಯು (ಪುರುಷ ಏವೇದಂ ಸರ್ವಮ್) ಭಿಕ್ಷಾಟನೆಯನ್ನು ಮಾಡಿಯಾದರೂ ತನ್ನ ಜೊತೆಯ ವಾಕ್ಯಗಳನ್ನು ರಕ್ಷಿಸಬೇಕು. ಏಕೆಂದರೆ ಈ ವಾಣಿಯು, ಎಂದರೆ, ವಾಣಿಯ ಅಭಿಮಾನಿಯಾದ ಭಾರತೀದೇವಿಯು ಭೀಮಸೇನನಿಂದ ತೋರಿಸಲ್ಪಟ್ಟ ಮಾರ್ಗವುಳ್ಳವಳು.

**ಭಾವವಿಲಾಸಿನೀ–** ಕಿಂಚ ಪುರುಷ ಇತಿ ಪ್ರಥಮಾಯಾಃ ಸಪ್ತಮ್ಯರ್ಥತಾಮಂಗೀಕೃತ್ಯಾರ್ಥ ಕಥನಮೇವಾತ್ರೋಚಿತಮಿತಿ ಸಾಹಿತ್ಯಮುದ್ರಯಾಹ – **ಅಪೀತಿ** ॥ ಭಿಕ್ಷಾಟನಂ ಕಾರಕಾಂತರಾದ್ ವಿಭಕ್ತ್ಯಂತರಮ್ । ಅನ್ಯತ್ರ ತು ಪ್ರಸಿದ್ಧ ಏವಾರ್ಥಃ । ಜ್ಞಾತೀನ್ ವಾಕ್ಯತಯಾ ಸ್ವಸಮಾನ-ಜಾತೀಯಪೂರ್ವೋತ್ತರವಾಕ್ಯಾನಿ । ಐಕ್ಯಾರ್ಥಕಥನೇ ಪೂರ್ವೋತ್ತರವಾಕ್ಯಾನಾಂ ಮಹಿಮಪ್ರತಿಪಾದಕಾನಾಂ ಅಪ್ರಾಮಾಣ್ಯಾಖ್ಯನಾಶಪ್ರಸಂಗಾತ್ । ವಿಭಕ್ತ್ಯಂತರಾಶ್ರಯಣೇ ತು ಸರ್ವೇಷಾಮೇಕವಾಕ್ಯತಯಾ ಪ್ರಾಮಾಣ್ಯಪ್ರತಿಘಾತೇನ ರಕ್ಷಣಾದಿತಿ ಭಾವಃ । ಯದ್ಯಸ್ಮಾತ್ । ಇಯಂ ಪುರುಷಸೂಕ್ತಾಖ್ಯಾಶ್ರುತಿರ್ಭಾರತೀ ''ಬ್ರಾಹ್ಮೀ ತು ಭಾರತೀ ಭಾಷೇ''ತ್ಯನುಶಾಸನಾತ್

ಭಾರತೀಪದವಾಚ್ಯಾ । ಅನ್ಯತ್ರ ತು ಭರತಕುಲೋತ್ಪನ್ನಭಾರತೀಪದವಾಚ್ಯಭೀಮಸೇನಪತ್ನೀ ದ್ರೌಪದೀ । ಭೀಮಸೇನದರ್ಶಿತಪದ್ಧತಿಃ ಭೀಮಸೇನೇನ ದರ್ಶಿತಾ ಪದ್ಧತಿರ್ಯಸ್ಯಾಃ ಸಾ । ಭೀಮಸೇನಮಾರ್ಗಮನುಸೃತ್ಯ ವರ್ತಮಾನೇತ್ಯರ್ಥಃ । ಭೀಮಸೇನೋ ಹಿ ಏಕಚಕ್ರಾನಗರೇ ಭಿಕ್ಷಾಟನಂ ಕೃತ್ವಾ ಧರ್ಮರಾಜಾದೀನ್ ಸ್ವಜ್ಞಾತೀನರಕ್ಷತ್ । ಇಯಮಪಿ ಭಾರತೀ-ಪದವಾಚ್ಯತ್ವಾದ್ಭಾರತ್ಯಭಿಮನ್ಯಮಾನತ್ವಾಚ್ಚ ಸ್ವಪತಿವತ್ಕಾರಕಾಂತರಾದ್ ವಿಭಕ್ತ್ಯಂತರಗವೇಷಣಂ ಕೃತ್ವಾಽಪಿ ಸ್ವಪೂರ್ವೋತ್ತರವಾಕ್ಯರಕ್ಷಣಮೇವ ಕರ್ತುಮರ್ಹತೀತಿ ಭಾವಃ ॥ ೪೮೮ ॥

**ವಿವರಣೆ–** ಭಾರತೀ ಪದಕ್ಕೆ ಎರಡು ಅರ್ಥ. (1) ಭರತಕುಲೋತ್ಪನ್ನನಾದ ಭೀಮಸೇನನ ಪತ್ನಿ ದ್ರೌಪದೀದೇವಿ. (2) ಪುರುಷಸೂಕ್ತವೆಂಬ ವೇದ. ಭೀಮಸೇನದರ್ಶಿತಪದ್ಧತಿಃ= ಭೀಮಸೇನನ ಮಾರ್ಗವನ್ನು ಅನುಸರಿಸುವವಳು ಎಂದು ಅರ್ಥ. ಭೀಮಸೇನನು ಏಕಚಕ್ರನಗರದಲ್ಲಿ ನಾಗರಿಕರಿಂದ ಭಿಕ್ಷೆ ಸ್ವೀಕರಿಸಿ ತನ್ನ ಸಂಬಂಧಿಗಳಾದ ಧರ್ಮರಾಜಾದಿಗಳನ್ನು ಸಲಹಿದಂತೆ, 'ಪುರುಷ ಏವ ಇದಂ ಸರ್ವಮ್' ಎಂಬ ಪುರುಷಸೂಕ್ತದ ಮಂತ್ರವೂ ಬೇರೆ ವಿಭಕ್ತಿಯ ಅರ್ಥವನ್ನು ಎರವಲು ಪಡೆದುಕೊಂಡು ತನ್ನ ಜ್ಞಾತಿಗಳಂತೆ ಇರುವ ಪೂರ್ವೋತ್ತರ ವಾಕ್ಯಗಳಿಗೆ ಬರಬಹುದಾಗಿದ್ದ ಅಪ್ರಾಮಾಣ್ಯದೋಷವನ್ನು ಪರಿಹರಿಸಿ ಅವುಗಳ ಪ್ರಾಮಾಣ್ಯವನ್ನು ರಕ್ಷಿಸಬೇಕು.

ಪುರುಷ ಏವ ಎಂಬ ವಾಕ್ಯಕ್ಕೆ ಅಭೇದಾರ್ಥವನ್ನು ಹೇಳುವುದು ಯುಕ್ತವಲ್ಲ ಎಂಬುದನ್ನು ಇನ್ನೊಂದು ಕಾರಣದಿಂದ ಪ್ರತಿಪಾದಿಸುತ್ತಿದ್ದಾರೆ:-

ನ ಚೇತ್ ಕಥಮಭೇದಾರ್ಥಾ ಯತೋ ವಾಕ್ಯಂ ಭಿನತ್ತಿ ಸಾ ।
ಸಂಭವತ್ಯೇಕವಾಕ್ಯತ್ವೇ ವಾಕ್ಯಭೇದೋ ಹಿ ದೂಷಣಮ್ ॥ ೪೮೯ ॥

**ಅರ್ಥ–** ನ ಚೇತ್= ವಿಭಕ್ತಿ ವ್ಯತ್ಯಾಸದಿಂದ ವ್ಯಾಖ್ಯಾನಿಸದಿದ್ದರೆ, ಸಾ= ಆ ಪುರುಷ ಏವೇದಂ ಸರ್ವಮ್ ಎಂಬ ಶ್ರುತಿಯು, ಕಥಂ= ಹೇಗೆ, ಅಭೇದಾರ್ಥಾ= ಐಕ್ಯಾರ್ಥ ಪ್ರತಿಪಾದಕ? ಯತಃ= ಏಕೆಂದರೆ, ವಾಕ್ಯಂ= ಶ್ರುತಿವಾಕ್ಯಗಳನ್ನು, ಭಿನತ್ತಿ= ಭೇದಿಸುತ್ತದೆ. ಏಕವಾಕ್ಯತ್ವೇ ಸಂಭವತಿ ಸತಿ= ಏಕ ವಿಷಯತ್ವವು ಉಪಪನ್ನವಾಗುವಾಗ, ವಾಕ್ಯಭೇದಃ= ಭಿನ್ನವಿಷಯತ್ವವು, ದೂಷಣಂ ಹಿ= ದೋಷವಷ್ಟೇ!

**ಅನುವಾದ–** 'ಪುರುಷ ಏವೇದಂ ಸರ್ವಮ್' - ಈ ವಾಕ್ಯವನ್ನು ವಿಭಕ್ತಿ ವ್ಯತ್ಯಾಸದಿಂದ ವ್ಯಾಖ್ಯಾನಿಸದಿದ್ದರೆ, ಈ ವಾಕ್ಯಕ್ಕೆ ಪುರುಷನಿಗೆ ಜಗದಭೇದ ಎಂಬ ಅರ್ಥವಾದರೂ ಹೇಗೆ ಉಪಪನ್ನ? ಏಕೆಂದರೆ ಈ ಅರ್ಥವು ವಾಕ್ಯವನ್ನು ಭೇದಿಸುತ್ತದೆ. (ಇಡೀ ಸೂಕ್ತಕ್ಕೆ ಪೂರ್ವಾಪರ ವಿರೋಧವಿಲ್ಲದ ಅರ್ಥವು ಏಕವಾಕ್ಯತೆ. ಹೀಗಿಲ್ಲದಿದ್ದರೆ ವಾಕ್ಯಭೇದ) ಏಕವಾಕ್ಯತ್ವವು ಉಪಪನ್ನವಾಗುವಾಗ ವಾಕ್ಯಭೇದವು ದೋಷ. ಇದು ಪ್ರಸಿದ್ಧ.

**ಭಾವವಿಲಾಸಿನೀ–** ಅಭೇದಾರ್ಥತ್ವೇ ದೋಷಾಂತರಂ ಚಾಹ – **ನ ಚೇದಿತಿ** ॥ ಯತಃ ಯಸ್ಮಾತ್ಸಾ ಅಭೇದಾರ್ಥತ್ವೇನ ಪರೇಣಾಭಿಮನ್ಯಮಾನಾ ವಾಕ್ । ವಾಕ್ಯಂ ಪೂರ್ವೋತ್ತರವಾಕ್ಯಂ ಭಿನತ್ತಿ ಭಿನ್ನಾರ್ಥಕಂ ಕರೋತಿ । ಪೂರ್ವೋತ್ತರವಾಕ್ಯೇಷು ಭೇದಕಥನಾತ್ ಅತ್ರ ಚಾಭೇದಕಥನಾತ್ ಕಥಮಭೇದಾರ್ಥಾ । ಅಭೇದಾರ್ಥಾ ಹಿ ವಾಕ್ ಸರ್ವತ್ರ ಭೇದಂ ನಿವಾರಯೇತ್ । ಇಯಂ ತು ವಾಕ್ಯಭೇದಮೇವ ಸಾಧಯಂತೀ ಕಥಮಭೇದಾರ್ಥೇತಿ ವಿರೋಧಾಖ್ಯ ಏಕೋ ದೋಷಃ । ಸಕಲವಾಕ್ಯಸಾಧಾರಣಂ ದೂಷಣಾಂತರಂ ಚಾಹ – **ಸಂಭವತೀತಿ** ॥ ೪೮೯ ॥

**ವಿವರಣೆ–** (1) 'ಪುರುಷ ಏವ ಇದಂ ಸರ್ವಮ್'- ಈ ವಾಕ್ಯಕ್ಕೆ ಪುರುಷನಿಗೆ ಜಗದಭೇದ ಎಂಬ ಅರ್ಥವು ಅನುಪಪನ್ನ. ಈ ವಾಕ್ಯದ ಪೂರ್ವವಾಕ್ಯ ಮತ್ತು ಉತ್ತರವಾಕ್ಯಗಳು ಪುರುಷ ಮತ್ತು ಜಗತ್ತಿಗೆ ಭೇದವನ್ನು ತಿಳಿಸುತ್ತಿವೆ. ಈ ವಾಕ್ಯವು ಅಭೇದವನ್ನು ತಿಳಿಸಿದರೆ ಸೂಕ್ತದ ವಾಕ್ಯಗಳಿಗೆ ಸುಸಂಗತವಾದ ಅಭಿಪ್ರಾಯವಿಲ್ಲವಾಗುತ್ತದೆ. ಈ ಸ್ಥಿತಿಯು 'ವಾಕ್ಯಭೇದ'= ಪುರುಷಸೂಕ್ತದಲ್ಲಿ ಒಡಕು. ಸುಸಂಗತವಾದ ಏಕಾಭಿಪ್ರಾಯಕ್ಕೆ ಅವಕಾಶವಿರುವಾಗ ವಿರುದ್ಧಾರ್ಥಗಳಿಂದ ಶ್ರುತಿಗಳನ್ನು ಒಡೆಯುವುದು ದೋಷ.

(2) ವಾಕ್ಯಭೇದದಲ್ಲಿ ಪರ್ಯವಸಾನವಾಗುವ ಅದ್ವೈತ ವ್ಯಾಖ್ಯಾನವು ಪುರುಷಸೂಕ್ತವು ಅಭೇದ ಪ್ರತಿಪಾದಕ ಎಂದು ತೋರಿಸಲು ವಿಫಲವಾಗಿದೆ; **'ಪುರುಷ ಏವೇದಂ ಸರ್ವಮ್'** ಈ ವಾಕ್ಯದ ಪೂರ್ವ ಮತ್ತು ಉತ್ತರ ವಾಕ್ಯಗಳು ಹೇಳುವ ಪುರುಷ ಮತ್ತು ಜಗತ್‌ನ ಭೇದವನ್ನು ಅದ್ವೈತ ವ್ಯಾಖ್ಯಾನವು ನಿರಾಕರಿಸಿಲ್ಲವಾದ್ದರಿಂದ.

ಅಭೇದಾರ್ಥಪಕ್ಷದಲ್ಲಿ ಇನ್ನಷ್ಟು ದೋಷ-

ಜಡಾತ್ಮೈಕ್ಯಪ್ರಸಂಗೇನ ಮುಖ್ಯಾರ್ಥಸ್ತು ತವಾಪಿ ನ ।
ಯಾಚ್ಞಾಯಾಂ ತು ಪ್ರವೃತ್ತೇನ ಸದನ್ನಂ ಕಿಂ ನ ಯಾಚ್ಯತೇ ॥ ೪೯೦ ॥

**ಅರ್ಥ–** ತವಾಪಿ= ನಿನ್ನ ಪಕ್ಷದಲ್ಲೂ, ಜಡಾತ್ಮೈಕ್ಯ ಪ್ರಸಂಗೇನ= ಜಡ ಮತ್ತು ಆತ್ಮನಿಗೆ ಐಕ್ಯಪ್ರಸಂಗದಿಂದಾಗಿ, ಮುಖ್ಯರ್ಥಸ್ತು= ಮುಖ್ಯಾರ್ಥವಾದರೂ, ನ= ಇರುವುದಿಲ್ಲ. ಯಾಂಚಾಯಾಂ = ಭಿಕ್ಷೆಬೇಡಲು, ಪ್ರವೃತ್ತೇನ ತು= ಹೊರಟವನಿಂದ, ಸದನ್ನಂ = ಒಳ್ಳೆಯ ಅನ್ನವು, ಕಿಂ ನ ಯಾಚ್ಯತೇ = ಏಕೆ ಬೇಡಲ್ಪಡುವುದಿಲ್ಲ?

**ಅನುವಾದ–** 'ಪುರುಷ ಏವೇದಂ ಸರ್ವಮ್' - ಈ ವಾಕ್ಯದ ಮುಖ್ಯಾರ್ಥವು ನಿನಗೂ ಸಮ್ಮತವಲ್ಲ; ಸಮ್ಮತವಾದರೆ ಜಡಪದಾರ್ಥ ಮತ್ತು ಆತ್ಮ (ಪುರುಷ)ನಿಗೆ ಐಕ್ಯಪ್ರಸಂಗವು ಉಂಟಾಗುವುದರಿಂದ. ಬೇಡುವುದಕ್ಕೆ ತೊಡಗಿದವನು (ಅಮುಖ್ಯ ಅರ್ಥವನ್ನು ಗುರುತಿಸಲು ಹೊರಟವನು) ಒಳ್ಳೆಯ ಅನ್ನವನ್ನು ಏಕೆ ಬೇಡುವುದಿಲ್ಲ?

**ಭಾವವಿಲಾಸಿನೀ–** ಪುನರಪಿ ದೋಷಾಂತಹವಮಾಹ – **ಜಡಾತ್ಮೇತಿ** ॥ ಮುಖ್ಯಾರ್ಥಃ ಅಸಂಕುಚಿತತ್ವೇನ ಸರ್ವಪದಮುಖ್ಯಾರ್ಥಃ ಜಡಾಜಡಸಕಲಪದಮುಖ್ಯಾರ್ಥಃ। ಯಾಚ್ಞಾಯಾಂ ಮುಖ್ಯವೃತ್ತ್ಯಸಂಭವೇನಾಮುಖ್ಯವೃತ್ತೇರಾಶ್ರಯಣೇ । ಸದನ್ನಂ ಪೂರ್ವೋತ್ತರವಾಕ್ಯಾ-ವಿಘಾತಕತ್ವೇನ ಸುಪಾಂ ಸುಲುಗಿತ್ಯನುಶಿಷ್ಟತ್ವೇನ ಚ ವಿಭಕ್ತ್ಯಂತರಾಶ್ರಯಣರೂಪಸದನ್ನಮ್ । ಪರೇಣ ಕ್ರಿಯಮಾಣಯಾಂಚಾ ತು ಪೂರ್ವೋತ್ತರವಾಕ್ಯವಿಘಾತಕತ್ವೇನಾನುಶಿಷ್ಟತ್ವೇನ ಚ ಕದನ್ನಯಾಚ್ಞೇತಿ ಭಾವಃ ॥ ೪೯೦ ॥

**ವಿವರಣೆ–** (1) 'ಚೇತನ- ಅಚೇತನಗಳೆಲ್ಲವೂ ಪುರುಷನೇ, ಎಂದರೆ 'ಪುರುಷಾಭಿನ್ನ'- ಇದು 'ಪುರುಷ ಏವೇದಂ ಸರ್ವಮ್' - ಈ ವಾಕ್ಯದ ಮುಖ್ಯಾರ್ಥ.

ಈ ಅರ್ಥವನ್ನು ಅಂಗೀಕರಿಸಿದರೆ 'ಪುರುಷ' ಶಬ್ದದ ಅರ್ಥವಾದ ಆತ್ಮನಿಗೆ ಜಡ ಪದಾರ್ಥಗಳಿಂದ ಅಭೇದವನ್ನು ಹೇಳಿದಂತೆ. ಇದು ಅದ್ವೈತ ಚಿಂತಕರಿಗೆ ಸಮ್ಮತವಲ್ಲ. ಆದ್ದರಿಂದ ಅವರೂ ಈ ಶ್ರುತಿವಾಕ್ಯಕ್ಕೆ ಅಮುಖ್ಯಾರ್ಥವನ್ನು ಅಂಗೀಕರಿಸಬೇಕು.

(2) ಸಕಲ ಚೇತನ-ಅಚೇತನಗಳು 'ಸರ್ವ' ಶಬ್ದದ ಮುಖ್ಯಾರ್ಥ. 'ಸಕಲ ಚೇತನಗಳು' ಎಂದು ಅರ್ಥವನ್ನು ಸ್ವೀಕರಿಸಿದರೆ, ಸಕಲ ಚೇತನಗಳಿಗೆ ಮತ್ತು ಪುರುಷನಿಗೆ ಐಕ್ಯವು ಅವರಿಗೆ ಸಮ್ಮತ. ಇಲ್ಲಿ ಸರ್ವಶಬ್ದದ ಅರ್ಥದ ಸಂಕೋಚವನ್ನು ಮಾಡಲಾಗಿದೆ. ಈ ಅರ್ಥದಿಂದ ಶ್ರುತಿಯ ಪೂರ್ವವಾಕ್ಯ ಮತ್ತು ಉತ್ತರವಾಕ್ಯಗಳ ವಿರೋಧವು ಪರಿಹಾರವಾಗುವುದಿಲ್ಲ. ಅಥವಾ ಆ ವಾಕ್ಯಗಳ ಅರ್ಥಕ್ಕೆ ವಿಘಾತವಾಗುತ್ತದೆ. ಅರ್ಥಸಂಕೋಚಕ್ಕೆ ಅನುಕೂಲವಾದ ಯಾವ ವಿಧಿಯೂ ಇಲ್ಲ.

(3) 'ಪುರುಷ' ಶಬ್ದದ ವಿಭಕ್ತಿಯನ್ನು ವ್ಯತ್ಯಾಸ ಮಾಡಿ ವ್ಯಾಖ್ಯಾನಿಸಿದರೂ ಮೂಲದ ಬದಲಾವಣೆಯೇ. ಆದರೆ (1) ಈ ಬದಲಾವಣೆಯು ಪೂರ್ವ ಮತ್ತು ಉತ್ತರ ವಾಕ್ಯಗಳ ಅರ್ಥಕ್ಕೆ ವಿಘಾತವನ್ನು ಮಾಡುವುದಿಲ್ಲ (2) ಈ ಬದಲಾವಣೆಗೆ ಭಾಗವತ ಪುರಾಣದಲ್ಲಿರುವ ವೇದವ್ಯಾಸರ ಉಕ್ತಿಯ (2.6.17) ಸಮ್ಮತಿಯಿದೆ. ಪಾಣಿನಿಯ ಸಮ್ಮತಿಯೂ (7.1.39) ಇದೆ.

'ಸರ್ವ' ಶಬ್ದಕ್ಕೆ ಅರ್ಥಸಂಕೋಚವನ್ನು ಮಾಡುವ ಅನಿವಾರ್ಯತೆಯು ಇದ್ದಾಗ ವಿಭಕ್ತಿಯ ಬದಲಾವಣೆಯನ್ನು ಮಾಡುವುದು ಶಾಸ್ತ್ರೀಯ. ಆದ್ದರಿಂದ ಇದು ಸದನ್ನದ ಯಾಚನೆ. 'ಸಕಲ ಚೇತನಗಳು' ಎಂದು ಅರ್ಥವನ್ನು ಹೇಳುವುದು ಅಶಾಸ್ತ್ರೀಯ. ಆದ್ದರಿಂದ ಇದು ಕದನ್ನ (ಕೆಟ್ಟ ಅನ್ನ).

ಈ ವಾಕ್ಯಕ್ಕೆ ಐಕ್ಯಾರ್ಥವನ್ನು ಸ್ವೀಕರಿಸಿದರೆ ಪುರಾಣವಿರೋಧವೂ ಇದೆ ಎಂದು ಹೇಳುತ್ತಿದ್ದಾರೆ -

**ಕಿಂಚ ಪೌರುಷಸೂಕ್ತೇಽಸ್ಮಿನ್ ಸರ್ವಸ್ಯ ಪುರುಷಾತ್ಮತಾ ।**
**ಯದ್ಯರ್ಥಸ್ತರ್ಹಿ ಕಾರ್ಯಾರ್ಥಂ ವ್ಯರ್ಥಂ ತೇನ ತದರ್ಥನಮ್ ॥ ೪೯೧ ॥**

**ಅರ್ಥ–** ಕಿಂ ಚ = ಇಷ್ಟೇ ಅಲ್ಲದೆ, ಅಸ್ಮಿನ್ = ಈ, ಪೌರುಷಸೂಕ್ತೇ= ಪುರುಷಸೂಕ್ತದಲ್ಲಿ, ಸರ್ವಸ್ಯ= ಎಲ್ಲ ಜಗತ್ತಿಗೆ, ಪುರುಷಾತ್ಮತಾ= ಪುರುಷೈಕ್ಯವು, ಯದಿ ಅರ್ಥ= ಅರ್ಥವಾದರೆ, ತರ್ಹಿ= ಆಗ, ಕಾರ್ಯಾರ್ಥಂ= ಕಾರ್ಯಸಾಧನೆಗಾಗಿ (ಭೂಭಾರಹರಣಕ್ಕಾಗಿ), ತೇನ= ಆ ಪುರುಷಸೂಕ್ತದಿಂದ, ತದರ್ಚನಂ= ಸರ್ವೋತ್ತಮನಾದ ವಿಷ್ಣುವಿನ ಉಪಾಸನೆಯು, ವ್ಯರ್ಥ.

**ಅನುವಾದ–** ಬ್ರಹ್ಮಾದಿದೇವತೆಗಳು ಭೂಭಾರಹರಣಕ್ಕಾಗಿ ಪುರುಷಸೂಕ್ತವನ್ನು ಪಠಿಸಿ ಭಗವಂತನನ್ನು ಸ್ತುತಿಸುತ್ತಾರೆ. ಭೂಮಿಯ ಭಾರವನ್ನು ಪರಿಹರಿಸಲು ಬ್ರಹ್ಮಾದಿಗಳು ಪರಮಾತ್ಮನನ್ನು ಪುರುಷಸೂಕ್ತದಿಂದ ಸ್ತುತಿಸಬೇಕಾದರೆ ಜಡ (ಭೂಮಿ), ಜೀವ (ಬ್ರಹ್ಮಾದಿಗಳು) ಮತ್ತು ಪರಮಾತ್ಮನಲ್ಲಿ ಭೇದವು ಇರಲೇಬೇಕು. ಎಲ್ಲ ಜಗತ್ತೂ ಪರಮಾತ್ಮನಿಂದ ಅಭಿನ್ನವಾದರೆ ಹೀಗೆ ಸ್ತುತಿಸುವುದು ಪ್ರಯೋಜನರಹಿತ ಮತ್ತು ವಿರುದ್ಧ.

**ಭಾವವಿಲಾಸಿನೀ–** ಅಪಿ ಚ ಪುರುಷ ಏವೇದಂ ಸರ್ವಮಿತಿ ವಾಕ್ಯಸ್ಯ ಸಕಲಚೇತನಾನಾಂ ಪುರುಷ-ನಾಮಕನಾರಾಯಣಾಭಿನ್ನಾರ್ಥಕತ್ವೇ ಬ್ರಹ್ಮಾದಿಭಿಃಶ್ವೇತದ್ವೀಪಂ ಗತ್ವಾನೇನ ಸೂಕ್ತೇನ ವಿಷ್ಣೋ-ರುಪಾಸನಂ ಕೃತಮಿತಿ ಯಾ ಪೌರಾಣಿಕೀ ಪ್ರಕ್ರಿಯಾ ಸಾಪ್ಯನುಪಪನ್ನೇತ್ಯಾಹ – **ಕಿಂ ಚೇತಿ** ॥ ತೇನ ಪುರುಷಸೂಕ್ತೇನ । ತದರ್ಚನಂ ತಸ್ಯ ವಿಷ್ಣೋರರ್ಚನಮುಪಾಸನಂ ವ್ಯರ್ಥಂ ವಿರುದ್ಧಾರ್ಥಕಂ ವಿಗತಾರ್ಥಕಂ ಚ । ಬ್ರಹ್ಮಾದೀನಾಂ ಸ್ವೇಷಾಮಪಿ ಪುರುಷರೂಪತ್ವೇ ಭೇದಸಾಪೇಕ್ಷೋ-ಪಾಸ್ಯೋಪಾಸಕಭಾವಾಯೋಗಾತ್ । ಸ್ವೈರಪಿ ಭೂಭಾರಚ್ಛೇದಸ್ಯ ಕರ್ತುಂ ಶಕ್ಯತ್ವೇನಾನ್ಯ-ಪ್ರಾರ್ಥನೇ ವೈಯರ್ಥ್ಯಾಚ್ಚೇತಿ ಭಾವಃ ॥ ೪೯೧ ॥

**ವಿವರಣೆ–** ತೇನ= ಆ ಪುರುಷಸೂಕ್ತದಿಂದ, ವ್ಯರ್ಥಂ= ವಿರುದ್ಧಾರ್ಥಕಂ, ವಿಗತಾರ್ಥಕಂ ಚ= ಬ್ರಹ್ಮಾದಿಗಳೂ ಪುರುಷರಾದ್ದರಿಂದ ಅವರಿಗೆ ಉಪಾಸಕತ್ವವು ಬರಲು ಸಾಧ್ಯವಿಲ್ಲ, ಹಾಗೆಯೇ ತಮಗೇ ಭೂಭಾರಹರಣಸಾಮರ್ಥ್ಯವಿರುವಾಗ ಬೇರೆಯವರನ್ನು ಬೇಡು ವುದು ವ್ಯರ್ಥ.

**ಕಾ ಭೂಃ ಕುತೋ ಭರಸ್ತಸ್ಯಾಃ ಕಃ ಸ್ವಯಂ ಕಶ್ಚ ಪೂರುಷಃ ।**
**ಏತಾವದಪಿ ಸೂಕ್ತಾರ್ಥಂ ಧ್ಯಾತಾ ಧಾತಾ ನ ವೇತ್ತಿ ಕಿಮ್ ॥ ೪೯೨ ॥**

**ಅರ್ಥ–** (ಪುರುಷನಿಗೂ ಜಗತ್ತಿಗೂ ಐಕ್ಯವಿರುವುದಾದರೆ), ಭೂಃ= ಭೂಮಿಯು, ಕಾ= ಯಾರು? ತಸ್ಯಾಃ= ಅವಳ, ಭರಃ= ಭಾರವು, ಕಃ= ಯಾವುದು? ಸ್ವಯಂ= ತಾನು (ಸ್ತೋತ್ರ ಮಾಡುವ ಬ್ರಹ್ಮನು), ಕಃ= ಯಾರು? ಪೂರುಷಃ= ಸ್ತುತ್ಯನಾದ ಪುರುಷನು, ಕಃ= ಯಾರು? ಸೂಕ್ತಾರ್ಥಂ= ಪುರುಷಸೂಕ್ತಾರ್ಥವನ್ನು, ಧ್ಯಾತಾ= ಚಿಂತಿಸುವ, ಧಾತಾ=

ಚತುರ್ಮುಖಬ್ರಹ್ಮನು, ಏತಾವತ್ ಅಪಿ= ಇಷ್ಟು ವಿಷಯಗಳನ್ನಾದರೂ, ನ ವೇತ್ತಿ ಕಿಂ= ತಿಳಿದಿಲ್ಲವೇ?

**ಅನುವಾದ–** ಪುರುಷನಿಗೂ ಜಗತ್ತಿಗೂ ಐಕ್ಯವಿರುವುದಾದರೆ ಭೂಮಿಯು ಯಾರು? ಅವಳ ಭಾರವು ಯಾವುದು? ಸ್ತೋತ್ರ ಮಾಡುವ ಬ್ರಹ್ಮನು ಯಾರು? ಸ್ತುತ್ಯನಾದ ಪುರುಷನು ಯಾರು? ಪುರುಷಸೂಕ್ತಾರ್ಥವನ್ನು ಚಿಂತಿಸುವ ಚತುರ್ಮುಖ-ಬ್ರಹ್ಮನು ಇಷ್ಟು ವಿಷಯಗಳನ್ನಾದರೂ ತಿಳಿದಿಲ್ಲವೇ?

**ಭಾವವಿಲಾಸಿನೀ–** ಏತದೇವ ದರ್ಶಯತಿ – **ಕಾ ಭೂರಿತಿ** ॥ ಭೂಃ ಧರಾದೇವೀ । ಸ್ವಯಂ ಬ್ರಹ್ಮಾಧ್ಯಾತಾ ಪುರುಷಸೂಕ್ತಾರ್ಥಧ್ಯಾನಕರ್ತಾ । ಧಾತಾ ಬ್ರಹ್ಮಾ । ಸೂಕ್ತಾರ್ಥಭೂತಂ ಏತಾವತ್ ಕಾ ಭೂಃ ಕುತೋ ಭರಃ ಕಃ ಸ್ವಯಂ ಕಶ್ಚ ಪುರುಷ ಇತ್ಯೇತಾವತ್‌ಪ್ರಮೇಯಂ ನ ವೇತ್ತಿ ಕಿಮಿತಿ ಸಂಬಂಧಃ ॥ ೪೯೨ ॥

**ವಿವರಣೆ–** ಚರಾಚರಪ್ರಪಂಚಕ್ಕೆ ಬ್ರಹ್ಮನಿಂದ ಐಕ್ಯ ವೇ ಈ ವಾಕ್ಯದ ಅಭಿಪ್ರಾಯವಾದರೆ, ಭೂಭಾರಹರಣಕ್ಕಾಗಿ ಚತುರ್ಮುಖಬ್ರಹ್ಮನು ಪರಮಾತ್ಮನನ್ನು ಪುರುಷಸೂಕ್ತದಿಂದ ಸ್ತುತಿಸುವುದು ಸರಿಯಾಗುವುದಿಲ್ಲ. ಎಲ್ಲವೂ ಬ್ರಹ್ಮನೇ ಆಗಿದ್ದರೆ ಭೂಮಿ ಯಾರು? ಅದಕ್ಕೆ ಉಂಟಾದ ಭಾರ ಎಂದರೆ ಯಾವುದು? ಧ್ಯಾನಮಾಡುವ ಚತುರ್ಮುಖಬ್ರಹ್ಮನು ಯಾರು? ಧ್ಯಾನವಿಷಯನಾದ ಪುರುಷನು ಯಾರು? ಇವುಗಳು ಇಲ್ಲವೇ ಇಲ್ಲ. ಪುರುಷಸೂಕ್ತಾರ್ಥವನ್ನು ಅನುಸಂಧಾನ ಮಾಡುವ ಚತುರ್ಮುಖ ಬ್ರಹ್ಮದೇವರಿಗೆ ಇಷ್ಟೂ ತಿಳಿದಿಲ್ಲವೇ?

ಅಭೇದಾರ್ಥವು ಸ್ವೀಕಾರಾರ್ಹವಲ್ಲ:-

> ಪುರುಷಾತ್ ಪುರುಷಸ್ಯೈವ ಭಯೇ ಪುರುಷಪೂಜನಮ್ ।
> ಪುರುಷಃ ಕುರುತೇ ಕಸ್ಮಾತ್ತಸ್ಮಾದಸ್ಮನ್ಮತಂ ಸ್ಮರ ॥ ೪೯೩ ॥

**ಅರ್ಥ–** ಪುರುಷಾತ್= ಪುರುಷನಿಂದ, ಪುರುಷಸ್ಯ ಏವ= ಪುರುಷನಿಗೇ, ಭಯೇ= ಹೆದರಿಕೆಯಾಗಲು, ಪುರುಷಃ= ಪುರುಷನು, ಪುರುಷಪೂಜನಂ= ಪುರುಷನ ಆರಾಧನೆಯನ್ನು, ಕಸ್ಮಾತ್= ಏಕೆ, ಕುರುತೇ= ಮಾಡುತ್ತಾನೆ? (ಮಾಡಲಾರ). ತಸ್ಮಾತ್= ಆದ್ದರಿಂದ (ಸರ್ವೈಕ್ಯವು ಸಾಧ್ಯವಿಲ್ಲವಾದ್ದರಿಂದ), ಅಸ್ಮನ್ಮತಂ= ನಮ್ಮ ಅಭಿಪ್ರಾಯವನ್ನೇ, ಸ್ಮರ= ಚಿಂತಿಸು.

**ಅನುವಾದ–** ಪುರುಷನಿಂದ ಪುರುಷನಿಗೆ ಭಯವು ಉಂಟಾದಾಗ ಪುರುಷನು ಪುರುಷ ಪೂಜೆಯನ್ನು ಏಕೆ ಮಾಡುತ್ತಾನೆ? ಆದ್ದರಿಂದ ನಮ್ಮ ಮತವನ್ನೇ ಚಿಂತಿಸು.

**ಭಾವವಿಲಾಸಿನೀ–** ಕುತೋ ನ ವೇತ್ತೀತ್ಯತ ಆಹ – **ಪುರುಷಾದಿತಿ** ॥ ಪುರುಷಾದ್ದೈತ್ಯರೂಪ-ನಾರಾಯಣಾತ್ ಪುರುಷಸ್ಯೈವ ಧರಾರೂಪನಾರಾಯಣಸ್ಯೈವ ಪುರುಷಃ ಬ್ರಹ್ಮರೂಪ-

ನಾರಾಯಣಃ ಪುರುಷಪೂಜನಂ ವಿಷ್ಣುರೂಪನಾರಾಯಣಪೂಜನಂ ಕಸ್ಮಾತ್ ಕಾರಣಾತ್ ಕುರುತೇ ನ ಕುರ್ಯಾದೇವ । ಸರ್ವಸ್ಯ ಚೇತನವರ್ಗಸ್ಯ ನಾರಾಯಣರೂಪತ್ವೇ ಕಥಂ ಭುವೋ ಭಾರಃ ಕಥಂ ಚ ದೈತ್ಯಾನಾಂ ಭೂಭಾರಹೇತುತ್ವಂ ಕಥಂ ಚ ವಿಷ್ಣೋಃ ಪೂಜ್ಯತ್ವಂ ಬ್ರಹ್ಮಣಶ್ಚ ಪೂಜಕತ್ವಮ್ । ನ ಹಿ ಸ್ವಸ್ಯೈವ ಸ್ವಸ್ಮಾದ್ಭಾರೇ ಸತಿ ಸ್ವಯಮೇವ ಸ್ವಪೂಜನಂ ಕರೋತೀತಿ ಕೋಽಪಿ ಪ್ರೇಕ್ಷಾವನ್ಮನ್ಯತ ಇತಿ ಭಾವಃ। ತಸ್ಮಾತ್‌ಪರೋದೀರಿತಾರ್ಥಸ್ಯಾತಿವಿರುದ್ಧತ್ವಾತ್ ॥೪೯೩॥

**ವಿವರಣೆ–** 'ಪುರುಷ ಏವೇದಂ ಸರ್ವಮ್' ಈ ವಾಕ್ಯಕ್ಕೆ ಪುರುಷನಿಗೆ ಜಗದಭೇದವು ಅರ್ಥವಾದರೆ ಪುರುಷನೇ ಭೂದೇವಿ, ಪುರುಷನೇ ದೈತ್ಯ, ಪುರುಷನೇ ಚತುರ್ಮುಖ ಬ್ರಹ್ಮ. ದೈತ್ಯರಿಂದ ಭೂಮಿಗೆ ಭಯ ಎಂದರೆ ಪುರುಷನಿಂದ ಪುರುಷನಿಗೆ ಭಯ. ಚತುರ್ಮುಖನಿಂದ ಪುರುಷನಿಗೆ ಪ್ರಾರ್ಥನೆ ಎಂದರೆ ಪುರುಷನಿಂದ ಪುರುಷನಿಗೆ ಪ್ರಾರ್ಥನೆ.

ತನ್ನಿಂದ ತನಗೆ ಭಯವಾದಾಗ ತನ್ನನ್ನೇ ಪ್ರಾರ್ಥಿಸುವುದುಂಟೇ? ವೇದವು ಇಂತಹ ಉಪಹಾಸಾಸ್ಪದವಾದ ವಿಷಯಗಳನ್ನು ಹೇಳುತ್ತದೆಯೇ?

**ವ್ಯಾವಹಾರಿಕಭೇದಾಚ್ಚೇತ್ ತರ್ಹಿ ಕಾರ್ಯಾನುರೋಧಿನಃ ।**
**ತಸ್ಯಾನುಕೂಲಮೇವಾರ್ಥಂ ವಕ್ತಿ ಸೂಕ್ತಂ ನ ವೈರಿಣಮ್ ॥ ೪೯೪ ॥**

**ಅರ್ಥ–** ವ್ಯಾವಹಾರಿಕಭೇದಾತ್ ಚೇತ್= ವ್ಯಾವಹಾರಿಕ ಭೇದದಿಂದ ಯುಕ್ತವಾಗುತ್ತದೆ ಎಂದು ಹೇಳುವುದಾದರೆ, ಕಾರ್ಯಾನುರೋಧಿನಃ= ವ್ಯವಹಾರಗಳಿಗೆ ಅನುಕೂಲವಾದ, ತಸ್ಯ= ಆ ಭೇದಕ್ಕೆ, ಅನುಕೂಲಮ್ ಏವಂ ಅರ್ಥಂ= ಅನುಕೂಲವಾದ ಅರ್ಥವನ್ನೇ, ಸೂಕ್ತಂ= ಪುರುಷಸೂಕ್ತವು, ವಕ್ತಿ= ಹೇಳುತ್ತದೆ, ವೈರಿಣಂ= ಪ್ರತಿಕೂಲವಾದ ಐಕ್ಯಾರ್ಥವನ್ನು ನ ವಕ್ತಿ= ಹೇಳುವುದಿಲ್ಲ.

**ಅನುವಾದ–** ದೈತ್ಯ, ಭೂದೇವಿ, ಚತುರ್ಮುಖಬ್ರಹ್ಮ, ಪ್ರಾರ್ಥನೆ ಇವುಗಳಿಗೆ ವ್ಯಾವಹಾರಿಕ ಭೇದವಿದೆ. ಈ ಭೇದದಿಂದ ಪುರಾಣದ ಉಕ್ತಿಯು ಉಪಪನ್ನವಾಗುತ್ತದೆ? ಹೀಗಾದರೆ ಪ್ರಾರ್ಥನೆ ಎಂಬ ವ್ಯವಹಾರಕ್ಕೆ ಭೇದವು ಅನುಕೂಲ. ಈ ಭೇದವನ್ನೇ ಸೂಕ್ತವು ಹೇಳುತ್ತದೆ. ವ್ಯವಹಾರಕ್ಕೆ ಅನನುಕೂಲ ವಾದ ಅಭೇದವನ್ನು ಹೇಳುವುದಿಲ್ಲ.

**ಭಾವವಿಲಾಸಿನೀ–** ವ್ಯಾವಹಾರಿಕಭೇದಸ್ಯ ವಿದ್ಯಮಾನತ್ವಾದಿಯಂ ಸರ್ವಾಽಪಿ ವ್ಯವಸ್ಥಾ ಘಟತ ಇತಿ ಪರಹೃದಯಮುದ್ಧಾಟ್ಯದೂಷಯತಿ – **ವ್ಯಾವಹಾರಿಕ ಭೇದಾದಿತಿ ॥** ಕಾರ್ಯಾನುರೋಧಿನಃ ಉಕ್ತವ್ಯವಸ್ಥಾಘಟಕಸ್ಯ ತಸ್ಯ ಭೇದಸ್ಯ । ಅನುಕೂಲಂ ಸಪ್ತಮೀವಿಭಕ್ತ್ಯಾಶ್ರಯಣೇನ ಭೇದಾನುಕೂಲ ಮಾಧಾರಾಧೇಯಭಾವರೂಪಮರ್ಥಮೇವ ವಕ್ತಿ । ವೈರಿಣಮುಕ್ತ-ವ್ಯವಹಾರವಿರೋಧಿನಂ ಸರ್ವಚೇತನಾಭೇದಮ್ । ನ ಹಿ ಧನಿನಃ ಪ್ರಾರ್ಥನಾರ್ಥಂ ಗತೋ ದರಿದ್ರಃ ಅಹಮೇವ ಧನೀತಿ ಬ್ರೂತೇ ॥ ೪೯೪ ॥

**ವಿವರಣೆ–** (1) ಪುರುಷನು ಜಗತ್ತಿಗೆ ಆಧಾರ, ಜಗತ್ತು ಅವನ ಅಧೀನ- ಈ ಅರ್ಥವು ಭೇದಕ್ಕೆ ಅನುಕೂಲ.

(2) ಧನಿಕನಲ್ಲಿ ಬೇಡಲು ಹೋದ ದರಿದ್ರನು ತಾನೇ ಧನಿಕ ಎಂದು ಹೇಳುವುದಿಲ್ಲ. ಹಾಗೆಯೇ ಭೂಭಾರಹರಣಕ್ಕೆ ಭಗವಂತನನ್ನು ಪ್ರಾರ್ಥಿಸಲು ಹೋದ ಬ್ರಹ್ಮಾದಿಗಳು ತಮಗೂ ಬ್ರಹ್ಮನಿಗೂ ಐಕ್ಯವನ್ನು ತಿಳಿಯುವುದಿಲ್ಲ. ಆದ್ದರಿಂದ ಶ್ರುತಿಯು ಪುರುಷನಿಗೆ ಜಗದಭೇದವನ್ನು ಹೇಳುವುದಿಲ್ಲ.

**ಅಂತತಃ ಪರಮಾರ್ಥಶ್ಚ ಸ ಏವ ಸ್ಯಾದ್ಧಿ ಕಾರ್ಯಕೃತ್ ।**
**ಸರ್ವೈಕ್ಯಂ ಸರ್ವಕಾರ್ಯಾಣಾಂ ಭಂಜಕಂ ಕಸ್ಯ ರಂಜಕಮ್ ॥ ೪೯೫ ॥**

**ಅರ್ಥ–** ಅಂತತಃ= ಕೊನೆಗೆ, ಕಾರ್ಯಾಕೃತ್= ಕಾರ್ಯಕಾರಿಯಾದ, ಸ ಏವ= ಆ ಭೇದವೇ, ಪರಮಾರ್ಥಶ್ಚ ಸ್ಯಾದ್ ಹಿ= ಪರಮಾರ್ಥವೂ ಆಗುವುದು. ಸರ್ವಕಾರ್ಯಾಣಾಂ= ಸಕಲಕಾರ್ಯಗಳ, ಭಂಜಕಂ= ಭಂಗಕಾರಿಯಾದ (ವಿರೋಧಿಯಾದ), ಸರ್ವೈಕ್ಯಂ= ಸಕಲ ಪದಾರ್ಥಗಳ ಅಭೇದವು, ಕಸ್ಯ= ಯಾರಿಗೆ (ಯಾವ ಕೆಲಸಕ್ಕೆ), ರಂಜಕಮ್?= ಸಂತೋಷಕರ? (ಉಪಯೋಗಿ?)

**ಅನುವಾದ–** ಕೊನೆಗೆ (ಎಲ್ಲ ವಿಮರ್ಶೆಗಳ ಕೊನೆಗೆ) ಕಾರ್ಯಕಾರಿಯಾದ ಆ ಭೇದವೇ ಪಾರಮಾರ್ಥಿಕವೂ ಆಗುತ್ತದೆ. ಸರ್ವಕಾರ್ಯಗಳ ಭಂಜಕವಾದ (ವಿರೋಧಿಯಾದ) ಸರ್ವಾಭೇದವು ಯಾರಿಗೆ ಸಂತೋಷಕರ? (ಉಪಯೋಗಿ?)

**ಭಾವವಿಲಾಸಿನೀ–** ನನ್ವಸ್ತು ತರ್ಹಿ ಭೇದ ಏವಾಸ್ಮಿನ್ವಾಕ್ಯೇ ಪ್ರತಿಪಾದ್ಯೋಽರ್ಥಃ । ತಸ್ಯ ಪರಮಾರ್ಥತಾ ಕಥಮಿತ್ಯತ ಆಹ – **ಅಂತತ ಇತಿ** ॥ ಕಾರ್ಯಕೃತ್ ಅಪೇಕ್ಷಿತಸಕಲಾರ್ಥಕ್ರಿಯಾಕಾರೀ । ಸ ಏವ ಉಕ್ತಭೇದ ಏವ ಅಬಾಧ್ಯಾರ್ಥಃ । ಭಂಜಕಂ ವಿರೋಧಿ । ಕಸ್ಯ ಕಾರ್ಯಸ್ಯ ರಂಜಕಂ ನ ಕಸ್ಯಾಪಿ । ಅರ್ಥಕ್ರಿಯಾನುಪಯೋಗೀತ್ಯರ್ಥಃ । ಶ್ರುತ್ಯುಕ್ತಸ್ಯಾಸ್ಯೈವ ಭೇದಸ್ಯಾರ್ಥಕ್ರಿಯಾಕಾರಿತ್ವಾತ್ ಅನ್ವಯೇನ ಬ್ರಹ್ಮವತ್ ವ್ಯತಿರೇಕೇಣ ಶುಕ್ತಿರೂಪ್ಯವಚ್ಚ ಪಾರಮಾರ್ಥಿಕತ್ವಮಪಿ ಸಿದ್ಧ್ಯೇತ್ । ಅರ್ಥಕ್ರಿಯಾನುಪಯೋಗಿನಸ್ತ್ವದಭಿಲಷಿತೈಕ್ಯಸ್ಯ ಚ ಶುಕ್ತಿರೂಪ್ಯವನ್ಮಿಥ್ಯಾತ್ವಂ ಚ ಸಿದ್ಧ್ಯೇತ್ । ಅಬಾಧ್ಯತ್ವಯೋಗ್ಯಸ್ಯ ಬಾಧ್ಯತಾಂ ವದನ್ಬಾಧ್ಯತ್ವ ಯೋಗ್ಯಸ್ಯ ಚಾಬಾಧ್ಯತಾಂ ಚ ವದನ್ ಭವಾಂಶ್ಚ ವ್ಯಾಹತಭಾಷೀ ಭವೇದಿತಿ ಭಾವಃ ॥ ೪೯೫ ॥

**ವಿವರಣೆ–** ಭೇದವು ಅರ್ಥಕ್ರಿಯಾಕಾರಿ. ಯಾವುದು ಅರ್ಥಕ್ರಿಯಾಕಾರಿಯಾಗಿದೆಯೋ ಅದು ಪಾರಮಾರ್ಥಿಕ. ಬ್ರಹ್ಮನಂತೆ. ಯಾವುದು ಅರ್ಥಕ್ರಿಯಾಕಾರಿಯಲ್ಲವೋ ಅದು ಮಿಥ್ಯಾ. ಶುಕ್ತಿರೂಪ್ಯದಂತೆ. ಈ ಅನ್ವಯ- ವ್ಯತಿರೇಕ ವ್ಯಾಪ್ತಿಯಿಂದ ಭೇದವು ಪಾರಮಾರ್ಥಿಕವೆಂದು ಸಿದ್ಧವಾಗುತ್ತದೆ. ಪರನು ಅಂಗೀಕರಿಸಿದ ಐಕ್ಯವು ಅರ್ಥಕ್ರಿಯಾಕಾರಿಯಲ್ಲವಾದ್ದರಿಂದ ಅದು ಶುಕ್ತಿರೂಪ್ಯದಂತೆ ಮಿಥ್ಯಾ. ಯಾವುದು (ಭೇದವು)

ಅಬಾಧ್ಯವೋ ಅದನ್ನು ಬಾಧ್ಯವೆಂದು ಹೇಳಿ, ಯಾವುದು ಬಾಧ್ಯವೋ (ಐಕ್ಯವು) ಅದನ್ನು ಅಬಾಧ್ಯವೆಂದು ಹೇಳಿ ಪರನು ವ್ಯಾಹತಭಾಷಿಯೆನಿಸುತ್ತಾನೆ.

**ಬೋಧ್ಯತ್ವಂ ಬೋಧಕತ್ವಂ ಚ ಸಾಧ್ಯಸಾಧಕತಾಂ ತಥಾ ।**
**ಗುರುಂ ಶಿಷ್ಯಂ ಚ ಯದ್ಧಂತಿ ತನ್ನ ಹಂತಿ ಹಿ ಕಃ ಪುಮಾನ್ ॥ ೪೯೬ ॥**

**ಅರ್ಥ–** ಯತ್= ಯಾವ ಐಕ್ಯವು, ಬೋಧ್ಯತ್ವಂ= ಪ್ರತಿಪಾದ್ಯತ್ವವನ್ನು, ಬೋಧಕತ್ವಂ= ಪ್ರತಿಪಾದಕತ್ವವನ್ನು, ತಥಾ= ಹಾಗೆಯೇ, ಸಾಧ್ಯಸಾಧಕತಾಂ= ಸಾಧ್ಯತ್ವ ಮತ್ತು ಸಾಧಕತ್ವವನ್ನು, ಗುರುಂ= ಗುರುವನ್ನು, ಶಿಷ್ಯಂ ಚ= ಶಿಷ್ಯನನ್ನು, ಹಂತಿ= ನಾಶಪಡಿಸುತ್ತದೆಯೋ (ನಿರಾಕರಿಸುತ್ತದೆಯೋ), ತತ್= ಅಂತಹ ಐಕ್ಯವನ್ನು, ಕಃ ಪುಮಾನ್= ಯಾವ ಪುರುಷನು, ನ ಹಂತಿ= ನಿರಾಕರಿಸುವುದಿಲ್ಲ?

**ಅನುವಾದ–** ಶಾಸ್ತ್ರವು ಬೋಧಕ. ತತ್ವವು ಬೋಧ್ಯ. ಮುಮುಕ್ಷುವು ಸಾಧಕ. ಮೋಕ್ಷವು ಸಾಧ್ಯ. ಉಪದೇಶಿಸುವವನು ಗುರು, ಉಪದೇಶವನ್ನು ಪಡೆಯುವವನು ಶಿಷ್ಯ. ಈ ವ್ಯವಸ್ಥೆಯು ಬೋಧಕ-ಬೋಧ್ಯಗಳಿಗೆ, ಸಾಧಕ-ಸಾಧ್ಯಗಳಿಗೆ, ಗುರು-ಶಿಷ್ಯರಿಗೆ ಭೇದವಿದ್ದರೆ ಮಾತ್ರ ಇರಲು ಸಾಧ್ಯ. ಐಕ್ಯವು ಈ ವ್ಯವಸ್ಥೆಯನ್ನು ನಾಶಮಾಡುತ್ತದೆ. ಆದ್ದರಿಂದ ಯಾವ ಪ್ರಾಜ್ಞನು ಈ ಐಕ್ಯವನ್ನು ನಿರಾಕರಿಸುವುದಿಲ್ಲ!

**ಭಾವವಿಲಾಸಿನೀ–** ಕಿಂಚ ತತ್ವಜ್ಞಾನೋಪಯೋಗಿನೋ ಗುರುಶಿಷ್ಯಭಾವಸ್ಯ ಶಾಸ್ತ್ರತತ್ವಯೋ-ರ್ಬೋಧ್ಯಬೋಧಕಭಾವಸ್ಯ ಚ ಫಲತ್ವೋಪಯೋಗಿನೋರ್ಮುಮುಕ್ಷುಮೋಕ್ಷಯೋಃ ಸಾಧ್ಯಸಾಧಕಭಾವಸ್ಯ ಸರ್ವಾಪೇಕ್ಷಿತವರ್ಣಾಶ್ರಮವಿಭೇದಸ್ಯ ಶೂನ್ಯಬ್ರಹ್ಮವಿಭೇದಸ್ಯ ಚ ಘಾತಕ-ಮೈಕ್ಯಮೇವ ಪ್ರೇಕ್ಷಾವದ್ಭಿರುಪೇಕ್ಷ್ಯಮಿತ್ಯಾಹ– **ಬೋಧ್ಯತ್ವಮಿತ್ಯಾದಿನಾ** ॥ ಬೋಧ್ಯತ್ವಂ ಪ್ರತಿ-ಪಾದ್ಯತ್ವಂ ಬೋಧಕತ್ವಂ ಪ್ರತಿಪಾದಕತ್ವಮ್ । ಸಾಧ್ಯೋ ಮೋಕ್ಷಃ ಸಾಧಕೋ ಮುಮುಕ್ಷುಃ । ಯತ್ ಐಕ್ಯಂ ಹಂತಿ ತದಿತಿ ಸಂಬಂಧಃ ॥ ೪೯೬ ॥

ಈ ಭೇದವು ಪಾರಮಾರ್ಥಿಕವೇ ಆಗಿದೆ ಎಂದು ಪ್ರತಿಪಾದಿಸುತ್ತಾರೆ -

**ವರ್ಣಾಶ್ರಮವಿಭೇದಸ್ಯ ಶೂನ್ಯಾಶೂನ್ಯವ್ಯವಸ್ಥಿತೇಃ ।**
**ಸಾಧಕಃ ಪರಮಾರ್ಥೋಽರ್ಥೋ ಬಾಧಕೋಽರ್ಥಸ್ತು ಬಾಧ್ಯತೇ ॥ ೪೯೭ ॥**

**ಅರ್ಥ–** ವರ್ಣಾಶ್ರಮವಿಭೇದಸ್ಯ= ನಾಲ್ಕು ವರ್ಣ ಮತ್ತು ಆಶ್ರಮಗಳ ಭೇದಕ್ಕೆ, ಮತ್ತು, ಶೂನ್ಯಾಶೂನ್ಯವ್ಯವಸ್ಥಿತೇಃ= ಶೂನ್ಯ ಮತ್ತು ಅಶೂನ್ಯದ (ಬ್ರಹ್ಮನ) ವ್ಯವಸ್ಥೆಗೆ, ಸಾಧಕಃ ಅರ್ಥಃ= ಸಾಧಕವಾದ ಪದಾರ್ಥವು (ಭೇದವು), ಪರಮಾರ್ಥಃ= ಪಾರಮಾರ್ಥಿಕ ಸತ್ಯ. ಬಾಧಕಃ ಅರ್ಥಃ= ಈ ವ್ಯವಸ್ಥೆಗೆ ಬಾಧಕವಾದ ಪದಾರ್ಥವು (ಐಕ್ಯವು), ಬಾಧ್ಯತೇ= ನಿರಾಕೃತವಾಗುತ್ತದೆ.

**ಅನುವಾದ–** ಜಗತ್ತಿನಲ್ಲಿ ಬ್ರಾಹ್ಮಣಾದಿ ವರ್ಣಗಳ ಹಾಗೂ ಬ್ರಹ್ಮಚರ್ಯ ಮೊದಲಾದ ಆಶ್ರಮಗಳ ಭೇದವು ಸಿದ್ಧವಾಗಿದೆ. ಹಾಗೆಯೇ ಬೌದ್ಧರ ಶೂನ್ಯತತ್ವ ಮತ್ತು ಅದ್ವೈತ ದರ್ಶನದ ಬ್ರಹ್ಮನಿಗೆ ಭೇದವಿದೆ. ಈ ವ್ಯವಸ್ಥೆಗೆ ಸಾಧಕವಾದ ಭೇದವು ಪಾರಮಾರ್ಥಿಕವೇ ಆಗಬೇಕು. ಬಾಧಕವಾದ ಐಕ್ಯವನ್ನು ಈ ಜಗತ್ತಿನ ವ್ಯವಸ್ಥೆಯೇ ನಿರಾಕರಿಸುತ್ತದೆ.

**ಭಾವವಿಲಾಸಿನೀ–** ಅಶೂನ್ಯಂ ಬ್ರಹ್ಮ। ತತಃ ಕಿಮಿತ್ಯತ ಆಹ – **ಸಾಧಕ ಇತಿ** ॥ ಸಾಧಕಃ ಸಕಲಾರ್ಥ-ಕ್ರಿಯಾಕಾರಿರ್ಭೇದಃ । ಬಾಧಕಃಸಕಲವ್ಯವಹಾರವಿರೋಧ್ಯಭೇದಃ । ಸಾಧಕ ಇತ್ಯುಪಲಕ್ಷಣಮ್ । ವಿದ್ಯಯಾ ಹ್ಯವಿದ್ಯಾನಿವೃತ್ತಿಃ ಸಾಧ್ಯಾ । ಸಾಧ್ಯಸಾಧನಭಾವಶ್ಚ ಭೇದಘಟಿತ ಇತಿ ಮುಕ್ತಿಕಾಲೀನ ಇತ್ಯಪಿ ದ್ರಷ್ಟವ್ಯಮ್ ॥ ೪೯೭ ॥

**ವಿವರಣೆ–** ಅಶೂನ್ಯ ಎಂದರೆ ಶೂನ್ಯಭಿನ್ನವಾದ ಬ್ರಹ್ಮ. ಸಾಧ್ಯಸಾಧನ ಭಾವದಲ್ಲಿ ಭೇದವು ಅಡಕವಾಗಿದೆ. ಅದು ಮುಕ್ತಿಯಲ್ಲಿಯೂ ಇರುತ್ತದೆ.

ಇನ್ನೊಂದು ಕಾರಣದಿಂದಲೂ ಐಕ್ಯವಾದವು ದುಷ್ಟವಾಗಿದೆ ಎಂದು ಹೇಳುತ್ತಿದ್ದಾರೆ -

**ಯದಿ ಸರ್ವೈಕ್ಯಮರ್ಥೋ ನ ವಾಕ್ಯಂ ಸ್ಯಾತ್ತರ್ಹ್ಯನರ್ಥಕಮ್ ।**
**ಗೌಣಾರ್ಥಾನುಸೃತೌ ವಿಷ್ಣೋಃ ಸ್ವಾತಂತ್ರ್ಯಾಖ್ಯಗುಣಂ ವದೇತ್ ॥ ೪೯೮ ॥**

**ಅರ್ಥ–** (ಪುರುಷ ಏವೇದಂ ಸರ್ವಮ್' - ಈ ವಾಕ್ಯಕ್ಕೆ) ಸರ್ವೈಕ್ಯಮ್= ಸರ್ವ ಪದಾರ್ಥಾಭೇದವು, ಯದಿ ಅರ್ಥಃ ನ= ಅರ್ಥವಲ್ಲದಿದ್ದರೆ, ವಾಕ್ಯಂ= ವಾಕ್ಯವು, ಅನರ್ಥಕಂ ಸ್ಯಾತ್= ಮುಖ್ಯಾರ್ಥರಹಿತ ಅಥವಾ ಅಮುಖ್ಯಾರ್ಥವುಳ್ಳದ್ದು ಆದೀತು. ಗೌಣಾರ್ಥಾನು-ಸೃತೌ= ಅಮುಖ್ಯಾರ್ಥವನ್ನೇ ಅನುಸರಿಸಿದರೆ (ಹೇಳಿದರೆ), ವಿಷ್ಣೋಃ= ವಿಷ್ಣುವಿನ, ಸ್ವಾತಂತ್ರ್ಯಾಖ್ಯ ಗುಣಮ್= ಸ್ವಾತಂತ್ರ್ಯ ಎಂಬ ಗುಣವನ್ನು, ವದೇತ್= ಹೇಳಬೇಕು.

**ಅನುವಾದ–** 'ಪುರುಷ ಏವೇದಂ ಸರ್ವಮ್' - ಈ ವಾಕ್ಯಕ್ಕೆ ಸರ್ವ ಪದಾರ್ಥಗಳ ಏಕತ್ವವು ಅರ್ಥವಲ್ಲದಿದ್ದರೆ ವಾಕ್ಯವು ಮುಖ್ಯಾರ್ಥರಹಿತವಾದೀತು. ಇದಲ್ಲದೆ ಅಮುಖ್ಯಾರ್ಥವನ್ನೇ ಹೇಳುವುದಾದರೆ ('ಸರ್ವಮ್ ಪುರುಷ ಏವ' = ಎಲ್ಲವೂ ಪುರುಷಾಧೀನ' ಎಂದು ಅಮುಖ್ಯಾರ್ಥವನ್ನು ಹೇಳಿ, ಈ ಮೂಲಕ) ವಿಷ್ಣುವಿನ ಸ್ವಾತಂತ್ರ್ಯ ಎಂಬ ಗುಣವನ್ನು ಹೇಳಬೇಕು.

**ಭಾವವಿಲಾಸಿನೀ–** ದೋಷಾಂತರಂ ಚಾಹ – **ಯದೀತಿ** ॥ ಅರ್ಥಃ ಪುರುಷ ಏವೇದಂ ಸರ್ವಮಿತಿ ವಾಕ್ಯಾರ್ಥಃ । ಅನರ್ಥಕಂ ಮುಖ್ಯಾರ್ಥವಿಧುರಮ್ । ಗೌಣಾರ್ಥಾನುಸೃತೌ ಮುಖ್ಯಾರ್ಥ-ಮಭೇದಂ ವಿಹಾಯ ಪುರುಷವ್ಯತಿರೇಕೇಣಾಸತ್ತ್ವಮಿತ್ಯಾದ್ಯಮುಖ್ಯಾರ್ಥಾನುಸರಣೇ । ಅಮುಖ್ಯತ್ವಾವಿಶೇಷಾತ್ ರಾಜಾ ರಾಷ್ಟ್ರಮಿತಿವತ್ಪುರುಷಾಧೀನಂ ಸರ್ವಮಿತ್ಯರ್ಥಸ್ಯೈವ

ಪೂರ್ವೋತ್ತರಾವಿರುದ್ಧತ್ವೇನ ವಕ್ತುಂ ಶಕ್ಯತ್ವಾತ್ ವಿಷ್ಣೋಃ ಸ್ವಾತಂತ್ರ್ಯಾಖ್ಯಗುಣಂ ವದೇದಿತಿ ಯೋಜನಾ ॥ ೪೯೮ ॥

**ವಿವರಣೆ–** (1) 'ಪುರುಷ ಏವೇದಂ ಸರ್ವಮ್' - ಈ ವಾಕ್ಯಕ್ಕೆ ಸರ್ವಾಭೇದವು ಮುಖ್ಯಾರ್ಥ. ಈ ಅರ್ಥವನ್ನೇ ಗ್ರಹಿಸಿದರೆ ಸಂಭವಿಸುವ ಅಸಂಗತಿ ಮತ್ತು ಅನರ್ಥಗಳನ್ನು 493, 495, 496, 497 ಶ್ಲೋಕಗಳಲ್ಲಿ ಹೇಳಲಾಗಿದೆ. ಇದನ್ನು ಗಮನಿಸಿ ಈ ವಾಕ್ಯದ ಮುಖ್ಯಾರ್ಥವನ್ನು ಗ್ರಹಿಸುವುದಿಲ್ಲ ಎಂದು ತೀರ್ಮಾನಿಸಿದರೆ ವಾಕ್ಯದ ಮುಖ್ಯಾರ್ಥ ತ್ಯಾಗ ಮತ್ತು ಅಮುಖ್ಯಾರ್ಥ ಸ್ವೀಕಾರ ಎಂಬ ದೋಷಗಳಿಗೆ ಒಳಗಾಗಬೇಕಾಗುತ್ತದೆ.

(2) ಅಮುಖ್ಯಾರ್ಥ ಸ್ವೀಕಾರವು ಅನಿವಾರ್ಯವಾದರೆ, 'ಇದಂ ಸರ್ವಂ ಪುರುಷ ಏವ' ಎಂದರೆ 'ಇದೆಲ್ಲವೂ ಪುರುಷಾಧೀನ' - ಈ ಅಮುಖ್ಯಾರ್ಥವನ್ನು ಸ್ವೀಕರಿಸಬೇಕು. ಇದರಿಂದ ವಿಷ್ಣುವಿನ ಸ್ವಾತಂತ್ರ್ಯ ಎಂಬ ಗುಣದ ಅನುಸಂಧಾನವಾಗುತ್ತದೆ. ಇದು ಪೂರ್ವಾಪರಾ ವಿರುದ್ಧವಾದ ಅಮುಖ್ಯಾರ್ಥ.

ಅದ್ವೈತ ಚಿಂತಕರು ಹೇಳುವಂತೆ 'ಪುರುಷನನ್ನು ಬಿಟ್ಟು ಬೇರೆ ಯಾವುದೂ ಇಲ್ಲ' ಎಂಬ ಅಮುಖ್ಯಾರ್ಥವನ್ನು ಸ್ವೀಕರಿಸಬಾರದು. ಇದು ಪೂರ್ವಾಪರ ವಿರುದ್ಧವಾದ ಅಮುಖ್ಯಾರ್ಥ.

**ಸಂಕೋಚೇಽಪ್ಯಲ್ಪಜಡತಃ ಸ್ಯಾದೈಕ್ಯಂ ನತು ಜೀವತಃ ।**
**ಇದಂ ಪದಾರ್ಥೋ ಹಿ ಜಡೋ ಯತ್ತೇ ಜೀವೋಽನಿದಂಪದಃ॥ ೪೯೯ ॥**

**ಅರ್ಥ–** ಸಂಕೋಚೇ ಅಪಿ= ಸರ್ವಶಬ್ದದ ಅರ್ಥವನ್ನು ಸಂಕೋಚ ಮಾಡಿದರೂ, ತೇ= ನಿನಗೆ, ಅಲ್ಪಜಡತಃ= ಜಗತ್ತಿನ ಏಕದೇಶವಾದ ಜಡದಿಂದ (ಪುರುಷನಿಗೆ), ಐಕ್ಯಂ= ಅಭೇದವು, ಸ್ಯಾತ್= ಸಿದ್ಧವಾಗಬಹುದು, ತು= ಆದರೆ, ಜೀವತಃ= ಜೀವಾತ್ಮಗಳಿಂದ, ನ ಸ್ಯಾತ್= ಸಿದ್ಧವಾಗಲಾರದು, ಯತ್= ಏಕೆಂದರೆ, ಇದಂಪದಾರ್ಥಃ= ಇದಂ ಪದದಿಂದ ವಾಚ್ಯವಾದುದು, ಜಡಃ= ಜಡವು ಮಾತ್ರ, ಜೀವಃ= ಜೀವಾತ್ಮರು, ಅನಿದಂಪದಃ= ಇದಂ ಪದವಾಚ್ಯರಲ್ಲ.

**ಅನುವಾದ–** ಸರ್ವಶಬ್ದದ ಅರ್ಥವನ್ನು ಸಂಕೋಚಿಸುವುದಾದರೆ 'ಸರ್ವ' ದ ಒಂದು ಭಾಗವಾದ ಜಡವಸ್ತುಗಳಿಂದ ಐಕ್ಯವು ಸಿದ್ಧವಾಗುತ್ತದೆ. ಏಕೆಂದರೆ ಜಡವು 'ಇದಂ' ಪದದ ಅರ್ಥ. ಜೀವವರ್ಗವು 'ಇದಂ' ಪದದ ಅರ್ಥವಲ್ಲ.

**ಭಾವವಿಲಾಸಿನೀ–** ನನು ಸರ್ವಶಬ್ದಸ್ಯ ಸಂಕೋಚಂ ಕೃತ್ವಾ ಚೈತನ್ಯೈಕ್ಯಮೇವೋಚ್ಯತೇ । ಅತೋ ನಾಮುಖ್ಯಾರ್ಥತೇತ್ಯತ ಆಹ – **ಸಂಕೋಚೇಽಪೀತಿ** ॥ ಗರ್ಹಾವಾಚಿನಾಽಪಿಪದೇನ ಸಂಕೋಚಸ್ಯೈವ ದೋಷತ್ವಂ ಸೂಚಯತಿ । ಅಸ್ಮಿನ್‌ಪಕ್ಷೇಽಭೇದಾಖ್ಯಮುಖ್ಯಾರ್ಥಲಾಭೇಽಪಿ

**ಸರ್ವಪದಸ್ಯ ಸಂಕೋಚೇನಾಮುಖ್ಯಾರ್ಥತಾಪರಿಹಾರಾತ್ । ದೋಷಾಂತರಂ ಚ ಸ್ಪಷ್ಟಮಾಹ – ಅಲ್ಪಜಡತ ಇತಿ ॥ ತತ್ರ ಹೇತುಮಾಹ – ಇದಂಪದಾರ್ಥ ಇತಿ ॥ ಯದ್ಯಸ್ಮಾತ್ ತೇ ಮತೇ ಜಡಃ ಜಡ ಏವೇದಂ ಪದಾರ್ಥಃ । ಜೀವಃ ಅನಿದಂಪದಃ ಅನಿದಮಿತಿ ಪದಂ ಯಸ್ಯೇತ್ಯನಿದಂಪದಃ । ತಸ್ಮಾದಲ್ಪಜಡತ ಇತಿ ಪೂರ್ವೇಣಾನ್ವಯಃ । ಸರ್ವಪದಸಂಕೋಚೇಽಪೀದಂಪದಮಹಿಮ್ನಾ ಪರಿದೃಶ್ಯಮಾನಾಲ್ಪಜಡತ ಏವೈಕ್ಯಂ ಸ್ಯಾತ್ । ನತು ತ್ವದಭಿಲಷಿತಜೀವೈಕ್ಯಮಿತಿ ಭಾವಃ ॥೪೯॥**

**ವಿವರಣೆ–**(1) ಪ್ರಶ್ನೆ: 'ಸರ್ವ' - ಎಂದರೆ 'ಎಲ್ಲ', ಎಂದರೆ ಸಕಲಚೇತನ- ಅಚೇತನಗಳು. ಇಷ್ಟು ಅರ್ಥದಲ್ಲಿ 'ಅಚೇತನ ಅಥವಾ ಚೇತನ ಭಾಗವನ್ನು ಬಿಟ್ಟು, ಒಂದನ್ನು ಮಾತ್ರ 'ಪುರುಷ ಏವೇದಂ ಸರ್ವಮ್' - ಈ ವಾಕ್ಯದಲ್ಲಿರುವ 'ಸರ್ವ' ಶಬ್ದದ ಅರ್ಥ ಎಂದು ಪರಿಗಣಿಸಿದರೆ, ಇದು ಸರ್ವಶಬ್ದದ ಅರ್ಥಸಂಕೋಚ. ಹೀಗೆ ಮಾಡಿದಾಗ ಮುಖ್ಯಾರ್ಥದ ಭಾಗಶಃ ತ್ಯಾಗವಾಗುತ್ತದೆ. ಅಮುಖ್ಯಾರ್ಥದ ಸ್ವೀಕಾರವಾಗುವುದಿಲ್ಲ?

ಉತ್ತರ : ಹೀಗೆ ಸಂಕೋಚವನ್ನು ಮಾಡುವುದಾದರೆ, 'ಸರ್ವಂ' ಪದದ ಜೊತೆಗೆ ಇರುವ 'ಇದಂ' ಪದದ ಅರ್ಥಕ್ಕೆ ಅನುಗುಣವಾಗಿ, ಚೇತನ ವರ್ಗವನ್ನು ಬಿಟ್ಟು ಅಚೇತನವರ್ಗವನ್ನು ಮಾತ್ರ ಗ್ರಹಿಸಿ ಪುರುಷ ಮತ್ತು ಅಚೇತನವರ್ಗದ ಅಭೇದವನ್ನು ಶ್ರುತಿಯು ಹೇಳುತ್ತಿದೆ ಎಂದು ವ್ಯಾಖ್ಯಾನಿಸಬೇಕಾಗುತ್ತದೆ. ಎದುರಿಗೆ ಕಾಣುವ ಪದಾರ್ಥಗಳನ್ನು 'ಇದಂ' ಪದದಿಂದ ಹೇಳಲಾಗುತ್ತದೆ. ಜಡ ವಸ್ತುಗಳೇ ಎದುರಿನಲ್ಲಿ ಕಾಣುತ್ತವೆ. ಆದ್ದರಿಂದ, ಅರ್ಥಸಂಕೋಚವನ್ನು ಮಾಡುವವರು 'ಇದಂ ಸರ್ವಂ' - ಈ ಪದಗಳನ್ನು 'ಈ ಅಚೇತನವರ್ಗ' ಎಂದು ವ್ಯಾಖ್ಯಾನಿಸಬೇಕು. ಆದ್ದರಿಂದ ಜೀವ-ಪುರುಷೈಕ್ಯವು ಈ ಶ್ರುತಿಯ ಅರ್ಥವಲ್ಲ.

(2) ಶ್ಲೋಕದಲ್ಲಿರುವ 'ಅಪಿ' ಪದಕ್ಕೆ 'ನಿಂದೆ'ಯು ಅರ್ಥ. ಅಂದರೆ ಸರ್ವಶಬ್ದದ ಅರ್ಥಕ್ಕೆ ಸಂಕೋಚವನ್ನು ಮಾಡುವುದು ದೋಷ ಎಂದು ಅಭಿಪ್ರಾಯ.

ಅಭೇದಾರ್ಥಪಕ್ಷದಲ್ಲಿ ಇನ್ನಷ್ಟು ದೋಷ-

**ಜಡಾತ್ಮೈಕ್ಯಪ್ರಸಂಗೇನ ಮುಖ್ಯಾರ್ಥಸ್ತು ತವಾಪಿ ನ ।**
**ಯಾಚ್ಞಾಯಾಂ ತು ಪ್ರವೃತ್ತೇನ ಸದನ್ನಂ ಕಿಂ ನ ಯಾಚ್ಯತೇ ॥ ೪೯೦ ॥**

**ಅರ್ಥ–** ತವಾಪಿ= ನಿನ್ನ ಪಕ್ಷದಲ್ಲೂ, ಜಡಾತ್ಮೈಕ್ಯ ಪ್ರಸಂಗೇನ= ಜಡ ಮತ್ತು ಆತ್ಮನಿಗೆ ಐಕ್ಯಪ್ರಸಂಗದಿಂದಾಗಿ, ಮುಖ್ಯರ್ಥಸ್ತು= ಮುಖ್ಯಾರ್ಥವಾದರೂ, ನ= ಇರುವುದಿಲ್ಲ. ಯಾಚ್ಞಾಯಾಂ = ಭಿಕ್ಷೆಬೇಡಲು, ಪ್ರವೃತ್ತೇನ ತು= ಹೊರಟವನಿಂದ, ಸದನ್ನಂ = ಒಳ್ಳೆಯ ಅನ್ನವು, ಕಿಂ ನ ಯಾಚ್ಯತೇ = ಏಕೆ ಬೇಡಲ್ಪಡುವುದಿಲ್ಲ?

**ಅನುವಾದ–** 'ಪುರುಷ ಏವೇದಂ ಸರ್ವಮ್' - ಈ ವಾಕ್ಯದ ಮುಖ್ಯಾರ್ಥವು ನಿನಗೂ ಸಮ್ಮತವಲ್ಲ; ಸಮ್ಮತವಾದರೆ ಜಡಪದಾರ್ಥ ಮತ್ತು ಆತ್ಮ (ಪುರುಷ) ನಿಗೆ ಐಕ್ಯಪ್ರಸಂಗವು ಉಂಟಾಗುವುದರಿಂದ. ಬೇಡುವುದಕ್ಕೆ ತೊಡಗಿದವನು (ಅಮುಖ್ಯ ಅರ್ಥವನ್ನು ಗುರುತಿಸಲು ಹೊರಟವನು) ಒಳ್ಳೆಯ ಅನ್ನವನ್ನು ಏಕೆ ಬೇಡುವುದಿಲ್ಲ?

**ಭಾವವಿಲಾಸಿನೀ–** ಪುನರಪಿ ದೋಷಾಂತಹವಾಹ – **ಜಡಾತ್ಮೇತಿ** ।। ಮುಖ್ಯಾರ್ಥಃ ಅಸಂಕುಚಿತತ್ವೇನ ಸರ್ವಪದಮುಖ್ಯಾರ್ಥಃ ಜಡಾಜಡಸಕಲಪದಮುಖ್ಯಾರ್ಥಃ। ಯಾಚ್ಞಾಯಾಂ ಮುಖ್ಯವೃತ್ತ್ಯಸಂಭವೇನಾಮುಖ್ಯವೃತ್ತೇರಾಶ್ರಯಣೇ । ಸದನ್ನಂ ಪೂರ್ವೋತ್ತರವಾಕ್ಯಾ-ವಿಘಾತಕತ್ವೇನ ಸುಪಾಂ ಸುಲುಗಿತ್ಯನುಶಿಷ್ಟತ್ವೇನ ಚ ವಿಭಕ್ತ್ಯಂತರಾಶ್ರಯಣರೂಪಸದನ್ನಮ್ । ಪರೇಣ ಕ್ರಿಯಮಾಣಯಾಚ್ಞಾ ತು ಪೂರ್ವೋತ್ತರವಾಕ್ಯವಿಘಾತಕತ್ವೇನಾನುಶಿಷ್ಟತ್ವೇನ ಚ ಕದನ್ನಯಾಂಚೇತಿ ಭಾವಃ ।। ೪೯೦ ।।

**ವಿವರಣೆ–** (1) 'ಚೇತನ- ಅಚೇತನಗಳೆಲ್ಲವೂ ಪುರುಷನೇ, ಎಂದರೆ 'ಪುರುಷಾಭಿನ್ನ' - ಇದು 'ಪುರುಷ ಏವೇದಂ ಸರ್ವಮ್' - ಈ ವಾಕ್ಯದ ಮುಖ್ಯಾರ್ಥ.

ಈ ಅರ್ಥವನ್ನು ಅಂಗೀಕರಿಸಿದರೆ 'ಪುರುಷ' ಶಬ್ದದ ಅರ್ಥವಾದ ಆತ್ಮನಿಗೆ ಜಡ ಪದಾರ್ಥಗಳಿಂದ ಅಭೇದವನ್ನು ಹೇಳಿದಂತೆ. ಇದು ಅದ್ವೈತ ಚಿಂತಕರಿಗೆ ಸಮ್ಮತವಲ್ಲ. ಆದ್ದರಿಂದ ಅವರೂ ಈ ಶ್ರುತಿವಾಕ್ಯಕ್ಕೆ ಅಮುಖ್ಯಾರ್ಥವನ್ನು ಅಂಗೀಕರಿಸಬೇಕು.

(2) ಸಕಲ ಚೇತನ-ಅಚೇತನಗಳು 'ಸರ್ವ' ಶಬ್ದದ ಮುಖ್ಯಾರ್ಥ. 'ಸಕಲ ಚೇತನಗಳು' ಎಂದು ಅರ್ಥವನ್ನು ಸ್ವೀಕರಿಸಿದರೆ, ಸಕಲ ಚೇತನಗಳಿಗೆ ಮತ್ತು ಪುರುಷನಿಗೆ ಐಕ್ಯವು ಅವರಿಗೆ ಸಮ್ಮತ. ಇಲ್ಲಿ ಸರ್ವಶಬ್ದದ ಅರ್ಥದ ಸಂಕೋಚವನ್ನು ಮಾಡಲಾಗಿದೆ. ಈ ಅರ್ಥದಿಂದ ಶ್ರುತಿಯ ಪೂರ್ವವಾಕ್ಯ ಮತ್ತು ಉತ್ತರವಾಕ್ಯಗಳ ವಿರೋಧವು ಪರಿಹಾರವಾಗುವುದಿಲ್ಲ. ಅಥವಾ ಆ ವಾಕ್ಯಗಳ ಅರ್ಥಕ್ಕೆ ವಿಘಾತವಾಗುತ್ತದೆ. ಅರ್ಥಸಂಕೋಚಕ್ಕೆ ಅನುಕೂಲವಾದ ಯಾವ ವಿಧಿಯೂ ಇಲ್ಲ.

(3) 'ಪುರುಷ' ಶಬ್ದದ ವಿಭಕ್ತಿಯನ್ನು ವ್ಯತ್ಯಾಸ ಮಾಡಿ ವ್ಯಾಖ್ಯಾನಿಸಿದರೂ ಮೂಲದ ಬದಲಾವಣೆಯೇ. ಆದರೆ (1) ಈ ಬದಲಾವಣೆಯು ಪೂರ್ವ ಮತ್ತು ಉತ್ತರ ವಾಕ್ಯಗಳ ಅರ್ಥಕ್ಕೆ ವಿಘಾತವನ್ನು ಮಾಡುವುದಿಲ್ಲ (2) ಈ ಬದಲಾವಣೆಗೆ ಭಾಗವತ ಪುರಾಣದಲ್ಲಿರುವ ವೇದವ್ಯಾಸರ ಉಕ್ತಿಯ (2.6.17) ಸಮ್ಮತಿಯಿದೆ. ಪಾಣಿನಿಯ ಸಮ್ಮತಿಯೂ (7.1.39) ಇದೆ.

'ಸರ್ವ' ಶಬ್ದಕ್ಕೆ ಅರ್ಥಸಂಕೋಚವನ್ನು ಮಾಡುವ ಅನಿವಾರ್ಯತೆಯು ಇದ್ದಾಗ ವಿಭಕ್ತಿಯ ಬದಲಾವಣೆಯನ್ನು ಮಾಡುವುದು ಶಾಸ್ತ್ರೀಯ. ಆದ್ದರಿಂದ ಇದು ಸದನ್ನದ ಯಾಚನೆ.

'ಸಕಲ ಚೇತನಗಳು' ಎಂದು ಅರ್ಥವನ್ನು ಹೇಳುವುದು ಅಶಾಸ್ತ್ರೀಯ. ಆದ್ದರಿಂದ ಇದು ಕದನ್ನ (ಕೆಟ್ಟ ಅನ್ನ).

**ಈ ವಾಕ್ಯಕ್ಕೆ ಐಕ್ಯಾರ್ಥವನ್ನು ಸ್ವೀಕರಿಸಿದರೆ ಪುರಾಣವಿರೋಧವೂ ಇದೆ ಎಂದು ಹೇಳುತ್ತಿದ್ದಾರೆ -**

**ಕಿಂಚ ಪೌರುಷಸೂಕ್ತೇಽಸ್ಮಿನ್ ಸರ್ವಸ್ಯ ಪುರುಷಾತ್ಮತಾ ।**
**ಯದ್ಯರ್ಥಸ್ತರ್ಹಿ ಕಾರ್ಯಾರ್ಥಂ ವ್ಯರ್ಥಂ ತೇನ ತದರ್ಚನಮ್ ॥ ೪೯೧ ॥**

**ಅರ್ಥ–** ಕಿಂ ಚ = ಇಷ್ಟೇ ಅಲ್ಲದೆ, ಅಸ್ಮಿನ್ = ಈ, ಪೌರುಷಸೂಕ್ತೇ= ಪುರುಷಸೂಕ್ತದಲ್ಲಿ, ಸರ್ವಸ್ಯ= ಎಲ್ಲ ಜಗತ್ತಿಗೆ, ಪುರುಷಾತ್ಮತಾ= ಪುರುಷೈಕ್ಯವು, ಯದಿ ಅರ್ಥ= ಅರ್ಥವಾದರೆ, ತರ್ಹಿ= ಆಗ, ಕಾರ್ಯಾರ್ಥಂ= ಕಾರ್ಯಸಾಧನೆಗಾಗಿ (ಭೂಭಾರಹರಣಕ್ಕಾಗಿ), ತೇನ= ಆ ಪುರುಷಸೂಕ್ತದಿಂದ, ತದರ್ಚನಂ= ಸರ್ವೋತ್ತಮನಾದ ವಿಷ್ಣುವಿನ ಉಪಾಸನೆಯು, ವ್ಯರ್ಥ.

**ಅನುವಾದ–** ಬ್ರಹ್ಮಾದಿದೇವತೆಗಳು ಭೂಭಾರಹರಣಕ್ಕಾಗಿ ಪುರುಷಸೂಕ್ತವನ್ನು ಪಠಿಸಿ ಭಗವಂತನನ್ನು ಸ್ತುತಿಸುತ್ತಾರೆ. ಭೂಮಿಯ ಭಾರವನ್ನು ಪರಿಹರಿಸಲು ಬ್ರಹ್ಮಾದಿಗಳು ಪರಮಾತ್ಮನನ್ನು ಪುರುಷಸೂಕ್ತದಿಂದ ಸ್ತುತಿಸಬೇಕಾದರೆ ಜಡ (ಭೂಮಿ), ಜೀವ (ಬ್ರಹ್ಮಾದಿಗಳು) ಮತ್ತು ಪರಮಾತ್ಮನಲ್ಲಿ ಭೇದವು ಇರಲೇಬೇಕು. ಎಲ್ಲ ಜಗತ್ತೂ ಪರಮಾತ್ಮನಿಂದ ಅಭಿನ್ನವಾದರೆ ಹೀಗೆ ಸ್ತುತಿಸುವುದು ಪ್ರಯೋಜನರಹಿತ ಮತ್ತು ವಿರುದ್ಧ.

**ಭಾವವಿಲಾಸಿನೀ–** ಅಪಿ ಚ ಪುರುಷ ಏವೇದಂ ಸರ್ವಮಿತಿ ವಾಕ್ಯಸ್ಯ ಸಕಲಚೇತನಾನಾಂ ಪುರುಷ-ನಾಮಕನಾರಾಯಣಾಭಿನ್ನಾರ್ಥಕತ್ವೇ ಬ್ರಹ್ಮಾದಿಭಿಃಶ್ವೇತದ್ವೀಪಂ ಗತ್ವಾನೇನ ಸೂಕ್ತೇನ ವಿಷ್ಣೋ-ರುಪಾಸನಂ ಕೃತಮಿತಿ ಯಾ ಪೌರಾಣಿಕೀ ಪ್ರಕ್ರಿಯಾ ಸಾಪ್ಯನುಪಪನ್ನೇತ್ಯಾಹ – **ಕಿಂ ಚೇತಿ** ॥ ತೇನ ಪುರುಷಸೂಕ್ತೇನ । ತದರ್ಚನಂ ತಸ್ಯ ವಿಷ್ಣೋರರ್ಚನಮುಪಾಸನಂ ವ್ಯರ್ಥಂ ವಿರುದ್ಧಾರ್ಥಕಂ ವಿಗತಾರ್ಥಕಂ ಚ। ಬ್ರಹ್ಮಾದೀನಾಂ ಸ್ವೇಷಾಮಪಿ ಪುರುಷರೂಪತ್ವೇ ಭೇದಸಾಪೇಕ್ಷೋಪಾಸ್ಯೋ-ಪಾಸಕಭಾವಾಯೋಗಾತ್ । ಸ್ವೈರಪಿ ಭೂಭಾರಚ್ಛೇದಸ್ಯ ಕರ್ತುಂ ಶಕ್ಯತ್ವೇನಾನ್ಯಪ್ರಾರ್ಥನೇ ವೈಯರ್ಥ್ಯಾಚ್ಚೇತಿ ಭಾವಃ ॥ ೪೯೧ ॥

**ವಿವರಣೆ–** ತೇನ= ಆ ಪುರುಷಸೂಕ್ತದಿಂದ, ವ್ಯರ್ಥಂ= ವಿರುದ್ಧಾರ್ಥಕಂ, ವಿಗತಾರ್ಥಕಂ ಚ= ಬ್ರಹ್ಮಾದಿಗಳೂ ಪುರುಷರಾದ್ದರಿಂದ ಅವರಿಗೆ ಉಪಾಸಕತ್ವವು ಬರಲು ಸಾಧ್ಯವಿಲ್ಲ. ಹಾಗೆಯೇ ತಮಗೇ ಭೂಭಾರಹರಣಸಾಮರ್ಥ್ಯವಿರುವಾಗ ಬೇರೆಯವರನ್ನು ಬೇಡುವುದು ವ್ಯರ್ಥ.

**ಕಾ ಭೂಃ ಕುತೋ ಭರಸ್ತಸ್ಯಾಃ ಕಃ ಸ್ವಯಂ ಕಶ್ಚ ಪೂರುಷಃ ।**
**ಏತಾವದಪಿ ಸೂಕ್ತಾರ್ಥಂ ಧ್ಯಾತಾ ಧಾತಾ ನ ವೇತ್ತಿ ಕಿಮ್ ॥ ೪೯೨ ॥**

**ಅರ್ಥ–** (ಪುರುಷನಿಗೂ ಜಗತ್ತಿಗೂ ಐಕ್ಯವಿರುವುದಾದರೆ), ಭೂಃ= ಭೂಮಿಯು, ಕಾ= ಯಾರು? ತಸ್ಯಾಃ= ಅವಳ, ಭರಃ= ಭಾರವು, ಕಃ= ಯಾವುದು? ಸ್ವಯಂ= ತಾನು (ಸ್ತೋತ್ರ ಮಾಡುವ ಬ್ರಹ್ಮನು), ಕಃ= ಯಾರು? ಪೂರುಷಃ= ಸ್ತುತ್ಯನಾದ ಪುರುಷನು, ಕಃ= ಯಾರು? ಸೂಕ್ತಾರ್ಥಂ= ಪುರುಷಸೂಕ್ತಾರ್ಥವನ್ನು, ಧ್ಯಾತಾ= ಚಿಂತಿಸುವ, ಧಾತಾ= ಚತುರ್ಮುಖಬ್ರಹ್ಮನು, ಏತಾವತ್ ಅಪಿ= ಇಷ್ಟು ವಿಷಯಗಳನ್ನಾದರೂ, ನ ವೇತ್ತಿ ಕಿಂ= ತಿಳಿದಿಲ್ಲವೇ?

**ಅನುವಾದ–** (ಪುರುಷನಿಗೂ ಜಗತ್ತಿಗೂ ಐಕ್ಯವಿರುವುದಾದರೆ) ಭೂಮಿಯು ಯಾರು? ಅವಳ ಭಾರವು ಯಾವುದು? ತಾನು (ಸ್ತೋತ್ರ ಮಾಡುವ ಬ್ರಹ್ಮನು) ಯಾರು? ಸ್ತುತ್ಯನಾದ ಪುರುಷನು ಯಾರು?- ಪುರುಷಸೂಕ್ತಾರ್ಥವನ್ನು ಚಿಂತಿಸುವ ಚತುರ್ಮುಖಬ್ರಹ್ಮನು ಇಷ್ಟು ವಿಷಯಗಳನ್ನೂ ತಿಳಿದಿಲ್ಲವೇ?

**ಭಾವವಿಲಾಸಿನೀ–** ಏತದೇವ ದರ್ಶಯತಿ– **ಕಾ ಭೂರಿತಿ** ॥ ಭೂಃ ಧರಾದೇವೀ । ಸ್ವಯಂ ಬ್ರಹ್ಮಾ- ಧ್ಯಾತಾ ಪುರುಷಸೂಕ್ತಾರ್ಥಧ್ಯಾನಕರ್ತಾ । ಧಾತಾ ಬ್ರಹ್ಮಾ । ಸೂಕ್ತಾರ್ಥಭೂತಂ ಏತಾವತ್ ಕಾ ಭೂಃ ಕುತೋ ಭರಃ ಕಃ ಸ್ವಯಂ ಕಶ್ಚ ಪುರುಷ ಇತ್ಯೇತಾವತ್ಪ್ರಮೇಯಂ ನ ವೇತ್ತಿ ಕಿಮಿತಿ ಸಂಬಂಧಃ ॥ ೪೯೨ ॥

**ವಿವರಣೆ–** ಚರಾಚರಪ್ರಪಂಚಕ್ಕೆ ಬ್ರಹ್ಮನಿಂದ ಐಕ್ಯವೇ ಈ ವಾಕ್ಯದ ಅಭಿಪ್ರಾಯವಾದರೆ, ಭೂಭಾರಹರಣಕ್ಕಾಗಿ ಚತ್ರುರ್ಮುಖಬ್ರಹ್ಮನು ಪರಮಾತ್ಮನನ್ನು ಪುರುಷಸೂಕ್ತದಿಂದ ಸ್ತುತಿಸುವುದು ಸರಿಯಾಗುವುದಿಲ್ಲ. ಎಲ್ಲವೂ ಬ್ರಹ್ಮನೇ ಆಗಿದ್ದರೆ ಭೂಮಿ ಯಾರು? ಅದಕ್ಕೆ ಉಂಟಾದ ಭಾರ ಎಂದರೆ ಯಾವುದು? ಧ್ಯಾನಮಾಡುವ ಚತುರ್ಮುಖಬ್ರಹ್ಮನು ಯಾರು? ಧ್ಯಾನವಿಷಯನಾದ ಪುರುಷನು ಯಾರು? ಇವುಗಳು ಇಲ್ಲವೇ ಇಲ್ಲ. ಪುರುಷಸೂಕ್ತಾರ್ಥವನ್ನು ಅನುಸಂಧಾನ ಮಾಡುವ ಚತುರ್ಮುಖ ಬ್ರಹ್ಮದೇವರಿಗೆ ಇಷ್ಟೂ ತಿಳಿದಿಲ್ಲವೇ?

ಅಭೇದಾರ್ಥವು ಸ್ವೀಕಾರಾರ್ಹವಲ್ಲ:-

**ಪುರುಷಾತ್ ಪುರುಷಸ್ಯೈವ ಭಯೇ ಪುರುಷಪೂಜನಮ್ ।**
**ಪುರುಷಃ ಕುರುತೇ ಕಸ್ಮಾತ್ತಸ್ಮಾದಸ್ಮನ್ಮತಂ ಸ್ಮರ ॥ ೪೯೩ ॥**

**ಅರ್ಥ–** ಪುರುಷಾತ್= ಪುರುಷನಿಂದ, ಪುರುಷಸ್ಯ ಏವ= ಪುರುಷನಿಗೇ, ಭಯೇ= ಹೆದರಿಕೆಯಾಗಲು, ಪುರುಷಃ= ಪುರುಷನು, ಪುರುಷಪೂಜನಂ= ಪುರುಷನ ಆರಾಧನೆಯನ್ನು, ಕಸ್ಮಾತ್= ಏಕೆ, ಕುರುತೇ= ಮಾಡುತ್ತಾನೆ? (ಮಾಡಲಾರ). ತಸ್ಮಾತ್=

ಆದ್ದರಿಂದ (ಸರ್ವೈಕ್ಯವು ಸಾಧ್ಯವಿಲ್ಲವಾದ್ದರಿಂದ), ಅಸ್ಮನ್ಮತಂ= ನಮ್ಮ ಅಭಿಪ್ರಾಯವನ್ನೇ, ಸ್ಮರ= ಚಿಂತಿಸು.

**ಅನುವಾದ–** ಪುರುಷನಿಂದ ಪುರುಷನಿಗೆ ಭಯವು ಉಂಟಾದಾಗ ಪುರುಷನು ಪುರುಷ ಪೂಜೆಯನ್ನು ಏಕೆ ಮಾಡುತ್ತಾನೆ? ಆದ್ದರಿಂದ ನಮ್ಮ ಮತವನ್ನೇ ಚಿಂತಿಸು.

**ಭಾವವಿಲಾಸಿನೀ–** ಕುತೋ ನ ವೇತ್ತೀತ್ಯತ ಆಹ – **ಪುರುಷಾದಿತಿ** ॥ ಪುರುಷಾದ್ದೈತ್ಯರೂಪ-ನಾರಾಯಣಾತ್ ಪುರುಷಸ್ಯೈವ ಧರಾರೂಪನಾರಾಯಣಸ್ಯೈವ ಪುರುಷಃ ಬ್ರಹ್ಮರೂಪ-ನಾರಾಯಣಃ ಪುರುಷಪೂಜನಂ ವಿಷ್ಣುರೂಪನಾರಾಯಣಪೂಜನಂ ಕಸ್ಮಾತ್‌ಕಾರಣಾತ್ ಕುರುತೇ ನ ಕುರ್ಯಾದೇವ । ಸರ್ವಸ್ಯ ಚೇತನವರ್ಗಸ್ಯ ನಾರಾಯಣರೂಪತ್ವೇ ಕಥಂ ಭುವೋ ಭಾರಃ ಕಥಂ ಚ ದೈತ್ಯಾನಾಂ ಭೂಭಾರಹೇತುತ್ವಂ ಕಥಂ ಚ ವಿಷ್ಣೋಃ ಪೂಜ್ಯತ್ವಂ ಬ್ರಹ್ಮಣಶ್ಚ ಪೂಜಕತ್ವಮ್ । ನ ಹಿ ಸ್ವಸ್ಯೈವ ಸ್ವಸ್ಮಾದ್ಭಾರೇ ಸತಿ ಸ್ವಯಮೇವ ಸ್ವಪೂಜನಂ ಕರೋತೀತಿ ಕೋಽಪಿ ಪ್ರೇಕ್ಷಾವನ್ಮನ್ಯತ ಇತಿ ಭಾವಃ ತಸ್ಮಾತ್‌ಪರೋದೀರಿತಾರ್ಥಸ್ಯಾತಿವಿರುದ್ಧತ್ವಾತ್ ॥ ೪೯೩ ॥

**ವಿವರಣೆ–** 'ಪುರುಷ ಏವೇದಂ ಸರ್ವಮ್' ಈ ವಾಕ್ಯಕ್ಕೆ ಪುರುಷನಿಗೆ ಜಗದಭೇದವು ಅರ್ಥವಾದರೆ ಪುರುಷನೇ ಭೂದೇವಿ, ಪುರುಷನೇ ದೈತ್ಯ, ಪುರುಷನೇ ಚತುರ್ಮುಖ ಬ್ರಹ್ಮ. ದೈತ್ಯರಿಂದ ಭೂಮಿಗೆ ಭಯ ಎಂದರೆ ಪುರುಷನಿಂದ ಪುರುಷನಿಗೆ ಭಯ. ಚತುರ್ಮುಖನಿಂದ ಪುರುಷನಿಗೆ ಪ್ರಾರ್ಥನೆ ಎಂದರೆ ಪುರುಷನಿಂದ ಪುರುಷನಿಗೆ ಪ್ರಾರ್ಥನೆ.

ತನ್ನಿಂದ ತನಗೆ ಭಯವಾದಾಗ ತನ್ನನ್ನೇ ಪ್ರಾರ್ಥಿಸುವುದುಂಟೇ? ವೇದವು ಇಂತಹ ಉಪಹಾಸಾಸ್ಪದವಾದ ವಿಷಯಗಳನ್ನು ಹೇಳುತ್ತದೆಯೇ?

**ವ್ಯಾವಹಾರಿಕಭೇದಾಚ್ಚೇತ್ ತರ್ಹಿ ಕಾರ್ಯಾನುರೋಧಿನಃ ।**
**ತಸ್ಯಾನುಕೂಲಮೇವಾರ್ಥಂ ವಕ್ತಿ ಸೂಕ್ತಂ ನ ವೈರಿಣಮ್ ॥ ೪೯೪ ॥**

**ಅರ್ಥ–** ವ್ಯಾವಹಾರಿಕಭೇದಾತ್ ಚೇತ್= ವ್ಯಾವಹಾರಿಕ ಭೇದದಿಂದ ಯುಕ್ತವಾಗುತ್ತದೆ ಎಂದು ಹೇಳುವುದಾದರೆ, ಕಾರ್ಯಾನುರೋಧಿನಃ= ವ್ಯವಹಾರಗಳಿಗೆ ಅನುಕೂಲವಾದ, ತಸ್ಯ= ಆ ಭೇದಕ್ಕೆ, ಅನುಕೂಲಮ್ ಏವಂ ಅರ್ಥಂ= ಅನುಕೂಲವಾದ ಅರ್ಥವನ್ನೇ, ಸೂಕ್ತಂ= ಪುರುಷಸೂಕ್ತವು, ವಕ್ತಿ= ಹೇಳುತ್ತದೆ, ವೈರಿಣಂ= ಪ್ರತಿಕೂಲವಾದ ಐಕ್ಯಾರ್ಥವನ್ನು ನ ವಕ್ತಿ= ಹೇಳುವುದಿಲ್ಲ.

**ಅನುವಾದ–** ದೈತ್ಯ, ಭೂದೇವಿ, ಚತುರ್ಮುಖಬ್ರಹ್ಮ, ಪ್ರಾರ್ಥನೆ ಇವುಗಳಿಗೆ ವ್ಯಾವಹಾರಿಕ ಭೇದವಿದೆ. ಈ ಭೇದದಿಂದ ಪುರಾಣದ ಉಕ್ತಿಯು ಉಪಪನ್ನ-ವಾಗುತ್ತದೆ? ಹೀಗಾದರೆ ಪ್ರಾರ್ಥನೆ ಎಂಬ ವ್ಯವಹಾರಕ್ಕೆ ಭೇದವು ಅನುಕೂಲ. ಈ ಭೇದವನ್ನೇ ಸೂಕ್ತವು ಹೇಳುತ್ತದೆ. ವ್ಯವಹಾರಕ್ಕೆ ಅನನುಕೂಲ ವಾದ ಅಭೇದವನ್ನು ಹೇಳುವುದಿಲ್ಲ.

**ಭಾವವಿಲಾಸಿನೀ–** ವ್ಯಾವಹಾರಿಕಭೇದಸ್ಯ ವಿದ್ಯಮಾನತ್ವಾದಿಯಂ ಸರ್ವಾಽಪಿ ವ್ಯವಸ್ಥಾ ಘಟತ ಇತಿ ಪರಹೃದಯಮುದ್ಘಾಟ್ಯದೂಷಯತಿ – **ವ್ಯಾವಹಾರಿಕ ಭೇದಾದಿತಿ** ॥ ಕಾರ್ಯಾನುರೋಧಿನಃ ಉಕ್ತವ್ಯವಸ್ಥಾಘಟಕಸ್ಯ ತಸ್ಯ ಭೇದಸ್ಯ। ಅನುಕೂಲಂ ಸಪ್ತಮೀವಿಭಕ್ತ್ಯಾಶ್ರಯಣೇನ ಭೇದಾನುಕೂಲ ಮಾಧಾರಾಧೇಯಭಾವರೂಪಮರ್ಥಮೇವ ವಕ್ತಿ । ವೈರಿಣಮುಕ್ತವ್ಯವಹಾರವಿರೋಧಿನಂ ಸರ್ವಚೇತನಾಭೇದಮ್ । ನ ಹಿ ಧನಿನಃ ಪ್ರಾರ್ಥನಾರ್ಥಂ ಗತೋ ದರಿದ್ರಃ ಅಹಮೇವ ಧನೀತಿ ಬ್ರೂತೇ ॥ ೪೯೪ ॥

**ವಿವರಣೆ–** (1) ಪುರುಷನು ಜಗತ್ತಿಗೆ ಆಧಾರ, ಜಗತ್ತು ಅವನ ಅಧೀನ- ಈ ಅರ್ಥವು ಭೇದಕ್ಕೆ ಅನುಕೂಲ.

(2) ಧನಿಕನಲ್ಲಿ ಬೇಡಲು ಹೋದ ದರಿದ್ರನು ತಾನೇ ಧನಿಕ ಎಂದು ಹೇಳುವುದಿಲ್ಲ. ಹಾಗೆಯೇ ಭೂಭಾರಹರಣಕ್ಕೆ ಭಗವಂತನನ್ನು ಪ್ರಾರ್ಥಿಸಲು ಹೋದ ಬ್ರಹ್ಮಾದಿಗಳು ತಮಗೂ ಬ್ರಹ್ಮನಿಗೂ ಐಕ್ಯವನ್ನು ತಿಳಿಯುವುದಿಲ್ಲ. ಆದ್ದರಿಂದ ಶ್ರುತಿಯು ಪುರುಷನಿಗೆ ಜಗದಭೇದವನ್ನು ಹೇಳುವುದಿಲ್ಲ.

**ಅಂತತಃ ಪರಮಾರ್ಥಶ್ಚ ಸ ಏವ ಸ್ಯಾದ್ಧಿ ಕಾರ್ಯಕೃತ್ ।**
**ಸರ್ವೈಕ್ಯಂ ಸರ್ವಕಾರ್ಯಾಣಾಂ ಭಂಜಕಂ ಕಸ್ಯ ರಂಜಕಮ್ ॥ ೪೯೫ ॥**

**ಅರ್ಥ–** ಅಂತತಃ= ಕೊನೆಗೆ, ಕಾರ್ಯಕೃತ್= ಕಾರ್ಯಕಾರಿಯಾದ, ಸ ಏವ= ಆ ಭೇದವೇ, ಪರಮಾರ್ಥಶ್ಚ ಸ್ಯಾದ್ ಹಿ= ಪರಮಾರ್ಥವೂ ಆಗುವುದು. ಸರ್ವಕಾರ್ಯಾಣಾಂ= ಸಕಲಕಾರ್ಯಗಳ, ಭಂಜಕಂ= ಭಂಗಕಾರಿಯಾದ (ವಿರೋಧಿಯಾದ), ಸರ್ವೈಕ್ಯಂ= ಸಕಲ ಪದಾರ್ಥಗಳ ಅಭೇದವು, ಕಸ್ಯ= ಯಾರಿಗೆ (ಯಾವ ಕೆಲಸಕ್ಕೆ), ರಂಜಕಮ್?= ಸಂತೋಷಕರ? (ಉಪಯೋಗಿ?)

**ಅನುವಾದ–** ಕೊನೆಗೆ (ಎಲ್ಲ ವಿಮರ್ಶೆಗಳ ಕೊನೆಗೆ) ಕಾರ್ಯಕಾರಿಯಾದ ಆ ಭೇದವೇ ಪಾರಮಾರ್ಥಿಕವೂ ಆಗುತ್ತದೆ. ಸರ್ವಕಾರ್ಯಗಳ ಭಂಜಕವಾದ (ವಿರೋಧಿಯಾದ) ಸರ್ವಾಭೇದವು ಯಾರಿಗೆ ಸಂತೋಷಕರ? (ಉಪಯೋಗಿ?)

**ಭಾವವಿಲಾಸಿನೀ–** ನನ್ವಸ್ತು ತರ್ಹಿ ಭೇದ ಏವಾಸ್ಮಿನ್‌ವಾಕ್ಯೇ ಪ್ರತಿಪಾದ್ಯೋಽರ್ಥಃ । ತಸ್ಯ ಪರಮಾರ್ಥತಾ ಕಥಮಿತ್ಯತ ಆಹ – **ಅಂತತ ಇತಿ** ॥ ಕಾರ್ಯಕೃತ್ ಅಪೇಕ್ಷಿತಸಕಲಾರ್ಥ ಕ್ರಿಯಾಕಾರೀ । ಸ ಏವ ಉಕ್ತಭೇದ ಏವ ಅಬಾಧ್ಯಾರ್ಥಃ । ಭಂಜಕಂ ವಿರೋಧಿ । ಕಸ್ಯ ಕಾರ್ಯಸ್ಯ ರಂಜಕಂ ನ ಕಸ್ಯಾಪಿ । ಅರ್ಥಕ್ರಿಯಾನುಪಯೋಗೀತ್ಯರ್ಥಃ । ಶ್ರುತ್ಯುಕ್ತಸ್ಯಾಸ್ಯೈವ ಭೇದಸ್ಯಾರ್ಥ-ಕ್ರಿಯಾಕಾರಿತ್ವಾತ್ ಅನ್ವಯೇನ ಬ್ರಹ್ಮವತ್ ವ್ಯತಿರೇಕೇಣ ಶುಕ್ತಿರೂಪ್ಯವಚ್ಚ ಪಾರಮಾರ್ಥಿಕತ್ವಮಪಿ ಸಿದ್ಧ್ಯೇತ್ । ಅರ್ಥಕ್ರಿಯಾನುಪಯೋಗಿನಸ್ತ್ವದಭಿಲಷಿತೈಕ್ಯಸ್ಯ ಚ ಶುಕ್ತಿರೂಪ್ಯವನ್ಮಿಥ್ಯಾತ್ವಂ ಚ

ಸಿದ್ಧ್ಯೇತ್ । ಅಬಾಧ್ಯತ್ವಯೋಗ್ಯಸ್ಯ ಬಾಧ್ಯತಾಂ ವದನ್‌ಬಾಧ್ಯತ್ವ ಯೋಗ್ಯಸ್ಯ ಚಾಬಾಧ್ಯತಾಂ ಚ ವದನ್ ಭವಾಂಶ್ಚ ವ್ಯಾಹತಭಾಷೀ ಭವೇದಿತಿ ಭಾವಃ ॥ ೪೯೫ ॥

**ವಿವರಣೆ**– ಭೇದವು ಅರ್ಥಕ್ರಿಯಾಕಾರಿ. ಯಾವುದು ಅರ್ಥಕ್ರಿಯಾಕಾರಿಯಾಗಿದೆಯೋ ಅದು ಪಾರಮಾರ್ಥಿಕ. ಬ್ರಹ್ಮನಂತೆ. ಯಾವುದು ಅರ್ಥಕ್ರಿಯಾಕಾರಿಯಲ್ಲವೋ ಅದು ಮಿಥ್ಯಾ. ಶುಕ್ತಿರೂಪ್ಯದಂತೆ. ಈ ಅನ್ವಯ- ವ್ಯತಿರೇಕ ವ್ಯಾಪ್ತಿಯಿಂದ ಭೇದವು ಪಾರಮಾರ್ಥಿಕವೆಂದು ಸಿದ್ಧವಾಗುತ್ತದೆ. ಪರನು ಅಂಗೀಕರಿಸಿದ ಐಕ್ಯವು ಅರ್ಥಕ್ರಿಯಾಕಾರಿಯಲ್ಲವಾದ್ದರಿಂದ ಅದು ಶುಕ್ತಿರೂಪ್ಯದಂತೆ ಮಿಥ್ಯಾ. ಯಾವುದು (ಭೇದವು) ಅಬಾಧ್ಯವೋ ಅದನ್ನು ಬಾಧ್ಯವೆಂದು ಹೇಳಿ, ಯಾವುದು ಬಾಧ್ಯವೋ (ಐಕ್ಯವು) ಅದನ್ನು ಅಬಾಧ್ಯವೆಂದು ಹೇಳಿ ಪರನು ವ್ಯಾಹತಭಾಷಿಯೆನಿಸುತ್ತಾನೆ.

**ಬೋಧ್ಯತ್ವಂ ಬೋಧಕತ್ವಂ ಚ ಸಾಧ್ಯಸಾಧಕತಾಂ ತಥಾ ।**
**ಗುರುಂ ಶಿಷ್ಯಂ ಚ ಯದ್ಧಂತಿ ತನ್ನ ಹಂತಿ ಹಿ ಕಃ ಪುಮಾನ್ ॥ ೪೯೬ ॥**

**ಅರ್ಥ**– ಯತ್= ಯಾವ ಐಕ್ಯವು, ಬೋಧ್ಯತ್ವಂ= ಪ್ರತಿಪಾದ್ಯತ್ವವನ್ನು, ಬೋಧಕತ್ವಂ= ಪ್ರತಿಪಾದಕತ್ವವನ್ನು, ತಥಾ= ಹಾಗೆಯೇ, ಸಾಧ್ಯಸಾಧಕತಾಂ= ಸಾಧ್ಯತ್ವ ಮತ್ತು ಸಾಧಕತ್ವವನ್ನು, ಗುರುಂ= ಗುರುವನ್ನು, ಶಿಷ್ಯಂ ಚ= ಶಿಷ್ಯನನ್ನು, ಹಂತಿ= ನಾಶ ಪಡಿಸುತ್ತದೆಯೋ (ನಿರಾಕರಿಸುತ್ತದೆಯೋ), ತತ್= ಅಂತಹ ಐಕ್ಯವನ್ನು, ಕಃ ಪುಮಾನ್= ಯಾವ ಪುರುಷನು, ನ ಹಂತಿ= ನಿರಾಕರಿಸುವುದಿಲ್ಲ?

**ಅನುವಾದ**– ಶಾಸ್ತ್ರವು ಬೋಧಕ. ತತ್ವವು ಬೋಧ್ಯ. ಮುಮುಕ್ಷುವು ಸಾಧಕ. ಮೋಕ್ಷವು ಸಾಧ್ಯ. ಉಪದೇಶಿಸುವವನು ಗುರು, ಉಪದೇಶವನ್ನು ಪಡೆಯುವವನು ಶಿಷ್ಯ. ಈ ವ್ಯವಸ್ಥೆಯು ಬೋಧಕ-ಬೋಧ್ಯಗಳಿಗೆ, ಸಾಧಕ-ಸಾಧ್ಯಗಳಿಗೆ, ಗುರು-ಶಿಷ್ಯರಿಗೆ ಭೇದವಿದ್ದರೆ ಮಾತ್ರ ಇರಲು ಸಾಧ್ಯ. ಐಕ್ಯವು ಈ ವ್ಯವಸ್ಥೆಯನ್ನು ನಾಶಮಾಡುತ್ತದೆ. ಆದ್ದರಿಂದ ಯಾವ ಪ್ರಾಜ್ಞನು ಈ ಐಕ್ಯವನ್ನು ನಿರಾಕರಿಸುವುದಿಲ್ಲ!

**ಭಾವವಿಲಾಸಿನೀ**– ಕಿಂಚ ತತ್ವಜ್ಞಾನೋಪಯೋಗಿನೋ ಗುರುಶಿಷ್ಯಭಾವಸ್ಯ ಶಾಸ್ತ್ರತತ್ವಯೋರ್ಬೋಧ್ಯಬೋಧಕಭಾವಸ್ಯ ಚ ಫಲತ್ವೋಪಯೋಗಿನೋರ್ಮುಮುಕ್ಷುಮೋಕ್ಷಯೋಃ ಸಾಧ್ಯಸಾಧಕಭಾವಸ್ಯ ಸರ್ವಾಪೇಕ್ಷಿತವರ್ಣಾಶ್ರಮವಿಭೇದಸ್ಯ ಶೂನ್ಯಬ್ರಹ್ಮವಿಭೇದಸ್ಯ ಚ ಘಾತಕಮೈಕ್ಯಮೇವ ಪ್ರೇಕ್ಷಾವದ್ಭಿರುಪೇಕ್ಷ್ಯಮಿತ್ಯಾಹ – **ಬೋಧ್ಯತ್ವಮಿತ್ಯಾದಿನಾ** ॥ ಬೋಧ್ಯತ್ವಂ ಪ್ರತಿಪಾದ್ಯತ್ವಂ ಬೋಧಕತ್ವಂ ಪ್ರತಿಪಾದಕತ್ವಮ್ । ಸಾಧ್ಯೋ ಮೋಕ್ಷಃ ಸಾಧಕೋ ಮುಮುಕ್ಷುಃ । ಯತ್ ಐಕ್ಯಂ ಹಂತಿ ತದಿತಿ ಸಂಬಂಧಃ ॥ ೪೯೬ ॥

ಈ ಭೇದವು ಪಾರಮಾರ್ಥಿಕವೇ ಆಗಿದೆ ಎಂದು ಪ್ರತಿಪಾದಿಸುತ್ತಾರೆ -

**ವರ್ಣಾಶ್ರಮವಿಭೇದಸ್ಯ ಶೂನ್ಯಾಶೂನ್ಯವ್ಯವಸ್ಥಿತೇಃ ।**
**ಸಾಧಕಃ ಪರಮಾರ್ಥೋಽರ್ಥೋ ಬಾಧಕೋಽರ್ಥಸ್ತು ಬಾಧ್ಯತೇ**
**॥ ೪೯೭ ॥**

**ಅರ್ಥ–** ವರ್ಣಾಶ್ರಮವಿಭೇದಸ್ಯ= ನಾಲ್ಕು ವರ್ಣ ಮತ್ತು ಆಶ್ರಮಗಳ ಭೇದಕ್ಕೆ, ಮತ್ತು, ಶೂನ್ಯಾಶೂನ್ಯವ್ಯವಸ್ಥಿತೇಃ= ಶೂನ್ಯ ಮತ್ತು ಅಶೂನ್ಯದ (ಬ್ರಹ್ಮನ) ವ್ಯವಸ್ಥೆಗೆ, ಸಾಧಕಃ ಅರ್ಥಃ= ಸಾಧಕವಾದ ಪದಾರ್ಥವು (ಭೇದವು), ಪರಮಾರ್ಥಃ= ಪಾರಮಾರ್ಥಿಕ ಸತ್ಯ. ಬಾಧಕಃ ಅರ್ಥಃ= ಈ ವ್ಯವಸ್ಥೆಗೆ ಬಾಧಕವಾದ ಪದಾರ್ಥವು (ಐಕ್ಯವು), ಬಾಧ್ಯತೇ= ನಿರಾಕೃತವಾಗುತ್ತದೆ.

**ಅನುವಾದ– ಜಗತ್ತಿನಲ್ಲಿ ಬ್ರಾಹ್ಮಣಾದಿ ವರ್ಣಗಳ ಹಾಗೂ ಬ್ರಹ್ಮಚರ್ಯ ಮೊದಲಾದ ಆಶ್ರಮಗಳ ಭೇದವು ಸಿದ್ಧವಾಗಿದೆ. ಹಾಗೆಯೇ ಬೌದ್ಧರ ಶೂನ್ಯತತ್ವ ಮತ್ತು ಅದ್ವೈತ ದರ್ಶನದ ಬ್ರಹ್ಮನಿಗೆ ಭೇದವಿದೆ. ಈ ವ್ಯವಸ್ಥೆಗೆ ಸಾಧಕವಾದ ಭೇದವು ಪಾರಮಾರ್ಥಿಕವೇ ಆಗಬೇಕು. ಬಾಧಕವಾದ ಐಕ್ಯವನ್ನು ಈ ಜಗತ್ತಿನ ವ್ಯವಸ್ಥೆಯೇ ನಿರಾಕರಿಸುತ್ತದೆ.**

**ಭಾವವಿಲಾಸಿನೀ–** ಅಶೂನ್ಯಂ ಬ್ರಹ್ಮ। ತತಃ ಕಿಮಿತ್ಯತ ಆಹ – **ಸಾಧಕ ಇತಿ** ॥ ಸಾಧಕಃ ಸಕಲಾರ್ಥ-ಕ್ರಿಯಾಕಾರಿಭೇದಃ । ಬಾಧಕಃಸಕಲವ್ಯವಹಾರವಿರೋಧ್ಯಭೇದಃ । ಸಾಧಕ ಇತ್ಯುಪಲಕ್ಷಣಮ್ । ವಿದ್ಯಯಾ ಹ್ಯವಿದ್ಯಾನಿವೃತ್ತಿಃ ಸಾಧ್ಯಾ । ಸಾಧ್ಯಸಾಧನಭಾವಶ್ಚ ಭೇದಘಟಿತ ಇತಿ ಮುಕ್ತಿಕಾಲೀನ ಇತ್ಯಪಿ ದ್ರಷ್ಟವ್ಯಮ್ ॥ ೪೯೭ ॥

**ವಿವರಣೆ–** ಅಶೂನ್ಯ ಎಂದರೆ ಶೂನ್ಯಭಿನ್ನವಾದ ಬ್ರಹ್ಮ. ಸಾಧ್ಯಸಾಧನ ಭಾವದಲ್ಲಿ ಭೇದವು ಅಡಕವಾಗಿದೆ. ಅದು ಮುಕ್ತಿಯಲ್ಲಿಯೂ ಇರುತ್ತದೆ.

ಇನ್ನೊಂದು ಕಾರಣದಿಂದಲೂ ಐಕ್ಯವಾದವು ದುಷ್ಟವಾಗಿದೆ ಎಂದು ಹೇಳುತ್ತಿದ್ದಾರೆ -

**ಯದಿ ಸರ್ವೈಕ್ಯಮರ್ಥೋ ನ ವಾಕ್ಯಂ ಸ್ಯಾತ್ತರ್ಹ್ಯನರ್ಥಕಮ್ ।**
**ಗೌಣಾರ್ಥಾನುಸೃತೌ ವಿಷ್ಣೋಃ ಸ್ವಾತಂತ್ರ್ಯಾಖ್ಯಗುಣಂ ವದೇತ್ ॥ ೪೯೮ ॥**

**ಅರ್ಥ–** (ಪುರುಷ ಏವೇದಂ ಸರ್ವಮ್' - ಈ ವಾಕ್ಯಕ್ಕೆ) ಸರ್ವೈಕ್ಯಮ್= ಸರ್ವ ಪದಾರ್ಥಾಭೇದವು, ಯದಿ ಅರ್ಥಃ ನ= ಅರ್ಥವಲ್ಲದಿದ್ದರೆ, ವಾಕ್ಯಂ= ವಾಕ್ಯವು, ಅನರ್ಥಕಂ ಸ್ಯಾತ್= ಮುಖ್ಯಾರ್ಥರಹಿತ ಅಥವಾ ಅಮುಖ್ಯಾರ್ಥವುಳ್ಳದ್ದು ಆದೀತು. ಗೌಣಾರ್ಥಾನುಸೃತೌ= ಅಮುಖ್ಯಾರ್ಥವನ್ನೇ ಅನುಸರಿಸಿದರೆ (ಹೇಳಿದರೆ), ವಿಷ್ಣೋಃ=

ವಿಷ್ಣುವಿನ, ಸ್ವಾತಂತ್ರ್ಯಾಖ್ಯ ಗುಣಮ್= ಸ್ವಾತಂತ್ರ್ಯ ಎಂಬ ಗುಣವನ್ನು, ವದೇತ್= ಹೇಳಬೇಕು.

**ಅನುವಾದ–** 'ಪುರುಷ ಏವೇದಂ ಸರ್ವಮ್' - ಈ ವಾಕ್ಯಕ್ಕೆ ಸರ್ವ ಪದಾರ್ಥಗಳ ಏಕತ್ವವು ಅರ್ಥವಲ್ಲದಿದ್ದರೆ ವಾಕ್ಯವು ಮುಖ್ಯಾರ್ಥರಹಿತವಾದೀತು. ಇದಲ್ಲದೆ ಅಮುಖ್ಯಾರ್ಥವನ್ನೇ ಹೇಳುವುದಾದರೆ ('ಸರ್ವಮ್ ಪುರುಷ ಏವ' = ಎಲ್ಲವೂ ಪುರುಷಾಧೀನ' ಎಂದು ಅಮುಖ್ಯಾರ್ಥವನ್ನು ಹೇಳಿ, ಈ ಮೂಲಕ) ವಿಷ್ಣುವಿನ ಸ್ವಾತಂತ್ರ್ಯ ಎಂಬ ಗುಣವನ್ನು ಹೇಳಬೇಕು.

**ಭಾವವಿಲಾಸಿನೀ– ದೋಷಾಂತರಂ ಚಾಹ – ಯದೀತಿ ॥** ಅರ್ಥಃ ಪುರುಷ ಏವೇದಂ ಸರ್ವಮಿತಿ ವಾಕ್ಯಾರ್ಥಃ । ಅನರ್ಥಕಂ ಮುಖ್ಯಾರ್ಥವಿಧುರಮ್ । ಗೌಣಾರ್ಥಾನುಸೃತೌ ಮುಖ್ಯಾರ್ಥಮಭೇದಂ ವಿಹಾಯ ಪುರುಷವ್ಯತಿರೇಕೇಣಾಸತ್ತ್ವಮಿತ್ಯಾದ್ಯಮುಖ್ಯಾರ್ಥಾನುಸರಣೇ । ಅಮುಖ್ಯತ್ವಾವಿಶೇಷಾತ್ ರಾಜಾ ರಾಷ್ಟ್ರಮಿತಿವತ್‌ಪುರುಷಾಧೀನಂ ಸರ್ವಮಿತ್ಯರ್ಥಸ್ಯೈವ ಪೂರ್ವೋತ್ತರಾವಿರುದ್ಧತ್ವೇನ ವಕ್ತುಂ ಶಕ್ಯತ್ವಾತ್ ವಿಷ್ಣೋಃ ಸ್ವಾತಂತ್ರ್ಯಾಖ್ಯಗುಣಂ ವದೇದಿತಿ ಯೋಜನಾ ॥ ೪೯೮ ॥

**ವಿವರಣೆ–** (1) 'ಪುರುಷ ಏವೇದಂ ಸರ್ವಮ್' - ಈ ವಾಕ್ಯಕ್ಕೆ ಸರ್ವಾಭೇದವು ಮುಖ್ಯಾರ್ಥ. ಈ ಅರ್ಥವನ್ನೇ ಗ್ರಹಿಸಿದರೆ ಸಂಭವಿಸುವ ಅಸಂಗತಿ ಮತ್ತು ಅನರ್ಥಗಳನ್ನು 493, 495, 496, 497 ಶ್ಲೋಕಗಳಲ್ಲಿ ಹೇಳಲಾಗಿದೆ. ಇದನ್ನು ಗಮನಿಸಿ ಈ ವಾಕ್ಯದ ಮುಖ್ಯಾರ್ಥವನ್ನು ಗ್ರಹಿಸುವುದಿಲ್ಲ ಎಂದು ತೀರ್ಮಾನಿಸಿದರೆ ವಾಕ್ಯದ ಮುಖ್ಯಾರ್ಥ ತ್ಯಾಗ ಮತ್ತು ಅಮುಖ್ಯಾರ್ಥ ಸ್ವೀಕಾರ ಎಂಬ ದೋಷಗಳಿಗೆ ಒಳಗಾಗಬೇಕಾಗುತ್ತದೆ.

(2) ಅಮುಖ್ಯಾರ್ಥ ಸ್ವೀಕಾರವು ಅನಿವಾರ್ಯವಾದರೆ, 'ಇದಂ ಸರ್ವಂ ಪುರುಷ ಏವ' ಎಂದರೆ 'ಇದೆಲ್ಲವೂ ಪುರುಷಾಧೀನ' - ಈ ಅಮುಖ್ಯಾರ್ಥವನ್ನು ಸ್ವೀಕರಿಸಬೇಕು. ಇದರಿಂದ ವಿಷ್ಣುವಿನ ಸ್ವಾತಂತ್ರ್ಯ ಎಂಬ ಗುಣದ ಅನುಸಂಧಾನವಾಗುತ್ತದೆ. ಇದು ಪೂರ್ವಾಪರಾ ವಿರುದ್ಧವಾದ ಅಮುಖ್ಯಾರ್ಥ.

ಅದ್ವೈತ ಚಿಂತಕರು ಹೇಳುವಂತೆ 'ಪುರುಷನನ್ನು ಬಿಟ್ಟು ಬೇರೆ ಯಾವುದೂ ಇಲ್ಲ' ಎಂಬ ಅಮುಖ್ಯಾರ್ಥವನ್ನು ಸ್ವೀಕರಿಸಬಾರದು. ಇದು ಪೂರ್ವಾಪರ ವಿರುದ್ಧವಾದ ಅಮುಖ್ಯಾರ್ಥ.

**ಸಂಕೋಚೇಽಪ್ಯಲ್ಪಜಡತಃ ಸ್ಯಾದೈಕ್ಯಂ ನತು ಜೀವತಃ ।**
**ಇದಂ ಪದಾರ್ಥೋ ಹಿ ಜಡೋ ಯತ್ತೇ ಜೀವೋಽನಿದಂಪದಃ**
**॥ ೪೯೯ ॥**

**ಅರ್ಥ–** ಸಂಕೋಚೇ ಅಪಿ= ಸರ್ವಶಬ್ದದ ಅರ್ಥವನ್ನು ಸಂಕೋಚ ಮಾಡಿದರೂ, ತೇ= ನಿನಗೆ, ಅಲ್ಪಜಡತಃ= ಜಗತ್ತಿನ ಏಕದೇಶವಾದ ಜಡದಿಂದ (ಪುರುಷನಿಗೆ), ಐಕ್ಯಂ= ಅಭೇದವು, ಸ್ಯಾತ್= ಸಿದ್ಧವಾಗಬಹುದು, ತು= ಆದರೆ, ಜೀವತಃ= ಜೀವಾತ್ಮಗಳಿಂದ, ನ ಸ್ಯಾತ್= ಸಿದ್ಧವಾಗಲಾರದು, ಯತ್= ಏಕೆಂದರೆ, ಇದಂಪದಾರ್ಥಃ= ಇದಂ ಪದದಿಂದ ವಾಚ್ಯವಾದುದು, ಜಡಃ= ಜಡವು ಮಾತ್ರ, ಜೀವಃ= ಜೀವಾತ್ಮರು, ಅನಿದಂಪದಃ= ಇದಂ ಪದವಾಚ್ಯರಲ್ಲ.

**ಅನುವಾದ–** ಸರ್ವಶಬ್ದದ ಅರ್ಥವನ್ನು ಸಂಕೋಚಿಸುವುದಾದರೆ 'ಸರ್ವ' ದ ಒಂದು ಭಾಗವಾದ ಜಡವಸ್ತುಗಳಿಂದ ಐಕ್ಯವು ಸಿದ್ಧವಾಗುತ್ತದೆ. ಏಕೆಂದರೆ ಜಡವು 'ಇದಂ' ಪದದ ಅರ್ಥ. ಜೀವವರ್ಗವು 'ಇದಂ' ಪದದ ಅರ್ಥವಲ್ಲ.

**ಭಾವವಿಲಾಸಿನೀ–** ನನು ಸರ್ವಶಬ್ದಸ್ಯ ಸಂಕೋಚಂ ಕೃತ್ವಾ ಚೈತನ್ಯೈಕ್ಯಮೇವೋಚ್ಯತೇ । ಅತೋ ನಾಮುಖ್ಯಾರ್ಥತೇತ್ಯತ ಆಹ – **ಸಂಕೋಚೇಽಪೀತಿ** ॥ ಗರ್ಹಾವಾಚಿನಾಽಪಿಪದೇನ ಸಂಕೋಚಸ್ಯೈವ ದೋಷತ್ವಂ ಸೂಚಯತಿ । ಅಸ್ಮಿನ್‌ಪಕ್ಷೇಽಭೇದಾಖ್ಯಮುಖ್ಯಾರ್ಥಲಾಭೇಽಪಿ ಸರ್ವಪದಸ್ಯ ಸಂಕೋಚೇನಾಮುಖ್ಯಾರ್ಥತಾಪರಿಹಾರಾತ್ । ದೋಷಾಂತರಂ ಚ ಸ್ಪಷ್ಟಮಾಹ – **ಅಲ್ಪಜಡತ ಇತಿ** ॥ ತತ್ರ ಹೇತುಮಾಹ– **ಇದಂಪದಾರ್ಥ ಇತಿ** ॥ ಯದ್ಯಸ್ಮಾತ್ ತೇ ಮತೇ ಜಡಃ ಜಡ ಏವೇದಂ ಪದಾರ್ಥಃ । ಜೀವಃ ಅನಿದಂಪದಃ ಅನಿದಮಿತಿ ಪದಂ ಯಸ್ಯೇತ್ಯನಿದಂಪದಃ । ತಸ್ಮಾದಲ್ಪಜಡತ ಇತಿ ಪೂರ್ವೇಣಾನ್ವಯಃ । ಸರ್ವಪದಸಂಕೋಚೇಽಪೀದಂಪದಮಹಿಮ್ನಾ ಪರಿದೃಶ್ಯಮಾನಾಲ್ಪಜಡತ ಏವೈಕ್ಯಂ ಸ್ಯಾತ್ । ನತು ತ್ವದಭಿಲಷಿತಜೀವೈಕ್ಯಮಿತಿ ಭಾವಃ ॥೪೯॥

**ವಿವರಣೆ–**(1) ಪ್ರಶ್ನೆ: 'ಸರ್ವ' - ಎಂದರೆ 'ಎಲ್ಲ', ಎಂದರೆ ಸಕಲಚೇತನ- ಅಚೇತನಗಳು. ಇಷ್ಟು ಅರ್ಥದಲ್ಲಿ 'ಅಚೇತನ ಅಥವಾ ಚೇತನ ಭಾಗವನ್ನು ಬಿಟ್ಟು, ಒಂದನ್ನು ಮಾತ್ರ **'ಪುರುಷ ಏವೇದಂ ಸರ್ವಮ್'** - ಈ ವಾಕ್ಯದಲ್ಲಿರುವ 'ಸರ್ವ' ಶಬ್ದದ ಅರ್ಥ ಎಂದು ಪರಿಗಣಿಸಿದರೆ, ಇದು ಸರ್ವಶಬ್ದದ ಅರ್ಥಸಂಕೋಚ. ಹೀಗೆ ಮಾಡಿದಾಗ ಮುಖ್ಯಾರ್ಥದ ಭಾಗಶಃ ತ್ಯಾಗವಾಗುತ್ತದೆ. ಅಮುಖ್ಯಾರ್ಥದ ಸ್ವೀಕಾರವಾಗುವುದಿಲ್ಲ?

ಉತ್ತರ : ಹೀಗೆ ಸಂಕೋಚವನ್ನು ಮಾಡುವುದಾದರೆ, 'ಸರ್ವಂ' ಪದದ ಜೊತೆಗೆ ಇರುವ 'ಇದಂ' ಪದದ ಅರ್ಥಕ್ಕೆ ಅನುಗುಣವಾಗಿ, ಚೇತನ ವರ್ಗವನ್ನು ಬಿಟ್ಟು ಅಚೇತನವರ್ಗವನ್ನು ಮಾತ್ರ ಗ್ರಹಿಸಿ ಪುರುಷ ಮತ್ತು ಅಚೇತನವರ್ಗದ ಅಭೇದವನ್ನು ಶ್ರುತಿಯು ಹೇಳುತ್ತಿದೆ ಎಂದು ವ್ಯಾಖ್ಯಾನಿಸಬೇಕಾಗುತ್ತದೆ. ಎದುರಿಗೆ ಕಾಣುವ ಪದಾರ್ಥಗಳನ್ನು 'ಇದಂ' ಪದದಿಂದ ಹೇಳಲಾಗುತ್ತದೆ. ಜಡ ವಸ್ತುಗಳೇ ಎದುರಿನಲ್ಲಿ ಕಾಣುತ್ತವೆ. ಆದ್ದರಿಂದ, ಅರ್ಥಸಂಕೋಚವನ್ನು ಮಾಡುವವರು 'ಇದಂ ಸರ್ವಂ' - ಈ ಪದಗಳನ್ನು 'ಈ ಅಚೇತನವರ್ಗ' ಎಂದು ವ್ಯಾಖ್ಯಾನಿಸಬೇಕು. ಆದ್ದರಿಂದ ಜೀವ-ಪುರುಷೈಕ್ಯವು ಈ ಶ್ರುತಿಯ ಅರ್ಥವಲ್ಲ.

(2) ಶ್ಲೋಕದಲ್ಲಿರುವ ಅಪಿಪದಕ್ಕೆ 'ನಿಂದೆ'ಯು ಅರ್ಥ. ಅಂದರೆ ಸರ್ವಶಬ್ದದ ಅರ್ಥಕ್ಕೆ ಸಂಕೋಚವನ್ನು ಮಾಡುವುದೇ ದೋಷ ಎಂದು ಅಭಿಪ್ರಾಯ.

**ತತ್ಪೂರ್ವಸ್ತೋತ್ತರಾರ್ಥಘ್ನಂ ಸ್ವೋಪಸ್ತಾತ್ರರ್ಥಘಾತಕಮ್ ।**
**ಅಯುಕ್ತಂ ಚ ಜಡಾದ್ಯೈಕ್ಯಮುಕ್ತಂ ಚೇತ್ ಸೂಕ್ತತೈವ ನ ॥ ೫೦೦ ॥**

**ಅರ್ಥ–** ತತ್= ಆದ್ದರಿಂದ, ಪೂರ್ವಸ್ತೋತ್ತರಾರ್ಥಘ್ನಂ= ತನ್ನ ಹಿಂದಿನ ಮತ್ತು ಮುಂದಿನ ಅರ್ಥಕ್ಕೆ ಘಾತಕವಾದ, ಸ್ವೋಪಸ್ತಾತ್ರರ್ಥಘಾತಕಂ= ತನ್ನಿಂದ (ಪುರುಷ-ಸೂಕ್ತದಿಂದ) ಸ್ತುತಿಸುವವರ ಪ್ರಯೋಜನಕ್ಕೆ ಘಾತಕವಾದ, ಚ= ಮತ್ತು, ಅಯುಕ್ತಂ= ಯುಕ್ತಿವಿರುದ್ಧವಾದ, ಜಡಾದ್ಯೈಕ್ಯಂ= ಜಡ-ಚೇತನಾತ್ಮಕ ಪ್ರಪಂಚದಿಂದ ಐಕ್ಯವು, ಉಕ್ತಂ ಚೇತ್= ಹೇಳಲ್ಪಟ್ಟರೆ, ಸೂಕ್ತತಾ ಏವ= ಸೂಕ್ತಿಯೇ, ನ= ಆಗಲಾರದು.

**ಅನುವಾದ–** ಆದ್ದರಿಂದ 'ಪುರುಷ ಏವೇದಂ ಸರ್ವಮ್'- ಈ ವಾಕ್ಯದ ಪೂರ್ವವಾಕ್ಯ ಮತ್ತು ಉತ್ತರವಾಕ್ಯಗಳ ಅರ್ಥಕ್ಕೆ ವಿರುದ್ಧವಾದ, ಪುರುಷಸೂಕ್ತದಿಂದ ಉಪಾಸನೆ ಮಾಡುವ ಚತುರ್ಮುಖಬ್ರಹ್ಮಾದಿ ದೇವತೆಗಳಿಗೆ ಫಲಪ್ರದವಲ್ಲದ ಮತ್ತು ಅನುಪಪನ್ನವಾದ ಜಡಚೇತನಗಳ ಐಕ್ಯವು ಈ ವಾಕ್ಯದಿಂದ ಹೇಳಲ್ಪಟ್ಟರೆ ಇದಕ್ಕೆ ಸೂಕ್ತತ್ವವೇ ಇಲ್ಲವಾಗುವುದು.

**ಭಾವವಿಲಾಸಿನೀ–** ಉಕ್ತಮರ್ಥಮುಪಸಂಹರತಿ - **ತದಿತಿ** ॥ ತತ್ತಸ್ಮಾತ್ । ಪೂರ್ವೋಕ್ತಪ್ರಕಾರಾತ್। ಪೂರ್ವಸ್ತೋತ್ತರಾರ್ಥಘ್ನಂ ಸ್ವಸ್ಮಾತ್ಪೂರ್ವೋಕ್ತಸಹಸ್ರಶೀರ್ಷತ್ವಾದ್ಯರ್ಥಾನಾಂ ಮುಕ್ತೇಶ-ತ್ವಾದ್ಯುತ್ತರಾರ್ಥಾನಾಂ ಚ ನಾಶಕಮ್ । ಸ್ವೋಪಸ್ತಾತ್ರರ್ಥಘಾತಕಂ ಸ್ವೇನೋಪಸ್ಥಾನಂ ಕುರ್ವಂತಃ ಸ್ವೋಪಸ್ಥಾತಾರೋ ಬ್ರಹ್ಮಾದ್ಯಾಃ। ತೇಷಾಮರ್ಥಸ್ಯ ಪ್ರಯೋಜನಸ್ಯ ಘಾತಕಮ್ । ಜಡಾದ್ಯೈಕ್ಯ-ಮಿದಂಪದಮಹಿಮ್ನಾ ಪ್ರಾಪ್ತಜಡಾದ್ಯೈಕ್ಯಮ್ । ಸುಷ್ಠೂಕ್ತಂ ವಚನಂ ಹಿ ಸೂಕ್ತಮ್ । ತಸ್ಯ ಭಾವಃಸೂಕ್ತತಾ । ಐಕ್ಯಾರ್ಥಕಥನೇ ಸೂಕ್ತಸ್ಯ ದುರುಕ್ತತೈವ ಸ್ಯಾದಿತಿ ಭಾವಃ ॥ ೫೦೦॥

**ವಿವರಣೆ–** ಸೂಕ್ತತಾ= ಸೂಕ್ತಿ= ಚೆನ್ನುಡಿ, ಪೂರ್ವೋತ್ತರ ವಿರುದ್ಧವೂ, ಉಪಾಸಕರಿಗೆ ಪ್ರತ್ಯವಾಯಕರವೂ ಆದ ಉಕ್ತಿಯು ಚೆನ್ನುಡಿಯಲ್ಲ.

**ವಿಶಿಷ್ಟಚಿದ್ಧಿ ಬಾಹುಲ್ಯಾತ್ ಸರ್ವಂ ಸ್ಯಾನ್ನ ತದೈಕ್ಯವತ್ ।**
**ಚಿನ್ಮಾತ್ರಮಬಹುತ್ವಾತ್ತೇ ನ ಸರ್ವಾಖ್ಯಂ ಯದೈಕ್ಯವತ್ ॥ ೫೦೧ ॥**

**ಅರ್ಥ–** ಹಿ = ಯಾವ ಕಾರಣದಿಂದ, ವಿಶಿಷ್ಟಚಿತ್ = ಉಪಾಧಿಯುಕ್ತವಾದ ಚೇತನವು, ಬಾಹುಲ್ಯಾತ್= ಅನಂತವಾಗಿರುವುದರಿಂದ, ಸರ್ವಂ ಸ್ಯಾತ್= ಸರ್ವಶಬ್ದವಾಚ್ಯ-ವಾಗಬಹುದು. ಆದರೆ, ತತ್= ಆ ವಿಶಿಷ್ಟಚೇತನರ ಸಮುದಾಯವು, ಐಕ್ಯವತ್ ನ= ಬ್ರಹ್ಮನಿಂದ ಐಕ್ಯವುಳ್ಳದ್ದಲ್ಲ (ಅದ್ವೈತದರ್ಶನವು ಶುದ್ಧಚಿತ್‌ಗಳಿಗೆ ಐಕ್ಯವನ್ನು ಹೇಳುತ್ತದೆ,

ಹೊರತು ಉಪಾಧಿವಿಶಿಷ್ಟ ಚೇತನರಿಗಲ್ಲ). ತೇ= ನಿಮ್ಮ ಮತದಲ್ಲಿ, ಯತ್= ಯಾವುದು, ಐಕ್ಯವತ್= ಐಕ್ಯವುಳ್ಳದ್ದೋ, ತತ್ ಚಿನ್ಮಾತ್ರಂ= ಆ ಶುದ್ಧಚೇತನವು, ಅಬಹುತ್ವಾತ್= ಒಂದೇ ಆಗಿರುವುದರಿಂದ, ಸರ್ವಾಖ್ಯಂ= ಸರ್ವಶಬ್ದವಾಚ್ಯವಾದದ್ದು, ನ= ಆಗಲಾರದು.

**ಅನುವಾದ–** **ಅದ್ವೈತದರ್ಶನದ ಪ್ರಕಾರ ಉಪಾಧಿವಿಶಿಷ್ಟಚಿತ್ ಜೀವ. ಇದರ ಸಂಖ್ಯೆ ಬಹು. ಆದ್ದರಿಂದ ಈ ಜೀವಸಮುದಾಯವು 'ಸರ್ವ' ಶಬ್ದದ ಅರ್ಥವಾಗಬಹುದು. ಆದರೆ ಈ ವಿಶಿಷ್ಟಚಿತ್ ಶುದ್ಧಚಿತ್ ಅಲ್ಲ, ಅಂದರೆ ವಿಶಿಷ್ಟಚಿತ್‌ಗೆ ಐಕ್ಯವಿಲ್ಲ. ಶುದ್ಧಚಿತ್ ಒಂದೇ (ಬಹು ಅಲ್ಲ). ಆದ್ದರಿಂದ ಅದು ಸರ್ವಶಬ್ದದ ಅರ್ಥ-ವಾಗಲಾರದು.**

**ಭಾವವಿಲಾಸಿನೀ–** ಇದಂಪದಮನಾದೃತ್ಯ ಸರ್ವಪದಸಂಕೋಚೇನ ಜೀವವಾಚಿತ್ವಾಂಗೀಕಾರೇಽಪಿ ದೂಷಣಮಾಹ – **ವಿಶಿಷ್ಟೇತಿ ॥** ಹಿ ಯಸ್ಮಾತ್ । ವಿಶಿಷ್ಟಚಿದಂತಃಕರಣಾದ್ಯುಪಾಧಿವಿಶಿಷ್ಟಚಿತ್ । ಬಾಹುಲ್ಯಾದ್ಬಹುಸಂಖ್ಯಾಕತ್ವಾತ್ । ಸರ್ವಂ ಸರ್ವಪದಾರ್ಥಃ । ಜಡಾತ್ಸರ್ವಪದಸ್ಯ ಸಂಕೋಚೇಽಪಿ ಬಹುಷ್ವೇವ ಸರ್ವಪದಪ್ರಯೋಗಃ ಕರ್ತವ್ಯಃ । ನತ್ವೇಕಸ್ಮಿನ್ । ತಚ್ಚ ವಿಶಿಷ್ಟ-ಚೈತನ್ಯಾತ್ಮಕಜೀವವಾಚಿತ್ವ ಏವ ಘಟತ ಇತಿ ಭಾವಃ । ತದ್ವಿಶಿಷ್ಟಚೈತನ್ಯಂ ಐಕ್ಯವನ್ನ । ವಿಶಿಷ್ಟ-ಚೈತನ್ಯೈಕ್ಯಸ್ಯ ಪರೇಣಾನಂಗೀಕಾರಾತ್ । ಯದವಿಶಿಷ್ಟಚೈತನ್ಯಮೈಕ್ಯವತ್ತಚ್ಚಿನ್ಮಾತ್ರಂ ಅಬಹುತ್ವಾ-ದೇಕತ್ವಾದ್ಭೇದಕೋಪಾಧ್ಯಭಾವೇ ಭೇದಾನಂಗೀಕಾರಾದಿತಿ ಭಾವಃ । ಸರ್ವಾಖ್ಯಂ ಸರ್ವಪದ-ಪ್ರತಿಪಾದ್ಯಂ ಸರ್ವಪದಾರ್ಥ ಇತಿ ಯಾವತ್ । ಯತ್ರ ಸರ್ವಪದಸ್ಯಸಂಭವಸ್ತತ್ರೈಕ್ಯಾಸಂಭವಃ । ಯತ್ರ ಚೈಕ್ಯಸ್ಯ ಸಂಭವಸ್ತತ್ರ ಸರ್ವಪದಾಸಂಭವಃ । ತತಶ್ಚೈಕಂ ಸಂಧಿತ್ಸತೋಽಪರಂ ಪ್ರಚ್ಯವತ ಇತಿ ನ್ಯಾಯಾಖ್ಯಪಂಕೇ ಪತಿತೋಽಸೀತಿ ಭಾವಃ ॥ ೫೦೧ ॥

**ವಿವರಣೆ–** ಪ್ರಶ್ನೆ : 'ಪುರುಷ ಏವೇದಂ ಸರ್ವಮ್' - ಈ ಶ್ರುತಿಯಲ್ಲಿರುವ 'ಇದಂ' ಪದವು ಜಡೈಕ್ಯವನ್ನೇ ತಿಳಿಸುತ್ತದೆ ಎಂದು ಹಿಂದೆ ಹೇಳಿದ್ದಾರೆ (499). 'ಇದಂ' ಪದವನ್ನು ಉಪೇಕ್ಷಿಸಿ 'ಸರ್ವಂ' ಪದಕ್ಕೆ 'ಜೀವ' ಎಂದಷ್ಟೇ ಅರ್ಥವನ್ನು ಹೇಳಿ. ಜೀವ-ಪುರುಷರ ಐಕ್ಯವನ್ನು ಶ್ರುತಿಯು ಹೇಳುತ್ತದೆ ಎಂದು ವ್ಯಾಖ್ಯಾನಿಸಬಹುದು?

ಉತ್ತರ : ಇಲ್ಲ. 'ಒಂದು' ಪದಾರ್ಥವನ್ನು ಸರ್ವಪದದಿಂದ ವ್ಯವಹರಿಸುವುದಿಲ್ಲ. ಬಹು ಪದಾರ್ಥಗಳೇ ಸರ್ವಪದದ ಅರ್ಥ. ಉಪಾಧಿವಿಶಿಷ್ಟವಾದ ಚಿತ್ ಜೀವ. ಇದರ ಸಂಖ್ಯೆ ಬಹು. ಆದ್ದರಿಂದ ವಿಶಿಷ್ಟಚಿತ್ ಸರ್ವಪದದ ಅರ್ಥ ಆಗಬಹುದು. ಈ ವಿಶಿಷ್ಟ ಚಿತ್‌ಗೆ ಪುರುಷೈಕ್ಯವನ್ನು ಅದ್ವೈತದರ್ಶನವು ಹೇಳುವುದಿಲ್ಲ. ಶುದ್ಧಚಿತ್ ಒಂದು. ಬಹು ಅಲ್ಲ. ಆದ್ದರಿಂದ ಇದು ಸರ್ವಪದದ ಅರ್ಥವಲ್ಲ. ಆದ್ದರಿಂದ ಸರ್ವಪದವನ್ನು ಸಮರ್ಪಕವಾಗಿ ವ್ಯಾಖ್ಯಾನಿಸಲಾಗುವುದಿಲ್ಲ. ಒಂದನ್ನು ಹೊಂದಿಸಿದರೆ ಇನ್ನೊಂದು ತಪ್ಪಿಹೋಗುತ್ತದೆ. ಆದ್ದರಿಂದ ಅದ್ವೈತವ್ಯಾಖ್ಯಾನವು ವಟುಕೌಪೀನ ನ್ಯಾಯಕ್ಕೆ ನಿದರ್ಶನ.

**ಅಥವೈಕ್ಯಪರಂ ವಾಕ್ಯಮೇತದಸ್ತು ನ ಮೇ ಭಯಮ್ ।**
**ತನ್ಮುಖ್ಯಾರ್ಥಂ ಚ ಯುಕ್ತಂ ಚ ಯಥಾ ಸ್ಯಾತ್ತಾಂ ಕಥಾಂ ಶೃಣು ॥ ೫೦೨ ॥**

**ಅರ್ಥ–** ಅಥವಾ= ಅಥವಾ, ಏತತ್ ವಾಕ್ಯಂ= ಈ 'ಪುರುಷ ಏವ ಇದಂ ಸರ್ವಮ್' ವೇದವಾಕ್ಯವು, ಐಕ್ಯಪರಂ= ಐಕ್ಯಪ್ರತಿಪಾದಕವು, ಅಸ್ತು= ಆಗಲಿ, ಮೇ= ನನಗೆ (ಭೇದವಾದಿಗೆ) ನ ಭಯಂ= ಹೆದರಿಕೆ ಇಲ್ಲ. ತನ್ಮುಖ್ಯಾರ್ಥಂ ಚ= ಆ ಐಕ್ಯವೇ ಮುಖ್ಯಾರ್ಥವಾಗಿವುಳ್ಳ ವಾಕ್ಯವೂ, ಯುಕ್ತಂ ಚ= ಯುಕ್ತವೂ, ಯಥಾ ಸ್ಯಾತ್= ಹೇಗೆ ಆಗುವುದೋ, ತಾಂ ಕಥಾಮ್= ಆ ವಿವರವನ್ನು, ಶೃಣು= ಕೇಳು.

**ಅನುವಾದ–** ಅಥವಾ 'ಪುರುಷ ಏವೇದಂ ಸರ್ವಮ್' ಈ ವಾಕ್ಯವು ಐಕ್ಯವನ್ನೇ ಪ್ರತಿಪಾದಿಸಲಿ. ನನಗೆ ಭಯವಿಲ್ಲ. ಈ ವಾಕ್ಯಕ್ಕೆ ಐಕ್ಯವೇ ಮುಖ್ಯಾರ್ಥವಾದರೂ, ಇದು ಹೇಗೆ ಯುಕ್ತವೇ ಆಗುತ್ತದೆ ಎಂಬ ವಿವರಣೆಯನ್ನು ಕೇಳು.

**ಭಾವವಿಲಾಸಿನೀ–** ಸ್ವಮತೇ ಪಕ್ಷಾಂತರಂ ಚಾಹ – **ಅಥವೇತಿ ॥** ಏತದ್ವಾಕ್ಯಮೈಕ್ಯಪರಮಸ್ತ್ವಿತಿ ಸಂಬಂಧಃ । ತದೈಕ್ಯಪರಂ ಪುರುಷ ಏವೇದಂ ಸರ್ವಮಿತಿ ವಾಕ್ಯಮ್ । ತಾಂ ಕಥಾಂ ಭಗವತ್ಯೇವ ಭೇದಶಂಕಾಮಾಪಾದ್ಯ ತನ್ನಿರಾಸಪರತಯಾ ಕಥ್ಯಮಾನಾಂ ಕಥಾಮ್ ॥ ೫೦೨ ॥

**ಅಸಂಖ್ಯದೇಹಿದೇಹೇಷು ಸೋಽತ್ಯತಿಷ್ಠದ್ ದಶಾಂಗುಲಮ್ ।**
**ಇತಿ ಪೂರ್ವಶ್ರುತೌ ಪುಂಸೋ ರೂಪಬಾಹುಲ್ಯಮೀರಿತಮ್ ॥ ೫೦೩ ॥**

**ಅರ್ಥ–'ಸಃ ಅತ್ಯತಿಷ್ಠದ್ ದಶಾಂಗುಲಮ್'** ಇತಿ= **'ಸಃ ಅತ್ಯತಿಷ್ಠದ್ ದಶಾಂಗುಲಮ್'** ಎಂಬ, ಪೂರ್ವಶ್ರುತೌ= ಹಿಂದಿನ ('ಪುರುಷ ಏವೇದಂ....' ಗಿಂತ) ಶ್ರುತಿಯಲ್ಲಿ, ಪುಂಸಃ= ಪುರುಷನಿಗೆ, ಅಸಂಖ್ಯದೇಹಿದೇಹೇಷು= ಅಸಂಖ್ಯದೇಹಧಾರಿಗಳ ದೇಹಗಳಲ್ಲಿ, ರೂಪಬಾಹುಲ್ಯಮ್= ಬಹಳ ರೂಪಗಳು, ಈರಿತಮ್= ಹೇಳಲ್ಪಟ್ಟಿವೆ.

**ಅನುವಾದ–** 'ಸಹಸ್ರಶೀರ್ಷಾ ಪುರುಷಃ.... ಸಹಸ್ರಪಾತ್' - ಈ ಶ್ರುತಿವಾಕ್ಯದಿಂದ ವರ್ಣಿಸಲ್ಪಟ್ಟ ಪುರುಷನು ಅಸಂಖ್ಯದೇಹಧಾರಿಜೀವಾತ್ಮರ ದೇಹಗಳಲ್ಲಿ ಆ ಜೀವಾತ್ಮರನ್ನು ಹತ್ತಾರುಪಟ್ಟು ಮೀರಿ ಇದ್ದಾನೆ ಎಂದು 'ಪುರುಷ ಏವೇದಂ ಸರ್ವಮ್' - ಈ ವಾಕ್ಯದ ಹಿಂದಿನ ಶ್ರುತಿವಾಕ್ಯವು ಹೇಳುತ್ತದೆ. ಇದರಿಂದ ಈ ಶ್ರುತಿಯು ಪುರುಷನಿಗೆ ಬಹಳ ರೂಪಗಳನ್ನು ಹೇಳುತ್ತದೆ.

**ಭಾವವಿಲಾಸಿನೀ–** ಪೂರ್ವಶ್ರುತೌ ಅತ್ಯತಿಷ್ಠದ್ದಶಾಂಗುಲಮಿತಿ ಶ್ರುತೌ । ಸಃ ಸಹಸ್ರಶೀರ್ಷತ್ವಾದಿನಾ ಪೂರ್ವೋಕ್ತಃ ಪುರುಷಃ । ಅಸಂಖ್ಯದೇಹಿದೇಹೇಷ್ವಿತಿ ಕೇಚಿತ್ಸ್ವದೇಹಾಂತರ್ಹೃದಯಾವಕಾಶೇ ಪ್ರಾದೇಶಮಾತ್ರಂ ಪುರುಷಂ ವಸಂತಮಿತಿ ಶ್ರುತಿಸಮಾಖ್ಯಯೋಪಾತ್ತಮ್ । ಅತ್ಯತಿಷ್ಠತ್

ಜೀವಾದತಿಶಯಿತತ್ವೇನಾತಿಷ್ಠದಿತಿ ಪುಂಸೋ ರೂಪಬಾಹುಲ್ಯಂ ರೂಪಾನಂತ್ಯಮೀರಿತಮಿತಿ ಸಂಬಂಧಃ । ತೇನ ತೇಷಾಂ ಭಗವದ್ರೂಪಾಣಾಮಾನಂತ್ಯಾತ್ ಸ್ಥಾನಭೇದಪ್ರಸಕ್ತಿರಿತಿ ಭಾವಃ ॥೫೦೩॥

**ವಿವರಣೆ–** (1) ಪುರುಷಸೂಕ್ತದ ಮೊದಲನೆಯ ವಾಕ್ಯವು 'ಪುರುಷ'ನಿಗೆ ರೂಪಬಾಹುಲ್ಯವನ್ನು ಹೇಳುತ್ತದೆ ಎಂದು ಸುಲಭವಾಗಿ ತಿಳಿಯುವುದಿಲ್ಲ.

'ಕೇಚಿತ್ ಸ್ವದೇಹಾಂತರ್ಹೃದಯಾವಕಾಶೇ ಪ್ರಾದೇಶಮಾತ್ರಂ ಪುರುಷಂ ವಸಂತಮ್' - ಈ ಭಾಗವತ ಪದ್ಯದಲ್ಲಿ (2.2.9) ಹೃದಯದಲ್ಲಿ ವಾಸಮಾಡುವ 'ಪುರುಷ'ನನ್ನು ವರ್ಣಿಸಲಾಗಿದೆ. ಈ ಪದ್ಯವು ಪುರುಷಸೂಕ್ತದ ಮೊದಲವಾಕ್ಯದ ಅರ್ಥಕ್ಕೆ ಸಂವಾದಿಯಾಗಿದೆ ಎಂಬ ಅಭಿಪ್ರಾಯದಿಂದ ಅಸಂಖ್ಯದೇಹಧಾರಿಗಳ ದೇಹಗಳಲ್ಲಿ 'ಪುರುಷ'ನು ಇದ್ದಾನೆ ಎಂದು ಪುರುಷಸೂಕ್ತದ ಮೊದಲವಾಕ್ಯದ ಅರ್ಥವನ್ನು ಗ್ರಹಿಸಲಾಗಿದೆ. ಹೀಗೆ ಗ್ರಹಿಸಿದಾಗ ಪುರುಷನಿಗೆ ರೂಪಬಾಹುಲ್ಯವು ಸಿದ್ಧವಾಗುತ್ತದೆ.

(2) ಬೇರೆ ಬೇರೆ ದೇಹಗಳಲ್ಲಿ ಇರುವ 'ಪುರುಷ'ನ ರೂಪಗಳೂ ಬೇರೆಬೇರೆಯೇ ಎಂಬ ಅಭಿಪ್ರಾಯಕ್ಕೆ ಅವಕಾಶವಿದೆ.

**ಪ್ರಾದೇಶಗಾತ್ರತೋಕ್ತ್ಯೈಷಾಂ ಪ್ರೋಕ್ತಾ ಮಧ್ಯಮಮಾನತಾ ।**
**ತತ್ತದಂಗುಲಿಮಾನಾನಾಂ ಪ್ರೋಕ್ತಾ ಚಾಲ್ಪಾಲ್ಪಮಾನತಾ ॥ ೫೦೪ ॥**

**ಅರ್ಥ–** ಏಷಾಂ = ಈ ಭಗವದ್ರೂಪಗಳಿಗೆ, ಪ್ರಾದೇಶಗಾತ್ರತೋಕ್ತ್ಯಾ= ಪ್ರಾದೇಶ (ಒಂದು ಗೇಣು) ಗಾತ್ರವನ್ನು ಹೇಳಿರುವುದರಿಂದ, ಮಧ್ಯಮಮಾನತಾ= ಮಧ್ಯಮ ಅಳತೆಯು, ಪ್ರೋಕ್ತಾ= ಹೇಳಲ್ಪಟ್ಟಿದೆ. ತತ್ತದಂಗುಲಿಮಾನಾನಾಂ= ದೇವ, ಮಾನವ ಮೊದಲಾದವರ ಬೆರಳಿನ ಗಾತ್ರವುಳ್ಳ, ಏಷಾಂ= ಈ ಪರಮಾತ್ಮನ ರೂಪಗಳಿಗೆ, ಅಲ್ಪಾಲ್ಪಮಾನತಾ= ಬಹಳ ಕಡಿಮೆ ಅಳತೆಯು ಪ್ರೋಕ್ತಾ = ಹೇಳಲ್ಪಟ್ಟಿದೆ.

**ಅನುವಾದ–** ಈ ಪುರುಷರೂಪಗಳಿಗೆ ಗೇಣು ಅಳತೆಯನ್ನು ಹೇಳಿರುವುದರಿಂದ, ಇವುಗಳಿಗೆ ಮಧ್ಯಮಪರಿಮಾಣವು ಹೇಳಲ್ಪಟ್ಟಿದೆ. ಅವರವರ ಅಂಗುಲಿಯ ಅಳತೆಯನ್ನು ಹೊಂದಿರುವ ಈ ರೂಪಗಳಿಗೆ ಅಲ್ಪ ಅಲ್ಪ ಅಳತೆಯು ಹೇಳಲ್ಪಟ್ಟಿದೆ.

**ಭಾವವಿಲಾಸಿನೀ–** ಪ್ರಕಾರಾಂತರೇಣ ಭೇದಪ್ರಸಕ್ತಿಂ ದರ್ಶಯತಿ– **ಪ್ರಾದೇಶೇತಿ** ॥ ಏಷಾಂ ರೂಪಾಣಾಂ ಮಧ್ಯಮಮಾನತಾ ಮಧ್ಯಮಪ್ರಮಾಣತಾ ಪ್ರೋಕ್ತಾ । ಇತೋಽಪಿ ವ್ಯಾಪ್ತ-ರೂಪಾದ್ಭೇದಪ್ರಸಕ್ತಿರಿತಿ ಭಾವಃ। ಪ್ರಕಾರಾಂತರೇಣಾಪಿ ಭೇದಪ್ರಸಕ್ತಿಮಾಹ –**ತತ್ತದಿತಿ** ॥ ತೇಷಾಂ ದೇವಾನಾಂ ತೇಷಾಂ ಮನುಷ್ಯಾದೀನಾಂ ಚಾಂಗುಲಿಭಿರ್ಮಾನಂ ಪ್ರಮಾಣಂ ಯೇಷಾಂ ತಾನಿ ತೇಷಾಂ ಭಗವದ್ರೂಪಾಣಾಮಲ್ಪಾಲ್ಪಮಾನತಾ ದೇವಾಂಗುಲೀನಾಂ ಸ್ಥೂಲತ್ವಾನ್ಮ-

**ನುಷ್ಯಾಂಗುಲೀನಾಮಲ್ಪತ್ವಾತ್ ತತ್ತದಂಗುಲಿಭಿರ್ದಶಾಂಗುಲತ್ವಾಚ್ಚಾಲ್ಪಾಲ್ಪಪ್ರಮಾಣತಾ ಪ್ರೋಕ್ತೇತಿ ಯೋಜನಾ । ತತೋಽಪಿ ರೂಪಾಣಾಂ ಪರಸ್ಪರಂ ಭೇದಪ್ರಾಪ್ತಿರಿತಿ ಭಾವಃ ॥ ೫೦೪ ॥**

**ವಿವರಣೆ–** ಭಾಗವತ 2.2.9 ರಲ್ಲಿ ಪುರುಷರೂಪದ ಆಳತೆಯನ್ನು 'ಪ್ರಾದೇಶ' ಎಂದು ಹೇಳಲಾಗಿದೆ. ಕಠೋಪನಿಷತ್‌ನಲ್ಲಿ(2.1.12) ಭಗವದ್ರೂಪಗಳಿಗೆ ಉಪಾಸಕರ ಅಂಗುಷ್ಠದ ಆಳತೆಯನ್ನು ಹೇಳಲಾಗಿದೆ. ಪರಮಾತ್ಮನ ವ್ಯಾಪ್ತರೂಪವೇ ಮಿತರೂಪವಲ್ಲ; ಆದ್ದರಿಂದ ಭಗವದ್ರೂಪಗಳಿಗೆ ಭೇದವಿದೆ ಎಂದೂ ತಿಳಿಯಲು ಅವಕಾಶವಿದೆ.

ದೇವತೆಗಳ ಬೆರಳು ದಪ್ಪವಾಗಿರುತ್ತದೆ. ಮನುಷ್ಯರ ಬೆರಳುಗಳು ತೆಳು. ಅವರವರ ಅಂಗುಲಿಗಳಿಂದ ದಶಾಂಗುಲ ಪ್ರಮಾಣವನ್ನು ಹೇಳಿದಾಗ ಅಲ್ಪಪ್ರಮಾಣವನ್ನು ಹೇಳಿದಂತೆ ಆಗುತ್ತದೆ.

**ಸ್ಥಾನಭೇದೇನ ರೂಪಾನಂತ್ಯಾಚ್ಚಾತ್ಯಲ್ಪಪ್ರಮಾಣತಃ ।**
**ಪೂರ್ವೋಕ್ತವ್ಯಾಪ್ತಪುರುಷಾದ್ರೂಪಾಣಾಂ ಭೇದಶಂಕಿನೀ ॥ ೫೦೫ ॥**

**ಶ್ರುತಿಃ ಪುರುಷ ಏವೇದಂ ಸರ್ವಂ ರೂಪಕದಂಬಕಮ್ ।**
**ಇತ್ಯಭಿನ್ನತ್ವಮಾಹೈಷಾಂ ಪ್ರಾಕ್ ಸ್ವೋಕ್ತವ್ಯಾಪ್ತಪೂರುಷಾತ್ ॥ ೫೦೬ ॥**

**ಅರ್ಥ–**ಸ್ಥಾನಭೇದೇನ= ಸ್ಥಾನಗಳ ಭೇದದಿಂದ, ರೂಪಾನಂತ್ಯಾಚ್ಚ= ರೂಪಗಳ ಅನಂತ–ತ್ವದಿಂದಲೂ, ಅಲ್ಪಪ್ರಮಾಣತಃ= ಅಲ್ಪಪ್ರಮಾಣಯುಕ್ತವಾದ್ದರಿಂದಲೂ, ರೂಪಾಣಾಂ= ಪುರುಷನ ರೂಪಗಳಿಗೆ, ಪೂರ್ವೋಕ್ತವ್ಯಾಪ್ತಪುರುಷಾತ್= ಹಿಂದಿನ ವಾಕ್ಯದಲ್ಲಿ ಹೇಳಲ್ಪಟ್ಟ ವ್ಯಾಪ್ತ ಪುರುಷರೂಪದಿಂದ, ಭೇದಶಂಕಿನೀ= ಭೇದವನ್ನು ಶಂಕಿಸಿದ, ಶ್ರುತಿಃ= ವೇದವು, ಇದಂ ಸರ್ವಂ ರೂಪಕದಂಬಕಂ= ಈ ಅನಂತರೂಪಗಳ ಸಮೂಹವು, ಪುರುಷ ಏವ= ಪುರುಷನೇ, ಇತಿ= ಎಂದು, ಏಷಾಂ= ಈ ಎಲ್ಲಾ ರೂಪಗಳಿಗೆ, ಪ್ರಾಕ್= ಹಿಂದೆ, ಸ್ವೋಕ್ತವ್ಯಾಪ್ತಪೂರುಷಾತ್= ತನ್ನಿಂದಲೇ ಹೇಳಲ್ಪಟ್ಟ ವ್ಯಾಪ್ತ ಪುರುಷನಿಂದ, ಅಭಿನ್ನತ್ವಂ= ಅಭೇದವನ್ನು, ಆಹ= ಹೇಳುತ್ತಿದೆ.

**ಅನುವಾದ–** ಅಸಂಖ್ಯದೇಹಿದೇಹಗಳು ಪುರುಷನ ರೂಪವಿರುವ ಬೇರೆ ಬೇರೆ ಸ್ಥಾನಗಳು. ಬೇರೆ ಬೇರೆ ಸ್ಥಾನದಲ್ಲಿರುವ ರೂಪಗಳು ಬೇರೆ ಬೇರೆಯೇ ಆಗಬೇಕು. ಈ ರೂಪಗಳು, ಗೇಣಿನ ಆಳತೆಯನ್ನು, ಅಂಗುಷ್ಠದ ಆಳತೆಯನ್ನು ಹೊಂದಿರುವುದರಿಂದ, ಅಲ್ಪಪ್ರಮಾಣವುಳ್ಳವುಗಳು. ಆದ್ದರಿಂದ 'ಸಹಶೀರ್ಷಾ...' ಈ ವಾಕ್ಯದಿಂದ ಹೇಳಲ್ಪಟ್ಟ ವ್ಯಾಪ್ತರೂಪವು ಈ ರೂಪಗಳಿಂದ ಭಿನ್ನ? ಈ ಪ್ರಶ್ನೆಯನ್ನು ನಿರೀಕ್ಷಿಸಿದ ಪುರುಷಸೂಕ್ತವು 'ಪುರುಷ ಏವ ಇದಸರ್ವಮ್' ಈ ವಾಕ್ಯದಿಂದ ಈ ರೂಪಗಳಿಗೆ ವ್ಯಾಪ್ತರೂಪದಿಂದ ಅಭೇದವನ್ನು ಹೇಳಿದೆ.

**ಭಾವವಿಲಾಸಿನೀ–** ಉಕ್ತಂ ಸಂಗೃಹ್ಯಾಹ – **ಸ್ಥಾನಭೇದೇನೇತಿ ॥** ಪೂರ್ವೋಕ್ತವ್ಯಾಪ್ತಪುರುಷಾತ್ ಸಹಸ್ರಶೀರ್ಷೇತಿ ಸ ಭೂಮಿಂ ವಿಶ್ವತೋ ವೃತ್ವೇತಿ ಪೂರ್ವೋಕ್ತವ್ಯಾಪ್ತಪುರುಷಾದಿತ್ಯರ್ಥಃ । ರೂಪಾಣಾಂ ದೇಹಾಂತರ್ಯಾಮಿರೂಪಾಣಾಂ ಭೇದಶಂಕಿನೀ ಶ್ರುತಿಃ । ಉಪಲಕ್ಷಣಂ ಚೈತತ್ । ಮಿಥೋ ಭೇದಶಂಕಿನೀತ್ಯಾಪಿ ದ್ರಷ್ಟವ್ಯಮ್ । ಇದಂ ಪೂರ್ವಶ್ರುತೌ ಪ್ರಸ್ತಾವಿತಮ್ । ಸರ್ವ-ಮಿತ್ಯಸ್ಯ ವಿವರಣಂ ರೂಪಕದಂಬಕಮಿತಿ । ಏಷಾಂ ಭಗವದ್ರೂಪಾಣಾಮ್ ॥೫೦೫- ೫೦೬॥

**ವಿವರಣೆ–** 'ಪುರುಷ ಏವೇದಂ ಸರ್ವಮ್' - ಈ ವಾಕ್ಯವು ಐಕ್ಯವನ್ನು ಹೇಳುವುದಾದರೆ ಈ ಐಕ್ಯವು ಪುರುಷನ ವ್ಯಾಪ್ತರೂಪ ಮತ್ತು ಮಿತರೂಪಗಳ ಐಕ್ಯ. ಚೇತನಾಚೇತನ ಪ್ರಪಂಚ ಮತ್ತು ಪುರುಷನ ಐಕ್ಯವಲ್ಲ.

ಭೇದಾಭೇದಾದಿಶಂಕಾಯಾ ವಾರಣಾಯಾವಧಾರಣಮ್ ॥ ೫೦೭ ॥

**ಅರ್ಥ–** ಭೇದಾಭೇದಾದಿಶಂಕಾಯಾಃ= ಪರಮಾತ್ಮರೂಪಗಳಿಗೆ ಭೇದಾಭೇದವಿದೆ ಇತ್ಯಾದಿ ಶಂಕೆಯ, ವಾರಣಾಯ= ಪರಿಹಾರಕ್ಕಾಗಿ, ಅವಧಾರಣಂ= **ಪುರುಷ ಏವ ಇದಂ ಸರ್ವಂ** ಎಂಬಲ್ಲಿ ಅವಧಾರಣವು ಇದೆ.

**ಅನುವಾದ– ಪುರುಷ ಮತ್ತು ಅವನ ರೂಪಗಳಿಗೆ ಭೇದಾಭೇದ? ಈ ಅಶಂಕೆಯ ಪರಿಹಾರಕ್ಕಾಗಿ 'ಪುರುಷ ಏವ...' ಈ ವಾಕ್ಯದಲ್ಲಿ ಅವಧಾರಣವು ಇದೆ. ('ಏವ'ದ ಅರ್ಥ ಅವಧಾರಣ).**

**ಭಾವವಿಲಾಸಿನೀ–** ಅವಧಾರಣಂ ಪುರುಷ ಏವೇತ್ಯವಧಾರಣಮ್ । ಭೇದಾಭೇದಾಶಂಕಾಯಾಃ ಅಂಶಾಂಶಿಭಾವೇನ ಪ್ರಾಪ್ತಭೇದಾಭೇದಶಂಕಾಯಾಃ । ಆದಿಪದೇನಾಂಶಿರೂಪಾದಂಶ-ರೂಪಾಣಮಲ್ಪಶಕ್ತಿತ್ವಾದಿಶಂಕಾಯಾಶ್ಚ ವಾರಣಾಯ ಪ್ರಯುಕ್ತಮಿತ್ಯರ್ಥಃ ॥ ೫೦೭ ॥

**ವಿವರಣೆ–** (1) 'ಸಹಸ್ರಶೀರ್ಷಾ ಪುರುಷಃ... ದಶಾಂಗುಲಮ್' ಈ ವಾಕ್ಯವು ಪುರುಷನ ವ್ಯಾಪ್ತರೂಪವನ್ನು ಮತ್ತು ದೇಹಿಗಳ ದೇಹಗಳಲ್ಲಿ ಇರುವ ಪ್ರಾದೇಶ ಪರಿಮಿತ ರೂಪಗಳನ್ನು ಮತ್ತು ಬೇರೆ ಬೇರೆ ಉಪಾಸಕರ ಅಂಗುಷ್ಠ ಪರಿಮಾಣದ ರೂಪಗಳನ್ನು ಹೇಳಿದೆ.

'ಪುರುಷ ಏವ ಇದಂ ಸರ್ವಮ್' - ಈ ವಾಕ್ಯವು ಈ ಎಲ್ಲ ರೂಪಗಳಿಗೆ ಪುರುಷಾಭೇದವನ್ನು ಹೇಳಿದೆ. ಕೆಲವು ಚಿಂತಕರು (1) ವ್ಯಾಪ್ತರೂಪ ಮತ್ತು ಪರಿಮಿತ ರೂಪಗಳಿಗೆ ಭೇದಾಭೇದ ಎಂದು ಹೇಳುತ್ತಾರೆ;

(2) ಪುರುಷರೂಪವು ಅಂಶಿ. ಪ್ರಾದೇಶಪರಿಮಿತ ಮತ್ತು ಅಂಗುಷ್ಠ ಪರಿಮಿತರೂಪಗಳು ಅಂಶ; ಅಂಶಿಯ ಶಕ್ತಿಗಿಂತ ಅಂಶಗಳ ಶಕ್ತಿ ಅಲ್ಪ ಎಂದು ಹೇಳುತ್ತಾರೆ.

**'ಪುರುಷ ಏವ...'** ಈ ವಾಕ್ಯವು 'ಇದೆಲ್ಲವೂ ಪುರುಷವೇ' ಎಂದು ಹೇಳುವ ಮೂಲಕ, ಅಭೇದವನ್ನು ಅವಧಾರಣಪೂರ್ವಕ ಹೇಳಿದೆ. ಇದರಿಂದ ಭೇದಾಭೇದ ಮತ್ತು ಅಲ್ಪಶಕ್ತಿ. ಈ ಅಭಿಪ್ರಾಯವು ಶ್ರುತಿಸಮ್ಮತವಲ್ಲ ಎಂದು ತಿಳಿಯುತ್ತದೆ.

**ಆವಿರ್ಭಾವಾತ್ತಿರೋಭಾವಾತ್ ಭೂತಂ ಭವ್ಯಂ ಭವಚ್ಚ ತತ್ ।**
**ಭೂತಭವ್ಯಭವದ್ದೇಹೇ ಯದ್ರೂಪಂ ಪರಮಾತ್ಮನಃ ॥ ೫೦೮ ॥**

**ಅರ್ಥ–** ಭೂತಭವ್ಯಭವದ್ದೇಹೇ= ಭೂತಕಾಲದ, ಭವಿಷ್ಯತ್ ಕಾಲದ ಮತ್ತು ವರ್ತಮಾನಕಾಲದ ದೇಹಗಳಲ್ಲಿ, ಪರಮಾತ್ಮನಃ= ಪರಮಾತ್ಮನ, ಯದ್‌ರೂಪಂ= ಯಾವ ರೂಪಗಳೋ, ತತ್= ಅವುಗಳು, ಭೂತಭವ್ಯಭವದ್ದೇಹೇ= ಭೂತಕಾಲದ, ಭವಿಷ್ಯತ್ ಕಾಲದ ಮತ್ತು ವರ್ತಮಾನಕಾಲದ ದೇಹಗಳಲ್ಲಿ, ಆವಿರ್ಭಾವಾತ್= ಅವಿರ್ಭಾವದಿಂದ, ತಿರೋಭಾವಾತ್= ಅಂತರ್ಧಾನದಿಂದ, ಭೂತಂ ಭವ್ಯಃ ಭವತ್= ಭೂತ, ಭವ್ಯ, ಭವತ್ ಆಗುತ್ತವೆ.

**ಅನುವಾದ–** ಭೂತಕಾಲದ ಜೀವದೇಹಗಳಲ್ಲಿ ಇದ್ದ ಪರಮಾತ್ಮರೂಪಗಳು ಭೂತ. ಭವಿಷ್ಯತ್‌ಕಾಲದ ದೇಹಗಳಲ್ಲಿ ಇರುವ ರೂಪಗಳು ಭವ್ಯ. ವರ್ತಮಾನದ ದೇಹಗಳಲ್ಲಿ ಇರುವ ರೂಪಗಳು ಭವತ್. ಗತಕಾಲದ ದೇಹಗಳಲ್ಲಿದ್ದ ಭಗವದ್ರೂಪಗಳಿಗೆ ತಿರೋಧಾನವಾಗಿದೆ. ಆದ್ದರಿಂದ ಅವುಗಳು ಭೂತ, ಭವಿಷದ್ದೇಹದಲ್ಲಿ ಆವಿರ್ಭಾವವಾಗುವ ರೂಪಗಳು ಭವ್ಯ. ವರ್ತಮಾನ ದೇಹಗಳಲ್ಲಿ ಆವಿರ್ಭಾವವಾಗಿರುವ ರೂಪಗಳು ಭವತ್.

**ಭಾವವಿಲಾಸಿನೀ–** ಉಕ್ತಭಗವದ್ರೂಪಾಣಾಂ ಭೂತತ್ವಂ ವರ್ತಮಾನತ್ವಂ ಭವ್ಯತ್ವಂ ಚೋಪ-ಪಾದಯತಿ– **ಆವಿರ್ಭಾವಾದಿತಿ ॥** ಭೂತಭವ್ಯಭವದ್ದೇಹೇ । ಜಾತ್ಯೇಕವಚನಮಿದಮ್ । ಅತೀತವರ್ತಮಾನಾನಾಗತದೇಹೇಷ್ವಿತ್ಯರ್ಥಃ । ಪರಮಾತ್ಮನೋ ಯದ್ರೂಪಮ್ । ಯಾನಿ ರೂಪಾಣೀತ್ಯರ್ಥಃ । ತದ್ರೂಪಮ್ । ವರ್ತಮಾನರೂಪೇಷ್ವಾವಿರ್ಭಾವಾತ್ । ಭವಿಷ್ಯ-ದ್ರೂಪೇಷ್ವತೀತರೂಪೇಷು ಚೇದಾನೀಂ ತೀರೋಭಾವಾದಿತಿ ವಿವೇಕಃ । ಯದ್ಯಪಿ ಶ್ರುತೌ ಭೂತಭವ್ಯಯೋರೇವ ಗ್ರಹಣಮ್ । ತಥಾಪ್ಯೇತಚ್ಛ್ರುತಿವ್ಯಾಖ್ಯಾನರೂಪೇ ಸರ್ವಂ ಪುರುಷ ಏವೇದಂ ಭೂತಂ ಭವ್ಯಂ ಭವಚ್ಚ ಯದಿತಿ ಭಾಗವತವಾಕ್ಯೇ ಭವದಿತಿ ವರ್ತಮಾನಸ್ಯಾಪಿ ಗ್ರಹಣಾತ್ ತಸ್ಯಾಪ್ಯುಪಪಾದನಮಿತಿ ದ್ರಷ್ಟವ್ಯಮ್ ॥ ೫೦೮ ॥

**ವಿವರಣೆ–** ಪುರುಷಸೂಕ್ತದ ಮೊದಲನೆಯ ವಾಕ್ಯವು ಪುರುಷನ ಅನಂತರೂಪಗಳನ್ನು ಹೇಳುತ್ತವೆ; ಅವುಗಳಿಗೆ ಅಭೇದವನ್ನು 'ಪುರುಷ ಏವೇದಂ....' - ಈ ವಾಕ್ಯವು ಹೇಳುತ್ತದೆ ಎಂದು ವ್ಯಾಖ್ಯಾನಿಸಲಾಗಿದೆ.

ಪ್ರಶ್ನೆ : ಎರಡನೆಯ ವಾಕ್ಯವು ಭೂತ, ಭವ್ಯ, ಭವದ್‌ರೂಪಗಳು ಪುರುಷನೇ ಎಂದು ಹೇಳಿದೆ. ಭಗವದ್ರೂಪಗಳು ಅನಾದಿ, ನಿತ್ಯ. ಆದ್ದರಿಂದ ಭೂತಕಾಲದ, ಭವಿಷ್ಯತ್‌ಕಾಲದ ರೂಪಗಳು ಇರಲು ಅವಕಾಶವಿಲ್ಲ. ಹೀಗೆ ಹೇಳುವ ವಾಕ್ಯವು ಅಸಂಗತ? ಅಥವಾ ವಾಕ್ಯವು ಈ ಅರ್ಥವನ್ನು ಹೇಳಲಾರದು?

ಉತ್ತರ : ನಿಜ. ಭಗವದ್ರೂಪಗಳು ಅನಾದಿ, ನಿತ್ಯ, ಜೀವಾತ್ಮದೇಹಗಳ ನಾಶವಾದಾಗ ಅಲ್ಲಿದ್ದ ರೂಪಗಳ ತಿರೋಭಾವವಾಗುತ್ತದೆ. ಈ ತಿರೋಭೂತರೂಪಗಳನ್ನು ಭೂತ ಎಂದು ಶ್ರುತಿಯು ಹೇಳಿದೆ. ಮುಂದೆ ಉದ್ಭವವಾಗುವ ಜೀವದೇಹಗಳಲ್ಲಿ ಪರಮಾತ್ಮರೂಪಗಳ ಆವಿರ್ಭಾವವಾಗುತ್ತದೆ. ಇವುಗಳು ಭವ್ಯ. ವರ್ತಮಾನ ಜೀವದೇಹಗಳಲ್ಲಿ ಈಗ ಅವುಗಳ ಆವಿರ್ಭಾವವು ಇದೆ. ಇವುಗಳು ಭವತ್.

ಪುರುಷಸೂಕ್ತದಲ್ಲಿ ಭೂತಂ ಮತ್ತು ಭವ್ಯಂ ಎಂದಷ್ಟೇ ಇದೆ. ಆದರೆ ''ಸರ್ವಂ ಪುರುಷ ಏವೇದಂ ಭೂತಂ ಭವಂ ಭವಚ್ಚ ಯತ್'' ಎಂಬ ಭಾಗವತವಾಕ್ಯದಲ್ಲಿ (2.1.24) ಭವತ್ ಎಂದು ಹೇಳಿರುವುದರಿಂದ ಇಲ್ಲಿ ಅದನ್ನೂ ಹೇಳಿದೆ ಎಂದು ತಿಳಿಯಬೇಕು.

**ವಿಶೇಷಶಕ್ತ್ಯಾ ಸರ್ವಂ ಚ ನಿರ್ವೋಢುಂ ಶಕ್ಯತೇ ಕಿಲ ।**
**ಪೂರ್ವೋತ್ತರಾವಿರುದ್ಧೋऽರ್ಥೋ ಶ್ರುತೇರೇವಂ ಭವೇನ್ಮಮ ॥ ೫೦೯ ॥**

**ಅರ್ಥ–** ಮಮ= ನನ್ನ ಮತದಲ್ಲಿ, ಸರ್ವಂ= ಆವಿರ್ಭಾವ-ತಿರೋಭಾವ, ಅಲ್ಪಪರಿಮಾಣ ಮಹತ್ಪರಿಮಾಣ, ಏಕತ್ವ, ಅನೇಕತ್ವ ಇವೆಲ್ಲವನ್ನೂ, ವಿಶೇಷಶಕ್ತ್ಯಾ= ಭೇದಕಾರ್ಯಕಾರಿಯಾದ 'ವಿಶೇಷದ' ಸಾಮರ್ಥ್ಯದಿಂದಲೇ, ನಿರ್ವೋಢುಂ= ನಿರ್ವಹಿಸಲು, ಶಕ್ಯತೇ ಕಿಲ= ನಿಸ್ಸಂಶಯವಾಗಿ ಸಾಧ್ಯವಿದೆ. ಏವಂ= ಈ ರೀತಿ, ಶ್ರುತೇಃ= ಶ್ರುತಿಗೆ, ಪೂರ್ವೋತ್ತರಾವಿರುದ್ಧಃ ಅರ್ಥಃ= ಪೂರ್ವೋತ್ತರ ವಿರೋಧವಿಲ್ಲದ ಅರ್ಥವು, ಭವೇತ್= ಆಗುತ್ತದೆ.

**ಅನುವಾದ–** ನಮ್ಮ ಮತದಲ್ಲಿ ಪರಮಾತ್ಮನ ರೂಪಗಳಿಗೆ ಭೇದವಿಲ್ಲದಿದ್ದರೂ ಅವುಗಳ ಆವಿರ್ಭಾವ-ತಿರೋಭಾವಗಳನ್ನು, ಅಲ್ಪ ಪರಿಮಾಣ- ಮಹತ್ಪರಿಮಾಣಗಳನ್ನು, ಏಕತ್ವ- ಅನೇಕತ್ವಗಳನ್ನು 'ವಿಶೇಷ' ಎಂಬ ಶಕ್ತಿಯಿಂದ ನಿರ್ವಹಿಸಲು ಶಕ್ಯ. ಹೀಗೆ ಶ್ರುತಿಗೆ ಪೂರ್ವೋತ್ತರ ವಿರೋಧವಿಲ್ಲದ ಅರ್ಥವು ಆಗುತ್ತದೆ.

**ಭಾವವಿಲಾಸಿನೀ–** ಸರ್ವಂ ಭೇದಭಾವೇऽಪಿ ತಿರೋಹಿತತ್ವಾವಿರ್ಭೂತತ್ವಾಲ್ಪಪರಿಮಾಣತ್ವೈಕತ್ವಾನೇಕತ್ವಾವಯವಾವಯವಿಭಾವಾದಿಕಂ ಸಮಸ್ತಮ್ । ಏವಮಿದಾನೀಮುಕ್ತಪ್ರಕಾರೇಣ । ಪೂರ್ವೋತ್ತರಾವಿರುದ್ಧಃ ಪೂರ್ವತ್ರೋರತ್ರ ಚೋಕ್ತಾರ್ಥಾವಿರುದ್ಧ ಇತ್ಯರ್ಥಃ । ಉಪಲಕ್ಷಣಂ ಚೈತತ್ । ಪೂರ್ವೋತ್ತರೋಕ್ತಭಗವದ್ರೂಪೇಷು ಪ್ರಾಪ್ತಭೇದಶಂಕಾನಿರಾಸಕತ್ವೇನ ತತ್‌ಸಂಗತಶ್ಚೇತ್ಯಪಿ ದ್ರಷ್ಟವ್ಯಮ್ ॥ ೫೦೯ ॥

**ವಿವರಣೆ–** (1) ಪ್ರಶ್ನೆ : **'ಪುರುಷ ಏವೇದಂ ಸರ್ವಮ್'** - ಈ ವಾಕ್ಯವು ಪರಮಾತ್ಮನ ವ್ಯಾಪ್ತರೂಪ ಮತ್ತು ಪರಿಮಿತರೂಪಗಳಿಗೆ ಅಭೇದವನ್ನು ಹೇಳಿದೆ. ಪರಿಮಿತ ರೂಪಗಳೂ ಅಭಿನ್ನವೇ. ಅಭಿನ್ನವಾದರೆ ಅವುಗಳಲ್ಲಿ ವೈಚಿತ್ರ್ಯ. ವೈವಿಧ್ಯಗಳು (ಅನುವಾದವನ್ನು ನೋಡಿ) ಹೇಗೆ?

ಉತ್ತರ: ಪ್ರಮಾಣಸಿದ್ಧವಾದ ಅಭೇದವಿರುವಲ್ಲಿ, ಪ್ರಮಾಣ ಸಿದ್ಧವಾದ ಭೇದವ್ಯವಹಾರವಿದ್ದರೆ, ಅದನ್ನು ಆಗಗೊಳಿಸುವ ಶಕ್ತಿಯೊಂದು ಇರಲೇಬೇಕು. ಪ್ರಕೃತ ಪರಮಾತ್ಮನಲ್ಲಿ ಈ ಸ್ಥಿತಿಯು ಇರುವುದರಿಂದ, ಅವನಲ್ಲಿ ಈ ಶಕ್ತಿಯು ಇದೆ. ಈ ಶಕ್ತಿಗೆ 'ವಿಶೇಷ' ಎಂದು ಹೆಸರು. ಇದರಿಂದ ಮೇಲೆ ಹೇಳಿದ ವೈಚಿತ್ರ್ಯಗಳು (ಇವು ಭೇದಕಾರ್ಯ) ಉಪಪನ್ನವಾಗುತ್ತವೆ.

(2) ಪುರುಷಸೂಕ್ತದ 'ಪುರುಷ ಏವೇದಂ ಸರ್ವಮ್' ಈ ವಾಕ್ಯಕ್ಕೆ ಪೂರ್ವೋತ್ತರ ವಿರೋಧವಿಲ್ಲದ ಅರ್ಥವೂ ಲಭಿಸುತ್ತದೆ.

**ಪೂರ್ವೋತ್ತರವಿರುದ್ಧಾರ್ಥಃ ಸ್ವತಶ್ಚ ವ್ಯಾಹತಸ್ತವ ॥ ೫೧೦ ॥**

**ಅರ್ಥ–** ತವ= ನಿನ್ನ ಮತದ ಅರ್ಥವು, ಪೂರ್ವೋತ್ತರವಿರುದ್ಧಾರ್ಥಃ= ಹಿಂದಿನ ಮತ್ತು ಮುಂದಿನ ವಾಕ್ಯಗಳ ಅರ್ಥಕ್ಕೆ ವಿರುದ್ಧವಾದ ಅರ್ಥ, ಚ= ಮತ್ತು, ಸ್ವತಃ= ತನ್ನಿಂದಲೇ, ವ್ಯಾಹತಃ= ವಿರುದ್ಧವೂ ಆಗುತ್ತದೆ.

**ಅನುವಾದ– 'ಪುರುಷ ಏವೇದಂ ಸರ್ವಮ್' - ಈ ವಾಕ್ಯದ ನಿಮ್ಮ ಅರ್ಥವು ಪೂರ್ವೋತ್ತರ ವಿರುದ್ಧ ಅರ್ಥ ಮತ್ತು ಈ ವಾಕ್ಯದ ಅರ್ಥವು ತನ್ನೊಳಗೇ ವಿರೋಧವನ್ನು ಹೊಂದಿದೆ.**

**ಭಾವವಿಲಾಸಿನೀ–** ಇದಮನಿದಂಪದಾರ್ಥಾಭೇದರೂಪತ್ವಾತ್ ಸ್ವತಶ್ಚ ವ್ಯಾಹತ ಇತ್ಯರ್ಥಃ ॥೫೧೦॥

**ವಿವರಣೆ–** 'ಪುರುಷ ಏವ ಇದಂ ಸರ್ವಮ್'- ಈ ವಾಕ್ಯವು ಸರ್ವೈಕ್ಯವನ್ನು ಹೇಳುತ್ತದೆ ಎಂಬ ಮತದಲ್ಲಿ ಹಿಂದಿನ ವಾಕ್ಯ ಹಾಗೂ ಮುಂದಿನ ವಾಕ್ಯಗಳ ಅರ್ಥದಿಂದ ವಿರೋಧವು ಬರುತ್ತದೆ. ಅಷ್ಟೇ ಅಲ್ಲದೆ ಸ್ವತಃ ಈ ವಾಕ್ಯದಲ್ಲಿಯೇ ವಿರೋಧವು ಬರುತ್ತದೆ. ಏಕೆಂದರೆ ಇಲ್ಲಿ ಇದಂ ಎಂಬುದಾಗಿ ಪ್ರತ್ಯಕ್ಷಗೋಚರವಾದ ಜಡ ಜಗತ್ತನ್ನೂ ತೋರಿಸಿ, ಅದಕ್ಕೆ ಅನಿದಂ ಪದಾರ್ಥವಾದ ಪ್ರತ್ಯಕ್ಷಕ್ಕೆ ಗೋಚರವಾಗದ ಪುರುಷನಿಂದ ಐಕ್ಯವನ್ನು ಹೇಳುತ್ತಾರೆ. ಇದು ವ್ಯಾಹತ.

**ಸ್ಥಾನಸ್ಥಾನಿತ್ವಕಥನಾಜ್ಜ್ಯಾಯಸ್ತ್ವೇಶತ್ವಕೀರ್ತನಾತ್ ।**
**ಜಡಾರ್ಥಸ್ಯಾಪಿ ಸರ್ವತ್ವಾತ್ ಕಥಮೈಕ್ಯಾರ್ಥತಾ ವದ ॥ ೫೧೧ ॥**

**ಅರ್ಥ–** ಸ್ಥಾನಸ್ಥಾನಿತ್ವಕಥನಾತ್= (ಸ ಭೂಮಿಂ ವಿಶ್ವತೋ ವೃತ್ವಾ ಎಂಬ ವಾಕ್ಯದಲ್ಲಿ) ಭೂಮಿಗೆ ಸ್ಥಾನತ್ವವನ್ನು ಪುರುಷನಿಗೆ ಸ್ಥಾನಿತ್ವವನ್ನು ಹೇಳಿರುವುದರಿಂದ, ಜ್ಯಾಯಸ್ತ್ವೇಶತ್ವ-ಕೀರ್ತನಾತ್= ಅತೋಜ್ಯಾಯಾಂಶ್ಚಪುರುಷಃ ಎಂಬಲ್ಲಿ ಶ್ರೇಷ್ಠತ್ವವನ್ನೂ, ಅಮೃತತ್ವಸ್ಯೇಶಾನಃ ಎಂಬಲ್ಲಿ ಮುಕ್ತ ನಿಯಾಮಕತ್ವವನ್ನೂ ಹೇಳಿರುವುದರಿಂದ, ಜಡಾರ್ಥಸ್ಯಾಪಿ= ಜಡಪ್ರಪಂಚವೂ, ಸರ್ವತ್ವಾತ್= ಸರ್ವದಲ್ಲಿ ಸೇರುವುದರಿಂದ, ಐಕ್ಯಾರ್ಥತಾ ಕಥಂ?= ಐಕ್ಯಾರ್ಥವು ಹೇಗೆ ಯುಕ್ತವಾದೀತು? ವದ= ಹೇಳು.

**ಅನುವಾದ–** ಪುರುಷಸೂಕ್ತದಲ್ಲಿ 'ಸಭೂಮಿಂ ವಿಶ್ವತೋ ವೃತ್ವಾ' - ಈ ವಾಕ್ಯದಲ್ಲಿ ಭೂಮಿಯನ್ನು ಸ್ಥಾನವನ್ನಾಗಿ ಹೇಳಿ ಪರಮಾತ್ಮನು ಅದನ್ನು ವ್ಯಾಪಿಸಿಕೊಂಡು ಇದ್ದಾನೆ ಎಂದು ಅವನನ್ನು ಸ್ಥಾನಿಯನ್ನಾಗಿ ಹೇಳಲಾಗಿದೆ. 'ಅತೋ ಜ್ಯಾಯಾಂಶ್ಚ' ಎಂಬಲ್ಲಿ ಅವನು ಎಲ್ಲಕ್ಕಿಂತಲೂ ದೊಡ್ಡವನು ಎಂದು ಹೇಳಿದೆ. 'ಅಮೃತತ್ವಸ್ಯೇಶಾನಃ' ಎಂಬಲ್ಲಿ ಅವನು ಮುಕ್ತರಿಗೂ ನಿಯಾಮಕ ಎಂದು ಹೇಳಿದೆ. ಸರ್ವೈಕ್ಯಪಕ್ಷದಲ್ಲಿ ಇವು ಯಾವುದೂ ಯುಕ್ತವಾಗಲಾರದು. ಅಷ್ಟೇ ಅಲ್ಲದೆ ಸರ್ವಶಬ್ದದ ಅರ್ಥದಲ್ಲಿ ಜಡವೂ ಸೇರಿದೆ. ಆದರೆ ಅಭೇದವಾದಿಯು ಪುರುಷ ಜಡಗಳ ಐಕ್ಯವನ್ನು ಹೇಳುವುದಿಲ್ಲ. ಆದ್ದರಿಂದ 'ಪುರುಷ ಏವ ಇದಂ ಸರ್ವಂ' ಎಂಬ ವಾಕ್ಯವು ಸರ್ವೈಕ್ಯವನ್ನು ಹೇಳುತ್ತದೆ ಎಂದು ಹೇಳುವುದು ಸರಿಯಲ್ಲ.

**ಭಾವವಿಲಾಸಿನೀ–** ತದೇವ ವಿಶದಯತಿ –**ಸ್ಥಾನೇತಿ** ॥ ಸಭೂಮಿಂ ವಿಶ್ವತೋ ವೃತ್ವೇತಿ ಅತ್ಯತಿಷ್ಠ-ದ್ದಶಾಂಗುಲಮಿತಿ ಚ ಭೂಮ್ಯಾದೀನಾಂ ಸ್ಥಾನತ್ವಕಥನಾತ್ ಬ್ರಹ್ಮಣಶ್ಚ ಸ್ಥಾನಿತ್ವಕಥನಾದಿತ್ಯರ್ಥಃ। ಅನೇಕೈಕ್ಯಾರ್ಥೇ ಪೂರ್ವವಿರೋಧೋ ದರ್ಶಿತಃ। ಜ್ಯಾಯಸ್ತ್ವೇಶತ್ವಕೀರ್ತನಾದಿತ್ಯ-ನೇನೋತ್ತರವಿರೋಧಃ। ಜಡಾರ್ಥಸ್ಯಾಪಿ ಸರ್ವತ್ವಾದಿತ್ಯನೇನ ಸ್ವವಿರೋಧಶ್ಚ ದರ್ಶಿತಃ। ಉಪಲಕ್ಷಣಂ ಚೈತದ್ವ್ಯಾಖ್ಯಾನಂ ವ್ಯಾಖ್ಯಾನಾಂತರಸ್ಯ। ಸಹಸ್ರಶೀರ್ಷೇತಿ ಪೂರ್ವವಾಕ್ಯೇ ಸಹಸ್ರಂ ಶೀರ್ಷಾಣಿ ಯಸ್ಯೇತ್ಯಾದಿನಾ ಬಹುವ್ರೀಹಿಸಮಾಸಾಶ್ರಯಣಾದ್ಭಗವದವಯವಾನಾಂ ಭಗವತಶ್ಚ ಪ್ರಾಪ್ತಭೇದಶಂಕಾಯಾ ಉತ್ತರತ್ರ ಚ ಮುಖಂ ಕಿಮಸ್ಯೇತಿ ವಾಕ್ಯೇಽಸ್ಯೇತಿ ಷಷ್ಠ್ಯರ್ಥತಯಾ ಪ್ರಾಪ್ತಭಗವದವಯವಭೇದಶಂಕಾಯಾಶ್ಚ ನಿರಾಸಾರ್ಥಮಿದಮುಕ್ತವಕ್ಷ್ಯಮಾಣಕರ-ಚರಣಾದಿಕಂ ಸರ್ವಂ ಪುರುಷ ಏವೇತಿ ಭಗವದವಯವಾನಾಂ ಭಗವತಶ್ಚಾತ್ಯಂತಾ-ಭೇದಪರಮಿದಂ ವಾಕ್ಯಮ್। ಅವಯವಾವಯವಿಭಾವೇನ ಪ್ರಾಪ್ತಭೇದಾಭೇದಶಂಕಾ-ನಿರಾಸಾರ್ಥಮೇವಕಾರಶ್ಚೇತ್ಯಪಿ ಶ್ರುತೇರರ್ಥೋ ದ್ರಷ್ಟವ್ಯಃ। ಅವಯವಾನಾಮಪಿ ಭೂತ-ಭವಿಷ್ಯತ್ವಾದಿಕಂ ಕದಾಚಿತ್ ಸಹಸ್ರಶೀರ್ಷತ್ವಾದಿನಾ- ವಿರ್ಭಾವಾತ್ಕದಾಚಿತ್ತಸ್ಯೈವ ತಿರೋ-ಭಾವಾಚ್ಚ ಪೂರ್ವವದೇವ ಯೋಜನೀಯಮ್। ಅಸ್ಮಿನ್ನೇವ ಸೂಕ್ತೇ ಪ್ರಸ್ತುತಭಗವ-ದ್ರೂಪಾದಿಪರತ್ವಾದಿದಂಶಬ್ದೋಽಸ್ಮಾಕಮೇವ ಶೋಭತೇ। ಪರಸ್ಯ ತು ಪರಿದೃಶ್ಯಮಾನ-ಪ್ರಮಾಣಾಂತರಪ್ರಾಪ್ತಬಹಿರಂಗಜಗತ್ಪರತ್ವಾನ್ನ ತಥಾ ಶೋಭತೇ। ಅತೋಽಪೀದಮೇವ ವ್ಯಾಖ್ಯಾನಮಾದರಣೀಯಮ್ ॥ ೫೧೧ ॥

**ವಿವರಣೆ–** (1) ಐಕ್ಯಪರವಾದ ವ್ಯಾಖ್ಯಾನಕ್ಕೆ 'ಸ್ಥಾನಸ್ಥಾನಿತ್ವಕಥನಾತ್' ಎಂಬುದರಿಂದ ಪೂರ್ವವಿರೋಧವನ್ನೂ, 'ಜ್ಯಾಯಸ್ತ್ವೇಶತ್ವಕೀರ್ತನಾತ್' ಎಂಬುದರಿಂದ ಉತ್ತರ ವಿರೋಧವನ್ನು ಸೂಚಿಸಿದ್ದಾರೆ. 'ಜಡಾರ್ಥಸ್ಯಾಪಿ' ಎಂಬುದರಿಂದ ಸ್ವವಿರೋಧವನ್ನೂ ತೋರಿಸಿದ್ದಾರೆ.

(2) 'ಸಹಸ್ರಶೀರ್ಷಾ' - ಈ ಪದಕ್ಕೆ ಸಹಸ್ರಂ ಶೀರ್ಷಾಣಿ ಯಸ್ಯ ಎಂದು ಅರ್ಥ. ಇದರಿಂದ ಪುರುಷನ ಮತ್ತು ಅವನ ಅವಯವಗಳಿಗೆ ಭೇದವು ಪ್ರಸಕ್ತವಾಗುತ್ತದೆ. ಹಾಗೆಯೇ ಮುಂದೆ 'ಮುಖಂ ಕಿಮಸ್ಯ' ಎಂಬಲ್ಲಿ ಷಷ್ಠಿಯಿಂದಲೂ ಪುರುಷ ಮತ್ತು ಅವನ ಅವಯವಗಳಿಗೆ ಭೇದವು ಪ್ರಸಕ್ತವಾಗುತ್ತದೆ. ಈ ಭೇದಶಂಕೆಯನ್ನು ಪರಿಹರಿಸಲು ಶ್ರುತಿಯು 'ಪುರುಷ ಏವ ಇದಂ ಸರ್ವಂ' ಎಂದು ಹೇಳಿದೆ. ಹಿಂದೆ ಹೇಳಿದ ಮತ್ತು ಮುಂದೆ ಹೇಳುವ ತಲೆ, ಕರ ಮತ್ತು ಚರಣಾದಿಗಳಿಗೂ ಭಗವಂತನಿಗೂ ಅಭೇದ ಎಂದು ಅರ್ಥ.

ಹಾಗೆಯೇ ಅವಯವ- ಅವಯವಿಗಳಿಗೆ ಅಭೇದವೇ, ಭೇದಾಭೇದವಲ್ಲ ಎಂದು ಹೇಳಲು 'ಏವ' ಶಬ್ದದ ಪ್ರಯೋಗವಿದೆ ಎಂದೂ ತಿಳಿಯಬೇಕು. ಹಾಗೆಯೇ ಸಹಸ್ರಶೀರ್ಷಾದಿ ಅವಯಗಳು ಯಾವಾಗಲೂ ಇದ್ದರೂ ಕೆಲವೊಮ್ಮೆ ತೋರುತ್ತದೆ. ಕೆಲವೊಮ್ಮೆ ಮರೆಯಾಗುತ್ತದೆ. ಆದರೂ ಅಭೇದವಿದೆ ಎಂದು ಅಭಿಪ್ರಾಯ.

ಇಲ್ಲಿರುವ ಇದಂ ಪದವು ನಮ್ಮ ಮತದಲ್ಲಿ ಯುಕ್ತವಾಗುತ್ತದೆ. ಏಕೆಂದರೆ ಇದಂ ಎಂದರೆ ಈ ಸೂಕ್ತದಲ್ಲಿ ಹೇಳಲ್ಪಟ್ಟ ಭಗವಂತನ ರೂಪ ವಿಶೇಷಗಳು ಎಂದರ್ಥ. ಪರರು ಇಲ್ಲಿ ಜಗತ್ತನ್ನು 'ಇದಂ' ಪದದಿಂದ ಗ್ರಹಿಸುತ್ತಾರೆ. ಇದು ಸರಿಯಲ್ಲ.

**ಭೇದಸೌರಭಸರ್ವಸ್ವೇ ಸ್ಯಾದಸ್ಯಾರ್ಥಸ್ಯ ವಿಸ್ತೃತಿಃ ।**
**ಶುದ್ಧ್ಯುದ್ಧಾರೇ ತದುದ್ಧಾರಸ್ತ್ವನ್ಯೋನ್ಯಮತಿಮಿಶ್ರಣಾತ್ ॥ ೫೧೨ ॥**

**ಅರ್ಥ–** ಅಸ್ಯ ಅರ್ಥಸ್ಯ= ಈ ಅಭೇದಖಂಡನೆಯ, ವಿಸ್ತೃತಿಃ= ವಿಸ್ತರವು, ಭೇದಸೌರಭಸರ್ವಸ್ವೇ= ಮುಂದಿನ ಭೇದಸೌರಭದಲ್ಲಿ, ಸ್ಯಾತ್= ಇರುವುದು, ಶುದ್ಧ್ಯುದ್ಧಾರೇ= ಶುದ್ಧಿಸೌರಭದಲ್ಲಿ, ತದುದ್ಧಾರಃ ತು= ಅದರ (ಭೇದದ) ಸಮರ್ಥನೆಯು, ಅನ್ಯೋನ್ಯಮ್ ಅತಿಮಿಶ್ರಣಾತ್= ಭೇದ ಮತ್ತು ಗುಣಪೂರ್ಣತ್ವಗಳಿಗೆ ಗಾಢ ಸಂಬಂಧವಿರುವುದರಿಂದ.

**ಅನುವಾದ–** ಇಡೀ ಭೇದಸೌರಭದಲ್ಲಿ ಪ್ರಪಂಚ-ಪರಮಾತ್ಮರ ಅಭೇದ ಖಂಡನೆಯ ವಿಸ್ತರವಿದೆ. ಪರಮಾತ್ಮನ ಗುಣಪೂರ್ಣತ್ವ ಮತ್ತು ಅವನಿಗೆ ಪ್ರಪಂಚದಿಂದ ಭೇದ - ಇವುಗಳಿಗೆ ಪರಸ್ಪರ ಗಾಢಸಂಬಂಧವಿದೆ. ಆದ್ದರಿಂದ ಗುಣಪೂರ್ಣತ್ವಕ್ಕೆ ವಿರೋಧಿಯಾದ ಅಭೇದದ ಖಂಡನೆಯನ್ನು ಶುದ್ಧಿಸೌರಭದಲ್ಲೂ ಮಾಡಲಾಗಿದೆ.

**ಭಾವವಿಲಾಸಿನೀ–** ಅಭೇದಖಂಡನಸ್ಯ ಭೇದಸೌರಭ ಏವ ಕರ್ತವ್ಯತ್ವಾತ್ ಅಸ್ಯ ಚ ಶುದ್ಧಿಸೌರಭ-ತ್ವಾದುಪರಮ್ಯತ ಇತ್ಯಾಹ – **ಭೇದಸೌರಭೇತಿ** ॥ ಅಸ್ಯಾರ್ಥಸ್ಯಾಭೇದಖಂಡನರೂಪಸ್ಯಾರ್ಥಸ್ಯ । ತರ್ಹ್ಯೇತಾವದಪಿ ಕುತೋಽತ್ರ ಚರ್ಚಿತಮಿತ್ಯತ ಆಹ – **ಶುದ್ಧ್ಯುದ್ಧಾರ ಇತಿ** ॥ ಶುದ್ಧ್ಯುದ್ಧಾರೇ ಶುದ್ಧಿಸೌರಭೇ ತದುದ್ಧಾರಸ್ತಸ್ಯ ಭೇದಸ್ಯೋದ್ಧಾರಃ ಸಮರ್ಥನಮ್ । ಅತಿಮಿಶ್ರಣಾದ್ ಭಗವದ್ಗುಣಾನಾಮೇಕೀಭೂತತ್ವಾತ್ ॥ ೫೧೨ ॥

**ವಿವರಣೆ–** ಅಭೇದದ ಖಂಡನೆ ಮತ್ತು ಭೇದದ ಸಮರ್ಥನೆಯನ್ನು ವಿಸ್ತರವಾಗಿ ಮುಂದಿನ ಭೇದಸೌರಭದಲ್ಲಿ ಮಾಡಲಾಗುವುದು. ಹಾಗಾದರೆ ಇಲ್ಲಿ ಅದರ ಪ್ರಸ್ತಾಪವು ಹೇಗೆ ಬಂದಿದೆ? ಭಗವಂತನಿಗೆ ಚೇತನಾಚೇತನಾತ್ಮಕ ಪ್ರಪಂಚದಿಂದ ಅತ್ಯಂತ ಭೇದವಿಲ್ಲದೆ ಅವನಿಗೆ ಗುಣಪೂರ್ಣತ್ವವು ಸಿದ್ಧವಾಗುವುದಿಲ್ಲ. ಆದ್ದರಿಂದ ಭೇದವು ಭಗವಂತನ ಗುಣಪೂರ್ಣತ್ವಕ್ಕೆ ಅವಶ್ಯಕವಾದ ಅಂತರಂಗತತ್ವ. ಇವೆರಡು ತತ್ವಗಳಿಗೆ ಗಾಢಸಂಬಂಧವಿದೆ. ಆದ್ದರಿಂದ ಈ ಸೌರಭದಲ್ಲೂ ಅಭೇದ ಖಂಡನೆಯನ್ನು ಸಂಕ್ಷೇಪವಾಗಿ ಮಾಡಲಾಗಿದೆ.

ಪೂರ್ವಶ್ಲೋಕದಲ್ಲಿ ಉಕ್ತವಾದ ಪರಿಹಾರವನ್ನು ಕಾವ್ಯಶೈಲಿಯಲ್ಲಿ ಹೇಳುತ್ತಾರೆ -

**ಅತೋ ವಿಚಾರವಾತೋಽಯಂ ಸೌರಭೇ ಸೌರಭಾಂತರಂ ।**
**ಸಂಯೋಜಯತಿ ತದ್ಗಂಧಃ (ತದ್ಗ್ರಂಥಃ) ಸೋಽಯಂ ಜನಮನೋಹರಃ**
**॥ ೫೧೩ ॥**

**ಅರ್ಥ–** ಅತಃ= ಆದ್ದರಿಂದ, ಅಯಂ= ಈ, ವಿಚಾರವಾತಃ= ವಿಮರ್ಶೆ ಎಂಬ ಗಾಳಿಯು, ಸೌರಭೇ= ಒಂದು ಸೌರಭದಲ್ಲಿ, ಸೌರಭಾಂತರಂ= ಮುಂದಿನ ಸೌರಭವನ್ನು, ಸಂಯೋಜಯತಿ= ಜೋಡಿಸುತ್ತದೆ. ತದ್= ಆದ್ದರಿಂದ, ಸಃ ಅಯಂ ಗ್ರಂಥಃ= ಪ್ರಸಿದ್ಧವಾದ ಈ ಗ್ರಂಥವು ಸಃ ಅಯಂ ಗಂಧಃ= ಪ್ರಸಿದ್ಧವಾದ ಈ ಸೌರಭವು, ಜನಮನೋಹರಃ= ಜನರ ಮನಸ್ಸಿಗೆ ಆಕರ್ಷಕ.

**ಅನುವಾದ–** ಆದ್ದರಿಂದ= ಭಗವಂತನ ಗುಣಪೂರ್ಣತ್ವ ಮತ್ತು ಭೇದಗಳಿಗೆ ಗಾಢ ಸಂಬಂಧವಿರುವುದರಿಂದ ಈ ವಿಮರ್ಶೆಯೆಂಬ ಗಾಳಿಯು ಒಂದು ಸೌರಭದಲ್ಲಿ ಇನ್ನೊಂದು ಸೌರಭವನ್ನು ಸೇರಿಸಿದೆ. ಆದ್ದರಿಂದ ಈ ಯುಕ್ತಿಮಲ್ಲಿಕಾ ಗ್ರಂಥವು, ಅಥವಾ ಈ ಸಂಯುಕ್ತಸುಗಂಧವು ಜನರ ಮನಸ್ಸಿಗೆ ಆಕರ್ಷಕವಾಗಿದೆ.

**ಭಾವವಿಲಾಸಿನೀ–** ಅತೋ ಭಗವದ್ಗುಣಾನಾಮನ್ಯೋನ್ಯಮಪ್ಯೇಕೀಭೂತತ್ವಾತ್ । ವಿಚಾರವಾತಃ ವಿಚಾರಾಖ್ಯವಾಯುಃ । ಸೌರಭೇಽನ್ಯಸೌರಭೇ । ಸೌರಭಾಂತರಂ ಸೌರಭಾಂತರಪ್ರಮೇಯಂ ಕ್ವಚಿತ್‌ಕ್ವಚಿತ್‌ಪ್ರಸಂಗಾತ್ ಸ್ಪೃಶತೀತಿ ಭಾವಃ । ಸೌರಭಸಂಯೋಜನಂ ವಾಯೋರೇವ ಧರ್ಮ ಇತ್ಯತೋ ವಿಚಾರವಾತ ಇತ್ಯುಕ್ತಮ್ । ತತ್ತಸ್ಯಾನ್ನಿಶ್ರಣಾತ್ ॥ ೫೧೩ ॥

**ವಿವರಣೆ**— ಗಾಳಿಯು ಒಂದು ಹೂವಿನ ಸುಗಂಧದ ಜೊತೆಗೆ ಬೇರೆ ಹೂವಿನ ಸುಗಂಧವನ್ನು ಒಟ್ಟುಕೂಡಿಸಿ ಜನರ ಮನಸ್ಸಿಗೆ ಆನಂದವನ್ನುಂಟು ಮಾಡುತ್ತದೆ. ಹೀಗೆಯೇ ಭಗವಂತನ ಗುಣಪೂರ್ಣತ್ವದ ವಿಚಾರವು ನಡೆಯುವಾಗ ಭೇದಸೌರಭದ ಪ್ರಮೇಯವು ಶುದ್ಧಿಸೌರಭದಲ್ಲಿ ಸೇರಿ ಜನರ ಮನಸ್ಸನ್ನು ಮುದಗೊಳಿಸುತ್ತದೆ.

**ತಥಾಪಿ ತತ್ತದರ್ಥಸ್ಯ ತತ್ರತತ್ರ ವಿಶೇಷತಃ ।**
**ವಿಚಾರಣಾತ್ ಸೌರಭಾಣಾಂ ಸರ್ವಸ್ವಂ ಭಾತಿ ಪಂಚಧಾ ॥ ೫೧೪ ॥**

**ಅರ್ಥ**— ತಥಾಪಿ= ಆದರೂ (ಸೌರಭಗಳಲ್ಲಿ ವಿಷಯಸಾಂಕರ್ಯವು ಕಂಡುಬಂದರೂ), ತತ್ರ ತತ್ರ= ಆಯಾ ಸೌರಭಗಳಲ್ಲಿ, ತತ್ತದರ್ಥಸ್ಯ= ಆಯಾ ವಿಷಯಗಳನ್ನು, ವಿಶೇಷತಃ ವಿಚಾರಣಾತ್= ವಿಶೇಷವಾಗಿ ವಿಮರ್ಶಿಸಿರುವುದರಿಂದ, ಸೌರಭಾಣಾಂ ಸರ್ವಸ್ವಂ= ಸಕಲ ಸೌರಭಗಳು, ಪಂಚಧಾ= ಐದು ವಿಧವಾಗಿ, ಭಾತಿ= ಕಂಡುಬರುತ್ತವೆ.

**ಅನುವಾದ— ಒಂದೇ ವಿಷಯವನ್ನು ಅನೇಕ ಸೌರಭಗಳಲ್ಲಿ ವಿಚಾರ ಮಾಡುವುದಾದರೆ ಸೌರಭ ಭೇದ ಹೇಗೆ? ಆಯಾ ಸೌರಭಗಳಲ್ಲಿ ಆಯಾ ವಿಷಯಗಳನ್ನು ವಿಶೇಷವಾಗಿ ಹಾಗೂ ಸಮಗ್ರವಾಗಿ ವಿಚಾರ ಮಾಡಿರುವುದರಿಂದ ಅದನ್ನು ಪರಿಗಣಿಸಿ ಯುಕ್ತಿಮಲ್ಲಿಕೆಯಲ್ಲಿ ಸಕಲ ಸೌರಭಗಳೂ ಐದು ಭಾಗವಾಗಿ ಪ್ರಕಾಶಿಸುತ್ತಿವೆ.**

**ಭಾವವಿಲಾಸಿನೀ— ತರ್ಹಿ ಸೌರಭಭೇದಃ ಕಿಂ ನಿಮಿತ್ತ ಇತ್ಯತ ಆಹ — ತಥಾಪೀತಿ ॥ ೫೧೪ ॥**

**ಅಗ್ರತೋ ಜಾತಪುರುಷಂ ರುದ್ರಂ ಪಶುಪತಿಂ ಪುರಾ ।**
**ದೇವಾಃ ಸರ್ವೇಽಪಿ ಯಜನಯೋಗ್ಯತ್ವಾದ್ಯಜ್ಞನಾಮಕಮ್ ।**
**ಪ್ರೌಕ್ಷನ್ ಬರ್ಹಿಷಿ ಯೂಪೇ ತಮಬಧ್ನನ್ ಪುರುಷಂ ಪಶುಮ್ ॥ ೫೧೫ ॥**

**ಅರ್ಥ**— ಪುರಾ = ಹಿಂದೆ, ಸರ್ವೇ ಅಪಿ ದೇವಾಃ = ಎಲ್ಲ ದೇವತೆಗಳು, ಅಗ್ರತಃ= ಇಂದ್ರಾದಿ ದೇವತೆಗಳಿಗಿಂತ ಮೊದಲಿಗೆ, ಜಾತಪುರುಷಂ = ಹುಟ್ಟಿದ ಪುರುಷನಾದ, ಪಶುಪತಿಂ = ಉತ್ತಮ ಪಶು ಎನಿಸಿದ ಹಾಗೂ, ಯಜನಯೋಗ್ಯತ್ವಾತ್ = ಯಾಗದಲ್ಲಿ ಹೋಮಿಸಲು ಯೋಗ್ಯನಾದ್ದರಿಂದ, ಯಜ್ಞನಾಮಕಂ = ಯಜ್ಞ ಎಂಬ ಹೆಸರನ್ನು ಹೊಂದಿರುವ, ತಂ = ಆ, ರುದ್ರಂ = ರುದ್ರನನ್ನು, ಪುರುಷಂ ಪಶುಂ = ಪುರುಷ ಪಶುವನ್ನಾಗಿ, ಯೂಪೇ = ಯಾಗಸ್ತಂಭಕ್ಕೆ, ಅಬಧ್ನನ್ = ಕಟ್ಟಿದರು. ಬರ್ಹಿಷಿ = ದರ್ಭೆಗಳಿಂದ, ಪ್ರೌಕ್ಷನ್ = ಪ್ರೋಕ್ಷಿಸಿದರು.

**ಅನುವಾದ— ಹಿಂದೆ ಇಂದ್ರಾದಿದೇವತೆಗಳು ತಮಗಿಂತ ಮೊದಲು ಹುಟ್ಟಿದ, ಯಜ್ಞದಲ್ಲಿ ಹೋಮಿಸಲು ಯೋಗ್ಯನಾದ್ದರಿಂದ ಯಜ್ಞನಾಮಕನಾದ, ಉತ್ತಮ ಪಶುವಾದ ಆ ರುದ್ರ ಪುರುಷನನ್ನು ಪಶುವಾಗಿ ಕಲ್ಪಿಸಿ, ಅವನನ್ನು ಯೂಪಕ್ಕೆ ಕಟ್ಟಿ ದರ್ಭೆಗಳಿಂದ ಪ್ರೋಕ್ಷಿಸಿದರು.**

**ಭಾವವಿಲಾಸಿನೀ–** ಸಾಮಾನ್ಯತ ಉಪರಿತನಸೂಕ್ತಭಾಗಸ್ಯಾಪ್ಯರ್ಥಂ ವಕ್ತುಂ ತಂ ಯಜ್ಞಂ ಬರ್ಹಿಷಿ ಪ್ರೌಕ್ಷನ್ನಿತಿ ವಾಕ್ಯಸ್ಯ ಸೂಕ್ತಪ್ರತಿಪಾದ್ಯಮಹಾಪುರುಷಾರ್ಥತಾಂ ನಿವಾರಯಿತುಂ ತಾವದರ್ಥಮಾಹ – **ಅಗ್ರತೋ ಜಾತೇತಿ ॥** ಅಗ್ರತೋ ಜಾತಪುರುಷಮಿತಿ ಪುರುಷಂ ಜಾತಮಗ್ರತ ಇತ್ಯಸ್ಯಾರ್ಥಕಥನಮ್ । ಅಗ್ರತಃ ಇಂದ್ರಾದಿಭ್ಯೋಽಗ್ರತಃ । ನತು ಸರ್ವೇಷಾಮಗ್ರತಃ । ಆದಿಪುರುಷಜಾತವಿರಾಟ್ ಪುರುಷಜಾತತ್ವಕಥನಾದಸ್ಯ ಪುರುಷಸ್ಯ । ನನು ತಮಿತಿ ಆದಿಪುರುಷಸ್ಯೈವ ಕುತೋ ನ ಪರಾಮರ್ಶ ಇತಿ ಚೇನ್ನ । ಸನ್ನಿಹಿತಾಧಿಪುರುಷಪರಿತ್ಯಾಗೇನ ವ್ಯವಹಿತಮಹಾಪುರುಷಪರಾಮರ್ಶೇ ಕಾರಣಾಭಾವತ್ । ಸ ಕ ಇತ್ಯತ ಆಹ – **ರುದ್ರಮಿತಿ ॥** ಮಹಾಪುರುಷಪುತ್ರವಿರಾಟ್‌ಪುರುಷಜಾತತ್ವಕಥನಾತ್ । ಶಂಭೋಃ ಪಿತಾಮಹೋ ಬ್ರಹ್ಮಾ ಪಿತಾ ಶಕ್ರಾದ್ಯಧೀಶ್ವರ ಇತಿ ವಾಸುದೇವಸಹಸ್ರನಾಮಸಮಾಖ್ಯಯಾ ಯಸ್ಯಾದ್ಯ ಆಸೀದ್ಗುಣವಿಗ್ರಹೋ ಮಹಾನ್‌ವಿಜ್ಞಾನಧಿಷ್ಣ್ಯೋ ಭಗವಾನಜಃ ಕಿಲ । ಯತ್‌ಸಂಭವೋಽಹಮಿತಿ ಭಾಗವತೋಕ್ತರುದ್ರವಾಕ್ಯಸಮಾಖ್ಯಯಾ ಚ ರುದ್ರಸ್ಯೈವಾತ್ರಪ್ರಾಪ್ತೇಃ । ಯುಕ್ತ್ಯಂತರಂ ಚ ಸೂಚಯತಿ॥ **ಪಶುಪತಿಮಿತಿ ॥** ಪಶೂನಾಂ ಪತಿರಿತಿ ಹಿ ಪಶುಪತಿಶಬ್ದಾರ್ಥಃ । ಸಚಾದಿಕಾಲೀನದೇವಯಜ್ಞೇ ಪ್ರಾಥಮಿಕಪಶುತ್ವ ಏವ ಸಂಭವತಿ ನಾನ್ಯಥಾಽತೋಽಪ್ಯಯಂ ರುದ್ರ ಏವ । ತರ್ಹ್ಯಸ್ಯ ಪುರುಷಪಶೋರ್ಯಜ್ಞನಾಮ ಕಥಮಿತ್ಯತ ಆಹ – **ಯಜನೇತಿ ॥** ಇಜ್ಯತೇಽನೇನೇತಿ ವ್ಯುತ್ಪತ್ತ್ಯಾ ಯಜ್ಞ ಇತ್ಯರ್ಥಃ । ಪ್ರೌಕ್ಷನ್‌ಪ್ರೋಕ್ಷಣಂ ಕೃತವಂತಃ । ಯೂಪೇ ತಮಿತ್ಯಾದಿನಾ ಅಬಧ್ನನ್ ಪುರುಷಂ ಪಶುಮಿತ್ಯಸ್ಯ ವಾಕ್ಯಸ್ಯ ದೂರಸ್ಥಸ್ಯಾಪಿ ಸಂಗತತ್ವಾದರ್ಥಕಥನಮ್ । ತತ್ರ ಸ್ಪಷ್ಟಂ ಪುರುಷಂ ಪಶುಮಿತಿ ಪರುಷಸ್ಯ ಪಶುತ್ವಕಥನಾತ್ ಅತ್ರಾಪಿ ಪುರುಷಪಶುರೇವ ಗೃಹ್ಯತೇ । ನ ತ್ವಾದಿಪುರುಷಃ ॥ ೫೧೫ ॥

**ವಿವರಣೆ–** ದೇವತೆಗಳು ಹಿಂದೆ ಭಗವಂತನ ಪ್ರೀತಿಗಾಗಿ ಮಾಡಿದ ಹೋಮದಲ್ಲಿ ರುದ್ರದೇವರನ್ನು ಯಾಗಪಶುವನ್ನಾಗಿ ಉಪಯೋಗಿಸಿಕೊಂಡರು. ಆ ರುದ್ರದೇವರಾದರೂ ಇಂದ್ರಾದಿ ದೇವತೆಗಳಿಗಿಂತ ಮೊದಲೇ ಹುಟ್ಟಿದವರಾದ್ದರಿಂದ ಪಶುಪತಿ ಎನಿಸಿದ್ದಾರೆ. ಹೋಮದಲ್ಲಿ ಹೋಮಿಸಲು ಯೋಗ್ಯರಾದ್ದರಿಂದ ಅವರನ್ನು ಶ್ರುತಿಯು ಯಜ್ಞ ಎಂಬ ಹೆಸರಿನಿಂದ ಕರೆದಿದೆ. ಎಲ್ಲಾ ದೇವತೆಗಳು ಅಂತಹ ರುದ್ರದೇವರನ್ನು ಪಶುವನ್ನಾಗಿ ಸ್ವೀಕರಿಸಿ ಯೂಪಸ್ತಂಭಕ್ಕೆ ಕಟ್ಟಿ ಯಾಗವಿಧಿಯ ಅಂಗವಾಗಿ ದರ್ಭೆಗಳಿಂದ ಪ್ರೋಕ್ಷಿಸಿದರು. 'ಪುರುಷಂ ಪಶುಂ' ಎಂಬಲ್ಲಿ ಪುರುಷಶಬ್ದವಾಚ್ಯನಾದವನು ರುದ್ರ.

ಅಗ್ರತಃ ಎಂಬುದಕ್ಕೆ ಇಂದ್ರಾದಿಗಳಿಗಿಂತ ಮೊದಲು ಎಂದು ಅರ್ಥ. ಎಲ್ಲರಿಗಿಂತಲೂ ಮೊದಲು ಎಂದು ಅರ್ಥವಲ್ಲ.

'ಶಂಭೋಃ ಪಿತಾಮಹೋ ಬ್ರಹ್ಮಪಿತಾ ಶಕ್ರಾದ್ಯಧೀಶ್ವರಃ 'ಎಂಬ ವಾಸುದೇವಸಹಸ್ರನಾಮದಲ್ಲಿ ರುದ್ರನ ತಂದೆ ಚತುರ್ಮುಖಬ್ರಹ್ಮ ಹಾಗೂ ಪಿತಾಮಹ (ತಾತ) ಪರಮಾತ್ಮ ಎಂದು ಹೇಳಿದೆ.

ಯಸ್ಯಾದ್ಯ ಆಸೀದ್ಗುಣವಿಗ್ರಹೋ ಮಹಾನ್ ವಿಜ್ಞಾನಧಿಷ್ಣ್ಯೋ ಭಗವಾನಜಃ ಕಿಲ ।

ಯತ್ಸಂಭವೋಽಹಂ....... ಎಂಬ ಭಾಗವತವಾಕ್ಯದಲ್ಲಿ ರುದ್ರದೇವರೇ ಸ್ವತಃ ತಾನು ಮಹತ್ತತ್ತ್ವಾಭಿಮಾನಿಯಾದ ಚತುರ್ಮುಖನ ಮಗ ಎಂದು ಹೇಳಿಕೊಂಡಿದ್ದಾರೆ. ಆದ್ದರಿಂದ ಯಜ್ಞಪಶುವು ರುದ್ರನೇ ಹೊರತು ಚತುರ್ಮುಖಬ್ರಹ್ಮನಲ್ಲ.

ಪಶುಪತಿಪದವೂ ರುದ್ರನನ್ನೇ ಹೇಳುತ್ತಿದೆ. ಏಕೆಂದರೆ ಪ್ರಥಮತಃ ನಡೆದ ಯಾಗದಲ್ಲಿ ಪ್ರಥಮ ಪಶುವಾದವನೇ ಪಶುಪತಿ. ಅವನೇ ರುದ್ರ.

ದೇವಾಃ ಪುರುಷಮೇಧೇನ ತೇನ ಯಜ್ಞೇನ ಸರ್ವಶಃ ।
ಅಯಜನ್ ಯಜ್ಞಪುರುಷಂ ಪೂಜ್ಯತ್ವಾದ್ಯಜ್ಞನಾಮಕಮ್ ॥ ೫೧೬ ॥

**ಅರ್ಥ–** ಸರ್ವಶಃ= ಎಲ್ಲ, ದೇವಾಃ= ಇಂದ್ರಾದಿದೇವತೆಗಳು, ತೇನ ಪುರುಷಮೇಧೇನ= ಆ ಪುರುಷಮೇಧ ಎಂಬ, ಯಜ್ಞೇನ= ಯಾಗದಿಂದ, ಪೂಜ್ಯತ್ವಾತ್= ಪೂಜ್ಯನಾದ್ದರಿಂದ, ಯಜ್ಞನಾಮಕಂ= ಯಜ್ಞ ಎಂಬ ನಾಮವುಳ್ಳ, ಯಜ್ಞಪುರುಷಂ= ಯಜ್ಞದಲ್ಲಿ ಆರಾಧ್ಯನಾದ ಪರಮಾತ್ಮನನ್ನು, ಅಯಜನ್= ಹೋಮದ ಮೂಲಕ ಪೂಜಿಸಿದರು.

**ಅನುವಾದ–** ಸಾಕ್ಷಾತ್ ರುದ್ರನನ್ನೇ (ಪುರುಷನನ್ನೇ) ಹೋಮಿಸುವುದರಿಂದ ಪುರುಷಮೇಧ ಎನಿಸಿದ ಯಜ್ಞದ ಮೂಲಕ, ಇಂದ್ರಾದಿಗಳು ಪರಮಾತ್ಮನನ್ನು ಪೂಜಿಸಿದರು. ಪರಮಾತ್ಮನು ಸಕಲರಿಂದಲೂ ಪೂಜ್ಯನಾದ್ದರಿಂದ ಯಜ್ಞನೆನಿಸಿದ್ದಾನೆ. ಅವನೇ ಯಜ್ಞದಲ್ಲಿ ಆರಾಧ್ಯನಾದ ಪ್ರಧಾನದೇವತೆ.

**ಭಾವವಿಲಾಸಿನೀ–** ಯಜ್ಞೇನ ಯಜ್ಞಮಿತ್ಯಸ್ಯಾರ್ಥಮಾಹ – ದೇವ ಇತಿ ॥ ತೇನ ಪುರುಷಮೇಧೇನ ಯಜ್ಞೇನ ಪುರುಷಮೇಧಾಖ್ಯಯಜ್ಞೇನೇತ್ಯರ್ಥಃ । ಯಜ್ಞಮಿತ್ಯಸ್ಯಾರ್ಥಃ । ಯಜ್ಞಪುರುಷಮಿತಿ ॥ ಇದಮುಕ್ತಂ ಭವತಿ । ರುದ್ರಾಖ್ಯಪುರುಷಪಶುಂ ಬರ್ಹಿಷಿ ಪ್ರೋಕ್ಷ್ಯ ಯೂಪೇ ಬಧ್ವಾ ತೇನ ಪಶುನಾ ಯಜ್ಞನಾಮಕಂ ಮಹಾಪುರುಷಮಯಜಂತೇತಿ । ಇಜ್ಯತ ಇತಿ ವ್ಯುತ್ಪತ್ತ್ಯಾ ಯಜ್ಞಾಖ್ಯ- ಕರ್ಮಣಾ ಪೂಜ್ಯತ್ವಾದ್ಯಜ್ಞನಾಮಕ ಮಿತ್ಯರ್ಥಃ ॥ ೫೧೬ ॥

**ವಿವರಣೆ–** (1) ಪುರುಷಮೇಧ= ರುದ್ರನು ಅಗ್ರತೋ ಜಾತಪುರುಷ. ಇವನನ್ನು ಆಹುತಿಯಾಗಿಸಿದ್ದರಿಂದ ಯಜ್ಞಕ್ಕೆ ಪುರುಷಮೇಧ ಎಂದು ಹೆಸರು.

ರುದ್ರನೆಂಬ ಯಜ್ಞಪಶುವನ್ನು ಪ್ರೋಕ್ಷಿಸಿ ಯೂಪದಲ್ಲಿ ಕಟ್ಟಿ ಆ ಪಶುವಿನಿಂದ ಯಜ್ಞನಾಮಕಪರಮಾತ್ಮನನ್ನು ಪೂಜಿಸಿದರು ಎಂದು ಅರ್ಥ.

ತಮಿತ್ಯುಕ್ತಿರ್ಹವಿಃಪುಂಸೋ ಯೋ ಬಧ್ಯೋ ವಕ್ಷ್ಯತೇ ಪಶುಃ ।
ಸ ಹಿ ಪ್ರೋಕ್ಷ್ಯಸ್ತೇನ ತಸ್ಮಾದಿತ್ಯಾದಿಶ್ಚಾತ್ರ ಪುಂಸ್ತುತಿಃ ॥ ೫೧೭ ॥

**ಅರ್ಥ—** ಅತ್ರ= ಈ ಪುರುಷಸೂಕ್ತದಲ್ಲಿ, ತಮ್ ಇತ್ಯುಕ್ತಿಃ= 'ತಂ ಯಜ್ಞಂ ಬರ್ಹಿಷಿ..' ಈ ಉಕ್ತಿಯು, ಯಃ ಬಧ್ಯಃ ಪಶುಃ= ಯಾವ ಬಂಧನಾರ್ಹವಾದ ಪಶುವು, ವಕ್ಷ್ಯತೇ= ಮುಂದೆ (ಮಂತ್ರ ೧೫) ಹೇಳಲ್ಪಡುವುದೋ, (ತಸ್ಯ= ಅ), ಹವಿಃ ಪುಂಸಃ= ಹವಿಸ್ ಆಗುವ ಪುರುಷನಿಗೆ (ಅನ್ವಯಿಸುತ್ತದೆ). ಹಿ= ಏಕೆಂದರೆ, ಸಃ= ಆ ಬಂಧಿಸಲ್ಪಟ್ಟ ಪಶುವೇ, ಪ್ರೋಕ್ಷ್ಯಃ= ಪ್ರೋಕ್ಷಣಾರ್ಹ.

ತೇನ, ತಸ್ಮಾದ್ ಇತ್ಯಾದಿಃ ಚ= 'ತೇನ ದೇವಾ...' (ಮಂತ್ರ ೭) 'ತಸ್ಮಾದ್ ಯಜ್ಞಾದ್..' (ಮಂತ್ರ ೮, ೯) ಮತ್ತು 'ತಸ್ಮಾದಶ್ವಾ...' (ಮಂತ್ರ ೧೦)- ಈ ಉಕ್ತಿಗಳು. ಪುಂಸ್ತುತಿಃ= ಮಹಾಪುರುಷನ ಸ್ತುತಿಗಳು.

**ಅನುವಾದ— ಈ ಪುರುಷಸೂಕ್ತದಲ್ಲಿ 'ತಂ ಯಜ್ಞಂ ಬರ್ಹಿಷಿ... ಜಾತಮಗ್ರತಃ' ಈ ಉಕ್ತಿಯು, ಯಾವ ಪಶುವು ಬಂಧನಾರ್ಹ ಎಂದು ಮುಂದೆ (ಮಂತ್ರ ೧೫) ಹೇಳಲ್ಪಡುವುದೋ, ಆ ಹವಿಸ್ ಆಗುವ ಪುರುಷನಿಗೆ ಅನ್ವಯಿಸುತ್ತದೆ. ಏಕೆಂದರೆ ಬಂಧಿಸಲ್ಪಟ್ಟ ಪಶುವೇ ಪ್ರೋಕ್ಷಣಾರ್ಹ.**

**'ತೇನ ದೇವಾ... ಋಷಯಶ್ಚಯೇ' (ಮಂತ್ರ ೭) 'ತಸ್ಮಾದ್ ಯಜ್ಞಾದ್... ಗ್ರಾಮ್ಯಾಶ್ಚಯೇ' (ಮಂತ್ರ ೮), 'ತಸ್ಮಾದ್ ಯಜ್ಞಾದ್.... ಅಜಾಯತ' (ಮಂತ್ರ ೯), 'ತಸ್ಮಾದಶ್ವಾ ಅಜಾಯಂತ... ಆಜಾವಯಃ' (ಮಂತ್ರ ೧೦) ಇವು ಮಹಾಪುರುಷನ ಸ್ತುತಿಗಳು.**

**ಭಾವವಿಲಾಸಿನೀ—** ಅಬಧ್ನನ್‌ಪುರುಷಂ ಪಶುಮಿತ್ಯತ್ರ ಯಃ ಪಶುಃ ಬಂಧನಯೋಗ್ಯತ್ವಾತ್ ಬಧ್ಯೋ ವಕ್ಷ್ಯತೇ । ತಸ್ಯೈವ ಹವಿಃ ಪುಂಸಃ ಯಜ್ಞಹವೀರೂಪಪುಂಸಃ ತಮಿತ್ಯನೇನೋಕ್ತಿಃ ಪರಾಮರ್ಶಃ । ಹಿ ಯಸ್ಮಾತ್ ಸ ಏವ ಪ್ರೋಕ್ಷ್ಯಃ । ಬಂಧನಪ್ರೋಕ್ಷಣಯೋರೇಕಾಧಿಕರಣತ್ವನಿಯಮಾತ್ । ಇಯಮಪಿ ತಮಿತ್ಯತ್ರೋಕ್ತಪುರುಷಸ್ಯ ಪಶುಪುರುಷತ್ವೇ ಯುಕ್ತಿಃ । ತೇನ ದೇವಾ ಅಯಜಂತೇತಿ ವಾಕ್ಯಂ, ತಸ್ಮಾತ್, ತಸ್ಮಾದ್ಯಜ್ಞಾತ್‌ಸರ್ವಹುತ ಇತ್ಯಾದಿ ಗ್ರಂಥಶ್ಚ ಅತ್ರ ಸೂಕ್ತೇ ಪುಂಸ್ತುತಿಃ ಮಹಾಪುರುಷಸ್ಯ ಸ್ತುತಿಃ ॥ ೫೧೭ ॥

ಜ್ಯಾಯಸ್ತ್ವಂ ಮಹಿಮಾವ್ಯಾಪ್ತಿರಮೃತತ್ವೇಶತಾದಿಕಮ್ ।
ನಹಿ ಬಧ್ಯಪಶೋರ್ದೇವಸ್ರಷ್ಟ್ರಂಗತ್ವಂ ತದಿಜ್ಯತಾ ॥ ೫೧೮ ॥

**ಅರ್ಥ—** ಜ್ಯಾಯಸ್ತ್ವಂ= ಸರ್ವೋತ್ತಮತ್ವವು, ವ್ಯಾಪ್ತಿಃ= ವ್ಯಾಪ್ತಿಯು, ಅಮೃತತ್ವೇಶತಾದಿಕಂ= ಮುಕ್ತನಿಯಾಮಕತ್ವ, ದೇವಸ್ರಷ್ಟ್ರಂಗತ್ವಂ= ದೇವತೆಗಳನ್ನು ಸೃಷ್ಟಿಸುವ ಅಂಗಗಳು, ತದಿಜ್ಯತಾ= ದೇವತೆಗಳಿಂದ ಪೂಜೆಗೊಳ್ಳುವುದು ಇವುಗಳು, ಬಧ್ಯಪಶೋಃ= ಬಂಧನಕ್ಕೊಳಗಾಗುವ ಪಶುವಿನ, ಮಹಿಮಾ ನಹಿ= ಮಹಿಮೆಯಲ್ಲವಷ್ಟೇ.

**ಅನುವಾದ–** ಸರ್ವೋತ್ತಮತ್ವ , ವ್ಯಾಪ್ತಿ ಮುಕ್ತನಿಯಾಮಕತ್ವ ದೇವತೆಗಳನ್ನು ಸೃಷ್ಟಿಸುವ ಅಂಗಗಳು ದೇವತೆಗಳಿಂದ ಪೂಜೆಗೊಳ್ಳುವುದು- ಇವುಗಳು ಬಂಧನಕ್ಕೊಳಗಾಗುವ ಪಶುವಿನ ಮಹಿಮೆಯಲ್ಲವಷ್ಟೇ.

**ಭಾವವಿಲಾಸಿನೀ–** ನನ್ವೇಕಪ್ರಕರಣಪಠಿತವಾಕ್ಯಾನಾಂ ಕುತೋ ವಿಭಜ್ಯಾರ್ಥಕಥನಮಿತ್ಯತ ಆಹ –**ಜ್ಯಾಯಸ್ತ್ವಮಿತಿ** ॥ ಅಮೃತತ್ವಸ್ಯೇಶತಾ ಅಮೃತತ್ವೇಶತಾ । ಏತಾದಾದಿಕಂ ಪೂರ್ವವಾಕ್ಯೋಕ್ತಂ ಪ್ರಮೇಯಮ್ । ತಥೋತ್ತರವಾಕ್ಯೋಕ್ತಂ ದೇವಸ್ರಷ್ಟೃಂಗತ್ವಂ ದೇವಾನಾಮಿಂದ್ರಾಗ್ನ್ಯಾದೀನಾಂ ಸ್ರಷ್ಟೄಣ್ಯಂಗಾನಿ ಯಸ್ಯ ಸಃ ತಸ್ಯ ಭಾವಸ್ತತ್ತ್ವಮ್ । ತದಿಜ್ಯತಾ ತೈರ್ದೇವೈಃ ಕೃತಾ ಇಜ್ಯಾ ಯಸ್ಯ ಸಃ ತದಿಜ್ಯಸ್ತಸ್ಯ ಭಾವಸ್ತದಿಜ್ಯತಾ । ಸಾ ಚ ಬಧ್ಯಪಶೋರ್ನಹಿ । ಅತಃ ಪೂರ್ವವಾಕ್ಯೋಕ್ತೋಽಪಿ ಮಹಾಪುರುಷ ಏವಾ ಉತ್ತರವಾಕ್ಯೋಕ್ತೋಽಪಿ ಸ ಏವ । ತಮಿತಿ ಮಧ್ಯವಾಕ್ಯೇ ಯಜ್ಞಪಶುರಿತಿ ವಿಭಜ್ಯ ಕಥನಮಿತಿ ಭಾವಃ ॥ ೫೧೮ ॥

**ವಿವರಣೆ–** (1) ಒಂದೇ ಸೂಕ್ತದಲ್ಲಿರುವ ಪುರುಷ ಶಬ್ದಕ್ಕೆ ಬೇರೆ ಬೇರೆ ಅರ್ಥಗಳನ್ನು ಹೇಳಲಾಗಿದೆ. ಇದಕ್ಕೆ ಕಾರಣವನ್ನು ಈ ಪದ್ಯವು ಹೇಳಿದೆ.

(2) ಜ್ಯಾಯಸ್ತ್ವವು 3ನೆಯ ಮಂತ್ರದಲ್ಲಿ, ವ್ಯಾಪ್ತಿಯು 2ನೆಯ ಮಂತ್ರದಲ್ಲಿ, ಅಮೃತತ್ವೇಶತಾದಿಯು 2ನೆಯ ಮಂತ್ರದಲ್ಲಿ ದೇವಸ್ರಷ್ಟೃಂಗತ್ವವು 13, 14ನೆಯ ಮಂತ್ರಗಳಲ್ಲಿ ತದಿಜ್ಯತ್ವವು 16ನೆಯ ಮಂತ್ರದಲ್ಲಿ ಹೇಳಲ್ಪಟ್ಟಿದೆ.

ತೇ ಹ ನಾಕಂ ಎಂಬಲ್ಲಿ ನಾಕಶಬ್ದವು ಸ್ವರ್ಗವನ್ನು ಪ್ರತಿಪಾದಿಸುವುದಿಲ್ಲ:-

**ಅಕೇನ ಸರ್ವಥಾ ಶೂನ್ಯಂ ನಿರ್ದುಃಖಂ ಮೋಕ್ಷಮೇವ ಹಿ ।**
**ನಾಕಾಭಿಧಂ ಪ್ರಾಪುರಂತೇ ನಾಕಿಪ್ರಾಪ್ಯಃ ಸ ಏವ ಹಿ ।**
**ನಾಕೋಽನ್ಯಸ್ಯ ತು ನಾಕಸ್ಯ ಸಿದ್ಧತ್ವಾತ್ಪೂರ್ವಮಪ್ಯಲಮ್ ॥ ೫೧೯ ॥**

**ಅರ್ಥ–** ಅಕೇನ ಸರ್ವಥಾಶೂನ್ಯಂ= ಸರ್ವಾತ್ಮನಾ ದುಃಖರಹಿತವಾದ (ಅಂದರೆ), ನಿರ್ದುಃಖಂ= ದುಃಖಲೇಶವಿಲ್ಲದ (ಆದ್ದರಿಂದಲೇ) ನಾಕಾಭಿಧಂ= ನಾಕ ಎಂಬ ಹೆಸರುಳ್ಳ, ಮೋಕ್ಷಮೇವ= ಮೋಕ್ಷವನ್ನೇ, ಅಂತೇ= ಸಾಧನೆಯ ಕೊನೆಯಲ್ಲಿ (ದೇವತೆಗಳು) ಪ್ರಾಪುಃ ಹಿ= ಹೊಂದಿದರಷ್ಟೇ. ಸ ಏವ ಹಿ ನಾಕಃ= ಆ ಮೋಕ್ಷವೇ, ನಾಕಿಪ್ರಾಪ್ಯಃ ಹಿ= ಸ್ವರ್ಗ ನಿವಾಸಿಗಳಿಂದ ಹೊಂದಲ್ಪಡಬೇಕಷ್ಟೆ! ಅನ್ಯಸ್ಯ ತು ನಾಕಸ್ಯ= ಬೇರೆ (ಮೋಕ್ಷವಲ್ಲದ) ನಾಕವು, ಪೂರ್ವಮಪಿ= ಮೊದಲೇ (ಪುರುಷಸೂಕ್ತವು ಹೇಳಿದ ಯಜ್ಞಾನುಷ್ಠಾನಕ್ಕಿಂತ ಮೊದಲೇ) ಅಲಂ= ಚೆನ್ನಾಗಿ, ಸಿದ್ಧತ್ವಾತ್= ಸಿದ್ಧವಾಗಿರುವುದರಿಂದ.

**ಅನುವಾದ–** ಸರ್ವಥಾ ದುಃಖರಹಿತವಾದ ಸ್ಥಿತಿಯೇ ನಾಕ. ಆದ್ದರಿಂದ ಮೋಕ್ಷಕ್ಕೆ ನಾಕ ಎಂದು ಹೆಸರು. ಸ್ವರ್ಗನಿವಾಸಿಗಳಾದ ಇಂದ್ರಾದಿದೇವತೆಗಳು ಪುರುಷ ಸೂಕ್ತವು

**ಹೇಳುವ ಯಜ್ಞಾನುಷ್ಠಾನದ ಮೂಲಕ ಈ ನಾಕವನ್ನು ಹೊಂದುತ್ತಾರೆ. ಸ್ವರ್ಗಕ್ಕೆ 'ನಾಕ' ಎಂಬ ಹೆಸರಿದೆ. ಈ ನಾಕವನ್ನು ಇಂದ್ರಾದಿದೇವತೆಗಳು ಮೊದಲೇ ಹೊಂದಿದ್ದಾರೆ. ಅಲ್ಲಿ ಪರಮಪುರುಷನ ಆರಾಧನೆಯನ್ನು ಮಾಡಿ 'ನಾಕಂ ಸಚಂತೆ' ಎಂದು ಪುರುಷಸೂಕ್ತವು ಹೇಳುವುದರಿಂದ, ಈ ನಾಕವು ಸ್ವರ್ಗವಲ್ಲ.**

**ಭಾವವಿಲಾಸಿನೀ–** ತೇಹ ನಾಕಮಿತ್ಯತ್ರೋಕ್ತನಾಕಪದಸ್ಯ ಸ್ವರ್ಗಪರತಾಂ ನಿವಾರಯಿತುಂ ಯೋಗಲಬ್ಧಾರ್ಥಮಾಹ – **ಅಕೇನೇತಿ** ॥ ಕಂ ಸುಖಂ ತದ್ವಿರುದ್ಧಮಕಂ ದುಃಖಂ ತೇನ ಸರ್ವಥಾ ಶೂನ್ಯಮ್ । ನಞ್‌ದ್ವಯಾರ್ಥಕಥನಮ್ ॥ **ಸರ್ವಥೇತಿ** ॥ ತಸ್ಯೈವ ಸ್ಪಷ್ಟೀಕರಣಮ್ ॥ **ನಿರ್ದುಃಖಮಿತಿ** ॥ ಅತ ಏವ ನಾಕಾಭಿಧಂ ಮೋಕ್ಷಮಂತೇ ಪ್ರಾಪುರಿತಿ ಸಂಬಂಧಃ । ನಾಕಪದಾರ್ಥಪರ್ಯಾಲೋಚನಾಯಾಮತ್ರೋಕ್ತೋ ನಾಕೋ ಮೋಕ್ಷ ಏವ ಭವೇದಿತಿ ಭಾವಃ ॥ ಯುಕ್ತ್ಯಂತರಂ ಚಾಹ – **ನಾಕಿಪ್ರಾಪ್ಯ ಇತಿ** ॥ ಹಿ ಯಸ್ಮಾತ್ ಸ ಮೋಕ್ಷಾಖ್ಯೋ ನಾಕ ಏವ ನಾಕಿಪ್ರಾಪ್ಯಃ। ತಸ್ಮಾಚ್ಚ ನಾಕಾಭಿಧಮಿತಿ ಪೂರ್ವೇಣಾನ್ವಯಃ । ನಾಕಸ್ಯ ಪ್ರಾಕ್‌ಸಿದ್ಧತಾಂ ದ್ಯೋತಯಿತುಂ ದೇವೇತ್ಯನುಕ್ತ್ವಾ ನಾಕೀತ್ಯುಕ್ತಮ್ । ನಾಕೀತ್ಯತ್ರ ಸೂಚಿತಾಂ ಯುಕ್ತಿಂ ಸ್ಪಷ್ಟಮಾಹ – **ಅನ್ಯಸ್ಯೇತಿ** ॥ ಪೂರ್ವಮಪ್ಯಲಂ ಸಮ್ಯಕ್‌ಸಿದ್ಧತ್ವಾದಿತಿ ಸಂಬಂಧಃ । ನ ಹಿ ಪ್ರಾಕ್‌ಸಿದ್ಧಸ್ಯೈವ ಕರ್ಮಸಾಧ್ಯತಾಪಿ ಯುಕ್ತೇತಿ ಭಾವಃ ॥ ೫೧೯ ॥

**ವಿವರಣೆ–** ತೇ ಹ ನಾಕಂ ಮಹಿಮಾನಃ ಎಂಬಲ್ಲಿ ನಾಕಶಬ್ದಕ್ಕೆ ಮೋಕ್ಷವೆಂಬ ಅರ್ಥವನ್ನೇ ಹೇಳಬೇಕು. ಕ ಎಂದರೆ ಸುಖ. ಅಕ ಎಂದರೆ ಸುಖವಿರುದ್ಧವಾದ ದುಃಖ ಎಂದು ಅರ್ಥ. ನ ವಿದ್ಯತೇ ಅಕಂ ಯತ್ರ ಸಃ ನಾಕಃ - ಎಲ್ಲಿ ಯಾವರೀತಿಯ ದುಃಖವೂ ಇಲ್ಲವೋ ಅಂತಹ ನಾಕವೆಂದರೆ ಮೋಕ್ಷವೇ. ಇಂತಹ ನಾಕಪ್ರಾಪ್ತಿಗಾಗಿಯೇ ಮೊದಲೇ ಸ್ವರ್ಗಸುಖವನ್ನು ಚೆನ್ನಾಗಿ ಅನುಭವಿಸಿರುವ ದೇವತೆಗಳು ಭಗವಂತನನ್ನು ಆರಾಧಿಸುತ್ತಾರೆ. ಹೀಗೆ ಇಲ್ಲಿ ನಾಕ ಎಂದರೆ ಮೋಕ್ಷ ಎಂದರ್ಥ. ಸ್ವರ್ಗವೇ ನಾಕಶಬ್ದವಾಚ್ಯವೆಂಬ ಶಂಕೆಗೆ ಅವಕಾಶವಿಲ್ಲ. ಏಕೆಂದರೆ ಅಂತಹ ಸ್ವರ್ಗವು ದೇವತೆಗಳಿಗೆ ಮೊದಲೇ ಪ್ರಾಪ್ತವಾಗಿದೆ.

(1) ದೇವತೆಗಳಿಗೆ ಸ್ವರ್ಗವು ಮೊದಲೇ ಪ್ರಾಪ್ತವಾಗಿರುತ್ತದೆ ಎಂದು ಸೂಚಿಸಲು ರಾಜರು ಇಲ್ಲಿ ದೇವ ಎಂಬ ಪದವನ್ನು ಪ್ರಯೋಗಿಸದೆ ನಾಕಿ ಎಂಬ ಪದವನ್ನೇ ಪ್ರಯೋಗಿಸಿದ್ದಾರೆ.

(2) ಕ= ಸುಖ. ಅಕ= ದುಃಖ, ನಾಕ= ದುಃಖವಿರುದ್ಧ ಅರ್ಥಾತ್ ಸುಖ.

**ಪೂರ್ವಂ ಮುಕ್ತಾ ಯತ್ರ ಸಂತಿ ದೇವಾಃ ಕಿಲ ಸಹಸ್ರಶಃ ।**
**ತೈಃ ಸಹೈವ ಸ್ಥಿತಿರ್ಮೋಕ್ಷೇ ದೇವಾನಾಂ ನಾಪರತ್ರ ಹಿ ॥ ೫೨೦ ॥**

**ಅರ್ಥ–** ಯತ್ರ= ಎಲ್ಲಿ, ಪೂರ್ವಂ ಮುಕ್ತಾಃ ದೇವಾಃ = ಮೊದಲು ಮುಕ್ತರಾದ ದೇವತೆಗಳು, ಸಹಸ್ರಶಃ = ಸಾವಿರಾರು ಸಂಖ್ಯೆಯಲ್ಲಿ ಸಂತಿ ಕಿಲ = ಇದ್ದಾರೆ ಎಂದು

ಶ್ರುತಿಸ್ಮೃತಿಪ್ರಸಿದ್ಧಿಯು ಇದೆಯೋ, ದೇವಾನಾಂ = ದೇವತೆಗಳಿಗೆ, ತೈಃ ಸಹ = ಅಂತಹ ಪೂರ್ವಮುಕ್ತದೇವತೆಗಳೊಂದಿಗೆ, ಸ್ಥಿತಿಃ = ಇರುವಿಕೆಯು, ಮೋಕ್ಷೇ ಏವ ಹಿ= ಮೋಕ್ಷದಲ್ಲಿ ಮಾತ್ರ, ಅಪರತ್ರ = ಬೇರೆ ಸ್ವರ್ಗಾದಿ ಲೋಕಗಳಲ್ಲಿ, ನ = ಅಲ್ಲ

**ಅನುವಾದ–** ನಾಕಶಬ್ದವು ಮೋಕ್ಷವಾಚಕವೇ. ಏಕೆಂದರೆ ಯಜ್ಞದಿಂದ ಭಗವಂತನನ್ನು ಆರಾಧಿಸಿದ ದೇವತೆಗಳು ಯಾವ ಸ್ಥಾನದಲ್ಲಿ ಮೊದಲು ಮುಕ್ತರಾದ ಅಸಂಖ್ಯದೇವತೆಗಳು ಇರುತ್ತಾರೋ ಆ ಸ್ಥಾನದಲ್ಲಿ ಆ ಪೂರ್ವಮುಕ್ತದೇವತೆಗಳೊಂದಿಗೆ ಇರುತ್ತಾರೆ ಎಂದು ಪುರುಷಸೂಕ್ತವು ಹೇಳಿದೆ. ಇಂತಹ ಸ್ಥಾನವು ಮೋಕ್ಷವೇ. ಸ್ವರ್ಗಾದಿಗಳು ಅಲ್ಲ. ಏಕೆಂದರೆ ಸ್ವರ್ಗದಲ್ಲಿ ಪೂರ್ವಮುಕ್ತದೇವತೆಗಳು ಇರುವುದಿಲ್ಲ.

**ಭಾವವಿಲಾಸಿನೀ–** ಯುಕ್ತ್ಯಂತರಂ ಚಾಹ – **ಪೂರ್ವಮಿತಿ** ॥ ಪೂರ್ವಮುಕ್ತಾ ಇತಿ ಪೂರ್ವೇ ಇತ್ಯಸ್ಯಾರ್ಥಕಥನಮ್ । ಇದಾನೀಂ ಪದಸ್ಥದೇವೇಭ್ಯಃ ಪೂರ್ವದೇವಾನಾಂ ಪೂರ್ವತ್ವಂ ಮುಕ್ತತ್ವಮಾದಾಯೈವ ಪರ್ಯವಸ್ಯತಿ । ನಹ್ಯೇತೇಷಾಂ ಪೂರ್ವೇ ತೇ ಸಂಸಾರಿಣ ಇತಿ ವಕ್ತುಂ ಯುಕ್ತಮಿತಿ ಭಾವಃ । ದೇವಾ ಇತಿ ಚ ವಿಶೇಷ್ಯಗ್ರಹಣೇನ ಸಾಧ್ಯಾಃ ಸಾಧ್ಯನಾಮಕಾ ಇತಿ ತದ್ವಿಶೇಷಣಮಪಿ ಗೃಹೀತಪ್ರಾಯಂ ದ್ರಷ್ಟವ್ಯಮ್ । ತೈಃ ಪೂರ್ವೈಃಸಾಧ್ಯದೇವೈಃ ಸಹ ದೇವಾನಾಮಿತರದೇವಾನಾಂ ಸ್ಥಿತಿರ್ಮೋಕ್ಷ ಏವ ನಾಪರತ್ರ ಸ್ವರ್ಗೇ ಹೀತಿ ಯೋಜನಾ । ಪೂರ್ವೇಷಾಂ ದೇವಾನಾಮಿದಾನೀಂತದೇವಾನಾಂ ಚ ಸ್ವರ್ಗೇ ಸಹವಾಸಾಯೋಗಾದಿತಿ ಭಾವಃ ॥ ೫೨೦ ॥

ನಿತ್ಯಮುಕ್ತನಾದ ಪರಮಾತ್ಮನೇ ಪುರುಷಸೂಕ್ತಪ್ರತಿಪಾದ್ಯ ಎಂದು ಇನ್ನೊಂದು ಯುಕ್ತಿಯಿಂದ ಸಮರ್ಥನೆ–

> ಯಂ ಧಾತಾಪ್ಯಾಹ ವೇದಾಹಂ ಮಹಾಂತಂ ಪುರುಷಂ ತ್ವಿತಿ ।
> ಆದಿತ್ಯವರ್ಣಃ ಸ ಕಿಲ ತಮಸಃ ಪಾರ ಏವ ಹಿ ।
> ಸದಾ ತಿಷ್ಠತಿ ತೇನಾಸೌ ನಿತ್ಯಮುಕ್ತಃ ಪರಃ ಪ್ರಭುಃ ॥ ೫೨೧ ॥

**ಅರ್ಥ–** ಧಾತಾ ಅಪಿ= ಚತುರ್ಮುಖಬ್ರಹ್ಮನೂ, ಯಂ= ಯಾವ ಪುರುಷನನ್ನು, ಅಹಂ= ನಾನು, ಮಹಾಂತಂ ಪುರುಷಂ ಇತಿ= ಮಹಾಪುರುಷ ಎಂದು, ವೇದ (ಇತಿ)= ತಿಳಿದಿದ್ದೇನೆಂದು, ಆಹ= ಹೇಳಿರುವನೋ, ಸಃ= ಅಂತಹ ಪರಮಾತ್ಮನು, ಆದಿತ್ಯವರ್ಣಃ= ಸೂರ್ಯನ ಪ್ರಕಾಶದ ವರ್ಣವುಳ್ಳವನು, ಮತ್ತು ತಮಸಃ= ಪ್ರಕೃತಿಯ, ಪಾರೇ ಏವ= ಆಚೆಗೇ, ಸದಾ= ಯಾವಾಗಲೂ, ತಿಷ್ಠತಿ= ಇರುತ್ತಾನೆ, ಹಿ ಕಿಲ= ಪ್ರಸಿದ್ಧವಾಗಿದೆ. ತೇನ= ಆ ಕಾರಣದಿಂದಲೂ, ಅಸೌ= ಈ, ಪರಃ= ಸರ್ವೋತ್ತಮನಾದ, ಪ್ರಭುಃ= ಪರಮಾತ್ಮನು, ನಿತ್ಯಮುಕ್ತಃ= ನಿತ್ಯಮುಕ್ತನು.

**ಅನುವಾದ–** ಯಜುಃಶಾಖೆಯ ಪುರುಷಸೂಕ್ತದ 'ವೇದಾಹಮೇತಂ ಪುರುಷಂ ಮಹಾಂತಮ್' ಇತ್ಯಾದಿ ಮಂತ್ರದಲ್ಲಿ ಚತುರ್ಮುಖಬ್ರಹ್ಮನು 'ಈ ಪುರುಷಸೂಕ್ತ

ಪ್ರತಿಪಾದ್ಯನನ್ನು ಮಹಾಪುರುಷ ಎಂದು ತಿಳಿದಿರುವೆ' ಎಂದು ಹೇಳಿದ್ದಾನೆ. ಅವನು ಸೂರ್ಯನ ಪ್ರಕಾಶದಂತೆ ಶೋಭಿಸುತ್ತಿದ್ದಾನೆ. ಪ್ರಕೃತಿಯನ್ನೂ ಮೀರಿನಿಂತಿದ್ದಾನೆ. ಪರಮಾತ್ಮನು ಯಾವಾಗಲೂ ಹೀಗೆಯೇ ಇರುತ್ತಾನೆ. ಅಂತಹ ಸರ್ವ-ಸಮರ್ಥನಾದ ಪರಬ್ರಹ್ಮನೇ ನಿತ್ಯಮುಕ್ತನು.

**ಭಾವವಿಲಾಸಿನೀ–** ವಿಷ್ಣೋರೇವ ಪುರುಷಸೂಕ್ತಪ್ರತಿಪಾದ್ಯತ್ವೇ ಪುನರಪಿ ಯುಕ್ತೀರ್ವದಂಸ್ತಸ್ಯೈವ ಪರಬ್ರಹ್ಮತ್ವಮಪಿ ತತ ಏವ ಲಬ್ಧಮಿತ್ಯಾಹ – **ಯಂ ಧಾತೇತ್ಯಾದಿನಾ** ॥ ಧಾತಾ ಪುರಸ್ತಾದ್ಯ-ಮುದಾಜಹಾರೇತಿ ಉತ್ತರವಾಕ್ಯಪರ್ಯಾಲೋಚನಯಾ ವೇದಾಹಮಿತಿ ಪೂರ್ವವಾಕ್ಯಸ್ಯಾಪಿ ಧಾತೃವಾಕ್ಯತ್ವಂ ಸಿದ್ಧಮಿತ್ಯಾಶಯೇನೋಕ್ತಂ ಯಂ ಧಾತಾಪ್ಯಾಹೇತಿ । ಸಂ ಬ್ರಹ್ಮವೇದ್ಯಃ ಪುರುಷಃ ಆದಿತ್ಯವರ್ಣಃ ಸಂಸ್ತಮಸಃ ಪಾರ ಏವ ತಿಷ್ಠತಿ ಹಿ । ಕಿಲೇತ್ಯನೇನಾಸ್ಯಾರ್ಥಸ್ಯ ಶ್ರುತ್ಯಂತರ-ಪ್ರಸಿದ್ಧತಾಮಪಿ ಸೂಚಯತಿ । ಅನೇನ ಆದಿತ್ಯವರ್ಣಂ ತಮಸಸ್ತು ಪಾರ ಇತಿ ಶ್ರುತಿರ್ವ್ಯಾಖ್ಯಾತಾ ವೇದಿತವ್ಯಾ । ಅಧಿಕರಣತ್ವೋಕ್ತ್ಯಾ ತಿಷ್ಠತೀತ್ಯಪಿ ಸಿದ್ಧಮ್ । ತೇನ ತಮಃಪದವಾಚ್ಯ-ಪ್ರಕೃತಿಪಾರಸ್ಥಿತತ್ವಕಥನೇನಾಸೌ ಪರಃ ಪ್ರಭುರ್ನಿತ್ಯಮುಕ್ತಃ । ಪಾರೇಽವಸ್ಥಾನಸ್ಯ ತುಶಬ್ದೇನ ವಿಶೇಷಣಾತ್ಕದಾಚಿತ್ಪಾರಗೇಭ್ಯೋ ಮುಕ್ತೇಭ್ಯೋಽಪಿ ವಿಶಿಷ್ಟಪಾರಗತ್ವರೂಪನಿತ್ಯಮುಕ್ತತ್ವ ಸಿದ್ಧಿರಿತಿ ಭಾವಃ ॥ ೫೨೧ ॥

**ವಿವರಣೆ–** (1) ಚತುರ್ಮುಖಬ್ರಹ್ಮದೇವರು ಪುರುಷಸೂಕ್ತ ಪ್ರತಿಪಾದ್ಯನನ್ನು ಪರಮಪುರುಷ ಎಂದು ತಿಳಿದಿದ್ದಾರೆ ಎಂದು ಯಜುರ್ವೇದೀಯ ಪುರುಷಸೂಕ್ತವು ಹೇಳಿದೆ. (ಮಂತ್ರ 16). ಆದ್ದರಿಂದ ಪುರುಷಸೂಕ್ತ ಪ್ರತಿಪಾದ್ಯನು ವಿಷ್ಣುವೇ.

(2) 'ಧಾತಾ ಪುರಸ್ತಾದ್ಯಮುದಾಜಹಾರ' ಎಂಬ ಮುಂದಿನ ವಾಕ್ಯದಿಂದ 'ವೇದಾಹಂ' - ಇದು ಚತುರ್ಮುಖಬ್ರಹ್ಮನ ಮಾತು ಎಂದು ತಿಳಿಯುತ್ತದೆ.

(3) ರಾಜರು ಇಲ್ಲಿ ಕಿಲ ಎಂಬ ಪದದಿಂದ ಪರಮಪುರುಷನು ಆದಿತ್ಯವರ್ಣ ಉಳ್ಳವನು ಮತ್ತು ಪ್ರಕೃತಿಯನ್ನು ಮೀರಿದವನು ಎಂಬ ವಿಷಯವು ಶ್ರುತ್ಯಂತರದಿಂದಲೂ ಪ್ರಸಿದ್ಧವಾಗಿದೆಯೆಂದು ಸೂಚಿಸಿದ್ದಾರೆ.

(4) ಪರಮಾತ್ಮನು ತಮಃಪದವಾಚ್ಯವಾದ ಪ್ರಕೃತಿಯನ್ನು ಮೀರಿ ಇರುವುದರಿಂದ ಅವನು ನಿತ್ಯಮುಕ್ತನು. **ತಮಸಸ್ತು ಪಾರೇ** ಎಂಬಲ್ಲಿ ತು ಶಬ್ದವು ಇರುವುದರಿಂದ ಪರಮಾತ್ಮನು ಮುಕ್ತರನ್ನು ಮೀರಿದವನು ಎಂದು ಸೂಚಿತವಾಗುತ್ತದೆ. ಇದರಿಂದಲೂ ಅವನು ನಿತ್ಯಮುಕ್ತ ಎಂದು ಸೂಚಿತವಾಗಿದೆ.

ಯಃ ಸ್ವಾವಯವತೋ ದೇವಾನಿಂದ್ರಾಗ್ನಿಪ್ರಾಣಪೂರ್ವಕಾನ್ ।
ಅಸೃಜತ್ ಸರ್ವವೇದಾಂಶ್ಚ ಪ್ರೋಕ್ತವಾನ್ ಸ್ವಹೃದಿ ಸ್ಥಿತಾನ್ ॥ ೫೨೨ ॥

**ಯೋ ಗುರುಃ ಸರ್ವದೇವಾನಾಂ ಪಿತಾ ಚ ಪ್ರಭುರೇವ ಚ ।**
**ಚರಾಚರಜಗತ್ಕರ್ತಾ ದೇವಾರಾಧ್ಯಪದಾಂಬುಜಃ ॥ ೫೨೩ ॥**

**ದೇವಾನಾಮಪಿ ಕೈವಲ್ಯದಾತಾ ಧಾತುಶ್ಚ ಯೋ ಮಹಾನ್ ।**
**ನಿತ್ಯಮುಕ್ತಶ್ಚ ಭಗವಾನ್ ಪರಬ್ರಹ್ಮ ಸ ಏವ ಹಿ ॥ ೫೨೪ ॥**

**ಅರ್ಥ–** ಯಃ= ಯಾವ ಪುರುಷನು, ಸ್ವಾವಯವತಃ= ತನ್ನ ಅವಯವಗಳಿಂದ, ಇಂದ್ರಾಗ್ನಿಪ್ರಾಣಪೂರ್ವಕಾನ್= ಇಂದ್ರ, ಅಗ್ನಿ, ಪ್ರಾಣ ಮೊದಲಾದ, ದೇವಾನ್= ದೇವತೆಗಳನ್ನು, ಅಸೃಜತ್= ಸೃಷ್ಟಿಮಾಡಿದನೋ, ಸ್ವಹೃದಿ= ತನ್ನ ಬುದ್ಧಿಯಲ್ಲಿ, ಸ್ಥಿತಾನ್= ಇದ್ದ, ಸರ್ವವೇದಾನ್= ಎಲ್ಲ ವೇದಗಳನ್ನೂ, ಪ್ರೋಕ್ತವಾನ್= ಉಪದೇಶಿಸಿರುವನೋ, ಯಃ= ಯಾವ ಪುರುಷನು, ಸರ್ವದೇವಾನಾಂ= ಎಲ್ಲ ದೇವತೆಗಳಿಗೆ, ಗುರುಃ= ಗುರುವೋ, ಚ= ಮತ್ತು, ಪಿತಾ= ತಂದೆಯೋ, ಪ್ರಭುರೇವ= ಸ್ವಾಮಿಯೋ, ಮತ್ತು, ಜರಾಚರಜಗತ್ಕರ್ತಾ= ಚರಾಚರ ಜಗತ್ತಿನ ಕರ್ತೃವೋ, ದೇವಾರಾಧ್ಯಪದಾಂಬುಜಃ= ದೇವತೆಗಳಿಂದ ಆರಾಧಿಸಲ್ಪಡುವ ಪಾದಕಮಲವುಳ್ಳವನೋ, ಮತ್ತು, ಯಃ= ಯಾರು, ದೇವಾನಾಮ್ ಅಪಿ= ದೇವತೆಗಳಿಗೂ, ಕೈವಲ್ಯದಾತಾ= ಮೋಕ್ಷಪ್ರದಾತೃವೋ, ಧಾತುಃ ಚ= ಚತುರ್ಮುಖಬ್ರಹ್ಮನಿಗಿಂತಲೂ, ಮಹಾನ್= ಉತ್ತಮನಾಗಿದ್ದಾನೋ, ಚ= ಮತ್ತು, ನಿತ್ಯಮುಕ್ತಃ= ನಿತ್ಯಮುಕ್ತನೂ ಆಗಿರುವನೋ, ಸಃ= ಆ ಪುರುಷನು, ಭಗವಾನ್= ಷಡ್ಗುಣೈಶ್ವರ್ಯಸಂಪನ್ನನಾದ, ಪರಬ್ರಹ್ಮ ಏವ ಹಿ= ಪರಬ್ರಹ್ಮನೇ.

**ಅನುವಾದ–** ಈ ಮಹಾಪುರುಷನ ಮುಖಾದಿ ಅವಯವಗಳಿಂದ ಇಂದ್ರ, ಅಗ್ನಿ, ಪ್ರಾಣ ಮೊದಲಾದ ದೇವತೆಗಳ ಉತ್ಪತ್ತಿ ಆಗುತ್ತದೆ. ಆ ದೇವತೆಗಳಿಗೆ ಪ್ರಳಯ ಕಾಲದಲ್ಲಿ ತನ್ನ ಬುದ್ಧಿಯಲ್ಲಿದ್ದ ವೇದಗಳನ್ನು ಪರಮಾತ್ಮನು ಸೃಷ್ಟಿಯ ಆದಿಯಲ್ಲಿ ಉಪದೇಶಿಸುತ್ತಾನೆ. ಈ ಪರಮಪುರುಷನೇ ಸಕಲ ದೇವತೆಗಳಿಗೆ ಜ್ಞಾನೋಪದೇಶಕನಾಗಿದ್ದಾನೆ. ತಂದೆ ಮತ್ತು ಸ್ವಾಮಿಯಾಗಿದ್ದಾನೆ. ಚರಾಚರ ಜಗತ್ತನ್ನು ಸೃಷ್ಟಿಮಾಡಿದ್ದಾನೆ. ಇಂತಹ ಪರಮಾತ್ಮನ ಪಾದಕಮಲಗಳನ್ನು ದೇವತೆಗಳು ಆರಾಧಿಸುತ್ತಾರೆ. ಇವನೇ ದೇವತೆಗಳಿಗೆ ಮುಕ್ತಿಪ್ರದನು. ಇವನು ಚತುರ್ಮುಖ ಬ್ರಹ್ಮನಿಗಿಂತಲೂ ಉತ್ತಮನು ಹಾಗೂ ನಿತ್ಯಮುಕ್ತನು. ಆದ್ದರಿಂದ ಪುರುಷಸೂಕ್ತ ಪ್ರತಿಪಾದ್ಯ ಪುರುಷನು ಷಡ್ಗುಣೈಶ್ವರ್ಯ ಸಂಪನ್ನನಾದ ಪರಬ್ರಹ್ಮನೇ.

**ಭಾವವಿಲಾಸಿನೀ–** ಪ್ರಕಾರಾಂತರೇಣಾಪಿ ವಿಷ್ಣೋರ್ನಿತ್ಯಮುಕ್ತತಾಂ ಪರಬ್ರಹ್ಮತಾಂ ಚ ಸಾಧಯತಿ॥ **ಯ ಇತಿ** ॥ ಯಃ ಪರಮಪುರುಷಃ ಸ್ವಾವಯವತಃ ಸ್ವಮುಖಾದ್ಯವಯವೇಭ್ಯಃ । ಅನೇನ ಮುಖಾದಿಂದ್ರಶ್ಚಾಗ್ನಿಶ್ಚೇತ್ಯಾದಿವಾಕ್ಯಾರ್ಥ ಉಕ್ತೋ ಭವತಿ । ಸ್ವಹೃದಿ ಸ್ಥಿತಾನ್ ಸರ್ವ-

ವೇದಾಂಶ್ಚ ಪ್ರೋಕ್ತವಾನಿತ್ಯನೇನ ಋಚಃಸಾಮಾನಿ ಜಜ್ಞಿರ ಇತ್ಯಾದೇರರ್ಥ ಉಕ್ತೋ ಭವತಿ । ಹೃದಿಸ್ಥಿತಾನಿತ್ಯನೇನ ವೇದಾನಾಂ ಪ್ರಲಯೇಽಪ್ಯವಿಲುಪ್ತತ್ವಂ ಸೂಚಯತಿ ॥ ೫೨೨ ॥

ಉಕ್ತವಾಕ್ಯತಾತ್ಪರ್ಯಲಬ್ಧಮರ್ಥಮಾಹ – **ಯೋ ಗುರುರಿತ್ಯಾದಿನಾ** ॥ ಚರಾಚರಜಗತ್-ಕರ್ತೇತ್ಯನೇನ ತಸ್ಮಾದಶ್ವಾ ಅಜಾಯತಂತೇತ್ಯಾದೇರ್ನಾಭ್ಯಾ ಆಸೀದಂತರಿಕ್ಷಮಿತ್ಯಾದೇಶ್ಚಾರ್ಥ ಉಕ್ತೋ ಭವತಿ । ದೇವಾರಾಧ್ಯಪದಾಂಬುಜಃ ದೇವಾನಾಮಪಿ ಕೈವಲ್ಯದಾತೇತ್ಯನೇನ ಯಜ್ಞೇನ ಯಜ್ಞಮಜಯಂತೇತ್ಯೃಚಸ್ತಾತ್ಪರ್ಯಾರ್ಥಕಥನಮ್ । ಧಾತುಶ್ಚ ಯೋ ಮಹಾನಿತ್ಯನೇನ ವೇದಾಹಮಿತಿ ವಾಕ್ಯೇಽಹಮಿತಿ ವದತೋ ಬ್ರಹ್ಮಣ ಏವ ಸನ್ನಿಧಾನಾತ್ ಮಹತ್ತ್ವಾವಧಿತ್ವಲಾಭ ಇತಿ ಸೂಚಯತಿ । ಸ ಏವ ಏವಂ ಪೂರ್ವೋಕ್ತ ಏವ । ತಸ್ಮಾದ್ವಿರಾಳಜಾಯತೇತ್ಯಾದಿನಾ ಬ್ರಹ್ಮಾದಿಸಕಲಜಗತಃ ಸೃಷ್ಟಿಕಥನಾತ್‌ಪರಮಪುರುಷಸ್ಯ ತದಕಥನಾತ್ ಪುನರ್ಭವಾಖ್ಯ-ಸಂಸಾರಶೂನ್ಯತ್ವೇನ ನಿತ್ಯಮುಕ್ತತ್ವಲಾಭಃ । ಜನ್ಮಾದಸ್ಯ ಯತ ಇತಿ ಸೂತ್ರೋಕ್ತಪರಬ್ರಹ್ಮಲಕ್ಷಣಸ್ಯ ಜಗಜ್ಜನ್ಮಾದಿಕರ್ತೃತ್ವಸ್ಯೈತತ್‌ಸೂಕ್ತಪ್ರತಿಪಾದ್ಯಪರಮಪುರುಷೇಽಪಿ ಶ್ರವಣಾತ್ ಅಸ್ಯೈವ ಪರಬ್ರಹ್ಮತ್ವಸಿದ್ಧಿಃ । ಏವಂ ಬ್ರಹ್ಮಗುರುತ್ವಾದಿವಿಶೇಷಣಾನಾಮಪಿ ಸಂಸಾರಿಷು ಬ್ರಹ್ಮಾದಿ-ಷ್ವಘಟಿತಾನಾಂ ಜಗದ್ವ್ಯಾಪಾರವರ್ಜಮಿತಿ ಸೂತ್ರಾರ್ಥಪರ್ಯಾಲೋಚನಯಾ ಮುಕ್ತೇಷ್ವಪಿ ತೇಷ್ವಘಟಿತಾನಾಂ ಪರಮಪುರುಷೇಽಸ್ಮಿನ್‌ಕಥನಾದಸ್ಯೈವ ನಿತ್ಯಮುಕ್ತತ್ವಪರಬ್ರಹ್ಮತ್ವಯೋಃ ಸಿದ್ಧಿರಿತಿ ದ್ರಷ್ಟವ್ಯಮ್ ॥ ೫೨೩–೫೨೪ ॥

**ವಿವರಣೆ–**(1) ಯಸ್ಯಾವಯವತೋ.... ಅಸೃಜತ್ ಇದರಿಂದ 'ಚಂದ್ರಮಾ ಮನಸೋ ಜಾತಃ.... । ... ಪ್ರಾಣಾದ್‌ವಾಯುರಜಾಯತ ॥' (ಮಂತ್ರ 13) ಈ ಮಂತ್ರದ ಅರ್ಥವು ಉಕ್ತವಾಗಿದೆ.

(2) 'ಹೃದಿಸ್ಥಾನ್ ವೇದಾನ್' ಎಂದು ಹೇಳಿದ್ದರಿಂದ ಪ್ರಳಯದಲ್ಲೂ ವೇದಗಳಿಗೆ ನಾಶವಿಲ್ಲ ಎಂದು ಹೇಳಿದಂತಾಯಿತು. ಈ ವಾಕ್ಯದಿಂದ 'ಋಚಃ ಸಾಮಾನಿ ಜಜ್ಞಿರೇ' ಎಂಬ ವಾಕ್ಯಕ್ಕೆ ವ್ಯಾಖ್ಯಾನವನ್ನು ಮಾಡಿದಂತಾಯಿತು.

(3) ಚರಾಚರಜಗತ್ಕರ್ತಾ ಎಂಬುದರಿಂದ ತಸ್ಮಾದಶ್ವಾ 'ಅಜಾಯಂತ, ನಾಭ್ಯಾ ಆಸೀದಂತರಿಕ್ಷಂ' ಎಂಬ ಮಂತ್ರಗಳ (9, 10) ತಾತ್ಪರ್ಯವು ಉಕ್ತವಾಯಿತು.

(4) ದೇವಾರಾಧ್ಯಪದಾಂಬುಜಃ ಮತ್ತು ದೇವಾನಾಮಪಿ ಕೈವಲ್ಯದಾತಾ ಎಂಬುದರಿಂದ ಯಜ್ಞೇನ ಯಜ್ಞಮಯಜಂತ ಎಂಬ ಮಂತ್ರದ (16) ವ್ಯಾಖ್ಯಾನವು ಉಕ್ತವಾಗಿದೆ.

(5) ಧಾತುಶ್ಚ ಯಃ ಮಹಾನ್ ಎಂಬ ವಾಕ್ಯದಿಂದ ವೇದಾಹಂ ಎಂಬ ಮಂತ್ರದ (ಯರ್ಜುವೇದಿಯ 16) ವ್ಯಾಖ್ಯಾನವು ಉಕ್ತವಾಗಿದೆ.

(6) **ಜನ್ಮಾದ್ಯಸ್ಯ ಯತಃ** ಎಂಬ ಬ್ರಹ್ಮಸೂತ್ರದಲ್ಲಿ ಜಗಜನ್ಮಾದಿಕರ್ತೃತ್ವವೇ ಬ್ರಹ್ಮನ ಲಕ್ಷಣವೆಂದು ಹೇಳಲಾಗಿದೆ. ಅಂತಹ ಲಕ್ಷಣವನ್ನು ಇಲ್ಲಿ ಪರಮಪುರುಷನಿಗೆ ಹೇಳಿದ್ದರಿಂದ, ಇಲ್ಲಿ ಪ್ರತಿಪಾದ್ಯನಾದವನು ಪರಬ್ರಹ್ಮನೆಂದು ತಿಳಿಯುತ್ತದೆ.

ಪುರುಷಸೂಕ್ತಪ್ರತಿಪಾದ್ಯನಾದವನು ವಿಷ್ಣುವೇ ಎನ್ನಲು ಪುರುಷಸೂಕ್ತದ ವಾಕ್ಯವೇ ಪ್ರಮಾಣ-

ಶ್ರೀಶ್ಚ ಲಕ್ಷ್ಮೀಶ್ಚ ಯತ್ಪತ್ನ್ಯೌ ಸೂಕ್ತಾಂತೇ ತಸ್ಯ ಕೀರ್ತಿತೇ ।
ಅತಃ ಪುರುಷಸೂಕ್ತೋಕ್ತಃ ಸಾಕ್ಷಾನ್ನಾರಾಯಣಃ ಪ್ರಭುಃ ।
ಸ್ಪಷ್ಟಂ ಭಾಗವತೇ ಚೋಕ್ತಾ ಪುಂಸೂಕ್ತೇ ವಿಷ್ಣುಸೂಕ್ತತಾ ॥ ೫೨೫ ॥

**ಅರ್ಥ–** ಸೂಕ್ತಾಂತೇ= (ಯಜುರ್ವೇದದ) ಪುರುಷಸೂಕ್ತದ ಕೊನೆಯಲ್ಲಿ, ಯತ್= ಯಾವ ಕಾರಣದಿಂದ, ತಸ್ಯ= ಆ ಮಹಾಪುರುಷನಿಗೆ, ಶ್ರೀಶ್ಚ= ಶ್ರೀದೇವಿಯು ಮತ್ತು, ಲಕ್ಷ್ಮೀಶ್ಚ= ಲಕ್ಷ್ಮೀದೇವಿಯು, ಪತ್ನ್ಯೌ= ಪತ್ನಿಯರು ಎಂದು, ಯತ್ ಕೀರ್ತಿತೇ ಅತಃ= ಹೇಳಲ್ಪಟ್ಟಿರುವುದರಿಂದ, ಪುರುಷಸೂಕ್ತೋಕ್ತಃ= ಪುರುಷಸೂಕ್ತದಿಂದ ಪ್ರತಿಪಾದ್ಯನಾದವನು, ಪ್ರಭುಃ= ಸರ್ವಸಮರ್ಥ ಹಾಗೂ ಸರ್ವಸ್ವಾಮಿಯಾದ, ಸಾಕ್ಷಾತ್ ನಾರಾಯಣಃ= ಸಾಕ್ಷಾತ್ ನಾರಾಯಣನೇ. ಚ= ಮತ್ತು, ಭಾಗವತೇ= ಭಾಗವತದಲ್ಲಿಯೂ, ಪುಂಸೂಕ್ತೇ= ಪುರುಷಸೂಕ್ತದಲ್ಲಿ, ವಿಷ್ಣುಸೂಕ್ತತಾ= ವಿಷ್ಣುಸೂಕ್ತತ್ವವು, ಸ್ಪಷ್ಟಂ= ಸ್ಪಷ್ಟವಾಗಿ, ಉಕ್ತಾ= ಹೇಳಲ್ಪಟ್ಟಿದೆ.

**ಅನುವಾದ–** ಯಜುರ್ವೇದೀಯ ಪುರುಷಸೂಕ್ತದ ಕೊನೆಯಲ್ಲಿ ಶ್ರೀ ಮತ್ತು ಲಕ್ಷ್ಮಿಯರು ಪುರುಷನ ಪತ್ನಿಯರು ಎಂದು ಹೇಳಲ್ಪಟ್ಟಿದೆ. ಆದ್ದರಿಂದ ಪುರುಷಸೂಕ್ತದಲ್ಲಿ ಹೇಳಲ್ಪಟ್ಟವನು ಪ್ರಭುವಾದ ನಾರಾಯಣನೇ. ಪುರುಷಸೂಕ್ತವು ವಿಷ್ಣುಸೂಕ್ತ ಎಂದು ಭಾಗವತದಲ್ಲೂ ಸ್ಪಷ್ಟವಾಗಿ ಹೇಳಲ್ಪಟ್ಟಿದೆ.

**ಭಾವವಿಲಾಸಿನೀ–** ವಿಷ್ಣೋರೇವ ಪುರುಷಸೂಕ್ತಪ್ರತಿಪಾದ್ಯತ್ವೇಽಂತರಂಗಮತಿಪ್ರಬಲಂ ಯುಕ್ತ್ಯಂತರಮಾಹ –ಶ್ರೀಶ್ಚೇತಿ ॥ ಯದ್ಯಸ್ಮಾತ್ । ತಸ್ಯ ಪುರುಷಸೂಕ್ತಪ್ರತಿಪಾದ್ಯಮಹಾಪುರುಷಸ್ಯ ಸೂಕ್ತಾಂತೇ ಯಜುರ್ವೇದಿನಾಂ ಪುರುಷಸೂಕ್ತಾಂತೇ ಶ್ರೀಶ್ಚತೇ ಲಕ್ಷ್ಮೀಶ್ಚ ಪತ್ನ್ಯಾವಿತಿ ವಾಕ್ಯೇ । ಭಾಗವತೇ ತತ್ರ ಗತ್ವಾ ಜಗನ್ನಾಥಮಿತಿ ಪ್ರಾಗುಕ್ತವಾಕ್ಯೇ ॥ ೫೨೫ ॥

**ವಿವರಣೆ–** ಯಜುಃಶಾಖೆಯ ಪುರುಷಸೂಕ್ತದ ಕೊನೆಯಲ್ಲಿ ಈ ಮಹಾಪುರುಷನಿಗೆ ಶ್ರೀದೇವಿ ಮತ್ತು ಲಕ್ಷ್ಮೀದೇವಿಯರು ಪತ್ನಿಯರು ಎಂದು ಹೇಳಿದೆ. ಶ್ರೀ-ಲಕ್ಷ್ಮಿಪತಿತ್ವವು ನಾರಾಯಣನಿಗಲ್ಲದೆ ಬೇರೆ ಯಾರಿಗೂ ಇಲ್ಲ. ಇದು ಸೂಕ್ತದಲ್ಲೇ ಉಕ್ತವಾದ ಅಸಾಧಾರಣವಾದ ಅಂತರಂಗ ಪ್ರಮಾಣ. ಭಾಗವತದಲ್ಲಿಯೂ (10.1.20) ಬ್ರಹ್ಮಾದಿ ದೇವತೆಗಳು ಪುರುಷಸೂಕ್ತದಿಂದ ವಿಷ್ಣುವನ್ನು ಸ್ತುತಿಸಿದರು ಎಂದು ಹೇಳಿರುವುದರಿಂದ, ಜಗತ್ಸ್ವಾಮಿಯಾದ ಸಾಕ್ಷಾತ್ ನಾರಾಯಣನೇ ಪುರುಷ ಸೂಕ್ತ ಪ್ರತಿಪಾದ್ಯ ಎಂದು ತಿಳಿಯುತ್ತದೆ.

ಶ್ರೀಪತಿತ್ವ ಮತ್ತು ಲಕ್ಷ್ಮೀಪತಿತ್ವಗಳು ನಾರಾಯಣನೇ ಪುರುಷಸೂಕ್ತಪ್ರತಿಪಾದ್ಯ ಎಂಬುದಕ್ಕೆ ಅಂತರಂಗ ಪ್ರಮಾಣಗಳು.

ತತ್ರಗತ್ವಾ ಜಗನ್ನಾಥಂ ದೇವ ದೇವಂ ವೃಷಾಕಪಿಮ್ ।
ಪುರುಷಂ ಪುರುಷಸೂಕ್ತೇನ ಉಪತಸ್ಥೇ ಸಮಾಹಿತಃ ॥

- ಭಾಗವತ ೧೦.೧.೨೦

ತಸ್ಮಾದಜಾಯತ ವಿರಾಡಿತಿ ಯಃ ಪುಂಸುತೋ ವಿರಾಟ್ ।
ಸಹಸ್ರಶೀರ್ಷಾಪಿ ಪುಮಾನಸಾವೇವ ಕಿಲಾದ್ಭುತಮ್ ॥ ೫೨೬ ॥

ಇತ್ಥಂ ಸೂಕ್ತೋಕ್ತಮಹಿಮಾ ಯಸ್ಯ ಸರ್ವೇಶ್ವರಸ್ಯ ಹಿ ।
ಪರಂಬ್ರಹ್ಮ ಸ ಏವೈಕೋ ನಾರಾಯಣ ಇತಿ ಸ್ಥಿತಮ್ ॥ ೫೨೭ ॥

**ಅರ್ಥ–** ತಸ್ಮಾದ್ ಅಜಾಯತ ವಿರಾಟ್ ಇತಿ= ತಸ್ಮಾದ್ ಅಜಾಯತ ವಿರಾಟ್ ಎಂಬ ಮಂತ್ರದಿಂದ, ಯಃ= ಯಾವ, ವಿರಾಟ್= ವಿರಾಟ್ ಪುರುಷನು, ಪುಂಸುತಃ= ಪುರುಷನ ಮಗನೋ, ಅಸೌ ಏವ= ಅವನೇ, ಸಹಸ್ರಶೀರ್ಷಾ ಪುಮಾನ್ ಅಪಿ ಕಿಲ= ಸಾವಿರ ತಲೆಯುಳ್ಳ ಪುರುಷನೂ ಅಂತೆ!, ಅದ್ಭುತಂ= ಆಶ್ಚರ್ಯ! ಆಶ್ಚರ್ಯ! ಇತ್ಥಂ= ಹೀಗೆ ಪೂರ್ವೋಕ್ತರೀತಿಯಲ್ಲಿ, ಸೂಕ್ತೋಕ್ತಮಹಿಮಾ= ಸೂಕ್ತದಲ್ಲಿ ಪ್ರತಿಪಾದಿತವಾದ ಮಹಿಮೆಯು, ಹಿ= ಯಾವ ಕಾರಣದಿಂದ, ಯಸ್ಯ= ಯಾವ, ಸರ್ವೇಶ್ವರಸ್ಯ= ಸರ್ವಸ್ವಾಮಿಗೆ ಇದೆಯೋ, ಸಃ= ಅವನು, ಪರಂಬ್ರಹ್ಮ= ಪರಬ್ರಹ್ಮನಾದ, ನಾರಾಯಣ ಏಕ ಏವ ಇತಿ= ನಾರಾಯಣನೊಬ್ಬನೇ ಎಂದು, ಸ್ಥಿತಂ= ಸಿದ್ಧವಾಯಿತು.

**ಅನುವಾದ–** 'ತಸ್ಮಾದ್ ಅಜಾಯತ ವಿರಾಟ್' (ಮಂತ್ರ ೫) ಈ ಮಂತ್ರದಲ್ಲಿ ಹೇಳಲ್ಪಟ್ಟ ಪುರುಷಸುತನಾದ ಯಾವ ವಿರಾಟ್ ಪುರುಷನೋ, ಇವನೇ 'ಸಹಸ್ರಶೀರ್ಷಾ...' ಎಂದು ವರ್ಣಿಸಲ್ಪಟ್ಟ ಪುರುಷ! ಅದ್ಭುತ, ಅದ್ಭುತ. ಹೀಗೆ ಪುರುಷಸೂಕ್ತದಲ್ಲಿ ಹೇಳಲ್ಪಟ್ಟ ಮಹಿಮೆಯು ಯಾವ ಸರ್ವೇಶ್ವರನಿಗೆ ಇದೆಯೋ ಅವನು ಪರಂಬ್ರಹ್ಮನಾದ ನಾರಾಯಣನೊಬ್ಬನೇ ಎಂದು ಸಿದ್ಧವಾಯಿತು.

**ಭಾವವಿಲಾಸಿನೀ–** ಪುರುಷಸೂಕ್ತಸ್ಯ ವಿರಾಟ್‌ಪುರುಷೋ ದೇವತೇತಿ ವದತಾಂ ದೂಷಣಮಾಹ **– ತಸ್ಮಾದಿತಿ ॥** ಪುಂಸುತಃ ಸಹಸ್ರಶೀರ್ಷಾಖ್ಯಪುರುಷಸುತಃ ಯೋ ವಿರಾಟ್ ಅಸಾವೇವ ಸಹಸ್ರ-ಶೀರ್ಷಾಽಪಿ ಕಿಲ । ಸೂಕ್ತದೇವತಾತ್ವೇ ತಸ್ಯೈವ ಸಹಸ್ರಶೀರ್ಷಪುರುಷತ್ವಸ್ಯಾಪ್ಯಾಪಾತಾತ್ । ತಚ್ಚ ಸ್ವಸ್ಯೈವ ಜನಕತ್ವಂ ಜನ್ಯತ್ವಂ ಚೇತಿ ವಿರುದ್ಧಮಿತಿ ಸೂಚನಾಯದ್ಭುತಮಿತ್ಯುಕ್ತಮ್ ॥ ೫೨೬-೫೨೭ ॥

**ವಿವರಣೆ–** ವಿರಾಟ್ ಪುರುಷನೇ ಪುರುಷಸೂಕ್ತಪ್ರತಿಪಾದ್ಯನೆಂದು ಹೇಳುವುದು ಸರಿಯಲ್ಲ. ಏಕೆಂದರೆ ಆ ವಿರಾಟ್ ಪುರುಷನು ಪುರುಷನಿಂದ ಹುಟ್ಟಿದನೆಂದು ಸೂಕ್ತವೇ ಹೇಳುತ್ತಿದೆ. ಆ ವಿರಾಟ್ ಪುರುಷನೇ ಸಾವಿರತಲೆಯುಳ್ಳವನಾಗಲು ಸಾಧ್ಯವಿಲ್ಲ. ತಂದೆಯನ್ನೇ ಮಗ

ಎಂದು ಹೇಳುವುದು ಅದ್ಭುತವೇ ಸರಿ. ಆದ್ದರಿಂದ ವಿರಾಟ್ ಬೇರೆ, ಪರಮಪುರುಷ ಬೇರೆ. ಈ ಪರಮಪುರುಷನೆನಿಸಿದ ನಾರಾಯಣನೇ ಪುರುಷಸೂಕ್ತ ಪ್ರತಿಪಾದ್ಯ.

ಹಾಗೆಯೇ ಸೂಕ್ತದಲ್ಲಿ ಹೇಳಿದ ಜಗತ್ಕರ್ತೃತ್ವವೇ ಮೊದಲಾದ ಮಹಿಮೆಗಳು ಸರ್ವೇಶ್ವರನಾದ ವಿಷ್ಣುವಿನಲ್ಲಿ ಅಲ್ಲದೆ ಬೇರೆ ಯಾರಲ್ಲೂ ಇಲ್ಲ. ಆದ್ದರಿಂದ ಅವನೇ ಸರ್ವೋತ್ತಮ, ಅವನೇ ಪರಂಬ್ರಹ್ಮ, ಅವನೇ ನಾರಾಯಣ ಮತ್ತು ಅವನೇ ಪುರುಷಸೂಕ್ತ ಪ್ರತಿಪಾದ್ಯ.

**ತಮುಕ್ತವಿಧಯಾ ವಿದ್ವಾನ್ ಮುಕ್ತಃ ಸ್ಯಾನ್ನಾನ್ಯಥಾ ಕಿಲ ।**
**ಅತೋ ಮುಮುಕ್ಷುಭಿರ್ಜ್ಞೇಯಮಿದಂ ಬ್ರಹ್ಮ ನಚಾಪರಮ್ ॥ ೫೨೮ ॥**

**ಅರ್ಥ–** ತಂ= ಅವನನ್ನು (ಪುರುಷನನ್ನು), ಉಕ್ತವಿಧಯಾ= ಹಿಂದಿನ ಮಂತ್ರಗಳಲ್ಲಿ ಹೇಳಿದ ವಿಧದಿಂದ, ವಿದ್ವಾನ್= ತಿಳಿದವನು, ಮುಕ್ತಃ ಸ್ಯಾತ್= ಮುಕ್ತನಾಗುವನು, ಅನ್ಯಥಾ= ಹೀಗೆ ತಿಳಿಯದಿದ್ದರೆ, ನ ಕಿಲ= ಇಲ್ಲವೇ ಇಲ್ಲ, ಅತಃ= ಆದ್ದರಿಂದ, ಮುಮುಕ್ಷುಭಿಃ= ಮೋಕ್ಷವನ್ನು ಬಯಸುವ ಸಾಧಕರಿಂದ, ಇದಂ ಬ್ರಹ್ಮ= ಈ ಪುರುಷಸೂಕ್ತಪ್ರತಿಪಾದ್ಯವಾದ ಪರಬ್ರಹ್ಮನೇ, ಜ್ಞೇಯಂ= ತಿಳಿಯಲ್ಪಡಬೇಕು. ಅಪರಂ= ಬ್ರಹ್ಮಾತಿರಿಕ್ತವಾದ ಬೇರೆ ಯಾವುದೂ, ನ= ಜ್ಞೇಯವಲ್ಲ.

**ಅನುವಾದ–** ಆ ಪುರುಷನನ್ನು ಪುರುಷಸೂಕ್ತದ ಮಂತ್ರಗಳಲ್ಲಿ ಹೇಳಿದಂತೆ ತಿಳಿದವನು ಮುಕ್ತನಾಗುತ್ತಾನೆ. ಇಲ್ಲದಿದ್ದರೆ ಇಲ್ಲವೇ ಇಲ್ಲ. ಆದ್ದರಿಂದ ಮುಕ್ತಿಯನ್ನು ಬಯಸುವವರಿಂದ ಈ ಬ್ರಹ್ಮನೇ ತಿಳಿಯಲ್ಪಡಬೇಕು. ಬೇರೆ ಅಲ್ಲ.

**ಭಾವವಿಲಾಸಿನೀ–** ತಮುಕ್ತವಿಧಯೇತ್ಯನೇನ ತಮೇವಂ ವಿದ್ವಾನಿತ್ಯಸ್ಯಾರ್ಥ ಉಕ್ತಃ । ಅನ್ಯಥಾ ನ ಕಿಲೇತ್ಯನೇನ ನಾನ್ಯಃಪಂಥಾ ಇತ್ಯಾದೇರರ್ಥೋ ದ್ರಷ್ಟವ್ಯಃ । ಅತಃ ಮುಕ್ತಿದಾಯಕತ್ವಾತ್ ॥೫೨೮॥

**ವಿವರಣೆ–** (೧) ತಮೇವಂ ವಿದ್ವಾನಮೃತ ಇಹ ಭವತಿ ।
ನಾನ್ಯಃ ಪಂಥಾ ವಿದ್ಯತೇಽಯನಾಯ ॥
- ಯಜುರ್ವೇದೀಯ ಪುರುಷಸೂಕ್ತ ೧೭

ಇದರ ಅಭಿಪ್ರಾಯವನ್ನು ಈ ಶ್ಲೋಕದಲ್ಲಿ ಹೇಳಲಾಗಿದೆ.

(2) 522-525 ಪದ್ಯಗಳಲ್ಲಿ ಪುರುಷಸೂಕ್ತವು ಹೇಳಿರುವ ಪುರುಷ ಮಹಿಮೆಗಳನ್ನು ಸಂಗ್ರಹಿಸಿದ್ದಾರೆ. ಈ ಮಹಿಮೆಗಳುಳ್ಳವನು ನಾರಾಯಣ ಎಂದು ಸೂಕ್ತದಿಂದಲೇ (16, 17) ತಿಳಿಯುತ್ತದೆ ಎಂದು 527ರಲ್ಲಿ ಹೇಳಿದ್ದಾರೆ. ಹೀಗೆ ಪುರುಷನನ್ನು ತಿಳಿದವನಿಗೆ ಮುಕ್ತಿಯಾಗುತ್ತದೆ, ಇಲ್ಲದಿದ್ದರೆ ಇಲ್ಲ ಎಂದೂ ಸೂಕ್ತವೇ ಹೇಳಿದೆ.

ಪರನು ಪ್ರತಿಪಾದಿಸುವ ಬ್ರಹ್ಮನು ಮೋಕ್ಷಪ್ರದನಲ್ಲ, ತಮಃಪ್ರದ -

**ಮುಕ್ತಾವನುಪಯೋಗ್ಯನ್ಯದ್ಬ್ರಹ್ಮ ಯದ್ಯಸ್ತಿ ತತ್ತವ ।**
**ತಮೋ ಜಿಗಮಿಷೋರ್ಮುಕ್ತಿಯೋಗ್ಯಾನಾಮಿದಮೇವ ನಃ ॥ ೫೨೯ ॥**

**ಅರ್ಥ–** ತವ= ನಿನ್ನ ಮತದಲ್ಲಿ, ಮುಕ್ತೌ ಅನುಪಯೋಗಿ= ಮುಕ್ತಿಗೆ ಉಪಯೋಗಿಯಾಗದ, ಅನ್ಯದ್ ಬ್ರಹ್ಮ= ಇನ್ನೊಂದು ಬ್ರಹ್ಮನು, ಯದಿ ಅಸ್ತಿ= ಇದ್ದರೆ, ತತ್= ಆ ಬ್ರಹ್ಮನು, ತಮಃ ಜಿಗಮಿಷೋಃ= ಅಂಧಂತಮಸ್ಸಿಗೆ ಹೋಗಲಿರುವ, ತವ= ನಿನಗೇ ಇರಲಿ, ಮುಕ್ತಿಯೋಗ್ಯಾನಾಂ= ಮೋಕ್ಷಕ್ಕೆ ಹೋಗುವ ಯೋಗ್ಯತೆಯುಳ್ಳ, ನಃ= ನಮಗೆ, ಇದಮೇವ= ಹಿಂದೆ ಹೇಳಿದ ಮಹಿಮೆಗಳುಳ್ಳ, ಪುರುಷಸೂಕ್ತಪ್ರತಿಪಾದ್ಯನಾದವನೇ ಪರಬ್ರಹ್ಮನು.

**ಅನುವಾದ–** ಮುಕ್ತಿಗೆ ಸಾಧಕವಲ್ಲದ ಬೇರೆ ಬ್ರಹ್ಮವು ಇರುವುದಾದರೆ ಅದು ಶೀಘ್ರದಲ್ಲೇ ತಮಸ್‌ಗೆ ಹೋಗಲಿರುವ ನಿನಗೆ ಉಪಯೋಗಿ. ಮುಕ್ತಿಯೋಗ್ಯರಾದ ನಮಗೆ ಈ ಪುರುಷಸೂಕ್ತದಲ್ಲಿ ಹೇಳಲ್ಪಟ್ಟಿರುವ ಗುಣಪೂರ್ಣಬ್ರಹ್ಮನೇ ಉಪಯೋಗಿ.

**ಭಾವವಿಲಾಸಿನೀ–** ಮುಕ್ತಾವನುಪಯೋಗ್ಯನ್ಯನ್ನಿರ್ಗುಣಂ ಬ್ರಹ್ಮ ಯದ್ಯಸ್ತಿ ತತ್ತ್ವವೈವ । ಯದ್ಯಸ್ತೀತ್ಯನೇನ ತಸ್ಯಾಶ್ರೌತತ್ವೇನಾಪ್ರಾಮಾಣಿಕತ್ವಂ ಸೂಚಯತಿ । ಮುಕ್ತಾವನುಪಯೋಗೀತ್ಯನೇನ ವಿಷ್ಣೋರನ್ಯಸ್ಯ ಶಿವಾದೇಸ್ತ್ವೈರ್ವಾದಿಭಿರ್ಬ್ರಹ್ಮತಯಾऽಭಿಮನ್ಯಮಾನಸ್ಯಾಪಿ ನಾನ್ಯಃ ಪಂಥಾ ಇತಿ ಮೋಕ್ಷೋಪಯೋಗಿತ್ವನಿಷೇಧಾತ್ ಅಬ್ರಹ್ಮತ್ವೈವೇತಿ ಸೂಚಯತಿ । ಅಯನಾಯ ನೇತಿ ನಿಷೇಧಾತ್ತಮೋ ಜಿಗಿಮಿಷೋರಿತ್ಯುಕ್ತಮ್ । ಇದಂ ಮೋಕ್ಷದಾಯಕತ್ವೇನೋಕ್ತಂ ವಿಷ್ಣ್ವಾಖ್ಯಂ ಬ್ರಹ್ಮ ॥ ೫೨೯ ॥

**ವಿವರಣೆ–** ನಿರ್ಗುಣಬ್ರಹ್ಮನನ್ನು ಯಾವ ಶ್ರುತಿಯೂ ಹೇಳುತ್ತಿಲ್ಲವಾದ್ದರಿಂದ ಅದು ಅಪ್ರಾಮಾಣಿಕ ಎಂದು ರಾಜರು ಸೂಚಿಸಿದ್ದಾರೆ.

**ಸಾಕಾರಸಗುಣಶ್ರೀಶಸೇವೈಕಾಮೃತಪದ್ಧತಿಃ ।**
**ನಾನ್ಯಸ್ಯ ಸೇವಾ ಮೋಕ್ಷಸ್ಯ ಪಂಥಾ ಇತ್ಯಾಹ ಹಿ ಶ್ರುತಿಃ ॥ ೫೩೦ ॥**

**ಅರ್ಥ–** ಸಾಕಾರಸಗುಣ ಶ್ರೀಶಸೇವಾ ಏಕಾ= ಸಹಸ್ರಶೀರ್ಷಾದಿ ಆಕಾರ, ಸರ್ವೋತ್ತಮತ್ವ, ಮುಕ್ತನಿಯಾಮಕತ್ವಾದಿ ಗುಣಗಳು, ಇವುಗಳನ್ನು ಹೊಂದಿರುವ ಶ್ರೀಪತಿಯ ಸೇವೆಯೊಂದೇ, ಅಮೃತಪದ್ಧತಿಃ= ಮೋಕ್ಷದ ದಾರಿ. ಅನ್ಯಸ್ಯ= ಬೇರೆಯವನ= ನಿರ್ಗುಣನಾದ ಬ್ರಹ್ಮನ ಅಥವಾ ಶಿವಾದಿ ದೇವತೆಗಳ, ಸೇವಾ= ಉಪಾಸನೆಯು, ಮೋಕ್ಷಸ್ಯ= ಮೋಕ್ಷಕ್ಕೆ, ಪಂಥಾ= ದಾರಿಯು, ನ= ಅಲ್ಲ, ಇತಿ= ಎಂದು, ಶ್ರುತಿಃ= (ನಾನ್ಯಪಂಥಾ ವಿದ್ಯತೇ ಅಯನಾಯ ಎಂಬ) ಪುರುಷಸೂಕ್ತವು, ಆಹ ಹಿ= ಹೇಳಿದೆಯಷ್ಟೆ!

**ಅನುವಾದ–** ಪುರುಷಸೂಕ್ತದಲ್ಲಿ ಹೇಳಿದ ಸಹಸ್ರಶೀರ್ಷಾದಿ ರೂಪಗಳುಳ್ಳ, ಜ್ಯಾಯಸ್ತ್ವ, ಜಗತ್ಕರ್ತೃತ್ವ, ಮುಕ್ತನಿಯಾಮಕತ್ವ ಮೊದಲಾದ ಗುಣಗಳುಳ್ಳ ಶ್ರೀಪತಿಯ ಸೇವೆಯೊಂದೇ ಮೋಕ್ಷಕ್ಕೆ ದಾರಿ. ಬೇರೆಯವರ (ನಿರ್ಗುಣ ಬ್ರಹ್ಮ, ಶಿವ ಮೊದಲಾದವರ) ಸೇವೆಯು ಮೋಕ್ಷಕ್ಕೆ ದಾರಿಯಲ್ಲ ಎಂದು ಶ್ರುತಿಯು (ನಾನ್ಯಃ ಪಂಥಾ ವಿದ್ಯತೇ ಅಯನಾಯ) ಹೇಳುತ್ತಿದೆ.

**ಭಾವವಿಲಾಸಿನೀ–** ಉಕ್ತಮೇವ ವಿವೇಚಯತಿ –**ಸಾಕಾರೇತಿ** ॥ ಏವಮಿತಿ ಪೂರ್ವೋಕ್ತಸಕಲ-ಪ್ರಕಾರಪರಾಮರ್ಶಾತ್ ಸಹಸ್ರಶೀರ್ಷತ್ವಾದ್ಯಾಕಾರಸ್ಯ ಜ್ಯಾಯಸ್ತ್ವಾದಿಗುಣಾನಾಂ ಚ ಸಾಕ್ಷಾನ್ ಮೋಕ್ಷಾಂಗತ್ವಶ್ರವಣಾತ್ ಬ್ರಹ್ಮವತ್ ಪಾರಾಮರ್ಥ್ಯಂ ತದಭಿನ್ನತ್ವಂ ನಿಷ್ಪ್ರಕಾರಕಜ್ಞಾನಾನ್ಮೋಕ್ಷೇ ನೇತಿ ಚ ಸಿದ್ಧಮಿತಿ ಸೂಚಯಿತುಂ ಸಾಕಾರೇತ್ಯಾದ್ಯುಕ್ತಮ್ । ಅನ್ಯಸ್ಯ ನಿರ್ಗುಣಸ್ಯ ಶಿವಾದೇಶ್ಚ ॥ ೫೩೦ ॥

**ವಿವರಣೆ–** (1) ನಿರಾಕಾರನ ಜ್ಞಾನವು ಮೋಕ್ಷಕ್ಕೆ ಕಾರಣ ಎಂದು ಪರನು ಹೇಳುವುದು ಸರಿಯಲ್ಲ ಎಂದು ಸೂಚಿಸಲು ರಾಜರು ಸಾಕಾರ ಎಂಬ ಪದವನ್ನು ಹೇಳಿದ್ದಾರೆ. ಅನ್ಯಸ್ಯ-ಈ ಪದಕ್ಕೆ ನಿರ್ಗುಣಬ್ರಹ್ಮನ ಮತ್ತು ಶಿವಾದಿಗಳ ಎಂದು ಅರ್ಥ.

(2) 'ನಾನ್ಯಃ ಪಂಥಾ ವಿದ್ಯತೇ ಅಯನಾಯ' - ಈ ಉಕ್ತಿಯ ಅಭಿಪ್ರಾಯವನ್ನು ಈ ಶ್ಲೋಕವು ತಿಳಿಸಿದೆ.

ಆದ್ದರಿಂದ ವಿಷ್ಣುವೇ ಪರಬ್ರಹ್ಮ-

**ಅತೋ ಮುಕುಂದಾದಿತರದ್ಬ್ರಹ್ಮ ವೇದವಿನಿಂದಿತಮ್ ।**
**ಮೋಕ್ಷೇಂತರಂಗಹೇತುತ್ವಾನ್ಮುಖ್ಯಂ ಬ್ರಹ್ಮ ಸ ಏವ ಹಿ ॥ ೫೩೧ ॥**

**ಅರ್ಥ–** ಅತಃ ಮುಕುಂದಾತ್= ಈ ಮುಕುಂದನಿಂದ, ಇತರತ್ ಬ್ರಹ್ಮ= ಬೇರೆ ಬ್ರಹ್ಮನು, ವೇದವಿನಿಂದಿತಂ= ವೇದದಿಂದ ನಿಂದಿತ. ಮೋಕ್ಷೇ= ಮೋಕ್ಷಕ್ಕೆ, ಅಂತರಂಗಹೇತುತ್ವಾತ್= ಪ್ರಧಾನ ಕಾರಣನಾದ್ದರಿಂದ, ಸ ಏವ= ಆ ಶ್ರೀಲಕ್ಷ್ಮೀಪತಿಯು, ಮುಖ್ಯಂ ಬ್ರಹ್ಮ= ಮುಖ್ಯಬ್ರಹ್ಮ. ಹಿ= ಇದು ವೇದ ಪ್ರಸಿದ್ಧ.

**ಅನುವಾದ–** ಈ ಪುರುಷಸೂಕ್ತ ಪ್ರತಿಪಾದ್ಯನಾದ ಮುಕುಂದನಿಂದ ಬೇರೆ ಬ್ರಹ್ಮನು ವೇದಗಳಿಂದ ವಿನಿಂದಿತ. ಪುರುಷಸೂಕ್ತ ಪ್ರತಿಪಾದ್ಯನಾದ ಶ್ರೀ-ಲಕ್ಷ್ಮೀಪತಿಯು ಮೋಕ್ಷಕ್ಕೆ ಪ್ರಧಾನಕಾರಣನಾದ್ದರಿಂದ ಅವನೇ ಮುಖ್ಯಬ್ರಹ್ಮ.

**ಭಾವವಿಲಾಸಿನೀ–** ಅತಃ ವಿಷ್ಣೋರನ್ಯಸ್ಯ ಮೋಕ್ಷಾನುಪಯೋಗಿತ್ವಕಥನಾತ್ । ಸ ಏವ ಮುಕುಂದ ಏವ ಹಿ ॥ ೫೩೧ ॥

**ವಿವರಣೆ–**

(1) ಇತರತ್ ಬ್ರಹ್ಮ: ಮಾಯಾವಾದಿಗಳು ಅಂಗೀಕರಿಸುವ ನಿರ್ಗುಣ ಬ್ರಹ್ಮ.

(2) ವೇದವಿನಿಂದಿತ: 'ಅಸನ್ನೇವ ಸ ಭವತಿ ಅಸದ್ ಬ್ರಹ್ಮೇತಿ ವೇದ ಚೇತ್'-ತೈತ್ತಿರೀಯ

'ಯತ್ರತ್ವಸ್ಯ ಸರ್ವಮಾತ್ಮೈವಾಭೂತ್...' - ಬೃಹದಾರಣ್ಯಕ

'ಅಂಧಃ ತಮಃ ಪ್ರವಿಶಂತಿ ಯೇಽವಿದ್ಯಾಮುಪಾಸತೇ' - ಈಶಾವಾಸ್ಯ

'ತಮೇವೈಕಂ ಜಾನಥ ಆತ್ಮಾನಮನ್ಯಾವಾಚೋ ವಿಮುಂಚಥ' - ಆಥರ್ವಣ

-ಇತ್ಯಾದಿ ವೇದವಚನಗಳು ನಿರ್ಗುಣಬ್ರಹ್ಮನ ಉಪಾಸನೆಯು ಹಾನಿಕರ ಎಂದು ಹೇಳಿವೆ.

**ವಾದಿರಾಜಾಖ್ಯಯತಿನಾ ಸಾಧಿತಾ ಯುಕ್ತಿಮಲ್ಲಿಕಾ ।**
**ಶುದ್ಧಿಸೌರಭಸರ್ವಸ್ವಮದ್ಧಾ ವಿಷ್ಣೋರ್ನ್ಯವೇದಯತ್ ॥ ೫೩೨ ॥**

**ಇತಿ ಭಾವಿಸಮೀರವಾದಿರಾಜವಿರಚಿತಾಯಾಂ**
**ಯುಕ್ತಿಮಲ್ಲಿಕಾಯಾಂ**
**ಶುದ್ಧಿಸೌರಭಂ ಸಂಪೂರ್ಣಮ್**



**ಅರ್ಥ–** ವಾದಿರಾಜಾಖ್ಯಯತಿನಾ= ವಾದಿರಾಜ ಎಂಬ ಯತಿಯಿಂದ, ಸಾಧಿತಾ= ಸಂಪಾದಿಸಲ್ಪಟ್ಟ, ಯುಕ್ತಿಮಲ್ಲಿಕಾ= ಯುಕ್ತಿಮಲ್ಲಿಕೆಯು, ಶುದ್ಧಿಸೌರಭಸರ್ವಸ್ವಂ= ಶುದ್ಧಿಸೌರಭದ ಸಕಲ ಸಂಪತ್ತನ್ನು, ವಿಷ್ಣೋಃ= ವಿಷ್ಣುವಿಗೆ, ಅದ್ಧಾ= ಚೆನ್ನಾಗಿ, ನ್ಯವೇದಯತ್= ಅರ್ಪಿಸಿತು.

**ಅನುವಾದ–** ಯುಕ್ತಿಗಳ ಮಲ್ಲಿಗೆ ಹೂವು ವಾದಿರಾಜರೆಂಬ ಯತಿಗಳಿಂದ ಸಂಪಾದಿಸಲ್ಪಟ್ಟಿದೆ. ಈ ಮಲ್ಲಿಗೆಯು ತನ್ನ ಶುದ್ಧಿಸೌರಭದ ಸಕಲ ಸಂಪತ್ತನ್ನು ಪರಮಾತ್ಮನಿಗೆ ಭಕ್ತಿಯಿಂದ ಸಮರ್ಪಿಸಿದೆ.

**ಭಾವವಿಲಾಸಿನೀ–** ಅದ್ಧಾ ಅಂಜಸಾ । ಶಿಷ್ಟಂ ಪೂರ್ವವದೇವ ಯೋಜನೀಯಮ್ ॥ ೫೩೨ ॥

**ವಿವರಣೆ–** (1) ಯುಕ್ತಿಮಲ್ಲಿಕಾ ಗ್ರಂಥದ ಅಭಿಮಾನಿನೀ ಭಾರತೀದೇವಿ. ಈ ದೇವಿಯು ಗುರುರಾಜರಿಗೆ ವಾಗ್ವೈಖರಿಯನ್ನು ಕೊಟ್ಟು ಈ ಗ್ರಂಥದ ಸಂಪಾದನೆಯನ್ನು ಅವರಿಂದ ಮಾಡಿಸಿದ್ದಾಳೆ. ಈ ಭಾರತೀದೇವಿಯೇ ಈ ಗ್ರಂಥವನ್ನು ವಿಷ್ಣುವಿಗೆ ಸಮರ್ಪಿಸಿದ್ದಾಳೆ.

(2) ಯುಕ್ತಿಮಲ್ಲಿಕಾ ಶುದ್ಧಿಸೌರಭಸರ್ವಸ್ವಂ ವಿಷ್ಣೋರ್ನ್ಯವೇದಯತ್- ಈ ವಾಕ್ಯಕ್ಕೆ ಯುಕ್ತಿಮಲ್ಲಿಕಾ ಗ್ರಂಥದ ಅಭಿಮಾನಿನಿಯಾದ ಭಾರತೀದೇವಿಯು ಶುದ್ಧಿಸೌರಭದ ಸಕಲ ಸಂಪತ್ತನ್ನು ವಿಷ್ಣುವಿಗೆ ನಿವೇದಿಸಿದಳು ಎಂದು ಅರ್ಥ.

ಯತಿಕುಲತಿಲಕರಾದ ಭಾವಿಸಮೀರರಾದ ಶ್ರೀಮದ್ವಾದಿರಾಜ ಗುರು–ಸಾರ್ವಭೌಮರಿಂದ ವಿರಚಿತವಾದ ಯುಕ್ತಿಮಲ್ಲಿಕೆಯ ಶುದ್ಧಿಸೌರಭದ ಕನ್ನಡಾನುವಾದವು ಸಂಪೂರ್ಣವಾಯಿತು.

ಶ್ರೀಹರಿಃ ಪ್ರೀಯತಾಂ

॥ ಶ್ರೀಕೃಷ್ಣಾರ್ಪಣಮಸ್ತು ॥

# ಶುದ್ಧಿಸೌರಭೋದಾಹೃತಸ್ವಾರಸಿಕಯುಕ್ತಯಃ

**ಮಹತ್ಸು ಗುಣಸಾರೇಷು ದೋಷಾನ್ವೇಷಣಧೀರ್ಮುಧಾ ।**
**ಅನಂತಗುಣಹೃದ್ಯೋऽಪಿ ನಿರವದ್ಯೋ ನ ಕಿಂ ಹರಿಃ ॥ ೧ ॥**

**ಅನುವಾದ-** ಗುಣಸಂಪನ್ನರಾದ ಮಹಾತ್ಮರಲ್ಲಿ ದೋಷವನ್ನು ಕಾಣುವ ಬುದ್ಧಿಯಿಂದ ಏನೂ ಪ್ರಯೋಜನವಿಲ್ಲ. ಅಷ್ಟೇ ಅಲ್ಲ, ಈ ಬುದ್ಧಿಯಿಂದ ನರಕ ಮೊದಲಾರ ಅನರ್ಥಗಳು ಸಂಭವಿಸುತ್ತವೆ. ಹರಿಯು ಅನಂತ ಗುಣಗಳಿಂದ ಮನೋಹರನೂ ಮತ್ತು ದೋಷರಹಿತನೂ ಅಲ್ಲವೆ?

**ಯೋऽಸೌ ಲಘೀಯಸೋ ದೋಷೋ ನಾಸೌ ದೋಷೋ ಗರೀಯಸಃ ।**
**ಅಪಿ ಸಂಹೃತ್ಯ ನಿಖಿಲಮಪವಾದೀ ಕಿಮಚ್ಯುತಃ ॥ ೨ ॥**

**ಅನುವಾದ-** ಅಲ್ಪರಿಗೆ ಯಾವುದು ದೋಷವೋ ಅದು ಮಹಾತ್ಮರಿಗೆ ದೋಷವಲ್ಲ. ಉದಾ: ಅಸಂಪ್ರಜ್ಞಾತ ಸಮಾಧಿಯಲ್ಲಿಲ್ಲದವರು ಸಂಧ್ಯಾವಂದನೆ ಮೊದಲಾದ ಸತ್ಕರ್ಮಾನುಷ್ಠಾನಗಳನ್ನು ಮಾಡಲೇಬೇಕು. ಮಾಡದಿರುವುದು ಅವರಿಗೆ ದೋಷ. ಅಸಂಪ್ರಜ್ಞಾತ ಸಮಾಧಿಯಲ್ಲಿ ಇರುವವರಿಗೆ ಸಂಧ್ಯಾವಂದನೆ ಮೊದಲಾದ ಸತ್ಕರ್ಮಾನುಷ್ಠಾನಗಳನ್ನು ಮಾಡದಿರುವುದು ದೋಷವಲ್ಲ. ಇದು ಲೋಕ- ದಲ್ಲಿರುವ ವ್ಯವಸ್ಥೆ. ಪರಮಾತ್ಮನು ಎಲ್ಲ ಮಹಾತ್ಮರನ್ನು ಮೀರಿಸಿದ ಮಹಾತ್ಮಾ, ಆದ್ದರಿಂದ ಅವನ ಯಾವ ಕೆಲಸವೂ ಅವನಿಗೆ ದೋಷವಲ್ಲ. ಆದ್ದರಿಂದಲೇ ಇಡೀ ಜಗತ್ತನ್ನು ಸಂಹರಿಸುವ ಅವನಿಗೆ ಶಾಸ್ತ್ರವಾಗಲಿ, ಲೋಕವಾಗಲಿ ಈ ಕಾರಣದಿಂದ ದೋಷವನ್ನು ಹೇಳಿಲ್ಲ.

**ಯದ್ ಭಾವಿ ತದ್ಭವತ್ಯೇವ ಯದಭಾವಿ ನ ತದ್ ಭವೇತ್ ।**
**ಕಲ್ಪಾಂತೇ ತಲ್ಪಕಲ್ಪಂ ಯತ್ ಪತ್ರಮಾಸೀನ್ನ ಪಾದಪಃ ॥ ೩ ॥**

**ಅನುವಾದ-** ಯಾವುದು ಆಗಬೇಕೆಂದು ಭಗವದಿಚ್ಛೆಯೋ ಅದು ಕಾರಣವಿಲ್ಲದಿದ್ದರೂ ಆಗಿಯೇ ತೀರುವುದು. ಯಾವುದು ಆಗಬಾರದೆಂದು ಭಗವತ್ಸಂಕಲ್ಪವೋ ಅದು ಸರ್ವಥಾ ಆಗಲಾರದು. ಈ ಎರಡು ನೀತಿಯನ್ನು ಸಮರ್ಥಿಸಲು ಎರಡು ದೃಷ್ಟಾಂತಗಳು - ಪ್ರಲಯಕಾಲದಲ್ಲಿ ಭಗವಂತನಿಗೆ ಹಾಸಿಗೆಯಾದ ಎಲೆಯು ಇತ್ತು, ಆದರೆ ಎಲೆಗೆ ಕಾರಣವಾದ ವೃಕ್ಷವು ಇಲ್ಲ.

**ಕೃತಿರ್ನ ಕಾರಣೇ ಯಸ್ಯ ತಸ್ಯ ಕಾರ್ಯಂ ಕುತೋ ಭವೇತ್ ।**
**ಲಯೇ ಸತಃ ಪ್ರಾಗಭಾವಾಭಾವಾನ್ನಹಿ ಹರೇರ್ಭವಃ ॥ ೪ ॥**

**ಅನುವಾದ-** ಯಾವ ವಸ್ತುವಿನ ನಿರ್ಮಾಣಕ್ಕಾಗಿ ಅದರ ಕಾರಣಗಳ ಸಂಪಾದನೆಗೆ ಪ್ರಯತ್ನವು ಅಶಕ್ಯವೋ ಆ ವಸ್ತುವಿನ ಉತ್ಪತ್ತಿಯು ಹೇಗೆ ಆದೀತು? ಶ್ರೀ ಹರಿಯು ಪ್ರಲಯಕಾಲದಲ್ಲಿ ಇದ್ದಾನೆ; ಅಂದರೆ; ಅವನ ಪ್ರಾಗಭಾವವು ಇಲ್ಲ; ಅದನ್ನು ಸಂಪಾದಿಸಲು ಆಗುವುದಿಲ್ಲ. ಆದ್ದರಿಂದ ಶ್ರೀಹರಿಗೆ ಜನ್ಮವು ಇಲ್ಲ.

**ನಾಭಿಜನ್ಮಾ ವಿಧಿಸ್ತಸ್ಯ ಕ್ರೋಧಾಜ್ಜಾತಸ್ತ್ರಿಲೋಚನಃ ।**
**ನಾರಾಯಣೋ ಮೂಲರೂಪೀ ಜಾತಃ ಕಸ್ಮಾದ್ ವಿಚಾರ್ಯತಾಮ್ ॥೫॥**

**ಅನುವಾದ-** ಚತುರ್ಮುಖಬ್ರಹ್ಮದೇವರು ಶ್ರೀಹರಿಯ ನಾಭಿಯಿಂದ ಹುಟ್ಟಿದರು. ರುದ್ರದೇವರು ಶ್ರೀಹರಿಯ ಕ್ರೋಧದಿಂದ ಹುಟ್ಟಿದರು 'ಯಸ್ಯ ಪ್ರಸಾದಜೋ ಬ್ರಹ್ಮಾ ರುದ್ರಶ್ಚ ಕ್ರೋಧಸಂಭವಃ' ಎಂಬ ಮಹಾಭಾರತವಚನದಿಂದ ಈ ವಿಷಯವು ತಿಳಿಯುತ್ತದೆ. ಆದರೆ ನಾರಾಯಣನ ಜನ್ಮವು ಯಾರಿಂದ ಆಯಿತು ಎಂದು ಯಾವ ಗ್ರಂಥವೂ ಹೇಳಿಲ್ಲ. ಆದ್ದರಿಂದ ಅವನಿಗೆ ಜನ್ಮವು ಇಲ್ಲ.

**ಅತೋಽಭೂದ್ದೇಹಲೀದೀಪಃ ಪ್ರಲಯೇ ಸತ್ತ್ವಮೀಶಿತುಃ ।**
**ಕಲ್ಪಾಂತೇ ಯಲ್ಲಯಂ ರುಂಧೇ ಕಲ್ಪಾದೌ ಜನ್ಮ ಚ ಪ್ರಭೋಃ ॥ ೬ ॥**

**ಅನುವಾದ-** ಪ್ರಲಯಕಾಲದಲ್ಲಿ ಸರ್ವಶಾಸಕನಾದ ಪರಮಾತ್ಮನ ಸ್ಥಿತಿಯು ಕಲ್ಪದ ಕೊನೆಯಲ್ಲಿ ಅವನ ಲಯವನ್ನು, ಕಲ್ಪದ ಆದಿಯಲ್ಲಿ ಜನ್ಮವನ್ನೂ ತಡೆಯುತ್ತದೆ. (ನಾಶ-ಜನ್ಮಗಳು ಇಲ್ಲ ಎಂದು ತಿಳಿಸುತ್ತದೆ). ಆದ್ದರಿಂದ ಈಶನ ಪ್ರಲಯಕಾಲದಲ್ಲಿ ಸ್ಥಿತಿಯು ಹೊಸ್ತಿಲ ಮೇಲಿನ ದೀಪ.

**ಪೂರ್ಣಪ್ರವೃತ್ತಿರನ್ಯಾರ್ಥಾ ನವೈ ಪೂರ್ತ್ಯರ್ಥಮಾತ್ಮನಃ ।**
**ತಟಾಕೋತ್ಸಿಕ್ತತೋಯೈಃ ಕಿಂ ತಟಾಕಸ್ಯೈವ ಪೂರಣಮ್ ॥ ೭ ॥**

**ಅನುವಾದ-** ಪೂರ್ಣರಾದವರ ಪ್ರವೃತ್ತಿಯು ಪರರ ಪ್ರಯೋಜನಕ್ಕಾಗಿ, ತಮ್ಮ ಅವಶ್ಯಕತೆಗಳನ್ನು ಪೂರೈಸಲು ಅಲ್ಲ. ಕೆರೆಯು ತುಂಬಿ ಹೊರಗೆ ಹರಿದ ನೀರಿನಿಂದ ಕೆರೆಯೇ ತುಂಬುವುದೇ?

**ಸುಖಸ್ಯಾನಂತರಂ ದುಃಖಂ ಭ್ರಮೋ ನ ಪ್ರಮಯಾ ಸಹ ।**
**ನಹಿ ಪೂರ್ಣಸುಖಜ್ಞಾನೋ ದುಃಖಭ್ರಾಂತ್ಯವಕಾಶವಾನ್ ॥ ೮ ॥**

**ಅನುವಾದ-** ಸುಖದ ಅನಂತರವೇ ದುಃಖ (ಏಕಕಾಲದಲ್ಲಿ ಅಲ್ಲ) ಯಥಾರ್ಥ ಜ್ಞಾನದ ಜತೆಗೇ ಭ್ರಮೆಯು ಇರುವುದಿಲ್ಲ. ಪೂರ್ಣಸುಖ ಮತ್ತು ಪೂರ್ಣಜ್ಞಾನವುಳ್ಳ ಶ್ರೀಹರಿಯಲ್ಲಿ ದುಃಖ ಮತ್ತು ಭ್ರಾಂತಿಗೆ ಅವಕಾಶವಿಲ್ಲ.

**ಪ್ರಾಗ್ಜನ್ಮಾರ್ಜಿತದುಷ್ಕರ್ಮ ದುಃಖಮೂಲಂ ಧ್ರುವಂ ನೃಣಾಮ್ ।**
**ನ ಕರ್ಮಣಾ ವರ್ಧತೇ ಯೋ ನೋ ಕನೀಯಾನ್ ಕುತೋಽಸ್ಯ ತತ್ ॥ ೯ ॥**

**ಅನುವಾದ-** ಪೂರ್ವಜನ್ಮದಲ್ಲಿ ಸಂಪಾದಿಸಲ್ಪಟ್ಟ ಕರ್ಮವು ಮನುಷ್ಯರ ದುಃಖದ ಮೂಲ. ಇದು ಶಾಸ್ತ್ರಸಿದ್ಧ ವಿಷಯ. ಕರ್ಮಗಳಿಂದ ಸಂಭವಿಸುವ ವೃದ್ಧಿ-ಹ್ರಾಸಗಳಿಗೆ ಒಳಗಾಗದ ಶ್ರೀಹರಿಗೆ ಅದುಃ ದುಃಖ-ಭ್ರಾಂತಿಗಳು, ಹೇಗೆ ತಾನೇ ಉಂಟಾಗುತ್ತದೆ.

**ಕ್ಷುತ್ಪಿಪಾಸಾದಿ ಮರ್ತ್ಯಾನಾಮಾಮುಕ್ತೇರ್ನಹಿ ಸರ್ವದಾ ।**
**ಬೃಹಚ್ಛರೀರಃ ಕಿಂ ಭುಂಕ್ತೇ ಬ್ರಹ್ಮಾಂಡಂ ಯಸ್ಯ ರೋಮಸು ॥ ೧೦ ॥**

**ಅನುವಾದ-** ಮನುಷ್ಯರಿಗೂ ಹಸಿವು ಬಾಯಾರಿಕೆಗಳು ಮೋಕ್ಷಪ್ರಾಪ್ತಿಯರೆಗೆ ಮಾತ್ರ, ಯಾವಾಗಲೂ ಇಲ್ಲ. ಹೀಗಿರುವಾಗ ನಿತ್ಯಮುಕ್ತನಾದ ಶ್ರೀಹರಿಗೆ ಹಸಿವು ಬಾಯಾರಿಕೆಗಳನ್ನು ಹೇಗೆ ಕಲ್ಪಿಸಲಾದೀತು? ಅವನ ರೋಮಕೂಪಗಳಲ್ಲಿ ಬ್ರಹ್ಮಾಂಡವೇ ಅಡಗಿದೆ. ಅಂತಹ ಬೃಹಚ್ಛರೀರನಾದ ಕೃಷ್ಣನಿಗೆ ಹಸಿವಿರುವುದಾದರೆ ಅವನು ಏನನ್ನು ತಿನ್ನಬೇಕು? ಅವನ ಹಸಿವೆಯ ಪರಿಹಾರಕ್ಕೆ ಬೇಕಾದ ಪದಾರ್ಥಗಳೇ ಜಗತ್ತಿನಲ್ಲಿಲ್ಲ.

**ಮಹಾನ್ ಹಿ ರಕ್ಷಕೋಽಲ್ಪಸ್ಯ ಮಹಾಂತಂ ಸ ನ ರಕ್ಷತಿ ।**
**ಉದ್ದಧಾರ ಮಹೀಮಾದೌ ವರಾಹಸ್ತಂ ದಧಾರ ಕಃ ॥ ೧೧ ॥**

**ಅನುವಾದ-** ಮಹಾತ್ಮರು ಅಲ್ಪರನ್ನು ರಕ್ಷಿಸುತ್ತಾರೆ, ಅಲ್ಪರು ಮಹಾತ್ಮರನ್ನು ರಕ್ಷಿಸುವುದಿಲ್ಲ. ವರಾಹನು ಪ್ರಲಯಜಲದಲ್ಲಿ ಮುಳುಗಿದ ಭೂಮಿಯನ್ನು ಮೇಲೆತ್ತಿದನು. ಅವನನ್ನು ಯಾರು ಧರಿಸಿದರು? ಯಾರೂ ಇಲ್ಲ.

**ಶಕ್ತೋಽಪಿ ರಾಜಾ ಭೃತ್ಯಸ್ಯ ಹಸ್ತಂ ಸಂಗೃಹ್ಯ ಗಚ್ಛತಿ ।**
**ಸ್ವರ್ನೀತಗರ್ದಭಶ್ವಾದೇಃ ಲಂಕಾ ಶಂಕಾಸ್ಪದಂ ಕಿಲ ॥ ೧೬ ॥**

**ಅನುವಾದ-** ರಾಜನು ತಾನೇ ನಡೆಯಲು ಸಮರ್ಥನಾದರೂ ಸೇವಕನ ಕೈ ಹಿಡಿದುಕೊಂಡು ನಡೆಯುತ್ತಾನೆ. ಕತ್ತೆ, ನಾಯಿ ಮೊದಲಾದವುಗಳನ್ನು ಮೋಕ್ಷಕ್ಕೆ ಕರೆದುಕೊಂಡು ಹೋದ ಶ್ರೀರಾಮಚಂದ್ರನಿಗೆ ಲಂಕೆಯು ಸಂಶಯಾಸ್ಪದವಂತೆ! (ಲಂಕೆಯನ್ನು ತಲುಪಲು ಕಷ್ಟವೇ?)

**ಸ್ವಯಂ ಭೀರುರ್ಗಭೀರಸ್ಯ ಸ್ವಭಾವಂ ಭಾವಯೇತ ಸ್ವವತ್ ।**
**ನಖಭಿನ್ನಾಬ್ಜಜಾಂಡಸ್ಯ ಚಿಂತಾ ಹಂತಾಸುರಾತ್ ಕಿಲ ॥ ೧೭ ॥**

**ಅನುವಾದ-** ಸ್ವಯಂ ಅಂಜಿಕೆಯ ಸ್ವಭಾವದವನು ತನ್ನಂತೆ ಬೇರೆಯವರಲ್ಲೂ ಅಂಜಿಕೆಯ ಸ್ವಭಾವವನ್ನು ಕಲ್ಪಿಸುವನು. ತನ್ನ ಉಗುರಿನಿಂದ ಬ್ರಹ್ಮಾಂಡವನ್ನೇ ಭೇದಿಸದ ಪರಮಾತ್ಮನಿಗೆ ಅಸುರನಿಂದ ಭಯವಂತೆ! ಆಹಾ!

**ಕುಕ್ಷೌ ಯಸ್ಯಾಖಿಲಾ ಲೋಕಾ ಲಕ್ಷ್ಯಂತೇ ಸ್ಮ ಶಿಶೋಃ ಕಿಲ ।**
**ಜನನಂ ಮರಣಂ ಚಾಸ್ಯ ನ ಯುಕ್ತಂ ಯುಕ್ತಿವಿನ್ಮತೇ ॥ ೧೮ ॥**

ನಹಿ ಕಲ್ಪಾಂತಸಮಯಃ ಯಃ ಸ್ವರ್ಗಾರೋಹಣಕ್ಷಣಃ ।
ನಚ ಕಲ್ಪಾದಿಕಾಲೋಽಸೌ ಯತ್ರಾವಾತರದಚ್ಯುತಃ ॥ ೧೯ ॥

**ಅನುವಾದ-** ಕೃಷ್ಣನ ತಾಯಿಯು ಅವನ ಹೊಟ್ಟೆಯಲ್ಲಿ ಎಲ್ಲ ಲೋಕಗಳನ್ನೂ ನೋಡಿದಳು. ಅಂತಹ ಕೃಷ್ಣನಿಗೆ ಜನನಮರಣವು ಯುಕ್ತವಲ್ಲ. ಕೃಷ್ಣನು ಸ್ವರ್ಗಕ್ಕೆ ಹೋದದ್ದನ್ನು ಅವನ ಮರಣವೆನ್ನುವುದಾದರೆ ಆಗ ಅವನ ಹೊಟ್ಟೆಯಲ್ಲಿರುವ ಎಲ್ಲ ಲೋಕಗಳೂ ನಾಶವಾಗಿ ಅದು ಬ್ರಹ್ಮಕಲ್ಪನಾಶದ ಸಮಯವಾಗಬೇಕಾದೀತು. ಹಾಗೆಯೇ ಕೃಷ್ಣನ ಅವತಾರವನ್ನೇ ಅವನ ಹುಟ್ಟು ಎನ್ನುವುದಾದರೆ, ಹೊಟ್ಟೆಯೊಳಗಿರುವ ಬ್ರಹ್ಮಾಂಡವೂ ಆಗಲೇ ಹುಟ್ಟಿತು ಎನ್ನಬೇಕಾಗುವುದು. ಕೃಷ್ಣನ ಅವತಾರಕಾಲವು ಬ್ರಹ್ಮಸೃಷ್ಟಿಕಾಲವಾಗಿ, ಅವತಾರದ ಮೊದಲು ಏನೂ ಇಲ್ಲವಾಗಬೇಕಾದೀತು. ಇವೆರಡೂ ಅಲ್ಲ.

ಬ್ರಹ್ಮಾಂಡಖರ್ಪರಚ್ಛೇದೇ ಯನ್ನಖಾಗ್ರಚ್ಛಿದಾಪಿ ನ ।
ಕೋ ಯುಕ್ತಿಮಾಂಸ್ತಸ್ಯ ವಿಷ್ಣೋಶ್ಛೇದಂ ಸಂಭಾವಯೇಚ್ಛರೈಃ ॥ ೨೬ ॥

ರೋಮಚ್ಛೇದೋ ಜಗಚ್ಛೇದೋ ಯದ್ರೋಮ್ಣಿ ನಿಖಿಲಂ ಜಗತ್ ।
ನಿಯಂತಾ ಯೋಽಖಿಲಚ್ಛೇತ್ತುಃ ಸ ಛೇದ್ಯಃ ಕೇನ ವಾ ವದ ॥ ೨೭ ॥

**ಅನುವಾದ-** ಭಗವಂತನ ರೋಮದಲ್ಲಿ ಎಲ್ಲ ಜಗತ್ತು ಅಡಗಿದೆ. ಆದ್ದರಿಂದ ಭಗವಂತನ ರೋಮಚ್ಛೇದವಾದರೆ ಜಗಚ್ಛೇದವೇ ಆಗುವುದು. ಜಗತ್ಸಂಹಾರಕರಾದ ರುದ್ರದೇವರಿಗೂ ಕೃಷ್ಣನು ನಿಯಾಮಕನಾಗಿರುವಾಗ ಆ ಕೃಷ್ಣನನ್ನು ಯಾರು ಛೇದಿಸಿಯಾರು?

ಜೀವೇಽನುಭೂತಮಜ್ಞಾನಂ ಸರ್ವಜ್ಞೇ ಕೇನ ನೀಯತೇ ।
ಹಾ ವತ್ಸಗಲರಜ್ಜ್ವೈವ ದಿಗ್ಗಜಂ ಬದ್ಧುಮಿಚ್ಛಸಿ ॥ ೯೩ ॥

**ಅನುವಾದ-** 'ಅಹಮಜ್ಞಃ' ಎಂದು ಜೀವಾತ್ಮರ ಅನುಸಂಧಾನ. ಇದರಿಂದ ಜೀವಾತ್ಮರಿಗೆ ತಮ್ಮಲ್ಲಿರುವ ಅಜ್ಞಾನದ ಅನುಭವವಿದೆ ಎಂದು ತಿಳಿಯುತ್ತದೆ. ಈ ಅನುಸಂಧಾನವನ್ನು ಅಥವಾ ಹೇಳಿಕೆಯನ್ನು ಪರಮಾತ್ಮನಿಗೆ ಅನ್ವಯಿಸಲು ಏನು ಪ್ರಮಾಣ? ಏನೂ ಇಲ್ಲ. ಕರುವಿನ ಕುತ್ತಿಗೆಯ ಹಗ್ಗದಿಂದ ದಿಗ್ಗಜವನ್ನು ಕಟ್ಟಲು ಬಯಸುತ್ತಿರುವಿ! ಅಯ್ಯೋ!

ಜೀವಸರ್ವಸ್ವಮಜ್ಞಾನಂ ತ್ವಂ ರಾಜ್ಞೇ ದಾತುಮಿಚ್ಛಸಿ ।
ನ ತದ್ದರಿದ್ರವಿತ್ತಂ ಸ ಮಹಾರಾಜೋ ದಿದೃಕ್ಷತಿ ॥ ೯೪ ॥

**ಅನುವಾದ-** ಅಜ್ಞಾನವು ಜೀವಾತ್ಮನ ಆಸ್ತಿ. ಅದನ್ನು ರಾಜನಿಗೆ ಕೊಡಲು ಬಯಸಿರುವಿ. ಆ ಬಡವರ ಆಸ್ತಿಯನ್ನು ಆ ಮಹಾರಾಜನು ನೋಡಲೂ ಬಯಸುವುದಿಲ್ಲ.

ಸ್ವದೋಷಾಚ್ಛಾದನಾಯಾಲ್ಪೋ ನಿರ್ದೋಷೇಷ್ವಪಿ ತಂ ವದೇತ್ ।
ಜೀವೇ ಸಂಭವದಜ್ಞಾನಂ ಬ್ರಹ್ಮಣ್ಯಪಿ ನ ಕಿಂ ಜಗುಃ ॥ ೧೯೬ ॥

**ಅನುವಾದ-** ಲೋಕದಲ್ಲಿ ಮೂರ್ಖನು ತನ್ನಲ್ಲಿರುವ ದೋಷವನ್ನು ಮುಚ್ಚಿಹಾಕಲು ನಿರ್ದುಷ್ಟರಾದ ಸಜ್ಜನರಲ್ಲಿ ಆ ದೋಷವನ್ನು ಆರೋಪಿಸುತ್ತಾನೆ. ಹೀಗೆಯೇ ಮಾಯಾವಾದಿಗಳು ತಮ್ಮಲ್ಲಿರುವ, ಅಜ್ಞಾನವನ್ನು ಮರೆಮಾಚಲು , ಆದರಿಂದಾಗಿ ತಮಗೆ ನೀಚತ್ವವಿಲ್ಲವೆಂದು ಹೇಳಿಕೊಳ್ಳಲು ಪರಬ್ರಹ್ಮನಲ್ಲಿಯೇ ಅಜ್ಞಾನ- ವಿದೆಯೆಂದು ಆರೋಪಿಸಿದ್ದಾರೆ.

ಕಿಂ ಮಲೈಃ ಸಮಲಸ್ಯಾಸ್ಯ ನಿರ್ಮಲಸ್ಯ ಮಲಂ ಮಲಮ್ ।
ನೀಲಿಮಾ ದೂಷಣಂ ಭಾನೋಃ ಸ್ವರ್ಭಾನೋಸ್ತು ಸ ಭೂಷಣಮ್
॥ ೧೯೭ ॥

**ಅನುವಾದ-** ದೋಷವಿರುವವನನ್ನು ಕುರಿತು ದೋಷಿ ಎಂದು ಹೇಳುವುದು ಅಪರಾಧವಲ್ಲ. ದೋಷವಿಲ್ಲದವನನ್ನು ಕುರಿತು ದೋಷಿ ಎಂದು ಹೇಳುವುದು ಕೊಳಕು ನಡವಳಿಕೆ. ಸೂರ್ಯನಿಗೆ ಕಪ್ಪುಬಣ್ಣವು ದೋಷ. ರಾಹುವಿಗೆ ಅದೇ ಭೂಷಣ.

ಸ್ವಯಂ ಹ್ಯಶಕ್ತಃ ಶಕ್ತಸ್ಯಾಪ್ಯಶಕ್ತಿಂ ಪ್ರಥಯೇತ್ ಖಲಃ ।
ಸ್ವಜ್ಞಾನವದ್ಧರೇರ್ಜ್ಞಾನಂ ಕಿಂ ನಾಜ್ಞಾನಾನುಗಂ ಜಗೌ ॥ ೧೯೮ ॥

**ಅನುವಾದ-** ಅಸಮರ್ಥರಾದ ಕೆಟ್ಟವರು ಸಮರ್ಥರನ್ನು ಅಸಮರ್ಥರೆಂದು ಪ್ರಚಾರ ಮಾಡುತ್ತಾರೆ. ಜೀವಾತ್ಮರಿಗೆ ಜ್ಞಾನ ಅಜ್ಞಾನಗಳು ಜತೆಯಾಗೇ ಇವೆ. ಇಂತಹ ಜೀವ ವರ್ಗಕ್ಕೆ ಸೇರಿದ ಅದ್ವೈತಚಿಂತಕರು ಬ್ರಹ್ಮನಲ್ಲೂ ಅಜ್ಞಾನವಿದೆ ಎಂದು ಹೇಳುತ್ತಿದ್ದಾರೆ.

ಸಕೃದ್ ಭ್ರಷ್ಟಃ ಖಲಃ ಪಶ್ಚಾದ್ ಭ್ರಷ್ಟತಾಯಾ ಬಿಭೇತಿ ಕಿಮ್ ।
ಸರ್ವಜ್ಞಾಜ್ಞಾನದೌರ್ಘಟ್ಯಂ ಕಿಂ ನಾಭಾಷತ ಭೂಷಣಮ್ ॥ ೨೦೦ ॥

**ಅನುವಾದ-** ಒಮ್ಮೆ ಭ್ರಷ್ಟನಾದ ದುಷ್ಟನು ಮತ್ತೊಮ್ಮೆ ಭ್ರಷ್ಟತನವನ್ನು ಮಾಡಲು ಹೆದರುವನೇ? ಸರ್ವಜ್ಞನಾದ ಬ್ರಹ್ಮನಿಗೆ ಅಜ್ಞಾನವನ್ನು ಹೇಳುವುದೇ ಭ್ರಷ್ಟತನ. ಅದಕ್ಕೆ ದುರ್ಘಟತ್ವವು ಭೂಷಣ ಎಂದು ಹೇಳುವುದು ಮತ್ತೊಂದು ಭ್ರಷ್ಟತನ. ಅಜ್ಞಾನಕ್ಕೆ ದುರ್ಘಟತ್ವವು ಭೂಷಣ ಎಂದು (ಅದ್ವೈತದರ್ಶನವು) ಹೇಳಲಿಲ್ಲವೇ?

ಸಾ ಚ ನಾತ್ಮಾಶ್ರಯಾತ್ ಕರ್ಮಲಕ್ಷಣಾಂತರ್ಗತಾ ಭವೇತ್ ।
ಕ್ಷುದ್ರರಜ್ಜೋರಭಾವೇನ ಲಬ್ಧಾ ಗೌಃ ಕಿಂ ವಿಸೃಜ್ಯತೇ ॥ ೨೧೧ ॥

**ಅನುವಾದ-** ಆ 'ಜ್ಞಾತತಾ'ವು ಕರ್ಮದ ಲಕ್ಷಣದಲ್ಲಿ ಸೇರಬಾರದು. (ಲಕ್ಷಣವು) ಆತ್ಮಾಶ್ರಯದೋಷಕ್ಕೆ ಒಳಗಾಗುವುದರಿಂದ. ಅಲ್ಪಬೆಲೆಯ ಹಗ್ಗವು ಇಲ್ಲ ಎಂಬ ಕಾರಣದಿಂದ ಸುಲಭವಾಗಿ ಲಭಿಸಿದ ಬಹೂಪಕಾರಿಯಾದ ಹಸುವನ್ನು ಯಾರಾದರೂ ಬಿಡುತ್ತಾರೆಯೇ?

ವೃಥಾ ವಾಗರ್ಥದಂಪತ್ಯೋರ್ನಾಯೋಗಾಯ ಮತಿಂ ಕುರು ॥ ೨೩೫ ॥

**ಅನುವಾದ–** ವಾಕ್ (ಶಬ್ದ) ಮತ್ತು ಅರ್ಥಗಳು ದಂಪತಿಗಳು. ಅವುಗಳಿಗೆ ವಿಯೋಗವನ್ನು ಉಂಟು ಮಾಡಬಾರದು. ಅರ್ಥಾತ್ ಸ್ವಪ್ರಕಾಶ ಶಬ್ದಕ್ಕೆ ತನ್ನ ಪ್ರಕಾಶಕ್ಕೆ= ಜ್ಞಾನಕ್ಕೆ ತಾನೇ ವಿಷಯ= ಕರ್ಮ ಎಂದು ಅರ್ಥ. ಈ ಅರ್ಥವನ್ನು ನಿರಾಕರಿಸಬೇಡ.

ಮುಖೇನಾತಿಪ್ರಸನ್ನೋಽಪಿ ಹೃದಿ ಹಾಲಾಹಲೀ ಖಲಃ ।
ಜಲ್ಪತಃ ಸ್ವಪ್ರಕಾಶತ್ವಂ ಸ್ವಾವೇದ್ಯತ್ವಂ ಯತೋ ಹೃದಿ ॥ ೨೩೮ ॥

**ಅನುವಾದ–** ದುಷ್ಟರು ಮೇಲ್ನೋಟಕ್ಕೆ ಪ್ರಸನ್ನರಾಗಿರುವಂತೆ ತೋರಿಸಿಕೊಂಡರೂ, ಮನಸ್ಸಿನಲ್ಲಿ ದ್ವೇಷ, ಅಸೂಯೆ ಮೊದಲಾದ ದುರ್ಗುಣಗಳನ್ನು ತುಂಬಿ ಕೊಂಡಿರುತ್ತಾರೆ. ಅದರಂತೆ, ಮಾಯಾವಾದವೂ ಬ್ರಹ್ಮನನ್ನು ಸ್ವಪ್ರಕಾಶ ಎಂದು ಹೇಳುತ್ತಾ, ಬ್ರಹ್ಮಜ್ಞಾನವು ತನ್ನನ್ನು ವಿಷಯೀಕರಿಸುವುದಿಲ್ಲವೆಂದು (ಬ್ರಹ್ಮನು ಸರ್ವಜ್ಞನಲ್ಲವೆಂದು) ಹೇಳುತ್ತದೆ. ಇದು ದುರ್ಜನರ ನೀತಿ.

ಕಿಂ ಸ್ವಾದುನಾ ಗುಡೇನಾಪಿ ಯದ್ರಸೋ ನಾನುಭೂಯತೇ ।
ಕಿಂ ಸ್ವರೂಪಸುಖೇನ ಸ್ಯಾದ್ ಯದಿ ತನ್ನಾನುಭೂಯತೇ ॥ ೨೪೦ ॥

**ಅನುವಾದ–** ಬೆಲ್ಲದ ರಸವನ್ನು ಅನುಭವಿಸದಿದ್ದರೆ ಅದು ಎಷ್ಟೇ ರುಚಿಯಾಗಿದ್ದರೂ ಏನು ಪ್ರಯೋಜನ? ಸ್ವರೂಪಸುಖವನ್ನು ಅನುಭವಿಸದಿದ್ದರೆ, ಆ ಸುಖದಿಂದ ಏನು ಪ್ರಯೋಜನ?

ಚೋರಸ್ಯ ಚೋರಃ ಶಿಷ್ಯೋಽಪಿ ಶಿಷ್ಟಶಿಷ್ಟಸ್ಯ ಕೇವಲಮ್ ।
ಸ್ವಾಜ್ಞಂ ತತ್ ಕಿಲ ಸರ್ವಜ್ಞಂ ಮುಕ್ತಂ ಸ್ವಾನಂದಭೋಕ್ತೃ ಚ ॥ ೨೪೧ ॥

**ಅನುವಾದ–** ಕಳ್ಳನಿಗೆ ಶಿಷ್ಯರೂ ಕಳ್ಳರಾಗಿ ಕಾಣುತ್ತಾರೆ. ಶಿಷ್ಟರಿಗೆ ಮಾತ್ರ ಶಿಷ್ಯರು ಶಿಷ್ಟರಾಗಿ ಕಾಣುತ್ತಾರೆ. ಬ್ರಹ್ಮನು, ವಾಸ್ತವಿಕವಾಗಿ, ಸರ್ವಜ್ಞ, ಮುಕ್ತ ಮತ್ತು ಸ್ವರೂಪಾನಂದವನ್ನು ಅನುಭವಿಸುವವನು. ಈ ಬ್ರಹ್ಮನಿಗೆ ತನ್ನ ಜ್ಞಾನವೇ ಇಲ್ಲ ಎಂದು ಅದ್ವೈತದರ್ಶನವು ಹೇಳುತ್ತದೆ.

ವಿಜ್ಞಾನಾಸ್ತ್ರೇಣ ಯೋ ಮಾಯಾಮಹರದ್ ಬಾಣಮಂತ್ರಿಣಃ ।
ಅನ್ಯೈರಹನ್ಯಮಾನಾಂ ಚ ಸಾ ಕಥಂ ಸಾತ್ವತರ್ಷಭೇ ॥ ೩೫೯ ॥

**ಅನುವಾದ–** ಬಾಣಾಸುರನ ಮಂತ್ರಿಯು ಪ್ರಯೋಗಿಸಿದ ಮಾಯೆಯನ್ನು ಭೇದಿಸಲು ಯಾರಿಗೂ ಆಗಲಿಲ್ಲ. ಆಗ ಶ್ರೀಹರಿಯು ತಾನೇ ವಿಜ್ಞಾನಾಸ್ತ್ರವನ್ನು ಪ್ರಯೋಗಿಸಿ ಆ ಮಾಯೆಯನ್ನು ಕತ್ತರಿಸಿದನು. ಇಂತಹ ಮಾಯೆಯು ಶ್ರೀಕೃಷ್ಣನಲ್ಲಿ ಹೇಗೆ?

ಮದಾಂಧೇ ತು ಮಹಾದೈತ್ಯೇ ಗುರೋರಪ್ಯವಮಂತರಿ ।
ತವೋಪಮಾ ಕಥಂಚಿತ್ ಸ್ಯಾನ್ಮಿಥ್ಯಾತ್ವಂ ನಾಸ್ತಿತಾ ಯದಿ ॥ ೩೬೨ ॥

**ಅನುವಾದ–** ಮದಾಂಧನಾದ ಮಹಾದೈತ್ಯವೃಕಾಸುರನು ವರವನ್ನು ಕೊಟ್ಟ ಗುರು ಶಿವನನ್ನೇ ಅವಮಾನಿಸಿದನು. 'ಮಾಯೆ'ಯು ಮಿಥ್ಯಾ ಎಂದು ಅದ್ವೈತವನ್ನು ಉಪದೇಶಿಸುವ ಗುರುಗಳು ಹೇಳುತ್ತಾರೆ. 'ಮಿಥ್ಯಾ' ಶಬ್ದಕ್ಕೆ 'ಅಸತ್' ಎಂದು ಅರ್ಥವು ಅದ್ವೈತಗುರುವಿಗೆ ಸಮ್ಮತವಲ್ಲ. 'ಮಿಥ್ಯಾ' ಶಬ್ದಕ್ಕೆ 'ಅಸತ್' ಎಂದು ಅರ್ಥವನ್ನು ಹೇಳುವುದು ಗುರುದ್ರೋಹ. ಆದ್ದರಿಂದ ಹೀಗೆ ಹೇಳುವವನು ವೃಕಾಸುರನಿಗೆ ಸಮ.

**ಮಲಿನದ್ರವ್ಯಸಂಯೋಗೇ ಮಾಲಿನ್ಯಂ ವಾಸಸೋಽಪಿ ಹಿ ।**
**ಶುದ್ಧವಸ್ತುಸಮಾಯೋಗೇ ಶ್ಲಾಘ್ಯಂ ಸ್ಯಾತ್ ಸ್ವರ್ಗಿಣಾಮಪಿ ॥ ೩೬೬ ॥**

**ಅನುವಾದ–** ಬಟ್ಟೆಗೆ ಕೆಸರು ಅಂಟಿದರೆ, ಬಟ್ಟೆಯೂ ಕೆಸರಾಗುತ್ತದೆ. ಕೌಸುಂಭರಸದಿಂದ ಶುಭ್ರವಾದ ವಸ್ತ್ರವನ್ನು ಎಲ್ಲರೂ ಧರಿಸಲು ಅಪೇಕ್ಷಿಸುತ್ತಾರೆ. ದೇವತೆಗಳೂ ಅದನ್ನು ಶ್ಲಾಘಿಸುತ್ತಾರೆ.

ಅದ್ವೈತದರ್ಶನವು ಬ್ರಹ್ಮನಿಗೆ ಅವಿದ್ಯೆಯ ಕೆಸರನ್ನು ಮೆತ್ತಿದೆ. ಅಂತಹ ಬ್ರಹ್ಮ ಮತ್ತು ದರ್ಶನವು ಸ್ವೀಕಾರಾರ್ಹವಲ್ಲ.

**ಗೋಃ ಶಾಬಲ್ಯಂ ನ ಕಿಂ ಲಾಲ್ಯಂ ಶ್ವಿತ್ರಿಣಶ್ಚಿತ್ರರೂಪವತ್ ।**
**ನಿತ್ಯಮುಕ್ತತ್ವಶುದ್ಧತ್ವವಚನಾತ್ ಕ್ವಾಸ್ಯ ದೋಷಿತಾ ॥ ೩೭೬ ॥**

**ಅನುವಾದ–** ಕುಷ್ಠರೋಗಿಯ ಚಿತ್ರರೂಪವು ಪ್ರಶಂಸಾರ್ಹವಲ್ಲ. ಇದರಂತೆ ಹಸುವಿನ ಚಿತ್ರರೂಪವೂ ಪ್ರಶಂಸಾರ್ಹವಲ್ಲವೇ? ಪರಮಾತ್ಮನಿಗೆ ನಿತ್ಯಮುಕ್ತತ್ವವನ್ನು, ಶುದ್ಧತ್ವವನ್ನು ಆಗಮಗಳು ಹೇಳುತ್ತವೆ. ಆದ್ದರಿಂದ ಅವನಿಗೆ ದೋಷವೆಲ್ಲಿಯದು?

**ಪರಾಸ್ಯೇತಿ ಶ್ರುತಿಃ ಪ್ರಾಹ ಸಹ ಜ್ಞಾನಬಲಕ್ರಿಯಾಃ ।**
**ಅತಃ ಶ್ರೌತಮಿದಂ ತ್ಯಕ್ತ್ವಾ ಸ್ವಗೋತ್ರಕಲಹಾಕ್ಷಮಾ ।**
**ಶ್ರುತಿರ್ನಿಷೇಧತೀಶೇ ದ್ವೇ ಪುಣ್ಯಪಾಪಾಭಿಧೇ ಕ್ರಿಯೇ ॥ ೩೭೯ ॥**

**ಅನುವಾದ-** 'ಪರಾಸ್ಯ ಶಕ್ತಿರ್ವಿವಿಧೈವ ಶ್ರೂಯತೇ ಸ್ವಾಭಾವಿಕೀ ಜ್ಞಾನಬಲಕ್ರಿಯಾ ಚ'- ಈ ಶ್ರುತಿಯು ಪರಮಾತ್ಮನ ಜ್ಞಾನ, ಬಲ ಮತ್ತು ಕ್ರಿಯೆಗಳನ್ನು ಜತೆಗೆ ಹೇಳಿದೆ. 'ಶ್ರುತಿ' ಎಂಬ ಕುಲಕ್ಕೆ ಸೇರಿದ ಬೇರೆ ಬೇರೆ ವಾಕ್ಯಗಳು ಪರಸ್ಪರ ವಿರುದ್ಧವಾಗಿ ಇರುವುದಿಲ್ಲ. ಆದ್ದರಿಂದ 'ನಿಷ್ಕಲಂ...' ಶ್ರುತಿಯು, 'ಸ್ವಾಭಾವಿಕೀ...' ಶ್ರುತಿಯು ಹೇಳುವ ಜ್ಞಾನಾದಿಗಳನ್ನು ಬಿಟ್ಟು ಪುಣ್ಯ-ಪಾಪ ಎಂಬ ಎರಡು ಕ್ರಿಯೆಗಳನ್ನು ಈಶನಲ್ಲಿ ನಿಷೇಧಿಸುತ್ತದೆ.

**ವಿಲಕ್ಷಣಶರೀರತ್ವಾನ್ನ ತದ್ ದುಃಖಾದಿಕಾರಣಮ್ ।**
**ಅಜೀರ್ಣತಾ ಮನುಷ್ಯಾನ್ನಾದ್ ದೇವಾನ್ನಾದಜರೋಽಮರಃ ॥ ೪೦೨ ॥**

**ಅನುವಾದ–** ಆ ಪರಮಾತ್ಮಶರೀರವು ಮನುಷ್ಯಶರೀರಕ್ಕಿಂತ ವಿಲಕ್ಷಣವಾದುದರಿಂದ, ದುಃಖಾದಿಗಳಿಗೆ ಕಾರಣವಾಗುವುದಿಲ್ಲ. ಮನುಷ್ಯಾನ್ನದಿಂದ ಅಜೀರ್ಣತೆಯು ಉಂಟಾಗುತ್ತದೆ. ದೇವಾನ್ನ-ಅಮೃತವನ್ನು ಸೇವಿಸಿದವರು ಜರಾರಹಿತರೂ, ಮೃತ್ಯುರಹಿತರೂ ಆಗುತ್ತಾರೆ.

**ಅಸ್ತ್ಯಸ್ತಿತೋಕ್ತೌ ನಾಸ್ತೀತಿ ಪ್ರತಿವಾಗತಿವಾದಿನಿ ।**
**ಸಹಸ್ರಶೀರ್ಷಾ ಶ್ರೌತೋ ಯೋ ನೈಕಶೀರ್ಷಾಪ್ಯಸೌ ಕಿಲ ॥ ೪೫೨ ॥**

**ಅನುವಾದ–** ಅತಿಯಾಗಿ (ಅಸಂಗತವಾಗಿ) ಮಾತನಾಡುವ ಸ್ವಭಾವವುಳ್ಳವರು. 'ಅಸ್ತಿ' ಎಂಬ ಮಾತಿಗೆ ವಿರುದ್ಧವಾಗಿ 'ನಾಸ್ತಿ' ಎಂದು ಹೇಳುತ್ತಾರೆ. ಪರಮಾತ್ಮನು 'ಸಹಸ್ರಶೀರ್ಷಾ' ಎಂದು ಶ್ರುತಿಗಳು ಹೇಳುತ್ತವೆ. ಇಂತಹ ಪರಮಾತ್ಮನಿಗೆ ಒಂದು ಶಿರಸ್ಸೂ ಇಲ್ಲವಂತೆ! (ಅವನು ನಿರಾಕಾರನಂತೆ!)

**ಛಲೀ ಸೂರ್ಯಾಚ್ಛಾದನಾಯ ಕರಂ ಕೋಽಪಿ ಪ್ರಸಾರಯೇತ್ ।**
**ಸಪ್ರಕಾರಂ ಹಿ ಯಂ ವಿದ್ವಾನ್ ಮುಚ್ಯೇತ ಸ ಕಿಲಾಲ್ಪಕಃ ॥ ೪೫೩ ॥**

**ಅನುವಾದ–** ದುರಾಗ್ರಹದ ಮನುಷ್ಯನು ಸೂರ್ಯನನ್ನು ಮರೆಮಾಡಲು ಕೈಚಾಚಿಯಾನು. ಗುಣಗಳನ್ನು ಹೊಂದಿದ ಯಾರನ್ನು ತಿಳಿದವನು ಮುಕ್ತಿಯನ್ನು ಹೊಂದುವನೋ ಅವನು ಅಲ್ಪನೇ?

**ಅಪಿ ಭಿಕ್ಷಾಟನಂ ಕೃತ್ವಾ ಜ್ಞಾತೀನ್ ರಕ್ಷಿತುಮರ್ಹತಿ ।**
**ಯದಿಯಂ ಭಾರತೀ ಭೀಮಸೇನದರ್ಶಿತಪದ್ಧತಿಃ ॥ ೪೮೮ ॥**

**ಅನುವಾದ–** ಈ ವೇದವಾಣಿಯು (ಪುರುಷ ಏವೇದಂ ಸರ್ವಮ್) ಭಿಕ್ಷಾಟನೆಯನ್ನು ಮಾಡಿಯಾದರೂ ತನ್ನ ಜೊತೆಯ ವಾಕ್ಯಗಳನ್ನು ರಕ್ಷಿಸಬೇಕು. ಏಕೆಂದರೆ ಈ ವಾಣಿಯು, ಎಂದರೆ, ವಾಣಿಯ ಅಭಿಮಾನಿಯಾದ ಭಾರತೀದೇವಿಯು ಭೀಮಸೇನನಿಂದ ತೋರಿಸಲ್ಪಟ್ಟ ಮಾರ್ಗವುಳ್ಳವಳು.

**ಜಡಾತ್ಮೈಕ್ಯಪ್ರಸಂಗೇನ ಮುಖ್ಯಾರ್ಥಸ್ತು ತವಾಪಿ ನ ।**
**ಯಾಚ್ಞಾಯಾಂ ತು ಪ್ರವೃತ್ತೇನ ಸದನ್ನಂ ಕಿಂ ನ ಯಾಚ್ಯತೇ ॥ ೪೯೦ ॥**

**ಅನುವಾದ–** 'ಪುರುಷ ಏವೇದಂ ಸರ್ವಮ್' - ಈ ವಾಕ್ಯದ ಮುಖ್ಯಾರ್ಥವು ನಿನಗೂ ಸಮ್ಮತವಲ್ಲ; ಸಮ್ಮತವಾದರೆ ಜಡಪದಾರ್ಥ ಮತ್ತು ಆತ್ಮ (ಪುರುಷ)ನಿಗೆ ಐಕ್ಯಪ್ರಸಂಗವು ಉಂಟಾಗುವುದರಿಂದ. ಬೇಡುವುದಕ್ಕೆ ತೊಡಗಿದವನು (ಅಮುಖ್ಯ ಅರ್ಥವನ್ನು ಗುರುತಿಸಲು ಹೊರಟವನು) ಒಳ್ಳೆಯ ಅನ್ನವನ್ನು ಏಕೆ ಬೇಡುವುದಿಲ್ಲ?

**॥ ಶ್ರೀಕೃಷ್ಣಾರ್ಪಣಮಸ್ತು ॥**

—o—



## ರಾಜಸುಭಾಷಿತ

**ಅಸ್ಮಿನ್ ಭವೇ ಭವೇಽನ್ಯಸ್ಮಿನ್ ಭವಾಂತೇ ಚ ಭವಾಮ ತೇ ।**
**ದಾಸಾನುದಾಸಾಃ ಶ್ರೀನಾಥ ತ್ರಾತಾ ತ್ವಂ ನಃ ಸದಾ ಭವ ॥**

ಎಲೈ ಶ್ರೀನಾಥನೇ! ಈ ಜನ್ಮದಲ್ಲಿ ಇನ್ನೊಂದು ಜನ್ಮದಲ್ಲಿ ಮತ್ತು ಸಂಸಾರದ ಕೊನೆಯಲ್ಲಿ ಮೋಕ್ಷದಲ್ಲಿಯೂ ನಾವು ನಿನ್ನ ದಾಸಾನುದಾಸರಾಗುತ್ತೇವೆ. ನೀನು ನಮ್ಮನ್ನು ಸದಾ ರಕ್ಷಿಸುವವನಾಗು.

